









COFFEE BOARD

ಕನ್ನಡನಾಡಿನ ಹಿರಿಮೆಯನ್ನು ಎತ್ತಿಹಿಡಿಯುವ
ಕ್ರಾಂತಿಕಾರಕ ಐತಿಹಾಸಿಕ ಚಿತ್ರ





ಎವರ್‌ಗ್ರೀನ್ ಪ್ರೊಡಕ್ಷನ್ಸ್‌ರವರ

# ವೀರ ಸಂಕಲ್ಪ

ಕನ್ನಡಿಗರ ಹೃದಯದಲ್ಲಿ
ರೊಚ್ಚಿನ ಕಿಚ್ಚೇಳಿಸಿ,
ಕನ್ನಡ ಸಾಮ್ರಾಜ್ಯದ
ಏಳಿಗೆ ಗೋಸ್ಕರ
ದುಡಿದ ಮಹಾವೀರನ ಕಥೆ



ಸಂಗೀತ...
ರಾಜನ್- ನಾಗೇಂದ್ರ





ಲೇಖಕ - ನಿರ್ಮಾಪಕ - ನಿರ್ದೇಶಕ...
ಹುಣಸೂರು ಕೃಷ್ಣಮೂರ್ತಿ



V.P.C.
RELEASE

Arts & Coy.

KATAKA Advertising



# ಬೆಳ್ಳಿಯ ಸಂಚಿಕೆ

ಸಂ.೨೬] ಡಿಶೆಂಬರ್ ೧೯೬೩ [ಸಂ.೧೨

ಸಂಪಾದಕರು :

ಡಿ. ಆರ್. ರಾಮಯ್ಯ, ಬಿ.ಎ.



★

★

ಬೆಲೆ : ರೂ. ೧

## ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ-ಬೆಂಗಳೂರು-೧೮

ಸಂಪಾದಕರು : ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ. ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು-೧೮.

## ಅನುಕ್ರಮಣಿಕೆ

# ನಮ್ಮ ಮಾತು

"ಕನ್ನಡ ನುಡಿ" ವಾರಪತ್ರಿಕೆಯಾಗಿ ಜನ್ಮತಾಳಿದುದು ೧೯೩೮ನೆಯ ಇಸವಿಯಲ್ಲಿ ವಿಜಯದಶಮಿಯ ಶುಭದಿನ. ಈಗ ಇದು ಮಾಸಪತ್ರಿಕೆಯಾಗಿ ೨೬ನೆಯ ಸಂಪುಟದ ೧೧ನೆಯ ಸಂಚಿಕೆ ದಾಟಿ ೧೨ನೆಯ ಸಂಚಿಕೆಯಲ್ಲಿ ಕಾಲಿಟ್ಟಿದೆ. ಈ ೧೨ನೆಯ ಸಂಚಿಕೆಯೇ "ಕನ್ನಡ ನುಡಿ"ಯ "ಬೆಳ್ಳಿಯ ಸಂಚಿಕೆ"ಯಾಗಿ ಸಹೃದಯರಾದ ಕನ್ನಡ ವಾಚಕ ಮಹಾಶಯರ ಮುಂದಿದೆ. ಕಲ್ಬುರ್ಗಿಯ ಕನ್ನಡ ಸಾಹಿತ್ಯ ಸಮ್ಮೇಳನದ (೧೯೩೮) ಅಧ್ಯಕ್ಷರೂ, ಪರಿಷತ್ತಿನ ಉಪಾಧ್ಯಕ್ಷರೂ ಆಗಿದ್ದ ಕೈ|| ರಾಜಸೇವಾಸಕ್ತ ಪ್ರೊ|| ಬಿ. ಎಂ. ಶ್ರೀಕಂಠಯ್ಯನವರ ಔದಾರ್ಯದ ಫಲವಾಗಿ ೧೯೪೦ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸ್ಥಾಪಿತವಾದ "ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ"ದಲ್ಲಿ "ಕನ್ನಡ ನುಡಿ" ಅಂದಿನಿಂದ ಪ್ರಕಟವಾಗುತ್ತಿರುವುದು ಹೆಮ್ಮೆಪಡತಕ್ಕ ಅಂಶ. ಇದುವರೆಗೆ ಒಂಭತ್ತು ಮಂದಿ ಕನ್ನಡ ವಿದ್ವಾಂಸರು "ಕನ್ನಡ ನುಡಿ"ಯ ಸಂಪಾದಕತ್ವವನ್ನು ವಹಿಸಿ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಹತ್ತನೆಯ ಸಂಪಾದಕರ ಕಾಲಕ್ಕೆ ಇದು "ಬೆಳ್ಳಿಯ ಸಂಚಿಕೆ"ಯಾಗಿ ಹೊರಪಟ್ಟಿದೆ. ಸಂಪಾದಕ ಮಹನೀಯರುಗಳ ಅನುಕ್ರಮವನ್ನು ಇಲ್ಲಿ ಕೊಟ್ಟಿದೆ.



ಶ್ರೀಯುತರಾದ–೧. ಅ. ನ. ಕೃಷ್ಣರಾಯರು, ೨. ಬಿ. ವೆಂಕೋಬರಾಯರು, ೩. ಬಿ. ಶಿವಮೂರ್ತಿಶಾಸ್ತ್ರಿಗಳು, ೪. ಮೋ. ಶಂ. ಸುಬ್ರಹ್ಮಣ್ಯಶಾಸ್ತ್ರಿಗಳು, ೫. ಎಂ. ಆರ್. ಶ್ರೀನಿವಾಸಮೂರ್ತಿಗಳು, ೬. ಡಿ. ಸಿ. ಸುಬ್ಬರಾಯಪ್ಪನವರು, ೭. ವಿ. ಸೀತಾರಾಮಯ್ಯನವರು, ೮. ಪದ್ಮಶ್ರೀ ಸಿ. ಕೆ. ವೆಂಕಟರಾಮಯ್ಯನವರು, ೯. ಅನ್ನದಾನಯ್ಯ ಪುರಾಣಿಕರು, ೧೦. ಡಿ. ಆರ್. ರಾಮಯ್ಯನವರು.

ಪರಿಷತ್ತಿನ ಕಾರ್ಯ ಚಟುವಟಿಕೆಗಳ ಮತ್ತು ವರ್ತಮಾನಗಳ ಪ್ರಚಾರಕ್ಕೂ, ಅಂಗಸಂಸ್ಥೆಗಳೊಡನೆ ನಿಕಟ ಸಂಬಂಧವನ್ನು ಬೆಳೆಸುವುದಕ್ಕೂ, ಮಹಾಜನರಲ್ಲಿ ಕನ್ನಡದ ತಿಳಿವಳಿಕೆಯನ್ನು ಹರಡುವುದಕ್ಕೂ, ಸಾಹಿತ್ಯ ವಿಮರ್ಶೆಯನ್ನು ನಡೆಸುವುದಕ್ಕೂ "ಕನ್ನಡ ನುಡಿ" ಮುಖ್ಯ ಸಾಧನವಾಗಿದೆ. ಕಳೆದ ೨೫ ವರ್ಷಗಳಲ್ಲಿ ಈ ಕಾರ್ಯವನ್ನು ಸುಸೂತ್ರವಾಗಿ ನಿರ್ವಹಿಸುತ್ತಿದೆ. ಬೆಳ್ಳಿಯ ಹಬ್ಬದ ಈ ವಿಶೇಷ ಸಂಚಿಕೆಗೆ ಯೋಗ್ಯವಾಗಿರುವಂತೆ ಪ್ರಬುದ್ಧ ಲೇಖನಗಳನ್ನು ಒದಗಿಸಿದ ಕನ್ನಡ ಕರ್ತೃಗಳನ್ನೂ, ಜಾಹಿರಾತುಗಳನ್ನು ಕೊಟ್ಟು ಪ್ರೋತ್ಸಾಹಿಸಿದ ವರ್ತಕವೃಂದವನ್ನೂ ಇಲ್ಲಿ ಸ್ಮರಿಸುವುದು ಯುಕ್ತವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತು ಇದುವರೆಗೆ ಎಸಗಿರುವ ಉದಾತ್ತವಾದ ಕನ್ನಡ ನಾಡು ನುಡಿಗಳ ಸೇವೆಯನ್ನು ಸಿಂಹಾವಲೋಕನ ಕ್ರಮದಿಂದ ಇಂದು ಒಕ್ಕಣಿಸುವುದು ನಮ್ಮ ಕರ್ತವ್ಯ.

ಕರ್ಣಾಟಕ ಸಾಹಿತ್ಯ ಪರಿಷತ್ತು ಸ್ಥಾಪನೆಯಾದುದು ೧೯೧೫ನೆಯ ಮೇ ೫ನೆಯ ತಾರೀಖಿನಲ್ಲಿ. ಇದು "ಕನ್ನಡ ಸಾಹಿತ್ಯ ಪರಿಷತ್ತು" ಎಂಬ ನಾಮಧೇಯವನ್ನು ತಳೆದುದು ೧೯೩೮ನೆಯ ಡಿಸೆಂಬರ್ ತಿಂಗಳಲ್ಲಿ ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ. ೧೯೪೦ರಲ್ಲಿ ಆಗಿನ ಮೈಸೂರು ಸಂಸ್ಥಾನದ ರಾಜರ್ಷಿ ಎನಿಸಿದ ಶ್ರೀಮನ್ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ ಸನ್ನಿಧಾನದಲ್ಲಿ ಬೆಳ್ಳಿಯ ಹಬ್ಬವನ್ನು ನಡೆಸಿತು. ಇದುವರೆಗೆ ಪರಿಷತ್ತು ಕನ್ನಡ ಕೋಶ ಪ್ರಕಟನೆ, ವಸಂತ ಸಾಹಿತ್ಯೋತ್ಸವ, ಕಾಳಿದಾಸ ಜಯಂತಿ, ಕನ್ನಡ ಗ್ರಂಥಗಳ ಪ್ರಕಟನೆ,

ಸಮಗ್ರ ಕನ್ನಡ ರಾಜ್ಯದಲ್ಲಿ ಕರ್ಣಾಟಕ ಸಂಘಗಳ ಸ್ಥಾಪನೆ, ಸಾಹಿತ್ಯ, ಗಮಕ, ಸಂಗೀತ, ಭಾಷಣ ಕಲಾ ಶಿಕ್ಷಣ-ಮುಂತಾದ ಕಾರ್ಯಗಳನ್ನು ಕೈಕೊಂಡು ಯಥೋಚಿತವಾಗಿ ನಡೆಸುತ್ತಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪಂಡಿತರತ್ನಂ ಶ್ರೀ|| ಬಿ. ಶಿವಮೂರ್ತಿಶಾಸ್ತ್ರಿಗಳ ಮಾತಿನಲ್ಲಿ ಹೇಳಬಹುದಾದರೆ "ಕನ್ನಡ ಸಾಹಿತ್ಯ ಪರಿಷತ್ತಿಗೆ ಒಂದು ಮಹತ್ವದ ನಿಧಿಯನ್ನು ಸಂಗ್ರಹಿಸುವುದು, ಕರ್ಣಾಟಕ ಸಂಶೋಧನ ಕೇಂದ್ರವನ್ನು ಸ್ಥಾಪಿಸುವುದು, ಎಲ್ಲಕ್ಕೂ ಹೆಚ್ಚಾಗಿ ಕನ್ನಡಿಗರಲ್ಲಿ 'ನಾವೆಲ್ಲ ಒಬ್ಬ ತಾಯ ಮಕ್ಕಳು' ಎಂಬ ಉಜ್ವಲ ಭಾವನೆಯನ್ನೂ, ಸಮಗ್ರ ಭಾರತದಲ್ಲಿ ನಾವು ತಲೆಯೆತ್ತಿ ನಿಲ್ಲಬೇಕೆಂಬ ಮಹದಾಸೆಯನ್ನೂ ಹುಟ್ಟಿಸುವುದು-ಇತ್ಯಾದಿ ಮಹತ್ಕಾರ್ಯಗಳನ್ನು ಸಾಧಿಸಬೇಕಾಗಿದೆ."

೧೯೫೬ ನವಂಬರ್ ೧ನೆಯ ತಾರೀಖು ಹೊಸ ಮೈಸೂರು ರಾಜ್ಯವು ಭಾರತ ಸರ್ಕಾರದ ನೇತೃತ್ವದಲ್ಲಿ ಸ್ಥಾಪಿತವಾದುದು ಸರಿಯಷ್ಟೆ. ಇದರಿಂದ ನಮ್ಮ ಕನಸಿನ ಕರ್ಣಾಟಕ ರಾಜ್ಯ ನನಸಾಯಿತೆಂದು ಹೇಳಬಹುದಾದರೂ, ನೀಲಗಿರಿ, ಕಾಸರಗೋಡು, ತಾಳವಾಡಿ, ಹೊಸೂರು, ಮಡಕಶಿರ, ಆದವಾನಿ, ಅಕ್ಕಲಕೋಟೆ, ಜತ್ತ, ಸೊಲ್ಲಾಪುರ ಮೊದಲಾದ ಪ್ರದೇಶಗಳು ಮೈಸೂರು ರಾಜ್ಯಕ್ಕೆ ಸೇರದಿರುವುದರಿಂದ ಇವು ಹಿಂದೆ ನಾಲ್ಕನೆಯ ಮೈಸೂರು ಯುದ್ಧ ನಡೆದ ಕಾಲಕ್ಕೆ (೧೭೯೯) ಮೈಸೂರು ಮಹಾರಾಜರ ಆಡಳಿತಕ್ಕೆ ಸೇರಿದ್ದುವೆಂಬುದನ್ನು ಮರೆತಂತಾಗಿದೆ. ಈ ಪ್ರದೇಶಗಳನ್ನು ಒಂದುಗೂಡಿಸಿ ಸಮಗ್ರ ಕರ್ಣಾಟಕ ರಾಜ್ಯವನ್ನು ಸ್ಥಾಪಿಸುವ ಕಾರ್ಯವು ಇನ್ನೂ ಉಳಿದಿದೆ. ಈ ಕಾರ್ಯಸಾಧನೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ರಾಜಕೀಯವಾಗಿ ಪ್ರಯತ್ನ ನಡೆಸಲು ಸಾಧ್ಯವಿಲ್ಲವಾದರೂ ಅಲ್ಲಿಯ ಜನರ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ರಕ್ಷಣೆಯನ್ನು ನಡೆಸುವುದರಿಂದ ಕಾಲಕ್ರಮದಲ್ಲಿ ಈ ಪ್ರದೇಶಗಳನ್ನು ಭಾರತ ಸರ್ಕಾರವು ಸಮಗ್ರ ಕರ್ಣಾಟಕ ಪ್ರಾಂತವಾಗಿ ವಿರಚಿಸಲು ಸಾಧ್ಯವಾದೀತು.

ಮತ್ತೊಂದು ಮಾತು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಬಾಹುಳ್ಯಕ್ಕೆ ತಕ್ಕಂತೆ ಮಂದಿರ ವಿಸ್ತಾರವಾಗದಿರುವುದೊಂದು ದೊಡ್ಡ ಕೊರತೆಯಾಗಿದೆ. ಆಡಳಿತ, ಅದಕ್ಕನುಗುಣವಾಗಿ ಕಛೇರಿ-ಇವೆಲ್ಲವೂ ಅಗಾಧವಾಗಿ ಬೆಳೆದಿರುವಾಗ, ಅದಕ್ಕನುಗುಣವಾಗಿ ಮಂದಿರವೂ ಇರಬೇಕು. ಪುಸ್ತಕ ಭಂಡಾರಕ್ಕಂತೂ ಈಗಿರುವ ಸ್ಥಳ ಏನೇನೂ ಸಾಲದು. ಈ ಸ್ಥಳಾಭಾವದ ಕೊರತೆಯನ್ನು ನೀಗಲು ಪ್ರಬಲ ಪ್ರಯತ್ನ ನಡೆಯಬೇಕಾಗಿದೆ. ಪರಿಷತ್ತು ಸ್ಥಾಪನೆಯಾದ ಮೇಲೆ ೧೯೩೩ ರ ವರೆಗೆ ಸುಮಾರು ೨೦ ವರ್ಷಗಳ ಕಾಲ ಶಂಕರಪುರದಲ್ಲಿರುವ ಎರಡು ಬಾಡಿಗೆ ಮನೆಗಳಲ್ಲಿರಬೇಕಾಯಿತು. ಸ್ವಂತ ಕಟ್ಟಡದ ವಿಚಾರದಲ್ಲಿ ಬಹಳ ಆಸಕ್ತಿ ವಹಿಸಿದವರು ಹಿಂದೆ ಉಪಾಧ್ಯಕ್ಷರಾಗಿದ್ದ ಶ್ರೀ ಕರ್ಪೂರ ಶ್ರೀನಿವಾಸರಾಯರು. ಇವರ ಪ್ರಯತ್ನದ ಫಲವಾಗಿ ಮೈಸೂರು ರಾಜಮನೆತನದ ಅನುಗ್ರಹವೂ, ಮೈಸೂರು ಸರ್ಕಾರದ ಅಭಿಮಾನವೂ ದೊರೆತು, ಇಂಜಿನಿಯರ್ ಶ್ರೀ ತಾಂಡೋಣಿರಾಯರ ಮೇಲ್ವಿಚಾರಣೆಯಲ್ಲಿ ೧೯೩೩ ರಲ್ಲಿ ಶ್ರೀ ಕೃಷ್ಣರಾಜ ಪರಿಷನ್ಮಂದಿರವು ರೂಪುಗೊಂಡು ಕನ್ನಡ ಸಾಹಿತ್ಯ ಪರಿಷತ್ತಿಗೆ ನೆರಳು ಸಿಕ್ಕಿತು. ಆ ನೆರಳು ಮಾಜಿ ಮೈಸೂರು ಮುಖ್ಯ ಮಂತ್ರಿಗಳಾಗಿದ್ದ ಶ್ರೀ|| ಕೆ. ಹನುಮಂತಯ್ಯನವರ ಕಾಲಕ್ಕೆ ವಿಸ್ತಾರಗೊಳ್ಳುವ ಶುಭ ಸೂಚನೆಗಳು ಗೋಚರಕ್ಕೆ ಬಂದು ಅಂತೆಯೇ ಮಾಯವಾದುವು. ಯಾವುದಕ್ಕೂ ಕಾಲ ಬರಬೇಕು; ಘಳಿಗೆ ಕೂಡಬೇಕು. ಕಾಲ ಬರುತ್ತದೆ; ಘಳಿಗೆ ಕೂಡುತ್ತದೆ! ಅದುವರೆಗೆ ಕನ್ನಡಿಗರು ಕೈಕಟ್ಟಿಕೊಂಡು ಕುಳಿತಿರುವವರಲ್ಲ; ಕುಳಿತಿರಬೇಕಾಗಿಯೂ ಇಲ್ಲ.

ಕನ್ನಡ ಸರ್ಕಾರದಲ್ಲಿ,
ಕನ್ನಡ ಸಾಹಿತ್ಯದಲ್ಲಿ,
ಕನ್ನಡ ಸಿದ್ಧಾಂತದಲ್ಲಿ,
ಅಂದವರಿತು ಬಾಳುವ—
ಒಂದುಗೂಡಿ ಮೆರೆಯುವ!

ಓಂ ತತ್ಸತ್

ಡಿ. ಆರ್. ರಾಮಯ್ಯ
ಸಂಪಾದಕ

## ರಾಷ್ಟ್ರಾಧ್ಯಕ್ಷ



ಭಾರತರತ್ನ ಡಾ॥ ಎಸ್. ರಾಧಾಕೃಷ್ಣನ್ ಅವರು

ಕನ್ನಡ ಸಾಹಿತ್ಯ ಪರಿಷತ್ತಿನ ಮಹಾಪೋಷಕರು



**ರಾಜ್ಯಪಾಲ ಶ್ರೀಮನ್ಮಹಾರಾಜ ಶ್ರೀಜಯಚಾಮರಾಜ ಒಡೆಯರು.**

# ಕನ್ನಡ ತಾಯಿಗೆ ಬೆಳ್ಳಿಯ ತೇರು

ಕವಿ: ಶ್ರೀ ಎಂ. ನಂಜುಂಡಶಾಸ್ತ್ರಿಗಳು, ಎಂ.ಎ.

ಕನ್ನಡ ಗುಡಿಯಲಿ ಸೊಗಯಿಸೆ ಹಬ್ಬ
ಚಿನ್ನದ ನಾಡಿನ ನುಡಿ - ತಾಯ್ ಕಬ್ಬ
"ಕನ್ನಡ ನುಡಿ"ಗಿದೊ ತುಂಬಿದ ಎದೆಯಲಿ
ಇಪ್ಪತ್ತೈದರ ಹುಟ್ಟಿದ ಹಬ್ಬದಿ
ಬೆಳ್ಳಿಯ ಉತ್ಸವ ಸಂಭ್ರಮ ಸಮಯದಿ
ನಲವಿಂ ಬಾಗಿರೆ ಹೊಮ್ಮಿದೆ ಹಾಡು
ತಲೆದೂಗಲು ಈ ಕಮ್ಮಿತು ನಾಡು
ಕಸ್ತೂರಿಯ ನುಡಿ ಪೆಂಪಿನ ಬೀಡು!

ಕನ್ನಡ ನವಿಲೇ ಕುಣಿಯುತ ಬಾ, ಬಾ,
ಕನ್ನಡ ಕೋಗಿಲೆ ಹಾಡುತ ಬಾ, ಬಾ,
ಕನ್ನಡ ಜಾಣನೆ ಕೂಡುವ ಬಾ, ಬಾ;
ಕನ್ನಡ ಹೆಣ್ಗಳೆ ನಲಿಯಿರಿ ಒಲಿಯಿರಿ
ಸಂತಸದಿಂದಲಿ ಈ ದಿನ ಕೆಲೆಯಿರಿ!

ಗಂಟೆಯ ಟಂಟಣಿ ಕೇಳುವ ಹೊತ್ತಲಿ
ಆರತಿಯಾಗುವ ಶುಭ ಮುಹೂರ್ತದಲಿ
ನಿಮ್ಮೆದೆಗಾಣಿಕೆ ಭಕ್ತಿಯ ನೀಡಿ
ಕನ್ನಡ ಕವಿಗಳೆ ಕವಿತೆಯ ಹಾಡಿ
ತಾಯಿಯ ಮೆಚ್ಚಿಸಿ ವರವನು ಬೇಡಿ—

ಧೂಪವ ತನ್ನಿರಿ ದೀಪವ ತನ್ನಿರಿ
ಬಾಳೆಯ ದವನವ ಎಸೆಯುವ ಬನ್ನಿರಿ
ಬೆಳ್ಳಿಯ ತೇರನು ಎಳೆಯುವ ಬನ್ನಿ
ತೇರ್ಮಿಣಿಯಲಿ ಕೈ ಮಸಗುವ ಬನ್ನಿ

ನಾಡಿನ ಮಂಗಳ ವಾದ್ಯವು ಓಲಗ
ವಸಂತ ರಾಗದಿ ಸಂತಸ ತಂದಿದೆ
ಸಿಂಗರವಾಗಿಹ ತೇರಿನ ನಾಲ್ಮೊಗ
ಸಿಂಹದ ವಾಹನಗಳ ತಾನ್ ಪೊತ್ತಿದೆ!

ನುಡಿಗುಡಿ ಹಾರಿದೆ ಅದು ಬಹು ಮೇಲೆ
ಭಾವಭಕ್ತಿಯಲಿ ನಮಿಸಿರಿ ಎಲ್ಲರು
ಉಬ್ಬಿಸಿ ಎದೆಯನು ನಿಲ್ಲಿರಿ ಎಲ್ಲರು
ಬಾವುಟ ನಾಡಿನ ಸಂಕೇತವೆಲೆ!

ಕನ್ನಡ ಗುಡಿಯಲಿ ಓಲಗಶಾಲೆ
ರಂಗಸಾಲೆಯಲಿ ಇರ್ಕೆಲದಲ್ಲಿ
ಭಕ್ತರ ಸನ್ನಿಧಿ ಭಾವಚಿತ್ರಗಳು—
ನುಡಿಗಾಗಿಯೆ ಕೊನೆಯುಸಿರಿಟ್ಟವರು,
ಭಾವೋನ್ಮಾದಿತ ರಸಚೇತನರು,
ಹರುಷದಿ ತಣಿಸಿದ ರಸಿಕಾಳಿಗಳು,
ಕನ್ನಡ ನೆಲದಲಿ ಮುತ್ತನು ಬಿತ್ತಿ
ಕನ್ನಡತನದಾ ರತ್ನಗಳೆತ್ತಿ—
ಕನ್ನಡಿಗರೆ ಒಂದಾಗಿರಿ ಎನುತ,
ಭಾರತ - ನಡೆ ಮುಂದಾಗಿರಿ ಎನುತ,
ಕನ್ನಡ ಬಾವುಟ ಹಿಡಿಯುತ ನಡೆದು
ಕನ್ನಡ ಛಲವನು ಮೈವೆತ್ತವರು
ಕಾರಣಪುರುಷರು ಆಚಾರ್ಯರ್ಕಳ್!
ಮರಳಿಹರಿದೊ ಇದೊ ನುಡಿನಡೆಮಕ್ಕಳ್!!

*   *   *

ಕನ್ನಡ ನುಡಿ ತಲೆಯೆತ್ತುವುದೆಂದು
ಒಳ್ಳೆಯ ಸಾಹಿತ್ಯವಿದಿಗೊ ಎಂದು
ವಾಚಿಸಿ ಘೋಷಿಸಿ ಯಾತ್ರೆಯಗೊಂಡು
ಕನ್ನಡ ಹುಡಿಯನು ನೆತ್ತಿಯೊಳಾಂತು
ಕನ್ನಡ ತಾಯಿಯ ನೋಟವ ಪಡೆದು
ಧನ್ಯತೆಯಾನುತ ತಾವ್ ಮುನ್ನಡೆದು
ವೇಂಕಟನಾರಣ ಶ್ರೀಕಂಠಾರ್ಯ
ನಗುಮೊಗ ಕುಲಪತಿ ವೆಂಕಣ್ಣಾರ್ಯ
ಪಂಜೆಯರಾಯರು ಶ್ರೀ ಕಾಮತರು
ಸಕ್ಕರಿ ಬಾಳಾಚಾರ್ಯರು ನುಡಿವರು
ಎಲ್ಲರು ಸಂದಿಹರಿಲ್ಲಿಯ ಹಬ್ಬಕೆ
"ಕನ್ನಡ ನುಡಿ"ಯಾ ದಿವ್ಯೋತ್ಸವಕೆ!

*   *   *

ಹಿರಿಯರ ಚೇತನ ಸ್ಫೂರ್ತಿಯ ಬೆನ್ನಲಿ
ತರುಣರು ಕೆಚ್ಚನು ತಳೆಯುತ ತಮ್ಮಲಿ
ಬೆಳ್ಳಿಯ ತೇರಿನ ಉತ್ಸವದಲ್ಲಿ
ಅವರಿವರೆನ್ನದೆ ಜತೆಜತೆಯಲ್ಲಿ
ಉತ್ಸಾಹದಿ ಪಾಲ್ಗೊಂಡಿಹರು—
ತಾಯ್ನುಡಿ ತಮ್ಮಡಿಯಾಗಿಹರು !

ಜಯ, ಹೋ ! ಜಯ, ಹೋ ! ಉಘೇ ! ಉಘೇ !
ತಾಯಿಯು ಏರ್ದಳು ತೇರೊಳು ಕುಳಿತಳು
ಶ್ರೀ ರಾಜೇಶ್ವರಿ, ಉಘೇ ! ಉಘೇ !
ಭಕ್ತರ ನೋಡುತ ತಾಯಿಯು ನಕ್ಕಳು
ಜಯ ! ಜಯ ! ಕನ್ನಡ, ಜಯಜಯ, ಜಯಹೇ !
ಕಲ್ಯಾಣಿಗೆ ಮಾತೆಗೆ ಜಯ, ಜಯ ಹೇ !

ಬೆಳ್ಳಿಯ – ಹಿಡಿಗೋಲ್ ಮೈಸೂರಿನ ಜರಿ
ರುಮಾಲು ಹಾಕಿಹ ನಾಯಕರಿವರರಿ !
ಅವರೆಡೆ ನಡೆವರು ಕಾವ್ಯಾನಂದರು
ಕಾವ್ಯವಿಲಾಸದ ತರುಣರು ಸಂದರು

ನವೋನವೀನದ ಗೀತಾಕಾರರು
ವಿಮರ್ಶೆ ವಚಿಸುವ ಟೀಕಾಕಾರರು
ಕತೆಗಳನುಸುರುವ ಜನಪ್ರಿಯ ರಚಕರು
ರೂಪಕ ರಚಿಸಿಹ ಕವಿಸಾಮ್ರಾಟರು
ಕಾದಂಬರಿ ಸಿರಿ ಸಾರ್ವಭೌಮರು
ಗಾಯಕಿ ಗಮಕಿಯು ಕವಿ ಕೋಗಿಲೆಗಳು
ಕನ್ನಡ ಮುದ್ದಿನ ಶಿವಮೂರುತಿಗಳು
ಬರೆವಣಿಗೆಯ ಸಿರಿ ಮೆರವಣಿಗೆಯಲಿ
ಎಳೆಯರು ತರುಣರು ಹಿರಿಯರು ಗುಂಪಲಿ

ತಾಯ್ನುಡಿ ತೇರನು ಪಿಡಿದೆಳೆದಿಹರು
ಬೆಳ್ಳಿಯ ಉತ್ಸವ ನಡೆಸುತಲಿಹರು !
"ಹೋ ಆನಂದಂ ಪೇರಾನಂದಂ"
ಕುಣಿವೋ ಮಿಗುವೋ ಶಿವ ಶಿವ ಶುಭದಂ—
ಕುಣಿಯುತ ಬಂದಿದೆ ತರುಣರ ಗುಂಪು
ಬಣ್ಣದ ಕೋಲ್ಗಳ ಹಾಕುತ ಸೊಂಪು
ಕೋಲಿದೊ ಗೆಳೆಯನೆ ! ಕೋಲಿದೊ ಸಖಿಳೆ !
ಹಾಡುವ ಬನ್ನಿರಿ ಕೂಡುವ ಬನ್ನಿರಿ
ಹೂವನು ಚೆಲ್ಲುವ ಬಾಲೆಯರಿವರು
ಹರ್ಷೋದ್ಗಾರದಿ ನಲಿನಲಿಯುವರು
ಆರತಿ ಪಿಡಿಯುತ ಮನೆಮನೆ ಹೊರಗೆ
ತಾಯಿಯ ಪೂಜೆಗೆ ನಿಂದರ ಪೊರೆಗೆ !

ಬೆಳ್ಳಿಯ ಹಬ್ಬದ ಒಸಗೆಯ ಕೊಂಡು
ಶೋಭಕೃತುವಿನ ಶುಭವನು ತಂದು
ಕನ್ನಡ ಮಕ್ಕಳ ಹರಸೆಲೆ ತಾಯೆ
ಓ ಬನಶಂಕರಿ ಶ್ರೀ ಶಿವಜಾಯೆ
ಕರುನಾಡಿನ ಸಿರಿ ಅಂಬಿಕೆ ಕಾಯೆ
ಓ ಓ ಕನ್ನಡ ಭಾಗ್ಯವಿಧಾತೆ !
ಓ ಓ ಶಾಂತಿಯೆ ಪುಷ್ಟಿಪ್ರದಾತೆ !!

ಕನ್ನಡ ಹಿರಿಯರೆ ಬಾನೊಳು ನಿಂದು
ಸ್ಫೂರ್ತಿಯ ಕೊಡಿರೈ ಹರಕೆಯ ತಂದು
ಕನ್ನಡ ಕವಿಕುಲ ಎಂದಿಗು ಮೆರೆಯೆ
ಕಿಶೋರಚಂದ್ರಗೆ ರಾಮುಗೆ ದತ್ತಗೆ
ಶ್ರೀನಿವಾಸರಿಗೆ ನರಸಿಂಹಾರ್ಯಗೆ
ಅಂಬಿಕೆಯೊಲಿದೀಯಲಿ ವರವ !
ಬೆಳ್ಳಿಯ ಹಬ್ಬಕೆ ಕೊಳಲೀ ಸರವ !



# ಹಿಂದಿನ ನೆನಪು




**ಲೇಖಕರು: ರಾಜಸೇವಾಸಕ್ತ ಶ್ರೀ ಡಿ. ಸಿ. ಸುಬ್ಬರಾಯಪ್ಪನವರು, ಬಿ.ಎ., ಬಿ.ಎಲ್.**

ಈಗ್ಗೆ ಸುಮಾರು ೩೩ ವರ್ಷಗಳ ಹಿಂದೆ ೧೯೩೮ನೆಯ ಅಕ್ಟೋಬರ್ ದಿನಾಂಕ ೪ರಲ್ಲಿ ವಿಜಯದಶಮಿಯ ಶುಭ ದಿನದಂದು ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ **ಕನ್ನಡ ನುಡಿ** ವಾರಪತ್ರಿಕೆಯಾಗಿ ಪ್ರಾರಂಭವಾಗಲಿಕ್ಕೆ ಮೂಲ ಕಾರಣರಾದವರು ಆಗ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಎಂಬುದು ಕನ್ನಡದ ಅಭಿಮಾನಿಗಳೆಲ್ಲರಿಗೂ ತಿಳಿದ ವಿಷಯವೇ ಆಗಿರುತ್ತದೆ.

ಅವರು ಕನ್ನಡದ ಏಳಿಗೆಗಾಗಿ ತಮ್ಮ ತನು ಮನ ಧನಗಳನ್ನು ಅರ್ಪಿಸಿ ಕೃತಾರ್ಥರಾಗುವುದೇ ತಮ್ಮ ಜೀವನದ ಧ್ಯೇಯವೆಂದು ಪರಿಗಣಿಸಿ ಅದರ ಸಾಧನೆಗಾಗಿ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ನಿಕಟ ಸಂಬಂಧವನ್ನಿಟ್ಟುಕೊಂಡಿದ್ದು ತಮ್ಮ ಇತರ ಕಾರ್ಯಗೌರವಗಳ ಮಧ್ಯೆ ವಿರಾಮಕಾಲದಲ್ಲಿ ಇಡಿಯ ಕರ್ಣಾಟಕ ಪ್ರಾಂತದಲ್ಲಿ ಆಗಿಂದಾಗ ಪ್ರವಾಸವನ್ನು ಕೈಗೊಂಡು ಕನ್ನಡ ಭಾಷೆಯ ಪುರೋವೃದ್ಧಿಗಾಗಿಯೂ, ಕರ್ಣಾಟಕ ಏಕೀಕರಣದ ವಿಚಾರಕ್ಕಾಗಿಯೂ ಅಲ್ಲಿನ ಪ್ರಸಿದ್ಧ ಸಾಹಿತಿಗಳೂ, ಸಾರ್ವಜನಿಕರೂ ತಮ್ಮೊಡನೆ ನೆರವಾಗುವಂತೆ ಹುರಿದುಂಬಿಸುತ್ತಿದ್ದರು. ಮೈಸೂರಿನ ತರುಣ ಸಾಹಿತಿಗಳಿಗೂ ಸಹ ತಮ್ಮಂತೆಯೇ ಕನ್ನಡ ಸೇವೆಯಲ್ಲಿ ನಿರತರಾಗುವಂತೆ ಮಾರ್ಗದರ್ಶಕರಾಗಿದ್ದರು.

ಈ ತೆರನಾದ ಅವರ ನಿಸ್ವಾರ್ಥಸೇವೆಯ ಸದ್ಯಃ ಫಲವೋ ಎಂಬಂತೆ **ಕನ್ನಡ ನುಡಿ** ಪತ್ರಿಕೆಯು ಪ್ರಾರಂಭವಾದ ದಿನವೇ ಅವರಿಗೆ ಶ್ರೀಮನ್ಮಹಾರಾಜರವರಿಂದ ಅನಿರೀಕ್ಷಿತವಾಗಿ **ರಾಜಸೇವಾಸಕ್ತ** ಎಂಬ ಬಿರುದು ಲಭಿಸಿತು. ಈ ಸನ್ಮಾನಕ್ಕಾಗಿ ಅವರನ್ನು ಅಭಿನಂದಿಸಲು ಏರ್ಪಡಿಸಿದ್ದ ಒಂದು ಸಭೆಯಲ್ಲಿ ಅವರು ಆಡಿದ ಮಾತುಗಳು ಈಗಲೂ ಕನ್ನಡದ ಅಭಿಮಾನಿಗಳೆಲ್ಲರಿಗೂ ಅನುಕರಣೀಯವಾಗಿವೆ:

> "ಈ ನನ್ನ ಅಲ್ಪವಾದ ಪ್ರಜಾಸೇವೆಯನ್ನೇ ತಮ್ಮ ಕೃಪೆಯಲ್ಲಿ ದೊಡ್ಡದಾಗಿ ಮಾಡಿ ಭಾಷಾಸೇವೆಯೂ ಒಂದು ರಾಜಸೇವೆಯೆಂದು ಭಾವಿಸಿ ಮಹಾಪ್ರಭುಗಳವರು ನನಗೆ ಈ ಮರ್ಯಾದೆ ಮಾಡಿರಬೇಕು. ನನ್ನ ಸಂತೋಷವೇನೆಂದರೆ, ಕನ್ನಡ ಸೇವೆಗೆ, ಕನ್ನಡಕ್ಕೆ 'ರಾಜಮುದ್ರೆ' ಬಿದ್ದಿದೆ; ಇನ್ನು ಕನ್ನಡ ಗೆದ್ದಿತು—ಎಂಬುದೇ. * * ತಮ್ಮೆಲ್ಲರ ಆಶೀರ್ವಾದ ಬಲದಿಂದ ನಾನು ಇದುವರೆಗೆ ಮಾಡಿರುವ ಸೇವೆಯನ್ನು ನನ್ನ ಕೈಲಾದ ಮಟ್ಟಿಗೆ ಮುಂದುವರಿಸಿಕೊಂಡು ಹೋಗುತ್ತೇನೆ. ನನ್ನ ಜೀವನವನ್ನೇ ಕನ್ನಡ ಸೇವೆಗಾಗಿ ಮುಡಿಪಾಗಿ ಇಡುತ್ತೇನೆ.
>
> "ಪರಿಷತ್ತಿನ ಹೊಸ ವಾರಪತ್ರಿಕೆಯಾದ **'ಕನ್ನಡ ನುಡಿ'**ಗೆ ಎಲ್ಲರೂ ಉದಾರ ಹಸ್ತದಿಂದ ದ್ರವ್ಯಸಹಾಯ ಮಾಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ. ಅದು ಚಿರಕಾಲ ನಡೆಯಬೇಕಾದರೆ ಅದಕ್ಕೆ ಒಂದು ಅಚ್ಚುಕಟ್ಟು ಅವಶ್ಯ. ಅದಕ್ಕಾಗಿ ನಾನು ಐದು ಸಾವಿರ ರೂಪಾಯಿ ಕಾಣಿಕೆ ಕೊಡಬೇಕೆಂದು ಸಂಕಲ್ಪಿಸಿರುತ್ತೇನೆ. * *
>
> "ಕನ್ನಡ ನಾಡು ಈಗ ಚೆನ್ನಾಗಿ ಎಚ್ಚತ್ತು ಮುಂದಕ್ಕೆ ನುಗ್ಗುತ್ತಿದೆ ಎಂಬುದು ನನಗೆ ಸ್ಪಷ್ಟವಾಗಿದೆ. ಅದು ಮತ್ತೆ ಒಂದಾಗಿ, ಒಂದು ಸಾಮ್ರಾಜ್ಯವಾಗಿ, ಹಿಂದೆ ಭಾರತ ಧರ್ಮ ಸಂಸ್ಕೃತಿಗಳನ್ನು ಕಾಪಾಡಿದಂತೆ ಮುಂದೆಯೂ ಭಾರತಕ್ಕೆ ಮಾರ್ಗದರ್ಶಕವಾಗಿ ಮೆರೆಯುವಂತೆ ಕನ್ನಡ ತಾಯ ಮಕ್ಕಳೆಲ್ಲರೂ ಪ್ರಯತ್ನಿಸಬೇಕು ಎಂದು ಪ್ರಾರ್ಥಿಸುತ್ತೇನೆ."

**ಕನ್ನಡ ನುಡಿ** ವಾರಪತ್ರಿಕೆಯು ಪ್ರಾರಂಭವಾದಾಗಿನಿಂದ ಒಂಬತ್ತು ತಿಂಗಳಕಾಲ ಅದರ ಸಂಪಾದಕತ್ವವನ್ನು ವರ್ಚಿಷ್ಣು ಸಾಹಿತಿಗಳಾಗಿದ್ದ ಶ್ರೀ ಅ. ನ. ಕೃಷ್ಣರಾಯರು ಯಶಸ್ವಿಯಾಗಿ ನಡೆಸಿಕೊಂಡು ಬಂದು ಎಲ್ಲರ ಮೆಚ್ಚುಗೆಗೂ ಪಾತ್ರರಾದರು. ಅದರ ಧ್ಯೇಯವನ್ನು ಕುರಿತು ಅದರ ನಿರ್ಮಾಪಕರಾದ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಸೂಚಿಸಿರುವ ಮಾತುಗಳು ಈ ರೀತಿ ಇವೆ:

“ಪರಿಷತ್ತಿನ ಪ್ರಕಟನಾಂಗಗಳಲ್ಲಿ ಮೊದಲಿಂದಲೂ **ಪರಿಷತ್ಪತ್ರಿಕೆ** ಮೂರು ತಿಂಗಳಿಗೊಮ್ಮೆ ಹೊರಟು ಮೇಲು ಮಟ್ಟದ ಸಾಹಿತ್ಯ ವಿಚಾರಗಳನ್ನೂ, ಭಾಷಾ ಲಕ್ಷಣಗಳನ್ನೂ, ಪರಿಶೋಧನೆಗಳನ್ನೂ ಒಳಗೊಂಡು ಹೆಚ್ಚಾಗಿ ಸಾಹಿತ್ಯ ಪರಿಚಯವುಳ್ಳವರ ಪ್ರಯೋಜನಕ್ಕಾಗಿರುವುದು. ಪರಿಷತ್ತಿನಂತಹ ಸಾಹಿತ್ಯ ಸಂಸ್ಥೆಗೆ ಅದು ಯೋಗ್ಯವಾದದ್ದೇ.”

“ಆದರೆ ಜನ ಸಾಮಾನ್ಯರಲ್ಲಿ, ಸ್ತ್ರೀಯರಲ್ಲಿ, ಕನ್ನಡಿಗರಾಗಿ ಕನ್ನಡದಲ್ಲಿ ಅಕ್ಕರೆ ಇರಬೇಕಾದ ಸಾರ್ವಜನಿಕ ರಲ್ಲಿ ಕನ್ನಡದ ತಿಳಿವಳಿಕೆಯನ್ನೂ, ಸಾಹಿತ್ಯ ಸಂಸ್ಕೃತಿಗಳ ಸಾಮಾನ್ಯ ಜ್ಞಾನವನ್ನೂ, ಕನ್ನಡ ನಾಡಿನ ಇಂದಿನ ಪರಿಸ್ಥಿತಿಯನ್ನೂ, ಮುಂದಿನ ನಮ್ಮ ಆಶೋತ್ತರಗಳನ್ನೂ ಹರಡುವುದೂ, ಸಾರ್ವಜನಿಕರ ವಿದ್ಯಾ ಪೀಠವಾಗುವುದೂ ಪರಿಷತ್ತಿನ ಕರ್ತವ್ಯವೆಂದು, ಒಂದು ದೃಷ್ಟಿಯಲ್ಲಿ ಇದೇ ಹೆಚ್ಚು ಕರ್ತವ್ಯವೆಂದು, ಭಾವಿಸಿ **ಕನ್ನಡ ನುಡಿ** ಯನ್ನು ವಾರಪತ್ರಿಕೆಯಾಗಿ ಹೊರಡಿಸಲಾಯಿತು. ಆಗಾಗಿನ ಪರಿಷತ್ತಿನ ಕಾರ್ಯಕಲಾಪ ಗಳೂ, ಉತ್ಸವ ಉಪನ್ಯಾಸಾದಿಗಳೂ, ಸುದ್ದಿಗಳೂ, ಕನ್ನಡ ಚಟುವಟಿಕೆಗಳೂ ಮಹಾಜನರ ಗಮನಕ್ಕೆ ಬರಲು ಇದರಿಂದ ಸಾಧ್ಯವಾಗಿದೆ.

“ಈ ಎರಡು ಪತ್ರಿಕೆಗಳನ್ನೂ, ಪರಿಷತ್ತಿನ ಇತರ ಮುದ್ರಣಕಾರ್ಯವನ್ನೂ ಸೌಕರ್ಯದಿಂದ ಸಾಗಿಸುವುದ ಕ್ಕಾಗಿ ಪರಿಷತ್ತಿನ ಅಚ್ಚುಕೂಟವೊಂದು ಸ್ಥಾಪನೆಯಾಗುತ್ತಿದೆ. * *
ಇಡಿಯ ಕರ್ಣಾಟಕದ ಎಲ್ಲಾ ಕನ್ನಡ ಸಂಘಗಳೂ ಪರಿಷತ್ತಿಗೆ ಅಂಗಸಂಸ್ಥೆಗಳಾಗಿ ಸೇರಿ ಪರಿಷತ್ತಿನ ಪ್ರಕಟನೆಗಳ, ಮುಖ್ಯವಾಗಿ **ಕನ್ನಡ ನುಡಿ** ಯ, ಪ್ರಚಾರಕರೂ, ಪೋಷಕರೂ ಆದಲ್ಲಿ ಸಂಘಟನೆ ಚೆನ್ನಾಗಿ ಬೆಳೆಯುವುದೆಂದೂ, ಒಂದು ಗೃಹಕೃತ್ಯದಂತೆ ಕೆಲಸಗಳು ವಿಶ್ವಾಸದಲ್ಲಿ ನಡೆಯುವುದೆಂದೂ, ವ್ಯಾಪಾರಧರ್ಮ ದಲ್ಲಿ ಹೇಗೋ ಸಾಗುವ ಚಟುವಟಿಕೆಗಿಂತ ಕನ್ನಡದ ಭಕ್ತಿಯಿಂದ ನಡೆಯುವ ಕೆಲಸಗಳು ಉತ್ತಮ ಫಲವನ್ನು ಕೊಡುವುವೆಂದೂ ಬಿನ್ನೈಸಿಕೊಂಡು ಮತ್ತೊಮ್ಮೆ ಕನ್ನಡ ನಾಡು ನುಡಿಗಳ ಕೈಂಕರ್ಯಕ್ಕೆ ನನ್ನನ್ನು ಪುನರರ್ಪಣ ಮಾಡಿಕೊಳ್ಳುತ್ತೇನೆ. ಸಿರಿಗನ್ನಡಂ ಗೆಲ್ಗೆ! ಕನ್ನಡತಾಯ್ ಬಾಳ್ಗೆ!”

ಈ ರೀತಿಯ ಅವರ ವಿನಮ್ರ ಪ್ರಾರ್ಥನೆ ಸಾಕಾದಷ್ಟು ಪರಿಣಾಮಕಾರಿಯಾಗದೆ ಹೋದದ್ದು ದುರ್ದೈವದ ಸಂಗತಿಯೆಂದೇ ಭಾವಿಸದಿದ್ದರೆ ವಿಧಿ ಇಲ್ಲ. ಪತ್ರಿಕೆಯು ಪ್ರಾರಂಭವಾದಾಗಿನಿಂದ ೨೫ ವರ್ಷಗಳ ಕಾಲದಲ್ಲಿ ನಿರೀಕ್ಷಿಸಿದಷ್ಟು ಸಹಾಯ ಸಂಪತ್ತಿಗಳು ಒದಗದೆ ಹೋದರೂ ಆಗಿಂದಾಗ ಅದರ ಸಂಪಾದಕತ್ವದ ಹೊಣೆಯನ್ನು ಹೊತ್ತಿದ್ದ ಸುಪ್ರಸಿದ್ಧ ಸಾಹಿತಿಗಳೂ, ಪರಿಷತ್ತಿನ ಕಾರ್ಯಕಲಾಪಗಳ ಮೇಲ್ವಿಚಾರಕರಾಗಿದ್ದು ಕನ್ನಡದ ಅಭಿಮಾನಿಗಳೆಂದು ಪ್ರಖ್ಯಾತರಾಗಿದ್ದ ಉಪಾಧ್ಯಕ್ಷರುಗಳೂ ಪತ್ರಿಕೆಯ ಧ್ಯೇಯಗಳನ್ನು ಯಥಾಶಕ್ತಿ ಪರಿಪಾಲಿಸಿಕೊಂಡು ಬಂದಿರುವುದು ಪ್ರಶಂಸನೀಯವೇ ಸರಿ.

ವಾರಪತ್ರಿಕೆಯಾಗಿ ಪ್ರಾರಂಭವಾದ **ಕನ್ನಡ ನುಡಿ** ಸಹಾಯ ಸಂಪತ್ತಿಗಳ ಅಭಾವದಿಂದ ಕೆಲ ಕಾಲಾನಂತರ ಪಕ್ಷಪತ್ರಿಕೆಯಾಗಿ ಮಾರ್ಪಾಟಾಗಿ ಈಚೆಗೆ ಮಾಸಪತ್ರಿಕೆಯಾಗಿ ನಡೆದುಕೊಂಡು ಬರುತ್ತಿದೆ. ಪರಿಷತ್ತಿನ ಸದಸ್ಯರಿಗೆ ಇದನ್ನು ಉಚಿತವಾಗಿ ಹಂಚುತ್ತಿರುವ ಪ್ರಯುಕ್ತ ಸದಸ್ಯ ಸಂಪತ್ತು ಹೆಚ್ಚಿದಲ್ಲದೆ ಅದು ಸ್ವಾವಲಂಬಿಯಾಗಿ ಬಾಳಲು ಸಾಧ್ಯವಿಲ್ಲ. ಅಲ್ಲದೆ ಜಾಹೀರಾತುಗಳೂ, ಇತರ ವಿಧವಾದ ದ್ರವ್ಯಸಹಾಯವೂ ಹೆಚ್ಚುಹೆಚ್ಚಾಗಿ ಒದಗುತ್ತಾ ಬಂದಲ್ಲದೆ ಪತ್ರಿಕೆಯನ್ನು ಲಾಭದಾಯಕವಾಗಿ ನಡಸುವುದು ಸಾಧ್ಯವಲ್ಲ. ಇನ್ನು ಮುಂದಾದರೂ ಇಂತಹ ಸಹಾಯ ಸೌಲಭ್ಯಗಳು ಒದಗುತ್ತಾ ಬಂದು **ಕನ್ನಡ ನುಡಿ** ತನ್ನ ಧ್ಯೇಯ ಸಾಧನೆ ಮಾಡಿಕೊಂಡು ಕೃತಾರ್ಥವಾಗಲೆಂಬುದೇ ಕನ್ನಡದ ಅಭಿಮಾನಿಗಳ ಹಾರೈಕೆಯಾಗಿರುವುದು.

ಇಪ್ಪತ್ತೈದು ವರ್ಷಗಳ ಹಿಂದೆ ಈ ಪತ್ರಿಕೆಯ ಅಂಕುರಾರ್ಪಣಕ್ಕೆ ಕಾರಣರಾದ ಮಾನ್ಯ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ದಿವಂಗತರಾದನಂತರ ಪರಿಷತ್ತಿನ ಉಪಾಧ್ಯಕ್ಷ ಪದವಿಯನ್ನಲಂಕರಿಸಿದ್ದ ಶ್ರೀಗಳಾದ ಮಾಸ್ತಿ ವೆಂಕಟೇಶ ಅಯ್ಯಂಗಾರರು, ಟಿ. ಟಿ. ಶರ್ಮ ಅವರು, ಎಂ. ಆರ್. ಶ್ರೀನಿವಾಸಮೂರ್ತಿಗಳು, ಡಿ. ವಿ. ಗುಂಡಪ್ಪನವರು, ಎ. ಎನ್. ಮೂರ್ತಿರಾಯರು ಇವರುಗಳೆಲ್ಲರೂ ತಮ್ಮ ನೇತೃತ್ವದಲ್ಲಿ ಬೇರೆ ಬೇರೆ ಸಂಪಾದಕರುಗಳ ಸಹಾಯದಿಂದ **ಕನ್ನಡ ನುಡಿ** ಯನ್ನು ತೃಪ್ತಿಕರವಾದ ರೀತಿಯಲ್ಲಿ ನಡೆಸಿಕೊಂಡು ಬಂದದ್ದಕ್ಕಾಗಿ ಸಮಸ್ತ ಕನ್ನಡಿಗರ ಪ್ರಶಂಸೆಗೆ ಪಾತ್ರರಾಗಿರುತ್ತಾರೆ.

ಅದೇ ರೀತಿ ಕಳೆದ ಏಳುವರ್ಷಗಳಿಂದ ಪರಿಷತ್ತಿನ ಅಧ್ಯಕ್ಷ ಪದವಿಯನ್ನಲಂಕರಿಸಿ ಪರಿಷತ್ತಿನ ಎಲ್ಲ ಚಟುವಟಿಕೆಗಳನ್ನೂ ತಮ್ಮ ಸಹೋದ್ಯೋಗಿಗಳ ಮತ್ತು ಕಾರ್ಯದರ್ಶಿಗಳ ಸಹಾಯ ಸಹಕಾರಗಳಿಂದ ತೀವ್ರಗತಿಯಿಂದ ಪತ್ರಿಕೆಯನ್ನು ನಡೆಸಿಕೊಂಡು ಬರುತ್ತಿರುವ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಸೇವೆಯನ್ನೂ ಸಹ ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುವುದು ಉಚಿತವಾಗಿರುತ್ತದೆ.

**ಕನ್ನಡ ನುಡಿ** ಪತ್ರಿಕೆಗೆ ನೇರವಾಗಿ ಸಂಬಂಧವಿಲ್ಲದಿದ್ದರೂ ಅದರ ಸರ್ವತೋಮುಖವಾದ ಪುರೋವೃದ್ಧಿಗೆ ಸಾಧಕವಾಗಬಹುದಾದ ಒಂದೆರಡು ಅಂಶಗಳನ್ನು ಈ ಸಂದರ್ಭದಲ್ಲಿ ಪ್ರಸ್ತಾವಿಸುವುದು ಅಪ್ರಕೃತವಾಗಲಾರದು. ಈ ಪೈಕಿ ಮೊದಲನೆಯದು ಲಿಪಿ ಸಂಸ್ಕರಣ. ಈ ಭಾಗದಲ್ಲಿ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ತಮ್ಮ ನೇತೃತ್ವದಲ್ಲಿ ಪತ್ರಿಕೆಯ ಅಂಕುರಾರ್ಪಣವಾದ ತರುಣದಲ್ಲಿಯೇ ಒಂದು ಯೋಜನೆಯನ್ನು ತಯಾರಿಸಿ ಅದನ್ನು ಅನುಷ್ಠಾನಕ್ಕೆ ತರುವುದರಿಂದ ಟೈಪ್‌ರೈಟರಿನ ಮತ್ತು ಮಾನೋಟೈಪ್, ಲೈನೋಟೈಪುಗಳ ಸೌಕರ್ಯಗಳು ಕನ್ನಡಕ್ಕೆ ಲಭ್ಯವಾಗತಕ್ಕದ್ದು ಆವಶ್ಯಕವೆಂಬ ಕನಸು ಕಂಡದ್ದು ಈಗ ತಕ್ಕಮಟ್ಟಿಗೆ ನನಸಾಗಿರುತ್ತದೆ.

ಮತ್ತೊಂದು ವಿಷಯ: ರಾಜಮಹಾರಾಜರುಗಳ ಕಾಲದಲ್ಲಿ ಜನ್ಮವೆತ್ತಿ ಆಗಿನ ಸರ್ಕಾರದ ಸಹಾಯ ಸಂಪತ್ತಿನಿಂದ ಊರ್ಜಿತವಾಗುತ್ತಾ ಬಂದ **ಕನ್ನಡ ನುಡಿ** ಪ್ರಜಾಪ್ರಭುತ್ವದ ಮಂತ್ರಿಮಂಡಲದಿಂದಲೂ ಸಾಕಷ್ಟು ಪ್ರೋತ್ಸಾಹವನ್ನೂ, ಸಹಾಯವನ್ನೂ ಪಡೆಯುತ್ತಿರುವುದು ಪ್ರಶಂಸನೀಯವೇ ಸರಿ.

ಕೊನೆಯದಾಗಿ ಕರ್ನಾಟಕದ ಏಕೀಕರಣವಾಗಿ ವಿಶಾಲ ಮೈಸೂರು ರಾಜ್ಯದಲ್ಲಿ ಸಮಸ್ತ ಕನ್ನಡಿಗರೂ ಒಂದೆಂಬ ಭಾವನೆಯು ಬಳೆದು ಭಾವೈಕ್ಯತೆಯು ಉಂಟಾಗಿ ಸರ್ವರೂ ಕನ್ನಡ ಮಾತೆಯ ಸೇವೆಯನ್ನು ಇತೋಪ್ಯತಿಶಯವಾಗಿ ನಡೆಸಿಕೊಂಡು ಬರಲೆಂದು ಹಾರೈಸತಕ್ಕದ್ದು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯವಾಗಿರುವುದೆಂಬುದನ್ನು ಎಷ್ಟು ಒತ್ತಿ ಹೇಳಿದರೂ ಸಾಲದಾಗಿದೆ.

## ಮೊದಲನೇ ಕನ್ನಡ ಸಾಹಿತ್ಯ ಸಮ್ಮೇಳನದ ಚಿತ್ರ



ಇದರಲ್ಲಿ ಪರಿಷತ್ತಿನ ಸ್ಥಾಪನೆಗೆ ಕಾರಣಕರ್ತರಾದ ಶ್ರೀ ಎಚ್. ವಿ. ನಂಜುಂಡಯ್ಯ ಮುಂತಾದ ಕನ್ನಡ ಅಭಿಮಾನಿಗಳನ್ನು ಕಾಣಬಹುದು.

# ಕನ್ನಡಿಗರ ಹೋರಾಟ

**ಲೇಖಕರು : ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ.**

೧

ಹೊಸ ಮೈಸೂರು ರಾಜ್ಯ ೧೯೫೬ ರ ನವೆಂಬರ್ ೧ರಲ್ಲಿ ರೂಪುಗೊಂಡುದು ಸರಿಯಷ್ಟೆ. ೧೯ ಜಿಲ್ಲೆಗಳಿಂದ ಕೂಡಿರುವ ಈ ನಾಡು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹೆಸರು ಪಡೆದಿದ್ದ "ಕರ್ಣಾಟಕ" ಪ್ರದೇಶವನ್ನು ಹೆಚ್ಚು ಕಡಮೆ ಈಗ ಆವರಿಸಿದೆ. ಈಗ ಕೇರಳ ಮತ್ತು ಆಂಧ್ರ ಪ್ರದೇಶಗಳಲ್ಲಿರುವ ಕೆಲವು ಭಾಗಗಳು ಸೇರಿದರೆ ಸಂಪೂರ್ಣ ಕರ್ಣಾಟಕವಾಗುತ್ತದೆ. "ಕರ್ಣಾಟಕ" ಎಂಬ ಶಬ್ದದ ತದ್ಭವವೇ ಕನ್ನಡ. ಇದು ಮೈಸೂರು ರಾಜ್ಯದ ಪ್ರಾದೇಶಿಕ ಭಾಷೆ. ಈಗ ಇದು ರಾಜ್ಯಸರಕಾರದ ಆಡಳಿತ ಭಾಷೆಯೂ ಆಯಿತು. ಇದನ್ನು ಪೋರ್ಚುಗೀಸರ ಸಂಪರ್ಕದಿಂದ ಪಶ್ಚಿಮ ತೀರಗಳಲ್ಲಿ ರೂಢಿಗೆ ಬಂದಿರುವ "ಕೆನರೀಸ್" ಎಂದು ಕರೆಯುವುದು ಸರಿಯಲ್ಲ. ಮೈಸೂರು ರಾಜ್ಯಕ್ಕೆ ಪಶ್ಚಿಮದಲ್ಲಿ ಸೀಳವಾದ ಸಮುದ್ರತೀರವೂ, ಘಟ್ಟದ ಬಹುಭಾಗವೂ, ಪೂರ್ವಭಾಗದಲ್ಲಿ ಬಯಲು ಸೀಮೆಯೂ ಸೇರಿರುವುದು ಒಂದು ಪುಣ್ಯವೆಂದೇ ಹೇಳಬೇಕು. ಈ ರಾಜ್ಯದ ಆಯಕಟ್ಟಿನಲ್ಲಿ ಸೇರಿದ ಐದು ಭಾಗಗಳಿಂದ ಐದು ಬಗೆಯ ಜನರೂ, ಐದು ಬಗೆಯ ಸಮಸ್ಯೆಗಳೂ ಹುಟ್ಟಿವೆ. ಹೀಗೆ ಹೊಸ ಮೈಸೂರು ರಾಜ್ಯ ಇಂಡಿಯಾ ದೇಶದ ಸಮಸ್ಯೆಗಳ ಪಡಿಯಚ್ಚಿನಂತಿದೆ. ಈಗ ಪ್ರತಿಯೊಬ್ಬ ಮೈಸೂರು ರಾಜ್ಯದ ನಿವಾಸಿಯ ಮೇಲೂ ಅಪಾರವಾದ ಜವಾಬ್ದಾರಿ ಬಿದ್ದಿದೆ. ಆತನು ಇಂಡಿಯಾ ದೇಶದ ವಿಶಾಲ ಕ್ಷೇತ್ರಕ್ಕಾಗಿ ದುಡಿಯುತ್ತಿರುವಾಗಲೇ ಮೈಸೂರು ರಾಜ್ಯಕ್ಕೂ ತನ್ನ ಕರ್ತವ್ಯವನ್ನು ಸಲ್ಲಿಸಬೇಕೆಂಬುದನ್ನು ಮರೆಯಬಾರದು. ಸಣ್ಣತನಕ್ಕೆ ಅವಕಾಶವಿಲ್ಲದಂತೆ, ವಿಶಾಲ ಮನೋಭಾವದಿಂದ ಹೊಸ ಮೈಸೂರು ರಾಜ್ಯವು ವಿಶ್ವದಲ್ಲೂ ಮತ್ತು ಇಂಡಿಯಾ ದೇಶದಲ್ಲೂ ಘನತರ ನಿಧಿಯಾಗಿರುವಂತೆ ದುಡಿಯಬೇಕು.

ಜಾರ್ಜ ರಸ್ಕಿನ್ ಎಂಬ ಆಂಗ್ಲ ಲೇಖಕನು ಹೇಳಿರುವಂತೆ—"ಯಾವ ದೇಶದಲ್ಲಿ ಉತ್ತಮರೂ ಸುಖಿಗಳೂ ಆದ ಜನರು ಬಹುಮಂದಿ ಇರುತ್ತಾರೋ ಆ ದೇಶವೇ ಶ್ರೀಮಂತ ದೇಶ. ಯಾವ ಮಾನವನು ತನ್ನ ಸ್ವಂತ ಹಿತಸಾಧನೆಯನ್ನು ಪರಿಪುಷ್ಟವಾಗಿ ನೆರವೇರಿಸಿದ ಮೇಲೆ ತನ್ನ ಬಲಾಢ್ಯತೆಯಿಂದ, ತನ್ನ ಐಶ್ವರ್ಯದಿಂದ, ಇತರರ ಜೀವನಕ್ಕೆ ಸಹಕಾರ ಒದಗಿಸುವಷ್ಟು ಶಕ್ತನೋ ಆತನೇ ಶ್ರೀಮಂತ ಮಾನವ." ಇದೀಗ ನಮ್ಮ ಪರೀಕ್ಷೆ. ಈ ಪರೀಕ್ಷೆಯಲ್ಲಿ ಮೈಸೂರು ರಾಜ್ಯ ಇತರ ರಾಜ್ಯಗಳಂತೆಯೇ ಉತ್ತೀರ್ಣವಾಗಬೇಕು.

೨

ಸತ್ಯಾಗ್ರಹದ ಮೂಲಕ ಸ್ವಾತಂತ್ರ್ಯವನ್ನು ಗಳಿಸುವವರೆಗೆ, ಎಂದರೆ ಸುಮಾರು ೬೦ ವರ್ಷಗಳಕಾಲ ಹೋರಾಡಿ ಗುರಿ ಮುಟ್ಟಿದ್ದೇವೆಂದು ಭಾರತೀಯರು ಪ್ರಶಾಂತಚಿತ್ತರಾಗಿ ಮೈಮರೆಯಬಾರದು. ಪರಕೀಯರ ಆಡಳಿತದ ಹಿಡಿತದಿಂದ ಬಿಡುಗಡೆಯಾಗುವುದು ಮುಂದಿನ ಹೋರಾಟಕ್ಕೆ ನಾಂದಿಯೇ ಹೊರತು ಗುರಿಮುಟ್ಟಿದಂತಾಗಿಲ್ಲ. ವೀರರಂತೆ ನಾವು ಸರಿಯಾದ ಪಥದಲ್ಲಿ ಹೋರಾಟವನ್ನು ಮುಂದುವರಿಸಲೇಬೇಕು. ಸುಭಾಷಿತದ ಕವಿ ಹೇಳಿರುವ ವಚನಗಳನ್ನು ಈ ಸನ್ನಿವೇಶದಲ್ಲಿ ನೆನಪಿನಲ್ಲಿಡಬೇಕು.

ಎಡರಡಸುವುದೆಂದಂಜುತೆ।
ತೊಡಗರ್ ಕಾರ್ಯಮನೆ ನೀಚರೆಡರಡಸಲೊಡಂ॥
ಬಿಡುವರ್ ಮಧ್ಯಮ ರೆಡರೆನಿ।
ತಡಸಿದೊಡಂ ತ್ಯಜಿಸರಾಂತ ಕೃತ್ಯವ ಧೀರರ್॥

ಮಹಾತ್ಮಾ ಗಾಂಧಿಯವರಲ್ಲಿ ಭಾರತೀಯ ನಾಯಕತ್ವದ ಎಲ್ಲಾ ಸನಾತನ ಸದ್ಗುಣಗಳೂ ಕೇಂದ್ರೀಕೃತವಾಗಿದ್ದುವು. ಇವರು ತಮ್ಮ ಸತ್ಯಾಗ್ರಹ ಮಂತ್ರದ ಮೂಲಕ ಭಾರತೀಯರ ಅಭಿಪ್ರಾಯಗಳನ್ನು ಒಂದು ಸಂಘಟಿತ ಹೋರಾಟ

ವನ್ನಾಗಿ ಮಾರ್ಪಡಿಸಿದರು. ವಿದೇಶಿಯರ ವಿರುದ್ಧವಾಗಿ ಭಾರತ ಒಗ್ಗಟ್ಟಿನಿಂದ ಒಬ್ಬ ಮನುಷ್ಯನಂತೆ ಇದಿರು ನಿಂತಿತು. "ಸಂಘೇಶಕ್ತಿಃ ಕಲೌಯುಗೇ," ಎಂಬ ನಾಣ್ಣುಡಿಯ ಪ್ರತ್ಯಕ್ಷ ಸಾಕ್ಷಿಯನ್ನು ನಾವು ಕಂಡೆವು.

ಈಗ ಮೈಸೂರು ರಾಜ್ಯವು ಇಂಡಿಯಾ ದೇಶವನ್ನು ಪ್ರಬಲರಾಷ್ಟ್ರವಾಗಿ ರೂಪುಗೊಳಿಸುವ ಕಾರ್ಯದಲ್ಲಿ ಪ್ರಾಮುಖ್ಯಪಾತ್ರವನ್ನು ವಹಿಸಬೇಕಾಗಿದೆ. ಈ ರಾಜ್ಯವು ಈಗಾಗಲೇ ಅಭಿವೃದ್ಧಿ ಗಾಮಿ ರಾಜ್ಯವೆಂದೂ, "ಮಾದರಿ ರಾಜ್ಯ" ವೆಂದೂ ಹೆಸರು ಪಡೆದಿದೆ. ೧೭೯೯ರಲ್ಲಿ ಟಿಪ್ಪುವಿನ ಮರಣಾನಂತರ ಈ ರಾಜ್ಯವು ಬ್ರಿಟಿಷರ ಆಡಳಿತಕ್ಕೆ ಬಂದ ಕಾಲ ದಿಂದಲೂ, ದೇಶಭಕ್ತರಾದ ಅರಸರೂ, ಸಮರ್ಥರಾದ ಅಧಿಕಾರಿಗಳೂ ರಾಜ್ಯಸೂತ್ರವನ್ನು ಹಿಡಿದಿದ್ದಾರೆ. ಹಿಂದಿನ ಒಂಭತ್ತು ಜಿಲ್ಲೆಗಳಿಂದ ಕೂಡಿದ್ದ ಮೈಸೂರು ಸಂಸ್ಥಾನ ಬ್ರಿಟಿಷರ ಸಾರ್ವಭೌಮತ್ವದ ಆಡಳಿತ ವಿಧಾನದಲ್ಲಿ ಸಾಂಕುಶ ಪ್ರಭುತ್ವವಾಗಿ ಬೆಳೆಯಿತು. ಪ್ರಭುಗಳೂ, ಅಧಿಕಾರಿಗಳೂ, ಪ್ರಜೆಗಳೂ ಒಂದು ಕಡೆ ಸೇರಿ ಅರಿಕೆ ಮತ್ತು ವಿಮರ್ಶೆಗಳ ಪ್ರಾತಿನಿಧ್ಯರೂಪವುಳ್ಳ ಒಂದು ಕ್ರಮದಲ್ಲಿ ಆಡಳಿತ ನಡೆಸುತ್ತಿದ್ದರು. ಅಂದಿನ ಪ್ರಜಾಪ್ರತಿನಿಧಿಸಭೆಗೆ ನ್ಯಾಯ ವಿಧಾನಗಳಲ್ಲಿ ಅಷ್ಟು ಅಧಿಕಾರವಿಲ್ಲದಿದ್ದರೂ ಆಡಳಿತ ಯಂತ್ರವನ್ನು ಸರಿತೂಗಿ ನೋಡಲು ಅವಕಾಶವುಂಟಾಗಿತ್ತು. ಬಳ್ಳಾರಿ ಜಿಲ್ಲೆ ೧೯೫೩ರಲ್ಲಿ ಸೇರಿತು. ಆ ತರುವಾಯ ಬೊಂಬಾಯಿ ಪ್ರಾಂತ್ಯದ ನಾಲ್ಕು ಜಿಲ್ಲೆಗಳೂ, ಹೈದರಾಬಾದು ಪ್ರಾಂತ್ಯದ ಮೂರು ಜಿಲ್ಲೆಗಳೂ, ಮದರಾಸಿನ ಒಂದು ಜಿಲ್ಲೆಯೂ, ಕೊಡಗು ಜಿಲ್ಲೆಯೂ ಸೇರಿದುವು. ಆಡಳಿತದ ಕ್ರಮವು ಇಂಡಿಯಾ ಸರ್ಕಾರದ ಹತೋಟಿಯಲ್ಲಿ ಸಾಂಕುಶಪ್ರಭುತ್ವದಿಂದ ಪ್ರಜಾಪ್ರಭುತ್ವಕ್ಕೆ ಮಾರ್ಪಾಡಾಯಿತು. ಒಟ್ಟಿನಲ್ಲಿ ಭಾಷೆ, ಬಟ್ಟೆ, ಮತ್ತು ಧರ್ಮಾವಲಂಬನೆಗಳಲ್ಲಿ ಮತ್ತು ಆಡಳಿತ ವಿಧಾನಗಳಲ್ಲಿ ಅಲ್ಪ ಸ್ವಲ್ಪ ವೈವಿಧ್ಯತೆಯಿಂದ ಕೂಡಿದ್ದ ಐದು ಬೇರೆ ಬೇರೆ ಪ್ರದೇಶಗಳ ಕನ್ನಡ ಮಹಾಜನರು ಈಗ ಒಂದುಗೂಡಿದ್ದಾರೆ. ಈಗಿನ ಪ್ರದೇಶದ ವಿಸ್ತಾರ ಸರಿ ಸುಮಾರು ೧೭೯೯ರಲ್ಲಿ ಕೈಬಿಟ್ಟುಹೋಗಿದ್ದ ಪ್ರದೇಶದಷ್ಟೇ ಇದೆ. ಮೈಸೂರು ರಾಜ್ಯದಲ್ಲಿ ತೀವ್ರವಾಗಿ ಆಗಬೇಕಾಗಿರುವ ಕಾರ್ಯ ಈ ವೈವಿಧ್ಯತೆಯಲ್ಲಿ ಹೊಂದಾಣಿಕೆ ಎಂದರೆ, ಭಾವೈಕ್ಯತೆ. ಕನ್ನಡ ರಾಜ್ಯದಲ್ಲಿ ಕೈಗೂಡುವ ಭಾವೈಕ್ಯತೆಯಿಂದ ಭಾರತದ ಇತರ ರಾಜ್ಯಗಳಿಗೂ ಮೇಲ್ಪಂಗ್ತಿಯುಂಟಾಗಲು ಅವಕಾಶವಿರುತ್ತದೆ.

೩

ನಮ್ಮ ನಾಯಕರು ಈಗಾಗಲೇ ಮೂರು ಯೋಜನೆಗಳನ್ನಿಟ್ಟಿದ್ದಾರೆ. ಈ ಯೋಜನೆಗಳು ಇಡೀ ಭಾರತಕ್ಕೇ ಸಲ್ಲತಕ್ಕವಾಗಿವೆ. ಪ್ರಥಮ ಪಂಚವಾರ್ಷಿಕ ಯೋಜನೆಯು ಕೈಗೂಡಿ, ದ್ವಿತೀಯ ಪಂಚವಾರ್ಷಿಕ ಯೋಜನೆಯೂ ಮುಗಿದು, ಈಗ ತೃತೀಯ ಯೋಜನೆಯಲ್ಲಿ ನಾವಿದ್ದೇವೆ. ಪ್ರಥಮ ಯೋಜನೆಯಲ್ಲಿ ಹೆಚ್ಚಿನ ಆಹಾರ ಬೆಳೆಯುವ ವಿಧಾನಗಳಿಗೆ ಪ್ರಾಮುಖ್ಯತೆ ನೀಡಲಾಗಿತ್ತು. ಇದಕ್ಕಾಗಿ ಭಾರಿ ಪ್ರಮಾಣದ ಮತ್ತು ಸಣ್ಣ ಪ್ರಮಾಣದ ನೀರಾವರಿ ಕಾಮಗಾರಿಗಳನ್ನು ಕೈಗೊಳ್ಳಲಾಯಿತು. ದ್ವಿತೀಯ ಯೋಜನೆಯಲ್ಲಿ ಕೈಗಾರಿಕೆಗಳ ಅಭಿವೃದ್ಧಿಯ ಕಡೆಗೆ ಹೆಚ್ಚಿನ ಗಮನ ಕೊಟ್ಟಿದ್ದಾರೆ. ಇದಕ್ಕಾಗಿ ಸರ್ಕಾರಿ ಮತ್ತು ಖಾಸಗಿ ಕೈಗಾರಿಕೋದ್ಯಮಗಳಿಗೆ ಪ್ರೋತ್ಸಾಹ ನೀಡಲಾಗಿದೆ. ತೃತೀಯ ಯೋಜನೆಯಲ್ಲಿ ವಿದ್ಯಾಭ್ಯಾಸ ಮತ್ತು ವ್ಯವಸಾಯ ಕಾರ್ಯಕ್ರಮಗಳು ದೇಶದ ಮುಂದಿವೆ. ಮೈಸೂರು ರಾಜ್ಯವು ೧೯೫೬ ರ ನವೆಂಬರ್ ಒಂದನೆಯ ತಾರೀಖಿಗೆ ಹಿಂದೆ ಯೋಜನೆಯ ಚೌಕಟ್ಟಿನಲ್ಲಿ ವ್ಯವಸಾಯ, ರಾಷ್ಟ್ರೀಯ ಅಭಿವೃದ್ಧಿಕಾರ್ಯಗಳು, ನೀರಾವರಿ, ವಿದ್ಯುಚ್ಛಕ್ತಿ, ಕೈಗಾರಿಕೆ, ಗ್ರಾಮಾಭಿವೃದ್ಧಿ, ರಸ್ತೆಸಂಚಾರ ಮತ್ತು ಸಾಗಾಣಿಕೆ, ಸಮಾಜ ಸೇವೆ ಮತ್ತು ಇತರ ವಿಧಾನಗಳಲ್ಲಿ ತನ್ನ ಪಾಲಿನ ಸಹಾಯವನ್ನು ಪಡೆದಿತ್ತು. ಸರ್ವರಿಗೂ ಅನ್ವಯಿಸುವ ಯೋಜನೆಗಳನ್ನು ಮೈಸೂರು ರಾಜ್ಯದ ಎಲ್ಲಾ ಪ್ರದೇಶಗಳಿಗೂ ಪ್ರಯೋಗಿಸಲಾಗಿತ್ತು. ಹಲವು ಭಾರಿ ಪ್ರಮಾಣದ ಕೈಗಾರಿಕೆಗಳನ್ನೂ, ಭಾರಿ ಪ್ರಮಾಣದ ನೀರಾವರಿ ಕಾರ್ಯಗಳನ್ನೂ ಮತ್ತು ವಿದ್ಯುಚ್ಛಕ್ತಿ ಯೋಜನೆಗಳನ್ನೂ ಆಯಾ ಸ್ಥಳೀಯ ಸೌಕರ್ಯಕ್ಕನುಗುಣವಾಗಿ ಅಲ್ಲಲ್ಲಿ ಏರ್ಪಡಿಸಲಾಗಿತ್ತು. ಇಷ್ಟಾದರೂ ಮೈಸೂರು ರಾಜ್ಯದ ಹೊಸ ಸಮುದ್ರ ತೀರವೂ, ಪಶ್ಚಿಮ ಘಟ್ಟ ಅಥವಾ ಮಲೆನಾಡೂ, ಹಲವು ವಿದ್ಯುಚ್ಛಕ್ತಿಯ ಮತ್ತು ನೀರಾವರಿ ಯೋಜನೆಗಳೂ ನವೀನ ಸಮಸ್ಯೆಗಳನ್ನು ತಂದೊಡ್ಡಿವೆ. ಇವುಗಳನ್ನು ತೃತೀಯ ಯೋಜನೆಯ ಆಯಕಟ್ಟಿನಲ್ಲಿಯೇ ಸಾಧ್ಯವಾದಷ್ಟುಮಟ್ಟಿಗೆ ಸ್ಥಾಪಿಸಲು ಪ್ರಯತ್ನ ನಡೆದಿದೆ. ಅಂತು ಪಶ್ಚಿಮ ಘಟ್ಟಗಳ ಪ್ರದೇಶಗಳಲ್ಲಿ ಸಂಚಾರ ಸೌಕರ್ಯವೂ, ಸಮುದ್ರತೀರವೂ ಮೈಸೂರು ರಾಜ್ಯಕ್ಕೆ ಹೊಸ ಸಮಸ್ಯೆಗಳಾಗಿಯೇ ಇವೆ. ಈ ಸಮಸ್ಯೆಗಳನ್ನು ಮತ್ತು ಇವುಗಳಂತಹ ಇತರ ಸಮಸ್ಯೆಗಳನ್ನೂ ನೆರವೇರಿಸುವುದರಲ್ಲಿ ಇಂಡಿಯಾ ಸರಕಾರದ ಸಹಾಯವನ್ನು ಅವಲಂಬಿಸಬೇಕಾಗಿದೆ. ಏಕೆಂದರೆ, ಈ ಯೋಜನೆಗೆ ತಗಲುವ ವೆಚ್ಚ, ಸಾಲದ ರೂಪದಲ್ಲಿಯೋ ಗ್ರಾಂಟು ಮೂಲಕವೋ ಕೇಂದ್ರ ಸರ್ಕಾರದಿಂದ ಬರಬೇಕು.

ಪಂಚವಾರ್ಷಿಕ ಯೋಜನೆಗಳು ದೇಶದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸಿ, ಸಮತಾಸಮಾಜವನ್ನು ನಿರ್ಮಿಸುತ್ತಿರುವುದು ಸರಿಯಷ್ಟೆ. ಇದೇ ಸಮಯದಲ್ಲಿ ನಮ್ಮ ಭಾಷೆ, ಬಟ್ಟೆ, ಧರ್ಮ ಮತ್ತು ಶಿಸ್ತು—ಇವುಗಳನ್ನು ಒಂದು ಯೋಜನೆಯ ಕ್ರಮದಲ್ಲಿ ನಿರ್ಧರಿಸಿ ಸಮಾನತೆಯನ್ನು ಗಳಿಸಬೇಕು. ಮೈಸೂರು ರಾಜ್ಯ ಈ ಸಮಸ್ಯೆಗಳನ್ನು ತನ್ನದೇ ಆದ ರೀತಿಯಲ್ಲಿ ಪರಿಹರಿಸಬೇಕಾಗಿದೆ. ಕನ್ನಡ ಭಾಷೆಯ ಪ್ರಾಂತೀಯ ವಿಭೇದಗಳೂ, ಉಡುಪುಗಳ ಪ್ರಾಂತೀಯ ವ್ಯತ್ಯಾಸಗಳೂ, ಧಾರ್ಮಿಕ ಕಟ್ಟು ಕಟ್ಟಲೆಗಳೂ ಭಿನ್ನ ಭಿನ್ನ ಲಕ್ಷಣಗಳಿಂದ ಕೂಡಿವೆ. ಇವು ಒಂದುಗೂಡಬೇಕು. ಇದರಿಂದ ಭಾವೈಕ್ಯತೆಯುಂಟಾಗಿ ದೇಶದಲ್ಲಿ ನಡೆಯತಕ್ಕ ಹಲವಾರು ಪ್ರಯತ್ನಗಳಲ್ಲಿ ಸಮಾನತೆಯನ್ನು ಗಳಿಸುತ್ತವೆ. ಪ್ರತಿಯೊಂದು ರಾಜ್ಯವೂ ಈ ಗುರಿಯನ್ನು ಸಾಧಿಸುವುದಾದರೆ ಭಾರತದ ಅಥವಾ ಮೈಸೂರು ರಾಜ್ಯದ ಪ್ರತಿಯೊಬ್ಬ ನಾಗರೀಕನೂ ನಮ್ಮ ಭಾರತ ರಾಷ್ಟ್ರದ ಶಿಸ್ತಿನ ಪ್ರಜೆಯಾಗಬಲ್ಲನು.

೪

ಕಳೆದ ಹದಿನೇಳು ವರ್ಷಗಳಲ್ಲಿ ಭಾರತದ ಜನತೆಯಲ್ಲಿರುವ ಆಜನ್ಮನ್ಯೂನತೆಗಳು ಬೆಳಕಿಗೆ ಬಂದಿವೆ. ನಾವು ಅಮೆರಿಕ, ಇಂಗ್ಲೆಂಡ್, ರಷ್ಯ ಅಥವಾ ಜಪಾನ್ ಮೊದಲಾದ ಇತರ ಸ್ವಾತಂತ್ರ್ಯ ಜನಾಂಗಗಳನ್ನು ನೋಡಿದರೆ ನಮ್ಮ ನ್ಯೂನತೆಗಳು ಇನ್ನೂ ಹೆಚ್ಚು ಪ್ರಧಾನವಾಗಿ ಕಾಣುತ್ತವೆ. ಈ ನ್ಯೂನತೆಗಳು (೧) ಭಾಷೆ, (೨) ಉಡುಪು, ಮತ್ತು (೩) ಧರ್ಮ ಎಂಬ ಮೂರು ಪ್ರಾಮುಖ್ಯ ಗುಂಪಿಗೆ ಸೇರಿವೆ. ಭಾರತದಲ್ಲಿ ಈ ಮೂರು ಮುಖ್ಯ ವಿಷಯಗಳಲ್ಲಿ ಒಂದು ರಾಜ್ಯಕ್ಕೂ ಇನ್ನೊಂದೂ ರಾಜ್ಯಕ್ಕೂ ಹೊಂದಾಣಿಕೆ ಇಲ್ಲದಿರುವುದನ್ನು ನಾವು ಕಾಣುತ್ತೇವೆ. ತತ್ಫಲವಾಗಿ, ಒಂದೇ ದೇಶದ ಜನರು ಪರಸ್ಪರ ಅಪರಿಚಿತರಂತೆ ವರ್ತಿಸುತ್ತಾರೆ. ದುರದೃಷ್ಟವಶಾತ್ ಈ ನ್ಯೂನತೆಗಳು ಭಾರತದಲ್ಲಿ ಮಾತ್ರ ಕಂಡುಬರುವುದು ವಿಚಿತ್ರವಾಗಿದೆ. ಏಕೆಂದರೆ ಅವು ಇತರ ಸ್ವತಂತ್ರ ದೇಶಗಳಲ್ಲಿ ಕಂಡುಬರುವುದಿಲ್ಲ. ಅವುಗಳಲ್ಲಿ ಒಂದೇ ರಾಷ್ಟ್ರಭಾಷೆ, ಒಂದೇ ರಾಷ್ಟ್ರೀಯ ಉಡುಪು ಮತ್ತು ಒಂದೇ ರಾಷ್ಟ್ರೀಯ ಮತ ನೆಲೆಗೊಂಡಿವೆ. ಆದುದರಿಂದ ಈಗಿನ ಪರಿಸ್ಥಿತಿಯಲ್ಲಿ ಭಾರತೀಯರು ವೈವಿಧ್ಯತೆಯಲ್ಲಿ ಸಂಘಟನೆಯ ಸ್ಫೂರ್ತಿಯನ್ನು ಅಭ್ಯಸಿಸಬೇಕಾದುದು ಅವಶ್ಯಕ. ಕಾರ್ಲೈಲ್ ಎಂಬ ಆಂಗ್ಲ ಪ್ರಬಂಧಕಾರನು ಹೇಳಿರುವಂತೆ—"ಮಹಾಜನರು ಯಾವಾಗಲೂ ಭಕ್ತಿಪರಿಪೂರ್ಣರು, ವೀರ ಭಾವನೆಗಳನ್ನು ಗೌರವಿಸತಕ್ಕವರು. ನೀಚ ಜನರು ಮಾತ್ರ ಹಾಗೆ ನಡೆಯುವುದಿಲ್ಲ. ಪ್ರಾಮಾಣಿಕನಾದ ಮಾನವನು ಸ್ವಾಭಾವಿಕವಾಗಿ ವಿಧೇಯನೂ ಹೌದು. ವೀರ ಪುರುಷರ ನಾಡಿನಲ್ಲಿ ಮಾತ್ರವೇ ವೀರರಿಗೆ ಗೌರವ ದೊರಕೀತು."

ಆದರೆ, ಜನರು ತಮ್ಮ ತಾಯ್ನಾಡಿನ ಬಗೆಗೆ ಅತ್ಯುನ್ನತ ಪ್ರೇಮವನ್ನು ಅಭಿವೃದ್ಧಿಪಡಿಸಿಕೊಂಡು ಸೂಕ್ತ ಆಡಳಿತದ ಮೂಲಕ ತಮ್ಮ ದೇಶದ ಘನತೆಯನ್ನು ಕಾಪಾಡಲು ಒಟ್ಟಿಗೆ ಕೆಲಸಮಾಡುವುದು ತಮ್ಮ ಕರ್ತವ್ಯವೆಂದು ಮನಗಾಣುವ ವರೆಗೂ ಸಂಘಟನೆಯು ಸಾಧಿತವಾಗಲಾರದು. ಜನರು ವಿವಿಧ ವೃತ್ತಿಗಳನ್ನು ಅವಲಂಬಿಸಿರಬಹುದು. ಆದರೆ ಒಂದು ದೇಶದ ಆಡಳಿತವು ಒಂದು ವೃತ್ತಿಯಲ್ಲ; ಇತರ ಕಲೆಗಳ ಹಾಗೆ ಇದೂ ಒಂದು ಕಲೆ. ಜಾತಿ, ಮತ, ವರ್ಣಭೇದಗಳನ್ನು ಮುಂದಿಡದೆ ಬೇಸಾಯಗಾರ, ವ್ಯಾಪಾರಿ, ಸೈನಿಕ ಮತ್ತು ಪುರೋಹಿತ ಇವರೆಲ್ಲರೂ ತಮ್ಮ ರಾಜ್ಯದ ಆಡಳಿತವನ್ನು ನಡೆಸುವುದರಲ್ಲಿ ಸಮಾನವಾದ ಹಕ್ಕು ಬಾಧ್ಯತೆಯುಳ್ಳವರಾಗಿದ್ದಾರೆಂದು ಭಾವಿಸಬೇಕು. ದೇಶಾಭಿಮಾನದ ಹುಮ್ಮಸ್ಸು ನಮ್ಮ ಮಧ್ಯದಲ್ಲಿ ಎಲ್ಲೆಡೆಯಲ್ಲೂ ಉಕ್ಕುವಂತಾಗಬೇಕು.

ದ್ವೇಷಾಸೂಯೆಗಳಿಗೆ ಅವಕಾಶ ಕೊಡದೆ ಸುಖಕರವೂ ಶಾಂತಿಪ್ರದವೂ ಆದ ಜೀವನ ನಿರ್ವಹಣೆಗಾಗಿ ಶ್ರಮಿಸಲು ನಾವು ;ಒಂದೇ ಮಾರ್ಗವನ್ನು ಅನುಸರಿಸಬೇಕು. ನಮ್ಮ ಪ್ರಗತಿಯ ಮಾರ್ಗದಲ್ಲಿ ಏನೇ ಅಡಚಣೆಯುಂಟಾದರೂ ಅವೆಲ್ಲವನ್ನೂ ಭಾರತೀಯರು ತಮ್ಮ ಬುದ್ಧಿಶಕ್ತಿಯ ಬಲದಿಂದ ದಾಟಬಲ್ಲರು. ಈ ವಿಷಯದಲ್ಲಿ ಪಂಚವಾರ್ಷಿಕ ಯೋಜನೆಯೇ ದೃಷ್ಟಾಂತವಾಗಿದೆ. ವಿದ್ಯಾಭ್ಯಾಸ ಸುಧಾರಣೆ, ಕೈಗಾರಿಕೆಗಳ ಪುನರುಜ್ಜೀವನ, ಸಂಸ್ಕೃತಿಯ ಬೆಳವಣಿಗೆ ಇವೆಲ್ಲವೂ ನಾವು ಶಕ್ತರೆಂಬುದನ್ನೂ, ಸರಿಯಾದ ಮಾರ್ಗದಲ್ಲಿ ನಡೆದು ಸುಖಶಾಂತಿಯನ್ನು ಗಳಿಸಬಲ್ಲೆವೆಂಬುದನ್ನೂ ಸಾರುತ್ತವೆ. ಈ ಐಕ್ಯಮತ್ಯದ ಸಾರಸತ್ತ್ವವು ಕನ್ನಡ ಯುವಜನರಲ್ಲಿ ಕಾಯಾ, ವಾಚಾ, ಮನಸಾ ರೂಪುಗೊಂಡು ಉನ್ನತ ನೀತಿಯಿಂದ, ಉತ್ತಮ ನಡತೆಯಿಂದ ಹೋರಾಟ ನಡೆಸಿ, ಮೈಸೂರು ರಾಜ್ಯವನ್ನು ಭಾರತ ಮಾತೆಯ ಮುಕುಟ ಮಣಿಯಾಗಿ ಬೆಳಗಿಸಬೇಕಾಗಿದೆ.

# ಸ್ವಾತಂತ್ರ್ಯಪೂರ್ವದ ಕನ್ನಡ ರಾಜಕೀಯ ಸಾಹಿತ್ಯ

ಲೇಖಕರು : ಶ್ರೀ ತಿರುಮಲೆ ತಾತಾಚಾರ್ಯ ಶರ್ಮ

ಶ್ರೀರಂಗಪಟ್ಟಣದ ರಣರಂಗದಲ್ಲಿ ಟೀಪು ಬಿದ್ದು, ಸತ್ತು, ಸ್ವರ್ಗಾಲಯ ಸೇರಿದ ಕ್ಷಣದಿಂದ ಕನ್ನಡ ನಾಡಿನಲ್ಲೆಲ್ಲ ಸ್ವಾತಂತ್ರ್ಯ ಸಾಹಿತ್ಯ – ರಾಜಕೀಯ ಸಾಹಿತ್ಯ, ಒಂದಲ್ಲ ಒಂದು ರೂಪದಲ್ಲಿ ಸೃಷ್ಟಿಯಾಗುತ್ತಾ ಬಂದಿದೆ. ಸ್ಥೂಲವಾಗಿ ೧೮೦೦ ರಿಂದ ೧೮೭೦ ರ ವರೆಗೆ ಒಂದು ಘಟ್ಟವೆಂದೂ, ೧೮೭೦ ರಿಂದಾರಂಭಿಸಿ ೧೯೪೭ ರ ವರೆಗೆ ಒಂದು ಘಟ್ಟವೆಂದೂ, ಈ ಸಾಹಿತ್ಯ ನಿರ್ಮಾಣದ ಕಾಲಮಾನವನ್ನು ಎರಡು ಭಾಗಮಾಡಬಹುದು. ಮೊದನೆಯ ಘಟ್ಟದಲ್ಲಿ ಸಹಜವಾಗಿ ಲಾವಣಿಗಳು ಸೃಷ್ಟಿಯಾದುವು. 'ಶ್ರೀರಂಗಪಟ್ಟಣದ ಲಾವಣಿ' ಯೇ ಮೊದಲನೆಯದು. ಐಗೂರು ಪಾಳೆಯಗಾರ ವೆಂಕಟಾದ್ರಿ ನಾಯಕನ ಶೂರ ಜೀವನ – ವೀರ ಮರಣ ಕುರಿತ ಲಾವಣಿ ಎರಡನೆಯದು. ಕಿತ್ತೂರು ರಾಣಿ ಚೆನ್ನಮ್ಮನನ್ನು ಕುರಿತ ಲಾವಣಿಗಳು ಒಂದಲ್ಲ; ಅನೇಕ ಇವೆ. ಸಂಗೊಳ್ಳಿ ರಾಯಣ್ಣನನ್ನು ಕುರಿತು ಮುಂಡಲ ಹೆಬ್ಬಳ್ಳಿ ಬಸವಕವಿ ರಚಿಸಿರುವ ಲಾವಣಿ ಹದಿಮೂರು ನುಡಿಗಳಿವೆ.

" ಗಲ್ಲಿಗ್ಹಾಕ್ಯಾರಣ್ಣಾ ಅವರು ನಿಂತಾ
ಧೀರ ನಾಯಕನ ಕೊರಳಿಗೆ
ಸವಕ ಹಾಕಿ ತೂಗಿಬಿಟ್ವಾರ
ನಿಂತಾರೊ ಜನರೆಲ್ಲ ಮರಗುತಾ
" ಹಿಂತಾ ಭಂಟ ರಾಯಿನಾಯಿಕನ
ಮತ್ತ ಕೊಲ್ಲಬಾರದಿತ್ತಂ" ತ
ಸುತ್ತೀನ ಜನರು ದುಃಖಾಮಾಡುತಾ"

ಪಾಶಕೊಟ್ಟ ಆಂಗ್ಲ ಸರದಾರನೇ ಮರುಗುತ್ತ ನಿಂತನಂತೆ! "ಹಿಂತಾ ಭಂಟನ ಕೊಲ್ಲಬಾರದಿತ್ತ" ಅನ್ನುತ್ತ, ಹತ್ತು ರೂಪಾಯ ಖರ್ಚುಮಾಡಿ, " ಇವರ ಮಣ್ಣ ಕೊಡಿ" ಎಂದಾಸಾಹೇಬ ಹೇಳಿದನಂತೆ!

* ಸುರಪುರದ ವೆಂಕಟಪ್ಪನಾಯಕನನ್ನು ಕುರಿತ ಲಾವಣಿಯೊಂದು 'ವೀರರಸಪಾಕ' ವೆನಿಸಿದೆ. ಮುಂಡರಗಿ ಭೀಮರಾಯನ ಬಂಡಾಯದ ಲಾವಣಿಯೊಂದು ಪುಟ್ಟ ಕಾವ್ಯ! ೨೭ ಚರಣಗಳಿವೆ. ಕೊಪ್ಪಳದ ಕೋಟೆಯ ಸಂರಕ್ಷಣೆಯ ಸಮಯ; ಲಾವಣಿಕಾರ ಹೇಳುವುದನ್ನಾಲಿಸಿ:

ಕಿತ್ತ ಕತ್ತಿ, ಕೈ ಎತ್ತಿ, ಸುತ್ತಮುತ್ತ
ಕೇಳುತಾನೆ ಬಂಟರನ
ಭೀಮರಾಯ, ಕೂಡಿ ಹೊಡೆದಾ ರಣಶೂರಾ
ತಡೆಯದೆ ಹಾರುತಿದ್ದವು ಶಿರಾ
ತೆಯ್ತು ತೆಯ್ತೋ ಕೆಂಪು ನೆತ್ತರಾ
ಒಮ್ಮೆ ಗುಂಡು ಹಾಯೋ ಸಾವಿರಾ
ಹೆಮ್ಮಿಗೆ ದೇಸಾಯಿ ಭೀಮರಾಯಾ
ಅದೇ ಕ್ಷಣಕೆ ಸಂಹಾರಾ

* * *

---

* ಶ್ರೀ ಕಪಟ್ರಾಳ ಕೃಷ್ಣರಾಯರು ಸುರಪುರ ಸಂಸ್ಥಾನದ ಚರಿತ್ರೆಯನ್ನು ವಿಸ್ತಾರವಾಗಿ ಬರೆದಿದ್ದಾರೆ. ಸಾವಿರ ಎರಡು ಸಾವಿರ ಪುಟಗಳ ಪ್ರಮಾಣದ ಹಸ್ತಪ್ರತಿ ಹತ್ತಿಪ್ಪತ್ತು ವರ್ಷಗಳಿಂದ ಪ್ರಕಟವಾಗದೆ ಹಾಗೆಯೇ ಬಿದ್ದಿದೆ. ಕರ್ನಾಟಕದ ರಾಜಕೀಯ ಇತಿಹಾಸಕ್ಕಾಧಾರ ರೂಪದ ಸಾಹಿತ್ಯವಿದು.




"ಅಯ್ಯಯ್ಯೋ ಎಂದು ಭೀಮರಾಯನ ಹೆಂಡಿರು
ಬಡಕೊಂಡರೋ ಹಣೆಹಣೆಯ;
ಘೋರೆಂದಳುತ ಕಡಿದರು ಕರಿಮಣಿಯ;
ಕೊಲ್ಲುವರೇನೋ ಶಿವನ ಗುಣಮಣಿಯಾ
ಕಾಂಬುವರೇನೋ ಇನ್ನ ಇಂಥ ದೊರೆಯಾ;
ಕಣ್ಣೀರು ಸುರಿಸುತಾರೆ ಹನಿಹನಿಯಾ"

ಇತಂತಹ 'ರಸಘಟ್ಟಿ' ಗಳಂತಹ ಲಾವಣಿಗಳು ಈ ಕಾಲದಲ್ಲಿ ನೂರಾರು – ಅದೇಕೆ – ಸಾವಿರಾರು ಸೃಷ್ಟಿಯಾಗಿರಬೇಕು; ಜನರು ಅವುಗಳನ್ನು ಹಾಡಿ, ಹಾಡಿ, ವೀರಗಾನ – ವೀರಪೂಜೆ ಮಾಡಿರಬೇಕು!

ಈ ಕಾಲದಲ್ಲಿ *'ಕೈಫಿಯತ್' ಎಂಬ ಹೆಸರಿನ ಸಾಹಿತ್ಯ ನಿರ್ಮಾಣವಾಯಿತು. ಐತಿಹಾಸಿಕ ಘಟನೆಗಳು ನಡೆದಾಗ ಹಲವರು ಕೊಟ್ಟ ಹೇಳಿಕೆಗಳಿವು. ಇನ್ನು ಕೆಲವು 'ಕೈಫಿಯತ್' ಗಳನ್ನು ಕೆಲವರು ಕೂತು ಅಚ್ಚುಕಟ್ಟಾಗಿ ಬರೆದಿದ್ದಾರೆ. ಇವುಗಳಲ್ಲಿ ಕೆಲವಾದರೂ ಮೆಕಂಜಿ – ರೈಸ್ ಮೊದಲಾದವರ ಕೃಪೆಯಿಂದ ನಮಗೆ ಲಭ್ಯವಾಗಿವೆ.

ಕೆಲವು ಪತ್ರಗಳನ್ನು ಸಹ ಈ ಕಾಲದ ರಾಜಕೀಯ ಸಾಹಿತ್ಯರಾಶಿಗೇ ಸೇರಿಸಬೇಕಾಗಿದೆ. 'ಸಿರೂಪ' ಗಳ ಹೆಸರಿನಲ್ಲಿ ಪಾತ್ರಗಳೆಷ್ಟೋ ಅಲ್ಲಿ, ಇಲ್ಲಿ, ಮರೆಯಾಗಿವೆ. ಕೊಡಗಿನ ವೀರರಾಜೇಂದ್ರ ಒಡೆಯರ ಕನ್ನಡ ದೀರ್ಘ ಪತ್ರವೊಂದು ನಿಜವಾಗಿಯೂ ಐತಿಹಾಸಿಕ 'ಆಶ್ಚರ್ಯ ಚೂಡಾಮಣಿ'!†

ಹದಿನೆಂಟು ಅಂಗುಲ ಉದ್ದ; ಆರು ಅಂಗುಲ ಅಗಲ; ಇಂತಹ ಕಾಗದಗಳು ಇಪ್ಪತ್ತು. ಇಷ್ಟನ್ನೂ ಅಂಟಿಸಿ, ಹದಿನೈದಡಿ ಉದ್ದದ ಪತ್ರವನ್ನು ಸಿದ್ಧಗೊಳಿಸಲಾಗಿದೆ! ಆ ಪತ್ರದ ಮೊದಲನೆ ಮುಖದಲ್ಲಿ ೪೨೨ ಪಾದಗಳು, ಎರಡನೆಯ ಮುಖದಲ್ಲಿ ೩೧೧ ಪಾದಗಳು – ಒಟ್ಟು ೭೩೩ ಪಾದಗಳ ಪತ್ರವಿದು! ಬರಹ ೨೬ ಅಡಿ, ೨ ಅಂಗುಲವಿದೆ!!

ಶ್ರೀರಂಗಪಟ್ಟಣದ ಪತನ ಕಾಲದಲ್ಲಿ ಕೊಡಗಿನರಸ ಬ್ರಿಟಿಷರಿಗೆ ಬೇಕಾದ ಸಹಾಯ ಮಾಡಿದ. ಅದಕ್ಕೆ ಪ್ರತ್ಯುಪಕಾರವಾಗಿ ಕರ್ನಲ್ ಕ್ಲೋಸನು ವೀರರಾಜೇಂದ್ರ ಒಡೆಯರಿಗೆ ಪತ್ರ ಬರೆಯುತ್ತಾ,

> "ಶ್ರೀರಂಗಪಟ್ಟಣ ಬಿದ್ದ ಐದು ದಿನಗಳ ಅನಂತರ ನಿಮ್ಮ ಜನ ಮಹಾರಾಜದುರ್ಗ ಜಿಲ್ಲೆಯನ್ನು ಮುತ್ತಿ, ಹದಿನೇಳು ಗ್ರಾಮಗಳ ಲೂಟಿಮಾಡಿ, ಹೆಂಗಸರು ಮಕ್ಕಳನ್ನೂ, ದನಕರುಗಳನ್ನೂ, ಚಿನ್ನಬೆಳ್ಳಿಯನ್ನೂ, ದವಸ ಧಾನ್ಯವನ್ನೂ, ಕೊಂಡೊಯ್ದರೆಂದು ವರದಿಯಾಗಿದೆ. ಶ್ರೀರಂಗಪಟ್ಟಣ – ಮೈಸೂರು ರಾಜಧಾನಿ – ವಶವಾದ ಕೂಡಲೆ, ಅದು ಕಂಪೆನಿ ರಾಜ್ಯವಾಯಿತು. ಮಹಾರಾಜದುರ್ಗ ಮೈಸೂರಿಗೆ ಸೇರಿದ್ದು; ಮೈಸೂರು ರಾಜ್ಯ ಬೇರೆಯಲ್ಲ, ಕಂಪೆನಿ ರಾಜ್ಯ ಬೇರೆಯಲ್ಲ. ನೀನಾದರೂ ಕಂಪೆನಿ ಜತೆಗಾರ. ಆದ ಕಾರಣ ತಡಮಾಡದೆ, ನೀನು ಇದರೊಂದಿಗಿಟ್ಟಿರುವ ಪಟ್ಟಿಯಲ್ಲಿ ತೋರಿಸಿರುವ ವಸ್ತುಗಳನ್ನೆಲ್ಲ ಹಿಂದಕ್ಕೆ ಕೊಡತಕ್ಕದ್ದು."

ಈ ಪತ್ರವ್ಯವಹಾರಕ್ಕೆ ಸಂಬಂಧಪಟ್ಟದ್ದು ೭೩೩ ಪಾದಗಳ ವೀರರಾಜೇಂದ್ರ ಒಡೆಯರ ಪತ್ರ.†

---

*'ಬಖೈರ್' ಗಳೆಂಬ ವರ್ಗದ ರಚನೆಗಳೂ ಅನೇಕ ಇವೆ. ಮದರಾಸು 'ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿ' ಯಲ್ಲಿ ಸಿಕ್ಕಿದ "ರಾಮರಾಯನ ಬಖೈರ" ನ್ನು ಸುಮಾರು ೪೦ ವರ್ಷಗಳ ಹಿಂದೆಯೇ ನಾನು ಪ್ರಕಟಿಸಿದೆ. ಇಂತಹ ಸಾಹಿತ್ಯ ಬೇಕಾದಷ್ಟು ಎಲ್ಲೆಲ್ಲೋ ಹೂತು ಕೂತಿದೆ; ಹುಳುತಿಂದು ಹಾಳಾಗುತ್ತಿದೆ. ಹೈದರನ ಕಾಲದಲ್ಲೇ ನಲ್ಲಪ್ಪ ರಚಿಸಿದ 'ಹೈದರ್ ನಾಮೆ' ಎಂಬ ಕನ್ನಡದ ಗ್ರಂಥವಿನ್ನೂ ಮೂಲೆಯಲ್ಲಿ ಬಿದ್ದಿದೆ. ಮೈಸೂರು ಅರಮನೆಯಲ್ಲಿದ್ದ ಪ್ರತಿ ಈಗ ಮೈಸೂರು ಸರಕಾರದ 'ಹಳೆ ಕಡತಗಳ ಕತ್ತಲ ಕೋಣೆ' ಯಲ್ಲಿವೆ. ಈ ಗ್ರಂಥದ ಹಸ್ತಪ್ರತಿಯೊಂದನ್ನು ನಾನು ಮಾಡಿ ಇಟ್ಟುಕೊಂಡಿದ್ದೇನೆ. ತುಮಕೂರು ಜಿಲ್ಲೆಯ ಸೀಬಿ ನರಸಿಂಹಸ್ವಾಮಿ ದೇವಾಲಯದಲ್ಲಿ ವರ್ಣ ಚಿತ್ರಗಳಿವೆ; ಅವುಗಳಲ್ಲಿ ಹಲವಾದರೂ ಇತಿಹಾಸದ ಹಲವು ಸನ್ನಿವೇಶಕ್ಕೆ ಸಂಬಂಧಪಟ್ಟವು. ಆ ಚಿತ್ರಗಳಲ್ಲಿ ನಲ್ಲಪ್ಪನನ್ನೂ ನೋಡಬಹುದು! ಈ ವರ್ಣಚಿತ್ರಗಳನ್ನು ಪ್ರಕಟಿಸಬಲ್ಲ ಪುಣ್ಯಾತ್ಮರಿನ್ನೂ ನಮ್ಮ ದೇಶದಲ್ಲಿ ಹುಟ್ಟಿಲ್ಲ.

†Archæological Survey of Mysore, Annual Report 1941. pp. 114-126. ಈ ಪತ್ರವೀಗ ಬೆಂಗಳೂರು ವಿಧಾನ ಸೌಧದ State Archaives ನಲ್ಲಿದೆ. ಈ ಪತ್ರದ ಪೂರ್ಣ ಸಾಹಿತ್ಯ ನನ್ನ ಬಳಿ ಇದೆ. ಕೇವಲ ಐತಿಹಾಸಿಕ ಮಾತ್ರವಲ್ಲ, ಭಾಷೆಯ ದೃಷ್ಟಿಯಿಂದಲೂ ಇದರ ಅಧ್ಯಯನ ಅವಶ್ಯಕ.

ಮುಮ್ಮಡಿ ಕೃಷ್ಣರಾಜ ಒಡೆಯರವರು ೩೭ ವರ್ಷಗಳ ಕಾಲ ಬ್ರಿಟಿಷ್ ನೌಕರಶಾಹಿ – ಸಾಮ್ರಾಜ್ಯಶಾಹಿಯೊಂದಿಗೆ ಹೋರಾಡಿ, ಜಯಶೀಲರೆನಿಸಿದ ಮಹಾವೀರರು. ಅವರು ಕನ್ನಡದಲ್ಲಿ ಬರೆದ 'ಖರೀತ'ಗಳಿಂದು ನಮಗೆ ಲಭ್ಯವಾಗಿದ್ದರೆ ರಾಜಕೀಯ ಸಾಹಿತ್ಯದಲ್ಲಿ ಅವು ರತ್ನಪ್ರಾಯಗಳಾಗಿರುತ್ತಿದ್ದುವೆನ್ನಲಿಕ್ಕೆ ಸಂಶಯವೇನಿಲ್ಲ. ಬ್ರಿಟಿಷ್ ಸರಕಾರಕ್ಕೆ ಅವರು ಮಾಡಿದ "ಬಿನ್ನಪ"ಗಳಿವು. ನಮ್ಮ ದೌರ್ಭಾಗ್ಯ; ಅವೊಂದೂ ನಮಗೆ ಸಿಕ್ಕಿಲ್ಲ. ಮೈಸೂರಿನ ಹಳೆ ಅರಮನೆಗೆ ಬೆಂಕಿ ಬಿದ್ದಾಗ ಅವೆಲ್ಲ ಬೂದಿಯಾದುವೆಂದು ತಿಳಿದುಬರುತ್ತದೆ. ಅವೆಲ್ಲ ಇಂಗ್ಲೀಷಿಗೆ ಭಾಷಾಂತರವಾಗಿವೆ. ಒಂದು ಖರೀತದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರವರು ಕಮಿಷನರ್ ಕಬ್ಬ‌ನ್‌ರವರ ಆಡಳಿತ ಕಾಲದ ಚಿತ್ತವೇಧಕ ಶಬ್ದಚಿತ್ರವನ್ನು ಕೊಟ್ಟಿದ್ದಾರೆ; ಮಾದರಿಗೆ ಈ ಭಾಗ ನೋಡಿ:

*"ಇನ್ನೂ ಈ ಕಮಿಷನರ ಸಾಹೇಬರವರಿಂದಾ ನಾವು ಪಡುವಂಥಾ ಅವಮಾನವೂ, ವ್ಯಸನವೂ, ಎಷ್ಟು ಬರೆದಾಗ್ಯೂ ಸ್ವಲ್ಪವೇ ಇದೆ. ಆದರೆ ನಮ್ಮ ಶೀಮೆಗೆ ಕಮಿಷನರು ಏರ್ಪಡುವುದಕ್ಕೆ ಆಕರವಾದ ನಮ್ಮ ಮ್ಯಾಲೆ ಸೂಪರೀಂ ಗೌನರಮೆಂಟಗೆ ತೋರಿದಂಥಾ ಆಪರಾಂಧಕಾರದಲ್ಲಿ ಇದ್ದಂಥಾದ್ದಕ್ಕೆ ಅದರ ಯಥಾರ್ಥ ಸಂಗತಿ ತಿಳಕೊಳ್ಳತಕ್ಕ ಬಗ್ಗೆ ಹಜರತ್ ಗೌನರ ಜನರಲ್ ಲಾರಡ ವುಲಿಯಂ ಬೆಂಟಿಂಕ ಸಾಹೆಬ ಬಹದ್ದರವರು ನಮ್ಮಲ್ಲಿ ಪುತ್ರವಾಂಛಲ್ಯವಿಟ್ಟು ಅವರೇ ಇಲ್ಲಿಗೆ ದಯಮಾಡಿ, ಭೇಟೀ ಕೊಟ್ಟು, ಮೊಖ್ತಾ ಪರಾಂಬರಿಕೆ ತೆಗೆದುಕೊಂಡ ಕಾರಣ ನಿಜಾರ್ಥ ಅವರ ಚಿತ್ತಕ್ಕೆ ತಿಳಿದ್ದರಿಂದ ನಮ್ಮ ಮೇಲೆ ತೋರಿ ಇದ್ದ ಅಪವಾದ ಯಾವ ಮೇರೆಗೆ ಪರಿಹಾರವಾಯಿತೋ ಆ ಮೇರೆಗೆ ನಮ್ಮ ಪುಣ್ಯಶಕ್ತಿಯಿಂದ ತಾವು ಪರಾಂಬರಿಕೆ ತೆಗೆದುಕೊಳ್ಳುವುದಕ್ಕೆ ಸಂದರ್ಭ ಘಟಿಶಿ ಇದ್ದರೆ ಈ ಕಮಿಷರ್ ಮೇಜರ್ ಜನರಲ್ ಕಬ್ಬನ ಸಾಹೇಬರವರ ಅಸೂಯ ಮನಸ್ತಾಪ ಸಹಾ ೮ ವರ್ಷದಿಂದ ನಮ್ಮ ಮ್ಯಾಲೆ ದಿನೇ ದಿನೇ ಅಭಿವೃದ್ಧಿ ಆಗಿ ಬಂದಿರುವಂಥಾದ್ದು ಯಾವತ್ತು ವಿಶದವಾಗಿ ಚಿತ್ತಕ್ಕೆ ವಿದಿತವಾಗಿ, ಮತ್ತು ಶೀಮೆ ಅಹವಾಲು ಸಹಾ ಶೃತವಾಗಿ ತಾತ್ಕಾಲಿಕ ನಿಬಂಧನೆಗೋಸ್ಕರ ಕಮಿಸನರ ವಿಚಾರಣೆಯಲ್ಲಿ ಇರುವ ನಮ್ಮ ಶೀಮೆಯೂ ನಮ್ಮ ಸ್ವಾಧೀನಕ್ಕೆ ಅಪ್ಪಣೆ ಆಗಿ ಈಗ ಈ ಕಮಿಷನರ ಸಾಹೇಬರಿಂದ ನಮಿಗೆ ಸಂಭವಿಸಿರುವ ಅಲಕ್ಷೆಯೂ, ಅವಮಾನವೂ, ವ್ಯಸನವೂ, ಸಹಾ ಪರಿಹಾರವಾಗುತ್ತಾ ಇತ್ತು. ಅಂಥಾದ್ದಕ್ಕೆ ನಮ್ಮ ದುರಾದೃಷ್ಟದಿಂದಾ ಪ್ರಾಪ್ತಿ ಇಲ್ಲದ ಕಾರಣ ಈಗ ನಾವು ಕಮಿಷನರ ಸಾಹೇಬರಿಂದಾ ಅನುಭವಿಸುವಂಥಾ ಅವಮಾನವೂ, ವ್ಯಸನವೂ, ಸಹಿಸಲಾರದೆ ನಮ್ಮ ವಿದ್ಯಮಾನವನ್ನು ತಮ್ಮ ಚಿತ್ತಕ್ಕೆ ಪರಾಪೇಕ್ಷೆಯಿಲ್ಲದೆ ವಿದಿತ ಆಗಬೇಕೆಂದು ಇಂಗ್ರೇಜಿಯಲ್ಲಿ ಬರೆದು ಶ್ರುತಪಡಿಶಿ ಯಿದೇವೆ."†

೧೮೫೭-೫೮ ರಲ್ಲಾದ ಭಾರತದ ರಾಜಕೀಯ ಕ್ರಾಂತಿಯ ಪರಿಣಾಮವಾಗಿ ಕನ್ನಡ ನಾಡಿನಲ್ಲೂ ಬೇಕಾದಷ್ಟು ರಾಜಕೀಯ ಪ್ರಜ್ಞೆಯುಂಟಾಯಿತು. "ಮೈಸೂರು ವೃತ್ತಾಂತ ಬೋಧಿನಿ", "ಕರ್ನಾಟಕ ಪ್ರಕಾಶಿಕಾ" ಪತ್ರಿಕೆಗಳ ಹಲವು ಸಂಚಿಕೆಗಳನ್ನು ನೋಡಿದಾಗ ಪರಮಾಶ್ಚರ್ಯ ಉಂಟಾಗುತ್ತದೆ.

'ಕರ್ನಾಟಕ ಪ್ರಕಾಶಿಕಾ' ಪತ್ರಿಕೆಯಲ್ಲಿ ೨೧-೮-೧೮೮೨ನೆಯ ದಿನ ಭಾಷ್ಯಂ ವೆಂಕಟಾಚಾರ್ಯರು ಹೊರಡಿಸಿದ ಪ್ರಕಟನೆ ಇದು:

"ಮೇಜರ್ ಇವಾನ್ಸ್ ಬೆಲ್ ಇವರು ಬರೆದ ಗ್ರಂಥಗಳನ್ನು ಕನ್ನಡದಲ್ಲಿ ಪ್ರಕಟಿಸುವ ಅಪೇಕ್ಷೆಯುಳ್ಳವರಾಗಿದ್ದೇವೆ. ಇಂತಾ ಉತ್ಸಾಹವು ಇತರರಿಗೂ ಇರುವ ಪಕ್ಷಕ್ಕೆ ಇವುಗಳನ್ನು ಕೂಡಲೇ ಮುದ್ರಿಸುವುದಕ್ಕೆ ಆರಂಭಿಸುವೆವು. ಈ ಗ್ರಂಥಗಳ ಪೈಕಿ ಒಂದು ಪೂರ್ವದ ಆಳಿದ ಮಹಾಸ್ವಾಮಿಗಳವರ ಆಜ್ಞೆಯ ಮೇರೆ ಕೆಲವು ಭಾಗ ನಮ್ಮಿಂದಲೇ ತರ್ಜುಮೆ ಮಾಡಲ್ಪಟ್ಟಿತ್ತು. ಇಷ್ಟರಲ್ಲಿ ನಮ್ಮ ಅಭಾಗ್ಯದಿಂದ ಶ್ರೀಮದಾಳಿದ ಮಹಾಸ್ವಾಮಿಗಳವರು ಪ್ರಾಕೃತ ಶರೀರವಂ ತ್ಯಜಿಸಲು ತತ್ಪ್ರಯುಕ್ತವಾದ ಮನೋವ್ಯಥೆಯಿಂದ ಒಂದು ಪದವಿಕ್ಷೇಪಕ್ಕೂ ನಮಗೆ ಉತ್ಸಾಹವಿಲ್ಲದೆ ಸದರಿ ಗ್ರಂಥರಚನಾ ಪ್ರಯತ್ನವು ಕೂಡಲೇ ನಿಂತುಹೋಯಿತು. ಈಚೆಗೆ ಒಂದಾನೊಂದು ಸಂದರ್ಭದಲ್ಲಿ ಹಿಂದಿನ ಪ್ರಯತ್ನವು ನಮ್ಮ ಸ್ಮರಣೆಗೆ ಬಂದು ಮರಳಿ ಅದನ್ನು ಪೂರ್ತಿ ಮಾಡುವುದಕ್ಕೆ ಉದ್ದೇಶಿಸಿದೆವು."

---

* Mysore State Papers Selections, Vol. III, p. 89.

† ಕನ್ನಡದಲ್ಲೂ, ಇಂಗ್ಲೀಷಿನಲ್ಲೂ, ಎರಡೂ ಭಾಷೆಗಳಲ್ಲಿ ಬರೆಸಿ ಒಡೆಯರು ಖರಿತಗಳನ್ನು ಕಳುಹಿಸುತ್ತಿದ್ದರು.

ಮೇಜರ್ ಇವಾನ್ಸ್ ಬೆಲ್‌ರವರನ್ನು ಭಾರತವು, ಅದರಲ್ಲೂ ಕರ್ನಾಟಕವು ಮರೆಯುವುದೆಂದರೆ ಅದು ಕೃತಘ್ನತೆಯ ಗಸಿಯೆನಿಸೀತು. ಅಂತಹ ಭಾರತ-ಬಂಧುವಿನ ಆಂಗ್ಲ ಕೃತಿಗಳು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲೇ, ಅವರ ಪ್ರೋತ್ಸಾಹದಿಂದಲೇ ಕನ್ನಡಕ್ಕೆ ಭಾಷಾಂತರಿಸಲ್ಪಟ್ಟವು! ಅತ್ಯುತ್ತಮ ರಾಜಕೀಯ ಸಾಹಿತ್ಯ!

೧೮೮೫ ರಲ್ಲಿ ಕಾಂಗ್ರೆಸ್ ಸ್ಥಾಪನೆಯಾಗಿ ರಾಷ್ಟ್ರ ಜಾಗ್ರತಿಯ ಚಟುವಟಿಕೆಗಳಾರಂಭವಾದ ಮೇಲಂತೂ ಎಲ್ಲ ದೇಶಭಾಷೆಗಳಲ್ಲಿ ನಿರ್ಮಾಣವಾದಂತೆ ಕನ್ನಡದಲ್ಲೂ ಸಾಕಾದಷ್ಟು ರಾಜಕೀಯ ಸಾಹಿತ್ಯ ವ್ಯವಸಾಯವಾಯಿತು. ಝಾನ್ಸಿ ಲಕ್ಷ್ಮೀಬಾಯಿ ಜೀವನ ಚರಿತ್ರೆಯನ್ನು ಕೆರೋಡಿ ಸುಬ್ಬರಾಯರು ಮರಾಠಿಯಿಂದ ಕನ್ನಡಕ್ಕೆ ಅನುವಾದ ಮಾಡಿದರು. ಕರ್ಜನ್ ಪ್ರಭುತ್ವ, ಬಂಗಾಳದ ವಿಭಜನೆ, 'ವಂದೇ ಮಾತರಂ', 'ಸ್ವದೇಶಿ' ಚಳುವಳಿ – ಇವೆಲ್ಲ ಕನ್ನಡದಲ್ಲೂ ಪ್ರತಿಬಿಂಬಿತವಾಗಿವೆ. ೧೯೦೮ ರಲ್ಲಿ ಶ್ರೀ ಡಿ. ವಿ. ಗುಂಡಪ್ಪನವರ 'ಸವಿನುಡಿ'ಯ ಮೊದಲನೆಯ 'ಲಹರಿ'ಯಾಗಿ 'ವಂದೇ ಮಾತರಂ' ಪ್ರಕಟವಾಯಿತು. ಇದರಿಂದ ಲೇಖಕರ 'ಮನೋಧರ್ಮ', ಕನ್ನಡ ಜನಪದದ 'ಜೀವನ ಧರ್ಮ' ಏನಾಗಿತ್ತೆಂಬುದರ ಅರಿವು ತಕ್ಕಮಟ್ಟಿಗೆ ಆಗುತ್ತದೆ. ಅದರಿಂದೆತ್ತಿದ ಒಂದು ಭಾಗವಿದು :

### "ತಾಯಿಗೆ ವಂದನೆ!"

"ಪುಣ್ಯಕರವಾದ ಈ ವಾಕ್ಯದ ಮಹಿಮೆಯನ್ನರಿಯದವರಾರು? ಅದರಿಂದ ಮನಸ್ಸಿನಲ್ಲುಂಟಾಗುವ ಭಾವನೆಯನ್ನು ಹೇಗೆ ತಾನೆ ವರ್ಣಿಸಲಾದೀತು? ಹಿಮಾಲಯದಿಂದ ರಾಮೇಶ್ವರದವರೆಗೂ ವ್ಯಾಪಿಸಿರುವ ವಿಶಾಲವಾದ ಈ ಭಾರತ ಭೂಮಿಯಲ್ಲಿ ಹುಟ್ಟಿರುವ ಆಬಾಲವೃದ್ಧರ ಹೃದಯಗಳನ್ನು ದೇಶಭಕ್ತಿಪೂರಿತಗಳನ್ನಾಗಿ ಮಾಡಿ, ಭಾರತೀಯರನ್ನು ಒಟ್ಟುಗೂಡಿಸಿ ಒಂದು ಜನಾಂಗವನ್ನಾಗಿ ಮಾಡುವ ಸಾಮರ್ಥ್ಯವುಳ್ಳ ಈ ವಾಕ್ಯದ ಪ್ರಭಾವವನ್ನು ಎಷ್ಟೆಂದು ಹೇಳಬಹುದು! ಈಚಿಗೆ ಕೆಲವು ವರ್ಷಗಳಿಂದಲೂ ಈ ದೇಶದ ಯಾವ ಭಾಗದಲ್ಲಿ ನೋಡಿದರೂ ಈ ವಾಕ್ಯವು ಜನರ ನಾಲಿಗೆಯಲ್ಲಿ ನಲಿದಾಡುತ್ತಿರುವುದು. ಕಟ್ಟಡಗಳ ಗೋಡೆಗಳ ಮೇಲೂ, ಧೂಮಶಕಟಗಳ ಮೇಲೂ, ಬಾಲಕರಿಂದ 'ವಂದೇ ಮಾತರಂ' ಎಂದು ಬರೆಯಲ್ಪಟ್ಟಿರುವುದನ್ನು ಅನೇಕರು ನೋಡಿರಬಹುದು. ವರ್ತಮಾನ ಪತ್ರಿಕೆಗಳಲ್ಲಿ ಪ್ರಕಟನೆಗಳ ಮತ್ತು ಇತರ ಲೇಖನಗಳ ಮೇಲ್ಗಡೆಯೂ ಕೆಳಗಡೆಯೂ "ವಂದೇ ಮಾತರಂ" ಎಂದು ಮುದ್ರಿಸಿರುವರು. "ವಂದೇ ಮಾತರಂ" ಎಂಬ ಹೆಸರಿನ ದೈನಂದಿನ ವರ್ತಮಾನ ಪತ್ರಿಕೆಯೊಂದು ಕಲ್ಕತ್ತೆಯಲ್ಲಿ ಪ್ರಕಟವಾಗುತ್ತಿರುವುದು. ದೇಶಭಕ್ತಿ ಪರಾಯಣರೆಂದೂ, ವಿದ್ಯಾವಿನಯ ಸಂಪನ್ನರೆಂದೂ, ವಿಖ್ಯಾತರಾಗಿರುವ ದಾದಾಭಾಯಿ ನವರೋಜಿ, ಗೋಖಲೆ, ತಿಲಕ್, ಸುರೇಂದ್ರನಾಥ ಬಾನರ್ಜಿ, ವಿಪಿನಚಂದ್ರಪಾಲ್, ಲಜಪತರಾಯ್, ಸುಬ್ರಹ್ಮಣ್ಯ ಅಯ್ಯರ್, ಮೊದಲಾದವರಿಗೆ "ವಂದೇ ಮಾತರಂ" ಎಂಬುದು ವೇದಮಂತ್ರದಂತೆ ಪವಿತ್ರವಾಗಿಯೂ, ಅರ್ಥಗರ್ಭಿತವಾಗಿಯೂ, ಉತ್ತೇಜನ ಕೊಡುವದಾಗಿಯೂ, ಇಷ್ಟಪ್ರಾಪ್ತಿಗೆ ಸಾಧಕವಾಗಿಯೂ, ಇದೆ. ಇಂತಹವರ ಮೇಲ್ಪಂಕ್ತಿಯನ್ನನುಸರಿಸುವ ವಿದ್ಯಾರ್ಥಿ ವೃಂದವೂ, ಇತರ ಜನಸಾಮಾನ್ಯವೂ, ಇವರ ಉಪನ್ಯಾಸಗಳನ್ನು ಕೇಳಿ, ಇವರ ಲೇಖನಗಳನ್ನೋದಿ, ಆ ಹಿತೋಕ್ತಿಗಳನ್ನು ಮನಸ್ಸಿನಲ್ಲಿ ದೃಢವಾಗಿ ನಿಲ್ಲಿಸಿ, "ವಂದೇ ಮಾತರಂ" ಎಂದು ಉದ್ಘೋಷಿಸುತ್ತಲಿರುವರು."

ಗಾಂಧೀಜಿಯವರು ಭಾರತೀಯ ರಾಜಕಾರಣದ ಸೂತ್ರಧಾರಿಗಳಾದ ಮೇಲಂತೂ ಕನ್ನಡದಲ್ಲಿ ಕವಿತೆ, ನಾಟಕ, ಹಾಡು, ಲಾವಣಿ, ಪ್ರಬಂಧ, ಪುರಾಣ – ನಾನಾ ರೂಪದಲ್ಲಿ ಹೊಸ ಜೀವನವು ವ್ಯಕ್ತವಾಗುತ್ತ ಬಂತು. ವಿಸ್ತಾರ ವಿವರಣೆಗೆ ಇದು ಸಮಯವಲ್ಲ. 'ಧನುರ್ಧಾರಿ'ಯ ಸಂಪಾದಕರಾಗಿದ್ದ ವೀರಬ್ರಹ್ಮಚಾರಿ ಮಂಜಪ್ಪನವರು 'ಭಾರತೀಯರ ದೇಶಭಕ್ತಿ' ಬರೆದರು! 'ತಿಲಕ ಸಂದೇಶ'ದ ಸಂಪಾದಕರಾದ ದತ್ತಾತ್ರೇಯ ಕೃಷ್ಣ ಭಾರದ್ವಾಜರು "ಕಾಂಗ್ರೆಸ್ ಇತಿಹಾಸ", "ಹಿಂದಿ ಸ್ವರಾಜ್ಯ", "ಆಂಡ್ರೂಸರ ಅಸಹಕಾರ ಪತ್ರಗಳ"ನ್ನು ಬರೆದರು! ಶಾಂತಕವಿಗಳ "ನಮ್ಮದೀ ನಮ್ಮದೀ ಭರತಭೂಮಿ", ಮುದವೀಡು ಕೃಷ್ಣರಾಯರ "ಮರತೆ ಯಾತಕಯ್ಯ ನಿನ್ನ ಮಾತೃಭೂಮಿಯ", 'ಭಾರತಿ'ಯ "ಜೈ ಭಾರತ ಭುವಿಗೆ ಮಾತೆಗೆ", ನಾರಾಯಣರಾಯರ "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು", ಇಂತಹ ನೂರಾರು ಕೃತಿಗಳು ಕನ್ನಡ ನಾಡಿನ ಜನರನ್ನು ಎಚ್ಚರಗೊಳಿಸಿದುವು; ಅವರ ಕೃತಿಗಳು ದೇಶಭಕ್ತಿಯನ್ನು ತ್ಯಾಗದ ಪರಮಸ್ಥಿತಿಗೊಯ್ದವು. ಮಾಸ್ತಿ, ಕುವೆಂಪು, ಬೇಂದ್ರೆ, ಗೋವಿಂದ ಪೈ, ವಿ. ಸೀ., ಪುಣಿಂಚತ್ತಾಯ, ತಾರನಾಥ, ಮೊದಲಾದ ಕವಿಗಳೆಲ್ಲ ತಮ್ಮ ಕವಿಕರ್ಮದಲ್ಲಿ ಪವಿತ್ರ ದೇಶಪ್ರೇಮಕ್ಕೆ ಪ್ರವೇಶ ಕಲ್ಪಿಸಿದ್ದಾರೆ, ತಮ್ಮ ಪ್ರತಿಭೆಯನ್ನು ಬೆಳಗಿಸಿದ್ದಾರೆ. ಷಟ್ಪದಿಯಲ್ಲಿ ಬರೆದ "ತಿಲಕ ಪುರಾಣ"ವನ್ನು ನಾನು (೧೯೨೧ ರಲ್ಲಿ) ದೋಣಿಯಲ್ಲಿ ಕೂತು ನದಿಯಲ್ಲಿ ಯಾನ ಮಾಡುತ್ತ, ಕೇಳಿದ ಸಮಯವನ್ನು ಸ್ಮರಿಸಿಕೊಂಡರೆ ಇಂದಿಗೂ ಬಹ್ವಾನಂದವಾಗುತ್ತದೆ.

ನಂಗಪುರಂ ವೆಂಕಟೇಶಯ್ಯಂಗಾರ್ಯರ 'ವಿವೇಕಾನಂದರ ಪತ್ರಗಳು', ಹೊಸಕೆರೆ ಚಿದಂಬರಯ್ಯನವರ 'ಭರತ ಖಂಡದ ಜೀವಜ್ಯೋತಿಗಳು' ವಾಚಕರನ್ನು ಭೂಮಿಯಿಂದ ವ್ಯೋಮಕ್ಕೆ ಕರೆದೊಯ್ಯುತ್ತವೆ!

ದಿವಾಕರ ರಂಗರಾಯರು, ರಾಮರಾಯ ಮಲ್ಯ, ವಾಮನಕುಡ್ವ, ಆಲೂರ ವೆಂಕಟರಾಯರು, ಮೊಹರೆ ಹಣಮಂತರಾಯರು, ದೇಶಪಾಂಡೆ ಜಯರಾಯರು, ಸಿದ್ದವನಹಳ್ಳಿ ಕೃಷ್ಣಶರ್ಮ, ಕಲ್ಲನಗೌಡ ಪಾಟೀಲ, ಕೃಷ್ಣಾಚಾರ್ಯ ಜೋಷಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ನಿಟ್ಟೂರ್ ಶ್ರೀನಿವಾಸರಾಯರು, ಕಂದಾಡೆ ಕೃಷ್ಣಯ್ಯಂಗಾರ್, ನಾರಾಯಣಶರ್ಮ, ರಾಯನಗೌಡ ತ ಪಾಟೀಲ, ಕೃಷ್ಣಕುಮಾರ ಕಲ್ಲೂರ, ಮೊದಲಾದ ನೂರಾರು ಮಂದಿ ರಾಜಕೀಯ ಸಾಹಿತ್ಯದ ಒಂದಲ್ಲ ಒಂದು ರೂಪದಲ್ಲಿ, ಪ್ರಮಾಣದಲ್ಲಿ, ಸೇವೆ ಸಲ್ಲಿಸಿದ್ದಾರೆ.

ರಾಜಕೀಯ ಸಾಹಿತ್ಯದಲ್ಲಿ ಶಾಸ್ತ್ರಭಾಗದ ಸಾಹಿತ್ಯ ನಿರ್ಮಾಣವೂ ಕಡಿಮೆ ಪ್ರಮಾಣದಲ್ಲಿ ನಿರ್ಮಾಣವಾಗಿಲ್ಲ. ರಾಜಮಂತ್ರಪ್ರವೀಣ ಎಚ್. ವಿ. ನಂಜುಂಡಯ್ಯನವರು ೧೮೯೦ ರಲ್ಲಿ 'ವ್ಯವಹಾರ ದೀಪಿಕೆ' ಎಂಬ ಗ್ರಂಥವನ್ನು ರಚಿಸಿ ಚಾಮರಾಜೇಂದ್ರ ಒಡೆಯರಿಗೆ ಅರ್ಪಿಸಿದ್ದರು! "ಅದನ್ನೇ ಕಾಲಧರ್ಮಕ್ಕೆ ತಕ್ಕಹಾಗೆ ಸರಿಪಡಿಸಿ ವ್ಯವಹಾರ ಧರ್ಮಶಾಸ್ತ್ರ ವೆಂಬ ಗ್ರಂಥವನ್ನು" ೧೯೧೭ ರಲ್ಲಿ ರಚಿಸಿದರು! ಈ ಗ್ರಂಥದ ಗುಣ ಕುರಿತು ಲೇಖಕರೇ ಹೇಳಿರುವ ಈ ಮಾತನ್ನೆಲ್ಲರೂ ಓದಬೇಕು:

> "ಲಾ ಅಂದರೆ ಧರ್ಮಶಾಸ್ತ್ರವನ್ನು ಲಾಯರಾಗಿ ಜೀವನ ಮಾಡಬೇಕೆನ್ನುವವರು ಮತ್ತು ಕೋರ್ಟು ಗಳಲ್ಲಿ ವ್ಯವಹಾರ ನಡಿಸುವವರು ಮಾತ್ರ ಕಲಿಯತಕ್ಕದ್ದೆನ್ನುವುದು ತಪ್ಪು. ಇದು ಇತರ ಪ್ರಾಪಂಚಕ ಜ್ಞಾನ ದಂತೆ ತಕ್ಕಮಟ್ಟಿಗೆ ವಿದ್ಯ ಕಲಿತವರೆಂದೆನಿಸಿಕೊಳ್ಳಲು ಕುತೂಹಲವಿರುವವರಿಗೆಲ್ಲಾ ಅವಶ್ಯವಾಗಿ ಬೇಕಾದ ವಿಷಯವಾಗಿರುವುದು. ಲಾ ವಿಷಯದಲ್ಲಿ ಇತರ ಶಾಸ್ತ್ರಗಳಿಗಿಂತ ವಿಶೇಷವಾದ ಗುಣವಿರುವುದೇನಂದರೆ, ಇತರ ವಿಷಯದಲ್ಲಿ ತಪ್ಪು ಮಾಡುವವನು ತನಗೆ ತಿಳಿಯದೆ ಮಾಡಿದೆನೆಂದರೆ, ಕ್ಷಮಿಸಿಬಿಡುವರು; ಲಾ ವಿಷಯ ತಿಳಿಯದೆ ಅಪರಾಧ ಮಾಡಿದವನನ್ನು ಸರಕಾರದವರು ಶಿಕ್ಷೆಗೆ ಗುರಿಪಡಿಸದೆ ಬಿಡುವುದಿಲ್ಲ."

ಇದೇ ಹೆಚ್. ವಿ. ನಂಜುಂಡಯ್ಯನವರೇ 'ಅರ್ಥಶಾಸ್ತ್ರ'ವನ್ನೂ ಕನ್ನಡದಲ್ಲಿ ಬರೆದರು! ೧೮೯೨ರಷ್ಟಕ್ಕೆ ಹಿಂದೆಯೇ ರಾಯಬಹದ್ದೂರ್ ಅ. ರತ್ನಸಭಾಪತಿ ಮೊದಲಿಯಾರರು "ವಿದುರ ನೀತಿ"ಯನ್ನು ಕನ್ನಡದಲ್ಲಿ ಬರೆದರು! ಅದನ್ನೂ ಭಾಷ್ಯಂ ತಿರುಮಲಾಚಾರ್ಯರು ಪರಿಷ್ಕರಿಸಿದರು!

> "ಮಹಾಭಾರತ ಉದ್ಯೋಗಪರ್ವದೊಳಗಣ ವಿದುರನೀತಿಯೆಂಬ ಪ್ರಕರಣವು ನೀತಿಪ್ರಧಾನ ವಾಗಿಯೂ, ಸಕಲ ಜನಗಳೂ ಓದತಕ್ಕದ್ದಾಗಿಯೂ, ಪಂಡಿತರಿಂದ ಪರಿಗ್ರಹಿಸಲ್ಪಟ್ಟಿರುವುದರಿಂದ, ಇದನ್ನು ಕ್ರಮವಾಗಿ ಈ ದೇಶ ಭಾಷೆಯಾದ ಕನ್ನಡದೋಳ್ ರಚಿಸಿ, ಬಾಲಕರಿಗೂ, ಇತರರಿಗೂ ಸುಲಭವಾಗಿ ಉಪಯೋಗವಾಗುವಂತೆ ಮಾಡಬೇಕೆಂಬ ಭಾವವು ನನ್ನ ಹೃದಯದಲ್ಲಿ ಹುಟ್ಟಿದ್ದರಿಂದ, ವಿದ್ವಾಂಸರ ಸಹಾಯದಿಂದ ಇದನ್ನು ಕನ್ನಡದೊಳು ಟೀಕಿಸಿದೆನು."

ಎಂಬದಾಗಿ ಹೇಳಿದ ರತ್ನಸಭಾಪತಿ ಮೊದಲಿಯಾರರ ಕನ್ನಡ ಪ್ರೇಮವನ್ನು ಗಮನಿಸಬೇಕು! ಸ್ಫೂರ್ತಿದಾಯಕ ಮಾತ್ರ ವಲ್ಲದೆ ಬೋಧಪ್ರದವಾದ ರಾಜಕೀಯ ಶಾಸ್ತ್ರ ಸಾಹಿತ್ಯ ರಚನೆಯೂ ಕನ್ನಡದಲ್ಲಿ ವಿಶೇಷವಾಗಿ ಆಗಿದೆ, ಆಗುತ್ತಿದೆ. ೧೯೪೭ ಕ್ಕೆ ಮೊದಲು ರಚಿತವಾಗಿ, ಪ್ರಕಟವಾದ, ಗ್ರಂಥಗಳನ್ನೆಲ್ಲ ಪಟ್ಟಿಮಾಡಿ ಕೊಡಲು ಸಾಧ್ಯವಿಲ್ಲ. ಆದರೂ ಪ್ರಕಟವಾಗಿರುವುಗಳ ವಿಷಯ ವೈವಿಧ್ಯತೆ ಸೂಚಿಸಲಿಕ್ಕಾಗಿ ಕೆಲವನ್ನಿಲ್ಲಿ ಕೊಡಲಾಗಿದೆ.

(೧) ಇಂಡಿಯಾ ದೇಶದ ರಾಜ್ಯಾಂಗ ಪದ್ಧತಿ (೧೯೩೯), ಎಂ. ಎ. ಗೋಪಾಲಸ್ವಾಮಿ ಅಯ್ಯಂಗಾರ್

(೨) ರಾಜನೀತಿ (೧೯೪೦), ಎಚ್. ಕೃಷ್ಣರಾವ್

(೩) ರಾಜ್ಯಾದಾಯವೂ ಬಡತನವೂ (೧೯೪೩), ಜೆ. ಸಿ. ಕುಮಾರಪ್ಪ

(೪) ರಾಷ್ಟ್ರೀಯ ಪಂಚಾಯಿತಿ (೧೯೪೪), 'ಸಂಜಯ'

(೫) ರಷ್ಯದ ಯೋಜನೆ (೧೯೪೪), ವಿ. ಎಸ್. ನಾರಾಯಣರಾವ್

*(೬) ಸಭಾಶಾಸ್ತ್ರ (೧೯೪೫), ಶಂಕರರಾವ ಜೋಶಿ

(೭) ರಾಷ್ಟ್ರೀಯತ್ವದ ಮೀಮಾಂಸೆ, ಆಲೂರ ವೆಂಕಟರಾಯರು

(೮) ರಾಜಕೀಯ ಸುಧಾರಣೆಗಳ ತಿರುಳು (೧೯೪೦), ತಿ. ತಾ. ಶರ್ಮ

(೯) ರಾಜ್ಯಶಾಸ್ತ್ರ, ಡಿ. ವಿ. ಗುಂಡಪ್ಪ

ಈ ಲೇಖನವನ್ನು ಮುಗಿಸುವ ಮೊದಲು ೧೮೫೯ ರಿಂದಾರಂಭಿಸಿ (ಮೈಸೂರು ವೃತ್ತಾಂತ ಬೋಧಿನಿ) ೧೯೪೭ ರ ವರೆಗೆ ಕನ್ನಡ ಪತ್ರಿಕೆಗಳು ಕನ್ನಡ ನಾಡಿನ ರಾಜಕೀಯ ಪ್ರಜ್ಞೆಯ ಬೆಳೆವಣಿಗೆಗೂ, ಸ್ವಾತಂತ್ರ್ಯ ಸಾಹಿತ್ಯ – ರಾಜಕೀಯ ಸಾಹಿತ್ಯದ ನಿರ್ಮಾಣಕ್ಕೂ, ಮಾಡಿರುವ ಸೇವೆಯನ್ನು ಅಳೆದು ನೋಡುವ ಕೆಲಸವಿನ್ನೂ ಆಗಬೇಕಾಗಿದೆ. ಈ ಕ್ಷೇತ್ರದಲ್ಲಿ ಕೆಲಸಮಾಡಿ, ನಾಡಿನ ಹಿರಿಮೆಯನ್ನು ಹೆಚ್ಚಿಸಿದವರನ್ನು ಮರೆಯಲಾಗದು. 'ಕರ್ನಾಟಕ ಪ್ರಕಾಶಿಕೆ' ಯ ಭಾಷ್ಯಾಚಾರ್ಯ- ತಿರುಮಲಾಚಾರ್ಯ, 'ದೇಶಾಭಿಮಾನಿ' ಯ ಶ್ರೀನಿವಾಸಯ್ಯಂಗಾರ್ಯ, 'ಕರ್ನಾಟಕ' ದ ಡಿ. ವಿ. ಗುಂಡಪ್ಪ, 'ಕರ್ನಾಟಕ ವೃತ್ತ-ಧನಂಜಯ' ದ ಮುದವೀಡು ಕೃಷ್ಣರಾಯರು, 'ಕರ್ಮವೀರ' ದ ಆಲೂರ, ದಿವಾಕರರು, 'ಕರ್ನಾಟಕ ವೈಭವ'ದ ದೇಶಪಾಂಡೆ ಜಯರಾಯರು, 'ಕಂಠೀರವ'ದ ಹುರಳಿ ಭೀಮರಾಯರು, 'ಸತ್ಯಾಗ್ರಹಿ' ಯ ರಾಮರಾಯ ಮಲ್ಯ, 'ಸಾಧ್ವಿ'ಯ ತಾತಯ್ಯ, 'ಕಾನಡಾ ಧುರೀಣ' ದ ಯಾಜಿ, 'ಕನ್ನಡಿಗ' ದ ಶ್ರೀನಿವಾಸರಾವ, 'ರಾಷ್ಟ್ರಬಂಧು' ವಿನ ಕಡೆಂಗೋಡ್ಲು ಶಂಕರಭಟ್ಟ, 'ಸಂಯುಕ್ತ ಕರ್ನಾಟಕ' ದ ಮೊಹರೆ, ಡಾ|| ದಿವಾಕರ ರಂಗರಾವ್, ರಾವಬಹದ್ದೂರ್, ಜೋಷಿ; 'ತಾಯಿನಾಡು' ವಿನ ಪಿ. ಆರ್. ರಾಮಯ್ಯ, ಪಿ. ಬಿ. ಶ್ರೀನಿವಾಸ – ಈ ಪಟ್ಟಿ ಅಪೂರ್ಣ. ದಿಗ್ದರ್ಶನಕ್ಕಾಗಿ ಕೆಲವು ಹೆಸರುಗಳನ್ನು ಕೊಡಲಾಗಿದೆ. ದಿನ-ವಾರಪತ್ರಿಕೆಗಳಲ್ಲದೆ ಅನೇಕ ಮಾಸಪತ್ರಿಕೆಗಳು ಶ್ರೇಷ್ಠವರ್ಗದ ರಾಜಕೀಯ ಸಾಹಿತ್ಯ ಸೃಷ್ಟಿಗೆ ಕಾರಣಗಳಾಗಿವೆ. ೧೯೪೭ ಕ್ಕೆ ಹಿಂದೆ ಈ ಕ್ಷೇತ್ರದಲ್ಲಾದ ಸಾಹಿತ್ಯದ ಪ್ರಮಾಣ, ಗುಣ, ವೈವಿಧ್ಯತೆ, ಇತ್ಯಾದಿಗಳನ್ನು ಕುರಿತ ವಿಸ್ತಾರವಾದ ಗ್ರಂಥರಚನೆಯೊಂದರ ಅವಶ್ಯಕತೆ ಇದೆ.

---

*೧೯೪೭ಕ್ಕೆ ಹಿಂದೆ ಪ್ರಕಟವಾದ ಎಲ್ಲ ರಾಜಕೀಯ ಸಂಬಂಧ ಗ್ರಂಥಗಳ ಸಮಗ್ರ-ಸಂಪೂರ್ಣ ಪಟ್ಟಿಯ ಅವಶ್ಯಕತೆ ಬಹಳವಾಗಿದೆ.

## ಹಂಪೆಯ ಕಲ್ಲಿನ ರಥ



ದೇಶಕ್ಕೆಲ್ಲಾ ಒಡೆಯರಾಗಿದ್ದರು. ಮಾನ್ಯಖೇಟದ ರಾಷ್ಟ್ರಕೂಟರು ಗುಜರಾತ್ ಮಾಳವಗಳನ್ನು ಕೂಡ ಅಧೀನಪಡಿಸಿಕೊಂಡು ಕ್ರಿ. ಶ. ೯ನೆಯ ಶತಮಾನಗಳಲ್ಲಿ ಭಾರತಕ್ಕೆಲ್ಲಾ ಮುಖಂಡರಾಗಿದ್ದರು. ಈಗಿನ ತೆಲುಗು, ತಮಿಳು ಮತ್ತು ಮಲೆಯಾಳ ನಾಡುಗಳ ಅನೇಕ ಭಾಗಗಳನ್ನು ಕನ್ನಡಿಗರಾದ ಗಂಗ, ಚಾಲುಕ್ಯ, ರಾಷ್ಟ್ರಕೂಟ, ವಿಜಯನಗರ, ಹೊಯ್ಸಳ ಮತ್ತು ಮೈಸೂರು ರಾಜವಂಶದವರು ಒಂದೊಂದು ಐತಿಹಾಸಿಕ ಕಾಲಗಳಲ್ಲಿ – ಕೆಲವೊಮ್ಮೆ ಅನೇಕ ತಲೆಮಾರಿನವರೆಗೂ ಆಳುತ್ತಿದ್ದರು. ವಿಜಯನಗರದ ಕಾಲದಲ್ಲಿ ಈ ರಾಜ್ಯಕ್ಕೆ ಕರ್ಣಾಟಕ ಸಾಮ್ರಾಜ್ಯವೆಂದೇ ಹೆಸರಾಯಿತಲ್ಲದೆ, ಉತ್ತರದ ಮೊಗಲಾಯರು ದಕ್ಷಿಣ ದೇಶವನ್ನೇ ಕರ್ಣಾಟಕ ಎಂದು ಕರೆಯುವ ಸಂಪ್ರದಾಯದಲ್ಲಿದ್ದರು. ಕನ್ನಡ ರಾಜ್ಯ ಅಷ್ಟು ಪ್ರಬಲವಾಗಿತ್ತು.

ರಾಜಕೀಯ ಪ್ರಾಬಲ್ಯ ಅರ್ಥಿಕ ಸಂಪತ್ತನ್ನು ಅಭಿವೃದ್ಧಿ ಗೊಳಿಸಿತು. ಸಮಾಜವನ್ನು ಸುಧಾರಿಸಿತು. ಜನವೆಲ್ಲ ಸುಖದಿಂದ, ಆನಂದದಿಂದ ಇದ್ದರು. ವೀರೌದಾರ್ಯ ಶೌರ್ಯಗಳಿಗೆ ನೆಲೆಮನೆಯಾಯಿತು ಈ ನಾಡು. ದೇಶವೆಲ್ಲ ಹೃಷ್ಟಪುಷ್ಟವಾದ ಕಳಕಳಿಸುವ ನಗುವಿನಿಂದ ಕೂಡಿತ್ತು. ಜನ ಸಂತೋಷವಾಗಿದ್ದಂತೆ, ಸಮಾಜ ಉಲ್ಲಸಿತವಾದಂತೆ ಪ್ರಕೃತಿ ದೇವಿಯೂ ಸರಸ ಆನಂದ ತುಂದಿಲಳಾಗಿದ್ದಳು. ದೇಶದಲ್ಲಿ ಎಲ್ಲಿ ನೋಡಿದರೂ ಕಣ್ಣಿಗೆ ತಂಪಾಗಿ, ಮನಕ್ಕೆ ಇಂಪಾಗಿ ದೇಶದ ಸೌಭಾಗ್ಯವಿತ್ತು. ಸಂಗೀತ ಸಾಹಿತ್ಯಾಶಿಲ್ಪಾದಿ ಲಲಿತ ಕಲೆಗಳಿಗೆ ಈ ನಾಡು ಮಾತೃಸ್ಥಾನವೆನಿಸಿತು. ಕವಿಶ್ರೇಷ್ಠರಿಗೆ, ಮತಸ್ಥಾಪಕರಿಗೆ, ಧರ್ಮಗುರುಗಳಿಗೆ ಗೌರವಾದರಗಳು ದೊರೆತವು. ಹೊಸಮತಗಳಾದ ಜೈನ ಬೌದ್ಧಗಳೂ ಬಂದವು. ವೈದಿಕ ಮತದ ಶಾಖೆಗಳ ಪ್ರಣೇತೃಗಳೆನಿಸಿದ ಶಂಕರ, ರಾಮಾನುಜ ಮತ್ತು ಮಧ್ವಾಚಾರ್ಯರೂ ಇಲ್ಲಿ ನೆಲಸಿದರು, ಇಲ್ಲವೇ ಕೇಂದ್ರಗಳನ್ನು ಸ್ಥಾಪಿಸಿದರು. ವೀರಶೈವ ಮತದ ಜನ್ಮ ಭೂಮಿಯಾಗಿ ಹೊಸಪಂಥವೊಂದು ಆವಿರ್ಭವಿಸಿ ಲೋಕ ಕಲ್ಯಾಣಕ್ಕಾಗಿ ನಿಂತಿತು. ಭಕ್ತಿಗಾನಗಳಿಂದಲೂ ವಚನ ಸಾಹಿತ್ಯಗಳಿಂದಲೂ ದಾಸರೂ, ಜಂಗಮರೂ ಗೂಢಾತಿಗೂಢ ತತ್ತ್ವಗಳ ಪ್ರಸಾರ ಮಾಡಿದರು. ಶ್ರವಣಬೆಳಗೊಳ, ಶೃಂಗೇರಿ, ಮೇಲುಕೋಟೆ, ಉಡುಪಿ, ಬಾಗೇವಾಡಿಗಳು ಒಂದಲ್ಲ ಒಂದು ಮತದ ಇತಿಹಾಸದ ಸಜೀವ ಕ್ಷೇತ್ರಗಳೆನಿಸಿದವು. ಆದರೆ ಪರಮತ ಸಹಿಷ್ಣುತೆಯನ್ನು ಮಾತ್ರ ನಮ್ಮ ಜನ ಮರೆಯಲಿಲ್ಲ. ಬೇಲೂರಿನ ಶಾಸನದಲ್ಲಿರುವ ಅನರ್ಘ್ಯ ಶ್ಲೋಕ, 'ಯಂ ಶೈವಾಸ್ಸಮುಪಾಸತೇ' ಎಂಬುದು ನಮ್ಮ ಜನದ ವಿವೇಕದ ಪ್ರತೀಕವಾಯಿತು.

ಸಾಹಿತ್ಯ ಕ್ಷೇತ್ರದಲ್ಲಿಯೂ ಅಷ್ಟೆ. ದೇಶಾಭಿಮಾನಿಗಳ, ವೀರರ–ಶೂರರ ದಿವ್ಯ ಚರಿತೆಗಳು ಜನದಲ್ಲಿನ ಬಳಕೆಯ ಕಥೆಗಳಾದುವು. ಅವನ್ನು ಜನ ಬಯಸುತ್ತಿದ್ದರು; ಓದಿ ಮೆಚ್ಚಿ ಜೀವನಕ್ಕೂ ಅಳವಡಿಸಿಕೊಳ್ಳುತ್ತಿದ್ದರು. ಕಾವ್ಯದಲ್ಲಿ ವೀರ, ಶೃಂಗಾರ ರಸಗಳು ಪ್ರಾಮುಖ್ಯವಾದವು. ಪಂಪನಂಥ ಉದ್ದಾಮ ಕವಿಗಳು ಬಂದರು; ಹರಿಹರನಂತಹ ಭಕ್ತಿಯ ಆವೇಶದಿಂದ ಬರೆದ ಕವಿಗಳು ಬಂದರು. ಸರ್ವಜ್ಞನಂತಹ ಜನಸಾಮಾನ್ಯರ, ಲೋಕಾನುಭವ ವಿಶಿಷ್ಟಕವಿಗಳು ಬಂದರು. ಲಕ್ಷ್ಮೀಶನಂತಹ ಮಂಜುಳನಿನಾದ–ಪದಲಾಲಿತ್ಯದಿಂದ ಹೃನ್ಮನಗಳನ್ನು ತಣಿಸುವ ಕವಿಗಳಾದರು. ನಾರಣಪ್ಪನಂತಹ ವಿಶಾಲ ಭಾವನೆಗಳನ್ನೊಳಗೊಂಡ, ಉದಾತ್ತ ಪಾತ್ರಗಳನ್ನು ಚಿತ್ರಿಸಿದ ಜನಪ್ರಿಯ ಕವಿಗಳು ದೊರೆತರು. ಪಂಡಿತರ ತಂಡ ಹೆಚ್ಚಿತು. ಸಾಹಿತ್ಯ ವಿಚಾರದಲ್ಲಿ ಹೀಗೆ ಈ ನಾಡಿನ ಜನರಲ್ಲಿ ಆರೋಗ್ಯ ಪೂರ್ಣ ಲವಲವಿಕೆ ಇತ್ತು.

ನಾಡು ಬೆಳೆದಂತೆ ನುಡಿಯೂ ಬೆಳೆಯತೊಡಗಿತು. ಒಂದು ಕಡೆ ಪಟ್ಟಣಗಳಲ್ಲಿ, ರಾಜಾಸ್ಥಾನಗಳಲ್ಲಿ ಪಂಡಿತ ಕವಿಗಳು ಹಾಡಿ ಹೊಗಳಿದರೆ, ಕಾವ್ಯ ರಚಿಸಿದರೆ, ಗ್ರಂಥಗಳನ್ನು ಸೃಷ್ಟಿಸಿದರೆ, ಈ ಪ್ರೌಢಕಾವ್ಯ ಸಿಲುಕದ ಜನ ಹಳ್ಳಿಗಳಲ್ಲಿ ತಮ್ಮದೇ ಆದ ಗೀತಗಳನ್ನು ಹಾಡತೊಡಗಿದರು. ಜನ ಸಾಮಾನ್ಯರು ಬಳಕೆಯ ಮಾತುಗಳಲ್ಲಿ ಗಾಂಭೀರ್ಯ ತಂದರು, ವೇದಾಂತವನ್ನು ಬಟ್ಟೆ ಇಳಿಸಿದರು. ಶೃಂಗಾರ ಬಂತು, ವೀರ್ಯ ಬಂತು, ನೀತಿ ಬಂತು. ಜನಕ್ಕೆ ಬೋಧಿಸಿದರು, ಜನ ಮೆಚ್ಚಿ ಮನನ ಮಾಡಿದರು. ಸರಳವಾದರೂ ಗಹನವಾದ 'ಗೋವಿನಕತೆ' ಒಂದು ಸಾಕು; 'ಕೆರೆಗೆ ಹಾರ' ಒಂದು ಸಾಕು, ಸತ್ಯಪ್ರತಿಜ್ಞೆಯ ಆತ್ಮ ಸಮರ್ಪಣೆಯ ಉದಾತ್ತತೆಯನ್ನು ತಿಳಿಸಲಿಕ್ಕೆ; ಪ್ರೇಮದ ಸೀಮೆಯನ್ನು ಗುರುತಿಸಲಿಕ್ಕೆ. ತನ್ನ ಗ್ರಾಮಕ್ಕಾಗಿ, ತನ್ನ ನಾಡಿಗಾಗಿ, ಪರೋಪಕಾರಕ್ಕಾಗಿ ತನ್ನನ್ನು ತಾನು ಬಲಿಕೊಡಲು ಸಿದ್ಧವಾಗಿತ್ತು ಅಂದಿನ ಜನ. 'ಕಲಿತೋದದ ಜನದ ಕಾವ್ಯ' ವಿದು. ಆದರೂ ಅದರ ಭಾವದಲ್ಲಿ, ಪಾತ್ರ ರಚನೆಯಲ್ಲಿ ಶೈಲಿಯಲ್ಲಿ ಧ್ಯೇಯದಲ್ಲಿ ಯಾವ ಪ್ರೌಢ ಕಾವ್ಯಕ್ಕೂ ಕಡಿಮೆ ಇರಲಿಲ್ಲ. ಜನದ ಸಂಸ್ಕೃತಿ ಹೀಗೆ ಕಾವ್ಯದಲ್ಲಿ ಹೊರಬಿತ್ತು. ಗರತಿಯರ ಹಾಡುಗಳಲ್ಲಿ ಒಂದೊಂದೂ ಒಂದೊಂದು ಅನರ್ಘ್ಯರತ್ನವೇ; ಆಣಿಮುತ್ತೇ. ಹಿಂದೂ ಸ್ತ್ರೀಯ, ಕನ್ನಡ ಗೃಹಿಣಿಯ ಒಂದು ಚಿತ್ರವೇ

ಅದರಲ್ಲಿ ಪ್ರತಿಬಿಂಬಿತವಾಗಿದೆ. ಅಂದಿನ ಸಂಸಾರ, ಸ್ತ್ರೀಯರ ಮೇಲ್ಮೆ, ಅವರ ನಡೆನುಡಿ, ಅವರ ಸಂಸ್ಕೃತಿ ಎಲ್ಲ ಇಂದಿನ ಕೃತಕತೆಯನ್ನು ಅಣಕಿಸುವಂತಿತ್ತು. ಹೀಗೆ ಪಂಡಿತರ ತಲೆದೂಗಿಸುವ ಕಾವ್ಯ ಒಂದು ಕಡೆ, ಪಾಮರರನ್ನು ತಣಿಸುವ ಕಾವ್ಯ ಒಂದು ಕಡೆ, ಪಂಡಿತ ಹಾಗೂ ಪಾಮರರಂಜಕ ಕಾವ್ಯ ಒಂದು ಕಡೆ ಬೆಳೆಯುತ್ತಿತ್ತು. ಈ ಎಲ್ಲ ಕಾವ್ಯಗಳ ಬಾಹ್ಯರೂಪ ಬೇರೆಯಾದರೂ ಎಲ್ಲದರ ಆತ್ಮ ಒಂದೇ. ಎಲ್ಲವೂ ಒಂದು ಜನರಿಂದ, ಒಬ್ಬ ತಾಯ ಮಕ್ಕಳಿಂದ. ಒಂದೇ ಪ್ರಕೃತಿ ಮಾತೆಯ ಕನ್ನಡಿ, ಒಂದೇ ಜನದ ಆಸೆ ಆಕಾಂಕ್ಷೆ. ಆದುದರಿಂದ ತಿರುಳೆಲ್ಲ ಒಂದೇ; ಸಂಸ್ಕಾರ, ಸಂಸ್ಕೃತಿ ಒಂದೇ.

ತೆಂಕಣಗಾಳಿ ಸೋಕಿದರೆ, ಮೆಲುನುಡಿ ಕಿವಿಗೆ ಬಿದ್ದರೆ, ಇಂಪಾದ ಗೇಯ ಕೇಳಿ ಬಂದರೆ, ಬಿರಿದ ಮಲ್ಲಿಗೆಯ ಸುವಾಸನೆ ಬಂದರೆ, ಮಧು ಮಹೋತ್ಸವವಾದರೆ, ಕನ್ನಡ ನಾಡು, ನುಡಿ ಮತ್ತು ಕನ್ನಡ ಜನ ಜ್ಞಾಪಕಕ್ಕೆ ಬರುತ್ತಿದ್ದ ರಂತೆ. ಇವೆಲ್ಲಾ ಪರ್ಯಾಯಪದಗಳೆನಿಸಿದ್ದವು 'ಕನ್ನಡ ಜನ'ಕ್ಕೆ. ಕೋಗಿಲೆಯಾಗಿಯಾಗಲೀ, ಮರಿದುಂಬಿಯಾಗಿ ಯಾಗಲೀ ಹುಟ್ಟಬೇಕು – ಕನ್ನಡ ನಾಡಿನಲ್ಲಿ ಎನ್ನಿಸುತ್ತಿತ್ತು. ಏನು ಚೆಲುವಿನ ನಾಡು! ಚೆಲುವ ಕನ್ನಡ ನಾಡು, ನಮ್ಮಿ ನಿಯ ನಾಡು! ಚೆಲುವರಾಯನ ನಾಡು; ಚೆಲುವುರಾಯರ ನಾಡು! ಅಷ್ಟೇ ಅಲ್ಲ; ಜನವೂ – ಉದಾರಿಗಳು; ಆದರ ಪೂರ್ಣರು. ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿ ನಿಂಪುಗಳ್ಗಾಗರ ಮಾದ ಮಾನಿಸರು.

ಹೀಗೆ ನಮ್ಮ ನಾಡಿನ, ನುಡಿಯ ಹಿಂದಿನ ಸ್ಥಿತಿಗತಿಗಳನ್ನು ತಿಳಿಯುವುದರ ಉದ್ದೇಶ ಕೇವಲ ಒಂದು ಒಣ ಅಭಿಮಾನವಲ್ಲ. ಏಕೆಂದರೆ ಯಾರಲ್ಲಿ ಸತ್ತ್ವವಿರುವುದಿಲ್ಲವೋ, ಅಂತಹವರು ತಮ್ಮ ದೇಶದ ತಮ್ಮ ಹಿರಿಯರ ಹಿರಿಮೆ ಯನ್ನು, ವೈಭವವನ್ನು ಹೊಗಳಿ, ಗತವೈಭವದ ನೆರಳಿನಲ್ಲಿ ತಂಗಿ ನಿದ್ರಿಸಲು ಆಶಿಸುತ್ತಾರೆ. ಆದರೆ ನಾವು ಹಾಗೆ ಮಾಡಬೇಕಾಗಿಲ್ಲ. ನಮ್ಮ ಇಂದಿನ 'ಗತಿ'ಯನ್ನು ಅರಿತು, ಭವಿಷ್ಯವನ್ನು ರೂಪಿಸಿಕೊಳ್ಳುವುದಕ್ಕೆ ಮಾತ್ರ ಅವಶ್ಯಕ. ಆದುದರಿಂದ ವಿಚಾರಕ್ಕೆ ಇನ್ನೆಷ್ಟು ಬೇಕಾದರೂ ಬೆಳಸಬಹುದಾದರೂ ಸದ್ಯಕ್ಕೆ ಇಷ್ಟೇ ಸಾಕು. ಕನ್ನಡ ನಾಡಿನ, ನುಡಿಯ ಹಿಂದಿನ ಸ್ಥಿತಿಗತಿ ಹೇಗಿತ್ತು ಎನ್ನುವುದರ ಒಂದು ಮಾಸಲ ಚಿತ್ರವನ್ನಾದರೂ ಮನದಲ್ಲಿ ಕಟ್ಟಿಕೊಳ್ಳುವಂತಾದರೆ ಸಾಕು. ಇಷ್ಟು ಹೇಳಬಹುದು; ನಮ್ಮ ನಾಡು, ಜನತೆಯ ಸಂಸ್ಕೃತಿ, ರಾಜಕೀಯ ಹಿರಿಮೆ, ಆರ್ಥಿಕ ಸಂಪತ್ತು, ಸಾಮಾಜಿಕ ಒಕ್ಕಟ್ಟು, ಕಲೆಯ ಮೇಲ್ಮೆ, ಎಲ್ಲಕ್ಕಿಂತ ಹೆಚ್ಚಾಗಿ, ಇವೆಲ್ಲಕ್ಕೂ ಪುಷ್ಟಿ ಕಾರಣವೆನಿಸಿದ್ದ – ಇವೆಲ್ಲದರ ದರ್ಪಣ ವಾಗಿದ್ದ – ಕಾವ್ಯ ಸಂಪತ್ತು, ಭಾರತದ ಇತಿಹಾಸದಲ್ಲೇ ಒಂದು ಹಿರಿಯ ಸ್ಥಾನಗಳಿಸಿತ್ತು.

ಅಷ್ಟು ಭೋಗದಿಂದ ಬೆಳೆದ ನಾಡು ತನ್ನ ಎಲ್ಲ ಸೌಕರ್ಯಗಳನ್ನೂ ಕಳೆದುಕೊಂಡು, ಕಂದಿ ಕುಂದಿ ಗುಟುಕು ಜೀವದೊಡನೆ ಬದುಕಿರಬೇಕಾದ ಸ್ಥಿತಿ ಬಂತು. ರಾಜಕೀಯ ಕಾರಣಗಳಿಂದ ಕನ್ನಡ ಸಾಮ್ರಾಜ್ಯ ನುಚ್ಚು ನೂರಾಯಿತು, ಹರಿದು ಹಂಚಿ ಹೋಯಿತು. ರಾಜ್ಯದ ಔನ್ನತ್ಯ ಹೋದಂತೆ ಆರ್ಥಿಕ ದುಃಸ್ಥಿತಿ ಕಾಲು ಹಾಕಿಕೊಂಡಿತು. ಸಾಹಿತ್ಯ, ಲಲಿತಕಲೆಗಳೂ ಮೂಲೆ ಸೇರಿದವು. ನಾಡಿನೊಂದಿಗೆ ನುಡಿಯೂ ಸೊರಗ ತೊಡಗಿತು. ಜನಗಳಲ್ಲಿ ನಾಡು–ನುಡಿಗಳ ವಿಚಾರದಲ್ಲಿ ಉದಾಸೀನತೆ ತೋರಿತು. ಮಮತೆ ಹೋಯಿತು. ತಮ್ಮ ನುಡಿ ಒಂದು, ತಾವೆಲ್ಲ ಒಂದು ಎಂಬ ಭಾವನೆ ಇಲ್ಲವಾಯಿತು. ಕನ್ನಡ ಮಾತನಾಡುವುದೇ ಅಪಮಾನ ಎನ್ನುವಂತೆ ಆಗಿಬಿಟ್ಟಿತು. ತಮ್ಮ ತಾಯಿ ಕನ್ನಡಮಾತೆ ಎಂದು ಹೇಳಲೂ ನಾಚಿದರು, ಹಿಂಜರಿದರು ಜನ. 'ಚಾಗದ . . . ಭೋಗದ' ಜನ, ಈಗ "ಮಿಕ್ಕವರು ಕಡೆಗಣಿಸಿ, ನೂಕಿದಾಕಡೆ ಬಿದ್ದು ಯಾವ ಮಂಕೋ ಕವಿದು" ಹುದುಗಿದರು. 'ಮಿಡಿದೊಡೆ ತನಿಗಬ್ಬು ರಸಬಿಡುತ್ತಿದ್ದ ನಾಡಿನಲ್ಲಿ, ಗಾಣಕ್ಕೆ ಕೊಟ್ಟು ಅರೆಯಬೇಕಾಯಿತು, ರಸಕ್ಕಾಗಿ.' 'ಕಲಿತೋದದೆಯೆ ಕಾವ್ಯಪ್ರಯೋಗ ಪರಿಣಿತಮತಿಗಳು' ಈಗ ಕಾವ್ಯ ರಚಿಸುವುದಿರಲಿ, ಇದ್ದ ಕಾವ್ಯಗಳ ರಸಾಸ್ವಾದನೆ ಮಾಡಲೂ ಅಲಸಿಕರಾದರು. ಇದು ಅವರ ಮೂರ್ಖತೆಯಿಂದಲ್ಲ; ಪರಭಾಷಾ ಮೋಹಮುಗ್ಧತೆಯಿಂದ. ಕಬ್ಬಿನ ಬೆಲ್ಲ ಸಿಹಿ ಸಾಲದು ಎಂದಲ್ಲ; ಅದರಲ್ಲಿನ ತಿರಸ್ಕಾರದಿಂದ, ಬೀಟರೂಟಿನ ಬಿಳಿಯ ಸಕ್ಕರೆಯ ಮೋಹದಿಂದ. ಇದಕ್ಕಿಂತ ಹೆಚ್ಚಾಗಿ ಒಂದು ನಾಡು ನರಳಬೇಕಾದದ್ದಿಲ್ಲ; ನುಡಿ ಸೊರಗ ಬೇಕಾದ ದ್ದಿಲ್ಲ. ಮಂಕು ಜನವನ್ನು ಮುಚ್ಚಬೇಕಿದ್ದಿಲ್ಲ, ಕನ್ನಡ ನಾಡು, ಜನ ತಮ್ಮ ಗೋಳುಕರೆಯ ಗೌರೀಶಂಕರವನ್ನೇ ಮುಟ್ಟಿದವು. ಎಷ್ಟು ಎತ್ತರಕ್ಕೆ ಹಿಂದೆ ನಾಡಿನ ಸೌಭಾಗ್ಯ ಮುಟ್ಟಿತ್ತೋ, ಅಷ್ಟು ಅಧೋಗತಿಗೆ ಬಂದಿತು. ನಾಡ ದೌರ್ಭಾಗ್ಯ. ಹೀಗೆ ಇದು ನಾಡು – ನುಡಿಗಳ ಕಗ್ಗತ್ತಲ ಅಧ್ಯಾಯವಾಯಿತು.

ಇತಿಹಾಸ ಚಕ್ರ ಉರುಳಿತು. ಎಷ್ಟು ಜನಗಳ – ಕಂಡವರು – ಕಾಣದವರು – ಕಾಣಿಸಿಕೊಳ್ಳಲಿಕ್ಕೇ ಮುಂದೆ ಬಂದವರು – ದುಡಿಮೆಯ, ತ್ಯಾಗದ, ಆತ್ಮಾರ್ಪಣದ ತಪಸ್ಸಿನ ಫಲವೋ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದಿತು. ಭಾಷಾವಾರು

ಪ್ರಾಂತಗಳ ತತ್ತ್ವ ಮೇಲೆ ಬಂದು – ಆ ಉದ್ದೇಶ ಸಫಲವಾಗತೊಡಗಿತು. ಕನ್ನಡ ನಾಡೂ ಉದಯವಾಯಿತು. ನಮ್ಮ – ನಾಡು ಒಂದು, ನಾವೆಲ್ಲ ಒಂದಾಗಬೇಕೆಂದು ಆಶಿಸಿ ದುಡಿದ ಜನ, ಪರಭಾಷೆಯ ಹೊಡತಕ್ಕೆ ಸಿಕ್ಕಿ ಸೊರಗಿದ್ದ ಜನ ಮತ್ತೆ ನವನವೋನ್ಮೇಷ ಚೈತನ್ಯ ಪಡೆದು ಸೇರಿದರು. ಏಳು ವರ್ಷಗಳೂ ಆದವು. 'ಕೇಳಣ್ಣ ನಾನೊಬ್ಬ ಹಳೆಯ ಮುತ್ತೈದೆ – ಹಿರಿದಾಗಿ ಬಾಳಿದವಳೊಮ್ಮೆ' ಎಂದು ಶೋಕಿಸಿದ ತಾಯಿ ಮತ್ತೆ ಚೈತನ್ಯದ ಕಾಯಕಲ್ಪ ಪಡೆದಳು.

ಕನ್ನಡ ಏಕೀಕರಣ ಪೂರ್ಣವಾಗಿಲ್ಲ. ಹೊರನಾಡಿನ ಶೋಷಣೆಗೆ ಸಿಕ್ಕಿ ಮತ್ತೆ ಕನ್ನಡ ನಾಡಿಗೆ ಸೇರ ಬಯಸುವ ಹಿಂದಿನಿಂದಲೂ ಕನ್ನಡ ಭಾಗದ ಜನಗಳೇ ಆಗಿದ್ದರೂ ಇನ್ನೂ ಹೊರಗುಳಿದಿದ್ದಾರೆ. ಈ ಪೂರ್ಣತೆಯನ್ನು ಸಾಧಿಸಲು ಕನ್ನಡ ಸಾಹಿತ್ಯ ಪರಿಷತ್ತೂ, ಕನ್ನಡ ರಾಜ್ಯ ಸರಕಾರವೂ ದುಡಿಯುತ್ತಿವೆ. ಆದರೂ ಎರಡರಲ್ಲೂ ಸಾಕಷ್ಟು — ಬೇಕಾದಷ್ಟು ಹುಮ್ಮಸ್ಸಿಲ್ಲವೊ ಎಂಬ ಸಂದೇಹ ನಿವಾರಣೆಯಾಗಬೇಕಾಗಿದೆ. ಏಕೀಕರಣವಾದ ಮಾತ್ರಕ್ಕೆ ಆರ್ಥಿಕ ಸಂಪತ್ತು ತಾನೇತಾನಾಗಿ ಬರಲಾರದು. 'ಉದ್ಧರೇದಾತ್ಮನಾತ್ಮಾನಂ' ಎಂಬ ಭಗವಂತನ ವಾಣಿ ಅಂದು, ಇಂದು, ಎಂದೂ ಸತ್ಯವೇ. ನಾವೆಲ್ಲರೂ ಸಣ್ಣಪುಟ್ಟ ಸಂಕುಚಿತ ಕಲಹಗಳಲ್ಲಿ ತೊಡಗುವುದನ್ನು ಬಿಟ್ಟು ದೊಡ್ಡ ಧ್ಯೇಯವಾದ ಆರ್ಥಿಕ ಸಂಪತ್ತು, ಸಮೀಚೀನ ಕಾವ್ಯಸಂಪತ್ತು ಬೆಳೆಸಿಕೊಳ್ಳಬೇಕು: ಪಂಚವಾರ್ಷಿಕ ಯೋಜನೆಗಳಲ್ಲಿ ನಮ್ಮ ಪಾಲು ಪೂರ್ಣವಾಗಿ ಬರುವಂತೆ ಸರಕಾರವೂ, ಕನ್ನಡ ದೇಶದ ಅರ್ಥಶಾಸ್ತ್ರ ತಜ್ಞರೂ ಎಚ್ಚರ ವಹಿಸಬೇಕು. ತುಲನಾತ್ಮಕ ಹಾಗೂ ವಿಚಾರಪೂರ್ಣ ದೃಷ್ಟಿಯಿಂದ ವಸ್ತುಮೌಲ್ಯಗಳನ್ನು ಮನಗಂಡು ಪ್ರಧಾನ – ಗೌಣಗಳನ್ನು ಅರಿತು ಕಾರ್ಯೋನ್ಮುಖರಾಗಬೇಕು.

ನಾಡಿನ ಪುಣ್ಯ; ಇಂದಿಗೂ ಕರ್ಣಾಟಕ ರತ್ನಸಿಂಹಾಸನಾಧೀಶ್ವರರೇ ನಮ್ಮ ರಾಜ್ಯಪಾಲರಾಗಿದ್ದಾರೆ. ಕನ್ನಡವೆ ಅವರ ರಕ್ತ; ಪ್ರಾಣ. ಕರ್ಣಾಟಕದ ಏಕೀಕರಣಕ್ಕಾಗಿ ಅವರ ಸೇವೆ ಎಷ್ಟು ಮಹತ್ತರವೋ, ಅಷ್ಟೇ ಮಹತ್ತರವಾಗಿದೆ ಅವರು ಮಾಡಿರುವ ನುಡಿ ಸೇವೆ. ಅನೇಕ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಮ್ಮ ಅಮೂಲ್ಯ ವೈದಿಕ, ಪೌರಾಣಿಕ, ಶಾಸ್ತ್ರೇತಿಹಾಸಗಳ ಸಂಸ್ಕೃತ ಗ್ರಂಥಗಳನ್ನು ಕನ್ನಡಿಗರಿಗೆ 'ಜಯಚಾಮರಾಜಮಾಲಾ' ಗ್ರಂಥದ ಮುಖಾಂತರ ಒದಗಿಸಿ ಅಪಾರ ಸೇವೆ ಮಾಡಿದ್ದಾರೆ. ಕನ್ನಡ ಜನ ಅವರಿಗೆ ಯಾವತ್ತಿಗೂ ಋಣಿಯಾಗಿರುತ್ತದೆ.

ಇನ್ನು ವಿಶ್ವಕೋಶ: ತನ್ನ ಅಕ್ಕ ತಂಗಿಯರೆಲ್ಲ ಸಂಪಾದಿಸಿಕೊಂಡ ಈ ಸೌಭಾಗ್ಯ ಕನ್ನಡ ತಾಯಿಗೆ ಇಲ್ಲವಾಗಿದೆ. ಸರಕಾರ, ಕನ್ನಡ ಸಾಹಿತ್ಯ ಪರಿಷತ್ತು ಶ್ರದ್ಧೆವಹಿಸಿ ಕೆಲಸ ಮಾಡುತ್ತಿವೆ ಈ ದಿಕ್ಕಿನಲ್ಲಿ. ಆದರೂ ಧನದ ಕೊರತೆ, ಕೊಡುಗೈನ ಧನಿಕರ ಕೊರತೆ, ವಿದ್ವಾಂಸರ ಆಲಸ್ಯ ಇದೆ. ಈ ತೊಂದರೆ ಆದಷ್ಟು ಬೇಗ ನಿವಾರಣೆಯಾಗಿ ವಿಶ್ವಕೋಶ ಸಿದ್ಧ ಸಂಪತ್ತಾಗಲಿ. ರಾಜ್ಯದಲ್ಲಿ ಕನ್ನಡದಲ್ಲಿ ಪ್ರಕಟಿತವಾಗಿರುವ ಎಲ್ಲ ಗ್ರಂಥಗಳನ್ನೂ ಒಳಗೊಂಡ ಒಂದು ಬೃಹತ್ ಸರಸ್ವತೀ ಭಂಡಾರವೂ ಆದಷ್ಟು ಬೇಗ ಆಗಬೇಕಾಗಿದೆ. ವಿಶ್ವವಿದ್ಯಾನಿಲಯ ಹಿಂದೆಗಿಂತಲೂ ಈಚಿನ ವರ್ಷಗಳಲ್ಲಿ ಕನ್ನಡಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಡುತ್ತಿದ್ದರೂ, ಏಕೋ, ಏನೋ – ಅದರಲ್ಲಿ ಕೊರತೆ ಇದ್ದೇ ಇದೆ. ಈ ಕೊರತೆಗಳೆಲ್ಲಾ ದೂರವಾಗಿ ಆರ್ಥಿಕವಾಗಿ, ಬೌದ್ಧಿಕವಾಗಿ, ವಿಚಾರಪರತೆಯಿಂದ ಒಟ್ಟಿನಲ್ಲಿ ಸರ್ವತೋಮುಖವಾಗಿ ಈ ನಾಡು ಬೆಳೆಯಲಿ. 'ಸಿರಿಗನ್ನಡಂ ಗೆಲ್ಗೆ'! ಉದಯವಾಯಿತು ಕನ್ನಡ ನಾಡು; ಉದಯವಾಗಲಿ "ಚೆಲುವ ಕನ್ನಡ ನಾಡು!"



# ಸ್ವಾತಂತ್ರ್ಯಪೂರ್ವದ ಕನ್ನಡ ಕಾವ್ಯದ ಬೆಳವಣಿಗೆ

ಲೇಖಕರು : ಶ್ರೀ ಕಂ. ಸು. ವೆಂಕಟಾದ್ರಿ ಶರ್ಮ

ಐದನೇ ಶತಮಾನದ ಶಾಸನಗತ ಸಾಹಿತ್ಯದಿಂದ ಈ ಶತಮಾನದ ಪುಸ್ತಕಗತ ಸಾಹಿತ್ಯದವರೆಗೂ ಕನ್ನಡಕಾವ್ಯ ಕಾವೇರಿ 'ಕಾವೇರಿಯಿಂದ ಗೋದಾವರಿ'ಯ ವರೆಗಿನ ಕನ್ನಡ ನಾಡಿನಲ್ಲಿ ಹರಿದಿದ್ದಾಳೆ. ಅಂದು ಛಂದೋಬಂಧಳಾಗಿದ್ದವಳು ಇಂದು ಮುಕ್ತಛಂದಳಾಗಿದ್ದೂ ಅಂದವನ್ನು ತೋರುತ್ತಿದ್ದಾಳೆ. ವೀರರಸೋಚಿತವಾದ ಓಜಯುಕ್ತ ಸಂಸ್ಕೃತದ ಸಮಸ್ತಪದವೃತ್ತಿಗಳಿಂದ, ಸಂಸ್ಕೃತದ ಅಕ್ಷರವೃತ್ತಗಳಿಂದ, ಕವಿ-ರಾಜ-ಮಾರ್ಗದಿಂದ ದೇಶಿಯತ್ತ ಒಲಿವು ತೋರಿಸಿ, ಶುದ್ಧ ಕನ್ನಡದ ಛಂದಸ್ಸುಗಳಾದ ತ್ರಿಪದಿ, ಷಟ್ಪದೀ ನಡೆಗಳಲ್ಲಿ ಹೆಜ್ಜೆಯಿಟ್ಟು, ಕುಮಾರವ್ಯಾಸಾದಿ ಷಟ್ಪದೀಕುಲ ಪ್ರಚುರವಾದ ಸಾಹಿತ್ಯೋದ್ಯಾನದಲ್ಲಿ ವಿಹರಿಸಿ, ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಛಂದೋನ್ಮುಕ್ತವಾಗಲು ಹಾತೊರೆದು, ಆಧುನಿಕ ಕನ್ನಡ ಪಿತಾಮಹರಾದ ಬಿ. ಎಂ. ಶ್ರೀಯವರ 'ಇಂಗ್ಲೀಷ್ ಗೀತೆ'ಗಳ ಧಾರೆಯಿಂದ ಆಧುನಿಕಛಂದದ ಅಥವ ಛಂದೋರಾಹಿತ್ಯದ ಸೌಲಭ್ಯವನ್ನು ಕನ್ನಡ-ಕಾವ್ಯ-ಕಾಮಿನಿ ಪಡೆದುಕೊಂಡಿದ್ದಾಳೆ. ಅರಿಕೇಸರಿ, ರಾಷ್ಟ್ರಕೂಟ, ಸತ್ಯಾಶ್ರಯ ಇತ್ಯಾದಿ ರಾಜರ ಭವಂತಿಯ ಆರಾಮ ಕೊಠಡಿಗಳಲ್ಲಿ ಷೋಡಶ ಶೃಂಗಾರಗಳಲ್ಲಿ, ಕಾಮಿನೀ-ಕಾಂಚನ ಸೆರೆಯಲ್ಲಿ ಬೆಳೆಯುತ್ತಿದ್ದ ಕನ್ನಡ ಕಾವ್ಯಾಂಬೆ ಹನ್ನೆರಡನೆಯ ಶತಮಾನದಲ್ಲಿ ಬಸವಾದಿಗಳ 'ಅನುಭವ-ಮಂಟಪ'ದ 'ವಚನ' ವೈಭವವನ್ನು ತೋರಿಸಿ, ಹದಿನಾಲ್ಕನೇ ಶತಮಾನದ ಆರಂಭದಲ್ಲಿಯೇ ಕುಮಾರವ್ಯಾಸಾದಿಗಳಿಂದ ಷಟ್ಪದೀ ದೀಕ್ಷೆಯನ್ನು ಕೈಗೊಂಡು, ಪುರಂದರ-ಕನಕಾದಿ ದಾಸರ ಶಿಷ್ಯತ್ವವನ್ನು ಸ್ವೀಕರಿಸಿ, ವ್ಯಾಸಕೂಟ-ದಾಸಕೂಟಗಳಲ್ಲಿ ನರ್ತಿಸಿ, ಉಗಾಭೋಗ-ಸುಳಾದಿಗಳ ಛಾಂದಸಿಕೆಯನ್ನು ಮೆರೆದು, ಈಗ 'ಭಾವಗೀತ'ಗಳ ಸೌರಭ್ಯವನ್ನು ಹೊರಸೂಸುತ್ತಿದ್ದಾಳೆ. ಪಂಪಾದಿಯುಗಗಳಲ್ಲಿ ಜನ ಸಾಹಿತ್ಯತೀರ್ಥಕ್ಕೆ ಯಾತ್ರೆ ಕೈಗೊಳ್ಳಬೇಕಾಗಿತ್ತು, ಇಂದು ಸಾಹಿತ್ಯಗಂಗೆ, ಸ್ವರ್ಗವನ್ನು ತೊರೆದು ಜನದತ್ತ ಇಳಿದು ಹರಿಯುತ್ತಿದ್ದಾಳೆ. ಅಲಂಕಾರಗಳ ಭಾರದಿಂದ ಬಗ್ಗಿಹೋಗಿದ್ದ ಪೂರ್ವಕಾಲದ ಮುತ್ತೈದೆಯು, ಕುಮಾರವ್ಯಾಸಾದಿಗಳ ಕಾಲಕ್ಕೆ "ರಸಜೀವ, ಭಾವ ಒಡಲು, ಅರ್ಥ ಅವಯವ" ಎಂಬಂತಾಗಿ ಮೂಗಿಗಿಂತ ಮೂಗುತಿಯು ಭಾರವಾಗದಂತೆ ಹಿತ-ಮಿತ-ಉಚಿತಾಲಂಕಾರ ಭೂಷಿತೆಯಾಗಿ, ಈಗ "ಇಯಮಧಿಕ ಮನೋಜ್ಞಾವಲ್ಕಲೇನಾಪಿ ತನ್ವೀ, ಕಿಮಿವಹಮಧುರಾಣಾಂ ಮಂಡನಂ ನಾಕೃತೀನಾಂ" ಎಂಬಂತೆ ನಿರಾಭರಣಸುಂದರಿಯಾಗಿ ತನ್ನ ಬೆಡಗಿನಿಂದ ರಸಿಕಜನಕ್ಕೆ ಆನಂದವನ್ನುಂಟುಮಾಡುತ್ತಿರುವಳು.

ಇನ್ನು ಈ ಶತಮಾನದಲ್ಲಿ ಆದ ಕಾವ್ಯದ ಬೆಳವಣಿಗೆಯನ್ನು ನೋಡೋಣ. ೧೯೨೨ರಲ್ಲಿ ಬಿ. ಎಂ. ಶ್ರೀಕಂಠಯ್ಯನವರ 'ಇಂಗ್ಲೀಷ್ ಗೀತೆಗಳು' ಪ್ರಕಟವಾಗುವುದಕ್ಕೆ ಮುಂಚೆ ಮತ್ತು ಆಮೇಲೆ—ಹೀಗೆ, ಈ ಶತಮಾನದ ಕಾವ್ಯದ ಬೆಳವಣಿಗೆಯನ್ನು ಎರಡು ನಿರ್ದಿಷ್ಟ ಹಂತಗಳಾಗಿ ವಿಂಗಡಿಸಬಹುದಾಗಿದೆ. ಭಾರತಕ್ಕೆ ಸ್ವಾತಂತ್ರ್ಯ ಬಂದದ್ದು ೧೯೪೭ರಲ್ಲಿ. ಸ್ವಾತಂತ್ರ್ಯಕ್ಕೆ ಮುಂಚೆ ಈ ಶತಮಾನದ ಕಾವ್ಯದ ಬೆಳವಣಿಗೆಯನ್ನು ಕುರಿತಾದ ಈ ಲೇಖನದಲ್ಲಿ ೧೯೦೦ ರಿಂದ ೧೯೩೫ ರ ವರೆಗೂ ಒಂದು, ೧೯೩೫ ರಿಂದ ೧೯೪೭ ರ ವರೆಗೂ ಇನ್ನೊಂದು, ಹೀಗೆ ಎರಡು ಘಟ್ಟಗಳಲ್ಲಿ ಚರ್ಚೆ ಮಾಡುವುದು ಸೂಕ್ತ. ಮೊದಲನೆಯ ಘಟ್ಟವು ಎರಡನೆಯ ಘಟ್ಟಕ್ಕೆ ಹೇಗೆ ಎಡೆಕೊಟ್ಟಿತು ಎಂಬುದು ಈ ಲೇಖನದಲ್ಲಿ ಊಹ್ಯ. ಮೊದಲನೆಯ ಘಟ್ಟದಲ್ಲಿ ೧೯೦೦ ರಕ್ಕೂ ಸ್ವಲ್ಪ ಹಿಂದೆ ಅಚ್ಚಾದ ಪುಸ್ತಕಗಳ ವಿಚಾರವೂ ಸೇರಿದೆ. ಇದರಿಂದ ಮಥಿತಾರ್ಥಕ್ಕೆ, ನಾವು ಊಹಿಸಬಹುದಾದ ನಿಷ್ಕರ್ಷೆಗಳಿಗೆ ಬಾಧೆಯೇನೂ ಆಗಿಲ್ಲ. ೧೯೩೫ಕ್ಕೆ ಮುಂಚೆ ಸಂಸ್ಕೃತ ಪುರಾಣಗ್ರಂಥಗಳ ಭಾಷಾಂತರಗಳು ಹೆಚ್ಚು ಸಂಖ್ಯೆಯಲ್ಲಿ ಕಾಣಿಸುತ್ತವೆ. ಇವು ಹೆಚ್ಚು 'ಖ್ಯಾತಕರ್ನಾಟಕ'ಗಳಾದ ಅಕ್ಷರವೃತ್ತ, ಮಾತ್ರಾವೃತ್ತಗಳಲ್ಲಿಯೂ ಕಂದ ಷಟ್ಪದಿಗಳಲ್ಲಿಯೂ ಇವೆ. ಕೆಲವು ಉದಾಹರಣೆಗಳನ್ನು ನೋಡಿ. ಸೋಸಲೆ ಅಯ್ಯಾಶಾಸ್ತ್ರಿಗಳ 'ದಮಯಂತಿ ಚರಿತ್ರೆ', 'ಯಕ್ಷಪ್ರಶ್ನೆ', 'ಶೇಷರಾಮಾಯಣ'; ಆಸ್ಥಾನ ವಿದ್ವಾನ್ ನರಹರಿ ಜಯರಾಜಾಚಾರ್ಯರ 'ಕಲ್ಯಾಣ ಗೀತಾವಳೀ'; ಮೈಸೂರಿನ ಸಿ. ಆರ್. ಚೆಲ್ಲಮ್ಮನವರ 'ಪಾರಿಜಾತಾಪಹರಣಂ',

‘ರುಕ್ಮಿಣೀಪರಿಣಯಂ’; ಮೂಗೂರು ಹನುಮಂತಾಚಾರ್ಯರ ‘ಜಗನ್ನಾಥ ಚರಿತ್ರೆ’; ಆಸ್ಥಾನ ಮಹಾವಿದ್ವಾನ್ ಮೈಸೂರು ಸೀತಾರಾಮಶಾಸ್ತ್ರಿಗಳ ‘ದೂರ್ವಾಸನ ಶಾಪ’; ಸಂಜೀವರಾಯ ಕವಿಗಳ ‘ವೆಂಕಟೇಶ ವಿಜಯಂ’; ಕೋಮಂಡೂರು ರಾಮಸ್ವಾಮಿ ಐಯ್ಯಂಗಾರ್ಯರ ‘ಸುಕನ್ಯಾ ಚರಿತ್ರೆ’, ‘ಸುಯಜ್ಞೋಪಾಖ್ಯಾನ’, ‘ಸಂಗೀತ ಕಲ್ಯಾಣ ಪಾರಿಜಾತ’; ಆಸ್ಥಾನಕವಿ ನಂಜನಗೂಡು ಸುಬ್ಬಾಶಾಸ್ತ್ರಿಗಳ ‘ಉತ್ತರಗೀತಾ ಚರಿತ್ರೆ’, ‘ಸೀತಾ ಚರಿತ್ರೆ’; ಸರ್ವದರ್ಶನತೀರ್ಥ ಆಸ್ಥಾನವಿದ್ವಾನ್ ವೈ. ನಾಗೇಶಶಾಸ್ತ್ರಿಗಳ ‘ಅಭಿನವಗೀತಾ’; ಬಾಳಾಚಾರ್ಯ ಸಕ್ಕರಿಯವರ ‘ಕೃಷ್ಣರಾಧಿಕಾ ವಿಲಾಸ’, ‘ಗಜೇಂದ್ರ ಮೋಕ್ಷ’; ಧೊಂಡೊ ನರಸಿಂಹ ಮುಳಬಾಗಲರ ‘ಹಿತೋಪದೇಶ’; ರಾಜಗೋಪಾಲಾಚಾರ್ಯ ಕಡಕೊಳ ‘ರಾಜಗೋಪಾಲ’ ಇವರ ‘ಕೀಚಕಸಂಧಿ’; ರಾಮಚಂದ್ರ ವೆಂಕಟೇಶ ಹೊದಲೂರ “ಭಗವದ್ದಾಸ” ಇವರ ‘ಅಕ್ರೂರಾನುಭವ’; ಬಾಳಾಶಾಸ್ತ್ರಿ ನರೇಗಲ್ಲರ ‘ರಘುವಂಶ’; ಆಶುಕವಿ ರಾಮಕೃಷ್ಣಯ್ಯ ಮೂಲ್ಕಿಯವರ ‘ವೆಂಕಟಗಿರಿ ಮಹಾತ್ಮೆ’ ‘ಪದ್ಮಾವತೀ ಕಲ್ಯಾಣ’; ಮುಳಿಯ ಶಂಕರಭಟ್ಟರ ‘ಚಂಡಭೀಮಕಾವ್ಯ’; ರಾಘವೇಂದ್ರ ಸುಬ್ಬರಾವ್ ಮೂಡಕಟ್ಟೆಯವರ ‘ಹಿತೋಪದೇಶ’; ಅಣ್ಣಾಜಿ ವರ್ಣಾರು ಅವರ ‘ಸೀತಾಉದಯ’, ‘ಮದನಸುಂದರೀ ಸ್ವಯಂವರ’; ತಿರುಮಲ ಲಿಂಗಪ್ಪ ಹೆಗ್ಗಡೆಯವರ ‘ಅನಂತ ಚತುರ್ದಶೀ ಕಥೆ’; ರಾಮಚಂದ್ರ ಪೂಣಿಂಚಿತ್ತಾಯರ ‘ವಿಜಿತಾಶ್ವವಿಜಯ ಕಾಳಗ’; ಹಿರಿಯಣ್ಣ ಶಂಭು ಹೆಬ್ಬಾರರ ‘ಪಾಂಡವ ವಿಜಯ’; ಮಡಿಕೇರಿಯ ಶಾಮರಾಯ ವೆಂಕಟಾದ್ರಿಯವರ ‘ಮಂಗಳಗೌರೀ ವ್ರತ ಕಥಾ’... ಈ ಪಟ್ಟಿ, ಬರೆಯಬೇಕಾದ ಪಟ್ಟಿಯ ಒಂದಂಶ ಮಾತ್ರ. ಅನೇಕ ಕವಿಗಳನ್ನೂ, ಒಂದೇ ಕವಿಯ ಅನೇಕ ಕಾವ್ಯಗಳನ್ನೂ ಬಿಟ್ಟಿದೆ; ಈ ಪಟ್ಟಿಯನ್ನು ನೋಡಿದರೆ ಪುರಾಣೋಕ್ತವ್ರತ ಕಥೆ, ಪೌರಾಣಿಕ ವ್ಯಕ್ತಿಗಳ ‘ಕಲ್ಯಾಣ’ಗಳು, ಕಾಳಗಗಳು, ಸ್ವಯಂವರಗಳು ಇವುಗಳೇ ಕಂಡುಬರುತ್ತವೆ. ಒಬ್ಬನೇ ಕವಿ ಒಂದೇ ಗ್ರಂಥವನ್ನು ಆಧರಿಸಿ ಅನೇಕ ಕಾವ್ಯಗಳನ್ನು ಬರೆದಿರುವುದೂ, ಹೆಚ್ಚುಕಡಿಮೆ ಸಮಕಾಲೀನರಾದ ಒಬ್ಬರಿಗಿಂತ ಹೆಚ್ಚು ಕವಿಗಳು ಒಂದೇ ವಿಚಾರವಾಗಿ, ಅನೇಕವೇಳೆ ಒಂದೇ ಶಿರೋನಾಮೆಗಳಲ್ಲಿ ಕಾವ್ಯಗಳನ್ನು ಬರೆದಿರುವುದೂ ವಿಷಯದ ಅಭಾವಕ್ಕೂ, ಭಾವದ ಬರಡುತನಕ್ಕೂ ಸಾಕ್ಷಿ. ಸಂಸ್ಕೃತದ ಪುರಾಣಗಳೇ ಈ ನಾಡಿನ ಕವಿ-ಕಂಠದಲ್ಲಿ ಕನ್ನಡ ರೂಪವನ್ನು ತಳೆಯಿತೋ ಎನ್ನುವಂತಿದೆ.

ವೀರಶೈವ ಪುರಾಣಗಳ ಕನ್ನಡದ ಅನುವಾದಗಳಿಗೂ ಈ ಕಾಲದಲ್ಲಿ ಕೊರತೆಯೇನಿಲ್ಲ. ಈ ದಿಶೆಯಲ್ಲಿ ಕರ್ಣಾಟಕ ಭಾಷಾರತ್ನ ಆಸ್ಥಾನ ವಿದ್ವಾನ್ ಆರ್. ಕರಿಬಸವಶಾಸ್ತ್ರಿಗಳೂ; ಸಾಹಿತ್ಯರತ್ನ ಕವಿಪತಿ ಶಿವಾದ್ವೈತ ವಿಭೂಷಣ ಜಗದೀಶಶಾಸ್ತ್ರಿ ವಿರೇಶ್ವರಸ್ವಾಮಿ ನಾಲ್ವಾರರೂ; ಸರ್ವದರ್ಶನ ತೀರ್ಥ ಆಸ್ಥಾನವಿದ್ವಾನ್ ನಾಗೇಶ ಶಾಸ್ತ್ರಿಗಳೂ ಕೆಲವೇ ಉದಾಹರಣೆಗಳು.

ಈ ಕಾಲ ಕನ್ನಡಕ್ಕೆ ಅತ್ಯುತ್ತಮವಾದ ಅನುವಾದಗಳನ್ನು ಒದಗಿಸಿಕೊಟ್ಟಿರುವುದೊಂದು ಕನ್ನಡಿಗರ ಪುಣ್ಯ. ಕಾವ್ಯಗಳನ್ನು ಕಾವ್ಯರೂಪದಲ್ಲಿಯೇ ಭಾಷಾಂತರಿಸುವ ಗಂಡುಗಲಿಗಳು ಅಸಂಖ್ಯಾತರಾಗಿರುವುದು ಕನ್ನಡ ನಾಡಿನ ಹೆಮ್ಮೆ. ಅನೇಕ ಸಂಸ್ಕೃತ ಕಾವ್ಯಗಳೂ, ಸಂಸ್ಕೃತ ಪುರಾಣೇತಿಹಾಸ ವ್ಯಕ್ತಿಗಳನ್ನಾಧರಿಸಿದ ಕಾವ್ಯಗಳೂ ಕನ್ನಡಕ್ಕೆ ಬಂದುವು. ಚಂಪೂಕಾವ್ಯದ ಪುಟವೂ ಅಲ್ಲಲ್ಲಿ ಕಾಣಿಸಿಕೊಳ್ಳುತ್ತದೆ. ಸಂಸ್ಕೃತನಿಷ್ಠ ‘ಕಾದಂಬರಿ’ಯ ಕನ್ನಡದಿಂದ ಮುದ್ದಣನ ಕನ್ನಡದ ವರೆಗಿನ ಅನೇಕ ಕನ್ನಡ ಪ್ರಭೇದಗಳು ಇಲ್ಲಿ ಕಾಣುತ್ತವೆ.

ಈ ರೀತಿಯ ಸಾಹಿತ್ಯ ಸೃಷ್ಟಿಸಿದವರಲ್ಲಿ ಬಹಳ ಕವಿಗಳಿಗೆ ಮೈಸೂರಿನ ಮಹಾರಾಜರ ಆಶ್ರಯವಿತ್ತು ಎಂಬುದು ಗಮನೀಯ. ವಿದ್ಯಾಪಕ್ಷಪಾತಿಗಳಾದ ರಾಜರಲ್ಲಿ ಕವಿಗಳು ಪ್ರೇಮ ತಳೆಯುವುದೂ ಸ್ವಾಭಾವಿಕವೇ; ಹೀಗಾಗಿ ಅನೇಕ ರಾಜಭಕ್ತಿ ಕಾವ್ಯಗಳೂ ಹೊರಬಂದುವು. ಮಹಾವಿದ್ವಾನ್ ಸೋಸಲೆ ಅಯ್ಯಾಶಾಸ್ತ್ರಿಗಳ ‘ಮಹಿಷೂರ ಮಹಾರಾಜ ಚರಿತಂ’; ಎಚ್. ಲಿಂಗರಾಜ ಅರಸರ ‘ಯದುನೃಪವಿಜಯ’; ಕರ್ನಾಟಕ ಕವಿಕೇಸರಿ ಬೆಳ್ಳಾವೆ ನರಹರಿಶಾಸ್ತ್ರಿಗಳ ‘ರಾಜಭಕ್ತಿ ಕಾವ್ಯ’ ಮತ್ತು ‘ಶ್ರೀ ಕೃಷ್ಣರಾಜೇಂದ್ರ ರಜತೋತ್ಸವಾನಂದಲಹರಿ’; ಇವು ಕೆಲವು ಉದಾಹರಣೆಗಳು.

ಇನ್ನು ಶುದ್ಧ ಭಕ್ತಿಪ್ರಧಾನವಾದ ಶತಕಸಾಹಿತ್ಯಕ್ಕೇನೂ ಕೊರತೆಯಿಲ್ಲ. ಲಿಂಗರಾಜ ಅಳಿಯರ ‘ಮಹಾಲಿಂಗ ಶತಕ’; ಯು. ದಕ್ಷಿಣಾಮೂರ್ತಿಗಳ ‘ಹರಿಹರ ತಾರತಮ್ಯ ಶತಕ’; ದೇವಶಿಖಾಮಣಿ ಅಳಸಿಂಗರಾಚಾರ್ಯರ ‘ಚೆಲ್ವನಾರಾಯಣ ಶತಕ’; ಮಾದನಹಳ್ಳಿ ಚೆನ್ನಕೃಷ್ಣಯ್ಯನವರ ‘ಶ್ರೀ ಚೆನ್ನಕೇಶವ ಶತಕ’; ಅಂಬಳೆ ಲಕ್ಷ್ಮೀನರಸಿಂಹ ಶಾಸ್ತ್ರಿಗಳ ‘ಭಾನುಶತಕ’ ಮತ್ತು ‘ಸುಮತಿ ಶತಕ’; ಬೆಳ್ಳಾವೆಯ ವೆಂಕಟರಾಯ ಕವಿಗಳ ‘ಸಂತಾಪ ಶತಕ’; ಪಂಡಿತ

ಎ. ಕೇಶವಯ್ಯನವರ 'ಕರ್ನಾಟಕ ಸದ್ಬುದ್ಧಿ ಶತಕ'; ಆಸ್ಥಾನ ವಿದ್ವಾನ್ ಎ. ಶಾಂತಿರಾಜಶಾಸ್ತ್ರಿಗಳ 'ಶತಕತ್ರಯ'; ಚನ್ನಕವಿ ಕೆಳಕೇ ಒಡೆಯರ ಮಠ ಇವರ 'ಕಲ್ಲಿನಾಥ ಶತಕ', 'ಕಾಲಕಾಲೇಶ್ವರ ಶತಕ' ಇತ್ಯಾದಿಗಳು ; ಸಮಸ್ಯಾಪೂರ್ತಿ ಕವಿಯಾಗಿದ್ದ ಸಾಹಿತ್ಯರತ್ನಾಕರ, ವಿದ್ಯಾವಾಚಸ್ಪತಿ, ನರಸಿಂಹಾಚಾರ್ಯ ಭೀಮಾಚಾರ್ಯ ಪುಣೇಕರ "ಕಾವ್ಯಾನಂದ"ರ 'ಚಾಣಕ್ಯ ಶತಕ' ಮತ್ತು 'ಸಾದೀಸುಭಾಷಿತ ಶತಕ'; ನರಸಿಂಹ ಕಾಮತ (ಎಂ. ಎನ್. ಕಾಮತ) ರ 'ವಟಪುರಾಧೀಶ್ವರ ಶತಕ'; ಮದ್ರಾಸಿನ ರಾಜಕವಿ ತಾತಾಚಾರ್ಯರ 'ಗಿರಿಮಲ್ಲಿಕಾರ್ಜುನ ಶತಕ'; ಕುಮಠಾದ ತಿರುಮಲ ಲಿಂಗಪ್ಪ ಹೆಗಡೆ ಯವರ 'ಮೂರ್ಖಶತಕ'; ಕೋಮಂಡೂರು ರಾಮಸ್ವಾಮಿ ಐಯ್ಯಂಗಾರ್ಯರ 'ದಾರಿದ್ರ ಶತಕ'—ಈ ಪಟ್ಟಿಯೂ ಅಪೂರ್ಣ. ಪ್ರತಿ ದೇವರ ಹೆಸರಲ್ಲೂ ಅನೇಕ ಶತಕಗಳು ಬಂದಿರುವುದು ಭಕ್ತಿರಸಪ್ರಧಾನವಾದ ಕವಿತೆಗಳ ಹೆಚ್ಚಳವನ್ನು ತೋರಿಸುತ್ತದೆ. ಶತಕಗಳಿಗೆ ಭಕ್ತಿ ಮತ್ತು ಉಪದೇಶ ಮಾತ್ರ ಸಾಮಗ್ರಿಯಾಗಿರಬೇಕೆಂಬ ಆರ್ಷೇಯ ನಿಯಮವೂ ಸಡಲಿ, ಯಾವುದೇ ವಿಚಾರದ ಮೇಲೂ ನೂರರಮೇಲೆ ಒಂದೋ ಎರಡೋ ಕೊಸರು ಪದ್ಯಗಳನ್ನು ಹೆಣೆದರೆ ಶತಕವಾಯಿತು ಎಂಬುದು ಶತಕದ ಇತಿಹಾಸದ ಇತಿಹ್ರಾಸ.

ಭಕ್ತಿ ಸಾಹಿತ್ಯದ ಮೊಸರಿಗೆ 'ನಾಮಾವಳೀ' ಸಾಹಿತ್ಯದ ಕೊಸರೂ ಬಿದ್ದಿತು. ಜಗದೀಶಶಾಸ್ತ್ರೀ ನಾಲ್ವಾರರ "ಶ್ರೀಮದ್ವಾರದ ವಲ್ಲಪ್ಪಾರ್ಯರ ಅಷ್ಟೋತ್ತರ ನಾಮಾವಲಿ"ಯು ಪುರಾಣ ಸಮ್ಮತವಾದ ಪದ್ಧತಿಯಲ್ಲಿ ಬಂದ ಒಂದು ಅಷ್ಟೋತ್ತರ. ಇಂಥವು ಎಷ್ಟೋ ಇರಬೇಕು.

ಹರಿದಾಸರ ಸಂಪ್ರದಾಯದ ಕೂಸಾದ 'ದೇವರನಾಮ'ಗಳ ಬೆಳೆಯೂ ಅಪಾರವಾಗಿಯೇ ಬಂದಿತು. ನೊಣ ವಿನಕೆರೆ ಕರಿಬಸವ ಸ್ವಾಮಿ; ಚಿತ್ರದುರ್ಗದ ಬಿ. ಭೀಮರಾಜು; ಧಾರವಾಡದ ಕಮಲದಾನಿ ನಾರಾಯಣರಾಯರು; ಬೆಳಗಾವಿಯ ಬಾಳಾಜಿ ಅನಂತ ಕುಲಕರ್ಣಿ (ಬಾಲಾವಧೂತ); ಬಳ್ಳಾರಿಯ ಜೋಯಿಸ ವೆಂಕಪ್ಪಾಚಾರ್ಯ (ವೆಂಕಟ ವಿಠಲ); ಕರಜಗಿಯ ರಾಜಗೋಪಾಲಾಚಾರ್ಯ ಕಡಕೊಳ (ರಾಜಗೋಪಾಲ); ಬಿಜಾಪುರದ ಭೀಮಾಜಿ ರಾಘವೇಂದ್ರ ಕುಲಕರ್ಣಿ (ಐಹೊಳೆ ವೆಂಕಟೇಶ); ಉಡುಪಿಯ ವೆಂಕಟಸುಬ್ಬಮ್ಮ; ಮಂಜಯ್ಯ ಕಾಮತ ಕಲ್ಲೀಕೋಟೆ; ಲಿಂಗಸುಗೂರಿನ ಸ್ವಾಮಿರಾವ್ ಕೌಲೂರ (ವರದೇಶ ವಿಠಲ) ಮತ್ತು ರಾಮದಾಸ (ಶ್ರೀಶ ಪ್ರಾಣೇಶ ವಿಠಲ); ಭಟಕಳದ ಶಾಂತೀಬಾಯಿ ಕೃಷ್ಣನಾಡಘರ; ರಾಯಚೂರಿನ ಅಪರಾಳ ತಮ್ಮಣ್ಣ (ಗೋಪಾಲ); ಕೊಯಮುತ್ತೂರಿನ ಶಾಮ ಯದುಪತಾಚಾರ್ಯ (ತಂದೆ ಪುರಂದರ ವಿಠಲ ಶ್ರೀರಂಗ-ಒಲಿದ ಚಿಕ್ಕದಾಸರು); ಮಡಿಕೇರಿಯ ಶಾಮರಾಯ ವೆಂಕ ಟಾದ್ರಿ (ವೆಂಕಟಾದ್ರಿ; ವೆಂಕಟಗಿರಿಪತಿ; ವೆಂಕಟಗಿರಿ ನಿಲಯ); ಹುಯಿಲುಗೋಳ ನಾರಾಯಣರಾಯರು :—ಇವು ಕೆಲವೇ ಹೆಸರುಗಳು : ಆವರಣದಲ್ಲಿರುವುದು ಅವರ 'ಮುದ್ರಿಕೆ'ಗಳು. ಇಪ್ಪತ್ತನೆಯ ಶತಮಾನದಲ್ಲಿ ದಾಸಕೂಟದ ಪುನರಾವತಾರವಾಯ್ತೆನ್ನುವಂತಿದೆ. ಇಂಗ್ಲೀಷಿನಿಂದ ನಾವು ಪ್ರಭಾವಿತರಾಗುವುದಿರಲಿ ಅನೇಕ ಐರೋಪ್ಯರೂ ತಮ್ಮ ಮತಪ್ರಸಾರಕ್ಕಾಗಿ ಕ್ರೈಸ್ತಗೀತೆಗಳನ್ನು ರಚಿಸಬೇಕಾಯಿತು.

ನೀತಿಪ್ರಧಾನವಾದ ಕಾವ್ಯಸೃಷ್ಟಿಯೂ ಆಯಿತು ಎಂಬುದಕ್ಕೆ ಪಂಡಿತ ಎ. ಕೇಶವಯ್ಯನವರ 'ಕರ್ನಾಟಕ ಸದ್ಬುದ್ಧಿಶತಕಂ', ಕೋಮಂಡೂರು ರಾಮಸ್ವಾಮಿ ಐಯ್ಯಂಗಾರ್ಯರ 'ಒಳ್ನುಡಿಗನ್ನಡಿ' 'ನೀತಿರಸಾಯನ' 'ಬಾಲಿಕಾನೀತಿ ಮಾಲೆ', 'ಹಿತಬೋಧಿನೀ'; ಬಾಳಾಚಾರ್ಯ ಸಕ್ಕರಿಯವರ 'ವ್ಯಭಿಚಾರಾನರ್ಥಸಿಂಧು'—ಇವು ಕೆಲವು ನಿದರ್ಶನಗಳು.

ಮೂಲ್ಕಿ ವೆಂಕಣ್ಣ ಕವಿ, ವಾಸುದೇವಪ್ರಭು, ಶ್ರೀನಿವಾಸ ಭಾಗವತ, ಗೆರೆಸಪ್ಪೆ ಶಾಂತಯ್ಯ, ಬಿ. ಭೀಮರಾಜು, ಮುಂತಾದ ಯಕ್ಷಗಾನ ಕವಿಗಳು ಇದ್ದರು. ಆಸ್ಥಾನ ವಿದ್ವಾಂಸರಾಗಿದ್ದ ಮೋಟಗಾನಹಳ್ಳಿ ರಾಮಶೇಷ ಶಾಸ್ತ್ರಿಗಳೂ ಸಹ 'ಯಕ್ಷಗಾನಸಾನಂದ ಗಣೇಶ ಕಥೆ'ಯನ್ನು ಬರೆದಿದ್ದರು. ಇದು, ವಿದ್ಯಾವಂತರೂ ಯಕ್ಷಗಾನದ ಮಹಿಮೆಯನ್ನು ಕಂಡುಕೊಂಡಿದ್ದರು ಎಂಬುದಕ್ಕೆ ಸಾಕ್ಷಿ. ಏಕೋ ಏನೋ, ಯಕ್ಷಗಾನವು ದಕ್ಷಿಣ ಕನ್ನಡ ಜಿಲ್ಲೆಗೇ ಹೆಚ್ಚು ಒಲಿದಂತಿದೆ.

ಗುಬ್ಬಿ ಗುರುಸಿದ್ದಪ್ಪನವರ 'ಶರಣರ ವಚನಗಳ ಲಾವಣಿ', 'ಪ್ಲೇಗುಮಾರಿಯ ಲಾವಣಿ', ಸವದತ್ತಿಯ ಸಕ್ಕರಿ ನಾಯಕ ಮಲ್ಲಿನಾಯಕ ಇಂಚಲರ ಅನೇಕ ಲಾವಣಿಗಳೂ ಇದ್ದುವು.

ಕರ್ನಾಟಕ ಕವಿರತ್ನ ಹೊಸಕೆರೆ ಚಿದಂಬರಯ್ಯನರ 'ನೀತಿಸಾರ' ಯಳ್ಳಂಬಳಸೆ ಸುಬ್ರಹ್ಮಣ್ಯಶರ್ಮರ 'ಅಧ್ಯಾತ್ಮ ಗೀತಾವಳಿ'; ವಿದ್ಯಾವಾಚಸ್ಪತಿ ಓಡ್ಲಮನೆ ಆತ್ಮಾರಾಮ ಶಾಸ್ತ್ರಿಗಳ 'ಸಂಕ್ಷೇಪಗೀತಾ'; ಶಿಶುನಾಳ ಶರೀಫ ಸಾಹೇಬರ 'ಶಿಶುನಾಳಾಧೀಶ' ತತ್ತ್ವದ ಪದಗಳ ಬೆಳೆ ಕಾವ್ಯದ ಆಧ್ಯಾತ್ಮಿಕ ಪ್ರವೃತ್ತಿಗೆ ನಿದರ್ಶನ.

೧೯೦೫ ಕ್ಕೆ ಮುಂಚೆ ಬಂದ ಕಾವ್ಯದ ಬಹ್ವಂಶವು ಪ್ರಾಚೀನತೆಯನ್ನೇ ತೋರಿಸುತ್ತಿತ್ತು. ಇಪ್ಪತ್ತನೆಯ ಶತಮಾನದ ಉದಯದಲ್ಲಿ ಕೂಗಿದ ದೊಡ್ಡಕೋಳಿಯ ಕೂಗು ಮುದ್ದಣ ಕವಿಯದು. ಈ ಕೋಳಿಯ ಕೂಗು ಅನೇಕ ಕವಿಗಳಿಗೆ ಕೇಳಲಿಲ್ಲ. ಈ ಕೂಗಿನಿಂದ ಪ್ರಭಾವಿತರಾದವರು ಬರಲು ಇಪ್ಪತ್ತು ವರ್ಷಗಳಾದರೂ ಉರುಳಬೇಕಾಯಿತು. ಈಗ ರಾಜಕೀಯವಾಗಿ ಲಾಲ-ಬಾಲ-ಪಾಲರ ಯುಗವೂ ಗಾಂಧೀ ಯುಗವೂ ಸಂಧಿಸಿದ ಕಾಲ. ದೇಶಪ್ರೇಮ ರಾಷ್ಟ್ರೀಯತೆಯ ಮಂದಾನಿಲ ವಿಂಧ್ಯದ ದಕ್ಷಿಣಕ್ಕಾಗಲೇ ಬೀಸಿತ್ತು. "ನೀರಿಯಳಿಯದ ಗಂಟಲೊಳ್ ಕಡುಬುಂ ತುರುಕಿದಂತಾಯ್ತು" ಎಂಬುದು ಆಗಿನ ಕನ್ನಡ ಸರಸತಿಯ ಆರ್ತನಾದವನ್ನು ಸಂಕೇತಿಸುತ್ತದೆ. ಕಾವ್ಯಬ್ರಹ್ಮನ ಸೃಷ್ಟಿ ನಿಧಾನವಾಗುವುದನ್ನು ತಡೆಯಲಾರದ ಕನ್ನಡಾಂಬೆಯು ಇಂಗ್ಲೀಷ್‌ನಿಂದ ಆದ ಅನುವಾದಗಳ ವಿಶ್ವಾಮಿತ್ರ ಸೃಷ್ಟಿಯನ್ನೇ ಸ್ವಾಗತಿಸಿದಳು. ಮೈಸೂರು ಶಿಕ್ಷಣ ಇಲಾಖೆಯಲ್ಲಿ ಭಾಷಾಂತರಕಾರರಾಗಿದ್ದ ಶ್ರೀ ಎಸ್. ಜಿ. ನರಸಿಂಹಾ ಚಾರ್ಯರೂ ಮತ್ತು ಇವರ ಸಮಕಾಲೀನರಾಗಿದ್ದ ಮಂಗಳೂರಿನ ಹಟ್ಟಿಯಂಗಡಿ ನಾರಾಯಣರಾಯರೂ ಅನೇಕ ಇಂಗ್ಲೀಷ್ ಗೀತಗಳನ್ನು ಕನ್ನಡಿಸಿದರು. ೧೯೧೯ ರಲ್ಲಿ ಇದಾದುದು. ಇಷ್ಟೇ ಅಲ್ಲ, "ಕನ್ನಡ ಕವಿತೆಯ ಭವಿಷ್ಯ" ಎಂಬ ಇವರ ವಿಚಾರಪೂರಿತ ಪುಸ್ತಕ, ೧೯೨೨ ರಲ್ಲಿ ಪ್ರಕಟವಾದ ಬಿ. ಎಂ. ಶ್ರೀಯವರ 'ಇಂಗ್ಲೀಷ್ ಗೀತಗಳು" ಎಂಬುದಕ್ಕೆ ನಾಂದಿಯಾಯಿತು. ಕಾಲಪ್ರವಾಹಕ್ಕೆ ಅನುಗುಣವಾಗಿ ಈಜಲು ಕನ್ನಡ ಕವಿಕುಲವನ್ನು ಸಜ್ಜುಮಾಡಿದ ಸೌಭಾಗ್ಯ ಆಧುನಿಕ ಕಾವ್ಯದ ಕರ್ಣಧಾರ ಬಿ.ಎಂ.ಶ್ರೀ. ಯವರಿಗೆ ಸಲ್ಲುತ್ತದೆ. ಇಲ್ಲಿಂದ ಮುಂದೆ ಉಂಟಾದ ರೊಮ್ಯಾಂಟಿಕ್ ಅಥವಾ ಭಾವಗೀತೆಗಳ ಶಕೆಗೆ ಇವರೇ ಶಕಪುರುಷರಾದರು. ಸಂಸ್ಕೃತದಿಂದ ಆಗುತ್ತಿದ್ದ ಭಾಷಾಂತರಗಳು ಪಾಶ್ಚಿಮಾತ್ಯ ಭಾಷೆಗಳಿಂದ ಆಗುವ ಭಾಷಾಂತರಗಳಿಗೆ ಎಡೆಕೊಟ್ಟಿತು. 'ಇಂಗ್ಲೀಷ್ ಗೀತೆ'ಯಲ್ಲಿರುವ ಎಲ್ಲಾ ಭಾವಗೀತಗಳೂ ಅತ್ಯುತ್ತಮವಾದ ಭಾಷಾಂತರಗಳೇನಲ್ಲ. ಆದರೂ ಇದು ಭಾವಗೀತ ಶಕಪುರುಷನಿಗೆ ನಡೆದ ಗಣಪತಿ ಪೂಜೆ.

೧೯೨೫ ರಿಂದ ಮುಂದೆ ಕನ್ನಡ ಕಾವ್ಯಾಂಬೆಯ ಕಾರ್ಯಕ್ಷೇತ್ರವನ್ನು ಸ್ಥೂಲವಾಗಿ ಮೂರು ಪ್ರಧಾನ ಕ್ಷೇತ್ರಗಳನ್ನಾಗಿ ವಿಂಗಡಿಸಬಹುದು. (೧) ಬೆಂಗಳೂರು, (೨) ಧಾರವಾಡ, (೩) ಮಂಗಳೂರು. ಈ ಮೂರು ಗುಂಪುಗಳಿಗೆ ಕ್ರಮವಾಗಿ ಬಿ. ಎಂ. ಶ್ರೀ., ದ. ರಾ. ಬೇಂದ್ರೆ, ಮುಳಿಯ ತಿಮ್ಮಪ್ಪಯ್ಯನವರುಗಳನ್ನು ಆದ್ಯರೆನ್ನಬಹುದು.

ಬೆಂಗಳೂರಿನ ಗುಂಪಿನಲ್ಲಿ ಡಾ|| ಕೆ. ವಿ. ಪುಟ್ಟಪ್ಪ, ಡಾ|| ಮಾಸ್ತಿ ವೆಂಕಟೇಶ ಐಯ್ಯಂಗಾರ್, ಡಾ|| ಡಿ. ವಿ. ಗುಂಡಪ್ಪ, ಪು. ತಿ. ನರಸಿಂಹಾಚಾರ್ಯ, ಜಿ. ಪಿ. ರಾಜರತ್ನಂ, ವಿ. ಸೀತಾರಾಮಯ್ಯ, ಎಲ್. ಗುಂಡಪ್ಪ, ತೀ. ನಂ. ಶ್ರೀಕಂಠಯ್ಯ, ಟಿ. ಶ್ರೀಕಂಠಯ್ಯ "ಕನ್ನಡ ಕುವರ", ಕೆ. ನರಸಿಂಹಮೂರ್ತಿ, ಎಸ್. ವಿ. ಪರಮೇಶ್ವರ ಭಟ್ಟ, ಎಂ. ವಿ. ಸೀತಾರಾಮಯ್ಯ, ಎ. ಕೆ. ಪುಟ್ಟರಾಮು, ಮೈಸೂರು ನಂಜುಂಡಶಾಸ್ತ್ರೀ ಇವು ಕೆಲವು ಹೆಸರುಗಳು.

ಧಾರವಾಡದಲ್ಲಿ ಜಯಕರ್ನಾಟಕದ 'ಗೆಳೆಯರ ಗುಂಪಿನಲ್ಲಿ ಬೆಟಗೇರಿ ಕೃಷ್ಣಶರ್ಮ, ಸಮಸ್ಯಾಪೂರ್ತಿ ಕವಿಗಳಾಗಿದ್ದ ಸಾಹಿತ್ಯರತ್ನಾಕರ ವಿದ್ಯಾವಾಚಸ್ಪತಿ ನರಸಿಂಹಾಚಾರ್ಯ ಭೀಮಾಚಾರ್ಯ ಪುಣೇಕರ್ "ಕಾವ್ಯಾನಂದ", ಹಲಸಂಗಿ ಚೆನ್ನಮಲ್ಲಪ್ಪ ಗಲಗಲಿ "ಮಧುರಚೆನ್ನ" ಬಿಂದುಮಾಧವ ಕೊಲ್ಲಾರ, ಶ್ರಿ ನಾರಾಯಣ ಸಂಗಮ ಇವು ಹಲವು ಹೆಸರುಗಳು.

ಮಂಗಳೂರಿನ ಗುಂಪಿನಲ್ಲಿ ಮಂಜೇಶ್ವರ ಗೋವಿಂದ ಪೈ, ಪಂಜೆ ಮಂಗೇಶರಾಯರು, ಕಡೇಕಾರು ರಾಜಗೋಪಾಲ ಕೃಷ್ಣರಾಯರು, ಲಕ್ಷ್ಮೀನಾರಾಯಣ ಪೂಣಿಂಚತ್ತಾಯ, ಶಂಕರಭಟ್ಟ ಕಡೆಂಗೋಡ್ಲು—ಹೀಗೆ ಕೆಲವು ಹೆಸರುಗಳು.

ಈ ಮೂರೂ ಕ್ಷೇತ್ರಗಳಿಂದ ಬಂದ ಕಾವ್ಯಗಳೆಲ್ಲವೂ ಭಾವಗೀತೆಗಳ ಗುಂಪಿಗೇ ಸೇರಿದ್ದಾದರೂ, ಈ ಮೂರೂ ಗುಂಪುಗಳು ಇಂಗ್ಲಿಷ್ ಸಾಹಿತ್ಯದಿಂದ ಪ್ರಭಾವಿತವಾಗಿದ್ದರೂ, ಈ ಮೂರೂ ಪ್ರದೇಶಗಳಲ್ಲಿನ ಕಾವ್ಯಗಳಲ್ಲಿ ರಾಷ್ಟ್ರ ಜೀವನ, ದೇಶಪ್ರೇಮ, ಸ್ವದೇಶೀ ಭಾವನೆಗಳು ಸಮ್ಮಿಲಿತವಾಗಿದ್ದರೂ, ಈ ಮೂರೂ ಪ್ರಾದೇಶಿಕ ಆಂದೋಲಗಳಲ್ಲಿ ವೈಶಿಷ್ಟ್ಯಗಳಿಲ್ಲದೇ ಇಲ್ಲ. ಇದಕ್ಕೆ ಕಾರಣ ಆ ಗುಂಪುಗಳ ಆದ್ಯ ಪ್ರವರ್ತಕರೇ. ಬಿ. ಎಂ. ಶ್ರೀ. ಯವರಲ್ಲಿ ವರ್ಡ್ಸ್‌ವರ್ತ್ ಮತ್ತು ಷೆಲ್ಲಿ ಕವಿಗಳ ಚೇತನ ಕನ್ನಡಕ್ಷೇತ್ರದಲ್ಲಿ ಅವತಾರವಾಯಿತು. ಬೇಂದ್ರೆಯರಲ್ಲಿ ಎ. ಇ. ರಸಲ್, ವ್ಯಾಟರ್ ಲಿಂಕ್‌ರವರ ಪ್ರಭಾವವನ್ನೂ, 'ಆರ್ಯ' ಪತ್ರಿಕೆಯ ಮೂಲಕವಾದ ಮಹರ್ಷಿ ಅರವಿಂದರ ಮತ್ತು ಜೆ. ಕೃಷ್ಣಮೂರ್ತಿ ಇವರುಗಳ ದರ್ಶನವನ್ನೂ, ಜಾನಪದೀಯ ಸಂಸ್ಕಾರವನ್ನೂ, ಮೇಲಾಗಿ ಕನ್ನಡದ ಸರ್ವ ಪರಿಸರಗಳಲ್ಲಿ "ಪಾತರಗಿತ್ತಿ"

ಯಂತೆ ಹರಿದಾಡುವ ಸಾರ್ವಭೌಮ ಶಕ್ತಿಯನ್ನೂ, ಹಿಂದೀ ಸಾಹಿತ್ಯದ 'ಛಾಯಾವಾದೀ' ಪಂಥದ ಕವಿಗಳ ಪ್ರಭಾವವನ್ನೂ ಗುರುತಿಸಿಕೊಳ್ಳಬಹುದಾಗಿದೆ. ಅರವಿಂದರ ಯೋಗ ಮತ್ತು ರವೀಂದ್ರರ ರಾಗ—ಇವುಗಳ ಸಂಯೋಗ ಬೇಂದ್ರೆ. ಬೇಂದ್ರೆ ಬೀಜ, ಲಾಲ-ಬಾಲ-ಪಾಲರ ಕಾಲದಲ್ಲಿ ಬಿದ್ದದ್ದು, ಗಾಂಧೀ ಕಾಲದಲ್ಲಿ ಬೆಳೆದದ್ದು. ಕನ್ನಡದ ಅಂಬೆಯಿಂದ ದತ್ತರಾದ ತನಯರು, ಅಂಬಿಕಾತನಯ ದತ್ತರು. ಪ್ರಕೃತಿಯನ್ನು ಬೇಂದ್ರೆಯವರು ಅಲಂಕಾರ ಯೋಜನೆಗೂ, ಭಾವಾಕ್ಷಿಪ್ತ ಸಂಶ್ಲಿಷ್ಟ ಯೋಜನೆಗೂ ಕೂಡಿಯೇ ಬಳಸುತ್ತಾರೆ. ಅವ್ಯಕ್ತವನ್ನು ವ್ಯಕ್ತಮಾಧ್ಯಮದಲ್ಲಿ ಅಳವಡಿಸಿ ಸುಂದರವಾದ ಶಬ್ದ ಚಿತ್ರಗಳನ್ನು ನಿರ್ಮಿಸುವುದರಲ್ಲಿ ಇವರು ಸಿದ್ಧಹಸ್ತರು. ಜಾಗೃತ ರಾಷ್ಟ್ರಚೇತನದ ಉರಿಯೊಡಲು ಮತ್ತು ಸಿರಿವೈ ಇವೆರಡೂ ಬೇಂದ್ರೆಯಲ್ಲಿ ಸಿಗುತ್ತದೆ. ಬೇಂದ್ರೆಯವರ ಕವನಗಳ ವಿಸ್ತೃತ ಆಲೋಚನೆ ಈ ಲೇಖನದ ಉದ್ದಿಶ್ಯವಲ್ಲ. ಇನ್ನು ಮಂಗಳೂರಿನ ಗುಂಪಿನವರಲ್ಲಿ ಹೊಸದರ ಜೊತೆಗೆ ಹಳೆಗನ್ನಡ ಓಜಸ್ಸು, ಶಬ್ದದ ಬಿಕ್ಕಟ್ಟು ಇವುಗಳ ವೈಶಿಷ್ಟ್ಯವಿವೆ. ಕಡೆಂಗೋಡ್ಲು ಶಂಕರಭಟ್ಟರ ಕವನಗಳು ಇದಕ್ಕೆ ಇಂದೂ ಮಾದರಿ.

ಈ ಮೂರು ಪ್ರಾದೇಶಿಕ ಕ್ಷೇತ್ರಗಳಲ್ಲಿ ಕಾರ್ಯನಿರತರಾಗಿರುವ ಕವಿಗಳೆಲ್ಲರೂ ಈ ಪ್ರಾದೇಶಿಕ ವೈಶಿಷ್ಟ್ಯಗಳಿಂದ ಪ್ರಭಾವಿತರಾಗಿದ್ದಾರೆ ಎಂದು ಹೇಳಲಾಗುವುದಿಲ್ಲ. ಈ ಪ್ರಭಾವಗಳಿಂದ ಹೊರತಾದವರೂ ಇದ್ದಾರೆ, ಅವರ ಕಾವ್ಯದ ಕಾಣಿಕೆ ಮಹತ್ತರವಾದುದೂ ಆಗಿದೆ. ಡಾ|| ಡಿ. ವಿ. ಗುಂಡಪ್ಪನವರ 'ಮಂಕುತಿಮ್ಮನ ಕಗ್ಗ'; ಮಂಜೇಶ್ವರ ಗೋವಿಂದ ಪೈರವರ 'ಗಿಳಿವಿಂಡು', 'ಗೊಲ್ಗೊಥಾ'; 'ವೈಶಾಖಿ'; ಷಟ್ಪದೀಪ್ರೇಮಿಗಳಾದ ಸಾಲಿ ರಾಮಚಂದ್ರರಾಯರ 'ಚಿಗುರೆಲೆ', 'ಕುಸುಮಾಂಜಲಿ', 'ತಿಲಾಂಜಲಿ'; 'ಕುಮಾರ ಮಾಧವ' 'ನವಕಾಳಿದಾಸ' 'ಪೌರಾಣಿಕ ಶಿರೋಮಣಿ' – ಸಾಲಿಗ್ರಾಮದ ಶ್ರೀಕಂಠಶಾಸ್ತ್ರಿಗಳ 'ಮದಾಲಸೋಪಾಖ್ಯಾನ', 'ಶಂಕರವಿಜಯ'—ಇವು ಕೆಲವು ಉದಾಹರಣೆಗಳು.

ಇನ್ನು ಒಂದೇ ಕ್ಷೇತ್ರದಲ್ಲಿದ್ದೂ ಒಂದೇ ಪ್ರಭಾವಕ್ಕೆ ಒಳಗಾದೆವೆನ್ನುವವರ ಕಾವ್ಯದ ಬೆಳಸಿನಲ್ಲಿಯೂ ಏಕರೂಪತೆ ಇದೆ ಎನ್ನಲಾಗದು. ಒಟ್ಟಿನಲ್ಲಿ ೧೯೨೫ರಿಂದ ೧೯೪೭ರ ವರೆಗೂ ನಡೆದ ಎರಡು ದಶಕಗಳ ಕಾಲವನ್ನು ಕಾವ್ಯದ ದೃಷ್ಟಿಯಿಂದ ಭಾವಗೀತೆಗಳ ಬೆಳವಣಿಗೆಯ ಕಾಲವೆನ್ನಲಡ್ಡಿಯಿಲ್ಲ. ನಮ್ಮ ನೆರೆ ಸಾಹಿತ್ಯಗಳಾದ ತೆಲುಗು, ಹಿಂದಿ ಸಾಹಿತ್ಯಗಳಿಗೂ ಇದೇ ಮಾತು ಅನ್ವಯಿಸುತ್ತದೆ ಎಂಬುದೀಗ ಸಂತಸದ ಸುದ್ದಿ.

ಬಿ. ಎಂ. ಶ್ರೀ. ಯವರ 'ಇಂಗ್ಲೀಷ್ ಗೀತಗಳು', 'ಹೊಂಗನಸು'; ಮಾಸ್ತಿಯವರ 'ಬಿನ್ನಹ', 'ಅರುಣ' 'ಉಷಾ', 'ತಾವರೆ', 'ಚೆಲುವು', 'ಮಲಾರ' 'ರಾಮನವಮಿ', 'ಮೂಕನ ಮಕ್ಕಳು', 'ನವರಾತ್ರಿ' 'ಸುನೀತ'; ವಿ. ಸೀ. ಯವರ ಗೀತಗಳು, ನೆಳಲು, ಬೆಳಕು; ತೀ. ನಂ. ಶ್ರೀಕಂಠಯ್ಯನವರ 'ಒಲುಮೆ'; ಪು. ತಿ. ನ. ರವರ 'ಹಣತೆ', 'ಮಾಂದಳಿರು' ಇತ್ಯಾದಿ; ಟಿ. ಶ್ರೀಕಂಠಯ್ಯನವರ 'ಅರಿವು'; ಎಲ್. ಗುಂಡಪ್ಪನವರ 'ಸೊಹ್ರಾಬ್ ಮತ್ತು ರುಸ್ತುಂ'; ಜಿ. ಪಿ. ರಾಜರತ್ನಂರವರ 'ತಾರೆ', 'ಶಾಂತಿ', 'ರತ್ನನ ಪದಗಳು', 'ಪುರುಷ ಸರಸ್ವತಿ'; ಎಸ್. ವಿ. ಪರಮೇಶಭಟ್ಟರ 'ಮಾಚಯ್ಯ'; ಮೈಸೂರು ನಂಜುಂಡಶಾಸ್ತ್ರಿಯವರ 'ತೆಪ್ಪೋತ್ಸವ'; ಡಿ. ವಿ. ಜಿ. ಯವರ 'ನಿವೇದನ', 'ಉಮರನ ಒಸಗೆ', 'ಮಂಕುತಿಮ್ಮನ ಕಗ್ಗ', 'ಶ್ರೀರಾಮ ಪರೀಕ್ಷಣಂ' 'ಸ್ವತಂತ್ರ ಭಾರತ', 'ಮಹಾತ್ಮ ಗಾಂಧಿ'; ಕುವೆಂಪುರವರ 'ಪಾಂಚಜನ್ಯ', 'ಅಗ್ನಿಹಂಸ', 'ಜೇನಾಗುವಾ' 'ಷೋಡಶೀ' 'ಕೃತ್ತಿಕೆ', 'ಚಂದ್ರಮಂಚಕೆ ಬಾ ಚಕೋರಿ', 'ಕೊಳಲು', 'ನವಿಲು', 'ಕಲಾಸುಂದರಿ' ಇತ್ಯಾದಿಗಳು; ದ. ರಾ. ಬೇಂದ್ರೆಯವರ 'ನಾದಲೀಲೆ' 'ಉಯ್ಯಾಲೆ' 'ಸಖೀಗೀತ' 'ಮೇಘದೂತ', 'ಹಾಡುಪಾಡು' 'ಗಂಗಾವತರಣ'; ಆನಂದಕಂದರ 'ಭಕ್ತಿ ಕುಸುಮಾಂಜಲೀ' 'ಮುದ್ದನ ಮಾತು', 'ಅರುಣೋದಯ', 'ವಿರಹಿಣಿ', 'ಒಡನಾಡಿ', 'ಕಾರಹುಣ್ಣಿಮೆ', 'ನಲ್ವಾಡುಗಳು'; ವಿ. ಕೃ. ಗೋಕಾಕರ, 'ಕಲೋಪಾಸಕ', 'ಪಯಣ', 'ಸಮುದ್ರ ಗೀತಗಳು' 'ಆಕಾಶಗಂಗೆ', 'ಅಭ್ಯುದಯ' ಇವಿಷ್ಟು ಈ ಲೇಖಕನಿಗೆ ಲೇಖನ ಕಾಲಕ್ಕೆ ಒದಗಿದವುಗಳು. ಪಟ್ಟಿ ಅಪೂರ್ಣವಾಗಿರಲೇಬೇಕು. ಯಥಾಸಾಧ್ಯ, ಕವಿತಾಸಂಕಲನಗಳನ್ನು ಕವಿಗಳ ಹೆಸರಿನ ಮುಂದೆ ಕಾಲಾನುಕ್ರಮದಲ್ಲಿ ಕೊಡಲಾಗಿದೆ. ಈ ಕಾವ್ಯಗಳು ೧೯೨೫ ರಿಂದ ಆಚೆ ೧೯೪೭ ಕ್ಕೆ ಹಿಂದೆ ಅಚ್ಚಾದವುಗಳು. ಪ್ರತಿಕವಿಯೂ ಹೇಗೆ ಬೆಳೆದಿದ್ದಾನೆ ಎಂಬುದು ಬೇರೆ ಬೇರೆ ಲೇಖನಗಳಿಗೆ ಸಾಮಗ್ರಿಯಾಗಬಹುದು, ಅದು ಇಲ್ಲಿ ಸಾಧ್ಯವಿಲ್ಲ.

ಭಾವಗೀತಗಳ ಪ್ರಭಾವಕ್ಷೇತ್ರದಲ್ಲಿಯೇ ಬೆಳೆದು ತಮ್ಮದೇ ಆದ ಉಪಕ್ಷೇತ್ರವನ್ನು ಘಟಿಸಿಕೊಂಡವರು ಶ್ರೀ ಜಿ. ಪಿ. ರಾಜರತ್ನಂ. ಅವರ ರತ್ನನ ಪದಗಳು ಸಾಹಿತ್ಯಕ್ಕೆ ಅಪೂರ್ವ ಕೊಡುಗೆ. ಇದರಲ್ಲಿ ಕೈಲಾಸಮ್‌ರವರ ಪ್ರಭಾವ ಮತ್ತು ಬರ್ನ್ಸ್ (Burns) ಕವಿಯ ಭಾಷಾವೈಶಿಷ್ಟ್ಯ ಇವು ಸುಳಿಯುತ್ತವೆ.

ಕಾವ್ಯಕ್ಕೆ ಬಿ.ಎಂ.ಶ್ರೀ.–ಬೇಂದ್ರೆ–ಪಂಜೆಯುಗದ ಕಾಣಿಕೆಯೇನು ? ಈ ಯುಗದ ಪ್ರಧಾನ ಲಕ್ಷಣಗಳೇನು ?

ಇದು ಪ್ರಬಂಧಗಳ ಯುಗವಲ್ಲ, ಕವನ–ಸಂಗ್ರಹಗಳ ಯುಗ. ಅಗಸ್ತ್ಯನಂತೆ ಕುಂಭದಲ್ಲಿ ಅಂಬುಧಿಯನ್ನಡಗಿಸಿಡುವ ಯುಗ—ಮಾತಿನ ರನ್ನಗನ್ನಡಿಯಲ್ಲಿ ಜನಕನ ಕನಕಸಭೆಯ ಪ್ರತಿಬಿಂಬವನ್ನು ಕಾಣಿಸುವ ಯುಗ. ಪರಿಮಾಣುವಿನಲ್ಲಿ ಪರಮಾತ್ಮನನ್ನು ತೋರಿಸುವ ಯುಗ. ಪ್ರತಿ ಮಾತೂ ಅರ್ಥದ ಅನಂತತೆಯೆಡೆಗೆ ತೋರ್ಬೆರಳು. ಆಡಿದ ಮಾತು ಆಡದ ಅರ್ಥಕ್ಕೆ ಕೊಂಡಿ. "ಆಡಿದರೆ ಹೋಯಿತು ಮಾತು, ಒಡೆದರೆ ಹೋಯಿತು ಮುತ್ತು" ಎಂಬಂತೆ ಮಾತಿನ ಇತಿ–ಮಿತಿ–ಗತಿಗಳನ್ನರಿತು ಮಿತವ್ಯಯ ಮಾಡುವ ಕಾಲವಿದು. ಪ್ರಕೃತಿಯಲ್ಲಿ ಪರಮಾತ್ಮನ ಪ್ರತಿಬಿಂಬವನ್ನು ಕಾಣುವ ಸಾಂಖ್ಯ ಸಿದ್ಧಾಂತ ಅನೇಕವೇಳೆ ಈ ಕಾವ್ಯಕ್ಕೆ ಪ್ರೇರಕ. ಪ್ರಕೃತಿಯಲ್ಲಿ ಗತಿಯನ್ನು ನೋಡುವ ನೋಟವನ್ನು ಇಲ್ಲಿ ಕಾಣುತ್ತೇವೆ. ಜೀವನದ ಅನೇಕ ಮಜಲುಗಳನ್ನು ಕೂರಲಗಂತೆ ನಡುವ, ನಟ್ಟು ಸಮಸ್ಯೆಗಳಿಗೆ ಸಮಾಧಾನ ಕಾಣುವ, ಸಮಾಧಾನ ಸಿಗದಿದ್ದಲ್ಲಿ ತೂಗುಯ್ಯಾಲೆಯಾಡುವ ಮನಸ್ಸಿನ ಬಯಕೆಯಿಲ್ಲಿ ಕಾಣುತ್ತದೆ. ರಾಷ್ಟ್ರೀಯ ಭಾವನೆಗಳನ್ನು ಪ್ರತಿಕವಿಯೂ ತೋರಿದ್ದಾನೆ. ಸ್ವದೇಶಿ, ಸ್ವಭಾಷೆ, ಸ್ವದೇಶ, ಹೀಗೆ ತನ್ನ ಸ್ವತ್ವವನ್ನು ಕಾಣಲು ಹಂಬಲಿಸಿದ್ದಾಳೆ ಕನ್ನಡಾಂಬೆ. ಕಾವ್ಯವಸ್ತು ಕೇವಲ ಅರಮನೆ–ಗುರುಮನೆಗಳಿಗೆ ಮಾತ್ರ ಸೀಮಿತವಾಗದೆ ಬಡಬೋರೇಗೌಡನ ಒಕ್ಕಲನ್ನೂ ತನ್ನ ಪರಿಧಿಯೊಳಗಡಗಿಸಿದೆ.

ಇನ್ನು ಛಂದಸ್ಸಿನಲ್ಲಿ ಆದ ಮಾರ್ಪಾಟು ಮಹತ್ವದ್ದಾಗಿದೆ. ಆದಿಪ್ರಾಸ ಅಂತ್ಯಪ್ರಾಸಕ್ಕೆ ಎಡೆಮಾಡಿದೆ. ಷಟ್ಪದಿಗಳ, ರಗಳೆಗಳ ಮುಖ್ಯಗುಣಗಳಾದ ಮಂದಾನಿಲ, ಉತ್ಸಾಹ, ಲಲಿತ ಈ ನಡೆಗಳನ್ನು ಆಧಾರವಾಗಿಟ್ಟುಕೊಂಡು ಸಾಲುಗಳನ್ನು ಅವಶ್ಯಕತೆಗೆ ತಕ್ಕಂತೆ ಹಿಗ್ಗಿಸುವ ಕುಗ್ಗಿಸುವ ಪರಿಪಾಟಿ ಬೆಳೆಸಿ 'ಸರಳರಗಳೆ'ಯೆಂಬ ಛಂದಸ್ಸನ್ನು ಕೊಟ್ಟಿದ್ದಾರೆ ಈ ಕವಿಗಳು. ಅನೇಕ ಕಥನ–ಕವನಗಳಿಗೆ ಇದು ಉಪಯುಕ್ತವಾದ ಮಾಧ್ಯಮವೆಂಬುದೀಗಾಗಲೇ ಪ್ರಯೋಗಸಿದ್ಧವಾಗಿದೆ. ಈ ಯುಗವು ಕನ್ನಡದ ಛಂದಸ್ಸಿನ ರಾಣಿಯಾದ ಷಟ್ಪದಿಯ ಸಂಪೂರ್ಣ ಪ್ರಯೋಜನವನ್ನು ಪಡೆಯದೇ ಇಂಗ್ಲಿಷ್ ಛಂದಸ್ಸುಗಳ ಕಡೆಗೆ ಒಲವು ತೋರಿಸಿದೆಯೇನೋ ಎಂಬ ಸಂದೇಹವುಂಟಾಗುತ್ತದೆ. 'ಸುನೀಥ' ಅಥವಾ ಅಷ್ಟಷಟ್ಪದಿಯೂ ಕನ್ನಡದ್ದೇನೋ ಎನ್ನುವಂತೆ ಒಗ್ಗಿದೆ. ಹರಿದಾಸಯುಗದ 'ಪದ' ಗಳ ಗೇಯಕ್ಷಮತ್ವವೂ 'ಭಾವಗೀತೆ'ಗಳ ಲಯಬದ್ಧತೆಯಲ್ಲಿ ಸೇರಿಕೊಂಡಿದೆ.

ಕಾವ್ಯಕ್ಕೆ ಕಥೆಯ ಸೂತ್ರವೊಂದಿರಲೇಬೇಕೆಂಬ ಕಡ್ಡಾಯವಿಲ್ಲ. ಒಂದಿಷ್ಟು ಭಾವ ತುಂಬಿ ಒಂದು ಕಾವ್ಯವನ್ನು ರಚಿಸಬಹುದಾಗಿದೆ. ಈ ಗುಣಕ್ಕೆ ಪ್ರಬಂಧಸೂತ್ರ ರಾಹಿತ್ಯವೆನ್ನಬಹುದು.

"Give me a theme"–the little poet cried
"And I will do my part."
"It is not a theme you need" – the world replied
"You need a heart"

ಎಂಬ ಮಾತನ್ನೂ ಇಲ್ಲೇ ಅಂದುಕೊಳ್ಳಬಹುದು. ಕಥನ ಕವನಗಳು ಮಾತ್ರ ಹೆಸರೇ ಸೂಚಿಸುವಂತೆ ಈ ನಿಯಮಕ್ಕೆ ಅಪವಾದ.

ಹೀಗೆ, ಭಾವದ ಮತ್ತು ಗೀತಾತ್ಮಕತೆಯ ಪ್ರಾಧಾನ್ಯವಿರುವುದರಿಂದ ಈ ಯುಗಕ್ಕೆ ಭಾವಗೀತೆಗಳ ಯುಗವೆನ್ನುವುದು ಸಾರ್ಥಕವಾಗುತ್ತದೆ.

ಇನ್ನು ಪ್ರತೀಕಾತ್ಮಕ ಶಬ್ದಪ್ರಯೋಗ ಈ ಯುಗದ ವೈಶಿಷ್ಟ್ಯ. ಮಾತಿಗೆ ಮೂರರ್ಥವೆಂದು ಸಂಸ್ಕೃತ ಲಾಕ್ಷಣಿಕರೇ ಅಂದಿದ್ದಾರೆ. "ಮಾತಿಗು ಮಾತೊಂದಲ್ಲದೆ ಮಿಕ್ಕುದು ತುಸು ಉಂಟು." ಇದನ್ನೇ ಲಕ್ಷಣಾ, ವ್ಯಂಜನಾ ಎನ್ನಲೂಬಹುದು. ಮಾತಿನ ಅರ್ಥ ಸನ್ನಿವೇಶಗತ ಉಪಯೋಗದಿಂದ, ಅಥವಾ ಅದರ ನೆರೆಹೊರೆಯ ಶಬ್ದಗಳ

ಸಾನ್ನಿಧ್ಯದಿಂದ ಉಂಟಾಗುತ್ತದೆ, ಎಂಬ ಏಬರ್ ಕ್ರಾಂಬಿಯವರ ಮಾತಿನ ಅರ್ಥವೂ ಇದೇಯೇ. ವರ್ಷಾಕಾಲದಲ್ಲಿ ನೀರು ಹೆಚ್ಚಿದಾಗ, ನದಿಯು ದಂಡೆಯ ಮೇರೆಯನ್ನು ಮೀರುವಂತೆ, ಭಾವನಾವೇಶದಲ್ಲಿ ಅರ್ಥ ಮಾತಿನ ಆಚೆ ಹರಿಯುತ್ತದೆ. ಕೋಶಗತ ಪದಗಳು ಸಾಲದಾಗಿ ಹೊಸ ಪ್ರತೀಕಗಳನ್ನು ಪ್ರತಿಭೆ ಸೃಷ್ಟಿಸುತ್ತದೆ. ಇಂಥವೇ ಕಾವ್ಯಸೌಂದರ್ಯ ಸಂವರ್ಧಕಗಳು.

ಗೀತಾನಾಟಕಗಳು ಸ್ವಾತಂತ್ರ್ಯದ ತರುವಾಯ ವೃದ್ಧಿಯಾದುವು. ಆದರೂ ಸ್ವಾತಂತ್ರ್ಯಕ್ಕೆ ಮೊದಲೇ ಇದರ ಬೀಜಗಳು ಬಿದ್ದಿದ್ದುವು. ೧೯೪೩ ರಲ್ಲೇ ಕುಮಾರ ವೆಂಕಣ್ಣನವರ 'ಭಾರತ ಶಕ್ತಿ'ಯೂ, ೧೯೪೬ ರಲ್ಲೇ ಕೋಟಾ ಶಿವರಾಮ ಕಾರಂತರ 'ಗೀತಾನಾಟಕ' ಹೊರಬಂದುವು.

ಪಂಜೆ ಮಂಗೇಶರಾಯರಿಂದ ಹಿಂದೆಯೇ ಉದ್ಘಾಟಿಸಲ್ಪಟ್ಟ ಶಿಶುಸಾಹಿತ್ಯ ಕಾವ್ಯರೂಪದಲ್ಲಿ 'ಹೊಯ್ಸಳ', ರಾಜರತ್ನಂ, ದೇವುಡು ನರಸಿಂಹಶಾಸ್ತ್ರಿಗಳು, ದಿನಕರ ದೇಸಾಯಿ ಇವರ ವ್ಯವಸಾಯದಿಂದ ವೃದ್ಧಿಹೊಂದಿದೆ.

೧೯೪೭ಕ್ಕೆ ಮುಂಚೆ ಉದೀಯಮಾನ ಕವಿಗಳಾಗಿ ತಮ್ಮ ಸಂಕಲನಗಳನ್ನು ಹೊರಗೆಡವಿ ಈಗ ಖ್ಯಾತನಾಮ ರಾಗಿರುವವರ ಪೈಕಿ ಈ ಲೇಖಕನಿಗೆ ತಿಳಿದಿರುವ ಕೆಲವರ ಹೆಸರುಗಳು – ಕೆ. ಎಸ್. ನರಸಿಂಹಸ್ವಾಮಿ, ಆರ್. ಎಸ್. ಮುಗಳಿ, ಪ್ರಹ್ಲಾದ ಬಂಡೇರಾವ್ ನರಗಲ್ಲ; ಶೇಷಗಿರಿರಾವ್ ಕುಲಕರ್ಣಿ 'ಗೀತಾಪ್ರಿಯ'; ವಿ. ಜಿ. ಭಟ್ಟ; ಗೋಪಾಲಕೃಷ್ಣ ಅಡಿಗ.

೧೯೪೭ರ ಸ್ವಾತಂತ್ರ್ಯನಂತರ ಒಂದೆರಡು ವರ್ಷಗಳಲ್ಲಿ ಕನ್ನಡ ಕಾವ್ಯದ ಕೈದೋಟದಲ್ಲಿ ರಂಗು-ರಂಗಿನ ಹೂಗಳರಳಿದುವು. ಗಂಗಪ್ಪ, ವೀರಪ್ಪ ವಾಲಿ, ಡಿ. ಎಸ್. ಕರ್ಕಿ, ಎನ್. ಅನಂತನಾರಾಯಣ, ಕಸ್ತೂರಿ ನಾರಾಯಣ, ಸೇಡಿಯಾಪು ಕೃಷ್ಣಭಟ್ಟ, ಚಿದಂಬರ ದೀಕ್ಷಿತ, "ಚಿದಂಬರಾನಂದ" "ದೇವದತ್ತ", ದಿನಕರ ದೇಶಾಯಿ, ಸಿಂಪಿ ಲಿಂಗಣ್ಣ, ಅರ್ಚಕ ವೆಂಕಟೇಶ ಇವು ಕೆಲವರ ಹೆಸರುಗಳು.

ಈಗಲೂ ಬಹಳ ಹಿರಿಯರಲ್ಲಿ ಕೆಲವರು, ಹಿರಿಯರಲ್ಲಿ ಎಲ್ಲರೂ, ಕಿರಿಯರ ಜೊತೆಗೂಡಿ ಬರೆಯುತ್ತಲೇ ಇದ್ದಾರೆ. ಕವಿಗೋಷ್ಠಿಗಳಲ್ಲಿ ಹಿರಿಯ ಕವಿಗಳು ಕಿರಿಯರನ್ನು ಆಶೀರ್ವದಿಸುತ್ತಲೇ ಇದ್ದಾರೆ. ಸ್ವಾತಂತ್ರ್ಯೋದಯದನಂತರ ಕನ್ನಡ ಕವಿತೆಯ ಭವಿಷ್ಯವು ಭವ್ಯವಾಗಿದೆ ಎಂಬುದಕ್ಕೆ ಇದು ಸೂಚಕ.



ಶ್ರೀ ದೇವುಡು ನರಸಿಂಹಶಾಸ್ತ್ರಿಗಳು

# ಸ್ವಾತಂತ್ರ್ಯ ಪೂರ್ವ ಕನ್ನಡ ಕಾದಂಬರಿ

**ಲೇಖಕರು : ಶ್ರೀ ಎಲ್. ಎಸ್. ಶೇಷಗಿರಿರಾವ್**

ಸಾಮಾನ್ಯ ಜನದ ಜೀವನದಲ್ಲಿ ಆಸಕ್ತಿ, ತಕ್ಕಷ್ಟು ಬೆಳೆದು ಸರಳತೆ ವೈವಿಧ್ಯಗಳನ್ನು ಸಾಧಿಸಿದ ಗದ್ಯ–ಇವೆರಡನ್ನು ಕಂಡ ಯುಗ ಕಾದಂಬರಿಯ ಜನ್ಮವನ್ನೂ ಕಾಣುತ್ತದೆ.* ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಪ್ರಾರಂಭವಾಗಿ ಈ ಶತಮಾನದ ಎರಡನೆಯ ದಶಕದಲ್ಲಿ ಕೊನೆಗೊಂಡ ಅವಧಿ ಕನ್ನಡ ಸಾಹಿತ್ಯದಲ್ಲಿ ಹೊಸ ಯುಗದ ಪ್ರಾರಂಭಕ್ಕೆ ಸಿದ್ಧತೆ ಮಾಡಿದ ಕಾಲ. ದೇಶದಲ್ಲಿ ರಾಜರಾಂ ಮೋಹನರಾಯ್ ಮೊದಲಾದ ಸಮಾಜ ಸುಧಾರಕರ ಪ್ರಭಾವ, ಸಾತಂತ್ರ್ಯದ ಬಯಕೆ ಮೊಳಕೆಯಿಟ್ಟುದು, ಇವುಗಳೊಂದಿಗೆ ಪಾಶ್ಚಾತ್ಯ ನ್ಯಾಯಶಾಸ್ತ್ರ, ಆಡಳಿತದ ಪದ್ಧತಿ, ಸಾಹಿತ್ಯ ಇವುಗಳ ಪರಿಚಯ—ಇವೆಲ್ಲ ಸೇರಿ ಸಾಮಾನ್ಯ ಜನದ ಜೀವನಕ್ಕೂ ಸಾಹಿತ್ಯದಲ್ಲಿ ಮತ್ತೆ ಆಸಕ್ತಿಯುಂಟಾಯಿತು. ಕೆಂಪುನಾರಾಯಣನ 'ಮುದ್ರಾಮಂಜೂಷ' ಕಾದಂಬರಿಗೆ ಹೊಂದುವಂತಹ ಶೈಲಿಯ ಸಿದ್ಧತೆಯಲ್ಲಿ ಒಂದು ಗಮನಾರ್ಹ ಸಾಧನೆ; ಇಲ್ಲಿ ಭಾಷೆ ಸರಳವಾಗಿ, ನಿತ್ಯಜೀವನಕ್ಕೆ ಹತ್ತಿರವಾಗ ತೊಡಗಿದೆ. ೧೯ ನೆ ಶತಮಾನದ (೧೮೯೯) ಕನ್ನಡ ಪ್ರಥಮ ಕಾದಂಬರಿ, 'ಇಂದಿರಾಬಾಯಿ' ಪ್ರಕಟವಾಯಿತು. ಇದರ ಮತ್ತೊಂದು ಹೆಸರು 'ಸದ್ಧರ್ಮ ವಿಜಯವು'. "ಸತ್ಯತೆ, ಹೃದಯ ನಿರ್ಮಲತೆ ಇವೆರಡು ಸಾಧನಗಳೇ ನಮಗೆ ಇಹಪರಗಳಲ್ಲಿಯೂ ಸಾರ್ಥಕವಾಗಿವೆ. ಇವುಗಳನ್ನು ಬಿಟ್ಟು ಸರ್ವಪ್ರಯತ್ನಗಳೂ ನಿರರ್ಥಕವೇ. ಇದನ್ನು ಸಾದೃಶ್ಯಗೊಳಿಸುವುದೇ ಈ ಪುಸ್ತಕದ ಉದ್ದೇಶವು" ಎಂದು ಗ್ರಂಥಕರ್ತರಾದ ಗುಲವಾಡಿ ವೆಂಕಟರಾಯರು ಪೀಠಿಕೆಯಲ್ಲಿ ಹೇಳಿದ್ದಾರೆ. ಆದುದರಿಂದ ಕೃತಿಯಲ್ಲಿ ಕಲೆ ಹಿಂದುಳಿದಿರುವುದು ಆಶ್ಚರ್ಯಕರವಲ್ಲ. ಆದರೆ ಸಾಮಾಜಿಕ ಜೀವನವನ್ನು ಈ ಕಾದಂಬರಿಗೆ ವಸ್ತುವನ್ನಾಗಿ ಆರಿಸಿಕೊಂಡಿರುವುದು, ನೀತಿಬೋಧೆಯ ಜೊತೆಗೆ ಸಮಾಜ ಸುಧಾರಣೆಯ ತನಕ ಬೆರೆತಿರುವುದು ಗಮನಾರ್ಹ. ಇದಾದ ಆರು ವರ್ಷಗಳ ನಂತರ ಬೋಳಾರ ಬಾಬುರಾಯರ 'ವಾಗ್ದೇವಿ' ಪ್ರಕಟವಾಯಿತು.

ಕೆಂಪುನಾರಾಯಣ, ಗುಲವಾಡಿ, ಬೋಳಾರರು, ಕೆರೂರು ವಾಸುದೇವಾಚಾರ್ಯರು ಇವರೆಲ್ಲ ಕಾದಂಬರೀ ರಾಜ್ಯದ ಎಲ್ಲೆಗೆ ಬಂದವರು. ಹೊರಗಿನ ಸಹಾಯದಿಂದ ಆ ಕ್ಷೇತ್ರವನ್ನು ಪ್ರವೇಶಿಸಿದವರು ವೆಂಕಟಾಚಾರ್ಯರು, ಗಳಗನಾಥರು. ಸ್ವತಂತ್ರವಾಗಿ ಪ್ರವೇಶಿಸಿದವರು ಎಂ. ಎಸ್. ಪುಟ್ಟಣ್ಣನವರು. ವೆಂಕಟಾಚಾರ್ಯರಿಗೂ ಗಳಗನಾಥರಿಗೂ ಹೊರಗಿನ ಸಾಹಿತ್ಯಗಳು ಪ್ರೇರಕ ಶಕ್ತಿಗಳಾದುವು. ಇಂಗ್ಲಿಷಿನ ಪ್ರಖ್ಯಾತ ಚಾರಿತ್ರಿಕ ಕಾದಂಬರಿಕಾರ ಸ್ಕಾಟ್‌ನ ಪ್ರಭಾವ, ಬಂಗಾಳಿಯಲ್ಲಿ ಬಂಕಿಂಚಂದ್ರರೂ ಮರಾಠಿಯಲ್ಲಿ ಹರಿನಾರಾಯಣ ಆಪ್ಟೆಯವರೂ ಕಾದಂಬರಿಗಳನ್ನು ರಚಿಸಲು ಮೂಲ ಶಕ್ತಿಯಾಯಿತು. ಇವರು ಕನ್ನಡದಲ್ಲಿ ವೆಂಕಟಾಚಾರ್ಯರಿಗೂ ಗಳಗನಾಥರಿಗೂ ಸ್ಫೂರ್ತಿ ಇತ್ತವರು. ಬಂಕಿಮರು ಬಂಗಾಳಿ ಸಾಹಿತ್ಯದಲ್ಲಿಯೇ ಹೊಸದೊಂದು ಯುಗವನ್ನು ಪ್ರಾರಂಭಿಸಿದವರು. ಅವರ ಕಥನ ಕಲೆ ಅಂದಿನ ಓದುಗರಿಗೆ ಹೊಸದೊಂದು ಗಣಿಯನ್ನು ಕಂಡಂತೆ ಸಂಭ್ರಮವನ್ನುಂಟುಮಾಡಿತು. ಅವರ ದೇಶಪ್ರೇಮ, ಗತಕಾಲದ ರಂಜಕ ನಿರೂಪಣೆ, ಸ್ವಾರ್ಥತ್ಯಾಗವೇ ಸಾರ್ಥಕಜೀವನದ ಅಡಿಗಲ್ಲು ಎನ್ನುವ ಜೀವನತತ್ವ ಇವು, ಸಂಸ್ಕೃತವನ್ನು ಬಹುಮಟ್ಟಿಗೆ ನೆಚ್ಚಿದ ವೆಂಕಟಾಚಾರ್ಯರ ಶೈಲಿಯಲ್ಲಿಯೂ ಕನ್ನಡ ಓದುಗರ ಮನಸ್ಸನ್ನು ಸೆಳೆದುವು. ಗಳಗನಾಥರ ಸರಳ ಶೈಲಿ ಆಪ್ಟೆಯವರ ಕೃತಿಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟಿತು.

ಪುಟ್ಟಣ್ಣನವರು ಕನ್ನಡ ಕಾದಂಬರೀ ಕ್ಷೇತ್ರದಲ್ಲಿ ವಿಶಿಷ್ಟ ರೀತಿಯ ವ್ಯಕ್ತಿ. ಅವರ ಸಾಧನೆ ಅಸಾಧಾರಣವಾದುದು. ಆದರೆ ಅವರಿಗೆ ತಕ್ಕಷ್ಟು ಜನಪ್ರಿಯತೆ ದೊರೆಯದಿದ್ದುದು ಆಶ್ಚರ್ಯ. ಅವರ ಕೃತಿಗಳು ದೋಷರಹಿತವೆಂದಲ್ಲ.

---

* ಪದ್ಯದಲ್ಲಿ ರಚಿತವಾದ ಕಾದಂಬರಿಯೊಂದರ ಭಾಗಗಳು–ಪ್ರಾಯಶಃ ೧೭ ನೆ ಶತಮಾನಕ್ಕೂ ಹಿಂದಿನದು—ರಷ್ಯನ್ ಸಾಹಿತ್ಯದಲ್ಲಿ ದೊರಕುತ್ತವೆ. ಆದರೆ ಸಾಮಾನ್ಯವಾಗಿ ಕಾದಂಬರಿಗೆ ಗದ್ಯವೇ ಮಾಧ್ಯಮ.

ಅವರ ಕಾದಂಬರಿಗಳಲ್ಲಿಯೂ ಅತಿ ಆದರ್ಶತ್ವ ತನ್ನ ನೆರಳನ್ನು ಚಾಚದೆ ಇಲ್ಲ. ಆದರೆ "ಮಾಡಿದ್ದುಣ್ಣೋ ಮಹಾರಾಯ" (೧೯೧೫) ದಂತಹ ಕೃತಿಯಲ್ಲಿ ಜನಜೀವನವನ್ನು ವಾಸ್ತವಿಕವಾಗಿ ನಿರೂಪಿಸುವುದರಲ್ಲಿ ಅವರು ಸಾಧಿಸಿದ ಯಶಸ್ಸು-ಅದರಲ್ಲಿಯೂ ಅವರು ಕೃತಿರಚನೆ ಮಾಡಿದ ಕಾಲವನ್ನು ನೆನೆದರೆ-ಆಶ್ಚರ್ಯವಾಗುತ್ತದೆ. ತಮ್ಮ ಸುತ್ತಮುತ್ತಲಿನ ಜೀವನದ ಹಾಸು ಹೊಕ್ಕುಗಳನ್ನು ಸ್ಪಷ್ಟವಾಗಿ ಚಿತ್ರಿಸಬಲ್ಲವರು ಅವರು. ವೆಂಕಟಾಚಾರ್ಯರ ಶೈಲಿಗಿಂತ ಸರಳವೂ ಸಹಜವೂ, ಗಳಗನಾಥರ ಶೈಲಿಗಿಂತ ಸತ್ವಯುತವೂ ಹರಿತವೂ ತೇಜಸ್ಸುಳ್ಳದ್ದೂ ಆದ ಶೈಲಿ ಅವರದು. ಉಪದೇಶ ಮಾಡುವ ಬಯಕೆಯನ್ನು ತಕ್ಕಷ್ಟು ತಡೆಹಿಡಿದಿದ್ದಾರೆ. ಅರಸನ ಆಸ್ಥಾನದಿಂದ ಹಿಡಿದು ಕಳ್ಳಕಾಕರು, ಫಟಿಂಗ ಲಂಪಟರ ಕ್ಷೇತ್ರದವರೆಗೆ ಜೀವನದ ವೈವಿಧ್ಯವನ್ನು ಸತ್ವಯುತವಾಗಿ ಪ್ರತಿಬಿಂಬಿಸಿದವರು ಅವರು. ಇಷ್ಟಾದರೂ ಅವರಿಗೆ ತಕ್ಕ ಕೀರ್ತಿ ದೊರೆಯಲಿಲ್ಲ, ಅನಂತರದ ಬರಹಗಾರರ ಮೇಲೆ ಅವರ ಪ್ರಭಾವವೂ ಹೆಚ್ಚಾಗಲಿಲ್ಲ.

ಕಾದಂಬರಿಗಳ ಸಂಖ್ಯೆ ಮೊಲದ ಸಂತತಿಯಂತೆ ಬೆಳೆಯುವ ಈ ಕಾಲದಲ್ಲಿ ೧೯೪೭ ರ ವರೆಗೆ ಬಂದ ಸ್ವತಂತ್ರ ಕಾದಂಬರಿಗಳ ಸಂಖ್ಯೆ ಎಷ್ಟು ಮಿತವಾದುದೆಂಬುದನ್ನು ನೆನೆಸಿಕೊಂಡರೆ ಆಶ್ಚರ್ಯವಾಗುತ್ತದೆ. ೧೯೨೦ ರಿಂದ ೧೯೪೫ ರ ವರೆಗೆ ಒಟ್ಟು ಎಂಭತ್ತು ಕಾದಂಬರಿಗಳು ಬೆಳಕು ಕಂಡುವೆಂದು ಶ್ರೀ ಮುಗಳಿಯವರು ಹೇಳಿದ್ದಾರೆ.* ಆದುದರಿಂದ ಸ್ವಾತಂತ್ರ್ಯಕ್ಕೆ ಪೂರ್ವದಲ್ಲಿ ಕನ್ನಡದಲ್ಲಿ ಸುಮಾರು ಒಂದು ನೂರು ಕಾದಂಬರಿಗಳು ಬೆಳಕು ಕಂಡುವೆನ್ನಬಹುದು. ಇಷ್ಟಾದರೂ ೧೯೨೦ ರಿಂದ ೧೯೪೭ ರ ವರೆಗಿನ ಅವಧಿಯಲ್ಲಿ ಶ್ರೀಗಳಾದ 'ಶ್ರೀನಿವಾಸ', ದೇವುಡು, ಆನಂದಕಂದ, ಅ. ನ. ಕೃ., ಕಾರಂತ್, ಕೆ. ವಿ. ಪುಟ್ಟಪ್ಪ, ಗೋಕಾಕ್, ಕಸ್ತೂರಿ, ಮುಗಳಿ, ಕಡಂಗೋಡ್ಲು ಶಂಕರಭಟ್ಟ ಇವರೆಲ್ಲ ಆಗಲೇ ಖ್ಯಾತ ಕಾದಂಬರಿಕಾರರಾಗಿದ್ದರು. ಶ್ರೀಗಳಾದ ಎಂ. ವಿ. ಸೀತಾರಾಮಯ್ಯ, ಶ್ರೀರಂಗ, ಕಾದಂಬರಿ ಕ್ಷೇತ್ರದಲ್ಲಿ, ಬಸವರಾಜ ಕಟ್ಟೀಮನಿ, ತ. ರಾ. ಸು., ಅನಂತನಾರಾಯಣ, ರಾ. ವೆಂ. ಶ್ರೀನಿವಾಸ, ಮಿರ್ಜಿ ಅಣ್ಣಾರಾಯ, ಇನಾಂದಾರ್, ಕೃಷ್ಣಮೂರ್ತಿ ಪುರಾಣಿಕ, ಇವರೆಲ್ಲರ ಹೆಸರು ಪರಿಚಯವಾಗಲಾರಂಭವಾಗಿತ್ತು. ಪ್ರಾಯಶಃ ಕೃತಿಗಳ ಸಂಖ್ಯೆಯ ಮಿತಿಯೇ ಉತ್ತಮ ಕಾದಂಬರಿಕಾರರ ಖ್ಯಾತಿ ಬೆಳೆಯಲು ಸಹಾಯಕವಾಯಿತು. 'ಮನೋಹರ ಗ್ರಂಥಮಾಲೆ', 'ಶೇಷಾಚಲ ಗ್ರಂಥಮಾಲೆ', 'ವಸಂತ ಗ್ರಂಥಮಾಲೆ' ಮೊದಲಾದುವು ಈ ಅವಧಿಯಲ್ಲಿ ನಿರ್ವಹಿಸಿದ ಪಾತ್ರವೂ ಸ್ಮರಣೀಯವಾದುದು.

೧೯೨೦ ರಿಂದ ೨೭ ವರ್ಷಗಳ ಅವಧಿಯಲ್ಲಿ ಕಾದಂಬರಿ ಕ್ಷೇತ್ರದಲ್ಲಿ ಹಲವು ಪ್ರಯೋಗಗಳು ನಡೆದುವು. ವಸ್ತುವಿನ ಆಯ್ಕೆಯ ದೃಷ್ಟಿಯಿಂದ ನೋಡಿದರೆ, ಕಾದಂಬರಿಯ ವ್ಯಾಪ್ತಿ ಹಿಗ್ಗಿತು. ಸಮಕಾಲೀನ ಸಾಮಾಜಿಕ ಜೀವನವನ್ನು ಅ. ನ. ಕೃ., ಕಾರಂತ್, ಆನಂದಕಂದ ಎಲ್ಲ ಬಳಸಿಕೊಂಡರು. 'ಸುಬ್ಬಣ್ಣ' ಒಳಜೀವನದ ವಿಕಸನವನ್ನು ಚಿತ್ರಿಸಿದರೆ 'ಅಂತರಂಗ' ಮನಸ್ಸಿನ ಹೊಯ್ದಾಟ ಓಟಗಳನ್ನು ಚಿತ್ರಿಸಿತು. ದೇವುಡು ಅವರು 'ಮಯೂರ'ದಲ್ಲಿ ಗತಕಾಲದ ಚರಿತ್ರೆಗೂ 'ಮಹಾಬ್ರಾಹ್ಮಣ'ದಲ್ಲಿ ವೇದಗಳ ಕಾಲದ ಸಂಸ್ಕೃತಿಗೂ ಜೀವಕಳೆ ಇತ್ತರು. ದೃಷ್ಟಿ, ತಂತ್ರಗಳ ವೈವಿಧ್ಯವೂ ವಿಪುಲವಾದುದೇ. 'ಶ್ರೀನಿವಾಸ'ರದು ಅನುಕಂಪ, ಮೆಚ್ಚಿಕೆ ಬೆರೆತ ದೃಷ್ಟಿ 'ಸುಬ್ಬಣ್ಣನಲ್ಲಿ', ಅ. ನ. ಕೃ. ಅವರದು ವಿಚಾರಲಹರಿ ವಾಸ್ತವಿಕವಾದರೂ ಪಾತ್ರನಿರೂಪಣೆಯಲ್ಲಿ ಆದರ್ಶತ್ವದ ಪ್ರವೃತ್ತಿ. ಕಾರಂತರು ಕಸ್ತೂರಿ ಬೇರೆಬೇರೆ ಬಗೆಗಳ ವಿಡಂಬನೆಯ ಅಸ್ತ್ರಗಳನ್ನು ಕಾದಂಬರಿಕಾರನ ಬತ್ತಳಿಕೆಗೆ ಸೇರಿಸಿದರು. ಮೂರ್ಖತನವನ್ನು ಕತ್ತರಿಸುವ ವಿಡಂಬನೆ ಕಾರಂತರದು, ನಗಲು ಅವಕಾಶವನ್ನುಂಟುಮಾಡಲು ಮೂರ್ಖರಿದ್ದಾರಲ್ಲ ಎಂಬ ಔದಾರ್ಯದ ವಿಡಂಬನೆ ಕಸ್ತೂರಿಯವರದು. ಪ್ರಾದೇಶಿಕ ಜೀವನವನ್ನು ಚಿತ್ರಿಸಿದರೂ ಅದರ ತಿರುಳಾಗಿ ಒಂದು ಭವ್ಯ ದರ್ಶನವಿತ್ತರು ಕಾರಂತರು 'ಮರಳಿ ಮಣ್ಣಿಗೆ' ಯಲ್ಲಿ, ಪುಟ್ಟಪ್ಪನವರು 'ಕಾನೂರು ಸುಬ್ಬಮ್ಮ ಹೆಗ್ಗಡಿತಿ'ಯಲ್ಲಿ. 'ಬೆಟ್ಟದ ಜೀವ' (ಕಾರಂತ್) ದಲ್ಲಿ ಕಾದಂಬರಿಕಾರ ತಾನು ಚಿತ್ರಿಸುವ ಜಗತ್ತಿನ ಭಾಗವಾಗುತ್ತಾನೆ, 'ಮರಳಿ ಮಣ್ಣಿಗೆ'ಯಲ್ಲಿ ಮೇಲೆ ನಿಂತು ಜೀವನವಿಧಿಯ ಗಮನವನ್ನು ಗುರುತಿಸುತ್ತಾನೆ. 'ಮರಳಿ ಮಣ್ಣಿಗೆ', 'ಕಾನೂರು ಸುಬ್ಬಮ್ಮ' ಎರಡರಲ್ಲಿಯೂ ಪ್ರಕೃತಿ ಮನುಷ್ಯನ ಬಾಳಿಗೆ ಆವರಣವಾಗಿ ನಿಂತಿದೆ-ಬೇರೆ ಬೇರೆ ರೀತಿಗಳಲ್ಲಿ. 'ಚಕ್ರದೃಷ್ಟಿ' (ಕಸ್ತೂರಿ) ಒಂದು ವ್ಯಕ್ತಿಯನ್ನು ಹಲವರ ದೃಷ್ಟಿಯಿಂದ ನಿರೂಪಿಸುತ್ತದೆ. ಗದ್ಯ ಶೈಲಿಯೂ ಈ ಅವಧಿಯಲ್ಲಿ ವೈವಿಧ್ಯವನ್ನು ಪಡೆಯಿತು. ಕಾರಂತರದು ನಿರಾಡಂಬರವಾದ, ಹರಿತವಾದ, ಸ್ಪಷ್ಟವಾದ ಶೈಲಿ. ಅದರಲ್ಲಿ ಲಾಸ್ಯವಿಲ್ಲ, ಆದರೆ ಶಕ್ತಿಯುಂಟು. ಅವರ ಶೈಲಿ ಪುಟ್ಟಣ್ಣನವರ

---

*'ಕನ್ನಡ ಕಾದಂಬರಿಗಳು' (೧೯೪೫).

ಶೈಲಿಯನ್ನು ನೆನಪಿಗೆ ತರುತ್ತದೆ. ಇನಾಂದಾರರದು ನೇರವಾಗಿ ಗುರಿಯನ್ನು ಮುಟ್ಟುವ ಶೈಲಿ, ಆದರೆ ಅದರಲ್ಲಿ ಉಪ್ಪೇಕ್ಷಿತ ಕಲೆಯುಂಟು. ಗೋಕಾಕರದು ಕನ್ನಡದ ಜಾಯಮಾನದ ದಂಡೆಗಳ ಮಧ್ಯೆ ಹರಿಯುವ ವಿದ್ವತ್ತಿನ ಶೈಲಿ. ಕಸ್ತೂರಿಯವರು ಜನಸಾಮಾನ್ಯದ ಬಳಕೆಯ ಭಾಷೆಯಲ್ಲಿ ಹಾಸ್ಯದ ಮಿಂಚನ್ನು ಹರಿಸಿ ಬೆಳಗುತ್ತಾರೆ. ದೇವುಡು ಅವರ ಭಾಷೆಯಲ್ಲಿ ಆಳವಾದ ಪಾಂಡಿತ್ಯದ ಗಣಿ ಅಡಗಿದೆ. ಅದಕ್ಕೆ ಕಾಂತಿಯುಂಟು. ಪ್ರೌಢಿಮೆಯುಂಟು, ಆದರೆ ಅಸಹಜತೆ ಆಡಂಬರಗಳಿಲ್ಲ. ಪುಟ್ಟಪ್ಪನವರದು ಕಾವ್ಯಮಯವಾದ, ಚಿತ್ರಗಳಿಂದ ತುಂಬಿದ ಶೈಲಿ. ಅ. ನ. ಕೃ. ಹುಟ್ಟು ಬರಹಗಾರರು. ಒಂದು ರೀತಿಯಿಂದ ಇದು ದುರದೃಷ್ಟಕರವೂ ಹೌದು. 'ಉದಯರಾಗ', 'ಸಂಧ್ಯಾರಾಗ', 'ಮಂಗಳಸೂತ್ರ'ಗಳಲ್ಲಿ ಕತೆಯ ಪ್ರಭುವಿಗೆ ಸಾರಥಿಯಾದ ಶೈಲಿ ಬರುಬರುತ್ತ ತಾನೇ ರಥದ ಸ್ವಾಮ್ಯವನ್ನು ನಡೆಸುವಂತಾಯಿತು. ಏನೇ ಆಗಲಿ, ಅ. ನ. ಕೃ. ಅವರ ಭಾಷೆಯ ತೇಜಸ್ಸು, ಲಾಲಿತ್ಯ, ತರ್ಕ-ಭಾವಗಳೆರಡಕ್ಕೂ ಹೊಂದಿಕೊಳ್ಳಬಲ್ಲ ಶಕ್ತಿ ಇವು ಅಪೂರ್ವವಾದುವು.

ಇಷ್ಟು ವೈವಿಧ್ಯವನ್ನು, ಶ್ರೀಮಂತಿಕೆಯನ್ನು ಸಾಧಿಸಿದ ಸಾಹಿತ್ಯರೂಪ ಜನಪ್ರಿಯತೆಯನ್ನೂ ಗಳಿಸಿದುದು ಆಶ್ಚರ್ಯವೇನಲ್ಲ. ಈ ಅವಧಿಯಲ್ಲಿ ಕಾದಂಬರಿ ನಾಟಕಕ್ಕಿಂತ ಹೆಚ್ಚಾಗಿ ಸಣ್ಣ ಕಥೆಯಷ್ಟು ಜನಪ್ರಿಯತೆಯನ್ನು ಗಳಿಸಿತು. ಈ ಕಾಲದಲ್ಲಿ ಬಂದ ಭಾಷಾಂತರ, ಅನುವಾದಗಳ, ಸಂಖ್ಯೆ ಮಾತ್ರ ನಾವು ನಿರೀಕ್ಷಿಸಬಹುದಾದಷ್ಟು ಇಲ್ಲ. ಬಂಕಿಂ, ಹರಿನಾರಾಯಣ ಆಪ್ಟೆಯವರ ಕೃತಿಗಳನಂತರ ರವೀಂದ್ರನಾಥ ಠಾಕೂರ್, ಶರತ್‌ಚಂದ್ರ, ಪ್ರೇಮಚಂದ್ರ, ಮೊದಲಾದವರ ಕೆಲವು ಕೃತಿಗಳು ಕನ್ನಡದ ಉಡುಪು ತೊಟ್ಟವು. ಭಾರತದ ಹೊರಗಿನ ಸಾಹಿತ್ಯಗಳಿಂದ ಕನ್ನಡದಲ್ಲಿ ನೈತಾಳಿದ ಕೃತಿಗಳ ಸಂಖೆ ಕಡಿಮೆಯೆ.

ಚಾರಿತ್ರಿಕ ದೃಷ್ಟಿಯಿಂದ ಮಹತ್ವಪೂರ್ಣವಾದ ಈ ಅವಧಿ ಸಾಹಿತ್ಯದ ದೃಷ್ಟಿಯಿಂದಲೂ ಮಹತ್ವಪೂರ್ಣವಾದ ಕೃತಿಗಳನ್ನು ಸೃಷ್ಟಿಸಿತು. ಕೃತಿಕಾರನ ಉದ್ದೇಶಗಳು, ಅಭಿಪ್ರಾಯಗಳು ಇವೆಲ್ಲ ಎಷ್ಟೇ ಘನವಾಗಿರಲಿ, ರೋಮಾಂಚಕಾರಿಯಾಗಿರಲಿ, ಕೃತಿಯ ಕಲೆ, ಅದು ಒದಗಿಸುವ ರಸಾತ್ಮಕ ಅನುಭವ-ಇವು ಸಾಹಿತ್ಯವಾಗಿ ಅದು ಗಳಿಸಿರುವ ಬೆಲೆಯನ್ನು ನಿರ್ಧರಿಸುತ್ತವೆ ಎನ್ನುವ ದೃಷ್ಟಿಯಿಂದ ಈ ಕಾಲಮಾನವನ್ನು ಅಭ್ಯಾಸ ಮಾಡಿದರೂ ನಾವು ನಿರಾಶರಾಗಬೇಕಾಗಿಲ್ಲ. ಈ ಅವಧಿಯಲ್ಲಿ ಬಂದ ಒಟ್ಟು ಸ್ವತಂತ್ರ ಕಾದಂಬರಿಗಳೊಂದಿಗೆ ಸತ್ಯಪೂರ್ಣವಾದ ಕೃತಿಗಳ ಸಂಖ್ಯೆಯನ್ನು ಹೋಲಿಸಿದರೆ ಸಂತೋಷವೇ ಆಗುತ್ತದೆ. ಈ ಅವಧಿಯಲ್ಲಿ ಅ. ನ. ಕೃ., ಕಾರಂತ್ ಇಬ್ಬರೂ 'ಸಂಸ್ಥೆ' (Institutions) ಗಳಾಗಿಹೋದರು. ಅ. ನ. ಕೃ. ಸರಳವಾದ ಪಾತ್ರಗಳ ನಿರೂಪಣೆ, ಇಬ್ಬರು-ಮೂವರು ಪಾತ್ರಗಳಿಂದ ಕೂಡಿದ ಹೃದಯಸ್ಪರ್ಶಿ ಸನ್ನಿವೇಶ-ಇವುಗಳ ನಿರ್ವಹಣೆಯಲ್ಲಿ ಅದ್ವಿತೀಯರು. ಪಾತ್ರಗಳು ಒಂದೆರಡು ಗುಣಗಳ ಮೂರ್ತಿಸ್ವರೂಪರಾಗುತ್ತಾರೆ. ಸೌಜನ್ಯ, ಸ್ವಾರ್ಥತ್ಯಾಗ, ಕರ್ತವ್ಯನಿಷ್ಠೆ ಇಂತಹ ಗುಣಗಳ ವಿಗ್ರಹಗಳಾಗುತ್ತಾರೆ. ಆಗಾಗ ಅವರ ನಿರೂಪಣೆಯಲ್ಲಿ ಭಾವದ ಅತಿರೇಕವೂ ಕಾಣಬರುವುದುಂಟು. ಅವರ ಯಶಸ್ವಿ ಪಾತ್ರಗಳಿರುವುದಕ್ಕಿಂತ ಪುಟ್ಟಣ್ಣನವರ ಪಾತ್ರಗಳಿಗೆ ಹೆಚ್ಚು ಜಟಿಲತೆಯುಂಟು ಎನ್ನಬಹುದು. ಆದರೂ ಸರಳವಾದ ಪಾತ್ರಗಳು, ಆಳವಾದ ಭಾವಗಳನ್ನು ಕಲಕುವ ಸನ್ನಿವೇಶಗಳು-ಇವು ಅವರ ಶೈಲಿಯೊಡನೆ ಸೇರಿ ಓದುಗರನ್ನು ಸೆರೆಹಿಡಿಯುತ್ತವೆ. 'ಜೀವನಯಾತ್ರೆ' (೧೯೩೪) ಅವರ ಮೊದಲನೆ ಕಾದಂಬರಿಯಾದರೂ 'ಉದಯರಾಗ' ದಿಂದ (೧೯೩೪) ಓದುಗರ ಗಮನವನ್ನು ಸೆಳೆದು 'ಸಂಧ್ಯಾರಾಗ' ದಿಂದ (೧೯೩೮) ಕನ್ನಡ ಕಾದಂಬರೀ ಜಗತ್ತಿನಲ್ಲಿ ಹಿರಿಯ ಸ್ಥಾನವನ್ನು ಗಳಿಸಿದರು. ಅವರ 'ಹೊಸಲು ದಾಟಿದ ಹೆಣ್ಣು' (೧೯೪೭) ಭಾವಾತಿರೇಕಕ್ಕೆ ಇತರ ಕೃತಿಗಳಷ್ಟು ಅವಕಾಶ ನೀಡದೆಂದೇ ಗಮನಾರ್ಹವಾದ ಕೃತಿಯಾಗಿದೆ. ಒಂದೊಂದು ಕೃತಿಯೂ ಒಂದೊಂದು ಶಿಖರವೆನ್ನುವಂತಹ ಹಲವು ಕೃತಿಗಳನ್ನಿತ್ತರು ಕಾರಂತರು. 'ದೇವದೂತರು' ನಾವೀನ್ಯತೆ, ತೀಕ್ಷ್ಣತೆಗಳಿಂದ ಮನಸ್ಸು ಸೆಳೆಯುವಂತಹುದೆಂದರೂ, 'ಚೋಮನ ದುಡಿ' ಕಲಾತ್ಮಕವಾಗಿ ಸಹ ಮೆಚ್ಚುವಂತಹ ಕೃತಿ. ತೀಕ್ಷ್ಣತೆಯೊಡನೆ ಸಂಯಮ ಬೆರೆತ ನಿರೂಪಣೆ, ದುರಂತಕ್ಕೆ ಪೋಷಕವಾದ ಆವರಣ ಇವು ಕನ್ನಡ ಕಾದಂಬರಿಯಲ್ಲಿ ಹೊಸತು, ಮಾತ್ರವಲ್ಲ, ಕೃತಿಗೆ ಕಲಾದೃಷ್ಟಿಯಿಂದ ಬೆಲೆಯನ್ನೀಯಬಲ್ಲವು. 'ಮರಳಿ ಮಣ್ಣಿಗೆ' ಟಾಲ್‌ಸ್ಟಾಯ್ ಕೃತಿಗಳ ಭವ್ಯತೆಯನ್ನು ಸರಿಗಟ್ಟಬಲ್ಲದು. ಮೂರು ಪೀಳಿಗೆಗಳ ಜೀವನ ನಮ್ಮ ಕಣ್ಣಮುಂದೆ ಸಾಗುತ್ತದೆ, ತಾನೇ ಸಹಜವಾಗಿ ಪದರಪದರವಾಗಿ ಚಿತ್ರ ಬಿಚ್ಚಿಕೊಳ್ಳುತ್ತದೆ ಎನ್ನುವಷ್ಟು ಸಹಜವಾಗಿದೆ ಕಥೆಯ ಓಟ; ಆದರೆ ಪ್ರತಿ ಪೀಳಿಗೆಯ ಸಮಸ್ಯೆಗಳು, ಪೀಳಿಗೆ-ಪೀಳಿಗೆಯ ಸಂಬಂಧ, ಇವು ಸ್ಫುಟವಾಗುತ್ತ ಹೋಗುತ್ತವೆ. ಪ್ರಕೃತಿ ಇಲ್ಲಿ ಒಂದು ಶಕ್ತಿಯಾಗಿದೆ, ಜೀವಂತ ಆವರಣವಾಗಿದೆ. ಯಾವ ಸಾಹಿತ್ಯದಲ್ಲಾದರೂ ಸ್ಥಾನ

ಪಡೆಯಬಲ್ಲ ಮಹಾಕೃತಿ 'ಮರಳಿ ಮಣ್ಣಿಗೆ'. 'ಚಿಟ್ಟದ ಜೀವ' ಒಂದು ಚೇತನದ ಚಿತ್ರ. ಆ ಚೇತನದ ಹಿನ್ನೆಲೆಯಾಗಿ, ಅದರ ಸತ್ವದ ಪ್ರತಿಬಿಂಬವಾಗಿ ನಿಂತಿದೆ ಪ್ರಕೃತಿ ಇಲ್ಲಿ. 'ಶ್ರೀನಿವಾಸ'ರ ಸುಬ್ಬಣ್ಣ ಒಂದು ಚಿನ್ನದ ಗಟ್ಟಿ. ಇದೊಂದು ದೀರ್ಘ ಸಣ್ಣಕಥೆ ಎನ್ನುವ ಮಟ್ಟಿಗೆ ಕೇಂದ್ರೀಕರಣ ಸಾಧಿತವಾಗಿದೆ. ಪರಿಪಕ್ವತೆಯೆಡೆಗೆ ಸಾಗುವ ಚೇತನವೊಂದರ ಪಯಣದ ಘಟ್ಟ ಘಟ್ಟ ನಿರ್ದಿಷ್ಟವಾಗಿ, ಅರ್ಥಪೂರ್ಣವಾಗಿ ಚಿತ್ರಿತವಾಗುತ್ತದೆ ಇಲ್ಲಿ. ದೇವುಡು ಅವರ 'ಮಹಾಬ್ರಾಹ್ಮಣ' ಸಂಸ್ಕಾರ, ಕಲ್ಪನೆಗಳೊಡನೆ ಪಾಂಡಿತ್ಯ ಬೆರೆತರೆ ಎಂತಹ ತೇಜಸ್ಸನ್ನು ಪಡೆಯ ಬಲ್ಲುದೆಂಬುದಕ್ಕೆ ಸಾಕ್ಷಿ; ಇಲ್ಲಿ ದೇವುಡು ಶತಮಾನಗಳ ಹಿಂದಿನ ಜಗತ್ತನ್ನು ಮತ್ತೆ ಸೃಷ್ಟಿಸಿದ್ದಾರೆ, ಅಷ್ಟೇ ಅಲ್ಲ, ಗಗನ ಸಾಗರ ಪರ್ವತಗಳಿಗೆ ಸಮನಾದ ವ್ಯಕ್ತಿಗಳ ಸನಿಹಕ್ಕೆ ನಮ್ಮನ್ನು ಕೊಂಡೊಯ್ದು ಭವ್ಯತೆ ಒಂದು ಗಳಿಗೆಯಾದರೂ ನಮ್ಮ ನಾಡಿಗಳಲ್ಲಿ ಸಂಚರಿಸುವಂತೆ ಮಾಡುತ್ತಾರೆ. ಭೀಮಶಕ್ತಿಗಳ ಮಹಾಘರ್ಷಣೆಯ ಚಿತ್ರದ ವೀಕ್ಷಣೆಯೇ ಒಂದು ಅಪೂರ್ವ ಅನುಭವ. 'ಕಾನೂರು ಸುಬ್ಬಮ್ಮ ಹೆಗ್ಗಡಿತಿ'ಯಲ್ಲಿ ಕವಿಚೇತನ ಒಂದರ ಆದರ್ಶ ದರ್ಶನ, ಸಮರಸದ ಸಿದ್ಧಿ ಮಲೆನಾಡಿನ ಆವರಣದಲ್ಲಿ ಮೂರ್ತಿ ತಾಳುತ್ತದೆ. ಇಲ್ಲಿನ ಪ್ರತಿ ವ್ಯಕ್ತಿಯೂ ಜೀವಂತವಾಗಿದೆ, ಈ ಜಗತ್ತಿನ ವೈವಿಧ್ಯವನ್ನೂ ಸ್ಪಷ್ಟತೆಯನ್ನೂ ಹೆಚ್ಚಿಸುವ ಭಾಗವಾಗುತ್ತದೆ. ಹೂವಯ್ಯ ಸ್ವಲ್ಪ ಅವಾಸ್ತವಿಕನಾಗುತ್ತನೆ, ಆದರೆ ಉಳಿದೆಲ್ಲ ಪಾತ್ರಗಳೂ ವಾಸ್ತವಿಕತೆಯನ್ನು ಸಾಧಿಸಿವೆ, ತಮ್ಮ ಆವರಣಕ್ಕೆ ವಿಶಿಷ್ಟ ಪ್ರತಿಕ್ರಿಯೆಯನ್ನು ತೋರುತ್ತವೆ. "ಮರಳಿ ಮಣ್ಣಿಗೆ"ಯಷ್ಟೇ ಕೃತಕೃತ್ರವಾಗಿದೆ "ಕಾನೂರು ಸುಬ್ಬಮ್ಮ" ಪ್ರಾದೇಶಿಕತೆಗೆ ಜೀವಮೂಡಿಸುವುದರಲ್ಲಿ. 'ಶ್ರೀರಂಗ'ರ "ವಿಶ್ವಾಮಿತ್ರಸೃಷ್ಟಿ" ಅನುಭವದ ಪ್ರಾಮಾಣಿಕತೆಯಿಂದ, ತಂತ್ರದ ಕೌಶಲ್ಯದಿಂದ ತನ್ನತನವನ್ನು ಸಾಧಿಸಿದ ಕೃತಿ. ದೋಷರಹಿತವಲ್ಲದಿದ್ದರೂ ಆದರ್ಶತ್ವ, ಭಾವ ತೀಕ್ಷ್ಣತೆ, ಬೌದ್ಧಿಕತೆಗಳ ತ್ರಿವೇಣೀ ಸಂಗಮವಾಗಿದೆ ಗೋಕಾಕರ "ಇಜ್ಜೋಡು". ಇದು ೧೯೩೪ ರಲ್ಲಿ ಹೊರಬಿದ್ದಿತೆನ್ನುವುದನ್ನು ಗಮನಿಸಿದಾಗ, ಕನ್ನಡ ಕಾದಂಬರಿ ತನ್ನ ಚರಿತ್ರೆಯ ಪ್ರಾರಂಭದಲ್ಲಿಯೇ ಇಂತಹ ಹೆಜ್ಜೆ ಇಟ್ಟಿತೆನ್ನುವುದು ವಿಸ್ಮಯಕರವೆನಿಸುತ್ತದೆ.

ಈ ಶತಮಾನದ ನಾಲ್ಕನೆಯ ದಶಕದಲ್ಲಿ ಸ್ವಾತಂತ್ರ್ಯದ ಚಳುವಳಿ ವಿಶೇಷ ತೀಕ್ಷ್ಣತೆಯನ್ನು ಪಡೆದು, ನಾಡಿನ ಜೀವನದ ಮೇಲೆ ಗಾಢವಾದ ಪ್ರಭಾವವನ್ನು ಬೀರಿತು. ಸ್ವಾತಂತ್ರ್ಯದ ಗಳಿಕೆ, ಅಸ್ಪೃಶ್ಯತಾನಿವಾರಣೆ, ಹಸಿವಿನ ಪರಿಹಾರ ಇವೆಲ್ಲ ಜನತೆಯ ಲಕ್ಷ್ಯವನ್ನು ಸೆಳೆದುಕೊಂಡುವು. ಇದೂ ಒಂದು ರೀತಿಯಲ್ಲಿ 'ಪ್ರಗತಿಶೀಲವಾದ'ಕ್ಕೆ ಬೆಂಬಲನೀಡಿತು. ಈ ವಾದವನ್ನು ಅತ್ಯಂತ ಪರಿಣಾಮಕಾರಿಯಾಗಿ ಮುಂದಿಟ್ಟವರು ಶ್ರೀ ಅ. ನ. ಕೃ. ('ಪ್ರಗತಿಶೀಲ ಸಾಹಿತ್ಯ' ೧೯೪೪, 'ಸಜೀವ ಸಾಹಿತ್ಯ' ೧೯೪೬ ಮೊದಲಾದ ಕೃತಿಗಳಲ್ಲಿ). 'ಪ್ರಗತಿ' ಭಾವನೆಯ ವಿವರಣೆಯನ್ನು ಕುರಿತು ನಡೆದ ವಾದ-ವಿವಾದವನ್ನು ಇಲ್ಲಿ ತುಲನೆ ಮಾಡಬೇಕಾಗಿಲ್ಲ. ಅದರ ಧೂಳೆಲ್ಲ ಅಡಗಿದ ಮೇಲೆ ಈಗ 'ಸರಸಮ್ಮನ ಸಮಾಧಿ', 'ಇಜ್ಜೋಡು', 'ಕಾನೂರು ಸುಬ್ಬಮ್ಮ', 'ಅಂತರಂಗ', 'ವಿಶ್ವಾಮಿತ್ರ ಸೃಷ್ಟಿ', 'ದೇವದೂತರು', 'ಮರಳಿ ಮಣ್ಣಿಗೆ', 'ಕಾರಣಪುರುಷ' ಮೊದಲಾದ ಕೃತಿಗಳಲ್ಲಿ ಪ್ರಗತಿ ಇರಲಿಲ್ಲ. ಅವೆಲ್ಲ ಸಾಂಪ್ರದಾಯಕ ಕೃತಿಗಳು, ಅವುಗಳಲ್ಲಿಲ್ಲದ ಪ್ರಗತಿಯ ಬಯಕೆ ಅಥವ ದೃಷ್ಟಿ (ಇಲ್ಲಿ ಹೇಳುತ್ತಿರುವುದು ತತ್ವಗಳು-ಅಭಿಪ್ರಾಯಗಳಲ್ಲ ಎಂಬುದನ್ನು ಒತ್ತಿ ನುಡಿಯ ಬಯಸುತ್ತೇನೆ) ಕನ್ನಡಕ್ಕೆ ಹೊಸದಾಗಿ ಬಂದಿತು ಎನ್ನುವುದು ಸಾಹಸದ ಮಾತು ಎನ್ನಿಸುತ್ತದೆ. ಅಲ್ಲದೆ ಪ್ರಗತಿಶೀಲ ಸಾಹಿತ್ಯದ ವಾದ ಸಾಹಿತಿ ಆರಿಸಿಕೊಳ್ಳುವ ವಸ್ತುವಿಗೇ ಅತಿಯಾದ ಪ್ರಾಧಾನ್ಯವನ್ನು ಕೊಟ್ಟು, ಕಾದಂಬರಿಕಾರ ತನ್ನ ವಸ್ತುವಿನ ಮೇಲೆ ಸ್ಥಾಪಿಸಬೇಕಾದ ಪ್ರಭುತ್ವ, ಅದಕ್ಕಿಂತ ಹೆಚ್ಚಾಗಿ ಅನುಭವದಿಂದ (ಅನುಭವ ಎನ್ನುವ ಮಾತಿಗೆ ವಿಶಾಲವಾದ ಅರ್ಥವನ್ನು ನೀಡುವ ಅವಶ್ಯಕತೆಯನ್ನು ಒಪ್ಪುತ್ತೇನೆ) ಬಂದ ದರ್ಶನದ ಪ್ರಾಮಾಣಿಕತೆ-ಇವುಗಳಿಗೆ ತಕ್ಕ ಬೆಲೆಯನ್ನು ನೀಡದೆ ಹೋಯಿತು. ಹೀಗಾಗಿ ವಾಸ್ತವಿಕ ಜೀವನದ ಕೆಲವು - ಸಾಧ್ಯವಾದಮಟ್ಟಿಗೂ 'ಕಚಗುಳಿ ಇಡುವ' - ವಿವರಗಳು ಜೊತೆಗೆ ಕೆಲವು ಘೋಷಣೆಗಳು ಇವುಗಳನ್ನು ವಿವಿಧ ಗಾತ್ರದ ಅಚ್ಚಿನ ಅಕ್ಷರಗಳಲ್ಲಿ ಪ್ರಕಟಿಸಿದರೆ ಸಾಕೆಂಬ ನಂಬಿಕೆಯ 'ಕಾದಂಬರಿಕಾರ'ರು ಲೆಖ್ಖವಿಲ್ಲದೆ ಹುಟ್ಟಿಕೊಂಡರು. ಆದರೆ ಈ ವಾದ ಸಾಹಿತಿಗಳ ಗಮನವನ್ನು ಇತರ ದೇಶಗಳ ಸಾಹಿತ್ಯಗಳು, ಸಾಹಿತ್ಯದ 'ಥಿಯರಿ' ಗಳತ್ತ ಪರಿಣಾಮಕಾರಿಯಾಗಿ ಗಮನವನ್ನು ಸೆಳೆಯಿತು. ಅಲ್ಲದೆ ಸಾಹಿತಿಗಳು ಸಾಹಿತ್ಯ - ಜೀವನಗಳ ಸಂಬಂಧದ ಪ್ರಶ್ನೆಯನ್ನೂ ಅಂದಿನ ಕನ್ನಡ ಸಾಹಿತ್ಯದ ಸಾಧನೆ - ಮಿತಿಗಳನ್ನೂ ಪರೀಕ್ಷಿಸುವಂತೆ ಮಾಡಿತೆನ್ನುವುದೂ, ತರುಣ ಪೀಳಿಗೆಯ ಲೇಖಕರಿಗೆ- ಸ್ಪಷ್ಟವಾಗಿ ಪ್ರಗತಿಶೀಲ ಪಂಥಕ್ಕೆ ಸೇರದಿದ್ದ ಹಲವರಿಗೆ ಸಹ - ಪ್ರಚೋದಕ ಶಕ್ತಿಯಾಯಿತೆಂಬುದೂ ನಿಜ. ಅಚ್ಚಿನಲ್ಲಿ ಹೆಸರು ಕಾಣುವ ಬಯಕೆಯಿಂದಲೇ ಬರೆದ ಎಷ್ಟೋ ಕಾದಂಬರಿಕಾರರನ್ನು ಪ್ರಗತಿಶೀಲ ವಾದ ಕೊಟ್ಟಿದ್ದರೂ, ಒಬ್ಬ ತ. ರಾ. ಸು., ಒಬ್ಬ 'ನಿರಂಜನ', ಒಬ್ಬ

ಕಟ್ಟೀಮನಿಯನ್ನು ಕೊಟ್ಟರೆ ಅದಕ್ಕೆ ನಾವು ಕೃತಜ್ಞರಾಗಿರಬೇಕು. ಇದೇ ಪೀಳಿಗೆಗೆ ಸೇರಿದವರು ಚದುರಂಗ, ರಾ. ವೆಂ. ಶ್ರೀನಿವಾಸ, ಮಿರ್ಜಿ ಅಣ್ಣಾರಾಯ, ಎಸ್. ಅನಂತನಾರಾಯಣ ಇವರೆಲ್ಲ. ತಮ್ಮ ಮೊದಲನೆಯ ಕೃತಿಗಳಲ್ಲಿಯೇ ಆಶಾಭಾವನೆಯನ್ನು ಮೂಡಿಸಿದವರು ತ. ರಾ. ಸು., ಮಿರ್ಜಿ, ರಾ. ವೆಂ. ಶ್ರೀನಿವಾಸ, ಚದುರಂಗ. ಅನಂತನಾರಾಯಣರ 'ಮುರುಕು ಮಂಟಪ' ಮತ್ತು 'ಪಯಣದ ಹಾದಿಯಲ್ಲಿ' ನಿರಾಸೆಯ ಉಡುಪು ತೊಟ್ಟ ಭಾವಾತಿರೇಕವನ್ನು ಪ್ರಕಟಿಸಿದರೂ, ಅವರ ಚಿತ್ರನುಯ ಶೈಲಿ, ಭಾವತೀಕ್ಷ್ಣತೆ ಹೊಸದೊಬ್ಬ ಗಣನೀಯ ಕಾದಂಬರಿಕಾರರ ಉದಯವನ್ನು ಸೂಚಿಸಿದುವು. 'ನಿರಂಜನ'ರು ಕಾದಂಬರಿ ಕ್ಷೇತ್ರಕ್ಕೆ ೧೯೪೭ರ ಆಚೆ ಕಾಲಿಟ್ಟಂತೆ ನೆನಪು. 'ಸ್ವಾತಂತ್ರ್ಯದೆಡೆಗೆ' ಬರೆಯುವ ಹೊತ್ತಿಗೆ ಕಟ್ಟೀಮನಿಯವರ ಆವೇಶ ಕಲಾಕಾರನ ಕಡಿವಾಣಕ್ಕೆ ಸಿಕ್ಕಿತು.

೧೯೪೭ ರಲ್ಲಿ ಸ್ವಾತಂತ್ರ್ಯ ಉದಯವಾಗುವ ಹೊತ್ತಿಗೆ ಮೂರು ಪೀಳಿಗೆಗಳ ಕಾದಂಬರಿಕಾರರಿಂದ ಕನ್ನಡ ಸಾಹಿತ್ಯ ಶ್ರೀಮಂತವಾಗುತ್ತಿತ್ತು. ಕಾದಂಬರಿಗೆ ನಿರ್ದಿಷ್ಟರೂಪ, ಸ್ಥಾನ ಕೊಟ್ಟವರೆನ್ನಬಹುದಾದ ಪೀಳಿಗೆಯ ಆನಂದಕಂದ, ಶ್ರೀನಿವಾಸ, ದೇವುಡು, ಕಸ್ತೂರಿ, ಮೊದಲಾದವರು. ಇವರ ಮುಂದಿನ ಪೀಳಿಗೆಯ ಕಾರಂತ, ಅ. ನ. ಕೃ, ಎಂ. ವಿ. ಸೀತಾರಾಮಯ್ಯ, ಮುಗಳಿ, ಗೋಕಾಕ್, ಕುವೆಂಪು, ಶ್ರೀರಂಗ, ಇನಾಂದಾರ್ ಮೊದಲಾದವರೂ ಕನ್ನಡದ ಭಾಗ್ಯದಿಂದ ಇನ್ನೂ ಸಾಹಿತ್ಯ ಸೃಷ್ಟಿ ಮಾಡುತ್ತಿದ್ದರು. ಈ ರಂಗದಲ್ಲಿ ಪ್ರಯೋಗದ ದಿಟ್ಟತನದಲ್ಲಿಯಾಗಲಿ ಸ್ವತಂತ್ರ ವಿಚಾರಧಾರೆಯಲ್ಲಾಗಲಿ ತಂತ್ರ ನೈಪುಣ್ಯದಲ್ಲಾಗಲಿ ಶೈಲಿಯ ತನ್ನತನ ಸೊಬಗುಗಳಲ್ಲಾಗಲಿ ಬಡತನ ಬಾರದೆನ್ನುವುದಕ್ಕೆ ತ. ರಾ. ಸು., ನಿರಂಜನ, ಬಸವರಾಜ ಕಟ್ಟಿಮನಿ, ಚದುರಂಗ, ರಾ. ವೆಂ. ಶ್ರೀನಿವಾಸ, ಎಸ್. ಅನಂತನಾರಾಯಣ, ಮಿರ್ಜಿ ಅಣ್ಣಾರಾಯ ಮೊದಲಾದವರ ಆರಂಭದ ಕೃತಿಗಳು ಸತ್ವಪೂರ್ಣವಾದ ಸಾಕ್ಷಿಗಳಾಗಿದ್ದುವು.



ಶ್ರೀ ಎಂ. ಎಸ್. ಪುಟ್ಟಣ್ಣನವರು

# ಕನ್ನಡ ಸಣ್ಣಕಥೆಗಳ ಬೆಳವಣಿಗೆ
# (ಸ್ವಾತಂತ್ರ್ಯಪೂರ್ವದಲ್ಲಿ)

ಲೇಖಕರು: ಶ್ರೀ ಎಂ. ವಿ. ಸೀತಾರಾಮಯ್ಯ

ಕನ್ನಡ ಸಾಹಿತ್ಯ ಚರಿತ್ರೆಯನ್ನು ಜೈನಯುಗ, ವೀರಶೈವಯುಗ, ಬ್ರಾಹ್ಮಣಯುಗ ಎಂದೂ ಕ್ಷಾತ್ರಯುಗ, ಮತಪ್ರಚಾರಕಯುಗ, ಸಾರ್ವಜನಿಕಯುಗ ಮತ್ತು ಆಧುನಿಕಯುಗ ಎಂದೂ, ಆರಂಭಕಾಲ, ಮತಪ್ರಾಬಲ್ಯಕಾಲ, ನವೀನಕಾಲ ಎಂದೂ, ಪಂಪಪೂರ್ವಯುಗ, ಪಂಪಯುಗ, ಬಸವಯುಗ, ಕುಮಾರವ್ಯಾಸಯುಗ ಎಂದೂ ಮುಂತಾಗಿ ವಿಂಗಡಿಸುವ ರೂಢಿಯಿದೆ.

ಅದರಂತೆ, ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನು ಸ್ವಾತಂತ್ರ್ಯ ಪೂರ್ವಕಾಲ ಮತ್ತು ಸ್ವಾತಂತ್ರ್ಯೋತ್ತರ ಕಾಲ ಎಂದು ವಿಭಾಗಿಸಿಕೊಂಡರೆ ತಪ್ಪೇನೂ ಇರಲಾರದು.

ಸಣ್ಣಕಥೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸುಸ್ಪಷ್ಟವಾಗಿ ಬೆಳೆದಿರುವ ಒಂದು ಪ್ರಕಾರ. ಪದ್ಯಕಾವ್ಯದಲ್ಲಿ ಭಾವಗೀತೆ ಹೇಗೋ ಹಾಗೆ ಗದ್ಯಸಾಹಿತ್ಯದಲ್ಲಿ ಸಣ್ಣಕಥೆ ಅಡಕವಾದ ಕೃತಿರಚನೆ. ಸ್ವರೂಪದಲ್ಲಿ ಎರಡಕ್ಕೂ ಕೆಲಮಟ್ಟಿನ ಸಾಮ್ಯವಿರುವಂತೆ, ಬೆಳವಣಿಗೆಯಲ್ಲೂ ಸಾಮ್ಯ ಕಂಡುಬರುತ್ತದೆ. ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಒಟ್ಟಿಗೆ ಹುಟ್ಟಿದ ಅವಳಿ ಮಕ್ಕಳು ಇವು. ಕಾಲಪ್ರಭಾವಕ್ಕೆ ಎರಡೂ ಜೊತೆಜೊತೆಯಾಗಿ ಒಳಗಾಗಿವೆ. ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಇವೆರಡೂ ಪ್ರಕಾರಗಳು 'ಪ್ರಗತಿಶೀಲ ಚಳವಳಿ' ಯ ಪ್ರಭಾವಕ್ಕೆ ಒಳಗಾಗಿದ್ದರೆ, ಸ್ವಾತಂತ್ರ್ಯೋತ್ತರ ಕಾಲದಲ್ಲಿ 'ನವ್ಯತಂತ್ರ' ಪ್ರಯೋಗಕ್ಕೆ ಒಳಗಾಗಿವೆ. ಸ್ವಾತಂತ್ರ್ಯಪೂರ್ವದಲ್ಲಿ ಬರೆಯುತ್ತಿದ್ದ ಪ್ರಸಿದ್ಧ ಕಥೆಗಾರರೆಲ್ಲರೂ ಈಗ ಬಹುಮಟ್ಟಿಗೆ ಕಥೆ ಬರೆಯುವುದನ್ನು ನಿಲ್ಲಿಸಿಬಿಟ್ಟಿದ್ದಾರೆ; ಬರೆದರೂ ಅಂದಿನ ಪ್ರಮಾಣದಲ್ಲಿ ಬರೆಯುತ್ತಿಲ್ಲ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಬೆಳಕಿಗೆ ಬಂದ ತರುಣ ಕಥೆಗಾರರಲ್ಲಿ ಕೆಲವರಾದರೂ ಸಂಪೂರ್ಣ 'ನವ್ಯ' ಶೈಲಿಯಲ್ಲಿ ಬರೆಯುತ್ತಿದ್ದಾರೆ. ಸ್ವಾತಂತ್ರ್ಯಪೂರ್ವದಲ್ಲಿ ಒಂದು ನಿರ್ದಿಷ್ಟ ಪಾತ್ರದಲ್ಲಿ ಹರಿದುಬಂದ ಕನ್ನಡ ಸಣ್ಣಕಥೆಗಳ ವಾಹಿನಿಗೆ ಸ್ವಾತಂತ್ರ್ಯದ ತರುಣದಲ್ಲಿ ಕಾಣಿಸಿಕೊಂಡ 'ನವ್ಯಮಾರ್ಗ' ಒಂದು ಸ್ಪಷ್ಟಗೋಚರವಾದ ತಿರುವು ಕೊಟ್ಟಿತು. ಆದರೂ, ಸ್ವಾತಂತ್ರ್ಯೋತ್ತರದ ಈ ಕಾಲದಲ್ಲಿ ನವ್ಯಶೈಲಿಯ ಕಥೆಯೊಂದಿಗೆ ಸ್ವಾತಂತ್ರ್ಯಪೂರ್ವದ ಸಾಂಪ್ರದಾಯಿಕ ಶೈಲಿಯ ಕಥೆ ಯಥಾಪೂರ್ವವಾಗಿ ಸಾಗಿಕೊಂಡು ಹೋಗುತ್ತಲೇ ಇದೆ; ಈ ಕಥಾವಾಹಿನಿಯ ಪಾತ್ರ ಅಗಲವಾಗಿದ್ದರೂ ಮೊದಲಿನ ಆಳ ಕಡಿಮೆಯಾಗಿದೆಯೆನಿಸುತ್ತಿದೆ. 'ನವ್ಯ' ದಿಂದ ಭಿನ್ನವಾದ (ಬೇಕಾದರೆ 'ಭವ್ಯ' ಎಂದು ಕರೆಯಬಹುದಾದ) ಈ ಸಾಂಪ್ರದಾಯಿಕ ಕಥಾಮಾರ್ಗ ಕ್ರಮಣವನ್ನು ಸ್ಥೂಲವಾಗಿ ಗುರುತಿಸುವುದು ಈ ಲೇಖನದ ಅಲ್ಪಪ್ರಯತ್ನ.

ಕಾದಂಬರಿಯನ್ನು ಬಿಟ್ಟರೆ, ಸಣ್ಣಕಥೆಯೇ ಆಧುನಿಕ ಕನ್ನಡ ಸಾಹಿತ್ಯದ ಜನಪ್ರಿಯವಾದ ಪ್ರಕಾರ ಎನ್ನಬಹುದು. ದಿವಂಗತರಾದ ಗಳಗನಾಥರೂ ಬಿ. ವೆಂಕಟಾಚಾರ್ಯರೂ ತಮ್ಮ ತಮ್ಮ ಕಾದಂಬರಿಗಳಿಂದ ಕನ್ನಡಿಗರಲ್ಲಿ ಅಭೂತಪೂರ್ವವಾದ ವಾಚನಾಭಿರುಚಿಯನ್ನು ಬೆಳಸಿಹೋದಮೇಲೆ, ಅದನ್ನು ಉಳಿಸಿಕೊಂಡ ಶ್ರೇಯಸ್ಸು ಸಣ್ಣಕಥೆಗೇ ಸಲ್ಲಬೇಕು.

ಗದ್ಯವಾಗಿರಲಿ ಪದ್ಯವಾಗಿರಲಿ, ದೊಡ್ಡದಾಗಿರಲಿ ಸಣ್ಣದಾಗಿರಲಿ, ಕಥೆ ಹೇಳಹೊರಟ ಕಾವ್ಯಕ್ಕೆ ಎಲ್ಲ ಕಾಲದಲ್ಲೂ ಎಲ್ಲ ಕಡೆಯೂ ಜನಮನ್ನಣೆ. ಕನ್ನಡ ನಾಡಿನಲ್ಲಿ, ಪಂಪನಿಂದ ಹಿಡಿದು ಮುದ್ದಣನವರೆಗೆ ಬಹುಮಟ್ಟಿಗೆ ಎಲ್ಲ ಕವಿಗಳ ದೃಷ್ಟಿಯೂ ಕಥೆಯ ಮೇಲೆ ಬಲವಾಗಿ ನೆಟ್ಟಿದೆ. ಪಂಪನಿಗೂ ಹಿಂದೆ 'ಗದ್ಯಕಥೆ' ಗಳಿದ್ದುದು (ಉದಾ. :– 'ವಡ್ಡಾರಾಧನೆ,' 'ಚಾವುಂಡರಾಯ ಪುರಾಣ') ಕನ್ನಡದ ವೈಶಿಷ್ಟ್ಯ, ಹೆಮ್ಮೆ, ಎನ್ನಬೇಕು. "ಕತೆ ಪಿರಿದಾಮೊಡಂ ಕತೆಯ ಮೆಯ್ಗಿಡಲೀಯದಂತೆ . . . ವರ್ಣಕಂ ಕತೆಯೊಳೊಡಂಬಡಂ ಪಡೆಯೆ" ಕಾವ್ಯರಚನೆ ಮಾಡುವುದಾಗಿ ಪಂಪನ ಪೂರ್ವ

ನಿಶ್ಚಯ; ಮಳೆಗಾಲದ ಬೇಸರನ್ನು ಕಳೆಯುವುದಕ್ಕಾಗಿ ನಲ್ಗತೆಯೊಂದನ್ನು ಹೇಳೆಂದು ಮುದ್ದಣನನ್ನು ಮನೋರಮೆ ಕಾಡಿ ಬೇಡುತ್ತಾಳೆ. ಮುದ್ದಣ* ತನ್ನ ಮಡದಿಗೆ ಹೇಳುವ ಕಥೆಗಳ ಭಾಷೆ ಹಳಗನ್ನಡವಾದರೂ ಹೇಳುವ ರೀತಿಯಲ್ಲಿ ಹೊಸತನವಿದೆ. ಸಣ್ಣಕಥೆಗೆ ಬಳಸಬಹುದಾದ ಕಥನ ಶೈಲಿಯನ್ನು ಮುದ್ದಣ ದೀರ್ಘಕಥೆಯ ನಿರೂಪಣೆಗೆ ಯಶಸ್ವಿಯಾಗಿ ಬಳಸಿಕೊಂಡಿದ್ದಾನೆ. 'ರಾಮಾಶ್ವಮೇಧ'ದ ಕಥನ ತಂತ್ರದಲ್ಲಿ ಮನೋರಮೆಯ ಪಾತ್ರ ಆಕರ್ಷಕ. ಈಚೆಗಂತೂ, ನಿಮಿಷಕ್ಕೊಂದು ಕಥೆಯನ್ನು, ಗಂಟೆಗೊಂದು ಕಾದಂಬರಿಯನ್ನು ಓದಿ ಮುಗಿಸುವ ಕನ್ನಡದ 'ಮನೋರಮೆ'ಯರೇ ಕನ್ನಡ ಕಥಾಸಾಹಿತ್ಯದ ಹುಲುಸು ಬೆಳೆಗೆ, ಹುಚ್ಚುಬೆಳೆಗೆ, ಬಹುಮಟ್ಟಿಗೆ ಕಾರಣ ಎಂದರೆ ತಪ್ಪಾಗದು. ಅಂತೂ, ಕಥೆ ಕನ್ನಡದ ನೆಲದಲ್ಲಿ ಸಹಜವಾಗಿ ಹುಟ್ಟಿ ಬೆಳೆದಿರುವ ಫಲವೃಕ್ಷ; ಈ ಶತಮಾನದ ಆದಿಭಾಗದಲ್ಲಿ ಅದರ ಒಂದು ಕವಲಿಗೆ ಸೀಮೆಯ ಕಸಿ ಕಟ್ಟಿದ್ದರಿಂದ, 'ಆಧುನಿಕ ಸಣ್ಣಕಥೆ' ಎಂಬ ವಿಶಿಷ್ಟ ಲಕ್ಷಣದ ಸಾಹಿತ್ಯ ಸಸ್ಯ ನಮ್ಮ ನೆಲದಲ್ಲಿ ಚೆನ್ನಾಗಿ ಬೇರುಬಿಟ್ಟು, ಈಗ ನಾಡಿನ ತುಂಬ ನಮ್ಮದೇ ಆದ ಸುಂದರ ವನವಾಗಿದೆ. 'ಕಸಿ ಕಟ್ಟುವುದು' ಎಂಬ ಅಲಂಕಾರೋಕ್ತಿಯಲ್ಲಿ ಒಂದು ಪೂರ್ವೋದ್ದೇಶ ಅಥವಾ ಉದ್ದೇಶಪೂರ್ವಕ ಪ್ರಯತ್ನ ಧ್ವನಿತವಾಗುತ್ತದೆ. ವಾಸ್ತವವಾಗಿ, ಅಂಥ ಪೂರ್ವೋದ್ದೇಶವಿಲ್ಲದೆ ಸಹಜವಾಗಿ ಎಂಬಂತೆ ಬರೆದವರೂ ಉಂಟು.† ಆದರೆ, ಇಷ್ಟು ನಿಶ್ಚಯ: ಪಡುವಣ ಗಾಳಿ ಬೀಸಿದಾಗ, ಆಧುನಿಕ ಸಣ್ಣಕಥೆಯ ಬೀಜ ತಾನಾಗಿ ತೂರಿಕೊಂಡು ಬಂದು, ನಮ್ಮ ನೆಲದ ಮೇಲೆ ಬಿತ್ತು; ಅಂದಿನಿಂದ, ಅದರ ಬೇಸಾಯ ಪ್ರಾರಂಭವಾಯಿತು. ಆಧುನಿಕ ಸಣ್ಣಕಥೆಯ ಸ್ವರೂಪದ ಅರಿವು ಉಂಟಾದಮೇಲೆ, ಅದರ ಬೆಳವಣಿಗೆ ಇಂದಿನತನಕ ನಿರಾತಂಕವಾಗಿ ಸಾಗಿಕೊಂಡು ಬಂದಿದೆ.§

ಕನ್ನಡದಲ್ಲಿ ಸಣ್ಣಕಥೆಯ ಬೆಳವಣಿಗೆಗಾಗಿ ವಿಶೇಷವಾಗಿ ಕೃಷಿಮಾಡಿದ ಪ್ರಮುಖ ಕಥೆಗಾರರ ಕೆಲಸವನ್ನು ಪರಿಚಯ ಮಾಡಿಕೊಡುವ ಮುನ್ನ, ಬಹು ಸಂಕ್ಷೇಪವಾಗಿ ಸಣ್ಣಕಥೆಯ ಸ್ವರೂಪ ಲಕ್ಷಣಗಳನ್ನು ತಿಳಿಸುವುದು ಅಪ್ರಸಕ್ತವಾಗದು. ಸಣ್ಣಕಥೆ, ಕಾದಂಬರಿ–ಇವು ಆಧುನಿಕ ಗದ್ಯ ಕಥಾ ಸಾಹಿತ್ಯದ ಎರಡು ವಿಶಿಷ್ಟ ಪ್ರಕಾರಗಳು; ಒಂದನ್ನೊಂದು ಅವಲಂಬಿಸದೆ ಎರಡೂ ಸ್ವತಂತ್ರವಾಗಿ ಬೆಳೆದಿವೆ. ಎರಡರ ಗುರಿಯೂ ಕಥೆ ಹೇಳುವುದು. ಘಟನೆ, ಪಾತ್ರ, ಸನ್ನಿವೇಶ, ವರ್ಣನೆ, ಸಂಭಾಷಣೆ–ಇವು ಕಥೆಯ ಅವಯವಗಳು; ಇವನ್ನುಳ್ಳ ಒಂದು 'ಕಥೆ' ಸಣ್ಣಕಥೆಗೂ ಕಾದಂಬರಿಗೂ ಸಮಾನವಾದ ಅಂಶ. ಆದರೂ, ಸಣ್ಣಕಥೆಯನ್ನು ಹಿಗ್ಗಿಸಿದರೆ ಅದು ಕಾದಂಬರಿಯಾಗದು; ಕುಗ್ಗಿಸಿದರೆ, ಕಾದಂಬರಿ ಸಣ್ಣಕಥೆಯಾಗದು. ಕಾದಂಬರಿಯ ಪ್ರಪಂಚ ವಿಸ್ತಾರವಾದದ್ದು, ಜನನಿಬಿಡವಾದದ್ದು; ಅಲ್ಲಿ ವ್ಯವಹರಿಸುವ ಒಂದಕ್ಕಿಂತ ಹೆಚ್ಚು ಮುಖ್ಯ ಪಾತ್ರಗಳ ಸುತ್ತ, ಸುಸಂಬದ್ಧವಾಗಿಯೋ ಅಸಂಬದ್ಧವಾಗಿಯೋ, ಹಲವಾರು ಘಟನೆಗಳು ಜರುಗುತ್ತವೆ, ಸನ್ನಿವೇಶಗಳು ಹುಟ್ಟಿಕೊಳ್ಳುತ್ತವೆ, ಸ್ಥಳವರ್ಣನೆ, ವ್ಯಕ್ತಿವರ್ಣನೆ, ಮನೋಭಾವ ವರ್ಣನೆ, ಇತ್ಯಾದಿ ವರ್ಣನೆಗಳ ಹಿನ್ನೆಲೆಯ ತೆರೆಗಳು ಸರಿದು ಸರಿದು ಹೋಗುತ್ತವೆ. ಸಣ್ಣಕಥೆಯ ಪ್ರಪಂಚ ಸಣ್ಣದು; ಆದರೂ ಸ್ವಯಂಪರಿಪೂರ್ಣ. ಇಲ್ಲಿ ಕಥೆಗಾರನಿಗೆ ಕಾದಂಬರಿಕಾರನಿಗೆ ಇರುವ ಸ್ವಾತಂತ್ರ್ಯವಿಲ್ಲ. ಸಣ್ಣಕಥೆಯಲ್ಲಿ ಯಾವ ಒಂದು ವಿವರವೇ ಆಗಲಿ, ಸಂಗತಿಯೇ ಆಗಲಿ, ವರ್ಣನೆಯೇ ಆಗಲಿ, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಕಥೆಯ ಒಟ್ಟಿನ ಪರಿಣಾಮಕ್ಕೆ ಪೋಷಕವಾಗಿರಬೇಕು. ಹೆಚ್ಚಿನ ವಿವರಣೆಗೆ ಹೋಗದೆ, ಸಣ್ಣಕಥೆಯ ಮುಖ್ಯ ಲಕ್ಷಣಗಳನ್ನು ಹೀಗೆ ಸಂಗ್ರಹಿಸಬಹುದು:

---

*'ಮುದ್ದಣ ಪ್ರಶಸ್ತಿ'ಯನ್ನು ಹೊರತಂದ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವು ಮುದ್ದಣನ ಸ್ಮಾರಕವಾಗಿ ಸಣ್ಣಕಥೆಗಳ ಸ್ಪರ್ಧೆಯೊಂದನ್ನು ಕೆಲವು ವರ್ಷ ನಡಸಿಕೊಂಡು ಬಂದದ್ದನ್ನು ಇಲ್ಲಿ ನೆನೆಯಬಹುದು. ಈ ಸ್ಪರ್ಧೆಯಲ್ಲಿ ಸ್ವರ್ಣಪದಕಗಳನ್ನು ಪಡೆದವರಲ್ಲಿ ಆನಂದ (ಈಗ ದಿವಂಗತ), ಕೆ. ಗೋಪಾಲಕೃಷ್ಣರಾಯರು, ಇ. ಎ. ಭಾಸ್ಕರರಾವ್ ಪ್ರಮುಖರು. ಭಾಸ್ಕರರಾಯರು ಅಕಾಲ ಮೃತ್ಯುವಿಗೆ ತುತ್ತಾಗದಿದ್ದರೆ ಅವರು ಕಥಾಸಾಹಿತ್ಯಕ್ಕೆ ವಿಶಿಷ್ಟ ಸೇವೆ ಸಲ್ಲಿಸುತ್ತಿದ್ದರೆಂಬಲ್ಲಿ ಸಂಶಯವಿಲ್ಲ. ಭಾಸ್ಕರರಾಯರ ಸ್ಮಾರಕವಾಗಿ ಕನ್ನಡ ಸಾಹಿತ್ಯ ಪರಿಷತ್ತು ನಡಸಿಕೊಂಡು ಬರುತ್ತಿರುವ ಸ್ಪರ್ಧೆ ಕೆಲವು ವರ್ಷಗಳಲ್ಲಿ ಸಣ್ಣಕಥೆಯ ರಚನೆಗೆ ಮೀಸಲಾಗಿದೆ. ಸಣ್ಣಕಥೆಯ ಬೆಳವಣಿಗೆಗೆ ಪ್ರಾರಂಭದಲ್ಲಿ ಮುದ್ದಣ ಸ್ಮಾರಕ ಸ್ಪರ್ಧೆ ವಿಶೇಷ ಪುಟ ಕೊಟ್ಟಿತು.

†ಸಣ್ಣಕತೆಯ ಲಕ್ಷಣಗಳು ಅಷ್ಟಾಗಿ ಕಂಡುಬರದಿದ್ದರೂ, ದಿವಂಗತ ಎಂ. ಎಸ್. ಪುಟ್ಟಣ್ಣನವರ 'ಪೇಟಿಯ ಮಾತೇನಜ್ಜಿ' ಅಂತಹ ಒಂದು ಕಥೆ.

§ಪ್ರೊ॥ ಎಸ್. ವಿ. ರಂಗಣ್ಣನವರು, ಕನ್ನಡ ಸಣ್ಣಕಥೆಯನ್ನು "ಲಂಗವುಟ್ಟ ದೊರೆಸಾನಿ" ಎಂದು ಕರೆದು, "ಈಗೀಗ ಕನ್ನಡ ಮುತ್ತೈದೆಯಾಗಿ ಓಡಾಡತೊಡಗಿದ್ದಾಳೆ" ಎಂದು ಹೇಳಿರುವುದನ್ನು ಇಲ್ಲಿ ನೆನೆಯಬಹುದು. ಕನ್ನಡದ ಸಣ್ಣಕಥೆ 'ಕನ್ನಡದ ಪದ್ಮಿನೀ; ಕಡಲಾಚೆಯ ವಿಲಾಸವತಿಯ ವೇಷಭೂಷಣಗಳನ್ನು ಈಚೆಗೆ ಧರಿಸತೊಡಗಿದ್ದಾಳೆ' ಎನ್ನಬಹುದು.

(೧) ಸಂಕ್ಷಿಪ್ತತೆ, (೨) ಕಲಾಪರಿಪೂರ್ಣತೆ (ಎಂದರೆ ಸುಸಂಗತವಾದ ಆದಿ-ಮಧ್ಯ-ಅಂತ್ಯಗಳನ್ನು ಹೊಂದಿರುವುದು), (೩) ಒಂದೇ ವಿಷಯದ (ಎಂದರೆ ಪಾತ್ರ, ಘಟನೆ, ವಿಚಾರ, ಸನ್ನಿವೇಶ ಇತ್ಯಾದಿಗಳ) ಪ್ರತಿಪಾದನೆ, (೪) ಪರಿಣಾಮೈಕ್ಯತೆ, (೫) ಕಥನದಲ್ಲಿ ಮಿತವ್ಯಯ, (೬) ಸ್ವಾಭಾವಿಕತೆ ಅಥವಾ ವಾಸ್ತವಿಕತೆ. ಈ ಲಕ್ಷಣಗಳನ್ನೆಲ್ಲ ಹೊಂದಿದ್ದರೆ, ಸಣ್ಣಕಥೆ ಸ್ವಯಂಪರಿಪೂರ್ಣವಾದ ಸಹಜ ಸುಂದರವಾದ ಕಿರಿಯ ಕಲಾಕೃತಿ ಎನಿಸುತ್ತದೆ.

ಲಕ್ಷಣಕ್ಕೆ ಹೇಗೋ ಹಾಗೆ ಪ್ರಕಾರ, ತಂತ್ರ, ಶೈಲಿ-ಇವಕ್ಕೂ ಪಾಶ್ಚಾತ್ಯ ಸಣ್ಣಕಥೆಯೇ ಎಲ್ಲ ಬಗೆಗಳಲ್ಲೂ ಕನ್ನಡದ ಆಧುನಿಕ ಸಣ್ಣಕಥೆಗೆ ಮೇಲುಪಂಕ್ತಿ, ಮಾದರಿ.* ಕನ್ನಡದಲ್ಲಿ ಕಂಡುಬಂದಿರುವ ಕೆಲವು ಪ್ರಮುಖ ಪ್ರಕಾರಗಳನ್ನು ಇಲ್ಲಿ ಹೆಸರಿಸಬಹುದು: (೧) ಪಾತ್ರ ಪ್ರಧಾನ ಕಥೆ, (೨) ಘಟನಾ ಅಥವಾ ಸನ್ನಿವೇಶ ಪ್ರಧಾನ ಕಥೆ, (೩) ವಾತಾವರಣ ಪ್ರಧಾನ ಕಥೆ, (೪) ಪತ್ತೇದಾರಿ ಕಥೆ, (೫) ಐತಿಹಾಸಿಕ ಕಥೆ, (೬) ಪೌರಾಣಿಕ ಕಥೆ.

ಒಟ್ಟಿನಲ್ಲಿ ಹೇಳುವುದಾದರೆ, ಕನ್ನಡದ ಆಧುನಿಕ ಸಣ್ಣಕಥೆಗಾರರಲ್ಲಿ ಶ್ರೇಷ್ಠರಾದವರೆಂದು, ಪ್ರಸಿದ್ಧರಾದವರೆಂದು, ಪರಿಗಣನೆ ಹೊಂದಿರುವವರು ಸೃಷ್ಟಿಸಿರುವ ಕಥಾಸೃಷ್ಟಿ ಹೆಮ್ಮೆಪಡುವಂಥದಾಗಿದೆ, ಹಲವಾರು ಸಂಪುಟಗಳಾಗು ವಷ್ಟಿದೆ; ವಿಶ್ವದ ಉತ್ತಮೋತ್ತಮ ಕಥೆಗಳಿಗೆ ಹೆಗಲೆಣೆಯಾಗಿ ನಿಲ್ಲುವ ಸುಂದರ ಕಥೆಗಳು ಇವರಿಂದ ರಚನೆಯಾಗಿವೆ; ಬಹುಮಟ್ಟಿಗೆ ಎಲ್ಲ ಶೈಲಿ ಪ್ರಕಾರಗಳಿಗೂ ಕನ್ನಡದಲ್ಲಿ ಉತ್ತಮ ನಿದರ್ಶನಗಳು ದೊರೆಯುತ್ತವೆ. ಈ ಎಲ್ಲರನ್ನಲ್ಲದಿದ್ದರೂ ಮುಖ್ಯರು ಹಲಕೆಲವರನ್ನಾದರೂ ಇಲ್ಲಿ ನೆನೆಯುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಚಾರಿತ್ರಕ ದೃಷ್ಟಿಯಿಂದ ಸಣ್ಣಕಥೆಯ ಬೆಳವಣಿಗೆಗೆ ಕಾರಣಕರ್ತರಾದವರು, ಅದರ ಮೇಲೆ ತಮ್ಮ ಪ್ರಭಾವಮುದ್ರೆ ಬೀರಿರುವವರು, ಹೊಸಪಂಥವನ್ನೋ ಹೊಸ ವಿಧಾನವನ್ನೋ ರೂಢಿಗೆ ತಂದವರು, ಕಥಾಭಂಡಾರವನ್ನು ಪುಷ್ಟಿಗೊಳಿಸಿರುವವರು, ಇಲ್ಲವೋ ವಿಶಿಷ್ಟ ವ್ಯಕ್ತಿತ್ವವನ್ನು ಸಾಧಿಸಿರುವವರು-ಇಂತಹ ಕೆಲವು ಕಥೆಗಾರರ ಬರೆವಣಿಗೆಯ ವಿಷಯವನ್ನು ಬಹು ಸಂಕ್ಷೇಪವಾಗಿ ಪ್ರಸ್ತಾಪ ಮಾಡುವುದು ಮಾತ್ರ ಇಲ್ಲಿ ಸಾಧ್ಯ.

ದಿವಂಗತ ಪಂಜೆ ಮಂಗೇಶರಾಯರು, ದಿವಂಗತ ಎಂ. ಎನ್. ಕಾಮತ್ ಮತ್ತು ದಿವಂಗತ ಕೆರೂರ ವಾಸುದೇವಾಚಾರ್ಯರು-ಇವರನ್ನು ಸಣ್ಣಕಥೆಯ ಆದ್ಯರು ಎನ್ನಬಹುದು. "ಪಂಜೆಯವರು ಕನ್ನಡ ಸಣ್ಣಕಥೆಯ ಮೂಲ ಪುರುಷರು ಎಂಬ ಬಗೆಗೆ ಎರಡು ಮಾತಿಲ್ಲ" ಎಂಬ ಗೋವಿಂದ ಪೈ ಅವರ ಮಾತು ಸರ್ವಥಾ ಮಾನ್ಯ. ೧೯೦೦ರಲ್ಲಿ, ಮಂಗಳೂರಿನ 'ಸುವಾಸಿನಿ' ಮಾಸಪತ್ರಿಕೆಯಲ್ಲಿ ಪಂಜೆಯವರ 'ನನ್ನ ಚಿಕ್ಕ ತಾಯಿ', 'ನನ್ನ ಚಿಕ್ಕ ತಂದೆ' ಎಂಬ ಕಥೆಗಳು ಮೊದಲು ಪ್ರಕಟವಾದುವು. 'ನನ್ನ ಚಿಕ್ಕ ತಾಯಿ'ಯ ಆಸಕ್ತಿ ಹುಟ್ಟಿಸುವ ನೇರವಾದ ಈ ಪ್ರಾರಂಭವನ್ನು ಗಮನಿಸಬಹುದು:-

"ನನ್ನ ಚಿಕ್ಕ ತಾಯಿ ೬೦ ವರ್ಷದ ಯುವತಿ . . . ಪ್ರತಿನಿತ್ಯವೂ ಮೈಯ ಆಲಸ್ಯವನ್ನು ಕುರಿತು ಗುಣುಗುಟ್ಟುವಳು. ಆದರೆ ಹಗಲಿನ ಆಲಸ್ಯವು ರಾತ್ರಿಯ ಆಹಾರವನ್ನು ಕಡಿಮೆ ಕೊಡುತ್ತಿದ್ದಿಲ್ಲ."

'ಒಂದು ಊರು. ಅಲ್ಲಿ ಒಬ್ಬ . . . .' ಎಂಬೀ ತೆರನ ಪ್ರಪ್ರಾಚೀನ ರೀತಿಯ ಪ್ರಾರಂಭವನ್ನು ಬಿಟ್ಟು ಕಥಾ ವ್ಯಕ್ತಿಗೆ ಸಂಬಂಧಪಟ್ಟಹಾಗೆ ನೇರವಾಗಿ ಕಥೆ ಪ್ರಾರಂಭಿಸಿರುವುದು ಕನ್ನಡ ಕಥನ ಕಲೆಗೆ ಕೊಟ್ಟ ಹೊಸಮುಖ ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಅಲ್ಲದೆ, ಪಂಜೆಯವರ ವಿನೋದಪರ ಶೈಲಿಗೂ ಗದ್ಯಶೈಲಿಯ ಅಚ್ಚುಕಟ್ಟಿಗೂ ಮೇಲಿನ ವಾಕ್ಯಗಳು 'ಸ್ಥಾಲೀಪುಲಾಕ'ಪ್ರಾಯ ನಿದರ್ಶನವಾಗಿವೆ. ಪಂಜೆಯವರ ಕತೆಗಳಿಗೆ ಪಾಶ್ಚಾತ್ಯ ಕೃತಿಗಳಿಂದ ಪ್ರೇರಣೆ ದೊರಕಿರಬಹುದೇ ಹೊರತು, ಅವುಗಳಲ್ಲಿ ಯಾವ ಬಗೆಯ ಅನುಕರಣವೂ ಕಂಡುಬರುವುದಿಲ್ಲ. ಕಾಮತರ ಕತೆಗಳು ಪಂಜೆಯವರ ಕತೆಗಳಂತೆಯೇ ಪತ್ರಿಕೆಗಳಲ್ಲಿ ಚೆದರಿಹೋಗಿದ್ದು, ಅವರ 'ಅಂದಿನ ಆವೂರು' ಎಂಬ ಕಥೆಗಳ ಸಂಗ್ರಹ ಈಚಿಗೆ ಪ್ರಕಟಗೊಂಡಿತು. ಬೆಂಗಳೂರು 'ಸಾಹಿತಿಗಳ ಸಂಘ' ನಡಸಿದ ಮೊದಲನೆಯ ಸಣ್ಣಕತೆಗಾರರ ಸಮ್ಮೇಳನಕ್ಕೆ ಕಾಮತರು ಅಧ್ಯಕ್ಷರಾಗಿದ್ದರು.† ಕೆರೂರ ವಾಸುದೇವಾಚಾರ್ಯರು ಅನೇಕ ಕಥೆಗಳನ್ನು ಬರೆದರು. ಶೆರ್ಲಾಕ್ ಹೋಮ್ಸನ

* ಉತ್ತಮ ಆಧುನಿಕ ಕನ್ನಡ ಸಣ್ಣಕತೆಯನ್ನು ಓದಿದಾಗ, ಇದು ಸೀಮೆಯ ಸರಕು, ವಿಜಾತೀಯ ಎಂಬ ಭಾವನೆ ಉಂಟಾಗುವುದಿಲ್ಲ. ಇತ್ತೀಚಿನ ಬೆಳವಣಿಗೆಯಾದ 'ನವ್ಯಕತೆ' ಒಟ್ಟಿನಲ್ಲಿ ವಿಜಾತೀಯವಾಗಿ ಕಾಣುತ್ತದೆ. 'ನವ್ಯತಂತ್ರ'ಕ್ಕೆ ಕೊಟ್ಟ ಅತಿ ಪ್ರಾಧಾನ್ಯ ಇದಕ್ಕೆ ಕಾರಣ.

† ಅದೇ ಸಂಘ ನಡಸಿದ ಆ ಮೇಲಿನ ಎರಡು ಸಮ್ಮೇಳನಗಳಿಗೆ ಅನಂತರೂ, ಆನಂದಕಂದರೂ ಅಧ್ಯಕ್ಷರುಗಳಾಗಿದ್ದರು.

ಪತ್ತೇದಾರಿ ಕಥೆಗಳನ್ನು ಕನ್ನಡಕ್ಕೆ ಅನುವಾದ ಮಾಡಿದರು. ಅಲ್ಲಿಂದ ಮೊದಲಾದ ಕನ್ನಡ ಪತ್ತೇದಾರಿ ಕಥೆಗಳ ಪರಂಪರೆ ಒಂದು ಕೃತಕ ಪ್ರಪಂಚವನ್ನು ಕಟ್ಟಿಕೊಂಡಿತೆ ಹೊರತು, ಕನ್ನಡ ನಾಡಿನ ಜನ ಜೀವನದೊಂದಿಗೆ ಸಂಬಂಧ ವನ್ನು ಕಲ್ಪಿಸಿಕೊಳ್ಳಲಿಲ್ಲ. ಪಾಶ್ಚಾತ್ಯ ಕಥೆಗಳ ಪ್ರಭಾವವಿದ್ದರೂ, ಕೆರೂರರ ಇತರ ಕತೆಗಳು ಜನ ಜೀವನಕ್ಕೆ ದೂರ ವಾಗಿಲ್ಲ; ಆ ಕಾಲದ ಸಮಾಜಕ್ಕೆ ಅವು ಕನ್ನಡಿ ಹಿಡಿದಿವೆ; ಅವರ ಕಥನ ಕಲೆಗೆ 'ಮಲ್ಲೇಶಿಯ ನಲ್ಲೆಯರು' ಉತ್ತಮ ನಿದರ್ಶನ. ಈಚಿನ ವಿಮರ್ಶಕರೊಬ್ಬರ ಮಾತಿನಲ್ಲಿ ಸಂಗ್ರಹಿಸುವುದಾದರೆ, "ಹೆಣ್ಣೆಂದರೆ ನಾಚುತ್ತ ಆಧುನಿಕ ಋಷ್ಯಶೃಂಗ ನಾಗಿರುವ ಕಥಾನಾಯಕನಾದ ಮಲ್ಲೇಶಿ ಕಡೆಗೆ ಮದುವೆಯಾಗಿ ಬಾಳುವ ಒಂದು ಸರಸ ಪ್ರಸಂಗವನ್ನು ಕೆರೂರರು ಮರೆಯಲಾಗದ ರೀತಿಯಲ್ಲಿ ಬಣ್ಣಿಸಿದ್ದಾರೆ." ಕೆರೂರರು ವಿನೋದದ ಮೂಲಕ ಸಮಾಜದ ಟೀಕೆಗೆ ಕತೆಯನ್ನು ಬಳಸಿಕೊಂಡರು.

"ಶ್ರೀನಿವಾಸ" ಎಂಬ ಕಾವ್ಯನಾಮದಿಂದ ಪ್ರಖ್ಯಾತರಾಗಿರುವ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರರು ಸಣ್ಣಕಥೆಯ ಆದ್ಯರಲ್ಲದಿದ್ದರೂ ಅದರ ಆಧುನಿಕ ಪರಿಪೂರ್ಣ ಕಲಾಸ್ವರೂಪ ಸಂಪ್ರದಾಯದ ಆದ್ಯ ಪ್ರವರ್ತಕರು ಎಂಬಲ್ಲಿ ಸಂದೇಹವಿಲ್ಲ. ಗುಣದ ದೃಷ್ಟಿಯಿಂದಲೂ ಸಂಖ್ಯಾದೃಷ್ಟಿಯಿಂದಲೂ ಅವರು ಸಣ್ಣಕಥೆಯ ಪ್ರಪಂಚದ ಸೀಮಾಪುರುಷ ರಾಗಿದ್ದಾರೆ. ಸಣ್ಣಕಥೆಯ ಪ್ರಾರಂಭ ಯುಗದಲ್ಲಿ ಅವರ ಕಥನ ಶೈಲಿ ಹಲವರಿಗೆ ಮೇಲ್ಪಂಕ್ತಿಯಾಯಿತು. ಶ್ರೀನಿವಾಸರ ಶೈಲಿಯನ್ನು 'ಕಥನ ಕಲೆಯ ರಾಜಮಾರ್ಗ'ದ ಶೈಲಿ ಎನ್ನಬಹುದು. ಬೈಬಲ್ಲಿನ ದೃಷ್ಟಾಂತ ಕಥೆಗಳು, ಭಾರತದ ಉಪಾಖ್ಯಾನಗಳು, ಬೊಕ್ಯಾಚಿಯೋ ಕಥೆಗಳು, ಚಾಸರನ ಕೆಂಟರ್ಬರಿ ಕಥೆಗಳು, ಅರ್ವಾಚೀನರಾದ ಟಾಲ್‌ಸ್ಟಾಯ್ ಮತ್ತು ಟಾಗೂರರ ಕಥೆಗಳು ಇವು ಹಾಕಿಕೊಟ್ಟಿರುವ ಹೆದ್ದಾರಿಯನ್ನು ಅನುಸರಿಸಿ ನಿರ್ಮಿತವಾದದ್ದು ಈ ರಾಜಮಾರ್ಗ. ಈ ಶೈಲಿ ನೇರ, ಸ್ಪಷ್ಟ, ಸರಳ, ಸುಂದರ. ತಂತ್ರಕೌಶಲಾತಿರೇಕದ ಡೊಂಬರಾಟದ ಪ್ರದರ್ಶನವಿಲ್ಲ ಇಲ್ಲಿ. ಅಪಾರ ಲೋಕಾನುಭವ, ಜೀವನ ದರ್ಶನಸಿದ್ಧಿ, ಹುಟ್ಟುಗುಣವಾಗಿ ಬಂದ ಕಥನ ಕಲಾಸಾಮರ್ಥ್ಯ-ಇವನ್ನುಳ್ಳ ಶ್ರೀನಿವಾಸರಂಥ ಸತ್ತ್ವಸಂಪನ್ನರು, ಪ್ರತಿಭಾಶಾಲಿಗಳು ಮಾತ್ರ ಈ ರಾಜಮಾರ್ಗದಲ್ಲಿ ನಡೆಯಲಾಪರು. 'ಇಂದಿರೆಯೋ ಅಲ್ಲವೋ' ಮುಂತಾದ ಕೇವಲ ಎರಡು ಮೂರು ಕಥೆಗಳಲ್ಲಿ ಶ್ರೀನಿವಾಸರು ತಂತ್ರಪಯೋಗಕ್ಕೆ ಕೈ ಹಾಕಿದ್ದರೂ ನೇರವಾಗಿ ಕಥೆ ಹೇಳುವುದರಲ್ಲಿಯೇ ಅವರ ಒಲವು. ಅವರ ಕಥೆಗಳ ವಸ್ತು ವೈವಿಧ್ಯ ಬೆರಗುಗೊಳಿಸುವಂಥದು. ಓದಿದ ಸಂಗತಿ, ಕೇಳಿದ ಸಂಗತಿ, ಬಲ್ಲಸಂಗತಿ ಎಲ್ಲವನ್ನೂ ಬಳಸಿಕೊಳ್ಳುತ್ತಾರೆ ಅವರು ತಮ್ಮ ಕಥಾ ಪ್ರಪಂಚಸೃಷ್ಟಿಗೆ. 'ನಿಜಗಲ್ಲಿನ ರಾಣಿ' ಐತಿಹಾಸಿಕ ಕಥೆಯಾದರೂ ಇತಿಹಾಸದ ಪುಟವಲ್ಲ ಅದು; 'ಹೇಮಕೂಟದಿಂದ ಬಂದಮೇಲೆ', 'ಗೌತಮಿ ಹೇಳಿದ ಕತೆ' ಇವು ಕಾಳಿದಾಸನ 'ಶಾಕುಂತಲ'ದಿಂದ ಪ್ರೇರಿತವಾದರೂ ಸಂಪೂರ್ಣವಾಗಿ ಸ್ವತಂತ್ರಸೃಷ್ಟಿ. 'ಸಾಮಾಜಿಕ' ಎಂದು ವರ್ಗೀಕರಣ ಸೌಲಭ್ಯಕ್ಕಾಗಿ ಕರೆಯಬಹುದಾದ ಬಹು ಸಂಖ್ಯೆಯ ಅವರ ಕಥೆಗಳಲ್ಲಿ ಸಮಾಜದ ಯಾವುದೇ ಮುಖದ ಅಥವಾ ವರ್ಗದ ಚಿತ್ರ ತೆಗೆಯಬೇಕೆಂಬ ಹಂಬಲಾಗಲಿ ಸಾಮಾಜಿಕ ಸಮಸ್ಯೆಯೊಂದನ್ನು ಮುಂದಿಡಬೇಕೆಂಬ ಅಥವಾ ಬಿಡಿಸಬೇಕೆಂಬ ಉದ್ದೇಶವಾಗಲಿ ಕಂಡುಬರುವುದಿಲ್ಲ. ಅವರ ಕಥೆಗಳನ್ನು ಓದಿದಾಗ ಸಮಾಜ ಜೀವನ ತಾನಾಗಿ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ; ಪ್ರಾಚೀನ ಕಾಲದ ಮುನಿಗಳು, ಧರ್ಮಗುರು-ಶಿಷ್ಯರು, ಪೌರಾಣಿಕ ವ್ಯಕ್ತಿಗಳು, ಇತಿಹಾಸಯುಗದ ಸುಲ್ತಾನರು ರಾಣಿಯರು, ಸಾಧುಗಳು ಸಂನ್ಯಾಸಿಗಳು, ಬಡವರು ಬಲ್ಲಿದರು ಮುಂತಾಗಿ ಎಲ್ಲ ವರ್ಗ ವೃತ್ತಿಗಳ ಜನರೂ ಜೀವಂತವಾಗಿ ನಮ್ಮ ಕಣ್ಣ ಮುಂದೆ ಹಾದುಹೋಗುತ್ತಾರೆ; ಅವರ ಸಂಬಂಧವಾದ ಕಥೆಯಲ್ಲಿ ನಾವು ಆಸಕ್ತಿವಹಿಸು ತ್ತೇವೆ. ಆ ಎಲ್ಲ ಪಾತ್ರಗಳೂ ಲೇಖಕರ ಮಾನವ ಜೀವನದ ಮಮತೆಯ ವ್ಯಕ್ತಿಗಳಾಗಿ ಕಂಗೊಳಿಸುತ್ತಾರೆ.

ಆನಂದರು ಶ್ರೀನಿವಾಸರನ್ನು ಅನುಸರಿಸುವ ಕಥೆಗಾರರು ಎಂಬ ಹೇಳಿಕೆ ರೂಢಿಯಲ್ಲಿದೆ. ಶ್ರೀನಿವಾಸರ ಕೆಲವು ಮೊದಮೊದಲಿನ ಕಥೆಗಳಲ್ಲಿ ಕಂಡುಬರುವ ಸರಸದಾಂಪತ್ಯ ಶೃಂಗಾರ ನಿರೂಪಣೆಯನ್ನು ಆನಂದರು ತಮ್ಮ ಅನೇಕ ಕಥೆ ಗಳ ಹಾಸುಹೊಕ್ಕಾಗಿ ಮಾಡಿಕೊಂಡದ್ದು ಈ ಹೇಳಿಕೆಗೆ ಕಾರಣ ಇರಬೇಕು. ಅನೇಕ ಅಂಶಗಳಲ್ಲಿ ಇವರು ಅವರ ಪ್ರಭಾವಕ್ಕೆ ಸಿಲುಕಿದ್ದರೂ ಸ್ವಂತ ವ್ಯಕ್ತಿತ್ವವನ್ನು ಮೆರೆದಿದ್ದಾರೆ. ಇವರ ಮಾರ್ಗ ಅವರದ್ದಕ್ಕಿಂತ ತುಸ ಭಿನ್ನ. ಕಥನ ಶೈಲಿಯಲ್ಲಿ ಒಂದು ಸೊಗಸನ್ನು ಮೆರೆಯಬೇಕು, ನಿರೂಪಣ ತಂತ್ರದಲ್ಲಿ ನವೀನತೆಯನ್ನು ತರಬೇಕು, ಭಾಷಾಶೈಲಿಯಲ್ಲಿ ಸೌಂದರ್ಯವನ್ನು ಸಾಧಿಸಬೇಕು ಎಂಬ ಪ್ರಜ್ಞಾಪೂರ್ವಕ ಪ್ರಯತ್ನಗಳು ಆನಂದರ ಕಥೆಗಳಲ್ಲಿ ಕಂಡುಬರುತ್ತವೆ. ಓ. ಹೆನ್ರಿ (O. Henry), ಬ್ರೆಟ್ ಹಾರ್ಟೆ (Bret Harte), ಆ್ಯಂಬ್ರೋಸ್ ಬಿಯರ್ಸ್ (Ambroce Bierce), ಮೋಪಸ್ಸಾ, (Maupasant) ಮೊದಲಾದ ಪಾಶ್ಚಾತ್ಯ ಕಥೆಗಾರರ ಕಥನ ತಂತ್ರಗಳನ್ನು ಕನ್ನಡ ಕಥೆಗಾರಿಕೆಗೆ

ಅಳವಡಿಸಿಕೊಂಡವರಲ್ಲಿ ಇವರು ಮೊದಲಿಗರು. 'ಹೆಂಡತಿಯ ಕಾಗದ', 'ಮಾಟಗಾತಿ', 'ಚಂದ್ರಗ್ರಹಣ', 'ಜೊಜ್ಜಲು ಸಂಭ್ರಮ', 'ಜೋಯಿಸರ ಚೌಡಿ' ಮೊದಲಾದ ಕಥೆಗಳಲ್ಲಿ ಆ ತಂತ್ರಗಳು ಸಹಜವಾಗಿ ಮೈಗೂಡಿರುವುದನ್ನು ಕಾಣಬಹುದು. ಆನಂದರು ಶ್ರೀನಿವಾಸರ ಕಥನ ಕಲೆಯನ್ನು ಒಂದು ಮಜಲು ಮುಂದುವರಿಸಿದರು ಎನ್ನಬೇಕು. ಅಷ್ಟೇ ಅಲ್ಲದೆ, 'ಪದ್ಮಪಾಕ', 'ರಾಧೆಯ ಕ್ಷಮೆ' ಮುಂತಾದ ಈಚಿನ ಕಥೆಗಳಲ್ಲಿ ಅವರು ಮೆರೆದಿರುವ ಆದರ್ಶ ದಾಂಪತ್ಯ ಚಿತ್ರಣದ ಪರಿಣತಿ ಅವರದೇ ಆದ ಒಂದು ಆಕರ್ಷಕ 'ಸಂಸಾರ ಶಿಲ್ಪ' ಸಿದ್ಧಾಂತವನ್ನು ರೂಪಿಸಿದೆ.

ಶ್ರೀನಿವಾಸರ ಮೇಲುಪಂಕ್ತಿಯಿಂದ ಸ್ಫೂರ್ತಿಪಡೆದು ಆನಂದರೊಡನೆ ಸಮಸಮವಾಗಿ ಹೆಜ್ಜೆಯಿಡುತ್ತ, ಅವರಂತೆಯೇ ಕೇವಲ ಕಥಾಸೃಷ್ಟಿಗೆ ಮಾತ್ರ ತಮ್ಮ ನಿರ್ಮಾಣ ಶಕ್ತಿಯನ್ನೆಲ್ಲ ಧಾರೆಯೆರೆದು, ವಿಪುಲ ಸಂಖ್ಯೆಯಲ್ಲಿ ಕಥೆ ಬರೆದಿರುವವರೆಂದರೆ, ಕೆ. ಗೋಪಾಲಕೃಷ್ಣರಾಯರು. ಆನಂದರ ಕಥೆಗಳಲ್ಲಿರುವುದಕ್ಕಿಂತ ಇವರ ಕಥೆಗಳಲ್ಲಿ ಪ್ರಯೋಗ ಪ್ರಯತ್ನ ವಿವಿಧ ಮುಖವಾಗಿದೆ. 'ಪತ್ರಕಥೆ'ಗಳು, 'ದಿನಚರಿ' ರೂಪದ ಕಥೆಗಳು, ಮನೋವಿಶ್ಲೇಷಣಾತ್ಮಕ ಎನ್ನಬಹುದಾದ ಕಥೆಗಳು ಅಂಥ ಪ್ರಯತ್ನ ಫಲರೂಪದ ಕೆಲವು ವಿಶಿಷ್ಟ ಪ್ರಕಾರಗಳು. ಇವರೂ ದಾಂಪತ್ಯ ಶೃಂಗಾರ ನಿರೂಪಣೆಗೆ ಮೊದಮೊದಲು ಮನತೆತ್ತವರು. ಶ್ರೀನಿವಾಸರಂತೆಯೇ ಗೋಪಾಲಕೃಷ್ಣರಾಯರ ಕಥಾಪ್ರಪಂಚ ವಿಶಾಲವಾದುದು. ಪಾತ್ರಸೃಷ್ಟಿಯಲ್ಲಿ ಗೋಪಾಲಕೃಷ್ಣರಾಯರು ವಿಶೇಷ ಬಲ್ಮೆಯನ್ನು ತೋರಿದ್ದಾರೆ. ಅದರಲ್ಲಿಯೂ, ತರುಣ ದಂಪತಿಗಳ ಚಿತ್ರವನ್ನು ಕೊಡುವುದರಲ್ಲಿ ತುಂಬ ಸಮರ್ಥರು. ಆದರೂ, ಆನಂದರು 'ಸಂಸಾರಶಿಲ್ಪ'ದಲ್ಲಿ ಸಾಧಿಸಿದ ಸಿದ್ಧಿ ಇವರ ಕೈವಶವಾಗಲಿಲ್ಲ. ಗೋಪಾಲಕೃಷ್ಣರಾಯರು ಸೃಷ್ಟಿಸಿರುವ 'ಹುಚ್ಚುಮುನಿ', 'ನಮ್ಮ ದೊಡ್ಡಪ್ಪ', 'ಡಾ|| ಸುಶೀಲ ಸಂಕೇತ್' ಇವರು ಓದುಗರ ಮನದಲ್ಲಿ ಅಚ್ಚೊತ್ತಿ ನಿಲ್ಲುತ್ತಾರೆ. ಶ್ರೀನಿವಾಸರ ಸಂಪ್ರದಾಯಕ್ಕೇ ಹೆಚ್ಚು ಒಲಿದ ಅಂದಿನ ತರುಣ ಕಥೆಗಾರರಲ್ಲಿ ಶ್ರೀ ಸ್ವಾಮಿ ಪ್ರಮುಖರು. ಅವರ ಕಥೆಗಳಲ್ಲಿ ಪ್ರಮುಖವಾಗಿ ಎದ್ದು ಕಾಣುವ ಭಾವಗಳ ಎಳೆಗಳೆಂದರೆ ದೈವಭಕ್ತಿ, ಹಾಗೂ ಸಂಗೀತ ಪ್ರೇಮ.

ಇದೇ ಕಾಲದಲ್ಲಿ, ಧಾರವಾಡದ ಗೆಳೆಯರ ಗುಂಪು ಹೊಸಕವಿತೆಯ ಕ್ಷೇತ್ರದಲ್ಲಿ ಹೇಗೋ ಹಾಗೆ ಕಥಾಕ್ಷೇತ್ರದಲ್ಲಿಯೂ ಗಣ್ಯವಾದ ಸೇವೆ ಸಲ್ಲಿಸುತ್ತಬಂದಿತು. ಈ ಗುಂಪಿನ ಕಥೆಗಾರರಲ್ಲಿ ಆನಂದಕಂದ, ಬೇಂದ್ರೆ, ಮುಗಳಿ ಇವರು ಕವಿಗಳೂ ಆದದ್ದರಿಂದ ವಿಪುಲ ಸಂಖ್ಯೆಯಲ್ಲಿ ಕಥಾ ರಚನೆ ಮಾಡಲಿಲ್ಲ. ಆದರಲ್ಲಿಯೂ, ಬೇಂದ್ರೆಯವರ ಕಥೆಗಳ ಸಂಖ್ಯೆ ತೀರ ಕಡಮೆ. ಅವರ ಕಥೆಗಳಲ್ಲಿ ಕಥನ ಕಲೆಗಿಂತ ಭಾವಬಂಧುರತೆ ಮನಸೆಳೆಯುತ್ತದೆ. ಇದೇ ಮಾತನ್ನು ಪು. ತಿ. ನ. ಅವರ ಕಥೆಗಳಿಗೂ ಅನ್ವಯಿಸಿ ಹೇಳಬಹುದು. ಒಟ್ಟಿನ ಮೇಲೆ ಇವರಿಬ್ಬರ ಗದ್ಯಶೈಲಿಯೂ ಕಥನ ಕಲೆಗೆ ಒಗ್ಗಿದುದಲ್ಲ. ಇವರಂತೆಯೇ ಕವಿಯಾದ ಕುವೆಂಪು ಅವರ ಕಥೆಗಳು ಮಾತ್ರ ಸಹಜತೆಯ ಕಡೆಗೆ ಹೆಚ್ಚು ಬಾಗಿವೆ, ಕೌತುಕ ಪೂರ್ಣವಾಗಿವೆ. ಹಳ್ಳಿಯ ಜೀವನವನ್ನೇ ತಮ್ಮ ಕಥೆಗಳ ವಸ್ತುವಾಗಿ ಮಾಡಿಕೊಂಡ ಕಥೆಗಾರರೆಂದರೆ, ಆನಂದಕಂದ ಹಾಗೂ ಗೊರೂರು ರಾಮಸ್ವಾಮಿ ಅಯ್ಯಂಗಾರ್. ಇಬ್ಬರೂ ವಾಸ್ತವಿಕ ದೃಷ್ಟಿಯಿಂದಲೇ ಹಳ್ಳಿಯ ಜೀವನವನ್ನು ಚಿತ್ರಿಸುವರಾದರೂ, ಗೊರೂರರ ಅನೇಕ ಕಥೆಗಳಲ್ಲಿ ಮೈತುಂಬ ಹರವಿಕೊಂಡ ಹಾಸ್ಯದ ಸೊಗಡು ಅವಕ್ಕೆ ಉತ್ಪ್ರೇಕ್ಷೆಯ ಬಣ್ಣ ಕಟ್ಟುತ್ತದೆ. ಅಥವಾ, ಉತ್ಪ್ರೇಕ್ಷೆಯೇ ಅವರ ಹಾಸ್ಯಕ್ಕೆ ಸಾಧನ ಎನ್ನಲೂ ಬಹುದು. ಸಾಮಾಜಿಕ ಲೋಪದೋಷಗಳಿಗಿಂತ ಹೆಚ್ಚಾಗಿ ವ್ಯಕ್ತಿಗಳ ಲೋಪದೋಷಗಳಿಗೆ ಹಾಸ್ಯದ ಭೂತಗನ್ನಡಿ ಹಿಡಿದು ನಗಿಸುವುದು ಗೊರೂರರ ಕಥನ ಕಲೆಯ ವೈಶಿಷ್ಟ್ಯ. ಸಣ್ಣ ಕಥೆಗಳ ಯುಗದ ಪ್ರಾರಂಭಕಾಲದಲ್ಲಿಯೇ ಕಥೆಗಾರರೆಂದು ಹೆಸರಾದವರಲ್ಲಿ ಪ್ರಮುಖರೆಂದರೆ, 'ಬಿಸಿಲುಗುದುರೆ' ಸಂಕಲನದ ಕೃಷ್ಣಕುಮಾರ ಕಲ್ಲೂರರು; 'ಭಾವಪ್ರಭಾತ'ದ (ದಿವಂಗತ) ಎಚ್. ಪಿ. ಜೋಶಿಯವರು; 'ಕಂಬನಿ'ಯ ಕೊಡಗಿನ ಗೌರಮ್ಮನವರು, ಹಾಗೂ 'ಹೂಬಿಸಿಲು' 'ಹೊಂಬಿಸಿಲು'ಗಳ ಶ್ಯಾಮಲಾದೇವಿಯವರು; 'ಬೆಳುದಿಂಗಳು' ಸಂಕಲನದ ಜಿ. ಪಿ. ರಾಜರತ್ನಂ; 'ಮಾರ್ಗದರ್ಶಕ' ಸಂಕಲನದ ಎಂ. ವಿ. ಸೀ.; 'ಸೋಲೋ ಗೆಲವೋ' ನೀಡಿದ (ದಿವಂಗತ) ದೇವುಡು, 'ಲಕ್ಷ್ಮಣರಾಯನ ಭಾಗ್ಯ' ಎಂಬ ಕಥೆಯಿಂದಲೇ ಪ್ರಸಿದ್ಧರಾದ ನವರತ್ನ ರಾಮರಾಯರು; ಬಹುಕಾಲದವರೆಗೆ 'ಶ್ರೀಪತಿ' ಎಂಬ ಕಾವ್ಯನಾಮದ ಮರೆಯಲ್ಲಿ ಅಡಗಿಕೊಂಡು 'ಪ್ರಬುದ್ಧ ಕರ್ಣಾಟಕ'ದಲ್ಲಿ ಹಲವು ಉತ್ತಮ ಸಾಂಸಾರಿಕ ಕಥೆಗಳನ್ನು ಬರೆದ ಡಾ|| ಎ. ಆರ್. ಕೃ. ಅವರು; ಈಚೆಗೆ ಪ್ರಕಟವಾದ 'ಇದ್ದರೂ ಇರಬಹುದು' ಸಂಕಲನದ ಕತೆಗಳನ್ನು ಬರೆದ (ದಿವಂಗತ) ಎಸ್. ಜಿ. ಶಾಸ್ತ್ರಿಗಳು ಹಾಗೂ 'ರುದ್ರವೀಣೆ'ಯ ಭಾರತೀಪ್ರಿಯರು; ಈ ವರೆಗೆ ಯಾವ ಸಂಕಲನವನ್ನೂ ಪ್ರಕಟಿಸದಿದ್ದರೂ 'ನಮ್ಮೂರಿನ ಪಕ್ಷಿಮಕ್ಕೆ' ಎಂಬ ಶ್ರೇಷ್ಠ ಕಥೆಯಿಂದ ಪ್ರಸಿದ್ಧರಾದ ನಾಟಕಕಾರ ಕ್ಷೀರಸಾಗರರು; ಅಂತೆಯೇ 'ಗಂಗೆಯ ಗುತ್ತಿಗೆ'ಯಿಂದ ಪ್ರಸಿದ್ಧರಾದ ಟೀಂಗ್ಸೆ



ಕವಿವರ್ಯ ಶ್ರೀ ದಾ. ರಾ. ಬೇಂದ್ರೆ ಅವರು



ಶ್ರೀ ನಿಟ್ಟೂರು ಶ್ರೀನಿವಾಸರಾಯರು




ಶ್ರೀ ರಂಗನಾಥ ರಾಮಚಂದ್ರ ದಿವಾಕರರು



ಮುಖ್ಯ ಮಂತ್ರಿ
ಶ್ರೀ ಎಸ್. ನಿಜಲಿಂಗಪ್ಪನವರು





ಮಾಜಿ ಮುಖ್ಯ ಮಂತ್ರಿ
ಶ್ರೀ ಕೆ. ಹನುಮಂತಯ್ಯನವರು



ಗೃಹ ಮಂತ್ರಿ
ಶ್ರೀ ಆರ್. ಎಂ. ಪಾಟೀಲರು



ವಿದ್ಯಾ ಮಂತ್ರಿ
ಶ್ರೀ ಎಸ್. ಆರ್. ಕಂಠಿಯವರು



ವಿಧಾನಸಭಾಧ್ಯಕ್ಷ
ಶ್ರೀ ಬಿ. ವಿ. ಬಾಳಿಗ ಅವರು

# ಸ್ವಾತಂತ್ರ್ಯ ಪೂರ್ವದ ಕನ್ನಡ ಜನಪದ ಸಾಹಿತ್ಯದ ಬೆಳವಣಿಗೆ

ಲೇಖಕರು : ಶ್ರೀ ಚೆನ್ನವೀರ ಕಣವಿ

'ಕನ್ನಡ ನುಡಿ'ಯ ಬೆಳ್ಳಿಯ ಸಂಚಿಕೆಗೆ, ಮೇಲೆ ಕಾಣಿಸಿದ ವಿಷಯವನ್ನು ಕುರಿತು ಲೇಖನ ಬರೆದು ಕೊಡಲು ಸಂಪಾದಕರು ಕೇಳಿಕೊಂಡಿದ್ದಾರೆ. ಆದರೆ 'ಬೆಳವಣಿಗೆ' ಎನ್ನುವ ಮಾತನ್ನು ಉಳಿದ ಸಾಹಿತ್ಯ ಪ್ರಕಾರಗಳಿಗೆ ಅನ್ವಯಿಸ ಬಹುದಾದಂತೆ ಜನಪದ ಸಾಹಿತ್ಯಕ್ಕೆ ಅನ್ವಯಿಸಲು ಬಾರದು ಎಂದು ತೋರುತ್ತದೆ. ಜನದ ನಾಲಗೆಯಮೇಲೆ ನಲಿದಾಡುತ್ತಿರುವ ಈ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸುವ, ವಿವೇಚಿಸುವ ಕಾರ್ಯ ನಡೆದಿದೆಯೇ ವಿನಃ ಹೊಸದಾಗಿ ಬರೆದು, ಸೇರಿಸಿ ಬೆಳೆಸುವುದಲ್ಲ. ಒಂದು ವೇಳೆ ಕಲಿತವರು ಹಾಗೆ ಬೆಳೆಸಲು ಪ್ರಯತ್ನಿಸಿದರೆ ಅದು ಬೇರೆ ಏನಾದರೂ ಆದೀತು. ಆದರೆ ಜನಪದ ಸಾಹಿತ್ಯವಾಗಿ ಉಳಿಯಲಾರದು. ಆದುದರಿಂದ ಸ್ವಾತಂತ್ರ್ಯಪೂರ್ವದ ಕಾಲದಲ್ಲಿ ಕನ್ನಡ ಜನಪದ ಸಾಹಿತ್ಯದ ಸಂಗ್ರಹ, ಪ್ರಕಟನೆ ಎಷ್ಟರಮಟ್ಟಿಗೆ ನಡೆಯಿತು ? ಓದು ಬರೆಹ ಬಾರದ ನಮ್ಮ ಹಳ್ಳಿಯ ಜನ ತಲೆನೂರಿನಿಂದ ತಲೆಮಾರಿಗೆ ಪರಂಪರಾಗತವಾಗಿ ಹಾಡುತ್ತ ಹಾಡುತ್ತ ಸೃಷ್ಟಿಸಿದ ಈ ಸಾಹಿತ್ಯದ ಸವಿ ಕಲಿತವರಿಗೆ ಎಷ್ಟರಮಟ್ಟಿಗೆ ದೊರೆಯಿತು ಎನ್ನುವುದನ್ನು ಅಲ್ಪಾವಕಾಶದಲ್ಲಿ ಅವಲೋಕಿಸುವದೇ ಈ ಲೇಖನದ ಉದ್ದೇಶವೆಂದು ನಾನು ತಿಳಿದು ಕೊಂಡಿದ್ದೇನೆ.

ಹಳ್ಳಿಗಳು, ಅದರಲ್ಲೂ ನಾಗರೀಕತೆಯ ಸಂಪರ್ಕದಿಂದ ದೂರವಿರುವ ಹಳ್ಳಿಗಳು ಜನಪದ ಸಾಹಿತ್ಯಕ್ಕೆ ತವರುಮನೆ. ಈಗ ಪಟ್ಟಣವಾಸಿಗಳಾಗಿದ್ದರೂ, ಹಳ್ಳಿಗಳಲ್ಲಿ ತಮ್ಮ ಬಾಲ್ಯವನ್ನು ಕಳೆದ ಅನೇಕರು ಆ ಬಾಳಿನ ಸವಿ ಎಂಥದು ಎನ್ನುವು ದನ್ನು, ಅಲ್ಲಿ ಜೀವನವೇ ಹಾಡಾಗಿ, ಹಾಡೇ ಜೀವನವಾಗಿ ಪರಿಣಮಿಸಿರುವ ಬಗೆಯನ್ನು ಬಹುಶಃ ಬಲ್ಲರು. ಬೀಸುವಾಗ, ಕುಟ್ಟುವಾಗ, ತೊಟ್ಟಿಲು ತೂಗುವಾಗ, ಮಕ್ಕಳನ್ನು ಆಡಿಸುವಾಗ, ಬಿತ್ತುವಾಗ, ಹರಗುವಾಗ, ಯಾತ ಹೊಡೆಯುವಾಗ, ಹಂತಿ ಕಟ್ಟಿದಾಗ, ಕಾಳು ತೂರುವಾಗ, ರಾಶಿ ಮಾಡುವಾಗ, ಬೆಳದಿಂಗಳಲ್ಲಿ ಕೋಲು ಹೊಯ್ಯುವಾಗ, ಚಕ್ಕಡಿ ಹೊಡೆಯು ವಾಗ — ಇತ್ಯಾದಿ ನೂರೆಂಟು ಕೆಲಸಗಳಲ್ಲಿ ತೊಡಗಿದಾಗ ಹಳ್ಳಿಯ ಜನ ಹಾಡಿ ತಮ್ಮ ಬದುಕನ್ನು ಹಗುರುಮಾಡಿಕೊಳ್ಳು ತ್ತಾರೆ. ಹಬ್ಬ ಹರಿದಿನಗಳಲ್ಲಿ, ಮದುವೆ ಮಹೋತ್ಸವಗಳಲ್ಲಿ ಆನಂದದಿಂದ ನಾನಾ ಬಗೆಯ ಸಂತೋಷವನ್ನು ಹಾಡುಗಳಲ್ಲಿ ಹೊರಹೊಮ್ಮಿಸುತ್ತಾರೆ. ಊರಲ್ಲಿ ಬಯಲಾಟ ಹಚ್ಚಿದಾಗ ಅದರ ಮಾತುಗಳನ್ನೂ, ಹಾಡುಗಳನ್ನೂ, ಹೊಲದಲ್ಲಿ ಕೆಲಸ ಮಾಡುತ್ತಿರುವಾಗಲೇ ಅಂದು ಅಂದು ಬಾಯಿಪಾಠ ಮಾಡಿಕೊಳ್ಳುವುದುಂಟು ಅದರಲ್ಲಿ ಪಾತ್ರವಹಿಸಿದ ಈ ಅನಕ್ಷರಸ್ಥ ಬಂಧುಗಳು. ಹೀಗೆ "ನೃತ್ಯದ ಉಲ್ಲಾಸವನ್ನು ಪ್ರಕಾಶಗೊಳಿಸುತ್ತ, ಉದ್ಯೋಗದ ಆಯಾಸವನ್ನು ಪರಿಹಾರ ಮಾಡುತ್ತ, ಆಗ್ಗೆ ಏಳುವ ಉಸಿರಿಗೆ ತಕ್ಕಹಾಗೆ ರಾಗವನ್ನು (ಛಂದಸ್ಸನ್ನು) ಹೊಂದಿಸುತ್ತಾ ಹುಟ್ಟಿದುವು ಈ ಹಾಡುಗಳು; ಮುತ್ತು ಈ ಹಾಡಿನ ಮರಿಗಳು." (ಬಿ.ಎಂ.ಶ್ರೀ.)

ಕನ್ನಡದಲ್ಲಿ ಜನಪದ ಸಾಹಿತ್ಯ ಸಂಗ್ರಹಕ್ಕೆ ಮೊಟ್ಟಮೊದಲು ಚಾಲನೆ ದೊರೆತುದು ಉತ್ತರ ಕರ್ನಾಟಕದಲ್ಲಿ ಎಂದು ತೋರುತ್ತದೆ. ಬೆಳವಲ, ಮಲೆನಾಡು, ಗಡಿನಾಡು, ಸಮುದ್ರ ಕರಾವಳಿ ಹೀಗೆ ನಾಡಿನ ಎಲ್ಲ ಭಾಗದಲ್ಲೂ ಈ ಸಾಹಿತ್ಯ ಹಳ್ಳಿಗಳಲ್ಲಿ ಹೊರಹೊಮ್ಮುತ್ತಿದ್ದಿತು. 'ಗರತಿಯ ಹಾಡು'ಗಳಿಗೆ ಪರಿಚಯ ಒದಗಿಸುತ್ತ ಶ್ರೀ ಬೇಂದ್ರೆಯವರು ಹೀಗೆ ಬರೆಯುತ್ತಾರೆ: "ನನಗೆ ತಿಳಿದಮಟ್ಟಿಗೆ ಗೆ| ಚನ್ನಮಲ್ಲಪ್ಪನವರು ವಿಜಾಪುರ ಸಾಹಿತ್ಯ ಸಮ್ಮೇಲನದ ಕಾಲಕ್ಕೆ ಹಳ್ಳಿಯ ಸಾಹಿತ್ಯದ ವಿಷಯವಾಗಿ ಮಾತನಾಡಿದುದೇ ಮೊದಲು. ಅವರ ಪುಟ್ಟ ನಿಬಂಧವು ಮುಂದೆ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಯಿತು. ಹೊಸಪೇಟೆಯ ಶ್ರೀ ಹಣಮಂತಗೌಡರು ಮೊದಲಾದವರು ಲಾವಣಿಗಳ

ಸಂದರ್ಭವನ್ನು ಆಗಾಗ್ಗೆ ಎತ್ತಿ ಮಾತನಾಡಿದರೂ, ಲಾವಣಿ ಸಾಂಗತ್ಯಗಳ ವಿಷಯವಾಗಿ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರು ಪರಿಷತ್ಪತ್ರಿಕೆಯಲ್ಲಿ ಬರೆದ ಸೊಗಸಾದ ಲೇಖನವೇ ಮಹತ್ವದ ಬರೆಹ. ಕಲಬುರ್ಗಿ, ಬೆಳಗಾಂವಿ ಮತ್ತು ಮೈಸೂರು ಈ ಮೂರು ಸಮ್ಮೇಲನಗಳಲ್ಲಿಯೂ ಪ್ರಮುಖವಾಗಿ ಶ್ರೀಮಾನ್ ಶ್ರೀಕಂಠಯ್ಯನವರ ಪ್ರೋತ್ಸಾಹದ ದಿಂದಲೂ, ಪ್ರೀತಿಗಾಗಿಯೂ, ಜನಪದ ಸಾಹಿತ್ಯದ ವಿಚಾರವನ್ನು ಕುರಿತು ಸಮ್ಮೇಲನದ ಸಭಾಸದರ ಸಮಕ್ಷಮದಲ್ಲಿ ಚರ್ಚಿಸುವ ಸಂಧಿ ನನಗೆ ದೊರೆಯಿತು." ಆಮೇಲೆ ಈ ಕಾರ್ಯವನ್ನು ಎತ್ತಿಹಿಡಿದು ಮುನ್ನಡೆಸಿದವರು ಅನೇಕರು. ಶ್ರೀಗಳಾದ ಬೆಟಗೇರಿ ಕೃಷ್ಣಶರ್ಮ, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮೊದಲಾದವರು ಈ ಬಗ್ಗೆ ಲೇಖನಗಳನ್ನು ಬರೆದು ವಿಶೇಷ ಆಸ್ಥೆ ವಹಿಸಿದರು. 'ಜಯಕರ್ನಾಟಕ' ಪತ್ರಿಕೆಯಿಂದ ಈ ಸಾಹಿತ್ಯ ಸಂಗ್ರಹಕ್ಕೆ ಹೆಚ್ಚಿನ ಪೋಷಣೆ ದೊರೆಯಿತು. 'ಸರಸ್ವತಿ,' 'ಪ್ರಬುದ್ಧ ಕರ್ಣಾಟಕ,' 'ರಂಗಭೂಮಿ,' 'ಕಥಾಂಜಲಿ,' 'ವಿಚಾರವಾಹಿನಿ' ಮೊದಲಾದ ಪತ್ರಿಕೆಗಳೂ ಈ ಮಾರ್ಗವನ್ನು ಅನುಸರಿಸಿದವು. ಶ್ರೀ ಬಿ. ಎನ್. ರಂಗಸ್ವಾಮಿ ಮೊದಲಾದವರು ಮೈಸೂರು ಪ್ರಾಂತದ ಜನಪದ ಸಾಹಿತ್ಯ ಸಂಗ್ರಹಕ್ಕೆ ತೊಡಗಿದರು.

ಸ್ವಾತಂತ್ರ್ಯಪೂರ್ವದಲ್ಲಿ ಪ್ರಕಟವಾದ ಜನಪದ ಸಾಹಿತ್ಯಸಂಗ್ರಹಗಳಲ್ಲಿ 'ಗರತಿಯ ಹಾಡು,' 'ಜೀವನ ಸಂಗೀತ,' 'ಮಲ್ಲಿಗೆ ದಂಡೆ' ಮತ್ತು 'ನಾಡಪದಗಳು' ಇವು ಅತ್ಯಂತ ಗಮನಾರ್ಹವಾದವುಗಳು. ರಸವಂತಿಕೆಯಲ್ಲಿ ಅವಿನ್ನೂ ಹೊಚ್ಚ ಹೊಸತಾಗಿಯೇ ಇವೆ. ಹಲಸಂಗಿಯ ಚೆನ್ನಮಲ್ಲಪ್ಪ (ಮಧುರಚೆನ್ನ), ಲಿಂಗಪ್ಪ (ಸಿಂಪಿಲಿಂಗಣ್ಣ), ರೇವಪ್ಪ (ಕಾಪಸೆ ರೇವಪ್ಪ) ಮೊದಲಾದ ಗೆಳೆಯರು ಸಂಗ್ರಹಿಸಿ ಕೊಟ್ಟ 'ಗರತಿಯ ಹಾಡು' ೧೯೩೧ರಲ್ಲಿ 'ಜಯಕರ್ನಾಟಕ ಗ್ರಂಥ ಮಾಲೆ'ಯ ಹೂವಾಗಿ ಅರಳಿತು. 'ಜನವಾಣಿ ಬೇರು: ಕವಿವಾಣಿ ಹೂವು' ಎಂಬ ಮಾತು ದಿ. ಬಿ.ಎಂ. ಶ್ರೀಕಂಠಯ್ಯನವರು ಈ ಸಂಗ್ರಹಕ್ಕೆ ಬರೆದ ಪ್ರಸ್ತಾವನೆಯಲ್ಲಿ ಬಂದಿದೆ. 'ಪರಿಚಯ' ಲೇಖನದಲ್ಲಿ ಶ್ರೀ ಬೇಂದ್ರೆಯವರು ಜನಪದ ಸಾಹಿತ್ಯದ ತಿರುಳನ್ನು ವಿಸ್ತಾರವಾಗಿ ವಿವರಿಸಿದ್ದಾರೆ. ಅಲ್ಲದೆ ಆ ಸಾಹಿತ್ಯದಿಂದ ನಮ್ಮ ಆಧುನಿಕ ಸಾಹಿತ್ಯ ಸಂಸ್ಕಾರಗೊಳ್ಳಬೇಕು ಎಂಬುದನ್ನು ಎತ್ತಿ ಹೇಳಿದ್ದಾರೆ. "ಸಂಸ್ಕೃತ, ಇಂಗ್ಲೀಷ್, ಹಳಗನ್ನಡಗಳ ಪ್ರತಿಬಿಂಬವನ್ನು ತಳೆದ ಸಾಹಿತ್ಯಕ್ಕಿಂತಲೂ ಅಚ್ಚಗನ್ನಡದ ಅಚ್ಚೊತ್ತಿದ ಸಾಹಿತ್ಯದ ಅಗತ್ಯವು ಅಷ್ಟಿಷ್ಟೆಂದು ಹೇಳಬರದು. ಕಟ್ಟಳ್ಳ ಮೈ, ಹುಟ್ಟು ಸವಿಯುಳ್ಳ ನುಡಿ, ತಿಳಿಯಾದ ಬಗೆ, ಇವೆಲ್ಲವೂ ಬೇಕು ಈಗಿನ ಕವನಗಳಲ್ಲಿ." ಆಧುನಿಕ ಕನ್ನಡ ಸಾಹಿತ್ಯದ ಪ್ರವಾಹ ಜನಪದ ಸಾಹಿತ್ಯದ ಪುನರುಜ್ಜೀವನದಿಂದ ಹೊಸ ನೀರು ಪಡೆದುದನ್ನು ಇಲ್ಲಿ ನೆನೆಯಬೇಕು. ಜನಪದ ಸಾಹಿತ್ಯದಿಂದ ನಮ್ಮ ಕೆಲವು ಹಿರಿಯ ಕವಿಗಳು ಒಂದು ಬಗೆಯ ನಾವೀನ್ಯವನ್ನು ತಂದುಕೊಂಡರು. 'ಗರತಿಯ ಹಾಡಿಗೆ' ಆಶೀರ್ವಾದ ನೀಡಿದ ಶ್ರೀ ಮಾಸ್ತಿಯವರು "ಅದು ಹೃದಯದ ನೂರು ಭಾವಗಳನ್ನು ನಿರಾಯಾಸವಾಗಿ ವರ್ಣಿಸುತ್ತದೆ. ಓದುವವರ ಮನಸ್ಸನ್ನು ಅರ್ಥಕ್ಕೆ ನೇರವಾಗಿ ಒಯ್ಯುತ್ತದೆ," ಎಂದೂ, "ಈ ಪದಗಳ ಸಮುಚ್ಚಯವು ಕನ್ನಡ ಜನದ ವಿನಯದ ಚಿತ್ರ, ಕನ್ನಡ ನುಡಿಯ ಗೆಲವಿನ ಕಳೆ, ಕನ್ನಡದ ಹೊಸ ಕವಿತೆಯ ಪೈರಿಗೆ ರಸ" ಎಂದೂ ನುಡಿದಿರುವುದು ಯಥಾರ್ಥವಾಗಿದೆ. 'ಸ್ತುತಿ,' 'ತವರುಮನೆ – ತಾಯ್ತಂದೆ,' 'ಅಣ್ಣ ತಮ್ಮ – ಅಕ್ಕತಂಗಿಯರೂ, ಅತ್ತಿಗೆ ನಾದಿನಿಯರೂ,' 'ಗೆಳತಿ,' 'ಅತ್ತೆಯ ಮನೆಯ ಕಷ್ಟ,' 'ಮನಸ್ತಾಪ,' 'ಸತಿ – ಪತಿ,' 'ಬಸುರಿ – ಬಾಣಂತಿ,' 'ಲಾಲಿ,' 'ಮಗ, ಮಗಳು, ಸೊಸೆ,' 'ಹರಕೆ,' 'ಬಂಜೆ,' 'ವೈಧವ್ಯ,' 'ಹಾಸ್ಯ,' 'ಪೌರಾಣಿಕ,' 'ಐತಿಹಾಸಿಕ,' 'ವರ್ಣನೆ,' 'ಸಂವಾದ,' 'ಪ್ರಾರ್ಥನೆ,' 'ಪರ್ಯಾಯ ನೀತಿ,' 'ಸ್ಪಷ್ಟ ನೀತಿ' ಹೀಗೆ ಬೇರೆ ಬೇರೆ ತಲೆಕಟ್ಟುಗಳಲ್ಲಿ ಈ ಹಾಡುಗಳನ್ನು ವಿಭಾಗಿಸಿ ಕೊಟ್ಟಿರುವುದಲ್ಲದೆ ಬಳಕೆಯ ಮೂರ್ತಿ ಪದ ಪ್ರಯೋಗಗಳನ್ನೂ, ಚಿಕ್ಕ ಶಬ್ದಕೋಶವನ್ನೂ ಇವಕ್ಕೆ ಒದಗಿಸಲಾಗಿದೆ.

'ಆದಾವ ನಮ ಜೋಳ ಉಳಿದಾವ ನಮ ಹಾಡು।
ಈಗ ಸಾಕವ್ವ ನಿನಕಲ್ಲ। ಕೈಯಾಗ
ಹಾಕಿದುಂಗುರ ಸವಿದಾವ॥'

ಎಂದು ಧ್ವನಿಪೂರ್ಣವಾಗಿ ಕೊನೆಗೊಳ್ಳುವ ಈ ಹಾಡುಗಳಿಗೆ ಕೊನೆಯೆಲ್ಲಿ?

ಮುಂದೆ ೧೯೩೩ರಲ್ಲಿ ಅದೇ ಗ್ರಂಥಮಾಲೆಯಲ್ಲಿ ಶ್ರೀ ಸಿಂಪಿ ಲಿಂಗಣ್ಣ ಹಾಗೂ ಪಿ. ಧೂಲಾ ಅವರು ಲಾವಣಿಗಳದೇ ಒಂದು ಪ್ರತ್ಯೇಕ ಸಂಗ್ರಹ 'ಜೀವನ ಸಂಗೀತ'ವನ್ನೂ ಪ್ರಸಿದ್ಧರಾದ ಏಳು ಮಂದಿ ಲಾವಣಿಕಾರರ ಮಿಗಿಲಾದ

ಹನ್ನೆರಡು ಲಾವಣಿಗಳನ್ನೊಳಗೊಂಡು ಪ್ರಕಟಿಸಿದರು. 'ಶ್ರೀ ಸಾನಿಧಪ ಪಧನಿಸ ಸರಿಗಮ ನಾರಿ ನಿನ ಗತ್ತಾ," ಎಂಬ ಗತ್ತು ಈ ಲಾವಣಿಗಳ ಲಾವಣ್ಯ ವಿಶೇಷ.

'ತಾಳಗತ್ತ ಮಾಡಿದಾಂಗ
ಸಗಾರಿ ನುಡಿದಾಂಗ
ದುಮುದುಮಿ ಹೊಡಿದಾಂಗ
ನೌಬತ್ತ ಬಡಿದಾಂಗ
ಕೊಂಬ ಕಾಳಿ ಹಿಡಿದಾಂಗ
ಸಿಡ್ಲ ಮಿಂಚ ಕಡಿದಾಂಗ
ಮಗ್ಗಿ ಪಾಟ್ಲ ಹೆಣೆದಾಂಗ
ಸುದ್ದ ನವಿಲ ಕುಣಿದಾಂಗ'

ಇವುಗಳ ಪ್ರಾಸ ಪ್ರಪಂಚವನ್ನೂ, ಭಾವ ವಿಲಾಸವನ್ನೂ ಕಲ್ಪನೆಯ ಅಗಾಧ ವೈಖರಿಯನ್ನೂ, ರಸೋನ್ಮೇಷವನ್ನೂ, ದನಿಯ ಏರು – ಇಳಿವುಗಳನ್ನೂ, ನಿರರ್ಗಳ ಓಟವನ್ನೂ ಹಿಡಿದಿಡಲು ಒಂದೇ ಉಸಿರು ಸಾಲದು. ಈ ಲಾವಣಿಗಳಲ್ಲಿಯ ಶೃಂಗಾರ 'ಮನ್ಮಥ ಸುರಿಸಿದಾಂಗ ಮಳಿ' ಹಾಸ್ಯವೋ !

'ನಿನ್ನ ಮೂಗ ಕಾಡಿಗಿ ತೆನಿ |
ಹೆಣ್ಣ ನಾಗೀಣಿ |
ಸಣ್ಣಸ್ವರ-ಧನೀ | ಕರಿಯ ಕೋಗಿಲಾ ||

ಇನ್ನು ವೀರವನ್ನು ಕೇಳಬೇಕೆ ?

'ಇಂದ ಬೇಕಾರ ಹೋಗಿರಿ ಭ ಡ ಡ ಡ-
ಪಾಂಡವರ ಕಡಿಹೊಂಟ | ಹೊಂಟ ನೀವು ಹೊಂಟ ||
ರಥ ಏರಿ ಹೊಡದಾ ಘ ಡ ಡ ಡ-
ದಂಡಿನೊಳಗ ಭಂಟ | ಭಂಟ ತಾನು ಭಂಟ ||
ಮೀಸಿ ಹುರಿಯ ಹಾಕಿ ಖ ಡ ಡ ಡ-
ಬಾಣ ಜಗ್ಗೀಬಿಟ್ಟಾ | ತಾನು ಬಿಟ್ಟಾ || '

ಸಂಗ್ರಹಕಾರರು ಇವುಗಳ 'ಪರಿಚಯ' ಮಾಡಿಕೊಡುತ್ತ, "ಕೈಗೆ ಸಿಕ್ಕ ವೇದಾಂತ ಪುಸ್ತಕಗಳನ್ನೋದಿ ಬೈರಾಗಿಯಾದ ವರಿಗಿಂತ ವಿವಿಧ ರಸಪೋಷಣೆಯಲ್ಲಿ ಬೆಳೆದ ಲಾವಣೀ ಕವಿಗಳ ವೃದ್ಧಾಪ್ಯ ಜೀವನವು ಬಹಳೇ ಪ್ರಶಾಂತ ರಮಣೀಯ ವಾಗುತ್ತಿರುವುದುಂಟು. ವಿವಿಧ ಸ್ವರಗಳನ್ನು ಉಚಿತವಾಗಿ ಬಳಸಿಕೊಂಡರೆ ಅದು ಸಂಗೀತ. ವಿವಿಧ ರಸಗಳನ್ನು ಉಚಿತವಾಗಿ ಬಳಸಿಕೊಂಡರೆ ಅದು ಜೀವನ. ಅಂತೇ ಇದು ಜೀವನ ಸಂಗೀತ" ಎಂದಿದ್ದಾರೆ. ಈ ಸಂಗ್ರಹದಲ್ಲಿ ಹಳೇ ಲಾವಣಿಗಳಷ್ಟನ್ನೇ ಸ್ವೀಕರಿಸಿ ಹೊಸ ಲಾವಣಿಗಳಿಗೆ ಕೈ ಹಚ್ಚದಿರುವುದಕ್ಕೆ ಅವರು ಕೊಟ್ಟಿರುವ ಕಾರಣ ಗಮನಾರ್ಹ ವಾಗಿದೆ. "ಈಚೆಗಿನ ಹಾಡುಗಳೆಂದರೆ ನೀರಸವಾದ ಲೆಕ್ಚರನ್ನು ಧ್ವನಿಕೂಡಿಸಿ ತಾಳದಲ್ಲಿ ಹೇಳಿದಂತೆ, ಕೆಲವರು ನೀತಿಯ ನಿಬಂಧಗಳನ್ನು ಪ್ರಾಸಕ್ಕೆ ಸರಿಹೊಂದಿಸಿ ನೀತಿಸಾರ ಲಾವಣಿಯೆಂದು ಹೇಳುವರು. ಈಗಿನ ಕಥಾಸಾರ ಲಾವಣಿ ಗಳನ್ನಂತೂ ಕೇಳಲಾಸಲ್ಲ . . . ಒಟ್ಟಿನಲ್ಲಿ ಈಚೆಗೆ ಇಪ್ಪತ್ತು ವರ್ಷಗಳಲ್ಲಿ ಹೊರಟ ಹೊಸ ಲಾವಣಿಕಾರರ ಹಾಡುಗಳಲ್ಲಿ ಕಾವ್ಯದ ವಿಲಾಸವಿಲ್ಲ, ಬರೀ ಸಂಗೀತಮಯ, ಲೆಕ್ಚರ್." ೧೯೩೩ರಲ್ಲಿ ಬರೆದ ಈ ಮಾತನ್ನು ನೆನೆದರೆ ಇಂದಿನ ಲಾವಣಿಗಳ ವಿಷಯವನ್ನು ಹೇಳುವದೇ ಬೇಡ. ಆದುದರಿಂದಲೇ ಲಾವಣಿಗಳ ಸಂಗ್ರಹದಲ್ಲಿ 'ಜೀವನ ಸಂಗೀತ'ಕ್ಕಿರುವ ಬೆಲೆ ಬಹು ದೊಡ್ಡದು.

ಶ್ರೀಮಾನ್ ಕಾಪಸೆ ರೇವಪ್ಪನವರು ಸಂಗ್ರಹಿಸಿದ 'ಮಲ್ಲಿಗೆ ದಂಡೆ' ೧೯೩೫ ರಲ್ಲಿ ಪ್ರಕಟಗೊಂಡು ಕನ್ನಡ ನಾಡಿನ ತುಂಬ ತನ್ನ ಕಂಪು ಬೀರಿತು. ದಿವಂಗತ ಮಧುರಚೆನ್ನರು 'ಮುನ್ನುಡಿ'ಯಲ್ಲಿ 'ಕಾವ್ಯದ ಉಗಮ' ಹಾಗು 'ಕಾವ್ಯದ ಲಕ್ಷಣ'ಗಳನ್ನು ಕುರಿತು ತಮ್ಮ ಚಿತ್ತಕ್ಕೆ ಆಗ ಅಂಟಿಕೊಂಡಿದ್ದ ಎರಡು ಒಗಟೆಗಳನ್ನು ಈ ಗ್ರಾಮ್ಯಗೀತಗಳ ಅನುಶೀಲನ ದಿಂದ ಬಿಡಿಸಲು ಪ್ರಯತ್ನಿಸಿದ್ದಾರೆ. ಈ ಹಾಡುಗಳ ಭಾಷೆಯ ಬಗ್ಗೆ ಹೇಳುತ್ತ, "ಕೇವಲ ಇದ್ದಕ್ಕಿದ್ದಂತೆ ಗ್ರಾಮ್ಯ ವಾಗಿಯೇ ಇದನ್ನು ಇಡಬೇಕೆಂದು ಕೆಲವರ ಅಭಿಪ್ರಾಯ. ತುಸುಮಟ್ಟಿಗೆ ಸಂಸ್ಕರಿಸಿ ಗ್ರಾಂಥಿಕ ಸ್ವರೂಪಕ್ಕೆ ತರಬೇಕೆಂದು

ಇನ್ನು ಕೆಲವರ ಅಭಿಪ್ರಾಯ. ಆದರೆ ಇವೆರಡೂ ಮಾತುಗಳು ಈ ಪುಸ್ತಕದಲ್ಲಿ ಸರಿಯಾಗಿ ಸಾಧಿಸಿಲ್ಲ. ಕೆಲವು ಹಾಡುಗಳು ಹಾಗೂ ಇವೆ. ಇನ್ನು ಕೆಲವು ಹೀಗೂ ಇಡಲ್ಪಟ್ಟಿವೆ. ಮುಂದಿನವರು ಈ ಕೆಲಸವನ್ನು ತಕ್ಕಂತೆ ಸರಿಪಡಿಸಿ ಕೊಳ್ಳಲಿ" ಎಂದಿದ್ದಾರೆ. ಇಂದಿನ ಸಂಗ್ರಾಹಕರು ಈ ಮಾತನ್ನು ಪರಿಶೀಲಿಸುವದು ಅಗತ್ಯವಲ್ಲವೆ?

'ಗರತಿಯ ಹಾಡು' 'ತ್ರಿಪದಿಯ ಗಾಥಾ ಸಂಹಿತೆ' ಯಾಗಿದ್ದರೆ 'ಮಲ್ಲಿಗೆ ದಂಡೆ' ಯಲ್ಲಿ ಕೆಲವೇ ವೃತ್ತಗಳು ಭಾವಕ್ಕೆ ತಕ್ಕಂತೆ ಬೇರೆ ಬೇರೆ ವಿವಿಧ ಮಟ್ಟುಗಳಲ್ಲಿರುವುದನ್ನು ಕಾಣಬಹುದು. 'ದೇವತಾಸ್ತುತಿ,' 'ಪ್ರಣಯಾಂತರ,' 'ಭಾವಗೀತೆಗಳು,' 'ಕಥೆಯ ಹಾಡುಗಳು,' 'ಮದುವೆಯ ಹಾಡುಗಳು,' 'ಸೋಬನದ ಹಾಡುಗಳು,' 'ಇತರ ವಿಧಾನ ಗಳು,' 'ಅತ್ತೆ ಮನೆಯ ಕಾಟ,' 'ಹಾಸ್ಯದ ಹಾಡುಗಳು' – ಹೀಗೆ ಇಲ್ಲಿಯ ಹಾಡುಗಳನ್ನು ವಿಭಾಗಿಸಿ ಕೊಡಲಾಗಿದೆ. 'ಟೀಕೆ ಟಿಪ್ಪಣಿ' ಗಳಿಂದ ಈ ಸಂಗ್ರಹದ ಬೆಲೆ ಹೆಚ್ಚಿದೆ. ಓದುವವರಿಗೆ, ಹಾಡುವವರಿಗೆ ರಸಗ್ರಹಣಕ್ಕೆ ಇದರಿಂದ ಅನುಕೂಲವಾಗಿದೆ. ಇಲ್ಲಿಯ ಹಾಡುಗಳ ಸ್ವಾರಸ್ಯವನ್ನು ಎಷ್ಟು ಬರೆದರೂ ತೀರದು. ಅವುಗಳನ್ನು ಹಾಡುವವರೂ ಹಾಗೆಯೇ ಹಾಡಿಸಿ ಕೇಳುವವರೂ ಒಂದು ಭಾಗ್ಯವೆಂದೇ ಹೇಳಬೇಕು.

ಮೈಸೂರು ಪ್ರಾಂತದ ಹಾಡುಗಳನ್ನು ಉಚಿತವಾಗಿ ಆಯ್ದು, ಸಮರ್ಥ ರೀತಿಯಲ್ಲಿ ಸಂಪಾದಿಸಿ ಪ್ರಕಟಿಸಿದವರಲ್ಲಿ ಶ್ರೀಗಳಾದ ಮುತ್ತುರಾಮಸ್ವಾಮಿ, ಮತಿಘಟ್ಟ ಕೃಷ್ಣಮೂರ್ತಿ ಹಾಗೂ ಎಲ್. ಗುಂಡಪ್ಪ ಈ ಸಹೋದರರು ಘನವಾದ ಕಾರ್ಯವನ್ನು ಮಾಡಿದ್ದಾರೆ. 'ನಾಡಪದಗಳು' ಸಂದರ್ಭ ಚಿತ್ರಗಳೊಂದಿಗೆ ೧೯೪೭ರಲ್ಲಿ ಪ್ರಕಟವಾಗಿ ಆ ಭಾಗದ ಜನಪದ ಸಾಹಿತ್ಯವನ್ನು ಇನ್ನಿಷ್ಟು ಜನಪ್ರಿಯವಾಗಿ ಮಾಡಿತು. "ಚಿಕ್ಕಂದಿನಿಂದ ಮೊದಲುಗೊಂಡು ಜೀವಾವಧಿ ನನ್ನಲ್ಲಿ ನೆಲಸಿದ ಅಷ್ಟೊಂದು ಕನಸುಗಳನ್ನು ನನ್ನ ವಿದ್ಯಾರ್ಥಿಗಳು ಒಂದಲ್ಲ ಒಂದು ಬಗೆಯಲ್ಲಿ ನನಸಾಗಿಸಿ ಸಾಧಿಸುತ್ತಿರುವರು" ಎಂಬುದನ್ನು ಮುನ್ನುಡಿಕಾರರಾದ ಶ್ರೀಯವರು ಹೆಮ್ಮೆಪಟ್ಟುಕೊಂಡು ಹೇಳಿರುವದು ಸಹಜವೇ ಆಗಿದೆ. ಈ ಪದಗಳನ್ನು ಸಂಪಾದಕರು 'ಕೋಲಾಟದ ಪದಗಳು,' 'ತಿಂಗಳು ಮಾವನ ಪದಗಳು,' 'ರಾಗಿ ಕಲ್ಲಿನ ಪದಗಳು,' 'ಕಥೆ ಮತ್ತು ಶಾಸ್ತ್ರದ ಹಾಡುಗಳು,' 'ಸಂಕೀರ್ಣ ಪದಗಳು,' 'ಚರಿತ್ರೆ'ಗೆ ಸಂಬಂಧಿಸಿದ ಪದಗಳು,' 'ಬ್ರಾಹ್ಮಣರ ಹಾಡುಗಳು,' 'ಬಸವನ ಆಷ್ಟಮಿಯ ಹಾಡುಗಳು' ಎಂಬುದಾಗಿ ಎಂಟು ತೆನೆಗಳಲ್ಲಿ ಕಟ್ಟಿಕೊಟ್ಟಿದ್ದಾರೆ. ಪ್ರತಿಯೊಂದು ವಿಭಾಗಕ್ಕೂ ತಕ್ಕ ಪರಿಚಯವನ್ನು ಒದಗಿಸಿಕೊಟ್ಟಿರುವುದಲ್ಲದೆ, ಕೊನೆಯಲ್ಲಿ ಟಿಪ್ಪಣಿಗಳನ್ನೂ ಬರೆದು ಉಪಕರಿಸಿದ್ದಾರೆ. 'ಚೆಲುವಯ್ಯ ಚೆಲುವೋ' ಎಂದು ಹಿಗ್ಗಿ ಹೇಳುವಂತಿದೆ ಈ ಸಂಗ್ರಹ. ಸಂಪಾದಕರ ಶ್ರಮ ಅಷ್ಟೊಂದು ಫಲಪ್ರದವಾಗಿದೆ. "ಇದುವರೆಗೆ ನಾನು ನೋಡಿರುವ ಸಂಗ್ರಹಗಳಲ್ಲೆಲ್ಲ ಈಗಿನ ಈ ಸಂಗ್ರಹವೇ ಸರ್ವೋತ್ತಮವಾದುದೂ ಮತ್ತು ಅತ್ಯಂತ ಸ್ವಾರಸ್ಯ ವಾದ್ದೂ" ಎಂದು ಶ್ರೀಯವರು ಉತ್ಸಾಹದಿಂದ ನುಡಿದಿರುವದು ಇದೇ ದೃಷ್ಟಿಯಿಂದ ಎಂದು ನಾನು ಭಾವಿಸಿದ್ದೇನೆ. ಹಾಗೆ ನೋಡಿದರೆ ಅಂತಃಸ್ಫೂರ್ತಿಯಲ್ಲಿ, ಭಾವೋತ್ಕಟತೆಯಲ್ಲಿ, ಸಮಗ್ರ ಕನ್ನಡ ನಾಡಿನ ಜನಪದ ಸಾಹಿತ್ಯ ಒಂದೇ ಮಟ್ಟದಲ್ಲಿರುವುದನ್ನು ನಾವು ಕಾಣುತ್ತೇವೆ. ಆದರೂ ನಿರ್ವಿಕಾರ ಭಾವನೆಯಿಂದ ಪರೀಕ್ಷಿಸಿದಾಗ ತಿರುಳ್ಗನ್ನಡದ ದೇಸಿಯ ವೈಭವ ವಿಲಾಸಗಳು ಉತ್ತರ ಕರ್ನಾಟಕದ ಜಾನಪದ ಗೀತಗಳಲ್ಲಿ ಹೆಚ್ಚಾಗಿ ಒಡಮೂಡಿವೆ ಎಂದರೆ ತಪ್ಪಾಗದು. ಅದೇನೇ ಇರಲಿ ಕನ್ನಡ ನಾಡು ಒಂದು ಎಂಬುದನ್ನು ಈ ಹಾಡುಗಳಿಂದ ನಾವು ಕಂಡುಕೊಳ್ಳಬಹುದು. ಶ್ರೀ ಬೇಂದ್ರೆಯ ವರು ಹೇಳಿದ ಒಂದು ಮಾತನ್ನು ಇಲ್ಲಿ ಮತ್ತೊಮ್ಮೆ ನೆನೆಯಬಹುದಾಗಿದೆ: "ಬೀದರ, ಹೈದರಾಬಾದುಗಳ ಉತ್ತರದ ತುದಿಯಿಂದ ನೀಲಗಿರಿ, ಕೊಯಿಮುತ್ತೂರಿನ ದಕ್ಷಿಣದ ತುದಿಯವರೆಗೆ ಹಬ್ಬಿರುವ ಕರ್ನಾಟಕವು ಒಂದೆಂಬುದಕ್ಕೆ ಒಂದು ನಿದರ್ಶನವು ಈ ಹಾಡುಗಳಲ್ಲಿದೆ. ಅಲ್ಪಸ್ವಲ್ಪ ಪಾಠಭೇದದಿಂದ ಇವುಗಳಲ್ಲಿ ಅರ್ಧಕರ್ಧ ಹಾಡುಗಳು ಎಲ್ಲ ಕನ್ನಡ ಮನೆಗಳಲ್ಲಿ ಹರಡಿಕೊಂಡಿರಲು ಸಾಕು. ಈ ಜನಪದ ವೇದವೇ ಎಲ್ಲ ಕನ್ನಡಿಗರಿಗೂ ಸಾಮಾನ್ಯವಾದ ತಾಯಮೊಲೆ ಹಾಲು ಎಂಬುದು ಇದನ್ನೋದಿದವರ ಅನುಭವಕ್ಕೆ ಬಾರದೆ ಇರದು. ಈ ಅನುಭವದಿಂದಾಗುವ ಐಕ್ಯಭಾವವು ಅಂತಿಂತಹ ದಲ್ಲ. ಪ್ರಜಾಪ್ರಭುತ್ವದ ಈ ಕಾಲದಲ್ಲಿ ಜನಸಾಮಾನ್ಯರ ಹೃದಯದೊಳಗಿನ ಸುಖದ ಕನಸೆಂತಹವೆಂಬುದನ್ನು ಕಂಡು ಕೊಳ್ಳಲು ಇದರಂತಹ ಬೇರೆ ಕೈಗನ್ನಡಿಯಿಲ್ಲ."

ದಿವಂಗತ ಡಾ|| ಗದ್ದಗಿಮಠ ಅವರು ೧೯೪೩ ರಿಂದಲೇ ಜನಪದ ಸಾಹಿತ್ಯ ಸಂಗ್ರಹಕ್ಕೆ ತೊಡಗಿದ್ದರು. ೧೯೫೦ ರಿಂದ ಈಚೆಗೆ ಅವರ ಹಲವಾರು ಸಂಗ್ರಹಗಳು ಪ್ರಕಟವಾಗಿವೆ. 'ಕನ್ನಡ ಜಾನಪದ ಗೀತ' ಗಳನ್ನು ಕುರಿತ ಅವರ ಪಿಎಚ್.ಡಿ. ಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟನೆಗೆ ತೆಗೆದುಕೊಂಡಿದೆ. ಮೈಸೂರಿನ ಜನಪದ ಸಾಹಿತ್ಯ

ಅಕಾಡೆಮಿಯ ಮುಖಾಂತರ ಶ್ರೀ ಕ. ರಾ. ಕೃ. ಅವರೂ ಇವೇ ರೀತಿಯಲ್ಲಿ ಜನಪದ ಸಾಹಿತ್ಯ ಸಂಗ್ರಹ-ಪ್ರಕಟನೆಯಲ್ಲಿ ತೊಡಗಿದ್ದು ಗಣನೀಯವಾದ ಕಾರ್ಯವನ್ನು ಮಾಡುತ್ತಿದ್ದಾರೆ. ಶ್ರೀ ಜೀ. ಶಂ. ಪರಮಶಿವಯ್ಯ ಮೊದಲಾದವರ ಹೆಸರನ್ನೂ ಇಲ್ಲಿ ನೆನೆಯಬಹುದು. ಬಯಲಹೊಂಗಲದ ಶ್ರೀ ಭಾವೆಪ್ಪ ಮೂಗಿಯವರ ಸಂಗ್ರಹದಲ್ಲಿಯೂ ಅಮೌಲ್ಯವಾದ ಹಾಡುಗಳಿವೆ. ಇವರೆಲ್ಲರ ಬಗ್ಗೆ ನಾಲ್ಕು ಮಾತು ಬರೆಯಬೇಕೆಂದರೂ ಈ ಲೇಖನದ ಪರಿಮಿತಿಯಲ್ಲಿ ಅವಕಾಶವಿಲ್ಲದುದರಿಂದ ಬಿಡಬೇಕಾಗಿದೆ.

ಜಾನಪದ ಗೀತಗಳ ಹಾಡುಗಾರಿಕೆಯನ್ನು ಉಳಿಸಿಕೊಳ್ಳಲು ಅವಕಾಶವಾಗಿ ಈಚೆಗೆ ತಕ್ಕಮಟ್ಟಿಗೆ ಪ್ರಯತ್ನಿಸುತ್ತಿರುವುದೇನೋ ನಿಜ. ಆದರೆ ಸಾಹಿತ್ಯ ಪರಿಷತ್ತಿನಂಥ ಸಂಸ್ಥೆಗಳಲ್ಲಿ ವರುಷಕ್ಕೊಮ್ಮೆಯಾದರೂ ಜಾನಪದ ಗೀತ-ಗೋಷ್ಠಿಗಳ ಮಹಾಸಮಾರಂಭವೊಂದನ್ನು ಏರ್ಪಡಿಸುವದು ಅಗತ್ಯವಲ್ಲವೆ?

---

## ಕನ್ನಡ ಸಾಹಿತ್ಯ ಪ್ರಮುಖರು



**ಈ ಚಿತ್ರದಲ್ಲಿ ಎಡದಿಂದ ಬಲಕ್ಕೆ ಶ್ರೀಗಳಾದ ಮಾಸ್ತಿ, ಡಿ. ವಿ. ಜಿ., ಕುವೆಂಪು, ವಿ. ಸೀ., ಶಿವರಾಮ ಕಾರಂತ, ಅ. ನ. ಕೃ. ಮತ್ತು ಜಿ. ಪಿ. ರಾಜರತ್ನಂ ಇವರನ್ನು ಕಾಣಬಹುದು.**

# ಕನ್ನಡದಲ್ಲಿ ವಿಮರ್ಶೆಯ ಬೆಳವಣಿಗೆ

## (ಸ್ವಾತಂತ್ರ್ಯ ಪೂರ್ವಕಾಲದಲ್ಲಿ)

ಲೇಖಕರು : ಶ್ರೀ ರಂ. ಶ್ರೀ. ಮುಗಳಿ

ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಸ್ವಾಂತಂತ್ರ್ಯದ ಅಭಿಲಾಷೆ ತೀವ್ರವಾಗಿತ್ತು. ದೇಶಕ್ಕೆ ಸ್ವಾತಂತ್ರ್ಯ ಬಂದಿರಲಿಲ್ಲ, ಆದರೆ ಮನಸ್ಸು ಸ್ವಾತಂತ್ರ್ಯ ಪಡೆದಿತ್ತು. ಇಂದು ದೇಶಕ್ಕೆ ಸ್ವಾತಂತ್ರ್ಯ ಬಂದಿದೆ, ಆದರೆ ಮನಸ್ಸು ತನ್ನ ಸ್ವಾತಂತ್ರ್ಯ ಕಳೆದುಕೊಂಡಿದೆ. ಹೀಗಾಗಿ ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಬರೆಯಲಾದಷ್ಟು ಸ್ವತಂತ್ರ ವಿಮರ್ಶೆ ಕನ್ನಡದಲ್ಲಿ ಸ್ವಾತಂತ್ರ್ಯ ನಂತರದ ಕಾಲದಲ್ಲಿ ಹುಟ್ಟಿಲ್ಲ. ಇದಕ್ಕಿಂತ ಹೆಚ್ಚಿನ ಚಮತ್ಕಾರ ಇನ್ನೊಂದು ಇರಲಾರದು.

ಕನ್ನಡ ಸಾಹಿತ್ಯದಲ್ಲಿ ಆಧುನಿಕ ಯುಗವು ಪೂರ್ಣಅರ್ಥದಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ಪ್ರಾರಂಭವಾಯಿತು. ಸ್ಥೂಲವಾಗಿ ೧೯೨೦ರಿಂದ ಮುಂದೆ ನಿರ್ಮಿತಿ – ಪ್ರಧಾನವಾದ ಕತೆ – ಕವನ ಮುಂತಾದ ಹೊಸಬಗೆಯ ಕೃತಿಗಳು ಪ್ರಕಟ ಗೊಳ್ಳತೊಡಗಿದುವು. ಅವುಗಳ ವಿಮರ್ಶೆ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಪ್ರಬುದ್ಧಕರ್ನಾಟಕ, ಜಯಕರ್ನಾಟಕ ಮುಂತಾದ ಪತ್ರಿಕೆಗಳಲ್ಲಿ ಬೆಳಕಿಗೆ ಬಂದು ಕನ್ನಡ ವಿಮರ್ಶೆಗೆ ಶ್ರೀಕಾರಹಾಕಿದುವು. ಅವುಗಳಲ್ಲಿ ಮೊದಮೊದಲು ಹೊಸದರ ಕಡೆಗೆ ಕಡೆಗಣಿಸಿ ನೋಡುವ ಹಳೆಯ ದೃಷ್ಟಿಯಿತ್ತು, ಶಬ್ದಪ್ರಯೋಗಗಳಲ್ಲಿಯ ದೋಷಗಳನ್ನು ಪಟ್ಟಿಮಾಡಿ ತೋರಿಸುವ ಪ್ರವೃತ್ತಿಯಿತ್ತು. ಬರಬರುತ್ತ ನಿಜವಾದ ಮೆಚ್ಚಿಗೆಯ ಮತ್ತು ಸರಿಯಾದ ವಿಮರ್ಶೆಯ ದೃಷ್ಟಿ ಬೆಳೆಯಿತು. ಇಂಥ ಬರೆವಣಿಗೆಯಲ್ಲಿ ಕೆಲಭಾಗವು ಆಮೇಲೆ ಮಾಡಲಾದ ಸಂಕಲನಗಳಲ್ಲಿ ಬಂದಿದೆ. ಈ ಕಾಲದಲ್ಲಿಯ ವಿಮರ್ಶೆ ವಾಙ್ಮಯವನ್ನು ಮೂರು ವಿಭಾಗಗಳಲ್ಲಿ ಬೇರ್ಪಡಿಸಬಹುದು : ೧ ವಿಮರ್ಶೆಯ ತತ್ವ ಅಥವಾ ವಿಮರ್ಶೆಯ ಶಾಸ್ತ್ರ ಸಂಬಂಧಿಯಾದ ಗ್ರಂಥಗಳು. ೨ ಒಬ್ಬ ಹಳೆಯ ಅಥವಾ ಹೊಸ ಕವಿಯ ಅಥವಾ ಲೇಖಕನ ಕೃತಿಪರೀಕ್ಷಣವುಳ್ಳ ಗ್ರಂಥ ಗಳು. ೩ ಸಂಕೀರ್ಣ ವಿಮರ್ಶೆಯನ್ನೊಳಗೊಂಡ ಸಂಕಲನ ಗ್ರಂಥಗಳು.

ಮೊದಲನೆಯ ವಿಭಾಗದಲ್ಲಿ ಮಾಸ್ತಿಯವರ ' ಸಾಹಿತ್ಯ ', ' ವಿಮರ್ಶೆ ' ಈ ಪುಸ್ತಕಗಳು ಮೊದಲನೆಯವಾಗಿ ಬರುತ್ತಿದ್ದು, ಕನ್ನಡ ವಿಮರ್ಶ ಶಾಸ್ತ್ರದ ಆಧುನಿಕ ಸ್ವರೂಪಕ್ಕೆ ಅವಶ್ಯವಾದ ಪ್ರಾರಂಭಕಾರ್ಯ ಮಾಡಿದುವು. ಸಾಹಿತ್ಯ ವನ್ನು ಕುರಿತ ಪ್ರಂಬಂಧದಲ್ಲಿ ಸಾಹಿತ್ಯದ ಸ್ವರೂಪವೇನು, ಅದರ ಪ್ರಯೋಜನವೇನು ಈ ಮುಂತಾದ ವಿಷಯಗಳನ್ನು ಅವರು ತಮ್ಮ ಪ್ರಸನ್ನ ಶೈಲಿಯಲ್ಲಿ ಉಚಿತ ಉದಾಹರಣೆಗಳೊಡನೆ ವಿವರಿಸಿದ್ದಾರೆ. ಈ ಪ್ರಬಂಧದ ಉಪಸಂಹಾರದಲ್ಲಿ ' ಸಾಹಿತ್ಯದಲ್ಲಿಯೂ ಇದು ಒಂದು ಹೊಸ ಯುಗದ ಆರಂಭ ' ಎಂದು ಪ್ರಸ್ತಾಪಿಸಿ ' ಕೆಲವು ಮೂಲತತ್ವಗಳ ತಿಳಿವು ' ಜನಾಂಗದಲ್ಲಿ ಹರಡಬೇಕಾದದ್ದು ಆವಶ್ಯಕ ಎಂದಿದ್ದಾರೆ. ಸಾಹಿತ್ಯದ ಕಾರ್ಯವು ಅತ್ಯುನ್ನತವಾದುದೆಂದೂ, ಸಾಹಿತ್ಯಾ-ನುಷ್ಠಾನವು ಒಂದು ರೀತಿಯ ಯೋಗವೆಂದೂ ಗ್ರಂಥವನ್ನು ರಚಿಸುವವನು ತನ್ನ ಜೀವನವನ್ನು ಒಳ್ಳೆಯದನ್ನಾಗಿ ಮಾಡಿ ಕೊಳ್ಳಬೇಕೆಂದೂ ಉತ್ತಮ ಗ್ರಂಥ ರಚನೆಗೆ ಒಂದು ರೀತಿಯ ಆತ್ಮ ಸಂಯಮವೂ ಮನಶುದ್ಧಿಯೂ ಕರ್ತವ್ಯನಿಷ್ಠೆಯೂ ಬೇಕೆಂದು ಒತ್ತಿಹೇಳಿ ಕನ್ನಡ ಲೇಖಕರ ಮುಂದೆ ಅವರು ಎತ್ತರದ ಆದರ್ಶವನ್ನು ಇರಿಸಿದ್ದಾರೆ.

ಮಾಸ್ತಿಯವರ ' ವಿಮರ್ಶೆ ' ಎಂಬ ಪ್ರಂಬಂಧವು ' ಸಾಹಿತ್ಯದಲ್ಲಿ ವಿಮರ್ಶೆಯ ಕಾರ್ಯ ' ಎಂಬ ವಿಶಿಷ್ಟ ಅಂಶ ವನ್ನು ಎತ್ತಿ ತೋರಿಸುತ್ತದೆ. ವಿಮರ್ಶೆಯ ಕಾರ್ಯದೊಡನೆ ಅದರ ಮೂಲ ಯಾವುದು ಎಂಬುದನ್ನು ಅವರು ಚರ್ಚಿಸಿ ದ್ದಾರೆ. ' ಕಾವ್ಯದ ಮೂಲವೇ ವಿಮರ್ಶೆಯಮೂಲ. ಸಹಜವಾದ ಭಾವವ್ಯಂಜನವೆಲ್ಲ ಸಹಜವಾದ ಒಂದು ನಿಯಮ ವನ್ನನುಸರಿಸಿ ನಡೆಯುತ್ತದೆ. ಭಾವವ್ಯಂಜನವೇ ಕಾವ್ಯದ ಹೃದಯ. ಅದು ಸ್ವಭಾವವಾಗಿ ಅನುಸರಿಸುವ ನಿಯಮವೇ ವಿಮರ್ಶೆಯ ಹೃದಯ ' ಈ ರೀತಿಯಾಗಿ ' ಕಾವ್ಯಕ್ಕೂ ವಿಮರ್ಶೆಗೂ ಕವಿಯ ಆವೇಶವೇ ಮೂಲ ' ಎಂಬ ಮೌಲಿಕ ವಾದ ಮಾತು ಇಲ್ಲಿದೆ. ವಿಮರ್ಶಕನಲ್ಲಿರಬೇಕಾದ ಊಹೆ, ಸಹಾನುಭೂತಿ, ಬುದ್ಧಿ ಗುಣ, ತಾಳ್ಮೆ, ಔದಾರ್ಯ ಈ

ಮುಂತಾದ ಗುಣಗಳನ್ನು ಇಲ್ಲಿ ಚಿತ್ರಿಸಲಾಗಿದೆ. ಕೊನೆಯಲ್ಲಿ 'ಸಾಹಿತ್ಯದ ವಿಷಯದಲ್ಲಿ ಸಾಕಾದ ಜ್ಞಾನವೂ ಪರಿಶ್ರಮವೂ ಇಲ್ಲದೆ, ವಿಮರ್ಶೆಯ ಕಾರ್ಯವು ಎಷ್ಟು ಉನ್ನತವಾದುದೆಂಬುದನ್ನು ತಿಳಿಯದೆ, ಬರೆಯುವ ವಿಮರ್ಶೆ ಕೇವಲ ವ್ಯರ್ಥ ಮಾತ್ರ ಆಗುವುದಲ್ಲದೆ ಹಾನಿಯನ್ನುಂಟುಮಾಡುವುದು . . . . ವಿಮರ್ಶೆ ಸಾಹಿತ್ಯದ ಜೊತೆಯಲ್ಲಿ ನಿಂತು ಅದು ಉತ್ಸಾಹದಿಂದ ಅತಿಗೆ ಹೋಗದಂತೆಯೂ ಉತ್ತಾನತೆಯಿಂದ ಭೂಗತವಾಗದಂತೆಯೂ ಅದಕ್ಕೆ ಸಹಾಯವಾಗಿದ್ದು ಅದರ ಸ್ಥಿರವಾದ ಶ್ರೇಯಸ್ಸು ಮತ್ತೆ ಮತ್ತೆ ಬರುವಂತೆ ಮಾಡುವ ಯತ್ನದಲ್ಲಿ ನಿಲ್ಲಬೇಕು' ಎಂದು ಹೇಳಿದೆ. ಯಾವಕಾಲದಲ್ಲಿಯೂ ಹೆಚ್ಚಾಗಿ ಇಂದಿಗೆ ಓದಿ ಮನನಿಸಬೇಕಾದ ಒಳ್ಳೆಯ ಪ್ರಬಂಧವಿದು. ತಾವು ಹಾಕಿಕೊಂಡ ಜಾಡಿನಲ್ಲಿ ಮಾಸ್ತಿಯವರು ಅನೇಕ ವಿಮರ್ಶಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಅವರ ಸಹೃದಯತೆ, ಸೌಮ್ಯ ಸಮತೋಲ ಸಮೀಕ್ಷೆ, ತಿಳಿಯಾದ ಶೈಲಿ ಎದ್ದು ಕಾಣುತ್ತವೆ. ರವೀಂದ್ರನಾಥ ಠಾಕೂರರನ್ನು ಕುರಿತು ಅವರು ಬರೆದ ಚರಿತ್ರೆಯಲ್ಲಿ ಅಭ್ಯಾಸ ಪೂರ್ಣವಾದ ಗುಣಗ್ರಾಹಕವಾದ ಬರೆವಣಿಗೆಯಿದೆ. ಕನ್ನಡ ನಾಡಿನ ಲಾವಣಿ ಸಾಂಗತ್ಯಗಳನ್ನೂ ಒಟ್ಟಿನಲ್ಲಿ ಜನಪದ ಸಾಹಿತ್ಯವನ್ನೂ ಮೆಚ್ಚಿ ಅವರು ಬರೆದಿರುವ ಲೇಖನಗಳು ಹೊಸಗನ್ನಡವು ಅದೇ ಕಣ್ದೆರೆಯುತ್ತಿರುವ ಕಾಲದಲ್ಲಿ ಹೊಸ ಅಭಿರುಚಿಯನ್ನುಂಟುಮಾಡಿದುವು. 'ಆದಿಕವಿ ವಾಲ್ಮೀಕಿ', 'ಭಾರತತೀರ್ಥ' ಈ ಗ್ರಂಥಗಳಿಂದ ರಾಮಾಯಣ ಮಹಾಭಾರತಗಳನ್ನು ಸೂಕ್ಷ್ಮವಾಗಿ ಅರಿತುಕೊಳ್ಳುವುದಕ್ಕೆ ಅವರು ನೆರವು ನೀಡಿದ್ದಾರೆ.

ಕನ್ನಡ ವಿಮರ್ಶೆಗೆ ಶಾಸ್ತ್ರೀಯ ತಳಹದಿಯನ್ನು ಹಾಕಿಕೊಟ್ಟ ಗ್ರಂಥಗಳಲ್ಲಿ ಡಿ. ವಿ. ಜಿ. ಯವರ 'ಜೀವನ ಸೌಂದರ್ಯ ಮತ್ತು ಸಾಹಿತ್ಯ' ಇದಕ್ಕೆ ಅಗ್ರಸ್ಥಾನಸಲ್ಲಬೇಕು. ಬೇರೆ ಬೇರೆ ಉಪನ್ಯಾಸಗಳು ಒಟ್ಟುಸೇರಿ ಈ ಗ್ರಂಥದಲ್ಲಿ ಪ್ರಕಟವಾಗಿದ್ದರೂ ಪೂರ್ವ-ಪಶ್ಚಿಮ ದೃಷ್ಟಿಕೋನಗಳನ್ನು ಅರಿತುಕೊಂಡ ಸಂಸ್ಕೃತ ಮನವು ವಿಮರ್ಶೆಯ ನಿಯಮಗಳನ್ನು ನಿರ್ದಿಷ್ಟವಾಗಿ ಕಂಡು ಹಿಡಿಯಲು ಇಲ್ಲಿ ಪ್ರಯತ್ನಿಸಿರುತ್ತದೆ. ಹೊಸಕಾಲಕ್ಕೆ ಅನುಸರಿಸಿ ಸಾಹಿತ್ಯ ಮತ್ತು ವಿಜ್ಞಾನ, ಸಾಹಿತ್ಯ ಮತ್ತು ಜನಜೀವನ ಈ ವಿಷಯವಾಗಿ ಇಲ್ಲಿ ವಿಸ್ತಾರವಾದ ಪ್ರಬಂಧಗಳಿವೆ. ಸೌಂದರ್ಯದ ಸ್ವರೂಪವನ್ನು ವಿವರವಾಗಿ ಚರ್ಚಿಸಿರುವ 'ಸೌಂದರ್ಯ ಸಂಹಿತೆ' ಎಂಬ ಲೇಖನವು ಕನ್ನಡಕ್ಕೆ ಮೊದಲನೆಯದಾಗಿ ಇಲ್ಲಿ ಬಂದಿದೆ.

ಇದೇ ಬಗೆಯಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಮಾಡಿದ ಭಾಷಣಗಳಾಗಿಯೂ ವೈಯಕ್ತಿಕ ದೃಷ್ಟಿಕೋನವನ್ನು ಪಡಿಮೂಡಿಸುವ ವಿಮರ್ಶ ಗ್ರಂಥಗಳೆಂದರೆ ಶ್ರೀಯವರ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ', ಬೇಂದ್ರೆಯವರ 'ಸಾಹಿತ್ಯ ಮತ್ತು ವಿಮರ್ಶೆ', ಎ. ಆರ್. ಕೃಷ್ಣಶಾಸ್ತ್ರಿಗಳ 'ಭಾಷಣಗಳು ಮತ್ತು ಲೇಖನಗಳು', ಕುವೆಂಪು ಅವರ 'ಸಾಹಿತ್ಯ ಪ್ರಚಾರ ಮತ್ತು ಇತರ ಭಾಷಣಗಳು' ಇತ್ಯಾದಿ. ಈ ಗ್ರಂಥಗಳಲ್ಲಿ ಕೆಲವು ಸಲ ಸಂಕೀರ್ಣತೆ ತಲೆಯಿಕ್ಕಿದೆ. ವಿಮರ್ಶೆಯ ಶಾಸ್ತ್ರ ಅಥವಾ ಪ್ರತ್ಯಕ್ಷ ವಿಮರ್ಶೆಗೆ ಸಂಬಂಧಿಸದ ಲೇಖನಗಳೂ ಇದರಲ್ಲಿವೆ. ಶ್ರೀಯವರ ಕನ್ನಡ ದರ್ಶನದ ಕಾವು ಮತ್ತು ಉತ್ಕಟರಸಜ್ಞತೆ, ಬೇಂದ್ರೆಯವರ ಸೂಕ್ಷ್ಮದೃಷ್ಟಿ ಮತ್ತು ಆಧ್ಯಾತ್ಮಿಕ ಪ್ರಜ್ಞೆ, ಎ. ಆರ್. ಕೃಷ್ಣಶಾಸ್ತ್ರಿಗಳ ಸ್ಪಷ್ಟವಾಕ್ಯತೆ ಮತ್ತು ನಿರ್ದಿಷ್ಟ ನಿಲುವೆ, ಕುವೆಂಪು ಅವರ ಸಂವೇದನ ಸಾಮರ್ಥ್ಯ ಮತ್ತು ಪ್ರತಿಭಾವಿಲಾಸ ಇವು ಅವರವರ ವ್ಯಕ್ತಿತ್ವವನ್ನು ಎತ್ತಿ ತೋರಿಸುತ್ತವೆ. ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಒಂದಕ್ಕಿಂತ ಹೆಚ್ಚು ವಿಮರ್ಶಸಂಬಂಧಿಯಾದ ಗ್ರಂಥಗಳನ್ನು ಬರೆದವರೆಂದರೆ ವಿನಾಯಕರು. ಕವಿ ಸಂಮೇಲನದ ಅಧ್ಯಕ್ಷಸ್ಥಾನದಿಂದ 'ಕವಿಕಾವ್ಯ ಮಹೋನ್ನತಿ' ಎಂಬ ಭಾಷಣವನ್ನು ಮಾಡಿದಂದಿನಿಂದ 'ಸಾಹಿತ್ಯದಲ್ಲಿ ಪ್ರಗತಿ', 'ಇಂದಿನ ಕನ್ನಡ ಕಾವ್ಯದ ಗೊತ್ತುಗುರಿಗಳು' ಈ ಬಗೆಯ ಸಂಕಲನಗಳನ್ನು ಪ್ರಕಟಿಸಿ ಅವರು ಅಭಿಜಾತ-ವಿಮರ್ಶಕರೆಂದು ಹೆಸರು ಗಳಿಸಿದ್ದಾರೆ. ಪಾಶ್ಚಾತ್ಯ, ವಿಶೇಷವಾಗಿ ಆಂಗ್ಲ ವಿಮರ್ಶೆಯ ನಿಕಟಪರಿಚಯದಿಂದ ಮತ್ತು ಸೌಂದರ್ಯಗ್ರಾಹಿಯಿಂದ ಸೂಕ್ಷ್ಮಶಕ್ತಿಯಿಂದ ಅವರು ಕನ್ನಡ ಸಾಹಿತ್ಯವನ್ನು ಪರೀಕ್ಷಿಸಿದ್ದಾರೆ, ಕನ್ನಡ ವಿಮರ್ಶೆಗೆ ತಮ್ಮ ವಿಶಿಷ್ಟ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಹೊಸ ಸಾಹಿತ್ಯದ ಮೂಲಭೂತ ಪ್ರೇರಣೆ ಮತ್ತು ಪ್ರಕಾರಗಳ ಬಗ್ಗೆ ಇನ್ನೂ ಹಲವು ಲೇಖನ-ಭಾಷಣಗಳು ಈ ಕಾಲದಲ್ಲಿ ಹೊರಬಂದಿವೆ. ವಿ. ಸೀ. ಯವರ 'ಈಗಿನ ಕವಿ ಕಾವ್ಯದೃಷ್ಟಿ' ಎಂಬುದು ಉಲ್ಲೇಖನೀಯವಾಗಿದೆ.

ಎರಡನೆಯ ವಿಭಾಗದಲ್ಲಿ ಪ್ರಶಸ್ತಿ ಪರ ಗ್ರಂಥಗಳ ಹೆಚ್ಚಳವು ಎದ್ದು ಕಾಣುತ್ತದೆ. ಹಳೆಯ ಸಾಹಿತ್ಯದ ಬಗ್ಗೆ ಹೊಸ ಕುತೂಹಲ, ಅಭ್ಯಾಸ ಮನೀಷೆ ಇವು ಈ ಕಾಲದಲ್ಲಿ ತಲೆದೋರಿದ್ದರಿಂದ ವ್ಯಕ್ತಿಗಳೂ ಸಂಘಸಂಸ್ಥೆಗಳೂ ಒಂದು ಬಗೆಯ ಅಹಮಹಮಿಕೆಯಿಂದ ಇಂಥ ಪುಸ್ತಕಗಳನ್ನು ಹೊರತಂದದ್ದಾಗಿದೆ. ಇವುಗಳಲ್ಲಿ ರನ್ನಕವಿ ಪ್ರಶಸ್ತಿಗೆ ಕಾಲದೃಷ್ಟಿಯಿಂದ ಪ್ರಥಮ ಸ್ಥಾನವು ಸಲ್ಲುತ್ತದೆ. ಆಮೇಲೆ ಕುಮಾರವ್ಯಾಸ ಪ್ರಶಸ್ತಿ, ಕವಿ ಲಕ್ಷ್ಮೀಶ, ಅಭಿನವ ಪಂಪ, ಮುದ್ದಣ

ಆಂಡಯ್ಯ, ಈ ಮುಂತಾದ ಸಂಕಲನಗಳು ಪ್ರಸಿದ್ಧವಾಗಿವೆ. ಇವುಗಳಲ್ಲೆಲ್ಲ ಪ್ರಶಸ್ತಿ ಮಾತ್ರವಿದೆ ಎಂದೂ ಅರ್ಥವಿಲ್ಲ. ಕೆಲವು ಸಲ ಮೊದಲ ಹುಮ್ಮಸಿನಲ್ಲಿ ಪ್ರಶಸ್ತಿ ಹೆಚ್ಚಾಗಿದೆ ಎಂಬುದೂ ಸುಳ್ಳಲ್ಲ. ಆದರೂ ಅಭ್ಯಾಸ ಪೂರ್ಣವಾದ ಚಿಕಿತ್ಸಕ ಲೇಖನಗಳು ಇದರಲ್ಲಿವೆ. ಹಳೆಯ ಕವಿ-ಕಾವ್ಯಗಳನ್ನು ಹೊಸ ದೃಷ್ಟಿಯಿಂದ ನೋಡುವ ಮತ್ತು ಹೊಸ ಪ್ರಮಾಣಗಳಿಂದ ಬೆಲೆಕಟ್ಟುವ ಪರಂಪರೆ ಪ್ರಾರಂಭವಾಗಿರುವುದು ಇಲ್ಲಿ ಕಂಡು ಬರುತ್ತದೆ.

ಈ ವಿಭಾಗದಲ್ಲಿ ವ್ಯಕ್ತಿಶಃ ಕವಿ ಮತ್ತು ಅವನ ಕೃತಿಯನ್ನು ಕುರಿತು ವಿಮರ್ಶಾತ್ಮಕವಾದ ಪುಸ್ತಕಗಳನ್ನು ಕೆಲವರು ಬರೆದಿದ್ದಾರೆ. ಇಂಥ ಪುಸ್ತಕಗಳಲ್ಲಿ ಎಂ. ಆರ್. ಶ್ರೀನಿವಾಸಮೂರ್ತಿಯವರ 'ಭಕ್ತಿಭಂಡಾರಿ ಬಸವಣ್ಣನವರು,' ಮುಳಿಯ ತಿಮ್ಮಪ್ಪಯ್ಯನವರ 'ನಾಡೋಜ ಪಂಪ,' ಎಸ್. ವಿ. ರಂಗಣ್ಣ ಅವರ 'ಕುಮಾರವ್ಯಾಸ,' ತೀ. ನಂ. ಶ್ರೀಕಂಠಯ್ಯನವರ 'ಪಂಪ,' ಡಿ. ಎಲ್. ನರಸಿಂಹಾಚಾರ್ಯರ 'ಹರಿಹರ' ಈ ಮುಂತಾದುವನ್ನು ಗಮನಿಸಬೇಕು. 'ರನ್ನನ ಕೃತಿರತ್ನ' ಎಂಬುದು 'ಗದಾಯುದ್ಧ'ದ ಆಕರಗಳನ್ನು ಪರೀಕ್ಷಿಸಿ ರನ್ನನ ಕೃತಿಯ ಗುಣಾತಿಶಯವನ್ನು ಎತ್ತಿ ತೋರಿಸುತ್ತದೆ. ಹೊಸಕವಿಗಳನ್ನು ಕುರಿತು 'ದತ್ತವಾಣಿ ಬೇಂದ್ರೆ ವಾಙ್ಮಯದರ್ಶನ' ಎಂಬತರದ ರಸಗ್ರಹಣಪರ ಪುಸ್ತಕಗಳು ಈ ಕಾಲದಲ್ಲಿ ಪ್ರಕಟವಾಗಿವೆ. ಜೀವಂತವಾದ ಮತ್ತು ಪ್ರಾಮಾಣಿಕ ವಿಮರ್ಶೆಯ ಗುರುತಾಗಿ ಆಗಾಗ ಮತಭೇದಗಳು ವ್ಯಕ್ತವಾಗಿವೆ. 'ರನ್ನಕವಿ ಪ್ರಶಸ್ತಿ'ಯಲ್ಲಿಯ ರನ್ನನ ಮಹಾನುಭಾವತೆಗೆ ಪ್ರತಿಕ್ರಿಯೆಯಾಗಿ ಬೇಂದ್ರೆಯವರ 'ಸಾಹಿತ್ಯ ಸಂಶೋಧನೆ'ಯಲ್ಲಿ ಚರ್ಚೆ ಬಂದಿದೆ. 'ಮುದ್ದಣ' ಗ್ರಂಥದಲ್ಲಿ ರಾಮಾಶ್ವಮೇಧದ ಅತಿಸ್ತುತಿಗೆ ಪ್ರತಿಕ್ರಿಯೆಯಾಗಿ ಎಸ್. ವಿ. ರಂಗಣ್ಣನವರು 'ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು' ಎಂಬ ಲೇಖನವನ್ನು ಬರೆದಿರುವರು. 'ಅಭಿನವ ಪಂಪ'ದಲ್ಲಿ ನಾಗಚಂದ್ರನ ರಾವಣನ ಬಗ್ಗೆ ಶ್ರೀಯವರು ಮಾಡಿದ ಪ್ರಶಂಸೋದ್ಗಾರಗಳಿಗೆ ಪ್ರತಿಕ್ರಿಯೆಯಾಗಿ ಡಿ. ಎಲ್. ನರಸಿಂಹಾಚಾರ್ಯರು 'ಪಂಪ ರಾಮಾಯಣ ಸಂಗ್ರಹ'ದ ಪ್ರಸ್ತಾವನೆಯಲ್ಲಿ ಮೂಲಕ್ಕೆ ಹೋಲಿಸಿ ರಾವಣ ಪಾತ್ರದ ಪೃಥಕ್ಕರಣವನ್ನು ಮಾಡಿದ್ದಾರೆ. ಹಳೆಯ ಕವಿಗಳ ಕಾವ್ಯ ಸಂಗ್ರಹಗಳ ಪೀಠಿಕೆ-ಪ್ರಸ್ತಾವನೆಗಳು ಬೆಲೆಯುಳ್ಳ ವಿಮರ್ಶೆಗಳನ್ನು ಒಳಗೊಂಡಿವೆ.

ಮೂರನೆಯ ವಿಭಾಗದಲ್ಲಿ ಸಂಕೀರ್ಣವಿಮರ್ಶೆಯ ಲೇಖನಗಳು ಸಂಕಲಿತವಾಗಿ ಬಂದಿವೆ. ಅವುಗಳಲ್ಲಿ ಮಾಸ್ತಿಯವರ 'ವಿಮರ್ಶೆ'ಯ ಹಲವಾರು ಭಾಗಗಳು, ಶ್ರೀಯವರ ಮತ್ತು ಇತರರ ಪುಸ್ತಕಗಳು ಇವನ್ನು ಈಗಾಗಲೆ ಉಲ್ಲೇಖಿಸಲಾಗಿದೆ. ಇವಲ್ಲದೆ ಬೆಟಗೇರಿ ಕೃಷ್ಣಶರ್ಮರ 'ಕರ್ಣಾಟಕ ಜನಜೀವನ,' ಮಾಳವಾಡರ 'ಕರ್ಣಾಟಕ ಸಾಹಿತ್ಯ ಸಂಸ್ಕೃತಿ ದರ್ಶನ,' ತೀ. ನಂ. ಶ್ರೀಕಂಠಯ್ಯನವರ 'ಕಾವ್ಯಸಮೀಕ್ಷೆ,' ಕುವೆಂಪು ಅವರ 'ಕಾವ್ಯವಿಹಾರ,' ರಾ. ಯ. ಧಾರವಾಡಕರರ 'ಸಾಹಿತ್ಯ ಸಮೀಕ್ಷೆ' ಈ ಮೊದಲಾದುವನ್ನು ಗಮನಿಸಬೇಕು. ಇವುಗಳಲ್ಲೆಲ್ಲ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರಣ, ಸಂಸ್ಕೃತಿಯ ಪ್ರತಿಬಿಂಬ ಇವುಗಳನ್ನು ಕುರಿತು ಅಭ್ಯಾಸಪೂರ್ವಕವಾದ ಲೇಖನಗಳಿರುತ್ತವೆ. ಅಲ್ಲದೆ ಕವಿ-ಕಾವ್ಯ ಇವುಗಳ ವಿಷಯ-ಶೈಲಿಗಳನ್ನು ಕುರಿತು ಆಧುನಿಕ ದೃಷ್ಟಿಕೋನದಿಂದ ಮಾಡಿದ ಸಮೀಕ್ಷೆಗಳಿರುತ್ತವೆ. ಗ್ರಂಥ ಸಂಪಾದನೆಗೆ ಅಥವಾ ಇತರ ವಿಷಯಕ್ಕೆ ಸಂಬಂಧಿಸಿದ ಲೇಖನಗಳು ಇಂಥ ಸಂಕಲನಗಳಲ್ಲಿ ಬಂದಿವೆ. ಅದರಿಂದಲೇ ಇವುಗಳ ಸಂಕೀರ್ಣತೆ ಎದ್ದು ಕಾಣುತ್ತದೆ.

ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಕನ್ನಡ ವಿಮರ್ಶೆ ಹೇಗೆ ಹುಟ್ಟಿ ಬೆಳೆಯಿತು ಎಂಬುದನ್ನು ಈ ಸಂಕ್ಷಿಪ್ತ ಲೇಖನದಲ್ಲಿ ತಿಳಿಸುವ ಪ್ರಯತ್ನ ಮಾಡಲಾಯಿತು. ಸಾಹಿತ್ಯವಾಗಲಿ ವಿಮರ್ಶೆಯಾಗಲಿ ಹೀಗೆ ಕಾಲವಿಭಾಗದ ಯೋಜನೆ ಮಾಡಿಕೊಂಡು ಹೊರಟಿರುವುದಿಲ್ಲ. ಅದೊಂದು ಅಖಂಡ ಪ್ರವಾಹವಾಗಿರುತ್ತದೆ. ಲೇಖನ ಸೌಕರ್ಯಕ್ಕಾಗಿ ಈ ರೀತಿ ವಿಭಾಗ ಮಾಡಿದೆ. ಇದೇನೋ ನಿಜ, ಆದರೂ ಪ್ರಾರಂಭದ ಮಾತುಗಳಲ್ಲಿ ಹೇಳಿದಂತೆ 'ಸ್ವಾತಂತ್ರ್ಯ' ಪೂರ್ವಕಾಲದ ವಿಮರ್ಶೆ ಎಂಬ ಪದವು ಅರ್ಥಪೂರ್ಣವಾಗಿ ತೋರುತ್ತದೆ. ಯಾಕೆಂದರೆ ಸ್ವಾತಂತ್ರ್ಯ ಬಂದಮೇಲೆ ವಿಮರ್ಶೆಯ ಸ್ವಾತಂತ್ರ್ಯ ಎಷ್ಟು ಉಳಿದಿದೆ ಎಂಬುದು ಕೇಳಬೇಕಾದ ಪ್ರಶ್ನೆ.



# ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರಿವರ್ಗ



ಆಸ್ಥಾನವಿದ್ವಾನ್, ಪಂಡಿತರತ್ನಂ
ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು – ಅಧ್ಯಕ್ಷರು



ಡಾ|| ಕೆ. ಎಂ. ಕೃಷ್ಣರಾಯರು – ಗೌ|| ಕಾರ್ಯದರ್ಶಿಯವರು



ಶ್ರೀ ಎಸ್. ಶಂಕರಪ್ಪನವರು
ಗೌ|| ಕಾರ್ಯದರ್ಶಿಯವರು





ಶ್ರೀ ಆರ್. ಅನಂತರಾಮನ್ – ಗೌ|| ಕೋಶಾಧಿಕಾರಿಗಳು



**ಶ್ರೀ ಜಿ. ಶ್ರೀನಿವಾಸನ್**

ಮಾಜಿ ಗೌ॥ ಕೋಶಾಧಿಕಾರಿಗಳು



**ಶ್ರೀ ಕೆ. ಗೋಪಾಲಕೃಷ್ಣರಾಯರು**

ಮಾಜಿ ಗೌ॥ ಕಾರ್ಯದರ್ಶಿಯವರು





**ಶ್ರೀ ಅನ್ನದಾನಯ್ಯ ಪುರಾಣಿಕರು**

ಮಾಜಿ ಸಂಪಾದಕರು: 'ಕನ್ನಡ ನುಡಿ' ಮತ್ತು
ಪರಿಷತ್ತಿನ ಮಾಜಿ ಗೌ॥ ಕಾರ್ಯದರ್ಶಿಗಳು



ರಾಜಸೇವಾಸಕ್ತ

**ಶ್ರೀ ಡಿ. ಸಿ. ಸುಬ್ಬರಾಯಪ್ಪನವರು**

ಮಾಜಿ ಸಂಪಾದಕರು: 'ಕನ್ನಡ ನುಡಿ'

# ಸಾಹಿತ್ಯ ಸಮ್ಮೇಳನಾಧ್ಯಕ್ಷರುಗಳಿಗೆ ಸನ್ಮಾನ



ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರುಗಳನ್ನು ಪರಿಷತ್ತು ಸನ್ಮಾನಿಸಿದ ಸಂದರ್ಭದಲ್ಲಿ (೧೨–೧೨–೧೯೫೬) ತೆಗೆದ ಚಿತ್ರ. ವೇದಿಕೆಯ ಮೇಲೆ ರಾಜ್ಯಪಾಲರಾದ ಶ್ರೀಮನ್ಮಹಾರಾಜರನ್ನೂ, ಅಧ್ಯಕ್ಷತೆ ವಹಿಸಿದ್ದ ಶ್ರೀ ಆರ್. ಆರ್. ದಿವಾಕರ್ ಅವರನ್ನೂ ಕಾಣಬಹುದು.

## ಕನ್ನಡ-ಕನ್ನಡ ನಿಘಂಟು ಸಮಿತಿ



ಮುಂದಿನ ಸಾಲಿನಲ್ಲಿ ಎಡದಿಂದ ಮೂರನೆಯವರಾದ ಶ್ರೀ ಡಿ. ಎಲ್. ನರಸಿಂಹಾಚಾರ್ಯರನ್ನೂ,
ಐದನೆಯವರಾದ ಅಧ್ಯಕ್ಷ ಶ್ರೀ ತೀ. ನಂ. ಶ್ರೀಕಂಠಯ್ಯನವರನ್ನೂ ಇಲ್ಲಿ ಕಾಣಬಹುದು.



# ಸ್ವಾತಂತ್ರ್ಯಪೂರ್ವದ ಮಹಿಳಾಸಾಹಿತ್ಯ

ಲೇಖಕಿಯರು: ಶಾಂತಾದೇವಿ ಮಾಳವಾಡ

ಅನೇಕ ಜನ ಪ್ರತಿಭಾವಂತ ಸೋದರಿಯರು ಕನ್ನಡ ಸಾಹಿತ್ಯದ ಕಣಜವನ್ನು ತುಂಬಿದ್ದಾರೆ. ಪ್ರಾಚೀನ ಕಾಲದಲ್ಲಿ ಸಾಹಿತ್ಯ ರಚನೆಗೈಯ್ಯುವವರು ಕನ್ನಡ ಸಂಸ್ಕೃತ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿ ೧೮ ಬಗೆಯ ವರ್ಣನೆಗಳಿಂದ ತುಂಬಿದ ಕಾವ್ಯಗಳನ್ನು ರಚಿಸಬೇಕಾಗುತ್ತಿತ್ತು. ಅಂತಹ ಸಾಹಿತ್ಯ ರಚನೆಗೆ ಬೇಕಾದ ವಿಪುಲ ಪಾಂಡಿತ್ಯ ಪಡೆಯುವ ಅವಕಾಶ, ಅನುಕೂಲತೆಗಳೂ ಆಗ ಇದ್ದವು. ಈ ಮಾತಿಗೆ ರಾಜಾಶ್ರಯದಲ್ಲಿದ್ದು ಮಹಾಕಾವ್ಯರಚನೆಗೈದ ಕವಿಗಳ ನಿದರ್ಶನಗಳೇ ಸಾಕ್ಷಿಯಾಗಿವೆ. ಆದರೆ ಕನ್ನಡ ನಾಡಿನಲ್ಲಿ ಮಹಿಳೆಯರ ಸಾಹಿತ್ಯರಚನೆಗೆ ಈ ಬಗೆಯ ಅವಕಾಶ ಸಾಕಷ್ಟು ದೊರೆಯಲಿಲ್ಲ. ಅವಕಾಶ ದೊರೆತಾಗಲೆಲ್ಲ ಮಹಿಳೆಯರು ತಮ್ಮ ಪ್ರತಿಭೆಯನ್ನು ತೋರಿದ್ದಾರೆ. ಮಹಿಳೆಯರ ಪಾಲಿಗೆ ಯಾವಾಗಲೂ ಸಂಸಾರದ ನೊಗ ಇದ್ದೇ ಇದೆ. ಸಂಸಾರದ ನೂರೊಂದು ತಾಪತ್ರಯಗಳಲ್ಲಿ ಕಾವ್ಯಾಭ್ಯಾಸಗೈಯ್ಯಲು, ಕಾವ್ಯರಚನೆಗೈಯ್ಯಲು ಸ್ತ್ರೀಯರಿಗೆ ಅನುಕೂಲತೆ ದೊರೆತಿಲ್ಲ. ಕೆಲವೊಂದು ಸಲ ಆಸ್ಪದ ದೊರೆತಾಗ ತಮ್ಮ ಪಾಲಿನ ಸೇವೆಯನ್ನು ಮಹಿಳೆಯರು ಸಲ್ಲಿಸಿದ ಉದಾಹರಣೆಗಳಿವೆ.

ಸಾಹಿತ್ಯವೆಂದರೆ ವ್ಯಕ್ತಿತ್ವದ ಅಭಿವ್ಯಕ್ತಿ. ವ್ಯಕ್ತಿತ್ವ, ಅಭಿವ್ಯಕ್ತಿ ಇವೆರಡನ್ನೂ ಮಹಿಳೆಯರಿಗೆ ನಿರಾಕರಿಸಿದುದರ ಫಲವಾಗಿ ಮಹಿಳಾಸಾಹಿತಿಗಳ ಸಂಖ್ಯೆ ಸಣ್ಣದೇ ಆಗಿದೆ. ಸಂಖ್ಯೆ ಸಣ್ಣದಿದ್ದರೂ ಮೌಲ್ಯದೆನ್ನುವಂತಿಲ್ಲ. ವಿಜಯಕ್ಕ ಕಂತಿ, ಲೀಲಾವತಿ, ಗಂಗಾದೇವಿ, ಚೆಲುವಾಂಬೆ, ಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ ಮೊದಲಾದವರು ಪ್ರಾಚೀನ ಕನ್ನಡ ಕಾವ್ಯಪ್ರಪಂಚದಲ್ಲಿ ಮಿನುಗುತ್ತಿದ್ದಾರೆ. ವಿಜಯನಗರದ ಕಂಪಣರಾಯನ ಪತ್ನಿ ಗಂಗಾದೇವಿ "ವೀರಕಂಪಣ ರಾಯ ಚರಿತಂ" ಎಂಬ ಸಂಸ್ಕೃತ ಕಾವ್ಯವನ್ನು ರಚಿಸಿದ್ದಾಳೆ. ಲೀಲಾವತಿ ಜ್ಯೋತಿಷ್ಯ, ಗಣಿತಶಾಸ್ತ್ರಗಳಲ್ಲಿ ಬಲ್ಲಿದಳು. ಕಂತಿ ಆಶುಕವಯಿತ್ರಿ. ಹೊನ್ನಮ್ಮ ಗೃಹಿಣಿಯ ಕೈಪಿಡಿಯಂತಿರುವ "ಹದಿಬದೆಯ ಧರ್ಮ" ಎಂಬ ಕಾವ್ಯವನ್ನು ಅನುಭವಪೂರ್ಣವಾಗಿ, ರಸವತ್ತಾಗಿ ರಚಿಸಿದ್ದಾಳೆ. ಹೆಳವನಕಟ್ಟೆಯ ಗಿರಿಯಮ್ಮನ ಭಕ್ತಿಗೀತಗಳು ಭಾವಪೂರ್ಣವಾಗಿವೆ. ಚೆಲುವಾಂಬೆಯ ಕಾವ್ಯಗಳು ಶೃಂಗಾರ, ಭಕ್ತಿರಸಗಳಿಂದ ಕೂಡಿವೆ.

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದ ಬಸವೇಶ್ವರರ ಕಾಲಕ್ಕೆ ಮಹಿಳೆಯರಿಗೆ ಸಾಮಾಜಿಕ ಧಾರ್ಮಿಕ ಸ್ವಾತಂತ್ರ್ಯ ದೊರೆಯಿತು. ಮಹಿಳೆಯರಿಗೆ ಜೀವನರಂಗದಲ್ಲಿ ಸಮಾನತೆಯನ್ನು ಕಲ್ಪಿಸಿಕೊಡಲಾಯಿತು. ಅದರಿಂದಾಗಿ ಅನೇಕಜನ ಮಹಿಳೆಯರು ವಚನಕಾರ್ತಿಯರಾದರು. ಮೋಳಿಗೆಯ ಮಹದೇವಿ, ಅಕ್ಕಮಹಾದೇವಿ, ಲಿಂಗಮ್ಮ, ನೀಲಮ್ಮ, ಮುಕ್ತಾಯಕ್ಕ, ಲಕ್ಕಮ್ಮ, ನಾಗಲಾಂಬಿಕೆ ಮೊದಲಾದ ಅನೇಕಜನ ಶರಣೆಯರು ತಮ್ಮ ಜ್ಞಾನ ಅನುಭಾವಗಳನ್ನು ಕಾವ್ಯಮಯವಾಗಿ ವಚನಗಳ ರೂಪದಲ್ಲಿ ಸುಂದರವಾಗಿ ರೂಪಿಸಿದ್ದಾರೆ. ಆ ವಚನಗಳು, ಕನ್ನಡ ಸಾಹಿತ್ಯದೇವಿಯ ಮುಕುಟಮಣಿಯಂತಿವೆ. ಮಹಿಳೆಯರ ಜ್ಞಾನಾರ್ಜನೆಗೆ ಅವಕಾಶ ಕಲ್ಪಿಸಿಕೊಟ್ಟರೆ ಅವರು ಅದರ ಸದುಪಯೋಗವನ್ನು ಮಾಡಿಕೊಳ್ಳುತ್ತಾರೆ ಎಂಬುದಕ್ಕೆ ವಚನಕಾರ್ತಿಯರು ಸಾಕ್ಷಿಯಾಗಿದ್ದಾರೆ.

ಮೊದಲಿನ ಕಾಲದಲ್ಲಿ ಹೆಣ್ಣುಮಕ್ಕಳಿಗೆ ೮ ವರುಷದೊಳಗಾಗಿ ಮದುವೆಮಾಡುತ್ತಿದ್ದರು. ಜೀವನ ಅರಳಿ ಸೌರಭ ಬೀರುವ ಕಾಲಕ್ಕೆ, ವ್ಯಕ್ತಿತ್ವ ವಿಕಸಿಸುವ ಕಾಲಕ್ಕೆ, ಮನೆಯ ಜನರಿಗೆ ಸುತ್ತಲಿನ ಪ್ರಪಂಚಕ್ಕೆ ಹೆದರಿ ಹೆಣ್ಣುಮಕ್ಕಳು ತಮ್ಮ ಭಾವನೆಗಳನ್ನು ಹತ್ತಿಕ್ಕುತ್ತಿದ್ದರು. ಅಂಥ ವಿಷಮ ಪರಿಸ್ಥಿತಿಯಲ್ಲಿಯೂ ಹೆಣ್ಣುಮಕ್ಕಳು ತಮ್ಮ ಮಕ್ಕಳನ್ನು ಮಲಗಿಸುವಾಗ ಲಾಲಿಪದಗಳ ರೂಪದಲ್ಲಿ, ಕುಟ್ಟುಬೀಸುವ ಕಾರ್ಯಮಾಡುವಾಗ ತಮ್ಮ ಮನದಳಲನ್ನು, ಸುಖ ಸಂತೋಷಗಳನ್ನು ತ್ರಿಪದಿ ರೂಪದಲ್ಲಿ ವ್ಯಕ್ತಗೊಳಿಸಿದ್ದಾರೆ. ಸಾಹಿತ್ಯ ನಿರ್ಮಾಣದಿಂದ ಯಶಸ್ಸು, ಧನ, ಲೋಕವ್ಯವಹಾರ ಜ್ಞಾನ, ಪರಮಾನಂದಗಳು ದೊರೆಯುವವೆಂದು ಹೇಳಲಾಗುತ್ತದೆ. ಹೆಣ್ಣುಮಕ್ಕಳಿಗೆ ಧನದ ಆಶೆ ಇರಲಿಲ್ಲ. ಯಶಸ್ಸು ಕೀರ್ತಿಗಳಿಗೆ ಅವಕಾಶವಿರಲಿಲ್ಲ. ಪಾಂಡಿತ್ಯ ಪ್ರದರ್ಶನದ ಪ್ರೀತಿ, ಮಹಾಕವಯಿತ್ರಿ ಎಂಬ ಕೀರ್ತಿ, ರಾಜಾಶ್ರಯದ ಹಂಬಲ ಹವ್ಯಾಸಗಳಿಲ್ಲದೆ

ರಚಿಸಿದ ಜಾನಪದ ಗೀತಗಳ ಭಾಂಡಾರ ಬಹು ದೊಡ್ಡದಿದೆ. ಆದರೆ ಆ ಜಾನಪದಗೀತಗಳೆಲ್ಲ ಪುಸ್ತಕರೂಪದಲ್ಲಿರಲಿಲ್ಲ. ವಂಶಪರಂಪರೆಯಾಗಿ ಬಾಯಿಂದ ಬಾಯಿಗೆ ಬಂದಿವೆ. ಐತಿಹಾಸಿಕ, ಪೌರಾಣಿಕ, ಕೌಟುಂಬಿಕ ಚಿತ್ರಗಳು ಜಾನಪದಗೀತಗಳಲ್ಲಿ ಹೇರಳವಾಗಿವೆ. ಈ ಜಾನಪದ ಗೀತಗಳನ್ನು ನೋಡಿದರೆ ಹೆಣ್ಣುಮಕ್ಕಳಲ್ಲಿ ಬುದ್ಧಿಶಕ್ತಿ, ಪ್ರತಿಭೆಗಳಿಗೆ ಬರಗಾಲವಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದರೆ ಯೋಗ್ಯ ಶಿಕ್ಷಣ, ಸಾಹಿತ್ಯ ನಿರ್ಮಾಣಕ್ಕೆ ಬೇಕಾದ ಪರಿಸರ, ಲೋಕಾನುಭವಕ್ಕೆ ಬೇಕಾದ ಆಸ್ಪದ ದೊರೆಯದಿದ್ದರೆ ಹೆಣ್ಣುಮಕ್ಕಳ ಪ್ರತಿಭೆಯ ಅಭಿವ್ಯಕ್ತಿ ಹೇಗೆ ತಾನೆ ಆದೀತು? ಬಸವಯುಗದಲ್ಲಿ, ಹೊಯ್ಸಳ, ವಿಜಯನಗರ, ಮೈಸೂರು ಒಡೆಯರ ಕಾಲದಲ್ಲಿ, ಆಸ್ಪದ ದೊರೆತಾಗ ಮಹಿಳೆಯರು ತಮ್ಮ ಸಾಹಿತ್ಯನಿರ್ಮಾಣ ಶಕ್ತಿಯನ್ನು ತೋರಿದ್ದಾರೆ.

೨೦ ನೆಯ ಶತಮಾನದಲ್ಲಿ ಮಹಾತ್ಮಾ ಗಾಂಧೀಜಿಯವರ ಪ್ರಭಾವದಿಂದಾಗಿ ಮಹಿಳೆಯರಿಗೆ ಅಭಿವ್ಯಕ್ತಿಯ ಸ್ವಾತಂತ್ರ್ಯ ದೊರೆಯಿತು. ಶಿಕ್ಷಣ ಸೌಲಭ್ಯವೂ ಲಭಿಸಿತು. ಇದರಿಂದಾಗಿ ಅನೇಕಜನ ಮಹಿಳಾಸಾಹಿತಿಗಳು ತಮ್ಮ ಪಾಲಿನ ಸಾಹಿತ್ಯಸೇವೆಯನ್ನು ಮಾಡುತ್ತ ಬಂದಿದ್ದಾರೆ ಎಂದು ಹೇಳಬಹುದಾಗಿದೆ. ಸ್ವಾತಂತ್ರ್ಯಪೂರ್ವದಲ್ಲಿಯೂ ಅನೇಕಜನ ತಾಯಂದಿರು ಕವಯಿತ್ರಿಯರಾಗಿ, ಕಥೆಗಾರ್ತಿಯರಾಗಿ, ಕಾದಂಬರಿಕಾರ್ತಿಯರಾಗಿ, ತಮ್ಮ ಪ್ರತಿಭೆಯನ್ನು ತೋರಿದ್ದಾರೆ. ಭಾಷಾಂತರ ಸಾಹಿತ್ಯವನ್ನೂ ಒದಗಿಸಿದ್ದಾರೆ.

ತಿರುಮಲೆ ರಾಜಮ್ಮ, ಬಾಲಸರಸ್ವತಿ, ಆರ್. ಕಲ್ಯಾಣಮ್ಮ ಮೊದಲಾದ ಹಿರಿಯ ಸೋದರಿಯರು ೨೦ ನೆಯ ಶತಮಾನದಲ್ಲಿ, ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಕಾಲಿರಿಸಿದ ಮೊದಲಿಗರೆನ್ನಬಹುದು. ಕಥಾಪ್ರಪಂಚಕ್ಕೆ ಮೊದಲ ಕಾಣಿಕೆ ಕೊಟ್ಟವರು ದಿವಂಗತ ಕೊಡಗಿನ ಗೌರಮ್ಮ, ಧಾರವಾಡದ ಶ್ಯಾಮಲಾದೇವಿ ಬೆಳಗಾಂವಕರರು. ಶ್ರೀಮತಿ ಜಯಲಕ್ಷ್ಮಿ ಆರ್. ಶ್ರೀನಿವಾಸನ್, ಎಚ್. ವಿ. ಸಾವಿತ್ರಮ್ಮ, ಎಂ. ಕುಪ್ಪಮ್ಮ, ಎಂ. ಬಿ. ಗೌರಮ್ಮ, ಡಿ. ಚಂಪಾಬಾಯಿ, ಜಯದೇವಿ ತಾಯಿ ಲಿಗಾಡೆ, ಶ್ರೀಮತಿ ವಾಣಿ, ಸರಸ್ವತಿದೇವಿ ಗೌಡರ, ಶಾಂತಾದೇವಿ ಮಾಳವಾಡ, ಗೀತಾದೇವಿ ಕುಲಕರ್ಣಿ, ಅನುಪಮಾ, ತ್ರಿವೇಣಿ, ರತ್ನಮ್ಮ, ಪಾರ್ವತಿದೇವಿ ಹೆಗಡೆ, ಟಿ. ಸುನಂದಮ್ಮ, ಗುರುದೇವಿ ಹಿರೇಮಠ, ಸುಶೀಲಾದೇವಿ ಹಳಪೇಟಿ ಹಾಗೂ ಇನ್ನೂ ಅನೇಕ ಜನ ಸೋದರಿಯರು ಸಣ್ಣಕತೆ, ಕಾದಂಬರಿ, ಕವನ, ನಾಟಕ ಹಾಗೂ ಮಹಿಳೆಯರಿಗೆ ಉಪಯುಕ್ತವಾದ ಸಾಹಿತ್ಯಗಳನ್ನು ರಚಿಸಿದ್ದಾರೆ. ಮಹಿಳೆಯರಿಂದ ರಚಿತವಾದ ಸಾಹಿತ್ಯದಲ್ಲಿ ಹೆಣ್ಣಿನ ನೈಜಚಿತ್ರ, ಹೆಣ್ಣಿನ ಆಶೆ ಆಕಾಂಕ್ಷೆಗಳು ಬಹಳ ಸುಂದರವಾಗಿ ರೂಪುಗೊಂಡಿವೆ. ಸತ್ವಯುತವಾದ ಸಾಹಿತ್ಯವನ್ನೂ, ಮನೋವಿಶ್ಲೇಷಣಾತ್ಮಕ ಸಾಹಿತ್ಯವನ್ನೂ ವಿಚಾರ ಪ್ರಚೋದಕ ಸಾಹಿತ್ಯವನ್ನೂ ಕೆಲವು ಜನ ಸೋದರಿಯರು ನಿರ್ಮಾಣಗೊಳಿಸಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿಯೂ ವಿಶಿಷ್ಟ ಬಗೆಯ ಸಾಹಿತ್ಯವನ್ನು ಕನ್ನಡಿತಿಯರು ಒದಗಿಸಿದ್ದಾರೆ.

ಸ್ವಾತಂತ್ರ್ಯಾನಂತರ ಸಾಹಿತ್ಯ ರಚನೆಗೆ ಬೇಕಾದ ಹೆಚ್ಚಿನ ಅನುಕೂಲತೆ, ಆಸ್ಪದ, ಪ್ರೋತ್ಸಾಹಗಳು ಮಹಿಳೆಯರಿಗೆ ಸಾಕಷ್ಟು ದೊರೆತಂತಿಲ್ಲ. ಸಾಹಿತ್ಯ ಪರಿಷತ್ತಿನಂತಹ ಹಿರಿಯ ಸಂಸ್ಥೆ, ಸರಕಾರದವರು ಮಹಿಳೆಯರಿಂದ ರಚಿತವಾಗುವ ಸಾಹಿತ್ಯಕ್ಕೆ ಪ್ರೋತ್ಸಾಹ ಕೊಡುವ ವಿಶಿಷ್ಟ ಯೋಜನೆಗಳನ್ನು ಸಂಘಟಿಸಿದರೆ ಮಹಿಳೆಯರಲ್ಲಿ ಹುದುಗಿದ ಪ್ರತಿಭೆ, ಜ್ಞಾನ, ಅನುಭವಗಳು ಹೊರಹೊಮ್ಮಿ ಕನ್ನಡ ಸಾಹಿತ್ಯದೇವಿಯ ಭಾಂಡಾರ ಸತ್ವಯುತವಾಗಬಲ್ಲದು. ಮಹಿಳೆಯರ ಸಾಹಿತ್ಯರಚನಾ ಶಕ್ತಿಯನ್ನು ಬೆಳೆಸುವ ಯೋಜನೆಗಳಂತೂ ಇಲ್ಲವೆ ಇಲ್ಲ. ಅಲ್ಲದೆ ಮಹಿಳೆಯರ ಸಾಹಿತ್ಯದಲ್ಲಿರುವ ಮೌಲ್ಯಕ್ಕೆ ಬೆಲೆ ಕೊಡದೆ, ಮಹಿಳೆಯರಿಂದ ರಚಿತವಾದ ಸಾಹಿತ್ಯ ಎಂದು ಸಂಕುಚಿತ ದೃಷ್ಟಿಯನ್ನಿರಿಸಿಕೊಂಡು ಸ್ತ್ರೀಯರ ಸಾಹಿತ್ಯ ನಿರ್ಮಾಣಕ್ಕೆ ಆತಂಕವೊಡ್ಡುವ ಶಕ್ತಿಗಳೂ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ತಲೆದೋರುತ್ತಿವೆ.

ಸ್ತ್ರೀಯರ ಸಾಹಿತ್ಯವನ್ನು ದಾಕ್ಷಿಣ್ಯದಿಂದ ನೋಡುವ ಕಾಲವಿದಲ್ಲ. ಆದರೆ ಅಲ್ಪತನ, ಮಾತ್ಸರ್ಯಗಳಿಗೆ ಅವಕಾಶಕೊಡದೆ ಸಾಹಿತ್ಯದಲ್ಲಿರುವ ಗುಣವನ್ನು, ಹಿರಿಮೆಯನ್ನು ಅರಿತು, ವಿಶಾಲಭಾವನೆಯಿಂದ ಮಹಿಳೆಯರ ಸಾಹಿತ್ಯವನ್ನು ನೋಡುವ ಕಾಲ ಬಂದರೆ, ಮಹಿಳಾಸಾಹಿತ್ಯವು ಕನ್ನಡದಲ್ಲಿ ವೈಭವಪೂರ್ಣವಾಗಿ ಬೆಳಗಬಲ್ಲದು.

# ಸ್ವಾತಂತ್ರ್ಯ ಪೂರ್ವದ ಕನ್ನಡ ಪ್ರಬಂಧ ಸಾಹಿತ್ಯದ ಬೆಳವಣಿಗೆ




ಲೇಖಕರು : ಶ್ರೀ ಬಿ. ಎಚ್. ಶ್ರೀಧರ

ಭಾರತವು ಸ್ವಾತಂತ್ರ್ಯವನ್ನು ಪಡೆದುದು ೧೯೪೭ರಲ್ಲಿ. ಹಿಂದಿನ ಕಾಲದಲ್ಲಿ ಪ್ರಬಂಧವೆಂದರೆ Poetic Composition ಕವಿಕೃತಿಯಾಗಿತ್ತು. ಆಂಗ್ಲ ಸಾಹಿತ್ಯದ ಪರಿಚಯ ಭಾರತೀಯರಿಗಾದ ಮೇಲೆ - ಅಂದರೆ ಈಗ ಸುಮಾರು ೧೫೦ ವರುಷಗಳ ಹಿಂದೆ - ಪ್ರಬಂಧವೆಂದರೆ ಗದ್ಯರೂಪದ ಕಥನ, ವರ್ಣನ, ವಿವರಣ ಅಥವಾ ವಿವೇಚನ ಎಂಬ ಚತುರ್ಮುಖ ಅರ್ಥವನ್ನು ತಳೆದಿತು. ಇವು ಶುದ್ಧ ಪ್ರಬಂಧದ ನಾಲ್ಕು ಪ್ರಸಿದ್ಧ ಶೈಲಿಗಳಾದರೆ ಇವೆಲ್ಲವೂ ಉಚಿತವಾಗಿ ಬೆರೆತರೆ ಮಿಶ್ರಶೈಲಿಯಾಗುವುದು. **ಶುದ್ಧವಾದ** ಕತೆಗಳೂ, ಕಾದಂಬರಿಗಳೂ, ಸಣ್ಣಕತೆಗಳೂ, ಚರಿತ್ರೆ ಅಥವಾ ಇತಿಹಾಸಗಳೂ, ಆತ್ಮಚರಿತ್ರೆಗಳೂ, ಪತ್ರಗಳೂ, ಸಂವಾದಗಳೂ, ವೃತ್ತಾಂತಗಳೂ, ವಿಮರ್ಶೆಗಳೂ, ವಿಜ್ಞಾನದ ಅಥವಾ ಶಾಸ್ತ್ರದ ವಿಷಯವನ್ನು ಪ್ರತಿಪಾದಿಸುವ ಕೃತಿಗಳೂ, ಪ್ರಬಂಧದ ಕಕ್ಷೆಯಿಂದ ದೂರ ಉಳಿಯುತ್ತ ಬಂದವು. ಆಂಗ್ಲ ಕೃತಿಕಾರರಾದ ಅಡಿಸನ್, ಬೇಕನ್, ಸ್ಟೀಲ್, ಹ್ಯಾಸ್ಲಿಟ್, ಲ್ಯಾಂಬ್ ಮುಂತಾದವರ - ಸಾಮಾಜಿಕರ ರೀತಿ ನೀತಿಗಳ ಟೀಕೆ, ರಾಜಕೀಯ ಜೀವನದಲ್ಲಿ ಜಯ ಪಡೆಯುವ ಬಗ್ಗೆ ಉಪದೇಶ, ಮನೋರಂಜಕವಾಗಿ ಬರೆದ ನೈತಿಕ ಬುದ್ಧಿವಾದ ಮತ್ತು ಪುರವಾಸಿಗಳ ಜೀವನದ ವಿವಿಧ ಚಿತ್ರಗಳು - ಮುಂತಾದ ವಿಷಯಗಳನ್ನೊಳಗೊಂಡ ಪ್ರಬಂಧಗಳು ಜನಪ್ರಿಯ ಪ್ರಬಂಧಗಳೆಂದು ಹೊಸಗನ್ನಡ ಬರಹಗಾರರಿಗೆ ತೋರಿದವು.

ಜನಪ್ರಿಯ ಪ್ರಬಂಧಗಳು ಪತ್ರಿಕಾ ಲೇಖನಗಳಂತಿರುವುದು ಸಹಜವಾಯಿತು. News and Views ಸುದ್ದಿ ಮತ್ತು ಅವುಗಳ ಮೇಲಿನ ಅಭಿಪ್ರಾಯಗಳನ್ನು ಸಂಮಿಶ್ರ ಹೂರಣವನ್ನಾಗಿ ಬಳಸಿಕೊಂಡು ವಿವಿಧ ವಿಷಯ ಪ್ರತಿಪಾದನೆಗಳನ್ನು ಕನ್ನಡದ ಉತ್ತಮ ಪತ್ರಿಕೆಗಳು ಸಂಪಾದಕೀಯಗಳ ಮತ್ತು ಇತರ ಸ್ಥಿರಶೀರ್ಷಿಕೆಯುಳ್ಳ ಬರಹಗಳ ರೂಪದಲ್ಲಿ ಮಾಡುತ್ತ ಬಂದುದು ಶಾಸ್ತ್ರ ಶುದ್ಧವಾದ ಪ್ರಬಂಧದ ಅಸ್ಥಿಪಂಜರವಾಯಿತೆನ್ನಬಹುದು. ಸ್ವಾತಂತ್ರ್ಯ ಪೂರ್ವದ ಕರ್ನಾಟಕವು ಸ್ವಾತಂತ್ರ್ಯಪೂರ್ವದ ಭಾರತದ ಅಂಗವಾಗಿ ದಾಸ್ಯದುಃಖ ಪರಿಹಾರಕ್ಕೋಸುಗ ಅಹಿಂಸಾತ್ಮಕವಾದ ಹೋರಾಟವನ್ನು ಇತರ ಪ್ರಾಂತಗಳ ಸತ್ಯಾಗ್ರಹಿಗಳಂತೆಯೇ ಪ್ರಾರಂಭಿಸಿದ್ದು ಸುವೇದ್ಯ. ನಮ್ಮ ಪ್ರಾಂತರಾಜ್ಯದ ಸ್ವಾತಂತ್ರ್ಯಾಂದೋಲನದ ಪ್ರಥಮ ಗಣ್ಯ ಮುಖಂಡರೆಂದರೆ ದಿವಂಗತ ದೇಶಪಾಂಡೆ ಗಂಗಾಧರರಾಯರು. ಆ ಕಾಲದಲ್ಲಿಯ ಕನ್ನಡದ ಬಹುಸಂಖ್ಯ ಪತ್ರಿಕೆಗಳು ರಾಷ್ಟ್ರೀಯ ಬಂಧವಿಮೋಚನೆಯನ್ನೇ ಕ್ರಮೇಣ ತಮ್ಮ ಧೋರಣೆಯನ್ನಾಗಿ ಸ್ವೀಕರಿಸುತ್ತ ಬಂದವು. ಅವುಗಳಲ್ಲಿ ರಾಜಕೀಯಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೇ ಹೆಚ್ಚು ಬರಹಗಳಿರುವುದು ಸಹಜವಾಯಿತು. ಅಂದಿನ ಅವಧಿಯಲ್ಲಿ ವಾಗ್ಭೂಷಣ, ಸಾಧ್ವಿ, ಕರ್ಮವೀರ, ಸಂಯುಕ್ತ ಕರ್ನಾಟಕ, ವಿಶ್ವಕರ್ನಾಟಕ, ತಾಯಿನಾಡು, ರಾಷ್ಟ್ರಬಂಧು, ಜಯಕರ್ನಾಟಕ ಮುಂತಾದ ಪತ್ರಿಕೆಗಳು ಹುಟ್ಟಿ ಬೆಳೆದವು. ಅವುಗಳಲ್ಲಿ ತತ್ಕಾಲದ ರಾಜಕೀಯ ಪರಿಸ್ಥಿತಿಯ ವಿವೇಚನೆ, ಅವುಗಳನ್ನು ಕುರಿತು ದೇಶಭಕ್ತರು ಮಾಡಿದ ಭಾಷಣಗಳು, ಅವುಗಳಿಗೆ ಆನುಷಂಗಿಕವಾದ ಆರ್ಥಿಕ-ಔದ್ಯಮಿಕ ವಿಚಾರಗಳು ಪ್ರಕಟವಾದವು. ಅದರಿಂದಲೇ ಈಗಲೂ ನಮ್ಮ ಪತ್ರಿಕೆಗಳಲ್ಲಿ ರಾಜಕೀಯ ಮುಖಂಡರು ಮತ್ತು ಅವರ ವಿಚಾರಗಳು ಅಗ್ರಸ್ಥಾನ ಪಡೆಯುವ ಸಂಪ್ರದಾಯ ಉಳಿದಿದೆ. ಸಾಮಾಜಿಕ, ಧಾರ್ಮಿಕ, ರಾಜಕೀಯ, ನೈತಿಕ, ಆರ್ಥಿಕ, ಔದ್ಯಮಿಕ ವಿಷಯಗಳನ್ನು ಶುದ್ಧ ಶಾಸ್ತ್ರೀಯವೆಂಬಷ್ಟು ಬಿಗಿಯಲ್ಲದ ಮತ್ತು ತೀರ ಲಘು ಮನೋರಂಜಕವೆಂಬಷ್ಟು ಶಿಥಿಲವಲ್ಲದ ಶೈಲಿಯಲ್ಲಿ ವಿವೇಚಿಸಿದ ಪ್ರಬಂಧಗಳು ಪತ್ರಿಕೆಗಳಲ್ಲಿ ಬಂದಷ್ಟು ಪುಸ್ತಕಗಳಲ್ಲಿ ಬಂದಿಲ್ಲ. ಆದುದರಿಂದ ಕನ್ನಡ ನಾಡಿನ ಸ್ವಾತಂತ್ರ್ಯ ಪೂರ್ವದ ಪ್ರಬಂಧ ಸಾಹಿತ್ಯಕ್ಕೆ ಪುಸ್ತಕ ಸಲ್ಲಿಸಿದ ಸೇವೆಗಿಂತ ಪತ್ರಿಕೆ

ಸಲ್ಲಿಸಿದ ಸೇವೆ ಹೆಚ್ಚಿನದೆಂದರೆ ಅತಿಶಯೋಕ್ತಿಯಾಗಲಾರದು. ಅದಕ್ಕೆ ಪುಸ್ತಕಗಳನ್ನು ಮುದ್ರಿಸಿ ಪ್ರಕಟಿಸಲು ಶಕ್ತರಾಗದ ಪ್ರಬಂಧಕಾರರು ಇನ್ನೂ ಈಗಲೂ ಇರುವುದೂ ಪ್ರಬಂಧಗ್ರಂಥಗಳನ್ನು ಕೊಂಡು ಓದುವ ರಸಿಕರು ಇಂದೂ ಅತಿ ಕಡಿಮೆಯಾಗಿರುವುದೂ ಸಾಕ್ಷಿ ಮತ್ತು ಕಾರಣ.

ಮಹಾತ್ಮಾ ಗಾಂಧಿಯವರ ಲೇಖನ-ಭಾಷಣಗಳನ್ನು 'ಹರಿಜನ' ಪುರವಣಿಯಾಗಿ ಪ್ರಕಟಿಸುತ್ತಿದ್ದ ಕರ್ಮವೀರ ಪತ್ರಿಕೆಯು ಮೇಲೆ ಹೇಳಿದಂಥ ಪ್ರಬಂಧಗಳ ವಿವಿಧ ಮಾದರಿಗಳನ್ನು ಕನ್ನಡಿಗರಿಗೆ ನೀಡಿತು. ಉಪಕ್ರಮ, ಉಪನ್ಯಾಸ, ಉಪಸಂಹಾರಗಳೆಂಬ ಅಂಗತ್ರಯದಿಂದ ಪ್ರಬಂಧದ ಬಂಧವನ್ನು ಲಕ್ಷಿಸಬಹುದಾದ ಮತ್ತು ಕಥನ-ವಿವರಣ-ವಿವೇಚನ ಸಂಮಿಶ್ರವಾದ ಶೈಲಿಯನ್ನು ಹಿಡಿದ ಪ್ರಬಂಧಗಳನ್ನು ಆ ಮಾದರಿಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ದೇಶಪ್ರೇಮ, ಸ್ವಜನದಯೆ, ದಾಸ್ಯದ್ವೇಷ, ವಿದೇಶೀಯ ಭ್ರಷ್ಟಾಚಾರಗಳ ಬಗ್ಗೆ ಸಂತಾಪ, ಕ್ರೋಧ ಮತ್ತು ಪ್ರತಿಭಟನೆ ಹಾಗೂ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತೊಡಗಿಸುವ ಸ್ಫೂರ್ತಿ, ಉತ್ಸಾಹ, ಪ್ರಚೋದನೆ, ವೀರಾವೇಶ, ಸ್ವಾಭಿಮಾನ ಮುಂತಾದ ಭಾವನೆಗಳಿಂದ ವ್ಯಾಪ್ತವಾದ ರಸಪ್ರಧಾನ ಲಕ್ಷಣವೂ ಅಂದಿನ ಅನೇಕ ಪತ್ರಿಕಾ ಪ್ರಬಂಧಗಳಲ್ಲಿ ಕಂಡುಬಂದಿತು. ಈ ರಸಪ್ರಧಾನತೆಯ ಪರಂಪರೆ ರಾಷ್ಟ್ರೀಯ ಸ್ವಯಂಸೇವಕ ಸಂಘದ ಮತ್ತು ಜನಸಂಘದ ಮುಖಂಡರ ಲೇಖನ-ಭಾಷಣಗಳಲ್ಲಿ ಇಂದೂ ಕಾಣಬಹುದಾಗಿದೆ. ಸ್ವಾತಂತ್ರ್ಯಪೂರ್ವದ ಕಾಂಗ್ರೆಸ್ಸು ಜನತೆಯನ್ನು ಇದೇ ಪ್ರಕಾರವಾಗಿ ಮಾತನಾಡಿಸುತ್ತಿತ್ತು; ಆ ಮೂಲಕ ಅದರಿಂದ ದೇಶಕ್ಕಾಗಿ ತ್ಯಾಗ ಮಾಡಿಸುತ್ತಿತ್ತು. ಇಂದಿನ ಗಂಡಾಂತರ ಪರಿಸ್ಥಿತಿಯೂ ಹಾಗೇ ಪತ್ರಿಕೆಗಳಲ್ಲಿ ಅಂಥ ಅಪೀಲುಗಳ ಪ್ರಕಟನೆಗೆ ಕಾರಣವಾಗಿದೆ.

ಶ್ರೀಗಳಾದ ಆಲೂರು ವೆಂಕಟರಾಯರು, ದಿವಾಕರ ರಂಗರಾಯರು, ಸಿದ್ದವ್ವನಹಳ್ಳಿಯ ಕೃಷ್ಣಶರ್ಮರು ಮೊದಲಾದವರು ಬರೆದ ರಾಷ್ಟ್ರೀಯ ಕೃತಿಗಳು ಪುಸ್ತಕ ರೂಪದಲ್ಲಿ ಬಂದ ಪ್ರಬಂಧಗಳಿಗೆ ಕೆಲ ಮಾದರಿಗಳಾಗಿವೆ. ಈಗ ಗಾಂಧೀ ಸ್ಮಾರಕ ನಿಧಿಯ ಆಶ್ರಯದಲ್ಲಿ ಭಾಷಾಂತರಿತವಾಗಿ ಪ್ರಕಟವಾಗುತ್ತಿರುವ ಕೆಲ ಗದ್ಯಗ್ರಂಥಗಳೂ ಅಂಥ ಪ್ರಬಂಧಗಳೇ ಆಗಿವೆ. ಅವು ಕೇವಲ ವಸ್ತುಕಥನಗಳಲ್ಲ, ತತ್ವವಿವೇಚನೆಗಳಲ್ಲ, ಸೂತ್ರವ್ಯಾಖ್ಯಾನಗಳಲ್ಲ, ವ್ಯಕ್ತಿ ಪ್ರಶಂಸೆಗಳಲ್ಲ, ರಾಜನೀತಿ ಯೋಜನೆಗಳಲ್ಲ, ಅರ್ಥಚಿಂತನೆಗಳಲ್ಲ, ನೀತ್ಯುಪದೇಶಗಳಲ್ಲ- ಈ ಎಲ್ಲ ಅಂಶಗಳನ್ನೂ ಉಚಿತವಾಗಿ ಸಂದರ್ಭಾನುಸಾರ ಬಳಸಿಕೊಂಡ ಲೌಕಿಕಜೀವನ ವಿಮರ್ಶೆಗಳಾಗಿವೆ; ತಾತ್ಕಾಲಿಕ ಪರಿಸ್ಥಿತಿಯ ಹಿನ್ನೆಲೆ-ನಡುನೆಲೆ-ಮುನ್ನೆಲೆಗಳ ಐತಿಹಾಸಿಕ ಕಾರ್ಯಕಾರಣ ವಿವೇಕಗಳಾಗಿವೆ. ಪೂರ್ವೋಕ್ತ ಆಂಗ್ಲಪ್ರಬಂಧ ಸಾಹಿತ್ಯದ ವಸ್ತುಗಳೂ ಇವನ್ನು ಹೋಲುವಂಥವೇ. ಅವುಗಳಲ್ಲಿ ವಸ್ತುಸ್ಥಿತಿ, ರೀತಿನೀತಿ, ಆಚಾರ ವಿಚಾರ, ಸುಖದುಃಖ, ಪರಿಹಾರ ಸಾಧನ, ಪ್ರೋತ್ಸಾಹನ, ಉಪದೇಶಗಳು ಎರಕಗೊಂಡಿವೆ, ಪ್ರತ್ಯೇಕವಾಗಿಯೂ ಬಂದಿವೆ. ಆದರೆ ಇಲ್ಲಿ ಹೆಚ್ಚಾಗಿ ಬಂದಿರುವುದು ಅಲ್ಲಿಯಂಥ ವಿಡಂಬನಮಾರ್ಗ ಹಿಡಿದ ಪ್ರಬಂಧಗಳಲ್ಲ. ಇಲ್ಲಿ ಗೆಳೆಯನಂತೆ ಕುಳಿತು ತಿಳಿಯಹೇಳುವ ಸದ್ಗುರುವಿನ ಲಲಿತಮಾರ್ಗ ಸುಪ್ರಸಿದ್ಧ; ಪ್ರಧಾನವಾಗಿ Expository ವಿವರಣ ರೇಖೆಯುಳ್ಳ ರೀತಿ.

ರಾಷ್ಟ್ರೀಯ ಆಂದೋಲನಕ್ಕೆ ಸಂಬಂಧಿಸಿದ ಗ್ರಂಥಗಳನ್ನುಳಿದರೆ ಮನೋರಂಜನೆಯನ್ನೇ ಪ್ರಧಾನೋದ್ದೇಶವನ್ನಾಗಿಟ್ಟುಕೊಂಡು ಸಮಾಜದ ಹಾಗೂ ವ್ಯಕ್ತಿಗಳ ಚಿಕ್ಕಪುಟ್ಟ ಲೋಪದೋಷಗಳನ್ನು ನಗೆಬಗೆಯಿಂದ ಹೇಳುವ ಪ್ರಬಂಧಗಳನ್ನು ಶ್ರೀಗಳಾದ ಪಡುಕೋಣೆ ರಮಾನಂದರಾಯರು, ನಾ. ಕಸ್ತೂರಿಯವರು, ಬಳ್ಳಾರಿ ಬೀಚಿಯವರು, ಎ. ಎನ್. ಮೂರ್ತಿರಾಯರು, ದ. ರಾ. ಬೇಂದ್ರೆಯವರು, ನಾಡಿಗೇರರು, ಡಿ. ವಿ. ಗುಂಡಪ್ಪನವರು, ಪ್ರಸ್ತುತ ಲೇಖಕರು ಮತ್ತು ಶಿವರಾಮ ಕಾರಂತರೇ ಮೊದಲಾದ ಇತರರು ಬರೆದಿದ್ದಾರೆ. ಇವುಗಳಲ್ಲಿ ಲಘು, ಕಟು, ಮಧ್ಯಮ ಹಾಸ್ಯಧ್ವನಿ ಬೆರೆತಿದೆ, ಟೀಕೆ ಟಿಪ್ಪಣಿಗಳಡಗಿವೆ.

ಜಾತೀಯ-ರಾಜಕೀಯ ಯಜಮಾನರಿಂದು ಟೀಕೆಯನ್ನು (-ತಮಗೆ ವಿರುದ್ಧವಾಗಿರುವುದರಿಂದ ಯಾವಾಗಲೂ ಅವು ವಿಷಾದಕ-) ಮಾಡಕೂಡದೆಂದು ನಿರ್ಲಜ್ಜೆಯಿಂದ ಮತ್ತು ಅಧಿಕಾರ ದರ್ಪದಿಂದ ಹೇಳಹೊರಟದ್ದುಂಟು. ಟೀಕೆಯನ್ನು ಖಂಡಿಸಲು ಸಂಮೇಳನ ಕರೆದು ಗೊತ್ತುವಳಿ ಪಾಸುಮಾಡಿಬಿಟ್ಟರಾಯಿತು! ಇಂಥ ಜೀವನಾವರಣವಿರುವುದರಿಂದಲೇ ನಮ್ಮ ಪ್ರಜಾಪ್ರಭುತ್ವ ದಿನೇ ದಿನೇ ಅಸಾಂಸ್ಕೃತಿಕವಾಗುತ್ತ ನಡೆದದ್ದು. ಪ್ರಮಾಣವಿಲ್ಲ ಎಂದು ಘೋಷಿಸುವುದು, ಇದ್ದ ಪ್ರಮಾಣವನ್ನು ಬರಿದೆ ಬಾಯಿಂದ ಹುಡಿಮಾತಾಡಿ ಖಂಡಿಸುವ ಲಕ್ಷಣ ಮುಖಂಡರಲ್ಲಿ ಬೆಳೆಯುತ್ತಿರುವಾಗ

ಪ್ರಬಂಧಗಳು ಹೆಚ್ಚು ಹುಟ್ಟಲಾರವು, ಹುಟ್ಟಿದರೆ ಅವಕ್ಕೆ ವಾಚಕರು ಸಿಗಲಾರರು, ಓದಿದವರು ಓದಿಯೂ ಪ್ರಯೋಜನ ಹೊಂದಲಾರರು!

ಆಯಾ ಕಾಲದ ಪರಿಸ್ಥಿತಿಯ ಮೇಲಿನ ಪ್ರಬಂಧಗಳು ಟೀಕಾತ್ಮಕವಾಗಿರದೆ ಹೋಗುವುದು ಅಸಹಜ. ಶತಾರಿ ಅಥವಾ ತುರುಚುಗಬ್ಬ ಎಂದು ಶ್ರೀ ಜಿ. ಪಿ. ರಾಜರತ್ನಂ ಹೇಳಿದ ಸಾಹಿತ್ಯವು ಪಾಶ್ಚಾತ್ಯ ದೇಶಗಳಲ್ಲಿ ಪ್ರಬಂಧಾಕಾರದಿಂದ ಸಾಮಾಜಿಕ-ಧಾರ್ಮಿಕ-ರಾಜಕೀಯ ವ್ಯವಹಾರಗಳನ್ನು ಎಷ್ಟೋವುಟ್ಟಿಗೆ ತಿದ್ದಲು ಸಹಕಾರಿಯಾಯಿತು. ಶ್ರೀ ವಿ. ಜಿ. ಭಟ್ಟರ ಬುರುಕಿಯು ಶುದ್ಧಪ್ರಬಂಧ ಸಂಗ್ರಹದ ಒಂದು ವಿಡಂಬನ ಕಲಾಚಾತುರ್ಯವುಳ್ಳ ಸ್ವರೂಪ. ಆದರೆ ಅದೆಷ್ಟು ಜನಪ್ರಿಯವಾಗಿದೆ? ಅದು ಮೂಲೆಗುಂಪಾಗಿರುವುದು ಉತ್ತಮ ಪ್ರಬಂಧದ ಬೆಳೆವಣಿಗೆಗೆ ಕರ್ನಾಟಕದ ಸಂಸ್ಕೃತಿಯಲ್ಲೀಗ ಅನುಕೂಲ ಅವಕಾಶವಿಲ್ಲವೆಂಬುದಕ್ಕೆ ಪ್ರಮಾಣ.

ಪತ್ರಿಕಾ ಪ್ರಪಂಚವೇನೋ ಈಗಲೂ ಮೊದಲಿನ ಪ್ರಬಂಧಸೇವೆ ಸಲ್ಲಿಸುತ್ತ ಸಾಗಿದೆ. ಆದರೆ ಅಂದಿನ ವಾಗ್ಮಿಗಳು ಹೇಗೆ ಇಂದಿಲ್ಲವೋ ಹಾಗೇ ಅಂದಿನ ಶುಚಿ-ರುಚಿ-ವೀರ್ಯವತ್ತೆ ಇಂದಿನ ಪ್ರಬಂಧಗಳಲ್ಲಿ ಸಾಕಷ್ಟಿಲ್ಲವಾಗಿದೆ. ಪ್ರಬಂಧ ಸಾಹಿತ್ಯವು ಪ್ರಬುದ್ಧಜೀವನದಿಂದ ಹೊರಹೊಮ್ಮುವ ಬೆಳಕು. ಜೀವನನಲ್ಲಿ ಪ್ರಬುದ್ಧತೆ ಬೆಳೆಯಲು ವಿರುದ್ಧವಾದ ಆಡಳಿತ ಧೋರಣೆ ಗಣ್ಯಸ್ಥಳಗಳಲ್ಲಿರುವುದಕ್ಕೆ ಹೈಕೋರ್ಟು ರಿಟ್ಟುಗಳಲ್ಲಿ ಸರಕಾರಗಳು ಸೋತುದು ಉದಾಹರಣೆ. ನ್ಯಾಯವಾದಿಗಳಿಗೆ ರಾಜಕೀಯೇತರ ವ್ಯವಹಾರಗಳಲ್ಲೂ ಸ್ಥಾನವಿಲ್ಲದಂತಾಗುತ್ತ ಹೋಗಿರುವುದು ಯಾಂತ್ರಿಕವಾದ "His Master's Voice ಒಡೆಯನ ಮತ ತನ್ನ ಮತ" ಎಂಬ ದಾಸಬುದ್ಧಿಯ ವಿರುದ್ಧ ಹೋರಾಡುವ ಮೇಧಾವಿತ್ವ, ವೀರವತ್ತೆ, ನಮ್ಮ ತರುಣ ಜನಾಂಗದಲ್ಲಿ ಒಡಮೂಡಿದರೆ ಮಾತ್ರ ಜೀವನಕ್ಕೂ ಸಾಹಿತ್ಯಕ್ಕೂ ಮಹದುಪಕಾರವಾಗಬಹುದು. ಇಂದಿನ Emergency ಆಪತ್ಕಾಲದಲ್ಲಾದರೂ ಈ ಅರಿವು ಮೂಡೀತೇ?



ಶ್ರೀ ಶಿವರಾಮ ಕಾರಂತರು ಶ್ರೀಮನ್ಮಹಾರಾಜರೊಡನೆ ಸಂಭಾಷಿಸುತ್ತಿರುವುದು

# ಸ್ವಾತಂತ್ರ್ಯೋತ್ತರ ಕನ್ನಡ ಪ್ರಬಂಧ ಸಾಹಿತ್ಯ

**ಲೇಖಕರು : " ಹಂಪನಾ "**

ಪಡುವಣದ ಕಡಲಿನ ಕಡೆಯಿಂದ ತೇಲಿಬಂದು ಭಾರತದಲ್ಲಿ ಭದ್ರವಾಗಿ ಬೇರುಬಿಟ್ಟು ನಿಂತ ಕೆಲವು ಸಾಹಿತ್ಯ ಪ್ರಕಾರಗಳಲ್ಲಿ ಪ್ರಬಂಧ ಸಾಹಿತ್ಯ ಪ್ರಧಾನವಾದ್ದು. ಸ್ವಾತಂತ್ರ್ಯದ ತರುವಾಯ ಕನ್ನಡ ಭಾಷೆಯಲ್ಲಿ ಪ್ರಬಂಧ ಸಾಹಿತ್ಯ ವಿಪುಲವಾಗಿ ಬೆಳೆದು ಬಂದಿದೆ. ಹಲವು ಜನ ಉತ್ತಮ ಲೇಖಕರ ಶ್ರಮದ ಫಲವಾಗಿ ಪ್ರಬಂಧ ಸಾಹಿತ್ಯ ವೈವಿಧ್ಯ-ವಿಸ್ತಾರಗಳಲ್ಲಿ, ಸ್ವಾರಸ್ಯ-ಕಲೆಗಾರಿಕೆಯಲ್ಲಿ, ಔಚಿತ್ಯ-ಅಚ್ಚುಕಟ್ಟಿನಲ್ಲಿ ಬಹು ಗಣನೀಯ ಪ್ರಮಾಣದಲ್ಲಿ ಬೆಳೆದಿದೆ. ಕಾದಂಬರಿ, ಸಣ್ಣಕಥೆ, ನಾಟಕಗಳಂತೆ ಪ್ರಬಂಧವೂ ಪಂಡಿತರಿಗೆ ಪ್ರಿಯವಾಗಿರುವಂತೆ ಪಾಮರರಿಗೂ ರಂಜಕವಾಗಿದೆ. ಕಾರಣ ಪ್ರಬಂಧ ಒಂದು ಸುಂದರವಾದ, ಚಿತ್ತಾಕರ್ಷಕವಾದ ಕಲೆ.

ಕನ್ನಡ ಲೇಖಕರು ಮೊದಮೊದಲು ಪ್ರಬಂಧ ಬರೆಯುವುದರಲ್ಲಿ ಇಂಗ್ಲಿಷ್ ಲೇಖಕರಿಂದ ಸ್ಫೂರ್ತಿ ಪಡೆದರು; ಅಷ್ಟೇ ಅಲ್ಲದೆ ಕೆಲವು ಉತ್ತಮ ಇಂಗ್ಲಿಷ್ ಪ್ರಬಂಧಗಳನ್ನು ಕನ್ನಡಕ್ಕೆ ನೇರವಾಗಿ ಅನುವಾದಿಸಿದರು. ಶ್ರೀ ಎಂ. ರಾಮರಾಯರ ಇಪ್ಪತ್ತಾರು ಇಂಗ್ಲಿಷ್ ಪ್ರಬಂಧಗಳು, ಶ್ರೀ ಪರಮೇಶ್ವರ ಭಟ್ಟರ 'ಕೆಲವು ಇಂಗ್ಲಿಷ್ ಪ್ರಬಂಧಗಳು'—ಅನುವಾದ ಮಾಡಿದವುಗಳಲ್ಲಿ ಹೆಸರಿಸಬಹುದಾದ ಎರಡು ಪ್ರಬಂಧ ಸಂಕಲನಗಳು. ಆದರೆ ಕನ್ನಡ ಪ್ರಬಂಧಕಾರರು ಕೇವಲ ಅನುವಾದ ಕಾರ್ಯದಲ್ಲೇ ನಿರತರಾಗಲಿಲ್ಲ. ದೈನಂದಿಕ ಪತ್ರಿಕೆ, ಸಾಪ್ತಾಹಿಕ, ಮಾಸಿಕ-ತ್ರೈಮಾಸಿಕ-ವಾರ್ಷಿಕ ಪತ್ರಿಕೆಗಳಲ್ಲಿ ಸ್ವತಂತ್ರವಾದ ಪ್ರಬಂಧಗಳನ್ನು ಬರೆಯತೊಡಗಿದರು. ಕೆಲವು ಲೇಖಕರು ಪ್ರಬಂಧ ಸಂಕಲನಗಳನ್ನು (Anthology of Essays) ಹೊರತಂದರಾದರೂ ಪತ್ರಿಕೆಗಳಲ್ಲಿ ಬೇರೆ ಬೇರೆ ಲೇಖಕರಿಂದ ಬಿಡಿಬಿಡಿಯಾಗಿ ಅಚ್ಚಾದ ಪ್ರಬಂಧಗಳೇ ಹೆಚ್ಚು. ಹರಟೆಮಲ್ಲರ 'ಮಾತಿನ ಮಂಟಪ' ನಿತ್ಯ ರಚಿತವಾಗುತ್ತಲೇ ಇದೆ. ದ. ರಾ. ಬೇಂದ್ರೆ, ಪು. ತಿ. ನ. ರವರ ಕಾವ್ಯಮಯ ಪ್ರಬಂಧ ಸಾಹಿತ್ಯ ಆಗಾಗ್ಗೆ ಕಾಣಿಸಿಕೊಳ್ಳುತ್ತಿರುತ್ತದೆ. ಎ. ಎನ್. ಮೂರ್ತಿರಾಯರು, ಎನ್. ಪ್ರಹ್ಲಾದರಾಯರು (ರಥ-ರಥಿಕ), ಎಂ. ರಾಮರಾವ್, ಅ.ನ.ಕೃ. (ಕಸ-ಪೊರಕೆ), ಜಡಭರತ, ಶಿ. ಕಾರಂತ, ತೀ. ನಂ. ಶ್ರೀ., ಡಿ. ಎಲ್. ಎನ್., ವಿ.ಸೀ., ಎಂ. ವಿ. ಸೀತಾರಾಮಯ್ಯ (ಧೂಮಲೀಲೆ ಮತ್ತು ಮುಗಿಲುಗಳು), ಆನಂದ (ಆನಂದಲಹರಿ), ಆರ್ಯ, ಎಚ್ಚೆಸ್ಕೆ (ಕಳ್ಳಹೊಕ್ಕ ಮನೆ), ರಂ. ಶ್ರೀ. ಮುಗಳಿ, ಗೋಕಾಕ್, ರಾಜರತ್ನಂ, ಕಸ್ತೂರಿ, ನಾಡಿಗೇರ ಕೃಷ್ಣರಾಯ, ಎಸ್. ಮಂಜುನಾಥ್, 'ರಾಕು', ರಾವಬಹಾದ್ದೂರ್, 'ರಾಶಿ', ಗೊ. ರಾ. ಅಯ್ಯಂಗಾರ್, ಧಾರವಾಡಕರ, ಪ. ರಮಾನಂದ, 'ಪಾ.ವೆಂ.', ಆರಾಸೇ, ದ. ಬಾ. ಕುಲಕರ್ಣಿ (ಸಾವಧಾನ), ಅ. ರಾ. ಮಿತ್ರ—ಹೀಗೆ ಕನ್ನಡ ಪ್ರಬಂಧ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಲೇಖಕರು ಅನೇಕರು. ಇವರಲ್ಲಿ ಕೆಲವರು ಮಾತ್ರ ಇಂದಿಗೂ ಬರೆಯುತ್ತಿದ್ದಾರೆ; ಆದರೆ ಅನೇಕ ಜನ ಹಿನ್ನೆಲೆಗೆ ಸರಿದಿದ್ದಾರೆ. ಇನ್ನು ಕೆಲವರು ಪ್ರಬಂಧಗಳನ್ನು ಬರೆಯುವ ಹವ್ಯಾಸವನ್ನೇ ನಿಲ್ಲಿಸಿದ್ದು ಕನ್ನಡದ ದೌರ್ಭಾಗ್ಯವೆನ್ನಬಹುದು. ಇಂಥವರಲ್ಲಿ ಪ್ರೊ|| ಡಿ. ಎಲ್ ನರಸಿಂಹಾಚಾರ್ ಮತ್ತು ಪ್ರೊ|| ತೀ. ನಂ. ಶ್ರೀಕಂಠಯ್ಯನವರ ಹೆಸರನ್ನು ಹೇಳಲೇಬೇಕು. ಉತ್ತಮ ಪ್ರಬಂಧಕಾರನ ಗುಣಗಳನ್ನು ಜೀರ್ಣಿಸಿಕೊಂಡಂತಿರುವ 'ದೊ. ಲ. ನ.' ರವರ "ವ್ಯಾಸಂಗದ ಹವ್ಯಾಸ" ಎಂಥವರಿಗೂ ಹಿಡಿಸುವ ಸುಂದರವಾದ ಪ್ರಬಂಧ. ಅದರ ಈ ಕೊನೆಯ ಸಾಲುಗಳಂತೂ ಮತ್ತೆ ಮತ್ತೆ ಓದುಗರು ಮೆಲುಕುಹಾಕುವಂತೆ ಇದೆ: "ಹಚ್ಚನೆಯ ಹುಲ್ಲುಗಾವಲ ಹರವಿನಲ್ಲಿ ಸ್ವೇಚ್ಛೆಯಾಗಿ ತಿರುಗಾಡುತ್ತ ಸೊಂಪಾಗಿ ಕಾಣುವೆಡೆಗಳಲ್ಲಿ ತಂಗಿ, ಹಿಡಿಹುಲ್ಲನ್ನು ಕಬಳಿಸುವ ಹಸುವಿನಂತೆ ಇದೆ ನನ್ನ ವ್ಯಾಸಂಗದ ಹವ್ಯಾಸ. ನನ್ನ ಕೊಠಡಿಯ ಆರಾಮ ಕುರ್ಚಿಯ ಮೇಲೆ ಮಲಗಿ ಕೈಗೆ ಎಟುಕಿದ ಪುಸ್ತಕವನ್ನು ತೆರೆದು ಓದುತ್ತ-ಓದುತ್ತ ಇಹದ ತಾಪತ್ರಯ ದೂರ ಸರಿದಂತೆಲ್ಲ, ತನ್ಮಯತೆಯ ಮಡುವಿನಲ್ಲಿ ಮೆಲ್ಲ-ಮೆಲ್ಲಗೆ ಮುಳುಗಿಬಿಡುತ್ತೇನೆ. ಪಕ್ಕದ ಮೇಜಿನ ಮೇಲೆ ಇರುವ ಗಂಧದ ಕಡ್ಡಿಗಳು ಉಗುಳುವ ಹೊಗೆ ಸುರುಳಿ ಸುರುಳಿಯಾಗಿ, ಅಂಕುಡೊಂಕಾಗಿ ಮೇಲೇರಿ ಹರಡಿ ಕೊಠಡಿಯ ಪರಿಮಿತಾಕಾಶದಲ್ಲಿ ಕರಗಿಹೋಗುವಂತೆ ನಾನೂ

ಬಾರುಬಾರಿಗೆ ಕರಗಿಬಿಡಬೇಕೆಂಬ ಹಂಬಲ ನನಗೆ ಹಿರಿದಾಗಿದೆ."– ಇದು ಆದರ್ಶ ಬರವಣಿಗೆಗೊಂದು ನಿದರ್ಶನ. ಈ ಮಾತು ತಾರೆಗಳು, ಕಾಸಿನ ಸಂಘ, ಮಮತೆ– ಮೊದಲಾದ ಪ್ರಬಂಧಗಳ 'ತೀ. ನಂ. ಶ್ರೀ.' ಯವರಿಗೂ ಅನ್ವಯಿಸುತ್ತದೆ. "ನೆತ್ತಿಯ ಕಡೆ ತೇಜಸ್ಸಿನ ಪುಂಜ; ಬಿಳಿ ಮರಳ ದಿಣ್ಣೆಯಂತೆ ಗೋಚರಿಸುವ ಛಾಯಾಪಥ. ಎಲ್ಲೆಲ್ಲಿಯೂ ಹೂವೆರಚಿದಂತೆ ತಾರೆಗಳು; ಇಲ್ಲಿ ದಟ್ಟವಾಗಿ, ಅಲ್ಲಿ ವಿರಳವಾಗಿ ಒಂದು ಕಣ್ಣು ಕುಕ್ಕುವಂತೆ ಮಿನುಗಿ, ಮತ್ತೊಂದು ಆಕಾಶದ ನೀಲದಲ್ಲಿ ಮಬ್ಬಾಗಿ ಕರಗಿ, ನೋಡುವವನ ಮುಗ್ಧ ಹೃದಯವನ್ನು ತಮ್ಮಲ್ಲಿಯೇ ಲಯಗೊಳಿಸುತ್ತವೆ. ವಿಶ್ವತೇಜಸ್ಸೇ ಅನಂತಾಕೃತಿಯನ್ನು ತಳೆದು ಪ್ರತ್ಯಕ್ಷವಾಗಿರುತ್ತದೆ. ಈ ದಿವ್ಯದರ್ಶನದ ಎದುರಿಗೆ ಮನುಷ್ಯನ ಕ್ಷುದ್ರ ಭಾವಗಳು ದಹಿಸಿಹೋಗುವುದರಲ್ಲಿ ಏನಾಶ್ಚರ್ಯ?" (ತಾರೆಗಳು) ತೀ. ನಂ. ಶ್ರೀ.ಯವರ ಇಂಥ ಶೈಲಿ ಓದುಗರ ಮೆಚ್ಚುಗೆಯನ್ನು ಸೂರೆಗೊಳ್ಳುವುದರಲ್ಲಿ ಏನಾಶ್ಚರ್ಯ?

ಕನ್ನಡದಲ್ಲಿ ಪ್ರಬಂಧ ಸಾಹಿತ್ಯದ ಸಂಪತ್ತನ್ನು ಬಹುಪಾಲು ಹೆಚ್ಚಿಸಿದ ಕೀರ್ತಿ ಮೂರ್ತಿರಾಯರದು. ಅವರ ಹಗಲುಗನಸುಗಳನ್ನು ಯಾರು ಕಂಡಿಲ್ಲ? ಅವರ ಅಲೆಯುವ ಮನ ಕನ್ನಡಿಗರಿಗೆ ಅಪರಿಚಿತವಲ್ಲ. 'ಮಳೆ' ಬೀಳಿಸಿ 'ಕಾಯಿಲೆಗಳು' ಸುಕೃತವೂ ಹೌದೆಂದು ತಿಳಿಸಿ 'ಮೈಸೂರು ರುಮಾಲು' ಕಟ್ಟಿದ ವಿ. ಸೀ.ಯವರು ಈಗಲೂ ಪ್ರಬಂಧ ಬರೆಯುತ್ತಿದ್ದಾರೆ. ಅವರ 'ಬೆಳುದಿಂಗಳ'ನ್ನು ನೋಡದವರು ಯಾರು? ನಡೆದು ಬಂದ ದಾರಿ– ಸಂಪುಟ– ೩ ರಲ್ಲಿ ಇರುವ 'ಕೋಳಿ'ಯ ಮೇಲೆ ಬರೆದ ಪ್ರಬಂಧ ಅವರ ಶೈಲಿಯ ಸಹಜಗುಣವಾದ ಪ್ರಸಾದಗುಣದಿಂದ ಉತ್ಕೃಷ್ಟವಾಗಿದೆ. ಶ್ರೀ ಮಂಜುನಾಥರ 'ಪುಸ್ತಕವನ್ನು ಬಿಡು' ಪ್ರಬಂಧ ಸಂಕಲನವನ್ನು ಓದದೆ ಬಿಡಲು ಯಾರಿಗೆ ಮನಸ್ಸಾಗುತ್ತದೆ ಹೇಳಿ? ಎಂ. ರಾಮರಾಯರ 'ಅರಣ್ಯ ಯಾತ್ರೆ' ಎಲ್ಲರೂ ಕೈಗೊಳ್ಳಲೇಬೇಕಾದ ಯಾತ್ರೆ. 'ತಪನಿಧಿ' ಮತ್ತು 'ಮಾತೆಂಬುದು ಜ್ಯೋತಿರ್ಲಿಂಗ' ಸಂಕಲನಗಳು ಮುಗಳಿಯವರ ಕಾಣಿಕೆ. ಬೇಂದ್ರೆಯವರ ಬಿಡಿ ಬರಹಗಳು ಕೆಲವೇ ಆದರೂ ಅವು ಸ್ವತಂತ್ರವಾದ ವಿಚಾರಲಹರಿ, ಕವಿಸಹಜ ಕಲ್ಪನೆಯ ಮೆರಗು ಹಾಗು ಭಾವದ ಲೇಪದಿಂದ ಬಗೆಬಗೆಯಾಗಿ ಬಳ್ಳಿಯಂತೆ ಬಳುಕಿ ನಾದಮಯ ಗಾರುಡಿ ಶೈಲಿಯಿಂದಲೂ ಕಂಗೊಳಿಸುತ್ತ ಆಕರ್ಷಿಸುತ್ತವೆ. ಪು. ತಿ. ನ. ರವರ 'ರಾಮಾಚಾರಿಯ ನೆನಪು' ಸಂಕಲನವು ಕನ್ನಡಿಗರು ಎಂದೆಂದಿಗೂ ಮರೆಯಲಾಗದ ಸವಿನೆನಪು. ವಿ. ಕೃ. ಗೋಕಾಕರ 'ಜೀವನ ಪಾಠಗಳು' ಎಲ್ಲರೂ ಕಲಿಯಬೇಕಾದ್ದೆ. ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ವತಿಯಿಂದ ಅಚ್ಚಾದ ಬಾಲಸರಸ್ವತಿ, ನಮ್ಮ–ನಮ್ಮವರು, ಪಚ್ಚೆಯ–ತೆನೆ, ಅರೆ–ಮೂಕ, ಗಂಧದ ಹುಡಿ– ಮೊದಲಾದುವು ಗಮನಾರ್ಹ. ಕೊರವಂಜಿ ಡಾಕ್ಟರ್‌ರವರ ತುಟಿಮೀರಿದುದು; ಇತರೆ ಲೇಖಕರ "ಕಸದ ಡಬ್ಬಿ ಮತ್ತು ಇತರ ಪ್ರಬಂಧಗಳು", 'ಕೋದಂಡನ ಉಪನ್ಯಾಸಗಳು'– ಇವೆಲ್ಲಾ ನೋಡಬೇಕಾದ ಪ್ರಬಂಧ ಸಂಕಲನಗಳು. ಪು. ತಿ. ನ. ರವರ 'ಈಚಲು ಮರದ ಕೆಳಗೆ' ಒಂದು ಶ್ರೇಷ್ಠ ದರ್ಜೆಯ ಪ್ರಬಂಧಗಳ ಸಂಕಲನ.

ಸ್ವಾತಂತ್ರ್ಯದ ತರುವಾಯ ಕನ್ನಡ ಪ್ರಬಂಧ ಕ್ಷೇತ್ರವನ್ನು ಕೃಷಿಮಾಡಿ ಬೆಳೆ ತೆಗೆದ ಶ್ರೇಯಸ್ಸು ಶ್ರೀ 'ರಾಕು' ರವರದು. ಅವರ **'ಗಾಳಿಪಟ'** ಪ್ರಬಂಧ ಸಂಕಲನವು, ಕನ್ನಡದಲ್ಲಿ ಉತ್ತಮ ವರ್ಗದ ಭಾವಪ್ರಬಂಧಗಳಿಲ್ಲವೆಂಬ ಅಪಹೇಳಿಕೆಯ ಅಪವಾದವನ್ನು ತೊಡೆದುಹಾಕುತ್ತದೆ. ಕನ್ನಡದಲ್ಲಿ ಶ್ರೇಷ್ಠದರ್ಜೆಯ ಪ್ರಬಂಧಕಾರರಾಗುವ ಅರ್ಹತೆ ಹಲವು ಲೇಖಕರಲ್ಲಿ ಇದ್ದಿತಾದರೂ ಅವರು ಯಾರೂ ಆ ಯೋಗ್ಯತೆಯನ್ನು ಇತೋಪ್ಯತಿಶಯವಾಗಿ ಬೆಳೆಸಿಕೊಳ್ಳಲಿಲ್ಲ. ಅತ್ತಕಡೆ ಅವರ ಚಿತ್ತ ಹರಿಯಲಿಲ್ಲವೆಂದರೂ ಸರಿಯೆ. ಇನ್ನು ಅಲ್ಲೊಂದು, ಇಲ್ಲೊಂದರಂತೆ ಒಳ್ಳೆಯ ಪ್ರಬಂಧಗಳು ಬಿಡಿಬಿಡಿಯಾಗಿ, ಬೇರೆಬೇರೆಯವರಿಂದ ರಚಿತವಾಗಿ ಪತ್ರಿಕೆಗಳಲ್ಲಿ ಆಗಾಗ್ಗೆ ಕಾಣಿಸಿಕೊಂಡರೂ, ಮತ್ತೆ ಆ ಲೇಖಕರು ಏನೂ ಬರೆಯದೆ ಹೇಗೆ ಕಾಣಿಸಿಕೊಂಡರೋ ಹಾಗೇ ಅದೃಶ್ಯರಾಗುತ್ತಿದ್ದರು, ಅರುಣೋದಯ ಸಮಯದಲ್ಲಿ ಕಾಣಿಸಿಕೊಂಡು ಮರೆಯಾಗುವ ಕಿರುತಾರಗೆಯಂತೆ. ಅವರಿಗೆ ಮೊದಲ ಹಾಗೂ ಕೊನೆಯ ಪ್ರಬಂಧವೆರಡೂ ಅದೊಂದೇ ಆಗಿರುತ್ತಿತ್ತು. ಇಂಥ ಸ್ಥಿತಿಯಲ್ಲಿ ಆ ಕಡೆಯಿಂದ 'ಗಾಳಿಪಟ'ವೊಂದು ಹಾರಿಬಂತು. ಅದರ ಸೂತ್ರವನ್ನೇ ನಾವು ಓಂಬಾಲಿಸಿ ಹೊರಟರೆ ಸುಂದರವಾದ, ಹಸಿರಿನಿಂದ ತುಂಬಿ ಕಂಗೊಳಿಸುವ ನಂದನೋದ್ಯಾನವನ್ನು ಪ್ರವೇಶಿಸುತ್ತೇವೆ. ಈ ನೆಲ ಮತ್ತೆ ಬರಡು ಆಗದು, ಈ ಭೂಮಿ ಇನ್ನೂ ಸಮೃದ್ಧವಾಗಿ ಬೆಳೆದು ಫಲ ಕೊಡುತ್ತದೆಯೆಂಬ ಭರವಸೆ ತಾನಾಗಿ ಹುಟ್ಟುತ್ತದೆ. "ಗಾಳಿಪಟ"ದಲ್ಲಿರುವ ಹದಿನಾರು ಲಲಿತ ಪ್ರಬಂಧಗಳು ಕನ್ನಡಕ್ಕೆ ಕೀರ್ತಿ ತರುವ ಪ್ರಬಂಧಗಳು. ಇವುಗಳನ್ನು ಓದುತ್ತಿದ್ದರೆ ನಮಗೆ ಪಾಶ್ಚಾತ್ಯ ಸಾಹಿತ್ಯದ ಉತ್ತಮ ಪ್ರಬಂಧಕಾರರಾದ ಜಿ. ಕೆ. ಚೆಸ್ಟರ್‌ಟನ್, ಇ. ವಿ. ಲ್ಯೂಕಾಸ್, ಎ. ಜಿ. ಗಾರ್ಡನರ್, ರಾಬರ್ಟ್ ಲಿಂಡ್, ಹಿಲ್ಲಾರಿ ಬೆಲ್ಲಾಕ್– ಮೊದಲಾದವರ ನೆನಪು ತಾನಾಗಿ

ಆಗುತ್ತದೆ. ನಿಜಕ್ಕೂ 'ರಾಕು' ಈ ಹಿರಿಯ ಆಂಗ್ಲೇಯ ಪ್ರಬಂಧಕಾರರ ಸಾಲಿನಲ್ಲಿ ಕುಳಿತುಕೊಳ್ಳುವ, ಕುಳಿತುಕೊಳ್ಳಬೇಕಾದ ಕನ್ನಡದ ಪ್ರತಿನಿಧಿ. ಭಾವಗೀತೆಗೆ ಬೇಂದ್ರೆಯವರೂ, ಭಾವಪ್ರಬಂಧಕ್ಕೆ 'ರಾಕು' ರವರೂ ಅಗ್ರಪೂಜಾರ್ಹರು.

ಶ್ರೀ ಆರ್. ವಿ. ಕುಲಕರ್ಣಿ (ರಾಕು) ರವರ ಶಬ್ದಸಂಪತ್ತು, ವಾಙ್ಮಯದ ಅಪಾರವಾದ ಅಭ್ಯಾಸವನ್ನು ಕಂಡು ಆಶ್ಚರ್ಯವಾಗುತ್ತದೆ. ಸಂಸ್ಕೃತ ಸಾಹಿತ್ಯದ ಆಳವಾದ ಅಭ್ಯಾಸದ ಜೊತೆಗೆ ಕನ್ನಡದ ಹಳಗನ್ನಡ ಸಾಹಿತ್ಯ, ವಚನ-ದಾಸ ಸಾಹಿತ್ಯಗಳ ಪರಿಚಯಕ್ಕೆ ಈ ಪ್ರಬಂಧ ಸಂಗ್ರಹದ ಪ್ರತಿ ಪುಟವೂ ಸಾಕ್ಷಿ ಹೇಳುತ್ತದೆ. ಆದಿಪಂಪನಿಂದ ಹಿಡಿದು ಇಂದಿನ ಬೇಂದ್ರೆಯವರ ವರೆಗೂ ಅನೇಕ ಕನ್ನಡ ಕವಿಗಳ ಉತ್ತಮ ಹೇಳಿಕೆಗಳನ್ನು ಸಂನಿವೇಶಕ್ಕೆ ತಕ್ಕ ಮಾತುಗಳನ್ನು ತಮ್ಮ ನೆನಪಿನ ಬಲೆ ಬೀಸಿ, ನಿದರ್ಶನ ಕೊಟ್ಟು ತಮ್ಮ ಹೇಳಿಕೆಯನ್ನು ಪೋಷಿಸುತ್ತಾರೆ; ಇವುಗಳ ಜೊತೆಗೆ ಪುರಾಣದ ಹೇಳಿಕೆಗಳೂ-ಪಾತ್ರಗಳೂ-ಚಿತ್ರಗಳೂ ಬಂದು ಸೇರಿಕೊಂಡು ವಿಷಯಕ್ಕೆ ಪುಷ್ಟಿ ಕೊಡುವಂತೆ ಮಾಡುತ್ತಾರೆ. ಅವರ ಪದ ಪವಣಿಕೆಯ ಶಕ್ತಿ, ಗದ್ಯಬರಹ, ಪ್ರಬಂಧದ ಮಧ್ಯೆ ಮಧ್ಯೆ ಗಾದೆ ಮಾತುಗಳಂತೆ ಕಾಂತಿಯಿಂದ ಕಂಗೊಳಿಸುವ ಸುಂದರ ಸಾಲುಗಳು ಅಪೂರ್ವ ರೀತಿಯಲ್ಲಿ ಮೇಳಗೊಂಡಿವೆ. ಎಲ್ಲ ಪ್ರಬಂಧಗಳ ಅಂತರಂಗದಲ್ಲಿ ನಿರಂತರವಾಗಿ ಹಾಸು ಹೊಕ್ಕಾಗಿ, ತಿಳಿಯಾಗಿ ಹರಿಯುವ ಹಾಸ್ಯಜಲ 'ರಾಕು' ರವರ ಬರವಣಿಗೆಗೊಂದು ಬಲವನ್ನೂ ಬೆಡಗನ್ನೂ ತಂದುಕೊಟ್ಟಿದೆ. ಇಂಥ ಬರವಣಿಗೆ ಕನ್ನಡದಲ್ಲಿ ಹೊಸದೆನ್ನಬಹುದು. ಶ್ರೀ ಎ. ಎನ್. ಮೂರ್ತಿರಾಯರ ತರುವಾಯ ಕನ್ನಡದಲ್ಲಿ ಪ್ರಬಂಧ ಸಾಹಿತ್ಯದ ಸಿರಿತನವನ್ನೂ, ಹಿರಿತನವನ್ನೂ ಹೆಚ್ಚಿಸಿದ ಶ್ರೇಯಸ್ಸು ಶ್ರೀ 'ರಾಕು' ರವರದು. "ಸ್ವೈರವಿಹಾರ ಮಾಡುವ ರಾಕು ಅವರ ವಾಣಿ-ವಿಲಾಸ ಇಂದಿನ ಕನ್ನಡಕ್ಕೆ ಹೊಸಬೆಡಗು, ಬಿನ್ನಾಣ" ತಂದುಕೊಟ್ಟಿದೆ.

ಹೀಗೆ ಆರಿಸಿಕೊಂಡ ವಸ್ತುವಿನ ಸುತ್ತ ಜೇನಿನಂತೆ ಪ್ರಬಂಧಕಾರ ಸುತ್ತುತ್ತ ಅದರ ಸಾರಸರ್ವಸ್ವವನ್ನೂ ತಾನು ಮೊದಲು ಹೀರಿ ತರುವಾಯ ಓದುಗರಿಗೆ ಸವಿದು ಚಪ್ಪರಿಸಲು ನೀಡುತ್ತಾನೆ. ಲೇಖಕನ ಭಾವವಿಹಾರದಲ್ಲಿ ಓದುಗರೂ ಉಲ್ಲಾಸಪಡಬಹುದು. ನೃತ್ಯದ ವಿಲಾಸ, ಗೀತದ ಗತಿ, ಚಿತ್ರದ ರೂಪ, ಮಾತುಗಾರಿಕೆಯ ಜಾಣ್ಮೆ, ಕಲೆಗಾರಿಕೆಯ ಕೌಶಲ, ತಿಳಿಯಾದ ಹಾಸ್ಯ, ಬದುಕಿನ ದರ್ಶನ- ಇವೆಲ್ಲಾ ಇಂದಿನ ಸ್ವಾತಂತ್ರ್ಯೋತ್ತರ ಪ್ರಬಂಧಗಳಲ್ಲಿ ಘನೀಭೂತಗೊಂಡು ಎದ್ದುಕಾಣುವ ಕೆಲವು ಉತ್ತಮ ಗುಣಗಳು. ಪರಿಣತ ಶೈಲಿಯ ಸಿದ್ಧಹಸ್ತಗಳು ಇಂದು ಹೆಚ್ಚುತ್ತಿರುವುದರಿಂದ ಇನ್ನೂ ಉಜ್ವಲ ಭವಿಷ್ಯ ಈ ಪ್ರಬಂಧ ಸಾಹಿತ್ಯಕ್ಕೆ ಕಾದಿದೆಯೆನ್ನಬಹುದು.





ಶ್ರೀ ಪು. ತಿ. ನರಸಿಂಹಾಚಾರ್ಯರು

ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ವೈಸ್‌ಛಾನ್ಸಲರೂ 'ಕುವೆಂಪು'
ಎಂಬ ನಾಮಾಂಕಿತರೂ ಆದ ಪದ್ಮಭೂಷಣ ಡಾ|| ಕೆ. ವಿ. ಪುಟ್ಟಪ್ಪನವರು.
ಇವರ ಎಡ ಪಕ್ಕದಲ್ಲಿ ಶ್ರೀ ಸ. ಸ. ಮಾಳವಾಡರಿದ್ದಾರೆ.



'ಕನ್ನಡ ನುಡಿ'ಯ ಮಾಜಿ ಸಂಪಾದಕರಾದ
ಪದ್ಮಶ್ರೀ ರಾಜಸೇವಾಸಕ್ತ ಸಿ. ಕೆ. ವೆಂಕಟರಾಮಯ್ಯನವರು

# ಕನ್ನಡ ಸಾಹಿತ್ಯ ಪರಿಷತ್ತಿಗೆ ರಾಷ್ಟ್ರಪ್ರಮುಖರ ಭೇಟಿ





ಭಾರತದ ರಾಷ್ಟ್ರಾಧ್ಯಕ್ಷ ಡಾ॥ ಎಸ್. ರಾಧಾಕೃಷ್ಣನ್ ಅವರು ಸಾಹಿತ್ಯ ಪರಿಷತ್ತಿಗೆ
ಇದೇ ಅಕ್ಟೋಬರ್ ದಿನಾಂಕ ೯ ರಂದು ಭೇಟಿ ಕೊಟ್ಟಾಗ ತೆಗೆದ ಚಿತ್ರ.
ರಾಷ್ಟ್ರಾಧ್ಯಕ್ಷರು ರಾಜ್ಯಪಾಲರೊಡನೆ ಆಗಮಿಸುತ್ತಿದ್ದಾರೆ.



ರಾಷ್ಟ್ರಾಧ್ಯಕ್ಷರಿಗೆ ಸುಮಂಗಲಿಯರು ಆರತಿ ಎತ್ತುತ್ತಿರುವುದು.

# ರಾಜ್ಯಪಾಲರ ಭೇಟಿ



ಬಿ. ಎಂ. ಶ್ರೀ. ಅಚ್ಚುಕೂಟದ ನೂತನ ಕಟ್ಟಡ–ನಿಘಂಟು ಮುದ್ರಣದ ಆರಂಭೋತ್ಸವ ಚಿತ್ರಗಳು.
ಈ ಸಮಾರಂಭಗಳನ್ನು ರಾಜ್ಯಪಾಲರಾದ ಶ್ರೀಮನ್‌ಮಹಾರಾಜ ಶ್ರೀ ಜಯಚಾಮರಾಜ
ಒಡೆಯರು ದಿನಾಂಕ ೧೦-೬-೧೯೬೩ ರಂದು ನೆರವೇರಿಸಿದರು.

# ಸ್ವಾತಂತ್ರ್ಯದ ನಂತರ ಕನ್ನಡ ವಿಮರ್ಶಾ ಸಾಹಿತ್ಯ

ಲೇಖಕರು : ಶ್ರೀ ಸ. ಸ. ಮಾಳವಾಡ

ಸ್ವಾತಂತ್ರ್ಯದ ನಂತರದ ಕನ್ನಡ ಸಾಹಿತ್ಯ ನಿರ್ಮಿತಿಯಲ್ಲಿ ನವೀನ ವೈಶಿಷ್ಟ್ಯಗಳು ಖಚಿತವಾದ ಬಗೆಯಲ್ಲಿ ಹೊರಹೊಮ್ಮಿಲ್ಲವೆಂಬ ಅಭಿಪ್ರಾಯವೊಂದಿದೆ. ಇದು ಬಹುಮಟ್ಟಿಗೆ ನಿಜವೂ ಅಹುದು. ಇದಕ್ಕೆ ಸ್ವಾತಂತ್ರ್ಯೋತ್ತರದ ಅವಧಿಯು ವಿಶಾಲವಲ್ಲವೆಂಬುದು ಕಾರಣವಾಗಿರಬೇಕು. ಇಲ್ಲವೆ ಸಾಹಿತ್ಯ ನಿರ್ಮಿತಿಯ ಬಗೆಗೆ ನವೀನ ಗುರಿಯಾಗಲಿ, ಸ್ಫೂರ್ತಿಯ ಸೆಲೆಯಾಗಲಿ ಖಚಿತವಾದ ರೂಪ ತಳೆಯದೆ ಹೋಗಿರಬೇಕು. ಚೀನೀಯರ ದುರಾಕ್ರಮಣದ ಸನ್ನಿವೇಶವು ಮಾತ್ರ ಒಂದು ನಿರ್ದಿಷ್ಟ ಗುರಿಯನ್ನು ಮೂಡಿಸಿತು.

ಸ್ವಾತಂತ್ರ್ಯೋತ್ತರದ ಕನ್ನಡ ವಿಮರ್ಶಾ ಸಾಹಿತ್ಯವೂ ಹೊಸ ಬಗೆಯಾಗಿ ರೂಪುಗೊಂಡಿದೆಯೆಂದು ಹೇಳಲು ಬರುವಂತಿಲ್ಲ. ಅಲ್ಲದೆ ವಿಮರ್ಶಾ ಸಾಹಿತ್ಯದಲ್ಲಿ ಮೊದಲಿನ ಸ್ವಾತಂತ್ರ್ಯವು ಉಳಿದಿಲ್ಲವೆಂಬ ಅಭಿಪ್ರಾಯವೊಂದು ವ್ಯಕ್ತವಾಗಿದೆ. ಆ ಬಗೆಯ ಸ್ವಾತಂತ್ರ್ಯ ವಹಿಸುವುದು ಕಹಿಯಾದ ಸನ್ನಿವೇಶಕ್ಕೆ ಕಾರಣವಾಗುವುದೆಂಬ ದೃಷ್ಟಿಯಿಂದ ಈ ಬಗೆಯ ಅಭಿಪ್ರಾಯ ರೂಪುಗೊಂಡಿದೆ. ಆದರೆ ಕೆಲವರು ತಮಗೆ ಬೇಕಾದವರ ಕೃತಿಗಳನ್ನು ಸಮರ್ಥಿಸಿಕೊಳ್ಳುವಲ್ಲಿ, ಇತರರ ಕೃತಿಗಳನ್ನು ತೆಗಳುವಲ್ಲಿ ಸಾಕಷ್ಟು ಸ್ವಾತಂತ್ರ್ಯ ವಹಿಸಿದ ಉದಾಹರಣೆಗಳು ಕೆಲವಾದರೂ ದೊರೆಯುತ್ತಿವೆ. ನವ್ಯ ಕವಿತೆಯ ಸೃಷ್ಟಿ ಅದನ್ನು ಕುರಿತು ವಿಮರ್ಶಾ ಸಾಹಿತ್ಯವು ಸ್ವಾತಂತ್ರ್ಯೋತ್ತರದ ಅವಧಿಯಲ್ಲಿಯೇ ಹೊರಹೊಮ್ಮಿ ಬಂದಿದೆ. ನಮ್ಮ ದೇಶದ ಸ್ವಾತಂತ್ರ್ಯವು ಇದಕ್ಕೆ ನೇರವಾದ ಕಾರಣವಾಗಿ ಪರಿಣಮಿಸಿತೆಂದು ಮಾತ್ರ ಹೇಳಲು ಸಾಧ್ಯವಿಲ್ಲ. ನಾವು ಕಾಲವಿಭಾಗ ಮಾಡಿಕೊಳ್ಳುವುದು ಅಭ್ಯಾಸದ ಒಂದು ಅನುಕೂಲತೆಯಾಗಿದೆಯಲ್ಲದೆ ನಿರ್ದಿಷ್ಟ ಅವಧಿಯಲ್ಲಿ ರೂಪುಗೊಳ್ಳಬೇಕಾದ ಯೋಜನೆಗಳಂತೆ ಸಾಹಿತ್ಯವಾಹಿನಿ ಸಾಗುವುದಿಲ್ಲ.

ಆಂಗ್ಲಭಾಷೆ, ಸಾಹಿತ್ಯಗಳ ಸಂಪರ್ಕದಿಂದ ಮೂಡಿಬಂದ ಹೊಸ ದೃಷ್ಟಿಯ ಫಲವಾಗಿ ನಮ್ಮಲ್ಲಿ ಆಧುನಿಕ ವಿಮರ್ಶಾ ಸಾಹಿತ್ಯವು ಬರಹತ್ತಿದೆ. ಪ್ರಾಚೀನ ಕನ್ನಡ ಕವಿಗಳನ್ನು ಕುರಿತು ಪ್ರಶಸ್ತಿ ಗ್ರಂಥಗಳು ಪ್ರಕಟವಾಗುವ ಸಾಂಪ್ರದಾಯವು ಮೊದಲಾಯಿತು. ಈಚೆಗೆ ಆಧುನಿಕ ಸಾಹಿತಿಗಳ ಬಗೆಗೂ ಇಂತಹ ಕೃತಿಗಳು ಪ್ರಕಟವಾಗುತ್ತಿವೆ. ಸಾಹಿತ್ಯ ಸಮ್ಮೇಲನ, ವಿಶಿಷ್ಟ ಬಗೆಯ ಸಾಹಿತ್ಯೋತ್ಸವ, ಸಾಹಿತಿಗಳನ್ನು ಕುರಿತು ಗೌರವಪರ ಉತ್ಸವ ಮುಂತಾದ ಸಂದರ್ಭಗಳಲ್ಲಿ ಈ ಬಗೆಯ ಕೃತಿಗಳು ಪ್ರಕಟವಾಗಿವೆ. ಕಳೆದ ಕೆಲವು ವರ್ಷಗಳಲ್ಲಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ ಮತ್ತು ಅರವತ್ತು ವರ್ಷದ ಹಬ್ಬ ನಡೆದ ಸಾಹಿತಿಗಳನ್ನು ಕುರಿತು ಪ್ರಶಸ್ತಿ ಗ್ರಂಥಗಳು ಬರುವುದು ವಾಡಿಕೆಯಾಗಿದೆ. ಆಧುನಿಕರಾದರೂ ಪ್ರಾಚೀನ ಸಾಂಪ್ರದಾಯದ ಕಾವ್ಯಗಳನ್ನು ರಚಿಸಿದ ಪಂಡಿತ ವಾಯ್. ನಾಗೇಶ ಶಾಸ್ತ್ರಿಗಳನ್ನು ಕುರಿತು 'ಶ್ರೀ ನಾಗೇಶ ಕವಿ ಪ್ರಶಸ್ತಿ' ಪ್ರಕಟವಾದುದನ್ನು ಉಲ್ಲೇಖಿಸಬಹುದು. ಅದರಂತೆ ಇನ್ನೊಬ್ಬ ಹಿರಿಯ ವಿದ್ವಾಂಸರಾದ ಪಂಡಿತ ಸೇಡಿಯಾಪು ಕೃಷ್ಣಭಟ್ಟರನ್ನು ಕುರಿತ 'ಒಸಗೆ' ಎಂಬ ಕೃತಿಯು ಅಭ್ಯಾಸಿಗಳಿಗೆ ಉಪಯುಕ್ತವಾದುದಾಗಿದೆ.

ಕವಿಯ ಪರಿಚಯ, ಪ್ರಶಸ್ತಿ, ವಿಮರ್ಶಾತ್ಮಕ ಅಭ್ಯಾಸಕ್ಕೆ ಪ್ರಚೋದನೆ. ಕಾವ್ಯ ಇಲ್ಲವೆ ಲೇಖನ ಸಂಗ್ರಹ – ಇವುಗಳನ್ನೊಳಗೊಂಡ ಹಲವಾರು ಕೃತಿಗಳು ನಮ್ಮಲ್ಲಿ ಬಂದಿರುವುದು ನಿಜ. ಅದರಂತೆ ಪುಸ್ತಕ ಪರಿಚಯ, ಕೃತಿಗಳನ್ನು ಕುರಿತ ಮೆಚ್ಚುಗೆ ಇಲ್ಲವೆ ಅದರ ಅಭಾವವನ್ನು ಗಮನಿಸಿದ ಬರೆಹ – ಇವೂ ನಮ್ಮಲ್ಲಿ ಬಂದಿವೆ. ಆದರೆ ವಿಮರ್ಶಾಶಾಸ್ತ್ರವನ್ನು ಕುರಿತ ಗ್ರಂಥ ರಚನೆಯ ಅಭಾವ ಮಾತ್ರ ಇನ್ನೂ ತುಂಬಿ ಬಂದಿಲ್ಲ. ಪ್ರಶಂಸೆ– ಅವಜ್ಞೆಗಳನ್ನು ದಾಟಿ ನಿಂತು ಸಮಂಜಸವಾದ ರೀತಿಯಲ್ಲಿ ನಡೆದ ಸಾಹಿತ್ಯ ಕೃತಿಗಳ ವಿಮರ್ಶೆಯೂ ಕಡಮೆಯೇ ಆಗಿದೆ.

ಅತಿ ಪ್ರಶಂಸೆಯು ಸಮಂಜಸವಲ್ಲವೆಂಬ ದೃಷ್ಟಿಯನ್ನು ಪ್ರತಿಪಾದಿಸುವ ಪ್ರೊ. ಎಸ್. ವಿ. ರಂಗಣ್ಣನವರ 'ಹೊನ್ನಶೂಲ' ಎಂಬ ಕೃತಿಯು ನಮ್ಮ ವಿಮರ್ಶಾ ಸಾಹಿತ್ಯದಲ್ಲಿ ಹೊಸ ಬಗೆಯದೇ ಆಗಿದೆ. ಮುದ್ದಣನ ರಾಮಾಶ್ವ

ಮೇಧವನ್ನು ಕುರಿತು ಬಂದ ಹೊಗಳಿಕೆಯು ಅತಿಯಾಯಿತೆಂದು ಭಾವಿಸಿ ಅವರು ಬಹುದಿನಗಳ ಹಿಂದೆಯೇ ಬರೆದ 'ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು' ಎಂಬ ಪ್ರಸಿದ್ಧ ಲೇಖನ ಮತ್ತು ಅದೇ ರೀತಿಯ ಇನ್ನೂ ಕೆಲವು ಲೇಖನಗಳ ಸಂಕಲನವಾಗಿದೆ, ಈ ಕೃತಿ. ಇಲ್ಲಿಯ ಲೇಖನಗಳಲ್ಲಿಯ ಒಂದರ ಹೆಸರು 'ಪ್ರಶಂಸೆ ಸಾಕೋ, ಪರೀಕ್ಷೆ ಬೇಕೋ' ಎಂದಿದೆ. ಇದು ಲೇಖಕರ ಉದ್ದೇಶವನ್ನು ಸ್ಪಷ್ಟಗೊಳಿಸುವಂತಿದೆ. ಅತಿ ಪ್ರಶಂಸೆ ಸರಿಯಲ್ಲವೆಂಬ ಮಾತನ್ನು ವಿಡಂಬಿಸಿ ಹೇಳುವಾಗ ದೊರೆಯಬೇಕಾದಷ್ಟು ಮೆಚ್ಚುಗೆಯನ್ನು ಕೂಡ ನಿರಾಕರಿಸುವ ಸಂಭವವಿದೆ. ಪ್ರೊ. ರಂಗಣ್ಣನವರ ವಿಡಂಬನೆಗೆ ಪ್ರತಿ ಕ್ರಿಯೆಯೂ ಮೂಡಿಬಂದಂತಿದೆ. ವಿಮರ್ಶಕನು ಕೇವಲ ಸ್ತುತಿಪಾಠಕನಾಗಬಾರದು ಎಂಬ ಮಾತೇನೋ ನಿಜ. ಆದರೆ ಆತನು ನ್ಯಾಯಾಲಯದ ಪೀಠಾಧ್ಯಕ್ಷನು ತಾನಾಗಿರುವೆನೆಂದೂ ಭಾವಿಸಬಾರದೆಂದು ಪಂಡಿತ ಸೇಡಿಯಾಪು ಕೃಷ್ಣಭಟ್ಟರು ಒಂದೆಡೆ ಸಮಂಜಸವಾಗಿಯೇ ವಿವೇಚಿಸಿದ್ದಾರೆ. ವಿಮರ್ಶೆಯಲ್ಲಿ ಅತಿಯಾದ ಪ್ರಶಂಸೆಯಂತೆಯೆ ಅವಜ್ಞೆ, ಅಹಂಭಾವ, ಅಸಹನೆ, ಮತ್ಸರ, ದೂಷಣೆ ಪೂರ್ವಗ್ರಹಗಳೂ ಇರಬಾರದು – ಎಂಬುದಾಗಿ ಅವರು ಹೇಳಿದುದು ವಿಮರ್ಶಕರಿಗೆ ಅವಶ್ಯಕ ಎಚ್ಚರಿಕೆಯ ಮಾತಾಗಿದೆ. ಸೇಡಿಯಾಪು ಕೃಷ್ಣಭಟ್ಟರ ಈ ಅಭಿಪ್ರಾಯವು 'ಶ್ರೀ ರಾಮಾಶ್ವಮೇಧದ ರಸತರಂಗಗಳು' ಎಂಬ ಶ್ರೀ ಆಳ್ವರ ವಿಮರ್ಶಾತ್ಮಕ – ಕೃತಿಯ ಮುನ್ನುಡಿಯಲ್ಲಿ ಬಂದಿದೆ. ಮೇಲ್ಕಂಡ ಕೃತಿಯು ರಾಮಾಶ್ವಮೇಧದ ಪರಾಮರ್ಶೆಯಾಗಿದ್ದು ವಿಮರ್ಶಕರ ಸಹೃದಯತೆಯಿಂದ ಕೂಡಿ ಓದುಗರು ಮೂಲಕೃತಿಯ ರಸವನ್ನು ಆಸ್ವಾದಿಸುವಲ್ಲಿ ಸಹಾಯಕಾರಿಯಾಗುವಂತಿದೆ.

ಪ್ರಾಚೀನ ಕಾವ್ಯಗಳಲ್ಲಿ ಒಂದಾದ ಚಾಮರಸನ ಪ್ರಭುಲಿಂಗಲೀಲೆಯ ಗದ್ಯಾನುವಾದದೊಂದಿಗೆ ಮೂಲಕೃತಿಯ ರಸಾಸ್ವಾದನಕ್ಕೆ ಸಹಾಯವಾಗುವ ವಿಮರ್ಶೆಯನ್ನೊಳಗೊಂಡ ಒಂದು ಕೃತಿಯನ್ನು ಪ್ರೊ. ಬಿ. ಸಿ. ಜವಳಿ ಮತ್ತು ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರು ಈಚೆಗೆ ಪ್ರಕಟಿಸಿದ್ದಾರೆ.

ಮನೋಹರ ಗ್ರಂಥಮಾಲೆಯು ಪ್ರಕಟಿಸಿದ 'ನಡೆದು ಬಂದ ದಾರಿ' ಎಂಬ ವ್ಯಾಪಕವಾದ ಮೂರು ಹೊತ್ತಿಗೆಗಳಲ್ಲಿ ಆಧುನಿಕ ಕನ್ನಡ ಸಾಹಿತ್ಯದ ವಿವಿಧ ರೂಪಗಳ ಚರಿತ್ರಾತ್ಮಕ ವಿಮರ್ಶೆಯು ಬಂದಿರುವುದು ಒಂದು ಮಹತ್ವದ ಪ್ರಯತ್ನವಾಗಿದೆ. ಈ ಬಗೆಯ ವ್ಯಾಪಕವಾದ ಅಭ್ಯಾಸ ಶ್ಲಾಘನೀಯ. ಆದರೆ ಅಲ್ಲಿ ಬಂದಿರುವ ವಿಮರ್ಶಾತ್ಮಕ ಅಭಿಪ್ರಾಯ ನಿರೂಪಣೆಯಲ್ಲಿ ಬೇಕು – ಬೇಡಗಳ ಆವರಣವು ಪ್ರಬಲವಾದಂತಿದೆ. ವಿಮರ್ಶಾತ್ಮಕ ಬರೆಹದ ಯೋಜನೆಯ ತಳಹದಿಯು ಇನ್ನೂ ವ್ಯಾಪಕವಾಗಬೇಕಾದೆ. ಬೇಕು – ಬೇಡಗಳ ಪ್ರಬಲ ಆವರಣವನ್ನು ದಾಟಿ ಸಾಹಿತ್ಯದ ಮೌಲ್ಯಗಳ ಸರ್ವಸಾಧಾರಣ ದೃಷ್ಟಿಯಿಂದ ಹೊರ ಹೊಮ್ಮುವ ವಿಮರ್ಶೆಯು ಹೆಚ್ಚು ಉಪಯುಕ್ತವಾಗಿ ಪರಿಣಮಿಸಬಲ್ಲದು. ಕ್ಷೇಮೇಂದ್ರನ 'ಔಚಿತ್ಯವಿಚಾರ ಚರ್ಚೆ' ಯನ್ನು ಡಾ. ಕೃಷ್ಣಮೂರ್ತಿಯವರು ಕನ್ನಡದಲ್ಲಿ ಒದಗಿಸಿದ್ದಾರೆ. ಕಾವ್ಯವನ್ನು ಕುರಿತ 'ಔಚಿತ್ಯ ಚರ್ಚೆ'ಯಂತೆ ವಿಮರ್ಶೆಯಲ್ಲಿಯ 'ಔಚಿತ್ಯ ವಿಚಾರ' ವೂ ಈಗ ಅವಶ್ಯಕವಾದಂತಿದೆ.

ಡಾ. ಮುಗಳಿ ಅವರು ತಮ್ಮ ಒಂದು ಲೇಖನದಲ್ಲಿ ಇತ್ತೀಚೆಗೆ ಪ್ರಕಟವಾದ ವಿಮರ್ಶಾತ್ಮಕ ಕೃತಿಗಳ ಬಗೆಗೆ ಕೆಲವು ಮಾತುಗಳನ್ನು ಬರೆದಿದ್ದಾರೆ. ಅವರು ಉಲ್ಲೇಖಿಸಿದ ಕೃತಿಗಳಲ್ಲಿ ಕೆಲವು ಇಂತಿವೆ: ಸಮಾಲೋಕ – ತೀ.ನಂ.ಶ್ರೀ.; ಹೊಸಗನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು – ಎಂ. ವಿ. ಸೀತಾರಾಮಯ್ಯ; ಅನುಕಲ್ಪನೆ – ವೆಂಕಟಸುಬ್ಬಯ್ಯ; ಹೊಸ ಕಾವ್ಯದ ಗೊತ್ತುಗುರಿಗಳು – ಗೋಕಾಕ; ಯಕ್ಷಗಾನ ಬಯಲಾಟ – ಕಾರಂತ; ಹರಿಹರನ ರಗಳೆಗಳಲ್ಲಿ ಜೀವನ ದರ್ಶನ – ಮಾಳವಾಡ; ಕನ್ನಡ ಸಾಹಿತ್ಯದಲ್ಲಿ ಸರಸ್ವತಿಯ ದರ್ಶನ – ಮುಗಳಿ.

ಮೇಲೆ ಉಲ್ಲೇಖಿತವಾದ ಕೃತಿಗಳಲ್ಲದೆ ಇನ್ನೂ ಕೆಲವು ಕೃತಿಗಳು ಈಚೆಗೆ ಪ್ರಕಟವಾಗಿವೆ. ಆದರೆ ಈಗ ನಡೆದಿರುವ ಕೃಷಿ ಅಲ್ಪ. ಕನ್ನಡ ಸಾಹಿತ್ಯ ಕೃತಿಗಳ ರಸಾಸ್ವಾದನ, ಮೌಲ್ಯಮಾಪನಗಳ ಬಗೆಗೆ ಇನ್ನೂ ನಡೆಯಬೇಕಾದ ಕಾರ್ಯವೇ ಬಹಳವಾಗಿದೆ.

ಬೇರೆ ಭಾಷೆಯ ಸಾಹಿತ್ಯವನ್ನು ಕುರಿತ ಕನ್ನಡ ವಿಮರ್ಶಾತ್ಮಕ ಕೃತಿಗಳಲ್ಲಿ ಪ್ರೊ|| ಎ. ಆರ್. ಕೃಷ್ಣಶಾಸ್ತ್ರಿಗಳ 'ಬಂಕಿಮಚಂದ್ರ' ಗ್ರಂಥವು ಉಚ್ಚ ತರಗತಿಯದಾಗಿದೆ. ಬಂಗಾಲಿ ಭಾಷೆಯಲ್ಲಿರುವ ಮೂಲದ ಕೃತಿಗಳನ್ನು, ವಿಮರ್ಶಾತ್ಮಕ ಸಾಮಗ್ರಿಯನ್ನು ಆಸ್ಥೆಯಿಂದ ವ್ಯಾಸಂಗ ಮಾಡಿದುದರ ಫಲವಾಗಿ ಮೂಡಿಬಂದ ಕೃತಿಯಿದು. ಪ್ರೊ|| ಕೃಷ್ಣಶಾಸ್ತ್ರಿಗಳ ವಿದ್ವತ್ತು, ಸಂಸ್ಕಾರ, ಪರಿಶ್ರಮಗಳು ಅಭಿನಂದನೀಯವೇ ಆಗಿವೆ. ಅಂತೆಯೆ ಅವರ ಈ ಕೃತಿಯಲ್ಲಿ ಹಿರಿಮೆ ಕಂಡುಬರುತ್ತಿದೆ.

ಬಂಗಾಲಿ ಕಾದಂಬರಿಕಾರ ಬಂಕಿಮಚಂದ್ರರ ಸಮಗ್ರ ಕೃತಿಗಳ ಪರಿಚಯ, ವಿಮರ್ಶೆ, ಬಂಗಾಲಿ ಸಾಹಿತ್ಯದಲ್ಲಿ ಬಂಕಿಮರ ಸ್ಥಾನ, ಅವರ ಜೀವನ ದರ್ಶನಗಳನ್ನು ನಿಚ್ಚಳವಾಗಿ ವಿವೇಚಿಸಿದ ಈ ಕೃತಿಯು ಆಧುನಿಕ ಕನ್ನಡವು ಬಂಗಾಲಿ ಸಾಹಿತ್ಯಕ್ಕೆ ಸಲ್ಲಿಸಿದ ಉತ್ತಮ ಕಾಣಿಕೆಯಾಗಿದೆ. ಈ ಬಗೆಯ ವಿಮರ್ಶಾತ್ಮಕ ಕೃತಿಗಳು ಕನ್ನಡ ಸಾಹಿತ್ಯದ ಬಗೆಗೂ ಬರಬೇಕಾಗಿದೆ.

ಪ್ರೊ|| ಎ. ಎನ್. ಮೂರ್ತಿರಾಯರು ಜಗದ್ವಿಖ್ಯಾತ ನಾಟಕಕಾರನಾದ 'ಷೇಕ್ಸಪಿಯರ್' ಬಗೆಗೆ ಒಂದು ಹಿರಿಯ ಹೊತ್ತಿಗೆಯನ್ನು ಯೋಜಿಸಿಕೊಂಡು ಅದರ ಪ್ರಥಮ ಭಾಗವನ್ನು ಈಗ ಒದಗಿಸಿದ್ದಾರೆ. ಷೇಕ್ಸಪಿಯರ್ ಕವಿಯ ನಾಟಕಗಳ ಪರಿಚಯ, ವಿಮರ್ಶೆ, ಸಮಸ್ಯೆಗಳನ್ನು ಪಕ್ವಪಾಂಡಿತ್ಯದಿಂದ ನಿರೂಪಿಸಿದ ಈ ಕೃತಿಯು ಬೆಲೆಯುಳ್ಳ ಕೃತಿಯಾಗಿದೆ.

ಬಂಕಿಮಚಂದ್ರ, ಷೇಕ್ಸ್‌ಪಿಯರ್‌ರನ್ನು ಕುರಿತ ಈ ಎರಡು ಕೃತಿಗಳಲ್ಲಿ ಕವಿಹೃದಯವನ್ನು ವಿಮರ್ಶಕನು ಸಹೃದಯತೆಯಿಂದ ಅರಿತುಕೊಂಡು ಓದುಗರಿಗೆ ಸಮುಚಿತವಾಗಿ ತಿಳಿಸಿಕೊಡಬಲ್ಲ ವಿಮರ್ಶೆ ಕಂಡುಬರುತ್ತಿದೆ. ಇವೆರಡೂ ಗ್ರಂಥಗಳು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯಲ್ಲಿ ಪ್ರಕಟವಾಗಿದ್ದು ಪೀಠಿಕೆಯಲ್ಲಿ ಪ್ರಧಾನ ಸಂಪಾದಕ ಡಾ. ಕೆ. ವಿ. ಪುಟ್ಟಪ್ಪನವರ ಮಹತ್ವದ ಮಾತುಗಳಿಂದ ಕೂಡಿವೆ. ಅತಿಯಾದ ಹೊಗಳಿಕೆ ಇಲ್ಲವೆ ಅವಜ್ಞೆಗಳಿಗೆ ಒಳಗಾಗದ ಈ ಬಗೆಯ ಸಮಂಜಸ ವಿಮರ್ಶೆಯು ಕನ್ನಡ ಕೃತಿಗಳ ಬಗೆಗೂ ಬರಲೆಂದು ಹಾರೈಸಬೇಕಾಗಿದೆ.

ವಿಮರ್ಶಾ ಸೂತ್ರಗಳನ್ನು ಕುರಿತ ಮೂರು ಕೃತಿಗಳ ಉಲ್ಲೇಖವನ್ನು ಇಲ್ಲಿ ಮಾಡಬೇಕಾಗಿದೆ. ಆ ಕೃತಿಗಳೆಂದರೆ, ೧. ಅರಿಸ್ಟಾಟಲನ ಕಾವ್ಯ ಮೀಮಾಂಸೆ – ಎನ್. ಬಾಲಸುಬ್ರಹ್ಮಣ್ಯ. ೨. ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ – ವಿ. ಸೀತಾರಾಮಯ್ಯ. ೩. ವಿಮರ್ಶೆಯ ಪೂರ್ವ ಪಶ್ಚಿಮ – ಜಿ. ಎಸ್. ಶಿವರುದ್ರಪ್ಪ.

ಅರಿಸ್ಟಾಟಲನ ಕಾವ್ಯ ಮೀಮಾಂಸೆಯು ಪಶ್ಚಿಮದ ದೇಶಗಳಲ್ಲಿಯ ಸಾಹಿತ್ಯ ವಿಮರ್ಶೆಯ ತಳಹದಿಯಾಗಿದೆ. ಅದು ಬಹುಕಾಲದ ಹಿಂದೆಯೇ ರಚಿತವಾಗಿದ್ದು ಅದನ್ನು ಕುರಿತು ವಾದ – ವಿವಾದ ಸಾಕಷ್ಟು ನಡೆದಿದೆ. ಅದು ಮೂಲಭೂತ ವಿಮರ್ಶಾ ತತ್ವಗಳನ್ನು, ಅವುಗಳನ್ನು ಕುರಿತ ವ್ಯಾಖ್ಯಾನವನ್ನು ಸುಗಮವಾಗುವಂತೆ ನಿರೂಪಿಸಿ ಕನ್ನಡಕ್ಕೆ ಆ ಸಂಪತ್ತನ್ನು ಒದಗಿಸಿದ ಶ್ರೇಯಸ್ಸು ಶ್ರೀ ಬಾಲಸುಬ್ರಹ್ಮಣ್ಯಂ ಅವರದಾಗಿದೆ. ಸೂತ್ರಪ್ರಾಯವೂ ಕ್ಲಿಷ್ಟವೂ ಆದ ಮೂಲದ ಮಾತುಗಳನ್ನು ಕನ್ನಡಕ್ಕೆ ತರುವುದು ಸುಲಭವಲ್ಲ. ಮೂಲಕೃತಿಯನ್ನು, ಅದರಲ್ಲಿ ಅಡಕವಾಗಿರುವ ಸಮಸ್ಯೆಗಳನ್ನು ಕುರಿತು ವಿಪುಲವಾಗಿ ಬಂದಿರುವ ಸಾಹಿತ್ಯವನ್ನು ವ್ಯಾಸಂಗ ಮಾಡಿ ಅಲ್ಲಿಯ ವಿಚಾರ ಪ್ರಣಾಲಿಯು ನಿರ್ದುಷ್ಟವಾದ ರೀತಿಯಲ್ಲಿ ಕನ್ನಡಕ್ಕೆ ತರುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ಇದು ಸಾಹಿತ್ಯದ ಅಭ್ಯಾಸಿಗಳಿಗೆ ತುಂಬ ಪ್ರಯೋಜನಕಾರಿಯಾಗುವಲ್ಲಿ ಸಂದೇಹವಿಲ್ಲ.

ಪ್ರೊ|| ವಿ. ಸೀತಾರಾಮಯ್ಯನವರು ಸ್ವತಃ ಉತ್ತಮ ಶ್ರೇಣಿಯ ವಿಮರ್ಶಕರಾಗಿದ್ದು ಅವರ ವಿಪುಲ ವ್ಯಾಸಂಗದ ಫಲವನ್ನು ಕೆಲಮಟ್ಟಿಗೆ 'ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ' ಎಂಬ ಚಿಕ್ಕ ಕೃತಿಯಲ್ಲಿ ನಾವು ಕಾಣುತ್ತೇವೆ. ನಮ್ಮ ಪ್ರಾಚೀನ ಅಲಂಕಾರ ಶಾಸ್ತ್ರ ಪಶ್ಚಿಮದ ವಿಮರ್ಶಾತ್ಮಕ ಸಾಹಿತ್ಯವನ್ನು ಅರಗಿಸಿಕೊಂಡ ಇಲ್ಲಿಯ ನಿರೂಪಣೆಯು ಅರ್ಥವತ್ತಾಗಿದೆ. "... ರಚನಾತಂತ್ರ, ನಿಪುಣತೆ, ನುಣುಪಿಗೆ ಹೆಚ್ಚಿಗೆ ಬೆಲೆ ಕೊಡುವವರಿಗೆ ಕವಿತ್ವದ ಮೂಲಸತ್ವವಾದ ಅನುಭವ, ದರ್ಶನ, ಕಲ್ಪನೆ, ಸ್ಫೂರ್ತಿಗಳ ಅಸಲು ಸಂಪತ್ತು ಕಡಮೆಯಾಗಿರುವುದುಂಟು. ಆದರೆ ಎಷ್ಟು ಶುದ್ಧವಾದ ಸಂಪನ್ನವಾದ ಜೀವನಾನುಭವ, ಎಷ್ಟು ವಿಶಾಲವಾದ ವಿವಿಧವಾದ ಆಳ, ಉನ್ನತಿ, ಸೂಕ್ಷ್ಮತೆ, ಧರ್ಮದೃಷ್ಟಿ ಉಳ್ಳದ್ದಾದರೆ ಕೃತಿ ಅಷ್ಟೂ ಅಷ್ಟು ಅರ್ಥವತ್ತಾಗಿರುತ್ತದೆ, ಹೆಚ್ಚು ಬೆಲೆಯ ಲೋಕೋಪಕಾರ ಮಾಡಬಲ್ಲದ್ದಾಗುತ್ತದೆ, ಹೆಚ್ಚು ಪರಿಪಾಕಶಕ್ತಿಯುಳ್ಳದ್ದಾಗುತ್ತದೆ." – ಎಂಬ ಮಾತನ್ನು ಇಂದು ಪುನರುಚ್ಚರಿಸುವ ಆವಶ್ಯಕತೆ ಹೆಚ್ಚಿದಂತಿದೆ.

'ವಿಮರ್ಶೆಯ ಪೂರ್ವ ಪಶ್ಚಿಮ' ಎಂಬ ಚಿಕ್ಕ ಪುಸ್ತಕವು ವಿಮರ್ಶೆಯ ಕೆಲವು ಮೂಲತತ್ವಗಳನ್ನು ಸುಂದರವಾಗಿ ನಿರೂಪಿಸುತ್ತಿದೆ. ಉತ್ಸಾಹಿಗಳೂ, ಅಭ್ಯಾಸಿಗಳೂ, ಸ್ವತಃ ಕವಿಗಳೂ ಆದ ಲೇಖಕರು ಇಂತಹ ಒಂದು ಕೃತಿಯ ಆವಶ್ಯಕತೆಯನ್ನು ಮನಗಂಡು ಈ ದಿಸೆಯಲ್ಲಿ ಕಾರ್ಯ ಕೈಕೊಂಡದ್ದು ಸಂತೋಷದ ಸಂಗತಿಯಾಗಿದೆ. ಈ ಪುಸ್ತಕದಲ್ಲಿ ಹಳೆಯ ಮತ್ತು ಅತ್ಯಾಧುನಿಕ ವಿಮರ್ಶಾ ಸೂತ್ರಗಳನ್ನು ಸಮನ್ವಯಿಸಿಕೊಳ್ಳುವ ದೃಷ್ಟಿಯು ಕಂಡುಬರುತ್ತಿದೆ. ನಮ್ಮ ವಿಮರ್ಶಾತ್ಮಕ

ಬರೆಹದಲ್ಲಿ 'ಏರುಪೇರು' ಗಳನ್ನು ಸರಿಯಾಗಿ ಅರಿತುಕೊಂಡಿರುವ ಲೇಖಕರು ಆ ಬಗೆಗೆ ಎಚ್ಚರಿಕೆಯನ್ನೂ ಮಾರ್ಗದರ್ಶನವನ್ನೂ ಒದಗಿಸಿದ್ದಾರೆ. ತೆರೆದ ಮನಸ್ಸು, ವಿಪುಲ ವ್ಯಾಸಂಗದಿಂದ ಈ ಕೃತಿಯು ಮೂಡಿಬಂದಿದೆ.

ಉಜ್ವಲ ಪ್ರತಿಭಾನ್ವಿತ ಕವಿ 'ಕುವೆಂಪು' ಅವರು ಸಾಹಿತ್ಯ ವಿಮರ್ಶೆ ಮತ್ತು ಕಾವ್ಯಮೀಮಾಂಸೆಯ ಬಗೆಗೆ ಬರೆದ ಕೆಲವು ಲೇಖನಗಳು 'ದ್ರೌಪದಿಯ ಸಿರಿಮುಡಿ' ಮತ್ತು 'ರಸೋವೈಸಃ' ಎಂಬ ಪುಸ್ತಕಗಳಲ್ಲಿ ಸಂಕಲನಗೊಂಡಿವೆ. ಲೋಕವ್ಯವಹಾರದ ಭಾವವು ಕಾವ್ಯದ 'ರಸ'ವಾಗಿ ಲೋಕೋತ್ತರ 'ಆನಂದ'ದತ್ತ ಸಾಗುವ ಬಗೆಯನ್ನು ಭೂಮಾನುಭೂತಿ ಭವ್ಯತೆಗಳ ವಿಚಾರ ಪ್ರಣಾಲಿಯನ್ನು ಇಲ್ಲಿಯ ಲೇಖನಗಳು ಉದಾತ್ತವಾಗಿ, ಸಾಧಾರವಾಗಿ, ಖಚಿತವಾಗಿ ವಿವೇಚಿಸುತ್ತಿವೆ. ದಿವ್ಯ ಜೀವಿಗಳ ಹಿನ್ನೆಲೆಯಲ್ಲಿ ರೂಪುಗೊಂಡ ನಮ್ಮ ಪ್ರಾಚೀನ ಕಾವ್ಯಮೀಮಾಂಸೆಯ ರಹಸ್ಯವನ್ನು ಆಧುನಿಕ ಮನೋವೈಜ್ಞಾನಿಕರ, ಅನುಭಾವಿಗಳ, ಕವಿಗಳ, ವಿಮರ್ಶಕರ ಅಭಿಪ್ರಾಯಗಳೊಂದಿಗೆ ಸಮನ್ವಯಿಸಿ ಇಲ್ಲವೆ ತುಲನೆಮಾಡಿ, ಪಾಶ್ಚಾತ್ಯ ಕವಿಗಳ ಕನ್ನಡದ ಮಹಾ ಕೃತಿಗಳ ನಿದರ್ಶನಗಳೊಂದಿಗೆ ವಿವರಿಸಿ ವಿಷಯವನ್ನು ಸ್ಪಷ್ಟಗೊಳಿಸುವ ಇಲ್ಲಿಯ ನಿರೂಪಣೆಯು, ಉಚ್ಚಶ್ರೇಣಿಯದಾಗಿದೆ. ಕಾವ್ಯಮೀಮಾಂಸೆಯನ್ನು ಕುರಿತು ನಡೆಯಿಸಿದ ಆಳವಾದ ಚಿಂತನೆ, ಪ್ರೌಢ ವಿದ್ಯಾರ್ಥಿಗಳಿಗೆ ಪಾಠ ಹೇಳಿದ ಅನುಭವ, ವಿಶಾಲವೂ, ಸೂಕ್ಷ್ಮವೂ ಆದ ವ್ಯಾಸಂಗದ ಆಧಾರ – ಇವುಗಳಿಂದ ಮೂಡಿಬಂದಿರುವ ಈ ಲೇಖನಗಳು ಮೌಲಿಕವಾಗಿವೆ. ಇಲ್ಲಿಯ ಪ್ರತಿಭಾಪೂರ್ಣ ವಿವೇಚನೆಯು ಓದುಗರಿಗೆ ಹೊಸ ದೃಷ್ಟಿಯನ್ನು ಒದಗಿಸುವಂತಿದೆ. ಈ ಲೇಖನಗಳು ಶೈಲಿಯ ಗಾಂಭೀರ್ಯ, ಸಮರ್ಪಕವಾದ ಪ್ರಯೋಗ, ಶಕ್ತಿಯುತವಾದ ಅಭಿವ್ಯಕ್ತಿಗಳಿಂದ ಕೂಡಿವೆ. ದಿವ್ಯಜೀವನ ಪಥದಂತೆಯೆ ಕಾವ್ಯಸೃಷ್ಟಿ ಸಾಹಿತ್ಯವಿಮರ್ಶೆಗಳಲ್ಲಿಯೂ ಪೂರ್ಣದೃಷ್ಟಿಯು ಆವಶ್ಯಕವೆಂಬ ಪ್ರತಿಪಾದನೆಯು ಇಲ್ಲಿ ಬಂದಿದೆ.

ಅಂತು ನಮ್ಮ ವಿಮರ್ಶಾ ಸಾಹಿತ್ಯದ ಅರೆ – ಕೊರೆಗಳ ಬಗೆಗೆ ನಮಗೆ ಅತೃಪ್ತಿಯಿರುವುದಾದರೂ ಕೆಲವೊಂದು ಪ್ರತಿಭಾಪೂರ್ಣ ಲೇಖನಗಳು ಬಂದಿವೆಯೆಂಬ ಸಮಾಧಾನವನ್ನು ತಳೆಯಬೇಕಾಗಿದೆ.



ಡಾ॥ ಎ. ಆರ್. ಕೃಷ್ಣಶಾಸ್ತ್ರಿಗಳವರು

# ಸ್ವಾತಂತ್ರ್ಯಾನಂತರದ ಕನ್ನಡ ಸಂಶೋಧನ ಸಾಹಿತ್ಯ

ಲೇಖಕರು : ಶ್ರೀ ಎನ್. ಬಸವಾರಾಧ್ಯ

ಭರತಖಂಡವು ಸ್ವಾತಂತ್ರ್ಯವನ್ನು ಪಡೆದ ಮೇಲೆ ದೇಶದ ಪ್ರಜಾಸಮೂಹವು ಅಭೂತಪೂರ್ವವಾದ ಆನಂದವನ್ನು ಹೊಂದಿತು. ಸ್ವಾತಂತ್ರ್ಯದ ಹೊನಲಿನಲ್ಲಿ ದೇಶದಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳು ರೂಪುಗೊಂಡವು. ಜನತೆಯಲ್ಲಿ ಹಿಂದೆಂದೂ ಕಾಣದ ಉತ್ಸಾಹ ಸಂತೋಷಗಳು ಕಳೆಗೊಂಡವು. ಸಾಹಿತ್ಯ, ಸಂಗೀತ, ಲಲಿತಕಲೆಗಳಿಗೆ ಪ್ರಜಾಸರ್ಕಾರ ಮತ್ತು ಜನತೆಯಿಂದ ಸಾಕಷ್ಟು ಮನ್ನಣೆಯೂ ಪ್ರಶಸ್ತಿಗಳೂ ದೊರೆತುವು. ಪ್ರಕೃತ ಕನ್ನಡ ಸಾಹಿತ್ಯದಲ್ಲಿ ಸ್ವಾತಂತ್ರ್ಯಾನಂತರ ಹೊರಬಿದ್ದ ಸಂಶೋಧನ ಸಾಹಿತ್ಯವನ್ನು ಕುರಿತು ಯಥಾಮತಿಯಾಗಿ ಇಲ್ಲಿ ವಿವೇಚಿಸಲಾಗಿದೆ.

ಕರ್ಣಾಟಕದಲ್ಲಿ ಸಂಶೋಧನ ಸಾಹಿತ್ಯಕ್ಕೆ ಮೀಸಲಾಗಿರುವವುಗಳಲ್ಲಿ ಮೈಸೂರಿನ ಪ್ರಾಚ್ಯಕೋಶಾಗಾರ, ಪ್ರಸಾರಾಂಗಶಾಖೆ, ಧಾರವಾಡದ ಪ್ರಸಾರಾಂಗಶಾಖೆ, ಇತ್ತೀಚೆಗೆ ಸ್ಥಾಪಿತವಾದ ಸಾಹಿತ್ಯ ಮತ್ತು ಸಂಸ್ಕೃತಿ ವಿದ್ಯಾಭಿವೃದ್ಧಿ ಇಲಾಖೆ – ಇವು ಮುಖ್ಯವಾದುವು. ಮೈಸೂರಿನಲ್ಲಿಯ ಪ್ರಾಚ್ಯಕೋಶಾಗಾರವು ಮೊದಲಿನಿಂದಲೂ ಸಂಶೋಧನ ಸಾಹಿತ್ಯ ಪ್ರಕಟನೆಯಲ್ಲಿಯೇ ತೊಡಗಿದೆ. ಗ್ರಂಥಸಂಸ್ಕರಣ, ಸಂಪಾದನ, ಸಂಶೋಧನೆಗಳೇ ಈ ಸಂಸ್ಥೆಯಿಂದ ಆಗುತ್ತಿರುವ ಕೆಲಸಗಳು. ಸ್ವಾತಂತ್ರ್ಯಾನಂತರ ಈ ಸಂಸ್ಥೆಯಿಂದ ಸಂಶೋಧಿತವಾದ ಕನ್ನಡ ಗ್ರಂಥಗಳಲ್ಲಿ (೧) ಸಿಂಗಿರಾಜ ಪುರಾಣ, (೨) ತೊರವೆ ರಾಮಾಯಣ, (೩) ಶಿವತತ್ವಚಿಂತಾಮಣಿ, (೪) ಕುಮಾರರಾಮ ಸಾಂಗತ್ಯ, (೫) ಕುಮಾರವ್ಯಾಸ ಭಾರತ, (೬) ಜಾತಕ ತಿಲಕ, (೭) ಕನ್ನಡ ಹಸ್ತಪ್ರತಿಗಳ ವಿವರಣಾತ್ಮಕ ಗ್ರಂಥಸೂಚಿ – ಇವೇ ಮುಂತಾದುವು ಮುಖ್ಯವಾದುವು. ಇವುಗಳಲ್ಲಿ ಕೆಲವು ಮೊದಲ ಬಾರಿಗೆ ಸಂಶೋಧಿತವಾಗಿ ಪ್ರಕಟವಾಗಿವೆ.

೨. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ಶಾಖೆಯು ಸ್ವಾತಂತ್ರ್ಯಾನಂತರ ಹಲವಾರು ಉತ್ಕೃಷ್ಟ ಗ್ರಂಥಗಳನ್ನು ಹೆಸರಾಂತ ಲೇಖಕರಿಂದಲೂ ಸಂಶೋಧಕರಿಂದಲೂ ಬರೆಸಿ ಪ್ರಕಟಿಸಿದೆ. ಅಲ್ಲದೆ, ಪ್ರಚಾರೋಪನ್ಯಾಸ ಮಾಲೆಯಿಂದ ಹಲವಾರು ಕಿರುಹೊತ್ತಗೆಗಳನ್ನೂ ವಿವಿಧ ವಿಷಯಗಳ ಮೇಲೆ ಬರೆಸಿದೆ.

೩. ಧಾರವಾಡದ ಪ್ರಸಾರಾಂಗ ಶಾಖೆಯು ಸಾಹಿತ್ಯ, ವಿಜ್ಞಾನ, ರಾಜಕೀಯ, ಸಾಮಾಜಿಕ, ಆರ್ಥಿಕ ವಿಷಯಗಳ ಮೇಲೆ ಅನೇಕ ಕಿರುಹೊತ್ತಗೆಗಳನ್ನು ಬರೆಸಿ ಪ್ರಕಟಿಸಿದೆ. ಅದೇ ಧಾರವಾಡದ ಪ್ರಾಚ್ಯ ವಿದ್ಯಾಸಂಸ್ಥೆಯಿಂದ ಮೊದಲ ಬಾರಿಗೆ ಕೆಲವು ಗ್ರಂಥಗಳು ಸಂಶೋಧಿತವಾಗಿ ಪ್ರಕಟವಾಗಿವೆ. ಅವುಗಳಲ್ಲಿ ಬ್ರಹ್ಮಶಿವನ "ಸಮಯ ಪರೀಕ್ಷೆ" ಹೆಸರಿಸುವಂತಹುದು. ಇದೇ ಅಲ್ಲದೆ, ಕರ್ನಾಟಕ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಕೆಲವು ಗ್ರಂಥಗಳು ಪುನಃ ಸಂಸ್ಕರಣಗೊಂಡು ಹೊರಬಿದ್ದಿವೆ. ಅವುಗಳಲ್ಲಿ "ಸೋಮನಾಥ ಚಾರಿತ್ರ," "ರಾಜಶೇಖರ ವಿಲಾಸ" ಬಹು ಮುಖ್ಯವಾದುವು.

ಮೈಸೂರು ಸರ್ಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಶಾಖೆಯು ಕೆಲವಾರು ಗ್ರಂಥಗಳ ಜನಪ್ರಿಯ ಆವೃತ್ತಿಗಳನ್ನು ಹೊರತಂದಿದೆ. ಅವುಗಳಲ್ಲಿ ಜೈಮಿನಿ ಭಾರತ, ಹರಿಶ್ಚಂದ್ರ ಕಾವ್ಯ, ಸರ್ವಜ್ಞ ವಚನಗಳು ಮತ್ತು ಕುಮಾರವ್ಯಾಸ ಭಾರತ ಮೊದಲಾದುವು ಗಮನಾರ್ಹವಾದುವು. ಇವೇ ಅಲ್ಲದೆ, ರಾಮಾಯಣ, ಉಪನಿಷತ್ತು, ವೇದಾಂತ ಮುಂತಾದ ವಿಷಯಗಳ ಮೇಲೂ ಗ್ರಂಥಗಳನ್ನು ಬರೆಸಿ ಪ್ರಕಟಿಸಿದೆ.

ಸರ್ಕಾರದಿಂದ ಪೋಷಿತವಾದ ಈ ಮೇಲಿನ ಸಂಸ್ಥೆಗಳೇ ಅಲ್ಲದೆ, ಸ್ವತಂತ್ರ ಸಂಸ್ಥೆಗಳೂ, ವ್ಯಕ್ತಿಗಳೂ ಅನೇಕ ಗ್ರಂಥಗಳನ್ನು ಹೊರತಂದಿದ್ದಾರೆ. ಅವುಗಳಲ್ಲಿ ಧಾರವಾಡದ ಮುರುಘಾಮಠದ ವತಿಯಿಂದ ಬಹುಸಂಖ್ಯಾತ ಗ್ರಂಥಗಳು ಹೊರಬಿದ್ದಿವೆ. ಅವುಗಳಲ್ಲಿ ರಾಘವಾಂಕ ಚಾರಿತ್ರ, ಗುರುರಾಜ ಚಾರಿತ್ರ ಇವುಗಳನ್ನು ಮೊದಲ ಬಾರಿಗೆ ಹೊರತಂದ ಕೀರ್ತಿ ಶ್ರೀಮಠಕ್ಕೆ ಸಲ್ಲಬೇಕಾಗಿದೆ. ಅಲ್ಲದೆ, ಪದ್ಮರಾಜ ಪುರಾಣ, ಬಸವ ಪುರಾಣಗಳ ಪುನಸ್ಸಂಸ್ಕರಣಗಳನ್ನೂ ಮಾಡಿದೆ. ಇವಲ್ಲದೆ ಮತ್ತೂ ಕೆಲವು ಗ್ರಂಥಗಳನ್ನೂ ಪ್ರಕಟಿಸಿದೆ.

ಕನ್ನಡ ಸಾಹಿತ್ಯ ಪರಿಷತ್ತು ಅನೇಕ ಪ್ರಾಚೀನ ಗ್ರಂಥಗಳನ್ನೂ, ಅರ್ವಾಚೀನ ಕೃತಿಗಳನ್ನೂ ಹೊರತಂದಿದೆ. ಚೇರಮ ಕಾವ್ಯ, ಉದ್ಭಟದೇವ ಚರಿತೆ – ಈ ಅಪ್ರಕಟಿತ ಕಾವ್ಯಗಳನ್ನು ಪ್ರಕಟಿಸಿದ ಕೀರ್ತಿ ಈ ಸಂಸ್ಥೆಗೇ ಸಲ್ಲಬೇಕಾಗಿದೆ. ಅಲ್ಲದೆ, ಕರ್ನಾಟಕ ಕವಿಚರಿತೆ, ಸೋಮೇಶ್ವರ ಶತಕ, ತ್ರಿಪುರದಹನ ಸಾಂಗತ್ಯ, ಉದ್ಭಾಳೀಕನ ಕಥೆ ಮುಂತಾದ ಗ್ರಂಥಗಳ ಪುನರ್ಮುದ್ರಣಗಳನ್ನೂ ಮಾಡಿದೆ. ಇದರ ಜೊತೆಗೆ ಹರಿದಾಸ ಸಾಹಿತ್ಯ, ಗಮಕ ಕಾವ್ಯಮಂಜರಿಯೇ ಮೊದಲಾದ ಶಾಸ್ತ್ರೀಯ ಗ್ರಂಥಗಳನ್ನೂ ಪ್ರಕಟಿಸಿದೆ.

ಮೈಸೂರಿನ ಜೈನಪ್ರಚಾರ ಸಂಘದಿಂದ ಅಜಿತಪುರಾಣ, ಯಶೋಧರ ಚರಿತೆ ಮೊದಲಾದ ಅನೇಕ ಕೃತಿಗಳು ಹೊರಬಂದಿವೆ. ಇಲ್ಲಿಯ ಜನಪದ ಸಾಹಿತ್ಯ ಅಕಾಡೆಮಿಯವರು ಜನಪದ ಸಾಹಿತ್ಯವನ್ನು ವಿಶೇಷವಾಗಿ ಹೊರತಂದಿದ್ದಾರೆ. ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯವರು ಜನಪ್ರಿಯ ವಾಲ್ಮೀಕಿ ರಾಮಾಯಣ, ಜೈಮಿನಿ ಭಾರತ, ಹರಿಶ್ಚಂದ್ರ ಸಾಂಗತ್ಯ, ಬಸವೇಶ್ವರ ವಚನ ಸಂಗ್ರಹ, ಸರ್ವಜ್ಞ ವಚನ ಸಂಗ್ರಹವೇ ಮೊದಲಾದ ಅಸಂಖ್ಯಾತ ಕೃತಿಗಳನ್ನು ಪ್ರಕಟಿಸಿದ್ದಾರೆ.

ಇವರೇ ಅಲ್ಲದೆ, ಸ್ವತಂತ್ರ ಪುಸ್ತಕ ಪ್ರಕಟನಕಾರರು ಅನೇಕ ಪುರಾತನ, ನೂತನ ಗ್ರಂಥಗಳನ್ನೂ ಅಚ್ಚು ಪಡಿಸಿದ್ದಾರೆ. ಅವುಗಳಲ್ಲಿ ಶಾರದಾ ಮಂದಿರ, ಉಷಾ ಪ್ರಕಟನಾಲಯ, ಕಾವ್ಯಾಲಯ, ಮನೋಹರ ಗ್ರಂಥ ಭಂಡಾರ, ಲಲಿತ ಸಾಹಿತ್ಯಮಾಲೆ, ಮಿಂಚಿನ ಬಳ್ಳಿ, ಪ್ರಾಚ್ಯಕಾವ್ಯ ಪ್ರಕಾಶಮಾಲೆ ಮುಂತಾದವರು ನೂರಾರು ಗ್ರಂಥಗಳನ್ನು ಪ್ರಕಟಿಸಿದ್ದಾರೆ.

ಮದರಾಸಿನ ಓರಿಯಂಟಲ್ ಲೈಬ್ರರಿಯವರೂ ಅನೇಕ ಅಪ್ರಕಟಿತ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ವೆಂಕಾಮಾತ್ಯನ ರಾಮಾಯಣ, ವಿಷ್ಣುಪುರಾಣ, ಮಂಗರಾಜ ನಿಘಂಟು, ತ್ರಿಭುವನ ತಿಲಕ, ವೈದ್ಯಸಾರ ಮತ್ತು ಪಾರ್ಶ್ವನಾಥ ಪುರಾಣ ಹೆಸರಿಸತಕ್ಕವು.

ಹಲವಾರು ವಿದ್ವಾಂಸರು ಸ್ವತಂತ್ರವಾಗಿಯೇ ತಮ್ಮ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಈ ಮೇಲಿನ ಪಟ್ಟಿಯಲ್ಲಿ ಎಲ್ಲ ಸಂಘ ಸಂಸ್ಥೆಗಳೂ, ಪ್ರಕಾಶಕರೂ, ಸ್ವತಂತ್ರ ವ್ಯಕ್ತಿಗಳೂ ಸೇರಿಲ್ಲ. ಕೆಲವನ್ನು ಮಾತ್ರ ಇಲ್ಲಿ ಉದಹರಿಸಲಾಗಿದೆ.

ಸ್ವಾತಂತ್ರ್ಯೋತ್ತರದಲ್ಲಿ ಕನ್ನಡ ಸಾಹಿತ್ಯವು ಅನೇಕ ಪ್ರಾಕಾರಗಳಲ್ಲಿ ಮುನ್ನಡೆದಿದೆ. ಕಾದಂಬರಿ, ಸಣ್ಣಕಥೆ, ಕವಿತೆ ಮುಂತಾದ ಕ್ಷೇತ್ರಗಳಲ್ಲಿ ಒಂದು ಹೊಸ ಮೈಲಿಗಲ್ಲೇ ಸ್ಥಾಪಿತವಾಗಿದೆ. ಸ್ವಾತಂತ್ರ್ಯ ಬಂದಮೇಲೆ ಕನ್ನಡ ಜನ ನವಚೇತನವನ್ನೂ ಸ್ಫೂರ್ತಿಯನ್ನೂ ಪಡೆದು, ಕನ್ನಡ ಸಾಹಿತ್ಯದ ಸರ್ವಾಂಗೀಣ ಪ್ರಗತಿಗೆ ಕಾರಣರಾಗಿದ್ದಾರೆ. ಇದು ಒಂದು ಶುಭ ಸೂಚನೆ ಎಂಬುದರಲ್ಲಿ ಸಂದೇಹವಿಲ್ಲ.

## 'ಕನ್ನಡ ನುಡಿ'ಯ ಮಾಜಿ ಸಂಪಾದಕರು



ದಿ|| ಶ್ರೀ ಬಿ. ವೆಂಕೋಬರಾಯರು



ಶ್ರೀ ವಿ. ಸೀತಾರಾಮಯ್ಯನವರು

# ಕನ್ನಡ ಸಾಹಿತ್ಯದಲ್ಲಿ 'ಜೀವನಚರಿತ್ರೆ'ಯ ಬೆಳವಣಿಗೆ

ಲೇಖಕರು : ಪಂಡಿತ ಕೆ. ಪಿ. ಶಿವಲಿಂಗಯ್ಯ

ಜೀವನ ಚರಿತ್ರೆ ಎನ್ನುವುದು ಯಾರಾದರೊಬ್ಬ ವ್ಯಕ್ತಿಯ ಜೀವನದ ಪ್ರತಿಕೃತಿ. ಯಾರು ತಮ್ಮ ಬದುಕಿನಿಂದ ಜನತೆಯ ಮೇಲೆ ಮತ್ತವರ ಜೀವನದ ಮೇಲೆ ಶಾಶ್ವತವಾದ, ಪರಿಣಾಮಕಾರಿಯಾದ ಪ್ರಭಾವ ಬೀರುತ್ತಾರೋ ಅಂತಹ ಉದಾತ್ತ ಜೀವಿಗಳನ್ನು ಅವರು ಕಣ್ಮರೆಯಾದ ಅನಂತರವೂ ಜನ ಸ್ಮರಿಸಿಕೊಳ್ಳುತ್ತಾರೆ. ಅಂತಹ ಮಹಾತ್ಮರ ಬಾಳ್ವೆಯೇ ಮುಂದಣ ಜನಾಂಗಕ್ಕೆ ಒಂದು ಬೆಳಕಾಗಿ, ಅವರ ಜೀವನದ ಸಂಗತಿಗಳೇ ಚೆನ್ನಾದ ಒಂದು ಕಥೆಯಾಗಿ ಗೋಚರ ವಾಗುತ್ತವೆ.

ಗಣನೀಯವಾದ ಜೀವನ ನಡೆಸಿ ಇನ್ನಿಲ್ಲವಾದ ವ್ಯಕ್ತಿಯನ್ನು ಕುರಿತು ಆತನನ್ನು ಮೆಚ್ಚಿಕೊಂಡ ಯಾರಾದರೂ ಆ ವ್ಯಕ್ತಿಯ ಜೀವನದಲ್ಲಿ ನಡೆದ ಘಟನೆಗಳನ್ನೆಲ್ಲ ಒಂದೆಡೆ ಸಂಕಲಿಸಿ ಬರೆದಿಡುತ್ತಿದ್ದ ಪದ್ಧತಿ ಬಹಳ ಕಾಲದಿಂದಲೂ ಬಂದಿದೆ. ಇತ್ತೀಚೆಗೆ ವ್ಯಕ್ತಿ ಜೀವಂತವಾಗಿರುವಾಗಲೇ ಅವರ ಸೇವೆ-ಮಾಹಾತ್ಮ್ಯಗಳನ್ನು ಗೌರವಿಸಿ, ಅವರ ಜೀವನ ವನ್ನು ಚಿತ್ರಿಸುವುದು ರೂಢಿಗೆ ಬಂದಿದೆ.

ಕನ್ನಡ ಸಾಹಿತ್ಯದಲ್ಲಿ ಕೂಡ ಒಂದು ಮುಖ್ಯ ಪ್ರಕಾರವೆನಿಸಿದ 'ಜೀವನಚರಿತ್ರೆ'ಯ ಬೆಳೆ ಹುಲುಸಾಗಿಯೇ ಇದೆ ಎಂಬ ಅಭಿಪ್ರಾಯ ಸಾಮಾನ್ಯವಾಗಿದ್ದರೂ, ಇತರ ಪ್ರಕಾರಗಳೊಂದಿಗೆ ತುಲನಾತ್ಮಕವಾಗಿ ಹೋಲಿಸಿ ವಿವೇಚಿಸಿ ದಾಗ ಇದರ ಕೊರತೆ ಎದ್ದುಕಾಣದಿರದು. ಆದರೆ ಆಂಗ್ಲ ಸಾಹಿತ್ಯದ ಪ್ರಭಾವವುಂಟಾದ ಮೇಲೆ ಈ ಕೊರತೆ ಕಡಿಮೆ ಯಾಗಿದೆಯೆನ್ನಬಹುದು.

ಜೀವನ ಚರಿತ್ರೆಯಲ್ಲಿ ಹೇಳುವ ವಿಷಯವೆಲ್ಲವೂ ವ್ಯಕ್ತಿಯ ಜೀವನದಲ್ಲಿ ನಡೆದ ಘಟನೆಗಳೇ ಆಗಿರಬೇಕು. ಆಗಲೇ ಅದು ನೈಜ ಪ್ರತಿಪಾದನೆಯೆನಿಸಲು ಸಾಧ್ಯ. ಇದು ಕಾದಂಬರಿಯಂತೆ ಓದಲು ಆಸಕ್ತಿಯನ್ನು ಕೆರಳಿಸುತ್ತದೆಯಾದರೂ ಕಾದಂಬರಿಯಲ್ಲಿರುವಂತೆ ಕಲ್ಪನಾರಥದ ಓಟಕ್ಕೆ ಇಲ್ಲಿ ಎಡೆಯಿಲ್ಲ. ಜೀವನಚರಿತ್ರೆಯು ತಕ್ಕುದೆನಿಸಬೇಕಾದರೆ ಚರಿತ್ರ ನಾಯಕನ ವ್ಯಕ್ತಿತ್ವದಂತೆಯೇ ಕೃತಿಕಾರನ ದೃಷ್ಟಿಕೋನ ಶಕ್ತಿಗಳ ಮೇಲೂ ಅವಲಂಬಿಸುತ್ತದೆ. ಚರಿತ್ರ ಲೇಖಕನಾದರೂ ವಿಷಯ ಸಂಗ್ರಹಣೆ, ನಿಷ್ಪಕ್ಷಪಾತವಾದ ವಿಮರ್ಶೆಗಳಿಂದ ತಾನು ಆರಿಸಿಕೊಂಡ ವ್ಯಕ್ತಿಯ ಶುದ್ಧ ಸ್ವರೂಪವನ್ನೇ ಓದುಗರಿಗೆ ಕೊಡುವ ಪ್ರಯತ್ನ ಮಾಡಬೇಕು. ನಾಯಕನ ಜೀವನ ಘಟನೆಗಳ ನಿಜವೃತ್ತವು ದೊರೆಯದಿದ್ದಾಗ ಬರೆಯುವವನ ಪ್ರತಿಭೆಗನುಗುಣವಾಗಿ ಚರಿತ್ರೆ ಚಿತ್ರಿತವಾಗಲವಕಾಶವುಂಟಾಗುತ್ತದೆ. ಈ ಕಾರಣದಿಂದ ಜೀವನ ಚರಿತ್ರೆಯಲ್ಲಿನ ಅಂಶ ಗಳೆಲ್ಲ ಪ್ರಾಮಾಣಿಕವಾಗಿರಲೇಬೇಕು. ಅದಕ್ಕೇ 'ಜೀವನ ಚರಿತ್ರೆ ಪ್ರತ್ಯಕ್ಷ ಕಾವ್ಯ' ಎಂದು ಬಲ್ಲವರು ಹೇಳುವುದು.

ಜೀವನ ಚರಿತ್ರೆಗೆ ತಕ್ಕ ನಾಯಕನನ್ನು ಆರಿಸುವುದೇ ಅತ್ಯಂತ ಮುಖ್ಯ ಕಾರ್ಯ. ಅಂತಹ ವ್ಯಕ್ತಿ ಲೋಕದ್ವಯ ಸಾಧನಾಚತುರನಾದ ಶರಣನಿದ್ದಿರಬಹುದು; ಸುಪ್ರಸಿದ್ಧ ಕವಿಯಾಗಿರಬಹುದು; ಉತ್ತಮ ರಾಜಕಾರಣಿ ಅಥವಾ ಅಧಿಕಾರಿ ಯಾಗಬಹುದು. ಯಾರೇ ಆದರೂ ಪ್ರಾಯಶಃ ಆ ವ್ಯಕ್ತಿಯ ನಿರಂತರ ಸಾಧನೆ ಲೋಕಹಿತದ ಸಲುವಾಗಿಯೇ ಸಂದಿರುತ್ತದೆ. ಈ ಲೋಕವನ್ನು (ದೈಹಿಕವಾಗಿ) ಬಿಟ್ಟಮೇಲೆಯೂ ಅಂತಹವರ ಬಾಳ್ವೆ, ಕೈದೀವಿಗೆಯೊಲು ನಮಗೆ ಮಾರ್ಗದರ್ಶನ ನೀಡಬಲ್ಲುದು. ಇಷ್ಟೇ ಅಲ್ಲ, ಒಂದು ನಾಡಿನ ಇತಿಹಾಸವನ್ನು ನಾವು ತಿಳಿಯಬಯಸಿದಾಗ, ಸಾಹಿತ್ಯ ವನ್ನು ಅಭ್ಯಾಸ ಮಾಡುವಾಗ, ಅಲ್ಲಿನ ಸಾಹಿತಿಗಳ, ಕವಿಗಳ, ಕಲಾವಿದರ, ರಾಜಕಾರಣಿಗಳ ಜೀವನ ಪರಿಚಯವಿರಲೇ ಬೇಕು. ನಾಡು, ನುಡಿ, ಸಾಹಿತ್ಯ, ಸಂಸ್ಕೃತಿ, ದೀನದಲಿತರು – ಸದಾ ಇವರ ಸೇವೆ ಮಾಡುವ ಪುಣ್ಯಾತ್ಮರ ಜೀವನ ಚರಿತ್ರೆಯನ್ನು ಬರೆದರೆ ಎಲ್ಲ ಕಾಲಕ್ಕೂ ಮಾರ್ಗದರ್ಶನವೀಯಬಲ್ಲ ಕಾವ್ಯವೆನಿಸುವುದರಲ್ಲಿ ಆಚ್ಚರಿಯೇನು ?

ಕನ್ನಡದಲ್ಲಿ ಜೀವನ ಚರಿತ್ರೆಗಳು ಗದ್ಯರೂಪದಲ್ಲಿ ಈ ಶತಮಾನಕ್ಕೆ ಹಿಂದೆ ರಚಿತವಾಗಿರಲಿಲ್ಲ. ಹಿಂದಣ ಕವಿಗಳು ತಾವು ಮೆಚ್ಚಿದ ಮಹಾನುಭಾವರ, ತಮಗೆ ಗುರುಪ್ರಾಯರಾದವರ ಜೀವನವನ್ನು ಕಾವ್ಯಮುಖದಲ್ಲಿಯೇ ಚಿತ್ರಿಸಿರುತ್ತಾರೆ.

ಹರಿಹರ ಕವಿಯ 'ಬಸವರಾಜದೇವರ ರಗಳೆ,' ರಾಘವಾಂಕ ಪಂಡಿತನ 'ಸಿದ್ಧರಾಮ ಚರಿತ್ರೆ,' 'ಹರಿಹರ ಮಹತ್ವ,' ಪದ್ಮಣಾಂಕನ 'ಪದ್ಮರಾಜ ಪುರಾಣ,' ಚಿಕ್ಕ ನಂಜೇಶನ 'ರಾಘವಾಂಕ ಚರಿತ್ರ,' ವಿರೂಪಾಕ್ಷ ಪಂಡಿತನ 'ಚೆನ್ನ ಬಸವ ಪುರಾಣ,' ವಿರಕ್ತ ತೋಂಟದಾರ್ಯನ 'ಸಿದ್ಧೇಶ್ವರ ಪುರಾಣ,' ಮತ್ತು 'ಪಾಲ್ಕುರಿಕೆ ಸೋಮೇಶ್ವರ ಪುರಾಣ,' ಶಾಂತೇಶನ ತೋಂಟದ ಸಿದ್ದೇಶ್ವರ ಪುರಾಣ,' ಪಂಡಿತ ಮಲ್ಲಿಕಾರ್ಜುನನ 'ಶಂಕರದಾಸಿಮಯ್ಯನ ಚರಿತ್ರೆ,' ಕೃಷ್ಣ ಶರ್ಮನ 'ಸರಜಾ ಹನುಮೇಂದ್ರ ಚರಿತೆ,' ದೊಡ್ಡ ತಿಮ್ಮದಾಸನ 'ರಾಮಾನುಜ ವಿಜಯ,' ಚೆಲುವನ 'ಮಡಿವಾಳಯ್ಯನ ಚರಿತೆ,' ಶ್ರೀನಿವಾಸಕವಿಯ 'ಕೃಷ್ಣನೃಪ ಜಯೋತ್ಕರ್ಷ,' ಮೂವನೂರು ಚೆನ್ನಬಸವನ 'ಶರಣಬಸವ ಚರಿತೆ,' ಅಳಿಯ ಲಿಂಗರಾಜನ 'ನರಪತಿಚರಿತ',* ಮೊದಲಾದುವು ಮೇಲೆ ಹೇಳಿದ ಕಾವ್ಯಮುಖ ಜೀವನ ಚರಿತ್ರೆಗಳಿಗೆ ಸಾಕ್ಷಿಯೆನಿಸುತ್ತವೆ.

ಶಾನಭೋಗ ವೆಂಕಟರಮಣಯ್ಯ (ಸು.೧೭೦೦) ಬರೆದ ಮೈಸೂರು ರಾಜರ ಚರಿತ್ರೆ, ದೇವಚಂದ್ರನ ರಾಜಾವಳೀ ಕಥೆ ಇವು ಒಂದೇ ಕೃತಿಯಲ್ಲಿ ಹಲವು ಮಂದಿ ಮಹಾವ್ಯಕ್ತಿಗಳ (ಸಂಕ್ಷಿಪ್ತ) ಜೀವನವನ್ನು ಚಿತ್ರಿಸುವಂಥವಾಗಿವೆ. ಈ ಪೈಕಿ ಮೊದಲನೆಯದಾದ ಶಾ|| ವೆಂಕಟರಮಣಯ್ಯನ ಕೃತಿ ಮೊತ್ತಮೊದಲಿನ (ಕನ್ನಡ) ಗದ್ಯ ಗ್ರಂಥವೆನ್ನುವುದು ಹೆಮ್ಮೆಯ ಸಂಗತಿಯೇ ಸೈ.†

ಪ್ರಕೃತ ಶತಮಾನದಲ್ಲಿ ಇತರ ಸಾಹಿತ್ಯ ಪ್ರಕಾರಗಳಂತೆಯೇ ಜೀವನ ಚರಿತ್ರೆಯ ಬೆಳವಣಿಗೆಯೂ ತಕ್ಕಮಟ್ಟಿಗೆ ನಡೆದಿದೆ. ಎಂ. ಎಸ್. ಪುಟ್ಟಣ್ಣನವರು ಬರೆದ 'ಕುಣಿಗಲು ರಾಮಾಶಾಸ್ತ್ರಿಗಳ ಚರಿತ್ರೆ', ಚ. ವಾಸುದೇವಯ್ಯನವರ 'ಆರ್ಯಕೀರ್ತಿ,' ಬಿ. ಹೆಚ್. ಮುನಿಸ್ವಾಮಿರಾಯರು ರಚಿಸಿದ 'ರಾಜಯೋಗಿ ಚಿಕ್ಕಲಿಂಗಣ್ಣ ಸ್ವಾಮಿಗಳ ಜೀವನ ಚರಿತ್ರೆ,' ಡಿ. ವಿ. ಗುಂಡಪ್ಪನವರು ಬರೆದ 'ದಿವಾನ್ ರಂಗಾಚಾರ್ಲು' ಮತ್ತು 'ಗೋಪಾಲಕೃಷ್ಣ ಗೋಖಲೆ,' ಎಂ. ಶಿಂಗ್ರಯ್ಯನವರ 'ಶ್ರೀ ಚಾಮರಾಜೇಂದ್ರ ಒಡೆಯರವರ ಚರಿತ್ರೆ,' ಕುವೆಂಪುರವರ 'ರಾಮಕೃಷ್ಣ ಪರಮಹಂಸ' ಮತ್ತು 'ಸ್ವಾಮಿ ವಿವೇಕಾನಂದ,' ಸಿ. ಕೆ. ವೆಂಕಟರಾಮಯ್ಯನವರ 'ಆಳಿದ ಮಹಾಸ್ವಾಮಿಯವರು,' ಚಿ. ಸದಾಶಿವಯ್ಯನವರ 'ಶ್ರೀ ಸ್ವಾಮಿ ರಾಮತೀರ್ಥ,' ವಿದ್ವಾನ್ ಹೆಚ್. ಬಿ. ಸುಂದರರಾಜ ಅಯ್ಯಂಗಾರ್‌ರವರ 'ಚಿಕ್ಕದೇವರಾಜ ಒಡೆಯರು,' ಶ್ರೀರಂಗರ 'ಕೆಮಾಲ್ ಪಾಷ,' ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರ 'ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರೀ,' ಶ್ರೀಮತಿ ರತ್ನಮ್ಮನವರ 'ಮೇಡೇಂ ಕ್ಯೂರಿ,' ಓ. ಎನ್. ಲಿಂಗಣ್ಣಯ್ಯನವರ 'ವಿದ್ಯಾರಣ್ಯರು,' ಜಿ. ಎಸ್. ಕೃಷ್ಣರಾವ್‌ರವರ 'ಶ್ರೀಗುರು ಸಾರ್ವಭೌಮ,' ವಿ. ಜಿ. ಕೃಷ್ಣಮೂರ್ತಿಯವರ 'ಚೈತನ್ಯದೇವ,' ಶ್ರೀ ಮ. ನಿ. ಪ್ರ. ಚೆನ್ನಬಸವ ಸ್ವಾಮಿಗಳವರು ಬರೆದಿರುವ 'ನವಿಲುಗುಂದ ಗವಿಮಠದ ಶ್ರೀ ಮ. ನಿ. ಪ್ರ. ಬಸವಲಿಂಗ ಮಹಾಸ್ವಾಮಿಗಳವರ ಜೀವನ ಚರಿತ್ರೆ,' ವಿ. ಎಸ್. ನಾರಾಯಣರಾಯರ 'ಮೋಕ್ಷಗುಂಡಂ ವಿಶ್ವೇಶ್ವರಯ್ಯ,' ಹಾ. ಮಾ. ನಾಯಕರ 'ರವೀಂದ್ರನಾಥ ಠಾಕೂರ್,' ಗೋವಿಂದಮೂರ್ತಿ ದೇಸಾಯಿಯವರ 'ಬಾಪೂಜಿಯ ಬದುಕು,' ಶ್ರೀ ಜ. ಚ. ನಿ. ಯವರ 'ಕಾರಣಿಕ ಕುಮಾರಯೋಗಿ,' ಪಿ.ಆರ್.ಪಿ. ಮತ್ತು ಎಲ್.ಎನ್.ಕೆ ಬರೆದಿರುವ 'ಲೋಕಮಾನ್ಯ ತಿಲಕರು,' ಶ್ರೀ ಕೆ. ಜೀವಣ್ಣರಾಯರು ಬರೆದಿರುವ 'ಮಹರ್ಷಿ ಅರವಿಂದ' ಎಂಬ ಅರವಿಂದ ಘೋಷರ ಜೀವನ ಚರಿತ್ರೆ – ಹೀಗೆ ಇಂತಹ ಅನೇಕ ಕೃತಿಗಳು ಈ ದಿಶೆಯಲ್ಲಿ ತಕ್ಕಮಟ್ಟಿನ ಪ್ರಗತಿ ತೋರಿಸುವ ಸಾಕ್ಷ್ಯಸಾಹಿತ್ಯವೆನಿಸಿವೆ. §

ಅಲ್ಲದೆ ಈ ಪ್ರಕಾರದ ಕೃತಿರಚನೆಯಲ್ಲಿ ಒಂದಕ್ಕೊಂದಕ್ಕೆ ವ್ಯತ್ಯಾಸವಿದ್ದರೆ ಆಶ್ಚರ್ಯವೇನಲ್ಲ. ‡

ಸುಬೋಧ ರಾಮರಾಯರಂತೂ ಚಿಕ್ಕ ಚಿಕ್ಕ ಹೊತ್ತಗೆಗಳ ರೂಪದಲ್ಲಿ ಅನೇಕ ಮಹಾನುಭಾವರ (ಪುರಾಣ ಪುರುಷರೂ ಸೇರಿ) ಹಾಗು ಮಹಿಳಾಮಣಿಗಳ ಜೀವನ ಚರಿತ್ರೆಗಳನ್ನು ಪ್ರಕಟಿಸಿ ಕನ್ನಡ ಸಾಹಿತ್ಯಕ್ಕೆ ಕಾಣಿಕೆಯಾಗಿತ್ತಿರುವುದು ನಾವೆಲ್ಲ ಕೃತಜ್ಞತೆಯಿಂದ ಸ್ಮರಿಸಬೇಕಾದ ವಿಚಾರವಾಗಿದೆ.

---

* ಇದು ವಿಶೇಷವಾಗಿ ಅಲಂಕಾರಗಳಿಂದ ಕೂಡಿದ್ದರೂ, ಇದರಲ್ಲಿನ ಉದಾಹರಣ ಪದ್ಯಗಳೆಲ್ಲಾ (ಅಪ್ರತಿಮ ವೀರಚರಿತೆಯಂತೆ) ಪ್ರಭುವಿನ ಉತ್ಕರ್ಷವನ್ನು ಚಿತ್ರಿಸತಕ್ಕವು.

† ಕ|| ಕವಿಚರಿತೆ III ಪುಟ ೧೮೪–೧೮೫.

§ ಕೃತಿಗಳ ಪಟ್ಟಿ ಅನಿವಾರ್ಯವಾಗಿ ಅಪೂರ್ಣವಿರುವುದರ ಅರಿವು ಲೇಖಕನಿಗಿದೆ.

‡ There is no formula for the biographer . . . (Page 593-8 Encyclopedia)

ಎಸ್.ಆರ್. ಕೆರೂರ್‌ರವರು ರಚಿಸಿರುವ 'ಶ್ರೀಕೃಷ್ಣದೇವರಾಯ' ಎಂಬ ಪುಸ್ತಕವು ಚಾರಿತ್ರಿಕ ಘಟನೆಗಳನ್ನೊಳಗೊಂಡ ಕೃತಿ. ಎಂ. ಆರ್. ಶ್ರೀ. ಅವರ 'ಭಕ್ತಿ ಭಂಡಾರಿ ಬಸವಣ್ಣ' ಎಂಬುದು ಪರಿಶೋಧನಾತ್ಮಕವಾದ ಜೀವನ ಚರಿತ್ರೆಯೆನ್ನಲಡ್ಡಿಯಿಲ್ಲ.

ಕನ್ನಡ ಜೀವನಚರಿತ್ರೆಯ ಪ್ರಕಾರದಲ್ಲಿ ಆಗಿರುವ ಅನುವಾದ ಕಾರ್ಯ ಚಿಕ್ಕದೆನಿಸಿದರೂ ಚೊಕ್ಕವಾಗಿಯೇ ಇದೆ. ನಾ. ಕಸ್ತೂರಿಯವರು ಅನುವಾದ ಮಾಡಿರುವ 'ದಿಲ್ಲೀಶ್ವರನ ದಿನಚರಿ' ಎಂಬ ಬಾಬರನ ಜೀವನಚಿತ್ರ, ಕೂಡಲಿ ಚಿದಂಬರಂರವರು ಅನುವಾದಿಸಿರುವ ಸರ್. ಆರ್. ಪಿ. ಮಸಾನಿಯವರ 'ದಾದಾಭಾಯಿ ನವರೋಜಿ' – ಇವನ್ನು ಹೆಸರಿಸಬಹುದು.

ಒಂದೊಂದು ಸಲ ವ್ಯಕ್ತಿ ಚಿತ್ರವನ್ನು ಪೂರ್ಣ ಮಾಡಲು ಸಾಧ್ಯವಿಲ್ಲವಾದರೆ ಒಂದೊಂದು ಸಂದರ್ಭ ಅಥವಾ ಸನ್ನಿವೇಶವನ್ನೇ ಚಿತ್ರಿಸಿ ಜೀವನದ ಒಂದು ಭಾಗವಾಗಿ ಓದುಗರ ಕೈಲಿಡಬಹುದು. ಇದಂತೂ ನಾಜೂಕಿನಿಂದ ಮಾಡುವ ಕುಸುರಿನ ಕೆಲಸವೇ ಸರಿ. ಸಿದ್ದವನಹಳ್ಳಿ ಕೃಷ್ಣಶರ್ಮರ 'ವಾರ್ಧಾಯಾತ್ರೆ,' 'ಪರ್ಣಕುಟಿ' – ಇವು ಈ ಬಗೆಯವು. ನವರತ್ನ ರಾಮರಾಯರ 'ಕೆಲವು ನೆನಪುಗಳು' ಎಂಬುದು ಮೇಲ್ಮಟ್ಟದ ಜೀವಿತದ ಚಿತ್ರಣವಾಗಿದ್ದು ಜೊತೆಗೇ ರಾಜಕೀಯ ಹಾಗೂ ಸಾಮಾಜಿಕ ಪ್ರಜ್ಞೆಯನ್ನು ಮನಗಾಣಿಸುವ ಕೃತಿಯಾಗಿದೆಯೆಂದರೆ ಅತಿಶಯವೇನಲ್ಲ.

ಮನೋಹರ ಗ್ರಂಥಮಾಲೆಯ ವತಿಯಿಂದ ಪ್ರಕಟಿಸಿರುವ 'ನಡೆದು ಬಂದ ದಾರಿ' (ಸಂಪುಟ–೩) ಯ ಒಂದು ಭಾಗವಾದ ಜೀವನ ಪರಿಚಯ ಎಂಬ ಮಾಲೆಯಲ್ಲಿ ಏಳು ಜನ ಸಾಹಿತಿಗಳು, ಮೂವರು ಗಾಯಕರು, ಐವರು ಚಿತ್ರ ಕಲಾವಿದರು – ಹೀಗೆ ಹದಿನೈದುಮಂದಿ ಪ್ರಖ್ಯಾತ ಕನ್ನಡಿಗರ ಜೀವನ ಪರಿಚಯ ಹಾಗೂ ವ್ಯಕ್ತಿಚಿತ್ರಣವನ್ನು ಆ ಮಹಾನುಭಾವರ ಸಂಪರ್ಕವನ್ನು ಹೊಂದಿದ್ದ, ನಿಕಟ ಬಾಂಧವ್ಯವನ್ನು ಪಡೆದಿದ್ದ ನುರಿತ ಲೇಖಕರು ಚಿತ್ರಿಸಿದ್ದಾರೆ. ಇದೇ ರೀತಿಯಲ್ಲಿ ಅನೇಕ ಮಹಾನುಭಾವರ ಜೀವನ ಚಿತ್ರಗಳು ಏಕತ್ರ ಮೂಡಿ ಬಂದಿರುವ ಕೃತಿಗಳಲ್ಲಿ, ಅ. ನ. ಕೃ. ರವರ 'ಕರ್ನಾಟಕದ ಕಲಾವಿದರು ಭಾಗ ೧ ಮತ್ತು ೨,' ಬಿ. ಶಿವಮೂರ್ತಿ ಶಾಸ್ತ್ರಿಗಳವರ 'ವೀರಶೈವ ಮಹಾಪುರುಷರು,' ವಾಸುದೇವಾಚಾರ್ಯರ 'ನಾ ಕಂಡ ಕಲಾವಿದರು,' ಗುಂಡೂರಾಮಯ್ಯನವರ 'ಚೈತನ್ಯ ಪುರುಷರು,' ಪಂಡಿತ ಹೆಚ್. ಎಂ. ರಾಮಾರಾಧ್ಯರ 'ಆದರ್ಶ ಮಹಿಳಾ ರತ್ನಗಳು,' ಎನ್. ಬಸವಾರಾಧ್ಯರು ಮತ್ತು ಎಸ್. ಜಿ. ರೇವಣ್ಣಸಿದ್ದಪ್ಪ ಇವರ 'ಸರ್ವೋದಯ ಸಾಧಕರು,' ಟಿ. ಮಹಾಬಲೇಶ್ವರ ಭಟ್ಟರ 'ಸಾಹಿತ್ಯ ಶಿಲ್ಪಿಗಳು' . . . ಈ ಗ್ರಂಥಗಳು ಮುಖ್ಯವಾದುವು. ಈ ವಿಧದ ಕೃತಿಗಳಲ್ಲಿ ಒಮ್ಮೊಮ್ಮೆ ಪಠ್ಯಪುಸ್ತಕ ಸಮಿತಿ ವಿಧಿಸುವ ನಿಯಮಾನುಸಾರವಾಗಿ ಬರೆಯುವ ಜೀವನ ಚರಿತ್ರೆಗಳಲ್ಲಿ ವಿಷಯ ಸಂಗ್ರಹವಾಗಲಿ, ಕಲಾದಕ್ಷತೆಯಾಗಲಿ, ಪಾತ್ರ ಸ್ಫುಟತೆಯಾಗಲಿ ಕಂಡುಬರುತ್ತಿಲ್ಲ – ಎಂದು ಹಿರಿಯ ಸಾಹಿತಿಗಳು ಅಭಿಪ್ರಾಯ ಪಡುತ್ತಾರೆ. *

ಇದೇ ಪ್ರಕಾರದಲ್ಲಿ ಇನ್ನೊಂದು ಬಗೆಯ ಕೃತಿರಚನಾ ಕಾರ್ಯ ಈ ಶತಮಾನದಲ್ಲಿ ಸಾಗಿ, ತನ್ನದೇ ಆದೊಂದು ಸಂಪ್ರದಾಯ ಬೆಳಸಿಕೊಳ್ಳಲಾಗಿದೆ. ಅದುವೆ ಕನ್ನಡ ಸಾಹಿತ್ಯದಲ್ಲಿ ಆಚಾರ್ಯ ಸ್ಥಾನಾಪನ್ನರಾಗಿ ಅಸಂಖ್ಯ ಶಿಷ್ಯರ ಮೆಚ್ಚುಗೆಗೆ ಪಕ್ಕಾಗಿ ಅವರಿಂದ ಕೃತಿ ಸಂಭಾವನಾರೂಪವಾಗಿ ಪಡೆವ ಗೌರವಾನ್ವಿತ ಕಾಣಿಕೆ. ಇಂತಹ ಪ್ರತಿಯೊಂದು ಕೃತಿಯಲ್ಲಿಯೂ ಆಯಾ ವ್ಯಕ್ತಿಯ ಬಹುಮುಖವಾದ ಸಾಹಿತ್ಯ ಸೇವೆ – ಚಾರಿತ್ರ್ಯ ಮೊದಲಾದ ಸಂಗತಿಗಳು ವಿವಿಧ ಲೇಖಕರಿಂದ ರಚಿತವಾಗಿ ಒಂದೆಡೆ ಪವಣಿಸಿದವುಗಳಾಗಿರುತ್ತವೆ.

| | |
|---|---|
| ಸಂಭಾವನೆ | (ಬಿ. ಎಂ. ಶ್ರೀಕಂಠಯ್ಯನವರಿಗೆ) |
| ಒಸಗೆ | (ಸೇಡಿಯಾಪು ಕೃಷ್ಣಭಟ್ಟರಿಗೆ) |
| ಶ್ರದ್ಧಾಂಜಲಿ | (ಮುಳಿಯ ತಿಮ್ಮಪ್ಪಯ್ಯನವರಿಗೆ) |
| ಅಭಿವಂದನೆ | (ಎ. ಆರ್. ಕೃಷ್ಣಶಾಸ್ತ್ರಿಯವರಿಗೆ) |
| ಬಾಗಿನ | (ಎಸ್. ವಿ. ರಂಗಣ್ಣನವರಿಗೆ) |
| ಆಶೀರ್ವಾದ | (ಶ್ರೀ ಸುತ್ತೂರು ಸ್ವಾಮಿಗಳವರಿಗೆ) |
| ಕರ್ನಾಟಕ ದರ್ಶನ | (ದಿವಾಕರರಿಗೆ ೬೦ ನೆಯ ಹುಟ್ಟುಹಬ್ಬದ ಸ್ಮಾರಕವಾಗಿ) |
| ಉಡುಗೊರೆ | (ಕುವೆಂಪುರವರಿಗೆ) |

* ಪುಟ ೨೬೧ – ಮೈಸೂರು ರಾಜ್ಯ.

| | |
|---|---|
| ಜಿ.ಪಿ. ರಾಜರತ್ನಂ | (ಜಿ. ಪಿ. ರಾಜರತ್ನಂರವರಿಗೆ) |
| ನಮ್ಮ ಬೇಂದ್ರೆಯವರು | (ದ. ರಾ. ಬೇಂದ್ರೆಯವರಿಗೆ) |
| ವಿಭೂತಿ | (ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರಿಗೆ) |

ಹೀಗೆ ಅರ್ಪಿಸಿದ ಗ್ರಂಥಗಳ ವಿಭಾಗದಲ್ಲಿ ಇವುಗಳನ್ನು ಹೆಸರಿಸಬಹುದು. ಇವುಗಳಲ್ಲೆಲ್ಲ ಬಹುಮಟ್ಟಿಗೆ ಬೇರೆಬೇರೆ ಲೇಖಕರು ತಮಗೆ ತೋರಿದ ವಿಷಯಗಳನ್ನು ಕುರಿತು ಬರೆದ ಲೇಖನಗಳು ಸೇರಿರುತ್ತವೆ. ಕೆಲವು ಸಲ ಇಂತಹ ಲೇಖನಗಳ ಜೊತೆಗೆ ಅವರ (ಚರಿತ್ರ ನಾಯಕರ) ಸ್ವಂತ ಲೇಖನಗಳನ್ನೂ ಒಳಗೊಂಡಿರುವುದುಂಟು. ಇಲ್ಲಿಯವರೆಗೆ ಪ್ರಕಟವಾಗಿರುವ ಸಂಭಾವನಾ ಗ್ರಂಥಗಳ ಮೂಲ ಉದ್ದೇಶ ಒಂದೇ ಆದರೂ ಅವುಗಳ ಯೋಜನೆ ಬೇರೆಬೇರೆಯಾಗಿದೆ. ಒಟ್ಟಿನಲ್ಲಿ ಸಂಭಾವನಾ ಗ್ರಂಥವೆಂದರೆ ಇಂದಿನ ಕಾಲದಲ್ಲಿ ಗುರುಗಳಾದವರಿಗೆ ಶಿಷ್ಯರಿಂದ ಸಲ್ಲತಕ್ಕ ಗುರುದಕ್ಷಿಣೆಯೆಂದು ಅಭಿಮಾನಪೂರ್ವಕವಾಗಿ ಹೇಳಬಹುದು. †

ವ್ಯಕ್ತಿಯ ಜೀವನ ಚರಿತ್ರೆಯೊಟ್ಟಿಗೇ ಅವರ ಕೃತಿಗಳ ಪರಿಚಯವನ್ನೂ ಮಾಡಿಕೊಡುವ ಪರಿಪಾಠ ಕೂಡ ಇದೆ. ಈ ಬಗ್ಗೆ ಅ. ನ. ಕೃ. ರವರು ಬರೆದಿರುವ 'ಶ್ರೀ ನಿಡುಮಾಮಿಡಿ ಸನ್ನಿಧಿಯವರು' ಎಂಬುದು ಸುಂದರವಾಗಿ ಹೊರ ಬಂದಿರುವ ಗ್ರಂಥ. ಶ್ರೀ ಎಂ. ಜಿ. ನಂಜುಂಡಾರಾಧ್ಯರು ರಚಿಸಿರುವ 'ಹೇಮರೆಡ್ಡಿ ಮಲ್ಲಮ್ಮ-ರಾಜಯೋಗಿ ವೇಮಣ್ಣ' ಎಂಬುದು ಇತಿಹಾಸದ ಮೇಲೆ ಬೆಳಕು ಚೆಲ್ಲಿ ನಮ್ಮ ದೃಷ್ಟಿಯನ್ನು ಅತ್ತಕಡೆ ಸೆಳೆಯಬಲ್ಲುದಾಗಿದೆ.

ಡಾ|| ಕೆ. ಎಂ. ಕೃಷ್ಣರಾಯರ 'ಶ್ರೀ ಜಗನ್ನಾಥದಾಸರು' ದಾಸ ಸಾಹಿತ್ಯವನ್ನು ಸಿಂಹಾವಲೋಕನ ಕ್ರಮದಿಂದ ವಿವೇಚಿಸಿರುವ ಕೃತಿಯೆನ್ನಬಹುದು. ಮಾ. ನಂ. ನಂಜಪ್ಪನವರು ಬರೆದ 'ತತ್ವಶಿಖಾಮಣಿ ಮಹಾದೇವಿಯಕ್ಕ' ಎಂಬ ಗ್ರಂಥದಲ್ಲಿ ಸ್ವಯಂ ಅಕ್ಕನವರೇ ತಮ್ಮ ಜೀವಿತದಲ್ಲಿ ಸಂದರ್ಭಾನುಸಾರ ಹಾಡಿರಬಹುದಾದ ವಚನಗಳಿಂದಲೇ ಅವರ ಜೀವನ ಕಥೆಯನ್ನು ಹೆಣೆಯುವ ಪ್ರಯತ್ನ ನಡೆದಿದೆ.

ಮೈಸೂರು ವಿಶ್ವವಿದ್ಯಾನಿಲಯ, ಕರ್ಣಾಟಕ ವಿಶ್ವವಿದ್ಯಾನಿಲಯ, ಮೈಸೂರು ಸಂಸ್ಥಾನದ ಶಿಕ್ಷಣ ಸಮಿತಿ– ಇವರು ಪ್ರಕಟಪಡಿಸಿರುವ ಸಣ್ಣ ಪುಸ್ತಕಗಳಲ್ಲಿ ಅನೇಕ ಹೊತ್ತಗೆಗಳು ಚಿಕ್ಕವಾದರೂ ಚೊಕ್ಕರೀತಿಯಲ್ಲಿ ಮಹಾ ವ್ಯಕ್ತಿಗಳ ಜೀವನ ಪರಿಚಯವನ್ನು – ಕಿರಿದರೊಳೆ ಪಿರಿದರ್ಥ ಮೂಡುವಂತೆ – ಮಾಡಿಕೊಡತಕ್ಕವುಗಳಾಗಿವೆ.

ಮ. ಮಲ್ಲಪ್ಪನವರ 'ದನುಗೂರು ಮಠದ ಗುರು ಪರಂಪರೆ,' ಶ್ರೀ ವೀರಭದ್ರ ಶಿವಾಚಾರ್ಯರು ರಚಿಸಿರುವ 'ಯೋಗ ಭೂಮಿ' (ಕನಕಪುರದ ದೇಗುಲ ಮಠದ ಇತಿಹಾಸ), ಬಿ. ಭೀಮರಾಜುರವರ 'ಶ್ರೀ ಸಿದ್ಧಗಂಗಾ ಮಹಿಮಾದರ್ಶ,' ಅಮರವಾಣಿಯವರ 'ಜೀವಜ್ಯೋತಿ'– ಇವು ಆಯಾ ಕ್ಷೇತ್ರ ಪರಿಚಯದೊಂದಿಗೆ ಅಲ್ಲಿ ಲೋಕಹಿತಕ್ಕಾಗಿ ತಾವು ಕೈಗೊಂಡ ಮಹತ್ಕಾರ್ಯಗಳನ್ನು ಸಾಧಿಸಿ ದೇವನಲ್ಲಿ ಬೆರೆದ ಪರಮ ವೈರಾಗ್ಯಮೂರ್ತಿಗಳ ಜೀವನವನ್ನು ಚಿತ್ರಿಸುತ್ತವೆ.

ಪದ್ಯ – ಲಾವಣಿಗಳ ರೂಪದಲ್ಲಿ ಕೂಡ ಅತಿ ಸಂಕ್ಷಿಪ್ತ ರೀತಿಯಲ್ಲಿ ಮಹಾಪುರುಷರ ಹಾಗೂ ಮಹಾಮಾತೆಯರ ಜೀವನ ಚರಿತ್ರೆಗಳು ಅಡಕವಾಗಿ ಹೊರಬಂದಿರುವುದುಂಟು. ಅಡ್ನೂರು ಚಂದ್ರಶೇಖರ ದೇವರು (ಶ್ರೀ ಜ. ಚ. ನಿ. ಯವರ ಪೂರ್ವಾಶ್ರಮದ ಹೆಸರು) ರಚಿಸಿದ 'ಶ್ರೀ ಮಾದೇವಿಯಕ್ಕನ ಲಾವಣಿ,' ಸಿ. ಅಂಕಪ್ಪನವರ 'ಅಕ್ಕಮಹಾದೇವಿ' – ಮೊದಲಾದುವು ಈ ರಾಶಿಯಲ್ಲಿ ಕಿರುತಾರೆಗಳಂತೆ ಪ್ರಕಾಶಿಸುತ್ತಿವೆ.

ಒಟ್ಟಾರೆ ಜೀವನ ಚರಿತ್ರೆಗಳ ಬೆಳವಣಿಗೆಯ ಮಾರ್ಗದಲ್ಲಿ ಒಬ್ಬರ ವ್ಯಕ್ತಿ ಚಿತ್ರಣವನ್ನು ರಚಿಸುವಾಗ ಮತ್ತೊಬ್ಬರ ಜೀವನ ವಿಷಯವೋ ಅಥವಾ ಕಾಲಗರ್ಭದಲ್ಲಿ ಕಣ್ಮರೆಯಾಗಿದೆಯೆಂದು ನಂಬಲಾದ ಕವಿಕೃತಿಯೋ ಕರಗತವಾಗುವ ಸಂಭವವಿರುತ್ತದೆ. ನಿಜಕ್ಕೂ ಇದೊಂದು ತೆರನಾದ ಸಂಶೋಧನೆಯೇ ಆಗುತ್ತದೆಂದರೆ ಅತಿಶಯೋಕ್ತಿಯಾಗಲಾರದು. ಇದುವರೆಗೆ ಯಥಾಶಕ್ತಿ ಈ ವಿಷಯದಲ್ಲಿ ದೊರೆತ ಅಂಶಗಳನ್ನು ಸಂಗ್ರಹಿಸಿ ನಿವೇದಿಸಲಾಗಿದೆ. ಈ ವಿಷಯ ಸಂಗ್ರಹಕ್ಕೆ ನೆರವಾಗಿರುವ ಎಲ್ಲ ಆಕರಗಳಿಗೂ ಋಣಿಯಾಗಿರುತ್ತೇನೆ. ಕಷ್ಟಸಾಧ್ಯವಾದ ಈ ಸಾಹಿತ್ಯ ಪ್ರಕಾರವು ಸರ್ವಾಂಗ ಸುಂದರವಾಗಿ ಅಭಿವೃದ್ಧಿಯಾಗಲಿ.

---

† ಈ ದಿಶೆಯಲ್ಲಿ ಈಗಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ, ಕರ್ಣಾಟಕ ವಿಭೂಷಣ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಗೆ ಸದ್ಯದಲ್ಲಿಯೇ ಶ್ರೀಯುತರ ಷಷ್ಟ್ಯಬ್ದ ಶಾಂತಿ ಸಮಾರಂಭ ನಡೆವ ಸಂಬಂಧವಾಗಿ ಒಂದು ಸಂಭಾವನಾ ಗ್ರಂಥವನ್ನು ಅವರ ಮಿತ್ರಬಾಂಧವರು ಅರ್ಪಿಸಲಿದ್ದಾರೆ ಎಂದು ತಿಳಿಸಲು ಸಂತೋಷವಾಗುತ್ತದೆ.

# ಅನುವಾದ ಸಾಹಿತ್ಯ

ಲೇಖಕರು : ಶ್ರೀ ಎಂ. ಮರಿಯಪ್ಪ ಭಟ್

ಸಾಹಿತ್ಯ ಕೃಷಿ ಮೂರು ವಿಧಾನಗಳಲ್ಲಿ ಸಾಗುತ್ತಿರುವುದು ಸಹಜ : (೧) ಸ್ವಂತವಾದ ಸೃಷ್ಟಿ, (೨) ಅನುವಾದ ಅಥವಾ ಭಾಷಾಂತರ, (೩) ಅನುಕರಣ. ವಿಶ್ವದ ಎಲ್ಲ ಸಾಹಿತ್ಯಗಳೂ ಈ ವಿಧಿಯಲ್ಲಿ ಬೆಳೆದು ಬೆಳಗುವುವು. ಕನ್ನಡ ನುಡಿ ಇದಕ್ಕೆ ಅಪವಾದವಲ್ಲ.

ಕನ್ನಡ ಸಾಹಿತ್ಯೋದಯ ಕಾಲದಿಂದ ಇಂದಿನವರೆಗೂ ಈ ವಿಧಾನ ಮಹಿಮೆಯನ್ನು ಕೃತಿರಚನೆಯಲ್ಲಿ ಪರಿಶೀಲಿಸಬಹುದು. ಆದಿಕವಿ ಪಂಪನ (೯೪೧) ವಿಕ್ರಮಾರ್ಜುನ ವಿಜಯದಲ್ಲಿ ವಸ್ತು ಪುರಾಣವಸ್ತುವಾಗಿದ್ದರೂ, ಅದೊಂದು ಸ್ವತಂತ್ರ ಸೃಷ್ಟಿಗೆ ಉತ್ತಮ ಉದಾಹರಣೆಯಾಗಿದೆ. ಪೊನ್ನನ (೯೫೦) ಶಾಂತಿಪುರಾಣದಲ್ಲಿ ಕವಿಯ ಸ್ವತಂತ್ರಸಂವಿಧಾನ ಕೌಶಲವಿದ್ದರೂ, ಕೆಲವೆಡೆ ವರ್ಣನಾ ಭಾಗಗಳಲ್ಲಿ ಕಾಳಿದಾಸನ ಅನುಕರಣವನ್ನು ಕಾಣುತ್ತೇವೆ. ಹಾಗೆಯೇ ಮಹಾಕವಿ ರನ್ನನ (೯೯೩) ಗದಾಯುದ್ಧ ಕಾವ್ಯದಲ್ಲಿ ಕವಿಪ್ರತಿಭೆಯೊಳಗೆ ಭಟ್ಟನಾರಾಯಣನ ಭಾವಾನುವಾದವು ಸಮ್ಮಿಳಿತವಾಗಿರುವುದನ್ನು ಗುರುತಿಸಬಹುದು. ಅಭಿನವ ಪಂಪ (೧೧೦೦) ತನ್ನ ರಾಮಚಂದ್ರ ಚರಿತ ಪುರಾಣವನ್ನು ಪ್ರಾಕೃತದ ಪಉಮಚರಿತೆಯ ಅನುವಾದವೆಂಬಂತೆ ರಚಿಸಿದ್ದಾನೆ. ಬಾಣಭಟ್ಟನ ಸಂಸ್ಕೃತ ಗದ್ಯಕಾದಂಬರಿಯನ್ನು ನಾಗವರ್ಮನು (೯೯೦) ಚಂಪೂರೂಪದಲ್ಲಿ ಕನ್ನಡಕ್ಕೆ ಇಳಿಸಿದನು. ಇನ್ನು ಬಹುತೇಕ ಮಾರ್ಗಕವಿಗಳ ಹದಿನೆಂಟು ವರ್ಣನೆಗಳೂ, ಅಲಂಕಾರಗಳೂ, ಕವಿಸಮಯಗಳೂ, ಅನುಕರಣ ಅನುವಾದಗಳ ಸಾರಸರ್ವಸ್ವ ಎನ್ನಬಹುದು. ಹೀಗೆ ಕೃತಿನಿರ್ಮಾಣ ನಡೆದಿದೆ, ನಡೆಯುತ್ತಿದೆ.

ಪ್ರಸ್ತುತದಲ್ಲಿ ಈ ಮೂರು ವಿಧಾನಗಳಲ್ಲೊಂದಾದ ಅನುವಾದದ ಕಡೆಗೆ ಒಂದಿಷ್ಟು ದೃಷ್ಟಿಯನ್ನು ಹರಿಸೋಣ. ಅನುವಾದ - ಎಂಬುದು ಒಂದು ಕಲೆ. ಮೂಲದಲ್ಲಿ ಕಂಡುಬರುವ ಪದಗಳಿಗೆ ಇನ್ನೊಂದು ಭಾಷೆಯ ಸಮಾನಾರ್ಥಕ ಪದಗಳನ್ನು ಬರೆಯುವುದರಿಂದ ಮಾತ್ರ ಅನುವಾದವಾಗಲಾರದು. ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನುವಾದ ಮಾಡುವಾಗ, ಅಲ್ಲಿ ಹುದುಗಿರುವ ಭಾವನೆಯನ್ನು ಅನುವಾದಿಸಬೇಕು, ಬರಿಯ ಪದಗಳನ್ನಲ್ಲ. ಸರಿಯಾದ ಅನುವಾದದಲ್ಲಿ ಮೂಲಕ್ಕಿಂತ ಒಂದು ತುಣುಕು ತೆಗೆದುಹಾಕಲೂ ಬಾರದು, ಹೆಚ್ಚಿಗೆ ಸೇರಿಸಲೂ ಬಾರದು. ಮೂಲದ ಭಾವ ಸಂಪೂರ್ಣವಾಗಿ ವ್ಯಕ್ತವಾಗಬೇಕು. ಆದುದರಿಂದ ಅನುವಾದ ಕಾರ್ಯದಲ್ಲಿ ಮೂಲಕೃತಿರಚನೆಗಿಂತ ಅಧಿಕ ಮಾನಸಿಕ ಪ್ರಯತ್ನ ಆವಶ್ಯಕವೆಂದರೆ ತಪ್ಪಾಗದು. ಇದು ಅತಿಶಯದ ಮಾತೆಂಬುದಾಗಿ ಕೆಲವರು ಭಾವಿಸಬಹುದು. ಆದರೆ ಇದು ಅನುವಾದಕರ ಸ್ವಾನುಭವದ ಹೇಳಿಕೆ. ಮೂಲವನ್ನು ಬರೆಯುವಲ್ಲಿ ಲೇಖಕನಿಗೆ ತನ್ನ ನಿರ್ದಿಷ್ಟ ವಿಚಾರವನ್ನು ವಿವಿಧ ಪ್ರಕಾರವಾಗಿ ಹರಿಸಬಹುದು. ಆತನಿಗೆ ಆ ಸ್ವಾತಂತ್ರ್ಯವುಂಟು. ಆದರೆ ಅನುವಾದಕಾರನಿಗೆ ಅಂಥ ಸ್ವಾತಂತ್ರ್ಯವಿರುವುದಿಲ್ಲ. ಅದೊಂದು ಪರಕಾಯಪ್ರವೇಶದಂತಿದೆ. ಅಸಿಧಾರಾವ್ರತದಂತಿದೆ.

ಇಂಥ ಉಪಯುಕ್ತ ಕಾರ್ಯವನ್ನು ಶಾಸ್ತ್ರೀಯ ಗ್ರಂಥಗಳಲ್ಲಿ ಬಹಳ ಯಶಸ್ವಿಯಾಗಿ ಮಾಡಿರುವುದನ್ನು ಕವಿರಾಜಮಾರ್ಗವೆಂಬ ಕನ್ನಡದ ಆದ್ಯಗ್ರಂಥದಲ್ಲಿ ಗಮನಿಸಬಹುದು. ದಂಡಿಯ ಕಾವ್ಯಾದರ್ಶದ ಭಾಮಹನ ಕಾವ್ಯಾಲಂಕಾರದ ಅನುವಾದಗಳನ್ನು ಕವಿರಾಜಮಾರ್ಗದಲ್ಲಿ ಅಲ್ಲಲ್ಲಿ ಕಾಣಬಹುದು. ಚಾವುಂಡರಾಯನ (೯೭೮) ಚಾವುಂಡರಾಯಪುರಾಣ ಗುಣಭದ್ರಮುನೀಶ್ವರರ ತ್ರಿಷಷ್ಟಿ ಪುರುಷ ಪ್ರತಿಬಂಧಪುರಾಣದ ಕನ್ನಡ ಅನುವಾದ. ಇದೊಂದು ಹಳಗನ್ನಡ ಗದ್ಯದಲ್ಲಿ ಸುಂದರವಾದ ಆದ್ಯಗ್ರಂಥ. ಜಗದ್ದಳ ಸೋಮನಾಥನ (೧೧೭೫) ಕರ್ಣಾಟಕ ಕಲ್ಯಾಣಕಾರಕವು ಪೂಜ್ಯಪಾದಕೃತ ಕಲ್ಯಾಣಕಾರಕದ ಭಾಷಾಂತರ. ಬಹಳ ಉಪಯುಕ್ತವಾದ ವೈದ್ಯಗ್ರಂಥ. ಚೌಂಡರಸನು (೧೩೦೦) ದಂಡಿಕವೀಶ್ವರನು ಸಂಸ್ಕೃತದಲ್ಲಿ ರಚಿಸಿರುವ ದಶಕುಮಾರಚರಿತ್ರೆಯನು ಚಂಪೂ ರೂಪವಾಗಿ ಅಭಿನವದಶಕುಮಾರಚರಿತೆ ಎಂಬ ಹೆಸರಿನಲ್ಲಿ

'ನಟ್ಟುವಂ ವಿದಿತಂ ರಂಗದೊಳಾಡಿ ತೋರ್ಪ ತೆಱದಿಂ' ಕನ್ನಡದಲ್ಲಿ ತಾನು ಹೇಳಿರುವೆನೆಂಬುದಾಗಿ ಉಲ್ಲೇಖಿಸಿರುವನು. ಬಹಳ ಲಲಿತವಾದ ಅನುವಾದ. ಇಂಥ ಕಾರ್ಯಕ್ರಮ ಕನ್ನಡ ಸಾಹಿತ್ಯದಲ್ಲಿ ಉದ್ದಕ್ಕೂ ಅಲ್ಲಲ್ಲಿ ನಡೆದಿರುತ್ತದೆ.

ಮುಂದೆ ಚಿಕದೇವರಾಜರ (೧೬೯೦) ಆಸ್ಥಾನದಲ್ಲಿ ಚಿಕುಪಾಧ್ಯಾಯ, ತಿರುಮಲಾರ್ಯ, ಸಿಂಗರಾರ್ಯ ಮೊದಲಾಗಿ ಅನೇಕ ಕವಿಗಳು ಸಂಸ್ಕೃತದಿಂದ ಕನ್ನಡಕ್ಕೆ ಕೃತಿಗಳನ್ನು ಭಾಷಾಂತರಿಸಿರುತ್ತಾರೆ. ಇಲ್ಲಿ ಸಿಂಗರಾರ್ಯನನ್ನು ಸ್ಮರಿಸ ತಕ್ಕದ್ದು. ಕನ್ನಡದಲ್ಲಿ ಉಪಲಬ್ಧವಾಗಿರುವ ಮೊದಲಿನ ರೂಪಕ 'ಮಿತ್ರವಿಂದಾ ಗೋವಿಂದ' ಎಂಬ ಕೃತಿಯನ್ನು ಆತನು ಸಂಸ್ಕೃತದ 'ರತ್ನಾವಳೀ ನಾಟಿಕೆ' ಯಿಂದ ಕನ್ನಡಕ್ಕೆ ಇಳಿಸಿದನು. ಅಂತು ಕನ್ನಡದ ಪ್ರಪ್ರಥಮ ನಾಟಕ ಒಂದು ಅನುವಾದ ಕೃತಿ ಎಂಬುದು ಎಷ್ಟು ಚೋದ್ಯವಾಗಿದೆ!

ಮುಂದೆ ೧೯ನೆಯ ಶತಮಾನದಲ್ಲಿ ನಮ್ಮ ದೇಶದ ಜ್ಞಾನಭಂಡಾರಕ್ಕೆ ಹೆಚ್ಚು ಕಿಟಕಿಗಳು ತೆರೆಯಲ್ಪಟ್ಟು ಅಧಿಕವಾಗಿ ಗಾಳಿ ಬೆಳಕು ಬರಲು ಅನುವಾಯಿತು. ಆ ಕಿಟಕಿಗಳಲ್ಲಿ ಬಹಳ ಉಪಯುಕ್ತವಾದ ಕಿಟಕಿ ಎಂದರೆ ಆಂಗ್ಲ ಭಾಷೆ. ಅದು ವಿಶ್ವದ ವಿವಿಧ ಪಟಲಗಳನ್ನೇ ಸಮೀಕ್ಷಿಸುವಂತೆ ಮಾಡಿತು. ಆಂಗ್ಲ ವಿದ್ಯಾಭ್ಯಾಸದ ಫಲಿತಾಂಶವಾಗಿ ಈ ಲಾಭ ಬಂತು. ಅದು ಮೊದಲು ನಮ್ಮ ದೇಶದಲ್ಲಿ ಲಭಿಸಿದುದು ಬಂಗಾಳ ಮುಂಬಯಿಗಳಲ್ಲಿ ಎನ್ನಬಹುದು. ಸರ್ ವಾಲ್ಟರ್ ಸ್ಕಾಟ್‌ನ ರೋಮಾಂಚಕಾರಿ ಕಾದಂಬರಿಗಳು ಬಂಗಾಳದಲ್ಲಿ ಬಂಕಿಮರ ಮುಂಬಯಿಯಲ್ಲಿ ಆಪ್ಟೆಯವರ ಪ್ರತಿಭೆಗೆ ನವಸ್ಫೂರ್ತಿಯನ್ನಿತ್ತು ತನ್ಮೂಲಕ ಭಾರತದಲ್ಲಿ ನಿಜವಾದ ಕಾದಂಬರಿಯುಗಕ್ಕೆ ನಾಂದಿಯಾಯಿತು. ಈ ಹೊಸಹುಚ್ಚು ನೆರೆ ಪ್ರಾಂತಗಳಿಗೆ ಹರಿಯಿತು. ಕರ್ಣಾಟಕದಲ್ಲಿ ಬಿ. ವೆಂಕಟಾಚಾರ್ಯರೂ ಗಳಗನಾಥರೂ ಆ ಪ್ರಭಾವ-ಕ್ಕೊಳಗಾಗಿ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಉತ್ತಮ ಕೃಷಿಗೈದರು. ವೆಂಕಟಾಚಾರ್ಯರ ಕೃತಿಗಳೆಲ್ಲವೂ ಬಂಕಿಮರ ಅಮರ ಕಾದಂಬರಿಗಳ ಸುಂದರ ಅನುವಾದಗಳು. ಗಳಗನಾಥರು ಆಪ್ಟೆಯವರಿಂದ ಮಹತ್ವದ ಅನುವಾದಗಳನ್ನು ಕೊಟ್ಟುದಲ್ಲದೆ, ಕೆಲವು ಸ್ವತಂತ್ರ ಕೃತಿಗಳನ್ನೂ ದಯೆಪಾಲಿಸಿದ್ದಾರೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಬೈಬಲಿನ ಕನ್ನಡ ಅನುವಾದವೊಂದು (೧೮೨೩) ಬೆಳಕಿಗೆ ಬಂದು ಕ್ರೈಸ್ತ ಮಿಶನರಿಗಳ ಕನ್ನಡ ಸೇವೆ ರೂಪುಗೊಳ್ಳುವುದಕ್ಕೆ ಮೊದಲಾಯಿತು. ಆಮೇಲೆ ಬೈಬಲಿಗೆ ಸಂಬಂಧಪಟ್ಟ ಅನೇಕ ಲೇಖನಗಳೂ ಪ್ರಾರ್ಥನಾ ಶ್ಲೋಕಗಳೂ ('ರತ್ನಮಾಲೆ' ಇತ್ಯಾದಿ) ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರಗೊಂಡವು.

ಕನ್ನಡಕ್ಕೆ ಮತ್ತೆ ಅಭಿನವ ಕಾಳಿದಾಸರೆಂಬುದಾಗಿ ಬಿರುದಾಂಕಿತರಾದ ಬಸವಪ್ಪಶಾಸ್ತ್ರಿಗಳಿಂದ (೧೮೬೧) ಎರಡು ಮನೋಹರ ನಾಟಕಗಳು ಅನುವಾದಗಳಾಗಿ ಬಂದುವು. ಷೇಕ್ಸ್‌ಪಿಯರ್ ಮಹಾಕವಿಯ 'ಒಥೆಲ್ಲೊ' ಎಂಬ ಪ್ರಸಿದ್ಧ ದುರಂತ ನಾಟಕವನ್ನು 'ಶೂರಸೇನ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಇಳಿಸಿದರು. ಕಾಳಿದಾಸ ಮಹಾಕವಿಯ ಲೋಕಪ್ರಸಿದ್ಧ 'ಶಾಕುಂತಲ' ನಾಟಕವನ್ನು ಅತ್ಯುತ್ತಮವಾಗಿ ಕನ್ನಡಕ್ಕೆ ಭಾಷಾಂತರಿಸಿದರು. ಇವರ ಭಾಷಾಂತರ ಮೂಲದ ಸ್ವಾರಸ್ಯವನ್ನು ಸಂಪೂರ್ಣವಾಗಿ ತಂದು ಒಂದು ಸ್ವತಂತ್ರ ಕೃತಿಯಂತೆ ಶೋಭಿಸುವ ಅಮರಕೃತಿಯಾಗಿದೆ. ಅಭಿನವ ಕಾಳಿದಾಸ ಎಂಬ ಬಿರುದು ಇವರಲ್ಲಿ ಸಾರ್ಥಕ್ಯವಾಗಿದೆ. ಮುಳುಬಾಗಿಲರ ಉತ್ತರರಾಮಚರಿತೆಯನ್ನೂ ಮರೆಯಲಾಗದು. ಸಾಧಾರಣ ಇದೇ ಆದರ್ಶದಲ್ಲಿ ಮುಂದೆ ೨೦ನೆಯ ಶತಮಾನದ ಮೂರನೆಯ ದಶಕದಲ್ಲಿ ದೇವ ಶಿಖಾಮಣಿ ಅಳಸಿಂಗರಾಚಾರ್ಯರು ಪಂಚರಾತ್ರ, ಸ್ವಪ್ನವಾಸವದತ್ತಗಳೆಂಬ ಭಾಸಕೃತ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಧನ್ಯರಾದರು. ಎಲ್. ಗುಂಡಪ್ಪನವರೂ, ಮೊಳೆಯಾರ ಶಂಕರನಾರಾಯಣ ಭಟ್ಟರೂ, ಪಂಡಿತ ಎಚ್. ಶೇಷ ಅಯ್ಯಂಗಾರ್ಯರೂ ಭಾಸನ ಏಕಾಂಕ ನಾಟಕಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಕನ್ನಡಕ್ಕೆ ಅನುವಾದ ಮಾಡಿರುವುದನ್ನು ಇಲ್ಲಿ ಸ್ಮರಿಸಬಹುದು. ನಾಟಕ ಸಾಹಿತ್ಯದಲ್ಲಿ ಬಿ. ಎಂ. ಶ್ರೀಕಂಠಯ್ಯನವರು ಅಶ್ವತ್ಥಾಮನ್ ಎಂಬ ಹೆಸರಿನಲ್ಲಿ ಕನ್ನಡ ಜಾಯಮಾನಕ್ಕೆ ಹೊಂದಿಸಿ ಭಾಷಾಂತರಿಸಿದ ಅಜಾಕ್ಸ್ ಎಂಬ ಗ್ರೀಕ್ ರುದ್ರನಾಟಕ, ಅವರ ಪಾರಸಿಕರು, ಮತ್ತು ಕೆ. ವಿ. ರಾಘವಾಚಾರ್ಯರ ಅಂತಿಗೊನೆ ಕ್ರಾಂತಿಕಾರಿಗಳಾದುವು. ಕನ್ನಡದಲ್ಲಿ ಆವಿದ್ಧ ಪ್ರಯೋಗಗಳನ್ನು ರೂಢಿಮಾಡಿದುವು. ಪ್ರಸಿದ್ಧ ನಾಟಕಕಾರರಾದ ಶ್ರೀರಂಗರು ಇಬ್ಸೆನ್ನನ ಎರಡು ನಾಟಕಗಳನ್ನು (Ghosts ಮತ್ತು Wild Duck) ಉತ್ತಮವಾಗಿ ಅನುವಾದಿಸಿರುತ್ತಾರೆ. ಇತ್ತೀಚೆಗೆ ಡಾ|| ಮಾಸ್ತಿಯವರು ಷೇಕ್ಸ್‌ಪಿಯರಿನ ಚಂಡಮಾರುತ (Tempest) ಮೊದಲಾದ ನಾಟಕಗಳನ್ನು ಕನ್ನಡಿಸುತ್ತಿರುವುದು ಅಭಿನಂದನೀಯ. ದೊಡ್ಡ ಕೊರತೆಯೊಂದನ್ನು ಅವರು ನೀಗುತ್ತಿದ್ದಾರೆ. ಎ. ಎನ್. ಮೂರ್ತಿರಾಯರು ಮೊಲಿಯರನ ನಾಟಕಗಳನ್ನು ಕನ್ನಡಕ್ಕೆ ತಂದು ಕನ್ನಡದ ಐಸಿರಿಯನ್ನು

ಹೆಚ್ಚಿಸುತ್ತಿದ್ದಾರೆ. ಪಡುಕೋಣ್ ಸೀತಾದೇವಿಯವರು 'ವೇಣುಮಾನ' ಎಂಬ ಹೆಸರಿನಲ್ಲಿ ರಷ್ಯಾದ ಉತ್ತಮ ನಾಟಕವೊಂದನ್ನು ಕನ್ನಡಿಸಿರುತ್ತಾರೆ. ಹೀಗೆಯೇ ಅಲ್ಲಲ್ಲಿ ಕೆಲವು ನಾಟಕಗಳು ಪಾಶ್ಚಾತ್ಯ ಭಾಷೆಗಳಿಂದ ಕನ್ನಡದಲ್ಲಿ ಅನುವಾದಿತಗಳಾಗಿ ಅವತರಿಸಿರುತ್ತವೆ. ಹೆಚ್ಚಿನವು ಆಂಗ್ಲ ಭಾಷೆಯ ಮೂಲಕ ಬಂದವುಗಳು. ಇವಲ್ಲದೆ ಸಂಸ್ಕೃತದಿಂದ ಮತ್ತು ಇತರ ಭಾರತ ಭಾಷೆಗಳಿಂದ ಅನೇಕ ನಾಟಕಗಳು ಕನ್ನಡಕ್ಕೆ ಭಾಷಾಂತರವಾಗಿವೆ. ಅವನ್ನೆಲ್ಲ ಇಲ್ಲಿ ಹೆಸರಿಸುವುದು ದುಸ್ಸಾಧ್ಯ.

ಕಾವ್ಯ, ಕಾದಂಬರಿ, ಸಣ್ಣಕತೆ, ಚರಿತ್ರೆ, ಜೀವನ ಚರಿತ್ರೆ, ಆತ್ಮ ಚರಿತ್ರೆ, ವಿಜ್ಞಾನ ಸಾಹಿತ್ಯ, ವಿಮರ್ಶ ಲೇಖನಗಳು ಇತ್ಯಾದಿ ಬಹುಮುಖವಾಗಿ ವಿವಿಧ ಭಾಷೆಗಳಿಂದ ಕನ್ನಡಕ್ಕೆ ಅನುವಾದಗೊಂಡಿವೆ.

ಕಾವ್ಯಕ್ಷೇತ್ರದಲ್ಲಿ ಸಂಸ್ಕೃತದ ಅನುವಾದಗಳು ಕನ್ನಡಕ್ಕೆ ಅನೇಕ ಬಂದುಂಟು. ನಾಗವರ್ಮನ ಕರ್ಣಾಟಕ ಕಾದಂಬರಿಯಿಂದ (೯೯೦) ಮೊದಲ್ಗೊಂಡ ಈ ಮಹಾಕಾರ್ಯ ಇಂದು ಎಸ್. ವಿ. ಪರಮೇಶ್ವರ ಭಟ್ಟರು ಸಮಗ್ರ ಕಾಳಿದಾಸ ಕೃತಿಗಳನ್ನು ಉತ್ತಮ ಕನ್ನಡ ಅನುವಾದಗಳಾಗಿ ಭಟ್ಟಿ ಇಳಿಸುವುದರ ತನಕ ಅನುಸ್ಯೂತವಾಗಿ ನಡೆದು ಬಂದಿರುತ್ತದೆ. ನಮಗಿರುವ ಅಲ್ಪಾವಕಾಶದಲ್ಲಿ ಆಂಗ್ಲ ಕಾವ್ಯಶ್ರೀಯ ಆಗಮನವನ್ನು ಒಂದಿಷ್ಟು ಗಮನಿಸೋಣ.

೨೦ನೆಯ ಶತಮಾನದ ಮೊದಲ ದಶಕಗಳಲ್ಲಿ ಎಸ್. ಜಿ. ನರಸಿಂಹಾಚಾರ್ಯರೂ, ಹ. ನಾರಾಯಣರಾಯರೂ ಪಂಜೆಯವರೂ ಷೇಕ್ಸ್‌ಪಿಯರ್, ಮಿಲ್ಟನ್, ವರ್ಡ್ಸ್‌ವರ್ತ್, ಷೆಲ್ಲಿ ಮೊದಲಾದ ಆಂಗ್ಲ ಕವಿಶ್ರೇಷ್ಠರ ಕೃತಿಗಳ ಉತ್ತಮ ಭಾಗಗಳನ್ನು ಕನ್ನಡಕ್ಕೆ ಛಂದೋಬದ್ಧವಾಗಿ ತರುವ ಸಂಭ್ರಮದ ಸಮಾರಂಭಕ್ಕೆ ಸಿದ್ಧರಾದರು. ಹ. ನಾರಾಯಣ ರಾಯರ 'ಆಂಗ್ಲ ಕವಿತಾಸಾರ' ಎಂಬ ಸಂಕಲನವು ಇಂಗ್ಲಿಷ್ ಪದ್ಯಗಳ ಸುಂದರ ಅನುವಾದಕ್ಕೆ ಇರುವ ಆದ್ಯ ನಿದರ್ಶನ. ಕನ್ನಡ ಛಂದಸ್ಸಿನ ಕಷ್ಟ ನಿರ್ಬಂಧಗಳಿಗೆ ಕಟ್ಟುಬಿದ್ದು ಕವಿಗಳು ನೂತನವೂ ಸಹಜವೂ ಆದ ವಿಧಾನಗಳನ್ನು ಹುಡುಕುತ್ತಿದ್ದರು. ಈ ದಿಸೆಯಲ್ಲಿ ಬಿ. ಎಂ. ಶ್ರೀಯವರು ಸುಮಾರು ೧೯೨೬ರಲ್ಲಿ ಯಶಸ್ವಿಯಾಗಿ ಮುಂದುವರಿದರು. ಅವರು ಪಡುವ ಕಡಲ ಹೊನ್ನ ಹೆಣ್ಣಿನ ತೊಡಿಗೆಯನ್ನು ಕನ್ನಡ ನುಡಿ ಹೆಣ್ಣಿಗೆ ಇಟ್ಟು ಹೃದಯಂಗಮವಾಗಿ ಹಾಡಿದರು. "ಗೋಲ್ಡನ್ ಟ್ರೆಜರಿ" ಎಂಬ ಆಂಗ್ಲಗೀತೆಗಳ ಸಂಕಲನದಿಂದ ಅನೇಕ ಆಣಿಮುತ್ತುಗಳನ್ನು ಆಯ್ದುಕೊಂಡು "ಇಂಗ್ಲಿಷ್ ಗೀತೆಗಳು" ಎಂಬ ಹೊತ್ತಗೆಯಲ್ಲಿ ಅವುಗಳ ಸುಂದರ ಭಾಷಾಂತರಗಳನ್ನು ಗೀತರೂಪದಲ್ಲಿ ಕನ್ನಡ ಜಾಯಮಾನಕ್ಕೆ ಹೊಂದಿಕೆಯಾಗುವಂತೆ ನೀಡಿದರು. ಅವಲ್ಲಿ ಹೆಚ್ಚಿನವಕ್ಕೆ ಸ್ವತಂತ್ರ ರಚನೆಯಷ್ಟೆ ಘನತೆಯುಂಟು. ಈ ದಿಸೆಯಲ್ಲಿ ಪೂಜ್ಯ ಗೋವಿಂದ ಪೈಗಳ ಸೇವೆಯೂ ಅಭಿನಂದನೀಯ. ಮುಂದೆ ನಮ್ಮ ಶ್ರೇಷ್ಠ ಕವಿಗಳೆಲ್ಲರೂ ಒಂದಲ್ಲ ಇನ್ನೊಂದು ರೀತಿಯಿಂದ ಆಂಗ್ಲ ಅಥವಾ ಗೀರ್ವಾಣ ಸಾಹಿತ್ಯದಿಂದ ಅಮೋಘ ಕೃತಿಗಳನ್ನು ನವೀನ ಛಂದೋಮಾರ್ಗದಲ್ಲಿ ಕನ್ನಡಕ್ಕೆ ಅನುವಾದ ಮಾಡಿರುತ್ತಾರೆ. ಕುವೆಂಪು, ಬೇಂದ್ರೆ, ಶ್ರೀನಿವಾಸ, ವಿ. ಸೀತಾರಾಮಯ್ಯ, ಕಣವಿ, ಅಡಿಗ ಮೊದಲಾದ ಪ್ರಸಿದ್ಧ ಕವಿಗಳನ್ನು ಇಲ್ಲಿ ಹೆಸರಿಸಬಹುದು.

ಮದ್ರಾಸು ವಿಶ್ವವಿದ್ಯಾನಿಲಯದಲ್ಲಿ ಅವ್ಯಕ್ತ ಮಾನವ (Man the unknown) ಮುಂತಾದ ಕೆಲವು ಮಹತ್ವದ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿಸುತ್ತಾರೆ. ಪ್ರಾದೇಶಿಕ ಭಾಷೆಗಳಲ್ಲಿ ವಿದ್ಯಾರ್ಥಿಗಳಿಗೆ ಬೋಧನೆ ನಡೆಯಿಸಬೇಕೆಂಬ ತತ್ವವನ್ನು ಒಪ್ಪಿಕೊಂಡು ತಜ್ಞರು ಅನೇಕ ಶಾಸ್ತ್ರೀಯ ಗ್ರಂಥಗಳನ್ನು ಕನ್ನಡಕ್ಕೆ ಆಂಗ್ಲ ಮುಂತಾದ ವಿದೇಶೀ ಭಾಷೆಗಳಿಂದ ಭಾಷಾಂತರಿಸಿದ್ದಾರೆ. ಈ ದಿಸೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ತೊಂಡು ಅತ್ಯಧಿಕವೆನ್ನಬಹುದು. ಈ ಶತಮಾನದ ಎರಡನೆಯ ದಶಕದಿಂದಲೇ ತಮಿಳು ಮುಂತಾದ ಸಹೋದರಿ ಭಾಷೆಗಳಿಂದ ಉತ್ತಮ ಸಾಹಿತ್ಯ ರತ್ನಗಳು ಕನ್ನಡಕ್ಕೆ ಬಂದಿವೆ. ದಿವಂಗತ ಆರ್. ನರಸಿಂಹಾಚಾರ್ಯರ ನೀತಿಮಂಜರಿ ಇವಕ್ಕೊಂದು ಉದಾಹರಣೆ. ತದನಂತರ ಭಾರತ ಸ್ವಾತಂತ್ರ್ಯೋತ್ತರದಲ್ಲಿ ಅನೇಕ ವಿದ್ಯಾಸಂಸ್ಥೆಗಳೂ ಸಾಂಸ್ಕೃತಿಕ ಕಾರ್ಯಸಂಸ್ಥೆಗಳೂ ಭಾಷಾಂತರ ಕಾರ್ಯಕ್ರಮವನ್ನು ವಿಪುಲವಾಗಿ ಮಾಡಿ ಭಾರತದ ಸಾಹಿತ್ಯ ಸಂಪತ್ತಿಯನ್ನು ಅಭಿವೃದ್ಧಿಗೊಳಿಸಿರುವುದು ಸರ್ವವಿದಿತ. ಈ ಸಂದರ್ಭದಲ್ಲಿ ದಕ್ಷಿಣ ಭಾಷಾ ಪುಸ್ತಕ ಟ್ರಸ್ಟಿನವರು, ಸಾಹಿತ್ಯ ಎಕಡಮಿಯವರು, ನೇಷನಲ್ ಬುಕ್ ಟ್ರಸ್ಟ್ ಅವರು, ಯುನೈಟೆಡ್ ಸ್ಟೇಟ್ಸ್ ವಾರ್ತಾ ಶಾಖೆಯವರು (U.S.I.S.) ಮೊದಲಾದ ಹಿರಿಯ ಸಂಸ್ಥೆಯವರು ಭಾಷಾಂತರಗಳ

ಮೂಲಕ ಅನೇಕ ಉಪಯುಕ್ತ ಕೃತಿಗಳನ್ನು (ಕತೆ, ಕಾದಂಬರಿ, ನಾಟಕ, ಗೀತ, ವಿಜ್ಞಾನ, ಇತ್ಯಾದಿ ವಿವಿಧ ಪ್ರಕಾರಗಳಲ್ಲಿ) ಕನ್ನಡಕ್ಕೆ ಇಳಿಸಿ ಕನ್ನಡದ ಐಸಿರಿಯನ್ನು ಹೆಚ್ಚಿಸಿರುತ್ತಾರೆ.

ಒಟ್ಟಿನಲ್ಲಿ ಪರಿಶೀಲಿಸಿದರೆ, ಕನ್ನಡ ಲೇಖಕರು ಭಾಷಾಂತರ ಕ್ಷೇತ್ರದಲ್ಲಿ ತೃಪ್ತಿಕರವಾಗಿ ಶ್ರದ್ಧೆಯಿಂದ ದುಡಿಯುತ್ತಾ ಬಂದಿರುತ್ತಾರೆಂಬುದು ಸಂತೋಷದ ವಿಷಯ. ಕವಿರಾಜಮಾರ್ಗಕಾರನಿಂದ ಆ ಪರಂಪರೆ ನಮ್ಮಲ್ಲಿ ರಕ್ತಗತವಾಗಿ ಬಂದುಂಟು. ಆ ಉತ್ತಮವೂ ಉಪಯುಕ್ತವೂ ಆದ ಪರಂಪರೆಯನ್ನು ಉಳಿಸಿ ಬೆಳೆಸಿ ಕನ್ನಡ ಹೊನಲು ಹೊಚ್ಚ ಹೊಸತಾಗಿ ಹರಿಯಲೆಂದು ಹಾರೈಸೋಣ.

" ನಹಿ ಜ್ಞಾನೇನ ಸದೃಶಂ "



## 'ಕನ್ನಡ ನುಡಿ'ಯ ಮಾಜಿ ಸಂಪಾದಕರು



ದಿ|| ನೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳವರು




ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರುಗಳು

# ಪ್ರವಾಸ ಸಾಹಿತ್ಯ (Travelogue)

**ಲೇಖಕರು: ಶ್ರೀ ಸಾ. ಶಿ. ಮರುಳಯ್ಯ**

'Travel, in the younger sort, is a part of education; in elder, a part of experience.'

ಇದು ಇಂಗ್ಲೀಷ್ ಸಾಹಿತ್ಯದ ಪ್ರಬಂಧ ಪ್ರಾಕಾರದ ಜನಕನೆನಿಸಿದ ಫ್ರಾನ್ಸಿಸ್ ಬೇಕನ್ನನ ಅನುಭವೋಕ್ತಿ ಪ್ರವಾಸದ ಬಗ್ಗೆ. ನಮ್ಮಲ್ಲಿರುವ 'ದೇಶ ತಿರುಗಬೇಕು, ಕೋಶ ಓದಬೇಕು' ಎಂಬ ನಾಣ್ನುಡಿಯೂ ಇಷ್ಟೇ ಅರ್ಥಪೂರ್ಣ ವಾದದ್ದು.

ಹದಿದಾರನೆಯ ಶತಮಾನ ಆಂಗ್ಲ ಇತಿಹಾಸದಲ್ಲಿ ಒಂದು ಮಹತ್ವಪೂರ್ಣವಾದ ಕಾಲ. ಸಾಹಿತ್ಯ ಸೃಷ್ಟಿಯಲ್ಲಿ ಮಹೋನ್ನತಿ, ವೈಜ್ಞಾನಿಕ ಸಂಶೋಧನೆ, ಹಾಗೂ ನೂತನ ಆವಿಷ್ಕಾರಗಳ ಜೊತೆಗೆ ಪೃಥ್ವಿಯ ಪ್ರದೇಶಗಳನ್ನೂ, ನೂತನ ಖಂಡಗಳನ್ನೂ ಪತ್ತೆ ಹಚ್ಚಿ ತಮ್ಮ ವಿಜಯಪತಾಕೆಯನ್ನು ಎತ್ತಿಹಿಡಿಯಲು ಸತತವಾಗಿ ಶ್ರಮಿಸಿದ ಯುಗ ಅದು. ಅವರ ಸಾಹಸ ಪ್ರವೃತ್ತಿಯ ಫಲವಾಗಿ ಅಮೇರಿಕೆಯನ್ನು ಕಂಡುಹಿಡಿಯಲಾಗಿತ್ತು. ಅದರ ಬಗ್ಗೆ ವಿಶ್ವಕವಿ ಷೇಕ್ಸ್‌ಪಿಯರನಿಂದ 'ಟೆಂಪೆಸ್ಟ್' ಎಂಬ ಸಾಂಕೇತಿಕ ನಾಟಕವೂ ರಚಿತವಾಯಿತು. ಅದೇನೇ ಇರಲಿ, ಬ್ರಿಟಿಷರ ಮಹತ್ವಾಕಾಂಕ್ಷೆ ಬಹುರೂಪಿ ಯಾಗಿ ಅನೇಕಾನೇಕ ಸಾಹಸಿಗಳನ್ನು ಈ ಉದ್ಯಮದಲ್ಲಿ ತಳ್ಳಿತು. ಬಹುತೇಕ ಮಂದಿ ಸಮುದ್ರಯಾನ (voyages) ಗಳನ್ನು ಕೈಕೊಂಡು, ಹೊಸ ಹೊಸ ಭೂಪ್ರದೇಶಗಳ ದರ್ಶನ ಪಡೆದು, ಅಲ್ಲಿ ತಮ್ಮ ಅಸ್ತಿತ್ವವನ್ನು ಪ್ರತಿಷ್ಠಾಪಿಸಲು ಪ್ರಯತ್ನಿಸಿದರು. ಕವಿ, ಗಮಕಿ, ರಾಜಕಾರಣಿಗಳಿಗಲ್ಲದೆ ಇಂತಹ ಸಾಹಸ ಮನೋವೃತ್ತಿಯ ಪಟುಗಳಿಗೂ ಮಹಾರಾಣಿ ಎಲಿಜಬೆತ್ ಸದಾ ಸ್ವಾಗತ ಮತ್ತು ಪ್ರೋತ್ಸಾಹಗಳನ್ನಿತ್ತು ಸನ್ಮಾನಿಸುತ್ತಿದ್ದುದು ಸ್ತುತ್ಯಾರ್ಹವಾದ ವಿಚಾರ. ಅಂತಹ ಸಾಹಸಿಗಳು ಕೈಕೊಂಡ ಪ್ರಯಾಸಪೂರ್ಣ ಪ್ರವಾಸಗಳು, ಅನುಭವಿಸಿದ ಕಷ್ಟನಷ್ಟಗಳು ಇಂದಿಗೂ ಅಚ್ಚಳಿಯದೇ ಉಳಿದಿರುವ ಜೀವಂತ ಸಾಹಿತ್ಯ ರೇಖೆಗಳು.

ನಮ್ಮಲ್ಲಿ, ಅಂದರೆ ಭಾರತೀಯರಲ್ಲಿ ಈ ಪ್ರವಾಸೋದ್ಯಮ ಇಲ್ಲವೆಂದಲ್ಲ. ಇದೆ. ಇದು ಬಹು ಪ್ರಾಚೀನ ಯುಗದಿಂದಲೂ ಇದೆ. ಆದರೆ ನಮ್ಮ ಪ್ರವಾಸ ಪಾಶ್ಚಾತ್ಯರ ಪ್ರವಾಸದಂತಹ ಬಹಿರಂಗ ಪ್ರದರ್ಶನದ ಪ್ರಗತಿಸೂಚಕವಲ್ಲ; ಅಂತರಂಗದ ವಿಕಾಸದ್ಯೋತಕ. ಆತ್ಮ ಪರಮಾತ್ಮನೆಡೆಗೆ ಹೊರಟ ಅನಂತ ಯಾತ್ರೆ. ಅವರು 'invaders' 'explorers' ಆದರೆ, ನಮ್ಮವರು ಕೇವಲ ಚೈತ್ರಯಾತ್ರಿಗಳು ಇಲ್ಲವೇ ತೀರ್ಥಯಾತ್ರಿಗಳು. ಅವರದು ಕೇವಲ ಇಹದ ಸಾಧನೆಯಾದರೆ, ನಮ್ಮವರದು ಪರದ ಸಿದ್ಧಿಯೂ ಹೌದು. ಅವರದು ಛಲ ಬಲಗಳಾದರೆ, ಇವರದು ತಪ ಶೀಲಗಳ ಸದ್ಗುಣ ಶ್ರೀಕರವಾದುದು. ಅವರದು ಲೌಕಿಕದ ಶ್ರೇಯಸ್ಸು, ಇವರದು ಅಲೌಕಿಕದ ಶ್ರೇಯಸ್ಸು.

ವೇದ ಉಪನಿಷತ್ತುಗಳ ಕಾಲದಲ್ಲೇ ಅಗಸ್ತ್ಯಾದಿ ಮಹಾಮುನಿಗಳಿಂದ ನಮ್ಮವರ ಪ್ರವಾಸ ಅಥವಾ ಯಾತ್ರೆ ಆರಂಭವಾಗುತ್ತದೆ. ನಚಿಕೇತನ ಚೈತ್ರಯಾತ್ರೆ ಒಂದು ಹೊಸ ಅಧ್ಯಾಯ. ಭಾರತೀಯ ಸಾಹಿತ್ಯದಲ್ಲಿ ಒಂದು ಹೊಸ ಸೃಷ್ಟಿಯೆನಿಸಿದ, ತ್ರಿಲೋಕ ಸಂಚಾರಿ ನಾರದನಿಗಂತೂ ಬೇರೆ ಕಸುಬೇ ಇಲ್ಲ ನಿತ್ಯದ ಪ್ರಯಾಣ ಬಿಟ್ಟರೆ. ಅವನೊಬ್ಬ ವಿಚಿತ್ರ ಪೋಸ್ಟ್‌ಮನ್. ಇಂದ್ರಾದಿ ದೇವತೆಗಳಿಗೆ ನಮ್ಮ ಭೂಲೋಕ ಒಂದು ಆಡುಂಬೊಲ. ಆದರಲ್ಲೂ ಯಕ್ಷರಿಗೆ ಇದು ವಿಹಾರ ಕ್ಷೇತ್ರ. ತಮ್ಮ ಪ್ರಣಯ ಚೇಷ್ಟೆಗೆ ಭೂಲೋಕವೇ ಅತ್ಯುತ್ತಮ ಅಂತಃಪುರ! ಅಲ್ಪಕಾರಣಕ್ಕಾಗಿ ಕ್ಷತ್ರಿಯರ ಮೂಲೋತ್ಪಾಟನ ಮಾಡಲು 'ಮುಯ್ಯೇಳು ಸೂಳ್' ಭೂ ಪ್ರದಕ್ಷಿಣೆ ಮಾಡಿದ ಗಂಡುಗೊಡಲಿಯ ಗಂಡನ ಸಾಹಸ ಪ್ರಶಂಸನೀಯ. ಪರಶಿವನ ಪ್ರೀತಿಯ ಪುತ್ರ ಷಣ್ಮುಖನ ತ್ರಿಲೋಕಸಂಚಾರ ಯಾವುದಕ್ಕೂ ಕಡಿಮೆ ಅಲ್ಲ. ಅಂತೆಯೇ ಪಿತೃವಾಕ್ಯ ಪರಿಪಾಲನೆಗಾಗಿ ಅರಣ್ಯಕ್ಕೆ ನಡೆದ ಶ್ರೀರಾಮಚಂದ್ರನಾಗಲೀ, ತೀರ್ಥಯಾತ್ರೆಯನ್ನು ಸ್ವೀಕರಿಸಿದ ಅರ್ಜುನನಾಗಲೀ ಯಾತ್ರಾಕಾಂಕ್ಷಿಗಳಲ್ಲದೆ ಬೇರೆ ಅಲ್ಲ.

ಅನೇಕ ಧರ್ಮಗಳ ಆಗರವೆನಿಸಿದ ಭಾರತದಲ್ಲಿ ದ್ರಷ್ಟಾರರಿಗೇನೂ ದಾರಿದ್ರ್ಯವಿಲ್ಲ. ಹಲವಾರು ಧರ್ಮ ಪ್ರವರ್ತಕರು ತಮ್ಮ ಧರ್ಮಪ್ರಸಾರಣೆಗೆ ಪ್ರವಾಸವನ್ನು ಆಶ್ರಯಿಸಿದರಲ್ಲದೆ, ತಮ್ಮ ಅನುಯಾಯಿಗಳಿಗೂ ಬೋಧಿಸಿ ಕಳುಹಿಸುತ್ತಿದ್ದುದೂ ಉಂಟು. ಭಗವಾನ್ ಬುದ್ಧದೇವನು ರಾಜವನ, ಮಗಧಾದಿ ದೇಶಗಳನ್ನು ಕಾಲ್ನಗಟ್ಟಿದುದಲ್ಲದೆ ಧರ್ಮಪ್ರಸಾರಕ್ಕಾಗಿ ಬರ್ಮಾ, ಸಿಂಹಳ, ಮಲಯಾ, ಸುಮಾತ್ರ ಮುಂತಾದ ಕಡೆಗಳಿಗೆ ಬೌದ್ಧ ಭಿಕ್ಷುಗಳನ್ನು ಕಳುಹಿಸಿದ್ದು ಸತ್ಯ. ಹಿಂದೂ ಧರ್ಮದ ಪುನಃಪ್ರತಿಷ್ಠಾಪಕರಾದ ಶಂಕರ ಭಗವತ್ಪಾದರು ಶಾರದಾ ದೇವಿಯನ್ನು ಕರೆದುತಂದುದು ತಮ್ಮ ಜೈತ್ರಯಾತ್ರೆಯಲ್ಲಿಯೇ. ಪರಶಿವನ ಪಂಚಮುಖೋದ್ಭವರೆನಿಸಿದ ರೇಣುಕಾದಿ ಪಂಚಮಹಾಚಾರ್ಯರು ವೀರಶೈವ ಧರ್ಮಸಂಸ್ಥಾಪನಾ ಕಾರ್ಯವನ್ನು ಸ್ವೀಕರಿಸಿ, ಭರತಖಂಡದ ಬಹು ಮುಖ್ಯ ಪ್ರದೇಶಗಳಲ್ಲಿ ಧರ್ಮಪೀಠಗಳನ್ನು (ಪಂಚಪೀಠಗಳನ್ನು) ಸ್ಥಾಪಿಸಿದ್ದು ಯಾತ್ರೆಯ ಮೂಲಕವೇ.

ಜೈನಧರ್ಮದಲ್ಲಂತೂ ಪ್ರವಾಸಕ್ಕೆ ಒಂದು ವಿಶಿಷ್ಟ ಸ್ಥಾನ ಮೀಸಲಿದೆ. ಜಿನದೀಕ್ಷೆಯನ್ನು ಸ್ವೀಕರಿಸಿದ ಪ್ರತಿಯೊಬ್ಬನೂ 'ಗ್ರಾಮ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾ ಮುಖಂ' ಗಳಲ್ಲಿ ವಿಹರಿಸಲೇಬೇಕು. ಜೈನ ಗುರುವಾದವನು, ಕೇವಲಿ ಎನಿಸಿದವನು ತನ್ನ ಶಿಷ್ಯಸಮೂಹದೊಡನೆ ಚರಿಗೆ ಹೋಗುವುದು ಅನಿವಾರ್ಯ. ಶ್ರಾವಕವ್ರತ ಸ್ವೀಕರಿಸಿದವರಿಗೆ ಇದು ಅತ್ಯಗತ್ಯ. ಅಲ್ಲದೆ ಜೈನಧರ್ಮದ ಒಳಹೊಕ್ಕು ನೋಡಿದರೆ ಒಂದು ವಿಶಿಷ್ಟ ವಿಶ್ವವೇ ನಮಗೆ ಗೋಚರಿಸುತ್ತದೆ. ಆತ್ಮ ಅರ್ಹತ್ ಪದವಿಯನ್ನು ಗಳಿಸುವ ಒಂದು ಸಾಹಸಯಾತ್ರೆ ಇದೆ. ಅದು ನಾನಾ ಭವಗಳಲ್ಲಿ, ನಾನಾ ಯೋನಿಗಳಲ್ಲಿ, ಸಂಚರಿಸಿ, ಚತುರ್ಗತಿಗಳಲ್ಲಿ ಪರ್ಯಟನಗೈದು, ನಡೆದಂತೆಲ್ಲಾ ಪರಿಷ್ಕಾರಗೊಳ್ಳುತ್ತಾ, ಪಾಪ ಪುಣ್ಯಗಳ ಲೇಪವಿಲ್ಲದೆ, ಪರಂಜ್ಯೋತಿ ಸ್ವರೂಪವಾಗಿ ಅರ್ಹಂತನೆನಿಸಬೇಕಾದರೆ ಆ ಅದ್ಭುತ ಯಾತ್ರೆ ಅಗಾಧವಾದುದೆಂದು ವ್ಯಕ್ತವಾಗದಿರದು. ವೀರಶೈವರಲ್ಲಿರುವ ಷಟ್ಸ್ಥಲದ ಕಲ್ಪನೆಯೂ ಅಷ್ಟೆ. ಆತ್ಮನು ಭಕ್ತಸ್ಥಲದಿಂದ ಐಕ್ಯಸ್ಥಲಕ್ಕೆ ಮಜಲ ಮಜಲಾಗಿ ಹತ್ತಿದ ವಿಜಯಯಾತ್ರೆಯ ಸತ್ಯಸ್ವರೂಪ. ಬೌದ್ಧರ ಅಷ್ಟಾವರಣ ಹಾಗೂ ಷಟ್ಚಕ್ರಗಳ ಕಲ್ಪನೆಯೂ ಇದೇ ಸಿದ್ಧಿಗಾಗಿ.

ನಮ್ಮ ದೇಶದ ರಾಜರುಗಳಲ್ಲೂ ಈ ಪ್ರವಾಸ ಒಂದು ಪರಿಪಾಠವಾಗಿತ್ತು. ಯಾವನೇ ರಾಜನಾಗಲೀ ಅಧಿಕಾರ ಸ್ವೀಕರಿಸಿದ ಕೂಡಲೇ ಜೈತ್ರಯಾತ್ರೆ ಹೋಗಬೇಕಿತ್ತು. ಅಶ್ವಮೇಧವೇ ಮೊದಲಾದ ಯಾಗಗಳಲ್ಲಂತೂ ಈ ಯಾತ್ರೆ ಒಂದು ವಿಜಯಸೂಚಕ. ಆದರೆ ಈ ರಾಜರುಗಳು ಆಚರಿಸಿದ ಜೈತ್ರಯಾತ್ರೆಗಳಾಗಲೀ, ದಂಡಯಾತ್ರೆಗಳಾಗಲೀ ಭರತ ಖಂಡದ ವಲಯಗಳಲ್ಲೇ ವಿನಾ ಬೇರೆ ನಾಡನ್ನೇ ಕಂಡರಿಯವು. ಅಂತಹ ಧರ್ಮಬುದ್ಧಿ ಇವರದ್ದು! ತಮ್ಮ ಯೋಗ್ಯತೆಯ ಇತಿಮಿತಿಗಳನ್ನೆಂದಿಗೂ ಅತಿಕ್ರಮಿಸಿದವರಲ್ಲ ಎಂಬುದು ಗಮನಾರ್ಹವಾದ ವಿಚಾರ. ಪರಕೀಯರಂತೂ ಅನಾದಿ ಕಾಲದಿಂದಲೂ ನಮ್ಮ ದೇಶದ ಮೇಲೆ ದಾಳಿ ನಡೆಸಿದ್ದಾರೆ; ಇಲ್ಲವೇ ನಮ್ಮಲ್ಲಿಗೆ ಯಾತ್ರೆ ಬಂದಿದ್ದಾರೆ. ಆರ್ಯರಿಂದ ಆರಂಭವಾದದ್ದು ಇಂದು ಚೀಣೀಯರವರೆಗೂ ಇವರ ಹಾವಳಿ ನಮಗೆ ತಪ್ಪಿಲ್ಲ! ದಾಳಿಕಾರರೇ ಅಲ್ಲದೆ ಹಲವರು ಧರ್ಮಾ ಕಾಂಕ್ಷಿಗಳೂ, ರಾಜಕಾರಣಿಗಳೂ, ಮತಪ್ರಚಾರಕರೂ, ವಣಿಗ್ವರರೂ ಆಗಮಿಸಿದ್ದಾರೆ. ನಮ್ಮ ಪ್ರಾಚೀನ ಭಾರತೇತಿ ಹಾಸದ ಹೊತ್ತಗೆಯನ್ನು ತೆರೆದು ನೋಡಿದರೆ ಕ್ರಿ.ಪೂ. ಐದನೇ ಶತಮಾನದಿಂದೀಚೆಗೆ ಸುಮಾರು ಇನ್ನೂರಕ್ಕಿಂತಲೂ ಹೆಚ್ಚು ಜನ ಪ್ರವಾಸಿಗರು ನಮ್ಮ ದೇಶಕ್ಕೆ ಬಂದು ಹೋಗಿರುವುದು ಕಂಡುಬರುತ್ತದೆ. ಈ ಪ್ರವಾಸಿಗಳಲ್ಲಿ ಅನೇಕರು ತಮ್ಮ ತಮ್ಮ ಅನುಭವಗಳನ್ನು ಬರೆದಿಟ್ಟು ಹೋಗಿದ್ದಾರೆ. ಇವೇ ಪ್ರವಾಸ ಸಾಹಿತ್ಯದ ರೇಖೆ (Travelogue) ಗಳು.

ಇವರ ಪ್ರವಾಸ ಸಾಹಿತ್ಯವನ್ನು ಸ್ಥೂಲವಾಗಿ ಐದು ಭಾಗಗಳನ್ನಾಗಿ ಮಾಡಬಹುದು – (೧) ತೀರ್ಥಯಾತ್ರಾ ಪ್ರವಾಸ ಸಾಹಿತ್ಯ (Pilgrimage), (೨) ಸಾಂಸ್ಕೃತಿಕ ಪ್ರವಾಸ ಸಾಹಿತ್ಯ (Cultural), (೩) ಶೈಕ್ಷಣಿಕ ಪ್ರವಾಸ ಸಾಹಿತ್ಯ (Educational), (೪) ವ್ಯಾವಹಾರಿಕ ಪ್ರವಾಸ ಸಾಹಿತ್ಯ (Commercial), (೫) ಪ್ರವಾಸ ಪ್ರೇಮಿ ಪ್ರವಾಸ ಸಾಹಿತ್ಯ (Wanderlusts).

ಚಾರಿತ್ರಿಕ ಹಿನ್ನೆಲೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಹುಡುಕಹೊರಟರೆ ನಮಗೆ ಮೊದಲು ಸಿಕ್ಕುವ ಪ್ರವಾಸಿಗಳು ಗ್ರೀಸಿನ ಹೆರೋಡೋಟಸ್ ಮತ್ತು ಟೆಸಿಯಾಸ್. ಅಲೆಗ್ಸಾಂಡರ್ ಭಾರತಕ್ಕೆ ದಂಡೆತ್ತಿ ಬಂದು ತನ್ನ ತಾಯ್ನಾಡಿಗೆ ಹಿಂದಿರುಗುವ ವೇಳೆ ತನ್ನ ಪ್ರತಿನಿಧಿಯಾಗಿ ಸೆಲ್ಯೂಕಸನನ್ನು ನೇಮಿಸಿದ್ದನಷ್ಟೆ; ಆ ಸೆಲ್ಯೂಕಸ್, ಮೆಗಾಸ್ತನೀಸ್ ಎಂಬ ರಾಯಭಾರಿಯನ್ನು ಚಂದ್ರಗುಪ್ತ ಮೌರ್ಯನ ಆಸ್ಥಾನದಲ್ಲಿ ಬಿಟ್ಟಿದ್ದನು. ಆ ಮೆಗಾಸ್ತನೀಸ್ ತನಗೆ ತಿಳಿದ ಹಲವು

ವಿಷಯಗಳನ್ನು ಬರೆದಿದ್ದಾನೆ. ಇಂದಿಗೂ ಇತಿಹಾಸ ರಚನೆಗೆ 'ಮೆಗಾಸ್ತನೀಸನ ಬರವಣಿಗೆಗಳು' ತುಂಬಾ ಸಹಾಯಕ ವಾಗಿವೆ.

ಮತ್ತೊಬ್ಬ ಗ್ರೀಸ್ ದೇಶದ ಪ್ರವಾಸಿ (ಹೆಸರು ಗೊತ್ತಿಲ್ಲ) 'ಎರಿತ್ರೀನ್ ಸಮುದ್ರ ಮಾರ್ಗದರ್ಶನ' ಎಂಬ ಗ್ರಂಥ ವನ್ನು ಬರೆದಿದ್ದಾನೆ. ಕ್ರಿ. ಶ. ೮೦ ರಲ್ಲಿ ಭಾರತದ ತೀರ ಪ್ರದೇಶಗಳಲ್ಲಿ ಅಲೆದು, ಹಲವಾರು ಬಂದರುಗಳ ಮತ್ತು ವ್ಯಾಪಾರ ವಸ್ತುಗಳ ಬಗ್ಗೆ ಒಂದು ಕಿರುಹೊತ್ತಗೆಯನ್ನು ರಚಿಸಿದ್ದಾನೆ. "ಇವನ ಗ್ರಂಥವಿಲ್ಲದಿದ್ದರೆ ಪ್ರಾಚೀನ ಭಾರತದ ವ್ಯಾಪಾರ ಮತ್ತು ವಾಣಿಜ್ಯದ ಒಂದು ಪ್ರಮುಖ ದರ್ಶನ ನಮಗೆ ದೊರೆಯದೇ ಹೋಗುತ್ತಿತ್ತು. ಆದ್ದರಿಂದ ಇವನ ಗ್ರಂಥ ಅಪರಂಜಿಗೆ ಸಮ."* ಎಂಬುದಾಗಿ ಶ್ರೀ ಹೆಚ್. ಎಲ್. ನಾಗೇಗೌಡರು ಅಭಿಪ್ರಾಯಪಟ್ಟಿದ್ದಾರೆ.

ಟಾಲೆಮಿ ಬಹು ಪ್ರಮುಖ ಪ್ರವಾಸಿ ನಮಗೆ ದೊರಕುತ್ತಾನೆ. ಇವನು ಭಾರತದ ಭೌಗೋಳಿಕಾಂಶಗಳ ಬಗ್ಗೆ ಹೆಚ್ಚು ಮಾಹಿತಿ ನೀಡಿದ್ದಾನೆ. ಅಲ್ಲದೆ ಇವನ ಬರಹ ಭಾಷಾ ಶಾಸ್ತ್ರ ದೃಷ್ಟಿಯಿಂದಲೂ ಪ್ರಾಮುಖ್ಯತೆ ಪಡೆದಿದೆ. ಏಕೆಂದರೆ ನಮ್ಮ ಕನ್ನಡ ನಾಡು ಮತ್ತು ದ್ರಾವಿಡ ನಾಡುಗಳ ಬಗ್ಗೆ ಹೆಚ್ಚು ವಿಷಯ ದೊರೆಯುತ್ತದೆ. ಈ ಗ್ರೀಕ್ ಪ್ರವಾಸಿಗಳನ್ನು ಸ್ಥೂಲವಾಗಿ ವ್ಯಾವಹಾರಿಕ ಪ್ರವಾಸಿಗಳು (Commercial Travellers) ಎಂದೂ, ಇವರ ಪ್ರವಾಸ ಸಾಹಿತ್ಯವನ್ನು ವ್ಯಾವಹಾರಿಕ ಎಂದೂ ಹೆಸರಿಸಿ ಕರೆಯಬಹುದು.

ಗ್ರೀಕ್ ಪ್ರವಾಸಿಗಳಂತೆ ಚೀಣೀಯರೂ ನಮ್ಮ ನಾಡಿಗೆ ಬಂದು ಹೋಗಿದ್ದಾರೆ. ಆದರೆ ಇವರ ಪ್ರವಾಸದ ಉದ್ದಿಶ್ಯ ದಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿದೆ. ಗ್ರೀಕರಲ್ಲಿ ಹಲವರು ಬಂದದ್ದು ವ್ಯಾಪಾರೋದ್ಯಮಕ್ಕಾಗಿ, ಸಮುದ್ರ ಮಾರ್ಗಗಳನ್ನು ಹೊಸ ಹೊಸದಾಗಿ ಕಂಡುಹಿಡಿಯುವುದಕ್ಕಾಗಿ, ಹಾಗೂ ರಾಯಭಾರಿಗಳಾಗಿ; ಆದರೆ ಚೀಣೀಯರು ಬಂದದ್ದು ಅಭ್ಯಾಸ ಕ್ಕಾಗಿ, ತತ್ತ್ವಶಾಸ್ತ್ರಾಧ್ಯಯನಕ್ಕಾಗಿ. ಆದ್ದರಿಂದ ಇವರದು ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಪ್ರವಾಸವೆನ್ನಬಹುದು. ವಿಶಿಷ್ಟ ತತ್ತ್ವಗಳ, ದಿವ್ಯದರ್ಶನಗಳ ತೌರಾದ ಭಾರತದಲ್ಲಿ ಅವರು ಅಭ್ಯರ್ಥಿಗಳಾಗಿ ಬಂದು ತಮಗೆ ತಿಳಿದ ಹಲವು ವಿಷಯಗಳನ್ನು ಬರೆದಿಟ್ಟು ಹೋಗಿದ್ದಾರೆ. ಅವರಲ್ಲಿ ಪ್ರಮುಖರಾದವರು ಐದನೇ ಶತಮಾನದಲ್ಲಿ ಬಂದ ಫಾಹಿಯಾನ್, ಏಳನೇ ಶತಮಾನದಲ್ಲಿ ಬಂದ ಹ್ಯೂಯೆನ್‌ತ್ಸಾಂಗ್ ಮತ್ತು ಈತ್ಸಿಂಗರು. ಇವರು ಭಾರತದಲ್ಲಿ ಬಹುದಿನಗಳತನಕ ನೆಲೆಸಿದ್ದು, ಸಂಸ್ಕೃತ ಕಲಿತು ಅನೇಕ ಭಾಗಗಳನ್ನು ಸುತ್ತಾಡಿ, ತಮಗೆ ತಿಳಿದದ್ದನ್ನು ರಚಿಸಿದ್ದಾರೆ. ಇವರ ರಚನೆ ಗ್ರೀಕರ ರಚನೆಗಿಂತ ವಾಸ್ತವಾಂಶಗಳಿಂದ ಕೂಡಿದೆ. ಆದರೆ ಹೆಚ್ಚು ಭಾಗ ಬೌದ್ಧಧರ್ಮಕ್ಕೆ ಸಂಬಂಧಿಸಿರುವುದರಿಂದ ಇತರ ಲೌಕಿಕ ಹಾಗೂ ವ್ಯಾವಹಾರಿಕ ಸಂಗತಿಗಳು ಅಷ್ಟಾಗಿ ದೊರೆಯುವುದಿಲ್ಲ.

ಬಹುದಿನಗಳಿಂದಲೂ ಭಾರತೀಯರೊಂದಿಗೆ ವ್ಯಾಪಾರೋದ್ಯಮದ ಸಂಪರ್ಕವಿಟ್ಟುಕೊಂಡಿದ್ದ ಅರಬ್ಬೀ ವರ್ತಕ ರನ್ನು ಮೂರನೆಯ ಭಾರತ ಪ್ರವಾಸಿಗಳಾಗಿ ಪರಿಗಣಿಸಬಹುದು. ಸುಲೇಮಾನ್ ಮತ್ತು ಅಲ್‌ಮಸೂದಿ ಎಂಬುವರು ಬರೆದ ಪ್ರವಾಸ ಲೇಖನಗಳು ಬಹಳ ಉಪಯುಕ್ತವಾದುವುಗಳು. ಹೊಸದಾಗಿ ಹುಟ್ಟಿಕೊಂಡ ಇಸ್ಲಾಂ ಧರ್ಮಪ್ರಸಾರ ಕ್ಕಾಗಿ, ಎಂಟನೇ ಶತಮಾನದಿಂದೀಚೆಗೆ, ದಂಡಯಾತ್ರೆ ಮಾಡಿದ ಅನೇಕ ತುರುಕರನ್ನು ಕಾಣುತ್ತೇವೆ. ಘಜ್ನಿಯ ಸುಲ್ತಾನ್ ಮಹಮ್ಮದನ ಕಾಲದಲ್ಲಿ ಬಂದ ಅಲ್ಬೆರೂನಿಯು ಇಲ್ಲಿ ಸಂಸ್ಕೃತಾಭ್ಯಾಸ ಮಾಡಿ ಒಂದು ದೊಡ್ಡ ಗ್ರಂಥವನ್ನು ರಚಿಸಿದ್ದಾನೆ. "ಆದರೆ ಅವನ ಗ್ರಂಥದಲ್ಲಿ ಒಂದೆರಡು ದೊಡ್ಡ ದೋಷಗಳನ್ನು ಕಾಣಬಹುದು. ಒಂದನೆಯದು, ಅವನು ಅಂದಿನ ರಾಜಕೀಯ ಸ್ಥಿತಿಯನ್ನು ಹೇಳುವುದಿಲ್ಲ. ಹೇಳಿದರೂ ಬಹಳ ಕಡಿಮೆ. ಎರಡನೆಯದು, ಅವನು ಹೇಳಿರುವುದೆಲ್ಲ ಇಂಡಿಯ ದೇಶದ ಸಾಹಿತ್ಯವನ್ನವಲಂಬಿಸಿದೆ. ಅಂದರೆ ಆತನು ತಾನು ಕಂಡುದನ್ನು ಹೇಳದೆ ತಾನು ಗ್ರಂಥಗಳಲ್ಲಿ ಓದಿದುದನ್ನು ಹೇಳಿದ್ದಾನೆ. ಹಾಗೆ ಮಾಡದೆ ಅಂದಿನ ಇಂಡಿಯಾದಲ್ಲಿ ತಾನೇನು ಕಂಡನೆಂಬುದನ್ನು ಹೇಳಿದ್ದರೆ, ಅವನ ಗ್ರಂಥ ಇತಿಹಾಸ ರಚನೆ ದೃಷ್ಟಿಯಿಂದ ಅತ್ಯಂತ ಅಮೂಲ್ಯವಾದ ಗ್ರಂಥವಾಗುತ್ತಿತ್ತು."* ಎಂಬುದಾಗಿ ಶ್ರೀಯುತ ಹೆಚ್. ಎಲ್. ನಾಗೇಗೌಡರು ಹೇಳುತ್ತಾರೆ.

ಮುಂದೆ ಹದಿಮೂರನೇ ಶತಮಾನದಲ್ಲಿ ನಮಗೆ ಪ್ರಮುಖ ಪ್ರವಾಸಿಯೊಬ್ಬ ದೊರಕುತ್ತಾನೆ. ಅವನೇ ಮಾರ್ಕೊ ಪೋಲೊ. ೧೨೭೧ ರಲ್ಲಿ ತನ್ನ ಚಿಕ್ಕಪ್ಪನೊಡನೆ ಇಟಲಿಯಿಂದ ಪ್ರವಾಸ ಹೊರಟು ತುರ್ಕಿ, ಇರಾಕ್, ಇರಾನ್, ಅಫ್ಘಾನಿ

---

* 'ಪ್ರವಾಸಿ ಕಂಡ ಇಂಡಿಯಾ'—ಭಾಗ-೧., ಇದರ ಅಪ್ರಕಟಿತ ಮುನ್ನುಡಿಯಿಂದ.

ಸ್ಥಾನ, ಟಿಬೆಟ್, ದಕ್ಷಿಣ ರಷ್ಯ, ಮಂಗೋಲಿಯ, ಚೀಣಾ, ಜಾವಾ, ಸುಮಾತ್ರ, ಸಿಲೋನ್, ಭಾರತ ಮುಂತಾದ ದೇಶಗಳಲ್ಲಿ ಹಾದು ಗೋಬಿ ಮರುಭೂಮಿಯ ಮಾರ್ಗವಾಗಿ ಇಪ್ಪತ್ತುನಾಲ್ಕು ವರ್ಷಗಳ ನಂತರ ನನ್ನ ಊರಾದ ವೆನಿಸಿಗೆ ಹಿಂದಿರುಗಿದ. ಇವನನ್ನು 'ಭೂಗೋಳದ ಪಿತಾಮಹ'ನೆಂದೂ ಕರೆಯುತ್ತಾರೆ. †

ಮಾರ್ಕೊ ಪೋಲೋನನ್ನು ನಾವು ಪ್ರವಾಸ ಪ್ರೇಮಿಗಳ (Wanderlusts) ಗುಂಪಿಗೆ ಸೇರಿಸಬಹುದು. 'ರಾಬಿನ್‌ಸನ್‌ಕ್ರೂಸೊ' ಕೂಡ ಅಷ್ಟೆ. ಆದರೆ ಅವನದು ಸಾಹಸ ಜೀವನ. 'ಗಲಿವರನ ದೇಶಸಂಚಾರ' ಮೊದಲಾದ ಕಟ್ಟುಕಥೆಗಳಲ್ಲೂ ಸಾಹಸಪೂರ್ಣ ಪ್ರವಾಸ ಪ್ರೇಮಿಗಳನ್ನು ಕಾಣುತ್ತೇವೆ.

ಮಾರ್ಕೊ ಪೋಲೋ ನಂತರ ನಮಗೆ ದೊರಕುವ ಪ್ರವಾಸಿ ಗ್ರಂಥವೆಂದರೆ ಇಬ್ನೆಬತೂತನದು. ಇವನು ತೊಗಲಕನ ಆಸ್ಥಾನದಲ್ಲಿ ಕೆಲವು ವರ್ಷಗಳವರೆಗಿದ್ದು, ಭಾರತವನ್ನೆಲ್ಲಾ ಸುಮಾರು ಇಪ್ಪತ್ತೈದು ವರ್ಷಗಳವರೆಗೆ ಸುತ್ತಾಡಿ ಉತ್ತಮ ಗ್ರಂಥವೊಂದರಲ್ಲಿ ತನ್ನ ಅನುಭವಗಳನ್ನು ಕೊರೆದು ಹೋಗಿದ್ದಾನೆ.

ವಿಜಯನಗರ ಸಾಮ್ರಾಜ್ಯದ ಬೃಹತ್ ವೈಭವವನ್ನು ಚಿತ್ರಿಸಿದ, ಸುಮಾರು ಹದಿನೈದನೆಯ ಶತಮಾನದಲ್ಲಿ ಆಗಮಿಸಿದ ಇಟಲಿಯ ನಿಕೊಲೋ ಕಾಂಟಿ, ಅಬ್ದುಲ್ ರಜಾಕ್, ರಷ್ಯಾದ ನಿಕೇಟಿನ್, ಪೋರ್ಚುಗಲ್‌ನ ಬಾರ್ಬೋಸಾ, ಪಾಯೆಸ್ ಮತ್ತು ನ್ಯೂನಿಜ್ ಮುಂತಾದವರು ಗಮನಾರ್ಹ ವ್ಯಕ್ತಿಗಳು. ಕರ್ನಾಟಕ ಸಾಮ್ರಾಜ್ಯ ರಚನೆಗೆ ಈ ಮಹನೀಯರ ಬರಹಗಳು ಉಪಯುಕ್ತವಾಗಿವೆ.

ಸುಮಾರು ಹದಿನೇಳನೆಯ ಶತಮಾನದಲ್ಲಿ ಟಾವೆರ್ನಿಯರ್, ಬೆರ್ನಿಯರ್, ಥಾಮಸ್ ಬಾವ್ರೆ, ಪೆಟ್ರೋಡೆಲ್ಲಾ ವಿಲ್ಲೆ, ಮನೂಚಿ, ಥೇವ್‌ನಾಟ್ ಮತ್ತು ಕರೇರಿ ಮೊದಲಾದ ಪ್ರವಾಸಿಗಳನ್ನೂ, ಹದಿನೆಂಟನೆಯ ಶತಮಾನದಲ್ಲಿ ಅಬ್ಬ ಡೂಬೆ ಎಂಬ ಪ್ರಸಿದ್ಧ ಪ್ರವಾಸಿಯನ್ನೂ ನಾವು ನೆನೆಯಬಹುದು. ಇವರೆಲ್ಲರ ಪ್ರವಾಸ ಲೇಖನಗಳು ಭಾರತ ಇತಿಹಾಸ ರಚನೆಗೆ ತುಂಬಾ ಸಹಕಾರಿಯಾಗಿವೆ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನಾವು ಸ್ವಲ್ಪ ಅಡ್ಡಾಡಿದರೆ ಈ ರೀತಿಯ ಪ್ರವಾಸ ಲೇಖನದ ಅರವಂಟಿಗೆಗಳು ಸಿಗುತ್ತವೆ. ಈ ದಿಸೆಯಲ್ಲೂ ನಾವು ಸಾಕಷ್ಟು ಮುಂದುವರಿದಿದ್ದೇವೆಂದು ಧೈರ್ಯವಾಗಿ ಹೇಳಬಹುದು. ಹಲವರು ಹೇಳುವುದುಂಟು ನಮ್ಮಲ್ಲಿ ಪ್ರವಾಸ ಸಾಹಿತ್ಯ ರಚನೆ ಇಲ್ಲವೆಂದು. ಆದರೆ ಹೆಚ್ಚಿನ ಸಂಖ್ಯೆಯಲ್ಲಿಲ್ಲದಿದ್ದರೂ, ಅತ್ಯುತ್ತಮವೂ, ಪರಿಣಾಮಕಾರಿಯೂ ಆದ ರಚನೆ ಈ ಪ್ರಾಕಾರದಲ್ಲಿ ನಡೆದಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಕೇವಲ ಬೆರಳಲ್ಲಿ ಎಣಿಸಬಹುದುದಾದ ಮೂರೇ ಮೂರು ಪ್ರವಾಸ ಗ್ರಂಥಗಳು ದೊರೆಯುತ್ತವೆ. ಇವು ಮೂರು ಕನ್ನಡ ಪ್ರವಾಸ ಸಾಹಿತ್ಯದ ತ್ರಿಕೂಟಗಳು. ಪ್ರಾಯಶಃ, ಅಸ್ವಾತಂತ್ರ್ಯದ ಬೀಡಾಗಿದ್ದ ಭಾರತೀಯರಿಗೆ ಪ್ರಯಾಣ ಸ್ವಾತಂತ್ರ್ಯ ಇರಲಿಲ್ಲವೋ ಅಥವಾ ಅಂದದ ಮೈಸೂರಲ್ಲಿ ಚೆಂದಾಗಿ ಕುಳಿತ ನಮ್ಮವರಿಗೆ ಬೇರೆಡೆಗೆ ಹೋಗಬೇಕೆಂಬ ಮನಬರಲಿಲ್ಲವೋ ಅಥವಾ ಹೋದರೂ ಬರೆದಿಡುವ ಹವ್ಯಾಸ ಅವರಲ್ಲಿರಲಿಲ್ಲವೋ ತಿಳಿಯದು. ಅಂತೂ ಆಗಿನ ಪ್ರವಾಸ ಸಾಹಿತ್ಯದ ಬೆಳೆ ಹುಲುಸಾಗಿಲ್ಲ. ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರ 'ವರ್ಧಾಯಾತ್ರೆ', ಶ್ರೀ ವಿ. ಸೀತಾರಾಮಯ್ಯನವರ 'ಪಂಪಾಯಾತ್ರೆ' ಮತ್ತು ಶ್ರೀ ಮಾಸ್ತಿ ನರಸಿಂಗರಾಯರ 'ಕನ್ನಡಯಾತ್ರೆ-ಭಾಗ-೧' ಇವು ಪ್ರಸಿದ್ಧವಾದುವುಗಳು.

'ವರ್ಧಾಯಾತ್ರೆ' ನನ್ನ ದೃಷ್ಟಿಯಲ್ಲಿ ಕೇವಲ ಪ್ರವಾಸ ಲೇಖನವಷ್ಟೇ ಅಲ್ಲ, ಅದು ಕನ್ನಡ ಸಾಹಿತ್ಯದಲ್ಲಿನ ಅತ್ಯಮೂಲ್ಯ ಕೃತಿಗಳಲ್ಲಿ ಒಂದು. ಇಂತಹ 'ಪವಿತ್ರಯಾತ್ರೆಯ ತೀರ್ಥಸಾಹಿತ್ಯ'ವನ್ನು ಪಡೆದ ಕನ್ನಡಿಗರು ಧನ್ಯರು. ಕನ್ನಡದ ಹಿರಿಯ ಕವಿ ಶ್ರೀ ಬೇಂದ್ರೆಯವರು, 'ವಿಭೂತಿಯಿರದ ಸ್ಥಳವು ಯಾತ್ರೆಗೆ ಯೋಗ್ಯವಲ್ಲ, ದೋಷ ತಗ್ಗಿಸಿ ಗುಣ ಹಿಗ್ಗಿಸದ ಯಾತ್ರೆ ಯಾತ್ರೆಯಲ್ಲ. ಶರ್ಮರ 'ವರ್ಧಾಯಾತ್ರೆ'ಯು ಓದುಗರಲ್ಲಿಯೂ ಈ ಪರಿಣಾಮ ಮಾಡದೆ ಬಿಡದು' ಎಂದು ನುಡಿದಿದ್ದಾರೆ.*

---

† ನೋಡಿ—'ಮಾರ್ಕೊ ಪೋಲೋ ಪ್ರವಾಸ ಕಥನ'—ಶ್ರೀ ಹೆಚ್. ಎಲ್. ನಾಗೇಗೌಡ.

* 'ವರ್ಧಾಯಾತ್ರೆ'-ಮುನ್ನುಡಿ-ಪುಟ ೬.

ನಾಡಿನ ಪುಣ್ಯಜೀವಿಗಳಾದ ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರು ಬಾಪೂಜಿಯವರೊಡನೆ ವರ್ಧಾದಲ್ಲಿ ಹಲವು ದಿನಗಳ ತನಕ ಇದ್ದು, ಅವರ ಶಿಷ್ಯಕೋಟಿಯಲ್ಲಿ ತಾವೂ ಒಬ್ಬರಾಗಿ ತಮ್ಮ ಬಾಳನ್ನು ಸಾರ್ಥಕಪಡಿಸಿಕೊಂಡಿದ್ದಾರೆ. ಆ ಪುಣ್ಯಾತ್ಮನ ಪವಿತ್ರಕ್ಷೇತ್ರದಲ್ಲಿ ನಡೆಯುತ್ತಿದ್ದ, ಆಚರಿಸುತ್ತಿದ್ದ, ಅನುಸರಿಸುತ್ತಿದ್ದ ನಿತ್ಯದ ನಿಯಮಗಳನ್ನು ಚಿತ್ರಿಸಿದ್ದಾರೆ. ಸ್ವತಂತ್ರ ಭಾರತದ ಶ್ರೇಷ್ಠ ಶಿಲ್ಪಿಗಳೆಲ್ಲರ ಪರಿಚಯ ಅಲ್ಲಿ ನಮಗಾಗುತ್ತದೆ. ವಿಭೂತಿಪುರುಷ ಗಾಂಧೀಜಿ, ಕಸ್ತೂರಿಬಾ, ದೀನಬಂಧು ಆಂಡ್ರೂಸ್, ನೇಗಿಲಯೋಗಿ ಬುಲ್ಲನ್ (ಬುಳ್ಳೇಗೌಡ), ಮಗನವಾಡಿಯ 'ಮೂವಿಂಗ್ ಆಫೀಸ್' ಕುಮಾರಪ್ಪ, ಆಚಾರ್ಯ ಕೃಪಲಾನಿ, ಮಿರಾಬೆನ್, ಶಾಂತಾಬೆನ್, ಕಾಕ ಕಾಲೇಲಕರ್, ಮಹದೇವ ದೇಸಾಯಿ, ರಾಜಕುಮಾರಿ ಅಮೃತಕೌರ್, ಜವಹರಲಾಲ್ ನೆಹರೂ, ರಾಜೇಂದ್ರ ಪ್ರಸಾದ್, ಗಾಂಧೀಮಠದ ಮಹಂತ ಜಮನಾಲಾಲ್, ಡಾ|| ಸುಶೀಲಾ ನಾಯರ್, ಮೊದಲಾದವರು; ಅಲ್ಲದೆ, ಬಾಪೂಜಿಯವರ ಪರ್ಣಕುಟಿ, ಬಜಾಜವಾಡಿಯ ಬಂಗಲೆ, ಮಗನವಾಡಿ ಮತ್ತು ಮಗನವಾಡಿಯ ಸಂಗ್ರಹಾಲಯ, ಜಮುನಾ ಕುಟೀರ, ಸೇಗಾಂವ್, ನಾಲವಾಡಿ ಮೊದಲಾದ ಪುಣ್ಯಸ್ಥಳಗಳ ದರ್ಶನವೂ ಲಭಿಸುತ್ತದೆ. ಬಾಪೂಜಿಯವರ ದಿನಚರಿ, ಅವರ ಶಿಷ್ಯಸಮೂಹದ ಆಚರಣೆ ಮತ್ತು ಸಾಮೂಹಿಕ ಪ್ರಾರ್ಥನೆ ಇತ್ಯಾದಿಗಳು ವರ್ಣನಾತೀತ. ಆಗಾಗ ನುಡಿಯುತ್ತಿದ್ದ ವಿನೋದದ ನುಡಿಗಳಲ್ಲಿ ತಿಳಿಹಾಸ್ಯವಿದೆ. ಅದನ್ನು ತಮ್ಮದೇ ಆದ ಶೈಲಿಯನ್ನು ಸಂಪಾದಿಸಿ, ಸ್ಥಾಪಿಸಿರುವ ಶ್ರೀ ಶರ್ಮರ ನುಡಿಗಳಲ್ಲೇ ಕೇಳಬೇಕು. ಬಾಪೂಜಿಯವರು ಗಾಳಿಸಂಚಾರಕ್ಕೆ ಹೊರಟಾಗ ಶ್ರೀಮತಿ ಸುಶೀಲಾ ನಾಯರ್ ಅವರ ಹೆಗಲಮೇಲೆ ಕೈಯೂರಿ ನಡೆಯುತ್ತಿದ್ದ ಸಂಗತಿ ಮಹಾರಾಷ್ಟ್ರದ ಪತ್ರಿಕೆಯೊಂದರಲ್ಲಿ ಗೇಲಿಗೆ ಆಹಾರವಾದದ್ದನ್ನೂ ಶ್ರೀ ಶರ್ಮರು ನೊಂದು ನುಡಿದಿದ್ದಾರೆ. ಅಲ್ಲಿಯ ಶಿಕ್ಷಣ ವಿಧಾನದ ಬಗ್ಗೆ ಸಿದ್ದವ್ವನಹಳ್ಳಿಯವರ ಒಂದು ಮಾತು – "ವರ್ಧಾ ಶಿಕ್ಷಣ ವಿಧಾನದಲ್ಲಿ ಏನೇನು ಅಡಗಿದೆಯೋ ಕಾಲವೇ ತಿಳಿಸಬೇಕು. ಆದರೆ ನಾವು ಕಲಿತ ವಿದ್ಯೆಗೆ ಜೀವನವು ಗಾವುದ ಗಾವುದ ದೂರ ನಿತ್ತೆಂಬುದು ಮಾತ್ರ ನನಗೆ ತಿಳಿದಿತ್ತು. ಅಂತೇ ಜೀವನದ ನಿಕಟ ಸಂಬಂಧವನ್ನು ಮನಸ್ಸಿನಲ್ಲಿಯೇ ಮೆಲುಕು ಹಾಕುತ್ತಾ ಹಿಂತಿರುಗಿದೆ."*

ಶ್ರೀಯುತ ವಿ. ಸೀ. ಅವರ 'ಪಂಪಾಯಾತ್ರೆ' ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಬೇರೊಂದು ಮಜಲು. ಇಂದಿನ ಪ್ರಯಾಣ ಸೌಕರ್ಯಗಳಿಲ್ಲದ, ಸರಿಯಾದ ರಸ್ತೆ ಇಲ್ಲದ ಕಾಲದಲ್ಲಿ, ಕನ್ನಡ ಭಾಷೆ, ಕನ್ನಡ ಸಂಸ್ಕೃತಿ, ಹಾಗೂ ಶಿಲ್ಪ ಶಾಸ್ತ್ರದ ಗಂಧವೇ ಇಲ್ಲದ ಮದರಾಸಿ 'ಗೈಡ್' ಇಲ್ಲದೇ ಇದ್ದ ಕಾಲದಲ್ಲಿ ವಿ. ಸೀ. ಅವರು ಪ್ರವಾಸ ಕೈಕೊಂಡಿದ್ದರು. ಆದು 'ಪಂಪಾಯಾತ್ರೆ'. ಅವರ ಪ್ರವಾಸ ತಮಾಷೆಯಿಂದಲೇ ಆರಂಭವಾಗುತ್ತದೆ. ಉದ್ದಕ್ಕೂ ಹಾಗೇ. ಅಲ್ಲಲ್ಲಿ ಶ್ರೀಯುತರ Running Commentary, ಕುಚೇಷ್ಟೆ ಮಾತುಗಳು ಕೇಳಿಸುತ್ತವೆ. ಕಮಲಾಪುರದಲ್ಲಿ ಅವರು ಒಂದು ರಾತ್ರಿ ಪಟ್ಟ ಅವ್ಯವಸ್ಥೆ ದೇವರಿಗೆ ಪ್ರೀತಿ! ಚೇಳುಗಳಿಗೆ ಹೆದರಿದ್ದನ್ನು ನೆನೆದರೆ ನಗು ಸೋಲುತ್ತೆ. ಶ್ರೀಯವರು ತಮ್ಮ ಇವರ ಜೊತೆ ಪ್ರವಾಸಿಗರೊಂದಿಗೆ ಹಂಪೆಯ ಹಲವು ಭಗ್ನಾವಶೇಷಗಳನ್ನು, ಅವುಗಳ ಮಹತ್ವ ಮಾಹಿತಿಗಳನ್ನು ಸದ್ಯದ ದುಃಸ್ಥಿತಿಯನ್ನು ನೊಂದು ನುಡಿಯುತ್ತಾರೆ. ಅನೇಕ ಮುರುಕು ದೇವಾಲಯಗಳನ್ನು, ಹರುಕು ವಿಗ್ರಹಗಳನ್ನು ನೋಡಿದ್ದಲ್ಲದೆ ರಾತ್ರಿ ಅವರ ಕಾಲಿನ ಜೋಡು ಹರಿದು, ಅವರ ಕೈಸೇರಿ ಕಡೆಗೆ ಹಾಳು ಹಂಪೆಯ ಪಾಳುಭೂಮಿ ಸೇರಿದ ಪ್ರಸಂಗ ತುಂಬಾ ಹಾಸ್ಯಪೂರ್ಣವಾಗಿದೆ. ಪಂಪಾ ಸರೋವರ, ಪಂಪಾ ಕ್ಷೇತ್ರದ ಪವಿತ್ರ ಸಂದರ್ಶನ ನಮಗೂ ಆಗುತ್ತದೆ.

ನಾನು ಮೆಚ್ಚಿದ ಮತ್ತೊಂದು ಪ್ರವಾಸ ಸಾಹಿತ್ಯ ಗ್ರಂಥ, ಶ್ರೀಯುತ ಮಾನ್ವಿ ನರಸಿಂಗರಾಯರ 'ಕನ್ನಡ ಯಾತ್ರೆ.' ಕವಿವರ ಬೇಂದ್ರೆಯವರ ಘನ ಅಧ್ಯಕ್ಷತೆಯಲ್ಲಿ, ಶಿವಮೊಗ್ಗೆಯಲ್ಲಿ, ನಡೆದ ಇಪ್ಪತ್ತೇಳನೆಯ ಸಾಹಿತ್ಯ ಸಮ್ಮೇಳನವೇ ಈ ಗ್ರಂಥದ ಮುಖ್ಯ ವಸ್ತು. ಶ್ರೀಯುತ ಮಾನ್ವಿಯವರು ತಮ್ಮ ಗೆಳೆಯರೊಂದಿಗೆ ಹೈದರಾಬಾದಿನಿಂದ ಹೊರಟು ಶಿವಮೊಗ್ಗೆ ತಲುಪಿ, ಅಲ್ಲಿನ ಎರಡು ಮೂರು ದಿನಗಳ ಕಾರ್ಯಕ್ರಮದಲ್ಲಿ ಭಾಗವಹಿಸಿ, ಉಡುಪಿಯ ಶ್ರೀಕೃಷ್ಣ ದರ್ಶನವನ್ನು ಪಡೆದು ತೌರಿಗೆ ಹಿಂದಿರುಗಿದವರೆಗಿನ ತಮ್ಮ ಅನುಭವವನ್ನು ನಿಸ್ಸಂಕೋಚ ಬುದ್ಧಿಯಿಂದ ಬಿತ್ತರಿಸಿದ್ದಾರೆ. ಕನ್ನಡ ನುಡಿ, ಕನ್ನಡ ಸಾಹಿತ್ಯ ಪರಿಷತ್ತಿನ ಬಗ್ಗೆ ತುಂಬಾ ಅಭಿಮಾನಿಗಳಾದ ಇವರು ಕನ್ನಡಮ್ಮನ ಬಗ್ಗೆ ಸದ್ಭಕ್ತಿಯನ್ನು ತಳೆದು, 'ಕನ್ನಡ ಯಾತ್ರೆ' ಎಂದು ಹೆಸರಿಟ್ಟಿದ್ದಾರೆ ತಮ್ಮ ಈ ಕಿರು ಹೊತ್ತಗೆಗೆ. ಏಕೆಂದರೆ ನಾಡದೇವಿಯ ಸೇವೆಗಾಗಿ ನಾಡಿನ ಭಕ್ತವೃಂದ ಸೇರುವ ಜಾಗ ಪವಿತ್ರ ಕ್ಷೇತ್ರವೆಂದೇ ಅವರ ಭಾವನೆ. ಅಲ್ಲಿಗೆ ಕೈಕೊಳ್ಳುವ ಪ್ರವಾಸ ಒಂದು ಪವಿತ್ರ ತನು ಯಾತ್ರೆ.

---

*'ವರ್ಧಾಯಾತ್ರೆ' – ಪುಟ ೪೩.

ಶ್ರೀಯುತ ಮಾನ್ವಿಯವರು ನಿರ್ದಾಕ್ಷಿಣ್ಯ ಸ್ವಭಾವದವರು. ಶಿವಮೊಗ್ಗೆಯ ಸಮ್ಮೇಲನದ ವ್ಯವಸ್ಥಾಪಕರ ಅವ್ಯವಸ್ಥೆಯನ್ನು ಕಟುವಾಗಿ ಟೀಕಿಸಿದ್ದಾರೆ; ಪರಿಹಾರ ಸೂಚಿಸಿದ್ದಾರೆ. ಅವರ ಹಲವು ಮಾತುಗಳಲ್ಲಿ ಹಾಸ್ಯ ಕಂಡು ಬಂದರೂ ಆಂತರ್ಯದಲ್ಲಿ ಕಠೋರ ಸತ್ಯ ಅಡಗಿದೆ. ಅವು ಮಿಂಚಿನ ಚಾಟಿಯ ಏಟುಗಳಲ್ಲದೆ ಬೇರೆ ಅಲ್ಲ. ಶ್ರೀ ಡಿ. ಕೆ. ಭೀಮಸೇನರಾಯರು ಪುಸ್ತಕದ ಮುನ್ನುಡಿಯಲ್ಲಿ ಹೇಳಿರುವಂತೆ 'ಎಲ್ಲ ಕಾಲದಲ್ಲಿ ಇದನ್ನೋದಿ ಆನಂದಪಡಬಹುದಾಗಿದೆ.'

ಸ್ವಾತಂತ್ರ್ಯಾನಂತರದಲ್ಲಿ ಪ್ರವಾಸ ಲೇಖನಗಳು ಬಹಳ ಹೆಚ್ಚಿನ ಸಂಖ್ಯೆಯಲ್ಲಿ ಸಿಕ್ಕುತ್ತವೆ. ಪ್ರಮುಖವಾಗಿ ಶ್ರೀ ಶಿವರಾಮ ಕಾರಂತರ, 'ಅಬೂವಿನಿಂದ ಬರಾಮಕ್ಕೆ' ಮತ್ತು 'ಅಪೂರ್ವ ಪಶ್ಚಿಮ' ಶ್ರೇಷ್ಠ ಕೃತಿಗಳು. 'ಅಪೂರ್ವ ಪಶ್ಚಿಮ' ಕನ್ನಡ ಪ್ರವಾಸ ಸಾಹಿತ್ಯದ ಒಂದು ಮೈಲಿಗಲ್ಲು. ಡಾ|| ಜಿ. ಮರುಳಸಿದ್ದಯ್ಯನವರ 'ಭಾರತ ಪ್ರವಾಸ ಚಿತ್ರಗಳು' ಶ್ರೀ ಮ. ನ. ಮೂರ್ತಿಯವರ 'ನಮ್ಮ ಪ್ರವಾಸ', ಶ್ರೀ ಗುಂಡ್ಮಿ ಚಂದ್ರಶೇಖರ ಐತಾಳರ, 'ಸೌಂದರ್ಯದ ಸಾನ್ನಿಧ್ಯದಲ್ಲಿ' ಮತ್ತು ಶ್ರೀ ರಾಮಕೃಷ್ಣಾಶ್ರಮದ ಯತಿಗಳ ಪ್ರವಾಸ ಲೇಖನಗಳು, ಶ್ರೀ ಸೋಮನಾಥಾನಂದರ, 'ಹೈಮಾಚಲ ಸಾನ್ನಿಧ್ಯದಲ್ಲಿ' (ಹರಿದ್ವಾರದಿಂದ ಕೇದಾರ-ಬದರಿಗೆ) ಮತ್ತು ಶ್ರೀ ಸ್ವಾಮಿ ಜ್ಞಾನ ಘನಾನಂದರ 'ಕೈಲಾಸ-ಮಾನಸ ಸರೋವರ ಯಾತ್ರೆ' (ನೀಲಗಿರಿಯಿಂದ ಹಿಮಗಿರಿಯವರೆಗಿನ ಯಾತ್ರೆ) ಇವು ಸ್ವತಂತ್ರ ಸ್ವಾನುಭವದ ಕೃತಿಗಳು. ಶ್ರೀ ಸ್ವಾಮಿ ವಿವೇಕಾನಂದರ 'ಕೊಲಂಬೊಯಿಂದ ಆಲ್ಮೋರಕೆ' ಒಂದು ಭಾಷಾಂತರ ಗ್ರಂಥವೂ ಪ್ರಸಿದ್ಧವಿದೆ. ಶ್ರೀ ವಿವೇಕಾನಂದರ ಸಾಂಸ್ಕೃತಿಕ ದರ್ಶನ ದೇದೀಪ್ಯಮಾನವಾಗಿ ಬೆಳಗಿ ಜಗತ್ತಿನ ಕಣ್ತೆರಿಸಿದ ಲೇಖನಗಳು ವಿಪುಲವಾಗಿವೆ. ಚಿಕಾಗೊದಲ್ಲಿ ನಡೆದ ಸರ್ವ ಧರ್ಮ ಸಮ್ಮೇಳನದಲ್ಲಿ ಭಾಗವಹಿಸಿ 'ಸಮನ್ವಯ ತತ್ವ ಸಾರಿ' ಜನತೆಯನ್ನು ಜಾಗೃತಗೊಳಿಸಿದ ಸಿಂಹವಾಣಿ ಇಂದಿಗೂ ಎಲ್ಲರೆದೆಯ ಗಹ್ವರಗಳಲ್ಲೂ ಮಾರ್ದನಿಗುಡುತ್ತಿದೆ.

ಶ್ರೀ ವೆಂಕಟಯ್ಯನವರ 'ಚಿನ್ನದ ಗಿರಿ ಯಾತ್ರೆ' ಮತ್ತೊಂದು ಪ್ರವಾಸ ಗ್ರಂಥ. ತಿರುಪತಿಯ ಯಾತ್ರೆಯ ವಿಷಯವೇ ಅದರ ವಸ್ತು.

ಪ್ರವಾಸ ಸಾಹಿತಿಗಳನ್ನು ಸೃಷ್ಟಿಸಿದಂತೆ, ರೂಪಿಸಿದಂತೆ ವಿಜ್ಞಾನಿಗಳನ್ನೂ ಜಗತ್ತಿಗೆ; ನೀಡಬಲ್ಲುದೆಂಬುದಕ್ಕೆ ಚಾರ್ಲಸ್ ಡಾರ್ವಿನ್ ಕೈಗೊಂಡ 'ಬೀಗಲ್ ಪ್ರವಾಸ' ಉತ್ತಮ ನಿದರ್ಶನ. ಮಾನವನ ಮತಿ ವಿಕಾಸಕ್ಕೂ ಇದು ಹೇತುವಾಗುತ್ತದೆ. ಇಂತಹ ಪ್ರವಾಸಗಳಿಂದ ಹೊರಬಂದ ಸಾಹಿತ್ಯ ಕಟ್ಟುಕಥೆಯೆನ್ನಿಸದೆ ಜೀವಂತ ಸಾಹಿತ್ಯವಾಗಿ ವಿಶ್ವ ಸೌಹಾರ್ದ ಸಾಧಕವೂ ಆಗುತ್ತದೆ. ಇಂತಹ ಅಮೂಲ್ಯ ಸಾಹಿತ್ಯ ಸೃಷ್ಟಿ ಕನ್ನಡದಲ್ಲೂ ಸತತವಾಗಿ ಸಾಗಿಬರಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.



ಕನ್ನಡ ಸಾಹಿತ್ಯ ಪರಿಷತ್ತಿನ ಕಟ್ಟಡ

# ಕನ್ನಡ ಪತ್ರಿಕೋದ್ಯಮ

ಲೇಖಕರು : ಶ್ರೀ ಎನ್. ನಾರಾಯಣ ಬಲ್ಲಾಳ

WERE IT LEFT TO ME to decide whether we should have a government without news-papers or news-papers without government, I would not hesitate a moment to prefer the latter.

—THOMAS JEFERSON

ಕನ್ನಡ ಪತ್ರಿಕೋದ್ಯಮದ ಬೆಳವಣಿಗೆಯ ಕುರಿತು ನಾವು ವಿವೇಚಿಸುವಾಗ ಹಲವಾರು ಸ್ಪಷ್ಟ ವಿಚಾರಗಳ ಅವಲೋಕನ ನಡೆಸಲೇ ಬೇಕಾಗುತ್ತದೆ. ಪತ್ರಿಕೋದ್ಯಮವು ರಾಜ್ಯದ ನಾಲ್ಕು ಪ್ರಮುಖ ಅಸ್ತಿವಾರಗಳಲ್ಲೊಂದೆಂದು ವಿಶ್ವದ ಎಲ್ಲ ಪ್ರಭುತ್ವ ರಾಷ್ಟ್ರಗಳೂ ಒಪ್ಪುತ್ತವೆ. ದೇಶದ ಸರ್ವಾಂಗೀಣ ಪ್ರಗತಿಯ ಅಳತೆಗೋಲುಗಳಲ್ಲಿ ಪತ್ರಿಕೋದ್ಯಮಕ್ಕೂ ಗಣನೀಯ ಸ್ಥಾನವಿದೆ ಎಂಬುದನ್ನು ಯಾರೂ ಒಪ್ಪಲೇಬೇಕು.

ಕನ್ನಡದ ಪ್ರಥಮ ಪತ್ರಿಕೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಾಸೆಲ್ ಮಿಶನ್‌ಗಳಿಂದ ಪ್ರಾರಂಭಿಸಲ್ಪಟ್ಟಿತೆಂಬ ಉಲ್ಲೇಖವಿದೆ. ಇಡೀ ದೇಶದಲ್ಲೇ ಪತ್ರಿಕೋದ್ಯಮದ ಬಗೆಗೆ ಅಂಧಕಾರವಿದ್ದಾಗಲೇ ಕನ್ನಡ ನಾಡಿನಲ್ಲಿ ಪತ್ರಿಕೆಯ ಜನ್ಮವಾದುದು ಉಲ್ಲೇಖನೀಯವಾದ ವಿಚಾರ. ಆದರೆ ಪತ್ರಿಕೋದ್ಯಮದ ಚರಿತ್ರೆ ಪ್ರಾರಂಭವಾದುದು ಇಪ್ಪತ್ತನೇ ಶತಮಾನದ ಪೂರ್ವಾರ್ಧದ ಕೊನೆಯ ವರ್ಷಗಳಲ್ಲೇ.

ದ್ವಿತೀಯ ಮಹಾಯುದ್ಧದ ಸುಳಿಗಾಳಿಯು ಸುಂಟರಗಾಳಿಯಂತೆ ನಮ್ಮ ದೇಶದ ಜನಸಾಗರವನ್ನು ಅಲ್ಲೋಲ-ಕಲ್ಲೋಲ ಮಾಡುವ ತನಕವೂ ಕನ್ನಡದ ಪತ್ರಿಕೋದ್ಯಮ ಕೆಲವು ವರ್ಷಗಳ ತನಕ ಒಂದು ವಿಧದ ಸ್ಪರ್ಧೆಯಿಂದಲೇ ಬೆಳೆದು ಬಂತು. ೧೯೩೩ ರಿಂದ ೧೯೩೬ ರ ತನಕ ಪತ್ರಿಕೋದ್ಯಮವು ಸುವ್ಯವಸ್ಥಿತವಾಗಿ ಮೆಲ್ಲ-ಮೆಲ್ಲನೆ ಮೇಲಿದ್ದು ಬರುತ್ತಿದ್ದರೆ, ೧೯೩೬ ರಿಂದ ೧೯೩೯ ರ ತನಕ ಒಂದೇ ಸವನೆ ಪತ್ರಿಕಾ ಪ್ರಪಂಚದಲ್ಲಿ ಕ್ರಾಂತಿ ಎದ್ದಿತೆನ್ನಬಹುದು. ಆಗಲೂ ಕನ್ನಡದ ಪತ್ರಿಕೋದ್ಯಮದಲ್ಲಿ ಸಂಯುಕ್ತ ಕರ್ನಾಟಕ, ಲೋಕಮತ, ತಾಯಿನಾಡು, ವಿಶ್ವಕರ್ನಾಟಕ ದಂತಹ ಪ್ರಭಾವಿ ದೈನಿಕ ಪತ್ರಿಕೆಗಳು ಜನ ಜಾಗೃತಿಗೊಳಿಸುವಷ್ಟು ಶಕ್ತಿಶಾಲಿಯಾಗಿತ್ತೆಂಬುದನ್ನ ಒತ್ತಿ ಹೇಳಬೇಕಾಗಿದೆ. ವಾರಪತ್ರಿಕೆಗಳಲ್ಲಿ ಪ್ರಜಾಮತ, ಪ್ರಭಾತ, ರಾಷ್ಟ್ರಬಂಧು, ಕಂಠೀರವ, ಸ್ವದೇಶಾಭಿಮಾನಿ, ನವಯುಗ, ಕರ್ನಾಟಕ ವೈಭವ, ಕರ್ನಾಟಕ ಬಂಧುಗಳೂ ವರ್ಣನೀಯವಾಗಿ ಸೇವೆ ಸಲ್ಲಿಸುತ್ತಿದ್ದವು. ಈ ಕಾಲದಲ್ಲೇ ಸಂಪೂರ್ಣ ಹೊಸ ಮಾದರಿಯ—ಆಂಗ್ಲ ಭಾಷಾ ಪತ್ರಿಕೆಗಳಿಗೆ ಸರಿಸಾಟಿ ಎನಿಸಿದ—ವೈವಿಧ್ಯಪೂರ್ಣವಾದ ವಾರಪತ್ರಿಕೆ 'ಅಂತರಂಗ'ದ ಜನನವಾಯಿತು. ಈ ಪತ್ರಿಕೆಯು ಕನ್ನಡ ಪತ್ರಿಕಾ ವ್ಯವಸಾಯದಲ್ಲೊಂದು ಹೊಸ ಅಧ್ಯಾಯ ನಿರ್ಮಾಣ ಮಾಡಿತು. ಪತ್ರಿಕೆಗಳೆಂದರೆ ದೈನಿಕ ಪತ್ರಿಕೆಗಳ ಸುದ್ದಿ ಸಂಗ್ರಹದ ಸಂಕ್ಷೇಪಿತ ರೂಪ, ಸ್ಥಳೀಯ ವಾರ್ತೆಗಳ ಕೋಲಾಹಲ ಹಾಗೂ ಒಂದೆರಡು ಕಗ್ಗ ಕತೆಗಳ ಹೊಂದಿಕೆ ಎಂಬ ಭಾವ ಮಾಯವಾಗಿ, ವಾರಪತ್ರಿಕೆಯೂ ಸಂಗ್ರಾಹ್ಯವಾದ ಸಂಚಿಕೆ ಎನಿಸಬಹುದೆಂದು ಜನ ತಿಳಿಯುವಂತಾಯಿತು. ಈ ರೀತಿ ಹೊಸ ಸ್ಫೂರ್ತಿ ತಲೆದೋರಿದೊಡನೆ ಉಳಿದ ಪತ್ರಿಕೆಗಳವರೂ ಜಾಗೃತರಾದರು. ಕನ್ನಡದ ವಾರಪತ್ರಿಕೆಗಳು ಇತರ ದೇಶೀಯ ಭಾಷಾ ಪತ್ರಿಕೆಗಳವರ ಮಟ್ಟದಲ್ಲಿ ಪ್ರಕಟಗೊಳ್ಳತೊಡಗಿತು. ಆಗಲೇ ಕನ್ನಡದ ಮಾಸಪತ್ರಿಕೆಗಳೂ ಹೊಸ ಹುಮ್ಮಸ್ಸಿನಿಂದ ಪ್ರಕಟವಾಗತೊಡಗಿದುವು. ಕನ್ನಡ ಮಾಸಪತ್ರಿಕೆಗಳಲ್ಲಿ ಅದ್ವಿತೀಯ ಸ್ಥಾನವನ್ನು ಪಡೆದ ಕಥಾಂಜಲಿ, ಜಯಂತಿಗಳು ಮರಾಠಿ, ಹಿಂದೀ ಮಾಸಿಕಗಳ ಮಟ್ಟದಲ್ಲೇ ಪ್ರಕಟವಾಗುತ್ತಿತ್ತು. ಅಂತೆಯೇ ವಿಕಟ ವಿನೋದಿನಿ, ಜಯಕರ್ನಾಟಕ, ಕಥಾಕುಂಜ, ವಿಕಟಮಾವ, ನಗುವ ನಂದ, ಧುರೀಣಗಳು ಜನಪ್ರಿಯತೆ ಪಡೆದಿದ್ದುವು.

ಈ ರೀತಿ ಕನ್ನಡ ಪತ್ರಿಕೋದ್ಯಮದಲ್ಲಿ ಎಲ್ಲರ ಆಸೆ, ಆಸಕ್ತಿ, ಕೆರಳತೊಡಗಿದಾಗಲೇ ಆಸೆಯ ಜ್ವಾಲೆಗೆ ನೀರೆರೆದಂತೆ ದ್ವಿತೀಯ ಮಹಾಯುದ್ಧದ ಭೀಕರ ಕಾರ್ಮೋಡ ಜನರ ಆರ್ಥಿಕ ಸ್ಥಿತಿಯನ್ನೇ ಬುಡಮೇಲು ಮಾಡಿತು.

ಆರ್ಥಿಕತೆಯೂ, ಅಭಾವವೂ ಒಟ್ಟಾಗಿ ಪತ್ರಿಕೆಯ ರೂಪ ಬದಲಾಯಿಸಿತು. ಕೆಲವು ಪತ್ರಿಕೆಗಳು ಹೇಳಹೆಸರಿಲ್ಲವಾದುವು. ರಜತೋತ್ಸವದ ದಾರಿಯಲ್ಲಿದ್ದು, ಸುದೃಢ ಅಸ್ತಿವಾರದಲ್ಲಿದ್ದ ಪತ್ರಿಕೆಯೂ ವಿರೂಪಗೊಂಡು ಪ್ರಕಟವಾಯಿತು. ಸರಕಾರದ ಸುದ್ದಿ ನಿಯಂತ್ರಣ, ಯುದ್ಧಕ್ಷಾಮ, ಕಾಗದದ ಕ್ಷಾಮದಿಂದ ಪತ್ರಿಕೆಗಳ ಜೀವವೂ, ಜೀವನವೂ ದುಸ್ಸಹವಾಯಿತು. ಈ ಎಲ್ಲ ಆಘಾತದ ಮಧ್ಯೆಯೂ 'ವಾಹಿನಿ'ಯಂತಹ ಅತ್ಯುತ್ತಮ ದೃಷ್ಟಿಕೋನದ ವಾರಪತ್ರಿಕೆ ಕೆಲವು ಕಾಲ ನಡೆದು ಪತ್ರಿಕೋದ್ಯಮಕ್ಕೆ ಹೊಸ ಚೇತನ ತಂದುಕೊಟ್ಟಿತು.

ಉಷಾ, ಗರ್ಜನೆ, ಜೀವನ ದಂತಹ ಪತ್ರಿಕೆಗಳು ಜನ್ಮ ತಾಳಿದ್ದು ಇದೇ ಸಮಯದಲ್ಲಿ. 'ಕೊರವಂಜಿ' ಯಂತಹ ಉತ್ತಮ ವರ್ಗದ ಸಚಿತ್ರ ಹಾಸ್ಯಪತ್ರಿಕೆಯು ಕನ್ನಡಿಗರ ಮನೆ ಬೆಳಗಿಸಿದ್ದು ಇದೇ ಕಾಲದಲ್ಲೇ. ಹೀಗೆ ದ್ವಿತೀಯ ಮಹಾಯುದ್ಧವು ನೂರು ಕಷ್ಟ ತಂದುಕೊಟ್ಟಿತು. ನೂರಾರು ಪತ್ರಿಕೆಗಳ ನಾಡಿನಲ್ಲಿ ಬೆರಳೆಣಿಕೆಯ ಪತ್ರಿಕೆಗಳು ಉಳಿದು ಕೊಂಡವು. ಈ ಎಲ್ಲ ಸಂಕಷ್ಟಗಳಲ್ಲೂ ಸಂಯುಕ್ತ ಕರ್ನಾಟಕ, ತಾಯಿನಾಡು, ವಿಶ್ವಕರ್ನಾಟಕ ಪತ್ರಿಕೆಗಳು ಬೆಳೆದುಬಂದ ಸಾಹಸವನ್ನು ಯಾರಾದರೂ ಮೆಚ್ಚಲೇಬೇಕು.

ಯುದ್ಧ ಮುಗಿಯಿತು. ಯುದ್ಧದ ಬೆನ್ನಲ್ಲೇ ನಮ್ಮನ್ನು ಘಾಸಿ ಮಾಡಿದ ಆರ್ಥಿಕದುಬ್ಬರವು ಪತ್ರಿಕೆಗಳ ಜೀವವನ್ನೇ ಹಿಂಡಿ ಸಿಪ್ಪೆ ಮಾಡಿದ್ದುದನ್ನು ಯಾರೂ ಮರೆಯುವಂತಿಲ್ಲ. ಯದ್ಧಕಾಲದಲ್ಲೇ ದೇಶದಲ್ಲಿ ಹೊತ್ತಿದ ಸ್ವಾತಂತ್ರ್ಯದ ಕೆಚ್ಚು, ಅದನ್ನ ಧಮನಿಸಲು ಸರಕಾರ ಕೈಕೊಂಡ ನಿರ್ದಯ ಧೋರಣೆ, ಪತ್ರಿಕಾರಂಗದಲ್ಲಿ ಜಾರಿಗೊಳಿಸಿದ ಕರಾಳ ಶಾಸನ – ಈ ಎಲ್ಲ ವಿಘ್ನ ಪರಂಪರೆಗಳಲ್ಲೂ ನಾಡಿನ ಪತ್ರಿಕೆಗಳು ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ತಮ್ಮ ಕೈಲಾದ ಸೇವೆ ಸಲ್ಲಿಸಿ, ಸ್ವಾತಂತ್ರ್ಯ ಚಳವಳಕ್ಕೆ ಸ್ಫೂರ್ತಿಯನ್ನೂ, ಬೆಂಬಲವನ್ನೂ ನೀಡುತ್ತಲೇ ಇದ್ದುವು. ಇದರಿಂದಾಗಿ ಕನ್ನಡದ ಕೆಲವು ರಾಷ್ಟ್ರೀಯ ಪತ್ರಿಕೆಗಳು ಸರಕಾರದ ವಕ್ರದೃಷ್ಟಿಗೆ ಒಳಗಾಗಿ ಪೇಚಾಡಿದ್ದಿದೆ.

ನಾಡಿಗೆ ಸ್ವಾತಂತ್ರ್ಯ ಬಂದಿತು. ಅದರೊಂದಿಗೆ ಪತ್ರಿಕಾ ರಂಗದಲ್ಲೂ ನವಚೇತನ ಕಂಡುಬಂದಿತು. ಪತ್ರಿಕೆಯ ಪ್ರಕಟಣೆಯಲ್ಲಿ ತಾ ಮುಂದು, ನಾ ಮುಂದೆಂದು ಎಲ್ಲರೂ ಮುಂದಾಗತೊಡಗಿದರು. ಎಲ್ಲೆಲ್ಲೂ ಹೊಸ ಪತ್ರಿಕೆಗಳು – ಮಾಸಪತ್ರಿಕೆಗಳು ಸಂಖ್ಯೆಯಲ್ಲಿ ಹೆಚ್ಚಾದರೂ – ನವಯುಗ, ವಿಶಾಲಕರ್ನಾಟಕ, ಪ್ರಜಾವಾಣಿ, ಜನವಾಣಿಯಂತಹ ದೈನಿಕಗಳು ತಲೆಯೆತ್ತಿದುವು. ಮಂಗಳೂರಿನ 'ನವಭಾರತ' ಹೊಸ ವೈವಿಧ್ಯತೆ ಪಡೆಯತೊಡಗಿದ್ದು ಈ ಕಾಲದಲ್ಲೇ. ಮದ್ರಾಸಿನಿಂದ 'ಚಂದಮಾಮ' ಎಂಬ ಹೊಸ ಮಾದರಿಯ ಮಕ್ಕಳ ಸಚಿತ್ರ ಪತ್ರಿಕೆಯೂ ಒಂದು ವ್ಯಾಪಕವಾದ ವ್ಯವಸ್ಥೆಯೊಂದಿಗೆ ಪ್ರಕಟವಾಗತೊಡಗಿ, ಇಡೀ ಕನ್ನಡ ಜನಾಂಗವೇ ಪತ್ರಿಕಾ ರಂಗದತ್ತ ಕತ್ತೆತ್ತಿ ಹಣಕುವಂತೆ ಮಾಡಿತು. ಈ ಸಮಯದಲ್ಲೇ ಪತ್ರಿಕೋದ್ಯಮವೂ ಒಂದು ವ್ಯಾಪಾರ ಕಲೆ ಎಂದು ಹಾರೈಸಿ ಬಂದವರೂ ಇದ್ದಾರೆ. ತಾರುಣ್ಯದ ಹುಮ್ಮಸ್ಸಿನಲ್ಲಿ ಕೀರ್ತಿಯ ಬಿಸಿಲ್ಗುದುರೆಯ ಬೆನ್ನೇರಿ ಬಂದವರೂ ಇದ್ದಾರೆ. ಆದರೆ ಹುಟ್ಟಿದ ಪತ್ರಿಕೆಗಳು ಸಾವಿರ ಸಂಖ್ಯೆಯಲ್ಲಾದರೂ, ಅಳಸಿದ ಸಂಖ್ಯೆಯೂ ಅಷ್ಟೇ ಆಗುವಂತಾಯಿತು. ಹೀಗಾಗಿ ಪತ್ರಿಕೆಗಳ ಹುಟ್ಟು–ಸಾವು ಕ್ಷಣಿಕವಾಗತೊಡಗಿದಾಗ ಪತ್ರಿಕೆಯ ಸ್ಥಿರತೆಯ ಬಗ್ಗೆ ಜನ ಅನುಮಾನಪಡುವಂತಾಯಿತು. ಪತ್ರಿಕೆಯ ಗ್ರಾಹಕರು ಅದರ ಬದುಕಿನ ಕಡೆಗೆ ಸಾಶಂಕರಾಗಿ ನೋಡುವಂತಾಯಿತು. ಆದರೂ ಕನ್ನಡ ಪತ್ರಿಕೋದ್ಯಮ ಭರದಿಂದ ಮುನ್ನಡೆಯಿತು.

ಇಪ್ಪತ್ತನೇ ಶತಮಾನದ ಆರನೇ ದಶಕದ ಕೊನೆಯ ಹಂತದಲ್ಲಿ ನಾವಿಂದು ಇದ್ದೇವೆ. ಕನ್ನಡ ಪತ್ರಿಕೋದ್ಯಮ ಇಂದು ನಾಡಿನ ಇತರ ದೇಶ ಭಾಷಾ ಪತ್ರಿಕೆಗಳ ಸರಿಮಟ್ಟಕ್ಕೆ – ಕೆಲವೊಮ್ಮೆ ಮೇಲ್ಮಟ್ಟದಲ್ಲಿ ಕೂಡಾ – ಇರುವ ಶಕ್ತಿ ಪಡೆದಿದೆ. ಸ್ಪರ್ಧಾತ್ಮಕವಾಗಿ ಕೂಡಾ ಕನ್ನಡ ಪತ್ರಿಕೆ ಬಾಳಲು ಶಕ್ತಿಸಂಪನ್ನವಾಗಿದೆ.

ಕನ್ನಡದ ದೈನಿಕಗಳು ನಾಡಿನ ಪುನರ್ರಚನೆಯಲ್ಲಿ ಪ್ರಧಾನ ಸ್ಥಾನ ಪಡೆದಿವೆ. ಸಂಯುಕ್ತ ಕರ್ನಾಟಕ, ಪ್ರಜಾವಾಣಿಯಂತಹ ಪ್ರಭಾವಿ ದೈನಿಕಗಳು ಉಚ್ಚ ಮಟ್ಟದಲ್ಲಿ ತಮ್ಮದೇ ಆದ ವೈಶಿಷ್ಟ್ಯದಲ್ಲಿ ಪ್ರಕಟಗೊಳ್ಳುತ್ತಿದ್ದು ತಾಯಿನಾಡು, ಜನವಾಣಿ, ನವಭಾರತ ಕೂಡಾ ಜನಪ್ರಿಯತೆ ಸಂಪಾದಿಸುತ್ತಿವೆ. ದೈನಿಕ ಪತ್ರಿಕೆಗಳ ಶೀಘ್ರ ಗಮನಕ್ಕೆ ಹಾಗೂ ಶೀಘ್ರ ವಿತರಣೆಗೆ ಕನ್ನಡ ಲಿಪಿಯ ಆವಿಷ್ಕಾರವಾಗಬೇಕಾಗಿದೆ. ನಾವಿಂದು ರೋಟರಿ ಯಂತ್ರದ ಮೂಲಕ ದೈನಿಕಗಳನ್ನು ಅಚ್ಚುಹಾಕಿಸಬಹುದು. ಆದರೆ ಲಿಪಿ ಜೋಡಣೆಯಿಂದಲೇ ಪತ್ರಿಕೆಯ ಪುಟ ಸಿದ್ಧವಾಗಬೇಕಾಗಿರುವುದರಿಂದ ಕನ್ನಡ ಪತ್ರಿಕೆಗಳ ವಾರ್ತೆಗಳು ಸಾವಕಾಶ ಪ್ರಸಾರಗೊಳ್ಳಲು ಕಾರಣವೆನ್ನಬಹುದು. ಕನ್ನಡದ ಟೈಪ್‌ರೈಟರ್

ಬೇಕಾದಷ್ಟಿಲ್ಲದೆ ಸುದ್ದಿ ಸಂಪಾದಕರಿಗೊಂದು ಅಡಚಣೆಯಾಗಿದೆ. ಆದರೂ ನಮ್ಮ ದೈನಿಕಗಳು ಸುದ್ದಿ ಪ್ರಕಟಣೆಯಲ್ಲಿ ಇತರ ದೇಶಭಾಷಾ ಪತ್ರಿಕೆಗಳನ್ನು ಬಿಟ್ಟುಕೊಡುತ್ತಿಲ್ಲ.

ದೈನಿಕ ಪತ್ರಿಕೆಗಳ ಅಧಿಕ ಪ್ರಸಾರಕ್ಕೆ ಇನ್ನೊಂದು ತೊಂದರೆ ಎಂದರೆ ನಾಡಿನ ಸಾರಿಗೆ ಸಂಪರ್ಕದ ಅಭಾವ. ದೂರದ ಬೆಂಗಳೂರಿನಿಂದ ಅಥವಾ ಹುಬ್ಬಳ್ಳಿಯಿಂದ ಕರಾವಳಿ ನಗರಗಳಿಗೆ ರೈಲಿನ ಅನುಕೂಲತೆಯಿಲ್ಲ. ಸಣ್ಣ-ಪುಟ್ಟ ನದಿಗಳ ಉಪಟಳ ಬೇರೆ. ಮಾರ್ಗಗಳು ಇನ್ನೂ ಅಭಿವೃದ್ಧಿಗೊಳ್ಳಬೇಕಷ್ಟೆ. ನೇರವಾದ ರಹದಾರಿಗಳು ಇಲ್ಲ. ಈ ಎಲ್ಲ ತೊಂದರೆಗಳಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಪತ್ರಿಕೆಗಳು ವಿಳಂಬವಾಗಿಯೇ ತಲುಪಬೇಕಾಗಿದೆ. ಇದರಿಂದ ಜನ ಸ್ವಾಭಾವಿಕವಾಗಿ ಅನಾಸ್ಥೆ ತಳೆಯಲು ಸಾಧ್ಯವಿದೆ. ನಮ್ಮ ದೈನಿಕಗಳು ಸುದ್ದಿ ಸಂಪಾದನೆಯಲ್ಲಿ ಒಂದು ಘನವಾದ ಉದ್ದೇಶವಿಟ್ಟುಕೊಂಡಿದ್ದು, ಅದರ ಪ್ರಸಾರ ಹೆಚ್ಚಲು ಸಾಧ್ಯವಿದೆಯಾದರೂ ಶೀಘ್ರ ವಿತರಣೆಯ ಕೊರತೆಯಿಂದ ತಡೆದು ನಿಂತಿದೆ.

ವಾರಪತ್ರಿಕೆಗಳಲ್ಲಿ ಇಂದು ಕರ್ಮವೀರ, ಪ್ರಜಾಮತ, ಪ್ರಪಂಚ, ಜನಪ್ರಗತಿ ನಾಡಿನ ಜನಮನವನ್ನಾಕರ್ಷಿಬಲ್ಲ ಪ್ರಭಾವಿ ಪತ್ರಿಕೆಗಳು ಎನ್ನಬಹುದು. ಜಾಹೀರಾತುಗಳು ಪತ್ರಿಕೆಯ ಜೀವಾಳವೇನೋ ನಿಜ. ಆದರೆ ಅವು ಕಸದಂತೆ ಪತ್ರಿಕೆಯ ತುಂಬೆಲ್ಲ ಹರಡದೆ, ಅದೂ ಒಂದು ವಾಚನೀಯ ಸ್ಥಾನ ಪಡೆಯುವಂತೆ ಪತ್ರಿಕೆಯಲ್ಲಿ ಸ್ಥಾನ ಕಾದಿರಿಸಬೇಕು. ಕೆಲವು ಪತ್ರಿಕೆಗಳ ಮುದ್ರಣದಲ್ಲೂ ಸುಧಾರಣೆಯಾಗಬೇಕು. ಪತ್ರಿಕೆಯ ವಿಷಯ ವೈವಿಧ್ಯವು ಎಷ್ಟೇ ಮೇಲ್ಮಟ್ಟದ್ದಿದ್ದರೂ, ಮುದ್ರಣ ಚೆನ್ನಾಗಿಲ್ಲದೆ ಹೋದರೆ ಜನರಿಗೆ ತಾನಾಗಿ ಅಭಿರುಚಿ ಕರಗಲು ಸಾಧ್ಯವಿದೆ. ಅಲ್ಲದೆ ಇಂಗ್ಲೀಷಿನ 'Forum', 'Times' ಪತ್ರಿಕೆಗಳ ಮಟ್ಟದಲ್ಲಿ ಈ ಹಿಂದೆ ಪ್ರಕಟವಾಗುತ್ತಿದ್ದ 'ಅಂತರಂಗ', 'ವಾಹಿನಿ' ಪತ್ರಿಕೆಗಳಂತೆ ಒಂದು ಸಂಪಾದಿತ ಪತ್ರಿಕೆಯ ಅವಶ್ಯವಿದೆ. ಪ್ರಚಾರದೃಷ್ಟಿಯಲ್ಲೂ, ತತ್ವನಿಷ್ಠೆಯ ನಿರ್ಭಯ ವಿಚಾರ ಪ್ರಚೋದಕ ಸ್ಥಾನದಲ್ಲೂ 'ಕಿಡಿ', 'ಸಂಗಾತಿ' ಪತ್ರಿಕೆಗಳು ಸ್ವತಂತ್ರ ದೃಷ್ಟಿಕೋನದಿಂದ ಪ್ರಕಟಗೊಳ್ಳುತ್ತಿವೆ.

ಮಾಸ ಪತ್ರಿಕೆಗಳಲ್ಲಿ ಕನ್ನಡದಲ್ಲಿ ಇನ್ನೂ ವೈವಿಧ್ಯತೆ ತೋರಬೇಕಾಗಿದೆ. ಮಾಸಪತ್ರಿಕೆಗಳ ಅವಲೋಕನೆಯಲ್ಲಿ ಭದ್ರವಾದ ಸ್ಥಾನದಿಂದ ಪ್ರಕಟವಾಗುತ್ತಿರುವವು ಯಾವುದೂ ಇಲ್ಲವೆಂದೇ ಹೇಳಬಹುದು. 'ಚಂದಮಾಮ' ಜನಮನವನ್ನಾಕರ್ಷಿಸುವ ಸಾಧನವಾಗಿದ್ದರೂ, ಅದು ಒಂದು ಪ್ರತ್ಯೇಕ ವೈವಿಧ್ಯತೆಯಿಂದ ಕೂಡಿದೆ. ಜೀವನ, ಕೊರವಂಜಿ, ಜಯಂತಿ, ಕನ್ನಡ ನುಡಿ, ಪುಸ್ತಕ ಪ್ರಪಂಚದಂತಹ ಕೆಲವು ಪತ್ರಿಕೆಗಳ ಹೊರತು ಮತ್ತಾವ ಹೇಳಿಕೊಳ್ಳುವ ಪತ್ರಿಕೆಗಳು ನಿಯಮಿತ ಸಮಯದಲ್ಲಿ ಪ್ರಕಟವಾಗುತ್ತಿಲ್ಲ.

ಆದರೂ ಈಗ ಕಳೆದಾರು ವರ್ಷಗಳಿಂದ ಕನ್ನಡ ವಾಚಕರ ವಿಚಾರಶಕ್ತಿಗೆ ನವಚೇತನವನ್ನು ತಂದುಕೊಟ್ಟು, ಒಂದು ದೊಡ್ಡ ಸಾಧನೆಯಲ್ಲಿ ಸಂಯುಕ್ತ ಕರ್ನಾಟಕ ದೈನಿಕದ ವ್ಯವಸ್ಥಾಪಕರು ಯಶಸ್ವಿಯಾಗಿದ್ದಾರೆ. ಅದೇ "ಕಸ್ತೂರಿ." ಕನ್ನಡದ ಸರ್ವಾಂಗೀಣ ಪರಿಪೂರ್ಣವನ್ನು ಬಹುಮಟ್ಟಿಗೆ ಸಾಧಿಸಿದ ಒಂದು ಪತ್ರಿಕೆ ಇದ್ದರೆ ಅದು "ಕಸ್ತೂರಿ." 'ರೀಡರ್ಸ್ ಡೈಜೆಸ್ಟ್'ನ ಮಾದರಿಯಲ್ಲಿ ಪ್ರಕಟವಾಗುತ್ತಿದ್ದು, ಜನರ ಸಾಹಿತ್ಯಿಕ ದಾಹವನ್ನು ಕಡಮೆ ಮಾಡುವಲ್ಲಿ ಈ ಪತ್ರಿಕೆ ಜಯ ಪಡೆದಿದೆ.

ಆದರೂ ಮರಾಠಿಯ 'ಕಿರ್ಲೋಸ್ಕರ್', 'ಸ್ತ್ರೀ' ಇಂಗ್ಲೀಷಿನ 'ಫಿಲಂಫೇರ್'ನಂತಹ ಪತ್ರಿಕೆಗಳು ಇನ್ನೂ ಕನ್ನಡಕ್ಕೆ ಬೇಕಾಗಿವೆ.

ಒಟ್ಟಿನಲ್ಲಿ ಕನ್ನಡ ಪತ್ರಿಕೋದ್ಯಮ ಆಶಾಜನಕವಾಗಿದೆ. ಆ ರಂಗದಲ್ಲಿ ಹುಮ್ಮಸ್ಸಿನ ವಾತಾವರಣವಿದೆ. ಆದರೆ ಆ ರಂಗದಲ್ಲಿ ಸುವ್ಯವಸ್ಥಿತವಾದ ಯೋಗ್ಯ ಜನರ ಕೈವಾಡ ಇನ್ನೂ ಬೆಳೆದುಬರಬೇಕಾಗಿದೆ. ಆ ಶುಭ ಚಿಹ್ನೆ ಇದೀಗ ಕಂಡುಬರುತ್ತಿರುವುದು ನಿಜಕ್ಕೂ ಹೆಗ್ಗಳಿಕೆಯ ವಿಷಯವಾಗಿದೆ.



# ಕನ್ನಡನಾಡಿನ ಶಿಲ್ಪ ವೈಭವ



ಬೇಲೂರು ದೇವಸ್ಥಾನದ ಚಿತ್ರ-ಪೂರ್ವಮುಖ



ಬೇಲೂರು ದೇವಸ್ಥಾನದ ಶಿಲಾಬಾಲಿಕೆ ವಿಗ್ರಹ



ಬೇಲೂರು ದೇವಸ್ಥಾನದ ಶ್ರೀ ಚನ್ನಕೇಶವಸ್ವಾಮಿ



ಹಂಪೆಯ ನೋಟ

# ಹರಿದಾಸ ಸಾಹಿತ್ಯ

ಲೇಖಕರು: ಶ್ರೀ ಸುಬೋಧ ಎಂ. ರಾಮರಾವ್

ಕನ್ನಡ ವಾಙ್ಮಯದ ಧಾರ್ಮಿಕ ಗ್ರಂಥ ಶ್ರೇಣಿಯಲ್ಲಿ ಹರಿದಾಸ ಸಾಹಿತ್ಯಕ್ಕೆ ಒಂದು ಉನ್ನತ ಸ್ಥಾನವು ವಿನ್ಯಾಸಲಾಗಿದೆ. ಭಾರತದಲ್ಲಿ ಪ್ರಚಲಿತವಿರುವ ಹಲವಾರು ಭಾಷೆಗಳಲ್ಲಿ ರಚಿತವಾಗಿರುವ ಸಂತ ಸಾಹಿತ್ಯರಾಶಿಯಲ್ಲಿ ಕರ್ನಾಟಕ ಹರಿದಾಸ ಸಾಹಿತ್ಯವು ಒಂದು ವೈಶಿಷ್ಟ್ಯಪೂರ್ಣ ಸ್ಥಾನವನ್ನು ಗಳಿಸಿದೆ. ವೇದ ಶಾಸ್ತ್ರ ಪುರಾಣಾದಿಗಳ ಸಾರಸರ್ವಸ್ವವನ್ನೂ ಗರ್ಭೀಕರಿಸಿಕೊಂಡು, ಕಾವ್ಯನಿಯಮವನ್ನು ಗೌರವಿಸುತ್ತ, ಅತ್ಯಂತ ಸರಳವೂ ಸುಂದರವೂ ಆದ ಲಲಿತ ಪದ ಸಮುದಾಯದಿಂದ ಕಂಗೊಳಿಸುತ್ತ, ಜನತೆಯ ಐಹಿಕ ಪಾರತ್ರಿಕ ಸುಖ ಸಾಧನ ಹೇತುವಾಗಿ, ಕಿವಿಗಿಂಪಾದ ರಾಗ ತಾಳ ಲಯ ಬದ್ಧವಾಗಿ ಮನೋಲ್ಲಾಸಕರವಾದ ಇಂತಹ ಸಂಗೀತಮಯವಾದ ಸಾಹಿತ್ಯವು ಈ ಕನ್ನಡ ಹರಿದಾಸ ಸಾಹಿತ್ಯವಲ್ಲದೆ ಮತ್ತಿನ್ನಾವುದಿದೆ? ತನ್ನನ್ನು ಸ್ವೀಕರಿಸಿ ಅಭ್ಯಸಿಸುವ ಮತ್ತು ಆರಾಧಿಸುವ ಭಕ್ತವರ್ಗವನ್ನು ಆತ್ಮಸಾಮ್ರಾಜ್ಯಕ್ಕೆ ಕರೆದೊಯ್ದು ಆನಂದ ಸ್ವರೂಪಿಯಾದ ಪರಮಾತ್ಮನ ಪ್ರೇಮರಸದಲ್ಲಿ ತನ್ಮಯರನ್ನಾಗಿಸಿ ಆನಂದಾನುಭವವನ್ನುಂಟುಮಾಡಿ ಶ್ರಮಲೇಶವೂ ಇಲ್ಲದೆ ಅವರ ಮನಸ್ಸನ್ನು ಕರಗಿಸಿ ಆನಂದ ಬಾಷ್ಪಗಳನ್ನು ಸುರಿಸುವಂತೆ ಮಾಡುವ ಸಾಮರ್ಥ್ಯವು ಈ ಹಂಸ ಸಾಹಿತ್ಯಕ್ಕೆ ಮಾತ್ರ ವಿನ್ಯಾಸಲಾಗಿರುವುದಲ್ಲದೆ–ಮಿಕ್ಕ ವಾಯಸ ಸಾಹಿತ್ಯದಿಂದ ಅಂತಹ ಫಲವನ್ನು ನಿರೀಕ್ಷಿಸಲು ಸಾಧ್ಯವುಂಟೆ?

ಈ ಹರಿದಾಸ ಸಾಹಿತ್ಯದಲ್ಲಿ ಇತರ ಧಾರ್ಮಿಕ ಸಾಹಿತ್ಯದಲ್ಲಿ ಕಂಡುಬಾರದ ಒಂದು ವಿಶೇಷ ಪ್ರಯೋಜನವುಂಟು. ಇದು ಸಂಗೀತಮಯ ಸಾಹಿತ್ಯವಾಗಿರುವುದರಿಂದ ಕಂಠಸ್ಥವಾಗಿ ತನ್ಮಯತೆಯಿಂದ ಹಾಡುವ ಇದರ ಸೌಲಭ್ಯ ಗಮನೀಯವಾಗಿದೆ. ಈ ಸಾಹಿತ್ಯವನ್ನು ವಿಚಾರಪೂರ್ವಕ ವಿಮರ್ಶಿಸಿದ ಮಹನೀಯರೊಬ್ಬರು, ಇದರ ಸ್ಥಾನಮಾನಗಳನ್ನು ಕುರಿತು ಹೀಗೆಂದು ಅಭಿಪ್ರಾಯಪಟ್ಟಿದ್ದಾರೆ. "ಹರಿದಾಸ ಸಾಹಿತ್ಯದಲ್ಲಿ ಶಬ್ದಗಳ ಜೋಡುಕಟ್ಟು ಬಹು ಸುಂದರವಾಗಿದೆ. ಕನ್ನಡ ಪದ್ಯಗಳಿಗೆ ವಾಡಿಕೆಯಾಗಿರುವ ಪಜ್ಜೆಯ ಎರಡನೆಯ ಅಕ್ಷರ ಪ್ರಾಸದ ಜೊತೆಗೆ ಅನೇಕ ಸಂದರ್ಭಗಳಲ್ಲಿ ಕೊನೆಯ ಅಕ್ಷರದ ಪ್ರಾಸಗಳೂ ಪಜ್ಜೆಗಳ ನಡುವೆ ಅಲ್ಲಲ್ಲಿ ತಲೆದೂಗಿಸುವ ಮಧ್ಯಪ್ರಾಸಗಳೂ ಹೇರಳವಾಗಿದ್ದು ಕಾವ್ಯದ ಸೌಂದರ್ಯವನ್ನು ಹೆಚ್ಚಿಸಿವೆ. ಪ್ರಾಸದಲ್ಲಿ ಸ್ವರಗಳೂ ಲ, ನ, ಸ, ವ, ಮ, ಮುಂತಾದ ಲಲಿತ ವರ್ಣಗಳೂ ಬಹು ಮುದ್ದಾಗಿ ಸೇರಿಕೊಂಡು, ಉಚ್ಚಾರ ಮಾತ್ರದಿಂದ ಮನಸ್ಸಿನ ಅಭಿಪ್ರಾಯವು ಹೊರಸೂಸಿ ಬರುವಂತೆ ಮನೋಹರವಾಗಿದೆ. ಸಂಗೀತದ ಸಹಕಾರವೂ ವಿಪುಲವಾಗಿರುವುದರಿಂದ, ಸಾಹಿತ್ಯರಸವು ಉಕ್ಕಿ ಬರುತ್ತಿದೆ. ರಸಪೋಷಣೆಯನ್ನು ಚೆನ್ನಾಗಿ ಮಾಡಬಲ್ಲ ಅಕ್ಷರಯುತ ಶಬ್ದಗಳು ಹಾಡುಗಳಲ್ಲಿ ರಮ್ಯವಾಗಿ ಹೆಣೆದುಕೊಂಡಿವೆ. ಗಹನವಾದ ತತ್ವವಿಚಾರವು ಸುಲಭವಾದ ಮಾತುಗಳಲ್ಲಿ ಮನಸ್ಸಿಗೆ ತಟ್ಟನೆ ಹಿಡಿಯುವಂತೆ ಹೃದಯಸ್ಪರ್ಶಿಯಾಗುವಂತೆ ದೇವರ ನಾಮಗಳ ರಚನೆಯಾಗಿದೆ. ನೊಂದ ಮನಸ್ಸನ್ನು ಸಮಾಧಾನಗೊಳಿಸಿ ಪೂರ್ವದ ಶಾಂತಸ್ಥಿತಿಗೆ ತರುವುದಕ್ಕಾಗಲೀ, ಉತ್ತಮಗೊಳ್ಳಬೇಕೆಂಬ ಮನಸ್ಸನ್ನು ಮೇಲ್ಮಟ್ಟಕ್ಕೆ ತೆಗೆದುಕೊಂಡು ಹೋಗುವುದಕ್ಕಾಗಲೀ, ಮಂಕು ಮನಸ್ಸನ್ನು ತಿಳಿವುಗೊಳಿಸಿ ಎಚ್ಚರಿಸುವುದಕ್ಕಾಗಲೀ ಈ ದಾಸಸಾಹಿತ್ಯವು ದಿವ್ಯೌಷಧಿಯಂತಿದೆ. ಸುಸ್ವರದಲ್ಲಿ ಈ ಹರಿದಾಸ ಸಾಹಿತ್ಯವನ್ನು ಕೇಳಿದವರು ಎಂತಹ ಕಠಿಣ ಮನಸ್ಕರಾದರೂ ತತ್ಕಾಲದಲ್ಲಿ ತಮ್ಮನ್ನು ತಾವು ಮರೆತು, ಭಾವಪರವಶರಾಗಿ, ತಲ್ಲೀನರಾಗಿ ಆನಂದಾನುಭವ ಮಾಡಬಲ್ಲರೆಂಬುದಕ್ಕೆ ಸಂಶಯವಿಲ್ಲ. ಇಂತಹ ಉತ್ತಾರಕವಾದ ಉದ್ಧಾರಕವಾದ ಸಾಹಿತ್ಯಕ್ಕೆ ಎಣೆಯಾದುದು ಮತ್ತೊಂದಿಲ್ಲವೆಂದು ಧಾರಾಳವಾಗಿ ಹೇಳಬಹುದು."

ಜನತೆಯ ಆತ್ಮೋದ್ಧಾರಕ್ಕೆ ಪರಮೋಪಕಾರಿಯಾದ ಇಂತಹ ಹರಿದಾಸ ವಾಙ್ಮಯವು ವಿವಿಧ ಕಾಲ ದೇಶಗಳಲ್ಲಿ, ಅನೇಕ ಮಂದಿ ಮಹನೀಯರಿಂದ ರಚಿತವಾಗಿ ಇತರ ಯಾವ ಭಾಷೆಯಲ್ಲಿರುವುದಕ್ಕಿಂತ ಬಹು ದೊಡ್ಡ ಪ್ರಮಾಣದಲ್ಲಿರುವುದು ಕನ್ನಡ ಭಾಷೆಯ ಸುಯೋಗ, ಜನತೆಯ ಭಾಗ್ಯ! ವಚನ ಸಾಹಿತ್ಯ ಕರ್ತೃಗಳು ಕೇವಲ ಶೈವ ಪಂಥದವರು

ಮಾತ್ರ! ಆದರೆ ಹರಿದಾಸ ಸಾಹಿತ್ಯ ಕರ್ತೃಗಳು ವೈಷ್ಣವ ಪಂಥದ ಮಾಧ್ವರು ಮಾತ್ರವೇ ಅಲ್ಲ, ಸ್ಮಾರ್ತರೂ, ಶ್ರೀವೈಷ್ಣವರೂ, ಸ್ತ್ರೀಯರೂ, ಬ್ರಾಹ್ಮಣೇತರರೂ ಈ ದಾಸ ಸಾಹಿತ್ಯ ರಚನೆಯಲ್ಲಿ ಭಾಗವಹಿಸಿದ್ದಾರೆ. ಇದುವರೆಗೆ ದೊರೆತಿರುವ ಇತಿಹಾಸದಾಧಾರದಂತೆ ಶಾ. ಶ. ೮೧೧ ಎಂದರೆ ಕ್ರಿ. ಶ. ೮೮೯ ರಲ್ಲಿದ್ದ ಅಚಲಾನಂದರು ದಾಸಸಾಹಿತ್ಯ ರಚಯಿತರಲ್ಲಿ ಮೊದಲಿಗರೆಂದು ತಿಳಿಯಬರುತ್ತಿದೆ. ತರುವಾಯ ಮೂರು ಶತಮಾನಗಳಷ್ಟು ಕಾಲದಲ್ಲಿ, ಈ ಸಾಹಿತ್ಯ ವಿಚಾರದಲ್ಲಿ ಏನು ನಡೆಯಿತೆಂಬ ಬಗ್ಗೆ ಉಲ್ಲೇಖವಿಲ್ಲ. ಮತ್ತೆ ಕ್ರಿ. ಶ. ಹದಿಮೂರನೆಯ ಶತಮಾನದ ಆದಿಭಾಗದಲ್ಲಿ ಶ್ರೀಮನ್ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಲ್ಲಿ ಒಬ್ಬರಾದ ಶ್ರೀ ನರಹರಿತೀರ್ಥರೆಂಬ ಮಹನೀಯರು ಭಾಗವತ ಧರ್ಮ ಪ್ರಚಾರಕ್ಕಾಗಿ ನಡೆಸಿದ ಪ್ರಯತ್ನದಲ್ಲಿ ಕನ್ನಡ ದೇವರನಾಮುಗಳ ರಚನೆಯೂ ಒಂದೆಂದು ತೋರುತ್ತದೆ. ಅವರು ರಚಿಸಿದ ಒಂದೆರಡು ಪದಗಳು ದೊರೆಯುತ್ತವೆ. ಮತ್ತೆ ಹದಿನೈದನೆಯ ಶತಮಾನದ ಮಧ್ಯಕಾಲದವರೆಗೆ ಈ ಸಾಹಿತ್ಯ ಬೆಳವಣಿಗೆಯ ಇತಿಹಾಸ ದೊರೆಯುವುದಿಲ್ಲ.

ಮುಂದೆ ಕ್ರಿ. ಶ. ೧೪೦೬ ರಿಂದ ೧೪೮೬ ರ ವರೆಗೆ ಜೀವಿಸಿದ್ದು ಕೋಲಾರ ಜಿಲ್ಲಾ ಮುಳಬಾಗಿಲು ಮಠದ ಪೀಠಾಧಿಪತಿಗಳಾಗಿದ್ದ ಶ್ರೀ ಶ್ರೀಪಾದರಾಯರ ಕಾಲದಲ್ಲಿ ಹರಿದಾಸ ಸಾಹಿತ್ಯವು ಪುನರುಜ್ಜೀವನಗೊಂಡಿತು. ವೇದ ಶಾಸ್ತ್ರಾದಿಗಳಲ್ಲಿ ಅಪ್ರತಿಮ ಪಂಡಿತರಾಗಿದ್ದು, ಕನ್ನಡ ಸಾಹಿತ್ಯ ಸಂಗೀತಾದಿಗಳಲ್ಲೂ ಉನ್ನತ ಮಟ್ಟದ ಪ್ರೌಢಿಮೆಯನ್ನು ಗಳಿಸಿದ್ದ ಈ ಮಹನೀಯರು, ಕೇವಲ ಸಂಸ್ಕೃತಮಯವಾಗಿದ್ದ ನಮ್ಮ ಧಾರ್ಮಿಕ ಸಾಹಿತ್ಯ ನಿಧಿಯಿಂದ ಜನತೆಯ ಉದ್ಧಾರವಾಗಲಾರದೆಂದು ಮನಗಂಡು, ಉದ್ದೇಶಪೂರ್ವಕವಾಗಿ ಹರಿದಾಸ ಸಾಹಿತ್ಯ ರಚನೆಗೆ ಪ್ರಾರಂಭಿಸಿದರು. ಈ ಮಹನೀಯರಿಂದ ಮೊದಲಾಗಿ ಮುನ್ನಡೆದ ಹರಿದಾಸ ವಾಙ್ಮಯದ ವಿವರಣೆಯನ್ನು ಮುಂದುವರಿಸುವ ಮುನ್ನ ಈವರೆಗೆ ಹೆಸರಿಸಿದ ಈ ಸಾಹಿತ್ಯ ರಚಯಿತರ ಶೈಲಿಯ ಒಂದೊಂದು ಉದಾಹರಣೆಯನ್ನು ಕೊಡುವುದು ಆವಶ್ಯಕವೆನಿಸುತ್ತದೆ.

ಶ್ರೀ ಅಚಲಾನಂದ ದಾಸರು—

ಪಾತಕರೊಳಗೆಲ್ಲ ನಾನೆ ವೆಗ್ಗಳನಯ್ಯ
ಪ್ರಾಯಶ್ಚಿತ್ತಕ್ಕೆ ನಿನ್ನ ನಾಮವೆ ಘನವಯ್ಯ— ಪ.

* * *

ಸುಖವಾದರೆ ತನ್ನಿಂದಾಯಿ ತೆಂಬೋರೊ
ದುಃಖವಾದರೆ ದೈವ ಮಾಡಿ ತೆಂಬೋರೊ
ಸುಖಕೆ ತಾನ್ಯಾರೊ ದುಃಖಕೆ ತಾನ್ಯಾರೊ
ಸುಖದುಃಖವೆರಡು ಹರಿಯೆ ನಿನ್ನಾಧೀನ
ರುಕುಮಿಣಿ ಪತಿ ಅಚಲಾನಂದ ವಿಠಲ— ೩

ಶ್ರೀ ನರಹರಿತೀರ್ಥರು

ಎಂತು ಮರುಳಾದೆ ನಾನೆಂತು ಮರುಳಾದೆ ಪ.

ಎಂತು ಮರುಳಾದೆ ಭವದೊಳು ಬಳಲಿದೆ
ಸಂತತ ಪೊರೆ ರಘುಕುಲತಿಲಕ. ಅ.ಪ.

ಮಾತಿನಲ್ಲಿ ಹರಿದಾಸತನ | ರೀತಿಯಲ್ಲಿ ಪ್ರಭುದಾಸತನ ॥
ಪ್ರೀತಿ ಧನಾದಿ ವಿಷಯದಲ್ಲಿ, ನಿ | ರ್ಭೀತಿ ದೈವ ಗುರು ದ್ರೋಹದಲಿ ॥ ೧ ॥
ಏಕಾಂತದಲ್ಲಿ ಧನದ ಗೋಷ್ಠಿ | ಲೋಕಾಂತದಿ ವೈರಾಗ್ಯದ ಗೋಷ್ಠಿ ॥
ಶ್ರೀಕಾಂತನ ಸೇವೆಗೆ ಅನುಮಾನ | ಭೂಕಾಂತನ ಸೇವೆಗೆ ಸುಮ್ಮಾನ ॥ ೨ ॥

* * * *

ಭಜಿಸು ಬ್ರಹ್ಮಾದಿ ವಂದಿತ ಹರಿಯ | ತ್ಯಜಿಸು ಕಾಮಾದಿ ದುರ್ವಿಷಯ ॥
ಸುಜನವಂದಿತನಾದ ನರಹರಿಯ | ಭಜಿಸು ಶ್ರೀಶ ಶ್ರೀ ರಘುಪತಿಯ ॥ ೫ ॥

ಶ್ರೀ ಶ್ರೀಪಾದರಾಜರು ಅನೇಕಾನೇಕ ದೇವರ ನಾಮಗಳನ್ನು ವಿವಿಧ ರಾಗ ತಾಳಗಳಲ್ಲಿ ರಚಿಸಿದ್ದಾರೆ. ಸಂಗೀತದಲ್ಲಿ 'ಸುಳಾದಿ' ಎಂಬ ಪರಿಭಾಷೆಯಿಂದ ಐದು ತಾಳ-ಏಳು ತಾಳಗಳಲ್ಲಿ ಗಹನ ತತ್ವ ವಿಚಾರಗಳನ್ನು ವಿವರಿಸಿ ಕರ್ಣಾಟಕ ಗಾಯನ ಪ್ರಪಂಚಕ್ಕೆ ಹೊಸ ಬೆಳಕನ್ನು ನೀಡಿದ ಕೀರ್ತಿ ಈ ಮಹನೀಯರಿಗೆ ಮೀಸಲಾಗಿದೆ. ಇವರ ಪದ ಸುಳಾದಿ ಉಗಾಭೋಗಗಳ ಮಾದರಿಗಳು ಲಲಿತ ಪದಪುಂಜರಂಜಿತವಾಗಿ, ಮನ ಕರಗಿಸುವ ಪ್ರಾರ್ಥನಾಪೂರಿತವಾಗಿ, ಹಾಗೂ ಅಧ್ಯಾತ್ಮ ವಿಚಾರಗರ್ಭಿತವಾಗಿ ಮನೋಲ್ಲಾಸಕರವಾಗಿವೆ.

**ಮಧ್ಯಮಾವತಿ, ಝಾಪುತಾಳ**

ದುರಿತಗಜ ಪಂಚಾನನ | ನರ | ಹರಿಯೆ ದೇವರದೇವ ಕಾಯೊ ಗೋವಿಂದಾ | ಪ. |

ಮುನ್ನ ಮಾಡಿದ ಕರ್ಮ ಬೆನ್ನ ಬಿಡದಿದ್ದರೆ
ನಿನ್ನ ಮೊರೆಯ ಹೊಗಲ್ಯಾಕೊ ಗೋವಿಂದ ೧.

ಹೆತ್ತ ಮಕ್ಕಳು ಹುಚ್ಚರಾದರೆ ತಾಯ್ತಂದೆ
ಎತ್ತದೆ ನೆಲಕೆ ಬಿಸುಡುವರೆ ಗೋವಿಂದ ೨.

ಒಂದು ಮೃಗಕೆ ಆರು ಹುಲಿ ಬಂದು ಕಾದಿವೆ (ಕವಿದಿವೆ)
ಬಂಧನ ಬಿಡಿಸೆನ್ನ ತಂದೆ ಗೋವಿಂದ ೩.

* * *

ಅಡವಿಯ ವೃಕ್ಷಕೆ ಎರೆವರ್‍ಯಾರು ನೀರ
ತಡೆಯದೆ ಸಲಹೊ ಎನ್ನೊಡೆಯ ಗೋವಿಂದ ೬.

ಆಡುವ ಬೊಂಬೆ ಮೂಜಗವೆಲ್ಲವು, ನೀನೆ
ಆಡಿಪೆ ನಾಟಕಧಾರಿ ಗೋವಿಂದ ೭.

* * *

ಆರ್ತನಾದ ಭಕ್ತನು ತನ್ನ ರಕ್ಷಕನು ಭಗವಂತನೇ ಎಂದು ನಂಬಿ ಪ್ರಾರ್ಥಿಸುವಾಗ ಉದ್ಭವಿಸುವ ಒಂದೊಂದು ಭಾವವೂ ಈ ಮನೋಹರ ಪದದ ಒಂದೊಂದು ನುಡಿಯಿಂದ ವ್ಯಕ್ತವಾಗುವುದನ್ನು ಭಾವುಕರು ಗ್ರಹಿಸಬಹುದು.

ಅವರ ಸುಳಾದಿಯಿಂದ ಒಂದು ಉದಾಹರಣೆ ಮನೋಜ್ಞವಾಗಿದೆ.

**ಏಕತಾಳ —** ಭವವೆಂಬ ಭಾವಿಯಲ್ಲಿ ಭಯಕೊಳದಲ್ಲಿ ಸಿಕ್ಕಿ
ತಾಪತ್ರಯವೆಂಬ ದಾವಾನಲತಪ್ತ ನರರಿಗೆ
ಹರಿ ನಿಮ್ಮ ನಾಮಾಶ್ರಯವಲ್ಲದೆ ಮತ್ತುಂಟೆ ?
ಮನುಲೋಕದಲ್ಲುಂಟೆ ತನು ಪರಿಣ ವಲ್ಲಭ (?)
ಅಮೃತ ರಸ ವಸರುವ ಪದ ಪದುಮದ
ನೆಳಲ ನೆಲಮನೆಯಲಿ ಎನ್ನನಿರಿಸೊ ರಂಗವಿಠ್ಠಲ

ಶ್ರೀಕೃಷ್ಣನ ಬಾಲಲೀಲಾ ವರ್ಣನೆ, ಶ್ರೀಮದ್ಭಾಗವತದ ಗೋಪೀಗೀತಾ ಭ್ರಮರ ಗೀತಾದಿಗಳು, ಭಾಗವತ ಸಪ್ತಮ ಸ್ಕಂಧದಲ್ಲಿನ ಪ್ರಹ್ಲಾದ ಕಥಾ ಪ್ರಸಂಗದಲ್ಲಿ ಬರುವ ಶ್ರೀ ಲಕ್ಷ್ಮೀನೃಸಿಂಹ ಪ್ರಾದುರ್ಭಾವದಂಡಕ ಇತ್ಯಾದಿಗಳ ರಚನೆ ಇವರ ಕನ್ನಡ ಕವಿತಾ ಸಾಮರ್ಥ್ಯವನ್ನು ಉಜ್ವಲವಾಗಿ ಬೆಳಗಿಸುತ್ತಿದೆ.

ಇವರ ಒಂದೆರಡು ಉಗಾಭೋಗಗಳು ಮಾದರಿಗಾಗಿ ಇಲ್ಲಿ ಕೊಡಲ್ಪಟ್ಟಿವೆ.

ಮನೆಯಿಂದ ಸಂತೋಷ ಕೆಲವರಿಗೆ ಲೋಕದೊಳು
ಧನದಿಂದ ಸಂತೋಷ ಕೆಲವರಿಗೆ ಲೋಕದೊಳು
ವನಿತೆಯಿಂ ಸಂತೋಷ ಕೆಲವರಿಗೆ ಲೋಕದೊಳು
ತನಯರಿಂ ಸಂತೋಷ ಕೆಲವರಿಗೆ ಲೋಕದೊಳು
ಇನಿತು ಸಂತೋಷವವರವರಿಗಾಗಲಿ—ನಿನ್ನ
ನೆನಹೆನಗೆ ಸಂತೋಷ ರಂಗವಿಠಲ ರೇಯ

ಉ. ಭೋ.— ಧ್ಯಾನವು ಕೃತಯುಗದಲ್ಲಿ | ಯಜನ ಯಜ್ಞವು ತ್ರೇತಾಯುಗದಲ್ಲಿ |
ದಾನವಾಂತಕನ ದೇವತಾರ್ಚನೆಯು ದ್ವಾಪರಯುಗದಲ್ಲಿ, ಕಲಿಯುಗದಿ
ಗಾನದಿ ಕೇಶವನೆಂದರೆ ಕೈಗೊಡುವನು ರಂಗವಿಠ್ಠಲ—

ಕಲಿಯುಗದಲ್ಲಿ ಯಜ್ಞಯಾಗಾದಿ ಘನಕಾರ್ಯಗಳು ಸಾಧ್ಯವಿಲ್ಲ, ಭಕ್ತಿಪೂರ್ವಕ ಭಗವನ್ನಾಮ ಸಂಕೀರ್ತನವೊಂದೇ ಸದ್ಗತಿದಾಯಕವೆಂದು ನಿರೂಪಿಸಿದ್ದಾರೆ.

ಇವರ ತರುವಾಯ ಇವರ ಶಿಷ್ಯೋತ್ತಮರಾದ ಶ್ರೀ ವ್ಯಾಸರಾಯರೂ ಸಹ ತಮ್ಮ ಗುರುಗಳ ಈ ಹರಿದಾಸ ಸಾಹಿತ್ಯ ಸೇವೆಯನ್ನು ಮುಂದುವರಿಸಿ, ಈ ಸಾಹಿತ್ಯ ಸೌಧಕ್ಕೆ ಒಂದು ಭದ್ರವಾದ ತಳಹದಿಯನ್ನೇರ್ಪಡಿಸಿದರು. ಇವರು ಸನ್ಯಾಸಾಶ್ರಮ ಸ್ವೀಕಾರಮಾಡಿದ ಮಠಾಧಿಪತಿಗಳಾಗಿದ್ದರೂ ಚಂದ್ರಗಿರಿಯ ರಾಜನಾಗಿದ್ದ ಸಳುವ ನರಸಿಂಹರಾಜನ ಕಾಲದಿಂದ ಮುಂದೆ ಸುಮಾರು ಅರುವತ್ತು ವರುಷಗಳ ಕಾಲ ವಿಜಯನಗರ ಸಾಮ್ರಾಜ್ಯದ ಅಚ್ಯುತರಾಯ-ಕೃಷ್ಣದೇವ ರಾಯರ ಕಾಲದವರೆಗೆ ರಾಜಗುರುಗಳಾಗಿ ವಿರಾಜಮಾನರಾದರು. ಇವರ ಪಾಂಡಿತ್ಯ, ಶಾಸ್ತ್ರಜ್ಞಾನಗಳಿಗೆ ಆ ಕಾಲದಲ್ಲಿ ಅಖಿಲ ಭಾರತ ದೇಶದಲ್ಲೇ ಎದುರಿರಲಿಲ್ಲವೆಂದು ವಿಖ್ಯಾತಿಯಿದೆ. ಇವರಿಂದ ವಿರಚಿತವಾಗಿರುವ **ನ್ಯಾಯಾಮೃತ, ತರ್ಕ ತಾಂಡವ, ಚಂದ್ರಿಕಾ** ಎಂಬ ಪ್ರೌಢ ತರ್ಕಶಾಸ್ತ್ರ ಗ್ರಂಥಗಳು ಆ ಶಾಸ್ತ್ರದಲ್ಲಿ ಸೀಮಾತೀತ ಗ್ರಂಥಗಳೆನ್ನಿಸಿ ಜಗನ್ಮಾನ್ಯ ವಾಗಿವೆ. ತಮ್ಮ ಶಿಷ್ಯನಾಗಿದ್ದ ವಿಜಯನಗರ ಸಾಮ್ರಾಜ್ಯಾಧಿಪತಿ ಶ್ರೀಕೃಷ್ಣದೇವರಾಯನಿಗೆ ಪ್ರಾಪ್ತವಾಗಿದ್ದ ಕುಹು ಯೋಗವೆಂಬ ಒದು ಮಹದಾಪತ್ತಿನ ನಿವಾರಣೆಗಾಗಿ ಸನ್ಯಾಸಿಗಳಾಗಿದ್ದ ಇವರು ಸಿಂಹಾಸನಾರೋಹಣ ಮಾಡಿ ಆತನನ್ನು ಕಾಪಾಡಿದರು. ತರುವಾಯ ಆತನು ತನ್ನ ಕೃತಜ್ಞತಾಸೂಚಕವಾಗಿ ನವರತ್ನಾಭಿಷೇಕ ಮಾಡಲು ಈ ವಿರಕ್ತ ಶಿರೋ ಮಣಿಗಳು ಆ ಸರ್ವಸ್ವವನ್ನೂ ದಾನಮಾಡಿಬಿಟ್ಟರು.

ಗೀರ್ವಾಣ ಭಾಷೆಯಲ್ಲಿ ಅದ್ವಿತೀಯ ವಿದ್ವನ್ಮಣಿಗಳಾಗಿದ್ದ ಇವರು ತಿಳಿಗನ್ನಡದ ಲಲಿತ ಸುಮನೋಹರ ಶೈಲಿ ಯಲ್ಲಿ ಪದ ಪದ್ಯ ಉಗಾಭೋಗ ಸುಳಾದಿಗಳನ್ನು ರಚಿಸಿರುವುದನ್ನು ನೋಡಿದರೆ ಪರಮಾಶ್ಚರ್ಯವಾಗುತ್ತದೆ.

ಇವರ ಒಂದು ಉಗಾಭೋಗ.—

ನೀರಿಲ್ಲದ ಭಾವಿ ಊರಿಲ್ಲದ ಮಠವು | ನೆಳಲಿಲ್ಲದ ಮರ ಫಲವಿಲ್ಲದ ಲತೆ |
ಧನವಿಲ್ಲದ ದಾತ ದಯವಿಲ್ಲದ ಲಾಭ | ಮನಸಿಲ್ಲದ ಶಕುತಿ ಭಯವಿಲ್ಲದ ಭಕುತಿ |
ನರಹರಿ ಮುಕುಂದ ಶ್ರೀಕೃಷ್ಣ ಎನ್ನದ | ನರರಿದ್ದು ಫಲವೇನು ಇಲ್ಲದಿದ್ದರೇನು ||

ಶ್ರೀ ಕೃಷ್ಣಾರ್ಜುನ ಸಂವಾದರೂಪವಾದ ಭಗವದ್ಗೀತೆಯನ್ನು ಇವರು '**ವೃತ್ತನಾಮ**' ಎಂಬ ನೂತನ ಕವಿತಾ ಶೈಲಿಯಲ್ಲಿ ಒಂಭತ್ತು ನುಡಿಗಳಲ್ಲಿ ಹಾಡಿರುವುದು ಮನೋಹರವಾಗಿದೆ. ಶ್ರೀಕೃಷ್ಣ ಲೀಲಾವರ್ಣನೆಯ ಇವರ ಪದಗಳು ಭಾಗವತ ದಶಮಸ್ಕಂಧದ ಅರ್ಥವನ್ನೊಳಕೊಂಡು ಭಕ್ತಿಭಾವಪೂರಿತವಾಗಿವೆ. ಮುರಳೀಧರನ ವೇಣುನಾದದ ಸೊಬಗನ್ನು ವರ್ಣಿಸುತ್ತಾ 'ಕೊಳಲನೂದುವ ಚದುರನ್ಯಾರೇ ಪೇಳಮ್ಮಯ್ಯ' ಎಂಬ ಪದದಲ್ಲಿ-ನಾದದಿ ತುಂಬಿತು ಗೋವರ್ಧನಗಿರಿ, ಮೇವ ಮರೆತವು ಗೋವುಗಳೆಲ್ಲ, ಸಾವಧಾನದಿ ಹರಿದಳು ಯಮುನಾ, ಸುರರುಸುರಿದರಾಕಾಶದಿ ಸುಮಗಳ ಎಂಬ ಮನೋ ಹರ ಭಾವಗಳನ್ನು ವ್ಯಕ್ತಗೊಳಿಸಿದ್ದಾರೆ.

ಭಗವನ್ನಾಮ ಮತ್ತು ಭಗವನ್ಮೂರ್ತಿಗಳು ಆರಾಧಕರಾದ ಭಕ್ತ ಜನರ ಹೃದಯಸ್ಥವಾಗಿರಬೇಕಾದ ಆವಶ್ಯಕತೆ ಯನ್ನು ಕುರಿತು ವರ್ಣಿಸುತ್ತಾ ಒಂದು ಪದದಲ್ಲಿ ಭಗವಂತನನ್ನು ಹೀಗೆಂದು ಪ್ರಾರ್ಥಿಸಿದ್ದಾರೆ:

ಹರಿ ನಿನ್ನನಾಮ ಕಾಮಧೇನುವಿಗೆ(ಎನ್ನ) ದುರಿತದೊಟ್ಟಲು ಮೇವು - ಭವಾಂಬುಧಿಯು ಅರಸಿ ಕುಡಿವ ನೀರು- ಇವೆರಡು ಎನ್ನಲ್ಲಿ ಭರಿತವಾಗಿರೆ, ಒಲಿದು (ಆ ನಾಮ ಕಾಮಧೇನುವನ್ನು) ಎನ್ನೊಳ್ಯಾಕಿರಿಸೆ? - ದೇವಾ ಮುನಿಗಳ ಮನದ ಮೊನೆಯಾದ ಕೊನೆಯಲ್ಲಿ ಘನ ಭಕ್ತಿ ಪಾಶದಿ ಶಿಲುಕಲ್ಯಾಕೆ? ಎನ್ನ ಚಿತ್ತ ಚಂಚಲದುಯ್ಯಾಲೆಯಲಿ, ನಿನ್ನ ಮನಬಂದಂತೆ ಓಲ್ಯಾಡಲಾಗದೆ? ಎಂಬ ಅಪೂರ್ವ ಭಾವಗಳನ್ನು ವ್ಯಕ್ತಪಡಿಸಿರುವುದು ಭಕ್ತ ಜನರ ಮನಾನಂದಕರ ವಾಗಿದೆ.

ಮಾನವನು ನಿರಂತರವೂ ಸಂಸಾರದ ದುಃಖಾಗ್ನಿಯಲ್ಲಿ ಬೇಯುತ್ತಿದ್ದರೂ ವಿರಕ್ತಿ ಹೊಂದದೆ ತೊಳಲಾಡುತ್ತಿರುವ ಅಸಹ್ಯ ಸ್ಥಿತಿಗಾಗಿ ಮರುಗಿ-

ದೇಹ ಜೀರ್ಣವಾಯಿತು ಧನ ನೇಹ ಜೀರ್ಣವಾಗದು
ಅಯ್ಯ – ಕಣ್ಣು ಕಿವಿ ಮಂದವಾದವು ಹೆಣ್ಣು ಮಣ್ಣಿನಾಶೆ ಮಂದವಾಗದು
ಕಾಲು ಕೈ ಜವಗುಂದಿದುವು ಭೋಗ ಲೋಲುಪತೆ ಜವಗುಂದದು
ಜರೆ ರೋಗದಿಂದ ನೆರೆಹೊರೆ ಹೇಸಿತು ಶರೀರದಲ್ಲಿ ಹೇಸಿಕೆ ಇನಿತಿಲ್ಲ
ದೇಹ ಪಾಪಕೋಟಿಗಳನ್ನು ಮಾಡಿದರಿನ್ನು ತಾಪಮನದೊಳಗಿನಿತಿಲ್ಲ
ಹೀಗೆ – ಸಂದುಹೋಯಿತು ಕಾಲವೆಲ್ಲವು – ಮುಂದಣಗತಿ ದಾರಿತೋರದು
ಅನಾದಿಯಿಂದ ನಿನ್ನವನೆನಿಸಿದೆ – ಎನ್ನ ಕುಂದು ನಿನ್ನದಲ್ಲವೆ
ಇನ್ನಾದರೂ ದಯೆಯಿಂದೆನ್ನ ನೋಡಿ ಮನ್ನಿಸಬೇಕಯ್ಯ ಸಿರಿ ಕೃಷ್ಣಾ !




ಶ್ರೀ ವ್ಯಾಸರಾಯರು 'ಶ್ರೀಕೃಷ್ಣ' (ಸಿರಿಕೃಷ್ಣ) ಎಂಬ ಮುದ್ರಿಕೆಯಿಂದ ಅಪಾರ ಪದ ಸುಳಾದಿಗಳನ್ನು ರಚಿಸಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ ಇವರು ಕನ್ನಡ ನಾಡು – ನುಡಿಗಳಿಗೂ ಮುಖ್ಯವಾಗಿ ಹರಿದಾಸ ಸಾಹಿತ್ಯಕ್ಕೂ ಮಾಡಿದ ಮಹೋಪಕಾರವೆಂದರೆ ಶ್ರೀ ಪುರಂದರದಾಸರ ಕೊಡುಗೆ. ಪುರಂದರಗಡದಲ್ಲಿ 'ನವಕೋಟಿ ನಾರಾಯಣ' ಎಂಬ ಪ್ರಶಸ್ತಿ ಪಡೆದು ಆಗರ್ಭ ಶ್ರೀಮಂತರಾಗಿದ್ದ ಶ್ರೀನಿವಾಸನಾಯಕರು ಪರಮ ವಿರಕ್ತ ಮನೋಭಾವದಿಂದ ತಮ್ಮ ಸಕಲೈಶ್ವರ್ಯವನ್ನೂ ತ್ಯಾಗಮಾಡಿ ತಮ್ಮ ಬಳಿಗೆ ಬಂದಾಗ್ಗೆ, ಅವರಿಗೆ ಹರಿದಾಸ ದೀಕ್ಷೆಯನ್ನಿತ್ತು **'ಪುರಂದರ ವಿಠಲ'** ಅಂಕಿತದಿಂದ ಭಗವನ್ನಾಮ ಸಂಕೀರ್ತನೆಯ ಸುಪಥದಲ್ಲಿ ಮಾರ್ಗದರ್ಶಕರಾಗಿ – ಹೀಗೆ ಹರಿದಾಸ ಪಂಥಕ್ಕೆ ಆಚಾರ್ಯ ಪುರುಷರಾದರು ಶ್ರೀ ವ್ಯಾಸರಾಯರು.

ಶ್ರೀ ಪುರಂದರದಾಸರು ಸೇವಾದೀಕ್ಷೆಯನ್ನು ವಹಿಸಿದ ಈ ಕಾಲ - ಹರಿದಾಸ ಸಾಹಿತ್ಯದ ಮಹೋನ್ನತಿಯ ಕಾಲ. ಶ್ರೀ ವ್ಯಾಸರಾಯರು, ಶ್ರೀ ಪುರಂದರದಾಸರು, ಶ್ರೀ ವಾದಿರಾಜರು ಮತ್ತು ಶ್ರೀ ಕನಕದಾಸರು, ಈ ನಾಲ್ವರು ಮಹನೀಯರೂ ಆ ಕಾಲದಲ್ಲಿ ಹರಿದಾಸ ಸಾಹಿತ್ಯ ಸೌಧದ ನಾಲ್ಕು ಸ್ತಂಭಗಳಂತಿದ್ದು ನವರಸಭರಿತವಾದ ಅಗಾಧ ವಾಙ್ಮಯ ನಿಧಿಯನ್ನು ಸೃಷ್ಟಿಸಿದರು. ಶ್ರೀ ಪುರಂದರದಾಸರೊಬ್ಬರೇ ನಾಲ್ಕು ಲಕ್ಷ ಎಪ್ಪತ್ತೈದು ಸಹಸ್ರ ಪದ ಸುಳಾದಿ ಉಗಾಭೋಗಗಳನ್ನು ರಚನೆ ಮಾಡಿದರೆಂಬುದು ಸುಪ್ರಸಿದ್ಧವಾದ ವಿಚಾರ. ಭಕ್ತಿ ಪಂಥವನ್ನು ಉದ್ಧರಿಸಲಿಕ್ಕಾಗಿ ಅವತರಿಸಿ ಬಂದ ದೇವರ್ಷಿ ನಾರದರೇ ಇವರು ಎಂಬುದಾಗಿ ಅಪರೋಕ್ಷ ಜ್ಞಾನಿಗಳಾದ ದಾಸವರ್ಯರೆಲ್ಲ ಕೀರ್ತಿಸಿದ್ದಾರೆ. ಇವರು ರಚಿಸಿದ ಸಾಹಿತ್ಯನಿಧಿಯನ್ನು **'ಪುರಂದರೋಪನಿಷತ್ತು'** ಎಂಬುದಾಗಿ ಇವರ ಗುರುವರ್ಯರಾದ ಶ್ರೀ ವ್ಯಾಸರಾಯ ಸ್ವಾಮಿಗಳೇ ಶ್ಲಾಘಿಸಿ ಗೌರವಿಸಿದ್ದಾರೆ. ಭಗವಂತನಲ್ಲಿ ಅವರಿಗಿದ್ದ ನಿಸ್ಸೀಮಭಕ್ತಿ, ಪರಮ ವೈರಾಗ್ಯ, ಅವರೆಸಗಿದ ಅನುಪಮ ತ್ಯಾಗ, ಇವುಗಳನ್ನು ಕಂಡು ಸಂತೃಪ್ತರಾದ ಶ್ರೀ ವ್ಯಾಸರಾಯರು ತಮ್ಮ ಶಿಷ್ಯ ಶಿರೋಮಣಿಯನ್ನು – ದಾಸರೆಂದರೆ ಪುರಂದರ ದಾಸರಯ್ಯ – ಎಂದು ಮುಕ್ತಕಂಠದಿಂದ ಕೊಂಡಾಡಿದ್ದಾರೆ.

ಶ್ರೀ ಪುರಂದರದಾಸರ ಅಪಾರ ಸಂಖ್ಯೆಯ ಪದ ಸುಳಾದಿ ಉಗಾಭೋಗಗಳಲ್ಲಿ ಕಾಲಗತಿಯಿಂದ ವಿಶೇಷ ಭಾಗ ನಾಶವಾಗಿ ಈಗ ಕೇವಲ – ಪರಮಾವಧಿ ಒಂದು ಸಾವಿರದಷ್ಟು ಮಾತ್ರ ನಾಡಿನಲ್ಲಿ ಪ್ರಚಾರದಲ್ಲಿವೆ. ಅಷ್ಟು ಮಾತ್ರವೇ ಆದರೂ ಭಕ್ತಿ ಶಿಖರಕ್ಕೇರುವ ನವಸೋಪಾನಗಳೆನ್ನಿಸಿದ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಎಂಬ ಈ ಸಕಲ ಭಾವಗಳನ್ನೂ ಮಾತ್ರವಲ್ಲ ವಾತ್ಸಲ್ಯಭಾವ, ಆರ್ತಭಾವ ಮುಂತಾದವುಗಳನ್ನೆಲ್ಲ ವರ್ಣಿಸುತ್ತ ಭಾವುಕವರ್ಗಕ್ಕೆ ಮಾರ್ಗದರ್ಶಕವಾಗಿವೆ. ಭಗವತ್ಪ್ರಾಪ್ತಿಗೆ ಭಗವಚ್ಚರಿತ್ರ ಶ್ರವಣವಾದ ನಂತರ ಪ್ರಥಮ ಪ್ರಯತ್ನವು ಭಗವನ್ನಾಮ ಸಂಕೀರ್ತನವೆಂದೂ, ಆ ನಾಮವಾದರೂ "ಸುಮ್ಮನೆ ದೊರಕುವುದೇ ಶ್ರೀರಾಮನ ದಿವ್ಯ ನಾಮವು | ಜನ್ಮಜನ್ಮಾಂತರದ ದುಷ್ಕರ್ಮ ಹೋದವಗಲ್ಲದೆ |" ಎಂಬಂತೆ ದುಷ್ಕರ್ಮ ನಾಶವಾದರಲ್ಲದೆ ದೊರೆಯಲಾರದೆಂದೂ ನಿರೂಪಿಸಿದ್ದಾರೆ. ಪಾಪ ನಾಶವಾಗಿ ಹೃದಯ ಮಾರ್ದವವುಂಟಾಗಲು, ಅವರು ಮಾನವ ಹೃದಯ ಕ್ಷೇತ್ರದ ವ್ಯವಸಾಯ ನಡೆಯಬೇಕೆಂದು ಹೇಳಿರುವ ಮಾತು ವ್ಯರ್ಥಾಲಾಪವೆಂಬುವಂತಿಲ್ಲ. ಇಂತಹ ವ್ಯವಸಾಯ ನಡೆಯದಿದ್ದರೆ ಭಗವನ್ನಾಮ ಬೀಜವನ್ನು ಬಿತ್ತಲು ಆ ಕ್ಷೇತ್ರವು ಹದಗೊಳ್ಳಲಾರದು. ಆದುದರಿಂದ –

ಹೃದಯ ಹೊಲವ ಮಾಡಿ, ಮನವ ನೇಗಿಲ ಮಾಡಿ, ಶ್ವಾಸೋಚ್ಛ್ವಾಸ ಎರಡೆತ್ತು ಮಾಡಿ |
ಜ್ಞಾನವೆಂಬ ಹಗ್ಗ ಕಣ್ಣಿಯ ಮಾಡಿ, ನಿರ್ಮಮವೆಂಬ ಗುಂಟಿಲಿ ಹರವಿರಯ್ಯಾ ||

ಎಂದು ನಿರ್ದೇಶಿಸಿದ್ದಾರೆ. ಹೀಗೆ ಉಳುಮೆಯಾದ ಮೇಲೆ – ಮದಮತ್ಸರಗಳೆಂಬ ಮರಗಳನೇ ತರಿದು, ಕಾಮ ಕ್ರೋಧಗಳೆಂಬ ಕಳೆಯ ಕಿತ್ತಿ, ಪಂಚೇಂದ್ರಿಯವೆಂಬ ಮಂಚಿಕೆಯನೆ ಹಾಕಿ, ಚಂಚಲವೆಂಬ ಹಕ್ಕಿಯ ಹೊಡೆಯಿರಯ್ಯ

ಎಂದು ನುಡಿದು ಬಿತ್ತಿದ ಹರಿನಾಮ ಬೀಜವು ಚಿತ್ತಚಾಂಚಲ್ಯನೆಂಬ ಹಕ್ಕಿಗಳಿಂದ ತಿನ್ನಲ್ಪಡದಂತೆ ರಕ್ಷಿಸಬೇಕೆಂದೂ ಎಚ್ಚರಿಸಿದ್ದಾರೆ.

ನಮ್ಮ ಲೋಕಜೀವಿತದಲ್ಲಿ ಧರ್ಮಾಚರಣೆಯ ಮಟ್ಟವು ಎಷ್ಟು ಉನ್ನತವಾಗಿರಬೇಕೆಂಬುದೂ ಅವರ ಇನ್ನೊಂದು ಪದದಿಂದ ಸೂಚಿತವಾಗಿದೆ.

ವಿಷವಿಕ್ಕಿದವಗೆ ಷಡ್ರಸವನುಣಿಸಲಿಬೇಕು
ದ್ವೇಷ ಮಾಡಿದವನ ಪೋಷಿಸಲಿಬೇಕು ||
ಪುಸಿಮಾಡಿ ಕೆಡಿಸುವನ ಹಾಡಿ ಹರಸಲಿಬೇಕು
ಮೋಸಮಾಡುವನ್ಹೆಸರು ಮಗನಿಗಿಡಬೇಕು ||
ಹಿಂದೆ ನಿಂದಿಸರನ್ನು ವಂದಿಸುತಲಿರಬೇಕು
ಬಂಧನದೊಳಿಟ್ಟವರ ಬೆರೆಯಬೇಕು ||
ಕೊಂದ ವೈರಿಯ ಮನೆಗೆ ನಡೆದು ಹೋಗಲಿಬೇಕು
ಕುಂದೆಣಿಸುವವರ ಗೆಳೆತನ ಮಾಡಬೇಕು ||

ಜ್ಞಾನ ಭಕ್ತಿ ವೈರಾಗ್ಯ ಬೋಧಕವಾದ ನೂರಾರು ಪದಗಳೊಂದಿಗೆ ಶ್ರೀಕೃಷ್ಣಲೀಲಾ ವರ್ಣನೆಯ ಪದಗಳಲ್ಲಿ ವಾತ್ಸಲ್ಯಭಾವ, ದಾಸ್ಯಭಾವ, ಸಖ್ಯಭಾವ, ಆರ್ತಭಾವ ಮುಂತಾದ ವಿವಿಧ ಭಾವಪ್ರಬೋಧಕ ಪದಗಳೂ ಅನೇಕವಾಗಿ ದೊರಕುತ್ತವೆ. ಸ್ಥಳಾಭಾವದಿಂದ ಉದಹರಿಸಲೆಡೆಯಿಲ್ಲವಾಗಿ ವಿಷಾದಿಸಬೇಕಾಗಿದೆ.

ಇವರಂತೆಯೇ ಶ್ರೀ ವಾದಿರಾಜ ಸ್ವಾಮಿಗಳು ಹಯವದನ ಮುದ್ರಿಕೆಯಿಂದಲೂ, ಶ್ರೀ ಕನಕದಾಸರು ಕಾಗಿನೆಲೆ ಯಾದಿಕೇಶವ ಅಂಕಿತದಿಂದಲೂ ಪದರಚನೆ ಮಾಡಿದ್ದಾರೆ.

ಶ್ರೀ ಪುರಂದರದಾಸರು ವಿಜಯನಗರ ಸಾಮ್ರಾಜ್ಯ ಪತನವಾಗುವುದಕ್ಕೆ ಒಂದು ವರ್ಷ ಮೊದಲು ಎಂದರೆ ೧೫೬೪ನೆಯ ಸಂ||ದ ಪುಷ್ಯ ಬಹುಳ ಅಮಾವಾಸ್ಯೆಯಂದು ದೇಹತ್ಯಾಗ ಮಾಡಿದರು. ಇದೇ ೧೯೬೪ನೆಯ ಸಂ||ದಲ್ಲಿ ಅವರ ನಾಲ್ಕನೆಯ ಶತಮಾನೋತ್ಸವವು ಅಖಿಲ ಕರ್ಣಾಟಕದ ಒಂದು ಮಹೋತ್ಸವವಾಗಿ ನಡೆಯಬೇಕಾಗಿದೆ. ಹರಿದಾಸ ಸಾಹಿತ್ಯಕ್ಕೆ ಮಾತ್ರವಲ್ಲ-ಅಖಿಲ ದಕ್ಷಿಣ ಭಾರತ ವ್ಯಾಪ್ತಿಯಿರುವ ಕರ್ಣಾಟಕ ಸಂಗೀತ ಶಾಸ್ತ್ರಕ್ಕೂ ಪಿತೃಸ್ವರೂಪರಾಗಿದ್ದ ಆ ಮಹಾನುಭಾವರ ಮಹತ್ಸೇವೆಗೆ ತಕ್ಕ ಘನತೆ ಗೌರವಗಳಿಂದ ಆ ಮಹೋತ್ಸವ ನಡೆಯಬೇಕಾದುದು ಅತ್ಯಗತ್ಯವಲ್ಲವೆ?

ಶ್ರೀ ಪುರಂದರದಾಸರು ಪ್ರಯಾಣ ಮಾಡಿದ ತರುವಾಯ ಸುಮಾರು ನೂರೈವತ್ತು ವರ್ಷಕಾಲ ಈ ಹರಿದಾಸ ಸಾಹಿತ್ಯದ ವಿಚಾರವಾಗಿ ಏನೂ ತಿಳಿಯಬಂದಿಲ್ಲ. ಹದಿನೆಂಟನೆಯ ಶತಮಾನದ ಆದಿಭಾಗದಲ್ಲಿ ಶ್ರೀ ವಿಜಯದಾಸರೆಂಬ ಮಹನೀಯರು ದೃಗ್ಗೋಚರರಾಗುತ್ತಾರೆ. ಈ ಪುಣ್ಯಾತ್ಮರು ಕಾಶೀ ನಗರದಲ್ಲಿ ಶ್ರೀ ಪುರಂದರದಾಸರಿಂದ ಸ್ವಪ್ನದಲ್ಲಿ ಅಂಕಿತ ಪಡೆದು **'ವಿಜಯ ವಿಠಲ'** ಮುದ್ರಿಕೆಯಿಂದ ಸುಮಾರು ಇಪ್ಪತ್ತೈದು ಸಾವಿರದಷ್ಟು ಪದ ಸುಳಾದಿಗಳನ್ನು ರಚಿಸಿದರೆಂದು ಪ್ರತೀತಿಯಿದೆ. ಇವರ ಶಿಷ್ಯರಾದ ಶ್ರೀ ಗೋಪಾಲದಾಸರು, ಮೋಹನದಾಸರು, ವ್ಯಾಸವಿಠಲಾಂಕಿತ ಕಲ್ಲೂರು ಸುಬ್ಬಣ್ಣಾಚಾರ್ಯರು ಮುಂತಾದ ಅನೇಕ ಮಂದಿ ದಾಸಪಂಥಾನುಯಾಯಿಗಳಾಗಿ ಮುಂದೆ ದಾಸಸಾಹಿತ್ಯ ವನ್ನು ಅಪಾರವಾಗಿ ಬೆಳೆಸಿದರು. ಅದೇ ಶತಮಾನದ ಕೊನೆಯ ಭಾಗದಲ್ಲಿ ಗೋಪಾಲದಾಸರಿಂದ ಅನುಗ್ರಹೀತರಾದ ಶ್ರೀ ಜಗನ್ನಾಥದಾಸರೆಂಬ ಮಹನೀಯರಿಂದ ದಾಸಸಾಹಿತ್ಯಾಭಿವೃದ್ಧಿಗಾದ ಸೇವೆ ಅಪಾರ. ಇವರೂ ಇತರರಂತೆಯೇ ಹಲವಾರು ನೂರು ಪದರಚನೆ ಮಾಡುವುದರೊಂದಿಗೆ, **ಹರಿಕಥಾಮೃತಸಾರ** ಎಂಬ ಭಾಮಿನೀ ಷಟ್ಪದಿಯ ತಾತ್ವಿಕ ಗ್ರಂಥ ವನ್ನು ರಚನೆ ಮಾಡಿ, ದ್ವೈತಸಿದ್ಧಾಂತಕ್ಕೇ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಇವರ ಶಿಷ್ಯಪರಂಪರೆ ಅಗಾಧವಾಗಿ ಬೆಳೆದು, ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದವರೆಗೂ ಅವಿಚ್ಛಿನ್ನವಾಗಿ ನಡೆದುಬಂತು.

ಈವರೆಗೆ ಹೇಳಿಕೊಂಡು ಬಂದಂತೆ, ಹರಿದಾಸ ಸಾಹಿತ್ಯವು, ವಿಷ್ಣುಭಕ್ತಿಯನ್ನು ಪ್ರತಿಪಾದಿಸುವ ಪ್ರಬಲ ಸಾಧನ ವಾಗಿದೆ. ಅಪರೋಕ್ಷ ಜ್ಞಾನಿಗಳಾದ ಅನೇಕ ಮಂದಿ ದಾಸವರ್ಯರಿಂದ ರಚಿತವಾದ ಪದಗಳು ತಿಳಿಗನ್ನಡದಲ್ಲಿ ಸಕಲ ಶಾಸ್ತ್ರಾರ್ಥಗಳನ್ನೂ ರಾಗ ತಾಳ ಲಯಬದ್ಧವಾದ ಮನೋಹರ ಸಂಗೀತ ಸಾಧನದಿಂದ ಜನತೆಗೆ ಶ್ರವಣಮಾಡಿಸಿ, ಧರ್ಮ ಬೋಧೆ ಮಾಡಿ ಲೋಕದಲ್ಲಿ ಶಾಂತಿ ಸುಖ ಸಮಾಧಾನಗಳ ಸ್ಥಾಪನೆಗೆ ಪರಮ ಸಾಧನವೆನ್ನಿಸಿವೆ. ಅಷ್ಟು ಮಾತ್ರವಲ್ಲ, ಕರ್ಣಾಟಕ ಸಂಗೀತ ಶಾಸ್ತ್ರದ ಪುನರುಜ್ಜೀವನಕ್ಕೂ ವಿಶೇಷ ಪುಷ್ಟಿಕರ ಸಾಮಗ್ರಿಯನ್ನು ಒದಗಿಸಿವೆ. ಮುಂದೆ

ಈ ಕರ್ಣಾಟಕ ಸಂಗೀತ ಕಲೆಯನ್ನು ಅತಿಶಯವಾಗಿ ಬೆಳೆಸಿ ಆದ್ಯಂತ ದಕ್ಷಿಣ ಭಾರತದಲ್ಲೂ ಅದಕ್ಕೊಂದು ಗಣ್ಯಸ್ಥಾನವನ್ನು ಗಳಿಸಿ ಕೊಟ್ಟ ಕೀರ್ತಿ ಹತ್ತೊಂಬತ್ತನೆಯ ಶತಮಾನದಲ್ಲಿ ತೆಲುಗು ಭಾಷೆಯಲ್ಲಿ ಸಹಸ್ರಾರು ಕೃತಿರಚನೆ ಮಾಡಿ ರಾಮಭಕ್ತಿ ಸಾಮ್ರಾಜ್ಯವನ್ನು ಸ್ಥಾಪಿಸಿದ ಶ್ರೀ ತ್ಯಾಗರಾಜರಿಗೆ ಮೀಸಲಾಗಿದೆ. ಇದೇ ಪರಂಪರೆಯಲ್ಲೇ ಮೈಸೂರು ಮಹಾರಾಜರ ಆಸ್ಥಾನದಲ್ಲಿ ಸಂಗೀತ ವಿದ್ವಾಂಸರಾಗಿದ್ದ ಶ್ರೀ ವಾಸುದೇವಾಚಾರ್ಯರು ಈ ಇಪ್ಪತ್ತನೆಯ ಶತಮಾನದ ಒಬ್ಬ ಸುಪ್ರಸಿದ್ಧ ವಾಗ್ಗೇಯಕಾರರಾಗಿ ಆಂಧ್ರಭಾಷೆಯಲ್ಲಿ ಕೀರ್ತನೆಗಳನ್ನು ರಚನೆ ಮಾಡಿ ವಿಖ್ಯಾತರಾಗಿದ್ದಾರೆ.

ಭಾರತ ದೇಶಕ್ಕೆ ಸ್ವಾತಂತ್ರ್ಯ ಪ್ರಾಪ್ತವಾಗಿ ಇನ್ನೂ ಕೇವಲ ಹದಿನೈದು ವರ್ಷಗಳು ಮಾತ್ರ ಸಂದಿವೆ. ಈ ಅಲ್ಪಾವಧಿಯಲ್ಲಿ ಹರಿದಾಸ ಸಾಹಿತ್ಯದಲ್ಲಿ ಯಾವ ಹೆಚ್ಚಿನ ಬದಲಾವಣೆಯಾಗಲೀ, ಗಮನಾರ್ಹವಾದ ಅಭಿವೃದ್ಧಿಯಾಗಲಿ ಕಂಡುಬಂದಿಲ್ಲ.

ಈ ಸಾಹಿತ್ಯವು ಮುಂದೆ ರಚನೆಯಾಗುವ ಮಾತಂತಿರಲಿ, ಕನ್ನಡ ನಾಡಿನ ಹರಿದಾಸ ಸಾಹಿತ್ಯಭಕ್ತರೂ ಕರ್ಣಾಟಕಾಭಿಮಾನಿಗಳಾದ ಮಹಾಜನರೂ, ಈವರೆಗೂ ಇನ್ನೂ ಸಂಗ್ರಹವಾಗದೇ ಉಳಿದಿರುವ ಮೇಲ್ಕಂಡ ಪೂರ್ವಿಕ ದಾಸವರ್ಯರ ಸಾಹಿತ್ಯರಾಶಿಯನ್ನು ಪ್ರಯತ್ನಪೂರ್ವಕ ಸಂಗ್ರಹಿಸಿ, ಪರಿಷ್ಕರಿಸಿ, ಉತ್ತಮ ರೀತಿಯಲ್ಲಿ ಪ್ರಕಟಿಸಿದರೆ ಅದು ನೂತನ ಕೃತಿರಚನೆ ಮಾಡುವುದಕ್ಕಿಂತಲೂ ಹೆಚ್ಚಿನ ಅಮೂಲ್ಯ ಸೇವೆಯಾದೀತೆಂದೂ, ಅಂತಹ ಒಂದು ಆವಶ್ಯಕ ಕಾರ್ಯಕ್ಕೆ ಸತ್ಪ್ರೇರಣೆಯುಂಟಾಗಲೆಂದೂ ದಯಾಮಯನಾದ ಭಗವಂತನನ್ನು ಪ್ರಾರ್ಥಿಸಿ, ಈ ಲೇಖನವನ್ನು ಮುಕ್ತಾಯಗೊಳಿಸುತ್ತೇನೆ.



ಹಂಪೆಯಲ್ಲಿನ ಪುರಂದರ ಮಂಟಪ

# ಹರಿದಾಸ ಸಾಹಿತ್ಯ ಉದ್ಧಾರಕರು



ಶ್ರೀ ಪುರಂದರದಾಸರು

# ಕರ್ಣಾಟಕ ಸಂಗೀತಾಚಾರ್ಯ ಶ್ರೀ ಪುರಂದರದಾಸರು

ಲೇಖಕರು: "ರಾಜಶ್ರೀ"

ಕರ್ಣಾಟಕ ಸಂಗೀತಕ್ಕೆ ಶ್ರೀ ಪುರಂದರದಾಸರು ಸಲ್ಲಿಸಿರುವ ಸೇವೆಯು ಅಪಾರವಾದುದು. ಕರ್ಣಾಟಕ ಸಂಗೀತ ಪಂಥಕ್ಕೆ ಭದ್ರವಾದ ತಳಹದಿಯನ್ನು ಹಾಕಿ, ಅದನ್ನು ಒಂದು ಸುವ್ಯವಸ್ಥಿತ ರೀತಿಯಲ್ಲಿಡಲು ಬೇಕಾಗುವಷ್ಟು ಕೆಲಸವನ್ನು ಮಾಡಿ, **"ಕರ್ಣಾಟಕ ಸಂಗೀತ ಪಿತಾಮಹ", "ಕರ್ಣಾಟಕ ಸಂಗೀತಾಚಾರ್ಯ", "ಕರ್ಣಾಟಕ ಸಂಗೀತದ ಮೂಲಪುರುಷ"** ಎಂದೆಲ್ಲ ಎನಿಸಿಕೊಂಡು ಜಾಜ್ವಲ್ಯಮಾನವಾಗಿ ಪ್ರಕಾಶಿಸಿ, ತಮ್ಮ ತೇಜಸ್ಸಿನಿಂದ ಕರ್ಣಾಟಕ ಸಂಗೀತವನ್ನು ಬೆಳಗಿಸಿ ಅಮರರಾಗಿದ್ದಾರೆ ಶ್ರೀ ದಾಸರಾಯರು. ರಾಗ ಪದ್ಧತಿಯಲ್ಲಡಗಿರುವ ಅನೇಕ ಗೂಢಗಳನ್ನು ಹೊರಕ್ಕೆ ತೆಗೆದು, ಅವುಗಳ ಪೂರ್ಣ ಪರಿಚಯವನ್ನು ಜನರಿಗೆ ಮಾಡಿಕೊಟ್ಟು ರಾಗಗಳನ್ನು ಸುಂದರವಾಗಿ ಚಿತ್ರಿಸಿ ನಮ್ಮ ಚಿತ್ತ ಭಿತ್ತಿಯಲ್ಲಿ ಅಚ್ಚಳಿಯದೆ ಎಂದೆಂದಿಗೂ ನಿಲ್ಲುವಂತೆ ಮಾಡಿದ್ದಾರೆ. ಸರಳ ರೀತಿಯ ಮತ್ತು ಸುಲಭ ಶೈಲಿಯ ಅವರ ರಚನೆಗಳು ಕರ್ಣಾಟಕ ಸಂಗೀತದ ತ್ರಿವೇಣಿ ಸಂಗಮವೆನಿಸಿದ ರಾಗ, ಭಾವ ಮತ್ತು ಲಯ ಇವುಗಳ ಸಂಘಟಿತ ಸಂಯೋಜನೆಯ ದ್ಯೋತಕ.

ಪುರಂದರದಾಸರು ಬರಿಯ ಪದಗಳ ಜೋಡಣೆಯಲ್ಲಿ ತಮ್ಮ ಸಾಮರ್ಥ್ಯವನ್ನು ತೋರಿಸುವ ಕೀರ್ತನಕಾರರ ಗುಂಪಿಗೆ ಸೇರತಕ್ಕವರಲ್ಲ. ಲಕ್ಷ್ಯ ಮತ್ತು ಲಕ್ಷಣ ಸಂಗೀತದ ಉದ್ದಾಮ ಪಂಡಿತರು ಅವರು. ಸಹಸ್ರಾರು ಗಟ್ಟಲೆ ಕೀರ್ತನೆಗಳನ್ನು ಸಂಗೀತಶಾಸ್ತ್ರದ ಚೌಕಟ್ಟಿನಲ್ಲಿ ಅಡಗಿಸಿ, ರಾಗದ ರೂಪುರೇಷೆಗಳನ್ನು ಖಚಿತವಾಗಿಯೂ ಸ್ಫುಟವಾಗಿಯೂ ಚಿತ್ರಿಸಿರುವ ಶಿಲ್ಪಿಶ್ರೇಷ್ಠರು. ತೋಡಿ, ಕಲ್ಯಾಣಿ ಮುಂತಾದ ಚಿರಪರಿಚಿತ ರಾಗಗಳನ್ನು ನಮ್ಮ ಕರ್ಣಾಟಕ ಸಂಗೀತ ಪದ್ಧತಿಯಲ್ಲಿ ಮತ್ತೆ ಪರಿಚಯ ಮಾಡಿಕೊಟ್ಟದ್ದಾರೆಂದರೆ ಸೋಜಿಗವೆನಿಸಬಹುದು. ತಾಳ್ಳಪಾಕಂ ಸಹೋದರರು ಈ ರಾಗಗಳನ್ನು ಅವರ ಕೃತಿಗಳಲ್ಲಿ ಉಪಯೋಗಿಸಿಲ್ಲ. ಆಗಿನ ಕಾಲದ ಸಂಗೀತ ಗ್ರಂಥಗಳಲ್ಲಿ ಇವುಗಳ ವಿಷಯ ಪ್ರಸ್ತಾಪಿಸಲ್ಪಟ್ಟಿಲ್ಲ. ಔತ್ತರೇಯ ಸಂಗೀತ ಪದ್ಧತಿಗೆ ಅನ್ಯ ಸಂಗೀತ ಪದ್ಧತಿಯಿಂದ ಉಂಟಾಗಿರುವ ಹಾನಿಯು ಕರ್ಣಾಟಕ ಸಂಗೀತಕ್ಕೂ ಪ್ರಸರಿಸಲು ಸಾಧ್ಯವಾಗದಂತೆ ತಡೆಗಟ್ಟಿ, ಮುಂಜಾಗ್ರತೆಯನ್ನು ವಹಿಸಿ ಆಗಿನ ಕಾಲದಲ್ಲಿ ಬಳಕೆಯಲ್ಲಿದ್ದ ರಾಗಗಳೆಲ್ಲಕ್ಕೂ ಸೂಕ್ತ ಹಾಗೂ ಸಮಂಜಸ ಸ್ವರೂಪವನ್ನು ಕೊಟ್ಟು ಅವುಗಳು ತಮ್ಮ ಪಾರಿಶುದ್ಧತೆಯನ್ನು ಉಳಿಸಿಕೊಳ್ಳುವಂತೆ ಮಾಡಿರುವವರೆಂದರೆ ಪುರಂದರದಾಸರಲ್ಲದೆ ಬೇರಾರೂ ಅಲ್ಲ.

ಔತ್ತರೇಯ ಪದ್ಧತಿಯಲ್ಲಿನ ಭೈರವ ರಾಗವನ್ನು ಹೋಲುವ ಮಾಯಾಮಾಳವ ಗೌಳ ರಾಗದ ಉಪಯುಕ್ತತೆಯನ್ನು ಕಂಡುಕೊಂಡು ಅದನ್ನು ಸಂಗೀತಾಭ್ಯಾಸಿಗಳಿಗೆ ಪ್ರಾರಂಭಪಾಠಗಳಿಗೆ ಅಳವಡಿಸಿಕೊಂಡ ಕೀರ್ತಿ ಪುರಂದರ ದಾಸರದು. **"ಸ್ವರಮೇಳ ಕಲಾನಿಧಿ"** ಎಂಬ ಅಮೂಲ್ಯವಾದ ಸಂಗೀತ ಗ್ರಂಥವನ್ನು ರಚಿಸಿದ ರಾಮಾಮಾತ್ಯರು ಮಾಯಾಮಾಳವ ಗೌಳ ರಾಗವನ್ನು **"ರಾಗಾನಾಂ ಉತ್ತಮೋತ್ತಮಃ"** ಎಂದಿದ್ದಾರೆ. ಆದಿ ರಾಗಗಳಲ್ಲೊಂದಾದ ಖರಹರಪ್ರಿಯ ರಾಗದ ಚತುಶ್ರುತಿ ವಿರಾಮಕ್ಕಿಂತ ಮಾಯಾಮಾಳವ ಗೌಳದ ದ್ವಿಶ್ರುತಿ ವಿರಾಮವು ಸಂಗೀತಾಭ್ಯಾಸಿಗಳಿಗೆ ಸುಲಭವಾಗಿ ಮಂದಟ್ಟಾಗುವುದೆಂಬುದನ್ನು ಕಂಡುಕೊಂಡು ದಾಸರಾಯರು ಮಾಯಾಮಾಳವ ಗೌಳ ರಾಗದಲ್ಲಿ ಪ್ರಥಮ ಪಾಠಗಳನ್ನು ರಚಿಸಿದರು. ಇಂದು ವಿದ್ಯಾಭ್ಯಾಸದ ಪದ್ಧತಿಯ ಬುಡವನ್ನು ಮೇಲುಮಾಡಿ, ಹೊಸ ಹೊಸ ಪ್ರಯೋಗಗಳನ್ನು ಜಾರಿಗೆ ತಂದು ಆಧುನಿಕ ವಿದ್ಯಾಭ್ಯಾಸ ಪದ್ಧತಿಯು ಹದಗೆಡುವಂತೆ ಮಾಡಿರುವ ಕೀರ್ತಿ ಇಂದಿನ **"ವಿದ್ಯಾ ಸುಧಾರಕ"** ರಿಗೆ ಸೇರಿದೆ. ಅದೇ ರೀತಿಯಲ್ಲಿ ಕೆಲವು ಸ್ಥಿತಿವಂತ ಪ್ರಮುಖ ಕರ್ಣಾಟಕ ಸಂಗೀತ ವಿದ್ವಾಂಸರು ಸಂಗೀತದ ಪ್ರಥಮ ಪಾಠಗಳನ್ನು ಮಾಯಾಮಾಳವ ಗೌಳ ರಾಗದಿಂದ ತಪ್ಪಿಸಿ, ಔತ್ತರೇಯ ಪದ್ಧತಿಯಲ್ಲಿನ **ಬಿಲಾವಲ್** ಥಾಟನ್ನು ಹೋಲುವ ಶಂಕರಾಭರಣ ರಾಗದಲ್ಲಿ ಹೇಳಬೇಕೆಂಬ ಪದ್ಧತಿಯನ್ನು ಜಾರಿಗೆ ತರಬೇಕೆಂದು ಉತ್ಸುಕರಾಗಿದ್ದಾರೆ. ಅನಾವಶ್ಯಕವಾಗಿ ಇಂಥಹ ಬದಲಾವಣೆಗಳಿಗೆ ಕೈಹಾಕದೆ ಕರ್ಣಾಟಕ ಸಂಗೀತದ ಪರಂಪರೆಯನ್ನು ಉಳಿಸುವ ಕಾರ್ಯದಲ್ಲಿ ಅವರು ನೆರವಾಗುವರೆಂದು ಆಶಿಸೋಣ.

ಮಾಯಾಮಾಳವ ಗೌಳ ರಾಗದಲ್ಲಿ ಸಂಗೀತ ಪಾಠಗಳನ್ನು ಅಭ್ಯಾಸ ಮಾಡಬೇಕೆಂಬ ಪದ್ಧತಿಯನ್ನು ಜಾರಿಗೆ ತಂದನಂತರ ಪುರಂದರದಾಸರು ಸಂಗೀತಾಭ್ಯಾಸಿಗಳಿಗೆ ಮುಖ್ಯವಾಗಿ ಬೇಕಾಗುವ ಪ್ರಥಮ ಪಾಠಗಳನ್ನು ರಚಿಸಿದರು.

ಸ್ವರಾವಳಿ, ಜಂಟಿವರಸೆಗಳು, ಅಲಂಕಾರಗಳು ಮತ್ತು ಗೀತೆಗಳು – ಇವುಗಳು ಸಂಗೀತ ಶಿಕ್ಷಣದ ಪ್ರಥಮ ಪಾಠಗಳು. ದಾಸರಾಯರ ರಚನಾ ವೈವಿಧ್ಯತೆ ಮತ್ತು ಕೌಶಲ್ಯಗಳು ಅವರ ವಿಶಾಲ ಮನೋಧರ್ಮ – ಇವುಗಳನ್ನು ಈ ರಚನೆಗಳಲ್ಲಿ ಕಾಣಬಹುದು. ಈ ಪ್ರಥಮ ಪಾಠಗಳೇ ಸಂಗೀತ ಶಾಸ್ತ್ರದಲ್ಲಿ ಪೂರ್ಣ ಪಾಂಡಿತ್ಯವನ್ನು ದೊರಕಿಸಿಕೊಡತಕ್ಕ ಏಕೈಕ ಸಾಧನ. ಇವುಗಳ ಪೂರ್ಣ ಪರಿಚಯದಿಂದ ಸ್ವರ ಮತ್ತು ತಾಳ ಪ್ರಸ್ತಾರಗಳಲ್ಲಡಗಿರುವ ಪ್ರತಿಯೊಂದು ಅಂಶವೂ ಸ್ಪಷ್ಟವಾಗಿ ಗೊತ್ತಾಗುವುದಲ್ಲದೆ, ಕರ್ಣಾಟಕ ಸಂಗೀತ ಪದ್ಧತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಉಪಯೋಗ ವಾಗುವುವು.

ರಚನಾ ವೈವಿಧ್ಯತೆಯನ್ನು ತೋರಿಸುವ ಸಾಮರ್ಥ್ಯವುಳ್ಳ ವಾಗ್ಗೇಯಕಾರರುಗಳಲ್ಲಿ ಅಗ್ರಸ್ಥಾನವು ನಿಸ್ಸಂದೇಹ ವಾಗಿ ಪುರಂದರದಾಸರಿಗೇ ಮೀಸಲು. ಶೃತಿ ಮತ್ತು ಸ್ಮೃತಿ ಇವುಗಳ ನಿಯಮಾವಳಿಗನುಗುಣವಾಗಿರುವಂತೆ ೪,೭೫,೦೦೦ ಕೃತಿಗಳನ್ನು ರಚಿಸಿರುವರೆಂಬುದು ಅವರ ಕೃತಿಗಳಿಂದಲೇ ತಿಳಿದುಬರುತ್ತದೆ. **"ವಾಸುದೇವನ ನಾಮಾ ವಳಿಯ ಕ್ಲೃಪ್ತಿಯನು ವ್ಯಾಸರಾಯರ ದಯದಿಂದ ಬಿನ್ನೈಪೆನು"** ಎಂಬ ಕೃತಿಯಲ್ಲಿ ಅವರು ರಚಿಸಿರುವ ಕೃತಿಗಳ ಸಂಖ್ಯೆಯನ್ನು ವಿಂಗಡಿಸಿಕೊಟ್ಟಿದ್ದಾರೆ.

| | | |
|---|---|---|
| ೧. | ಕೇದಾರದಿಂದ ರಾಮೇಶ್ವರದವರೆಗೆ ಕ್ಷೇತ್ರವರ್ಣನೆ .... .... | ೧,೨೫,೦೦೦ |
| ೨. | ಮಧ್ವರಾಯರಿಂದ ವ್ಯಾಸರಾಯರವರೆಗೆ ಗುರುಗಳ ಸ್ತುತಿರೂಪವಾದ ಕೃತಿಗಳು | ೫,೦೦೦ |
| ೩. | ಬ್ರಹ್ಮಲೋಕ, ಕೈಲಾಸ, ದಿಕ್ಪಾಲಕರ ಮಹಿಮೆ .... .... | ೯೦,೦೦೦ |
| ೪. | ಭಗವದ್ಭಕ್ತರ ಕಥಾಸಾರ .... .... .... | ೯೦,೦೦೦ |
| ೫. | ಆಯಾಯಾ ದೇವತೆಗಳ ಮೂರ್ತಿಧ್ಯಾನ, ಕೀರ್ತಿ, ಲಕ್ಷಣ, ಮಹಿಮೆ ಇತ್ಯಾದಿ | ೬೦,೦೦೦ |
| ೬. | ಸುಳಾದಿ .... .... .... | ೬೪,೦೦೦ |
| ೭. | ದೇವರನಾಮಗಳು, ವೃತ್ತನಾಮಗಳು .... .... | ೨೫,೦೦೦ |
| ೮. | ಶ್ವೇತದ್ವೀಪ, ಅನಂತಾಸನ, ವೈಕುಂಠ ಮಹಿಮೆ, ಶೇಷನ ಚರಿತ್ರೆ .... | ೧೬,೦೦೦ |
| | ಒಟ್ಟು | ೪,೭೫,೦೦೦ |

"ಇಂತು ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಕೃತಿಯು, ಕಂತುಜನಕನ ನಾಮ ಘನಮಹಿಮೆ | ಸಂತಸದಿ ಶ್ರುತಿ ಸ್ಮೃತಿಸಮ್ಮತದಿಂದ ಪುರಂದರವಿಠಲ ವ್ಯಾಸಮುನಿಗಳು ಪೇಳಿಸಿದರು" ಎಂದು ತಿಳಿಸಿರುವರು. ಡಾ|| ಪಂಚಮುಖಿಯವರು ತಮ್ಮ **"ಶ್ರೀ ಪುರಂದರದಾಸರ ಜೀವನಚರಿತ್ರೆ"** ಎಂಬ ಪುಸ್ತಕದಲ್ಲಿ "ಇಲ್ಲಿಯವರೆಗೆ ಕೆಲವೇ ಸಾವಿರ ಪದಗಳು ಮಾತ್ರ ಪ್ರಕಾಶಕ್ಕೆ ಬಂದಿವೆ. ಕನ್ನಡ ಆಧ್ಯಾತ್ಮಿಕ ಸಾಹಿತ್ಯಕ್ಕೆ ಪುರಂದರದಾಸರಿಂದ ಅಪಾರವಾದ ಪೋಷಣೆ ಸಿಕ್ಕಿದೆ. ವಿಷಯ ವೈವಿಧ್ಯ, ವರ್ಣನೆಯ ವೈಚಿತ್ರ್ಯ, ರಸಾಲಂಕಾರಗಳ ಜೋಡಣೆ, ಪ್ರಾಸಾದಿಕ, ದ್ರಾಕ್ಷಾಪಾಕ, ವಿರಕ್ತಿ-ಭಕ್ತಿ-ಜ್ಞಾನ ಇವುಗಳಿಂದ ದಾಸರ ಕೃತಿಗಳು ಕನ್ನಡ ವಾಙ್ಮಯದ ಅನ್ಯಾದೃಶವಾದ ಮಿಂಚಿನ ಗೊಂಚಲಂತೆ ಅಪೂರ್ವ ಸೊಬಗಿನ ಸುಗ್ಗಿ" ಎಂದಿದ್ದಾರೆ. ಶ್ರೀ ಪ್ರಸನ್ನ ವೆಂಕಟದಾಸರು ಶ್ರೀ ಪುರಂದರದಾಸನ್ನು ಸ್ತುತಿಸುವ ಒಂದು ಕೃತಿಯಲ್ಲಿ

"ಗೀತಠಾಯಿ ಸುಳಾದ್ಯುಗಾಭೋಗ ಪದ್ಯಪದ
ವ್ರಾತಪ್ರಬಂಧರಚಿಸಿ ವಿಠ್ಠಲನ
ಪ್ರೀತಿಖುಡಿಸಿ, ಪ್ರತ್ಯಕ್ಷಕಂಡು ನಲಿದ ವೈಷ್ಣವಾಗ್ರ-
ನಾಥ ಪ್ರಸನ್ವೆಂಕಟಕೃಷ್ಣನ ಪ್ರಿಯನ"

ಎಂದಿದ್ದಾರೆ.

ಲಕ್ಷ್ಯ ಮತ್ತು ಲಕ್ಷಣ ಗೀತೆಗಳನ್ನು ರಚಿಸಿರುವ ಪ್ರತಿಭಾವಂತರು ದಾಸರಾಯರು. ಕೆಲವೇ ಲಕ್ಷ್ಯಗೀತಗಳು ನಮಗೆ ದೊರಕಿರುವುದು ನಮ್ಮ ದೌರ್ಭಾಗ್ಯವೇ ಸರಿ. ಲಕ್ಷಣ ಗೀತೆಗಳು ಉಪಲಬ್ಧವಿಲ್ಲ. ಅವುಗಳನ್ನು ಶೋಧಿಸಿ ಹೊರತೆಗೆಯುವ ಮಹತ್ಕಾರ್ಯವನ್ನು ಕೈಗೊಳ್ಳಬೇಕಾದುದು ನಮ್ಮ ಕರ್ತವ್ಯ. ತಾನವರ್ಣ ಮತ್ತು ತಿಲ್ಲಾನಗಳನ್ನನೇಕ ಸಂಖ್ಯೆಯಲ್ಲಿ ರಚಿಸಿದ್ದಾರೆ. ಶ್ರೀ ಪಚ್ಚಿಮಿರಿಯಂ ಆದಿಯಪ್ಪೈಯನವರ ಸುಪ್ರಸಿದ್ಧವಾದ ಭೈರವಿ ರಾಗ **"ವಿರಿಬೋಣಿ"** ಎಂಬ ಅಟತಾಳ ವರ್ಣದ ರಚನೆಗೆ ಪುರಂದರದಾಸರ ವರ್ಣಗಳೇ ಆಧಾರವೆಂದು ಗೊತ್ತಾಗಿದೆ. ದಾಸರಾಯರ ರಚನೆ

ಗಳಲ್ಲಿ ಬಹುಭಾಗವು ಕೀರ್ತನೆಗಳು. ಮಧ್ಯಮಕಾಲದ ಕೀರ್ತನೆಗಳೇ ಜಾಸ್ತಿ. ಸಪ್ತತಾಳಗಳಲ್ಲಿ ಕೀರ್ತನೆಗಳನ್ನು ರಚಿಸಿರುವರಾದರೂ **ಛಾಪು ಮತ್ತು ಝಂಪೆತಾಳಗಳಿಗೆ** ಹೆಚ್ಚು ಪ್ರಾಧಾನ್ಯ ಕೊಟ್ಟಿದ್ದಾರೆ. "ಕೃತಿರಚನೆಯಲ್ಲಿ ಪುಷ್ಟಿಯಿಲ್ಲ. ಬರಿಯ ಸಂಕೀರ್ತನೆಯ ಮಟ್ಟದಲ್ಲಿದೆ" ಎಂದು ಭಾವಿಸುವುದು ತಪ್ಪು. ದಿವ್ಯಸಂಗೀತದ ಆನಂದದ ಪರಮಾವಧಿಯನ್ನು ಅವರ ಕೀರ್ತನೆಗಳಲ್ಲಿ ಕಾಣಬಹುದು. "ಅವರ ಕೃತಿಗಳ ಸಂಗತಿ ಪ್ರಧಾನವಾಗಿಲ್ಲ" ಎಂಬ ಆರೋಪಣೆಗೆ ಅವಕಾಶವಿಲ್ಲ. ದಾಸರಾಯರ ಕೃತಿಗಳನ್ನು ಕೇವಲ ಭಾವಗೀತೆಗಳ ಮಟ್ಟಕ್ಕೆ ತಂದಿರುವುದು ಗಾಯಕರಲ್ಲಿರುವ ದೋಷವೇ ಹೊರತು ದಾಸರಾಯರ ದೋಷವಲ್ಲ. ಅವರ ಕೃತಿಗಳು ಉನ್ನತ ಮಟ್ಟದ ರಾಗಸಂಚಾರಗಳನ್ನು ನಿರೂಪಿಸುವ ಅತ್ಯುತ್ತಮ ನಿದರ್ಶನಗಳು. ಈ ಅಂಶವನ್ನು ತುಳಜಾಜಿ ಮಹಾರಾಜರು ತಮ್ಮ "**ಸಂಗೀತಸಾರಾಮೃತ**" ಎಂಬ ಸಂಗೀತ ಗ್ರಂಥದಲ್ಲಿ ಪ್ರಸ್ತಾಪಿಸಿ ಪುರಂದರದಾಸರ ಅನೇಕ ಕೃತಿಗಳಿಂದ ಸಮರ್ಥಿಸಿದ್ದಾರೆ.

ಸಂಗೀತ ಶಾಸ್ತ್ರದಲ್ಲಿ ಪೂರ್ಣಪಾಂಡಿತ್ಯವನ್ನು ತೋರಿಸುವ ರಚನೆಗಳೆಂದರೆ ಪುರಂದರದಾಸರ "**ಸುಳಾದಿಗಳು.**" ಕೀರ್ತನೆಗಳಲ್ಲಿರುವಂತೆ ವಸ್ತು ಒಂದೆ; ಆದರೆ ಏಳೆಂಟು ಭಾಗಗಳಿಂದ ಕೂಡಿ ಸಪ್ತತಾಳಗಳಲ್ಲಿವೆ. ಕೆಲವು ಸುಳಾದಿಗಳಲ್ಲಿ ಪ್ರತಿಯೊಂದು ಭಾಗವೂ ಬೇರೆ ಬೇರೆ ರಾಗದಲ್ಲಿದೆ. ಮಿಕ್ಕ ಕೆಲವು ಸುಳಾದಿಗಳಲ್ಲಿ ಒಂದೇ ರಾಗದಲ್ಲಿ ಏಳೆಂಟು ಭಾಗಗಳೂ ಇವೆ. "**ಸುಳಾದಿ**" ಎಂಬ ಪದದ ಸರಿಯಾದ ಅರ್ಥವಿವರಣೆಯೆಲ್ಲೂ ಕೊಡಲ್ಪಟ್ಟಿಲ್ಲ: ಪ್ರಾಯಶಃ ಮೋಕ್ಷಸಾಧನೆಗೆ ಸುಳುಹಾದಿ ಅಥವ ಸುಲಭವಾದ ಹಾದಿ ಎಂಬ ಭಾವವು ಇರಬಹುದು. "**ಸಂಗೀತಸಾರಾಮೃತ**"ದಲ್ಲಿ ರಾಗ ಲಕ್ಷಣಗಳನ್ನು ನಿರೂಪಿಸುವುದಕ್ಕಾಗಿ ತುಳಜಾಜಿಯು ಪುರಂದರದಾಸರ ಸುಳಾದಿಗಳಿಂದ ಅನೇಕ ಪ್ರಯೋಗಗಳನ್ನು ಆರಿಸಿಕೊಂಡಿರುವುದು ಗೋಚರವಾಗುವುದು.

"**ಪೂರ್ವಿ**" ರಾಗವು ತುಳಜಾಜಿಯ "**ಸಂಗೀತಸಾರಾಮೃತ**"ದಲ್ಲಿ ಮಾಯಾಮಾಳವ ಗೌಳ ರಾಗದ ಜನ್ಯವೆಂದೂ, ಸಂಪೂರ್ಣರಾಗವೆಂದೂ, ಷಡ್ಜವೇ ಗ್ರಹ ಮತ್ತು ಅಂಶಸ್ವರವೆಂದೂ ಉಲ್ಲೇಖಿಸಲ್ಪಟ್ಟಿದೆ. ವೆಂಕಟಮಖಿಯವರು ಈ ರಾಗವನ್ನು "**ಪೂರ್ವಗೌಳ**" ಎಂದು ಕರೆದಿದ್ದಾರೆ. ತುಳಜಾಜಿಯು ಈ ರಾಗದ ಸಂಚಾರಕ್ರಮದಲ್ಲಿ "**ಸ ಗ ರಿ ಗ ಮ ಪ ದ ನಿ ದ ದಪ ಸ, ಸ ನಿ ದ ಪ ಮ ದ ಪ ಮ ಗ ಗ ರಿ ಸ**" ಎಂಬ ಪ್ರಯೋಗವನ್ನುಪಯೋಗಿಸಿದ್ದಾರೆ. ಸೋಮನಾಥನು ಈ ರಾಗವನ್ನು ಮಾಯಾಮಾಳವ ಗೌಳ ಜನ್ಯವೆಂದಿದ್ದಾನೆ. ರಾಮಾಮಾತ್ಯರು ಈ ರಾಗವನ್ನು ಪ್ರಸ್ತಾಪಿಸಿಲ್ಲ. ಲೋಚನಕವಿಯ ವರ್ಣನೆ ಇದಕ್ಕೆ ವಿರುದ್ಧವಾಗಿದೆ. ಈ ರಾಗವು ಔತ್ತರೇಯರದಾಗಿರಬಹುದು. ಆದರೆ ಈ ರಾಗವನ್ನು ಮೊಟ್ಟಮೊದಲು ಕರ್ಣಾಟಕ ಸಂಗೀತ ಪದ್ಧತಿಯಲ್ಲಿ ಬಳಕೆಗೆ ತಂದದ್ದು ಪುರಂದರದಾಸರು, ಈ ರಾಗದಲ್ಲಿ ದಾಸರಾಯರ ಅನೇಕ ಕೃತಿಗಳಿವೆ. ದೀಕ್ಷಿತರು "**ಗುರುಗುಹಸ್ಯ**" ಎಂಬ ಕೃತಿಯೊಂದನ್ನು ಈ ಪೂರ್ವಿ ರಾಗದಲ್ಲಿ ರಚಿಸಿದ್ದಾರೆ. "**ಸ ಗ ಮಗ ಮದ ಮಗ**" ಎಂಬ ವಿಶೇಷ ಪ್ರಯೋಗವು ಈ ರಾಗದ ಛಾಯೆಯನ್ನು ಎತ್ತಿ ತೋರಿಸುತ್ತದೆ. ಪುರಂದರದಾಸರು **ಗೌಳ** ರಾಗದಲ್ಲಿಯೂ ಅನೇಕ ಸುಳಾದಿ ಮತ್ತು ಕೀರ್ತನೆಗಳನ್ನು ರಚಿಸಿದ್ದಾರೆ.

"**ಸುಳಾದಿ**"ಯಂತೆಯೇ "**ಉಗಾಭೋಗ**"ವೆಂಬ ಮತ್ತೊಂದು ವಿಧವಾದ ರಚನೆ ದಾಸರಾಯರ ರಚನಾ ಕೌಶಲ್ಯಕ್ಕೆ ಉದಾಹರಣೆ. ಈ ಪದಕ್ಕೂ ಸರಿಯಾದ ಅರ್ಥವು ಗೊತ್ತಾಗಿಲ್ಲ. ಸರ್ವಲಘುತಾಳದಲ್ಲಿರುವ ಒಂದು ಬಹು ಸುಲಭವಾದ ರಚನೆ. ಪುರಂದರದಾಸರ ಭಾವನಾಪ್ರಪಂಚದಿಂದ ಹೊರಹೊಮ್ಮಿದ ಭಾವನಾತರಂಗಗಳು ಉಗಾಭೋಗ ರೂಪವಾಗಿ ಪ್ರವಹಿಸಿವೆ ಎನ್ನಬಹುದು. ಕೊನೆಯದಾಗಿ ತಮ್ಮ ಗುರುಗಳಾದ ವ್ಯಾಸರಾಯರಂತೆ ಅನೇಕ ವೃತ್ತನಾಮಗಳನ್ನು ರಚಿಸಿದ್ದಾರೆ. ಈ ರಚನೆಗಳಲ್ಲಿ ಪದ್ಯವೂ ಕೀರ್ತನೆಯೂ ಒಂದಾಗುತ್ತಲೊಂದು ಬರುವುದನ್ನು ಕಾಣಬಹುದು.

ಒಟ್ಟಿನಲ್ಲಿ ಹೇಳಬೇಕಾದರೆ ಶ್ರೀ ಪುರಂದರದಾಸರು ಭಕ್ತಶಿರೋಮಣಿಗಳು ಮಾತ್ರವೇ ಅಲ್ಲ, ಉತ್ತಮೋತ್ತಮ ವಾಗ್ಗೇಯಕಾರರಾಗಿದ್ದುದಲ್ಲದೆ "**ಸಂಗೀತಾಚಾರ್ಯ**" ಎಂಬ ಅಗ್ರಸ್ಥಾನವನ್ನು ಗಳಿಸಿದ ಕರ್ಣಾಟಕ ಸಂಗೀತದ ಸೀಮಾ ಪುರುಷರು. ಅವರು ಹಾಕಿದ ಭದ್ರ ತಳಹದಿಯ ಮೇಲೆ ನಿಂತಿರುವ ಕರ್ಣಾಟಕ ಸಂಗೀತವು ಅನಂತವಾಗಿ ಉಳಿಯುವುದರಲ್ಲಿ ಸಂದೇಹವಿಲ್ಲ. ಕರ್ಣಾಟಕ ಸಂಗೀತ ಪರಂಪರೆ ಬೆಳೆಯಲಿ, ಪುರಂದರದಾಸರ ಉಪದೇಶವು ನಮ್ಮ ನಾಡಿನ ಮೂಲೆಮೂಲೆಯಲ್ಲಿಯೂ ಹರಡಲಿ, ಅವರ ದಿವ್ಯವಾಣಿ ನಮ್ಮೆಲ್ಲರ ಸುಪ್ತಚೇತನಗಳನ್ನು ಜಾಗೃತಿಗೊಳಿಸಿ, ನಮ್ಮ ಪ್ರತಿಯೊಂದು ನರದಲ್ಲಿಯೂ ಮಿಡಿದು, ನಮ್ಮ ನಾಡಿನ ಸಂಸ್ಕೃತಿಯು ಸರ್ವತೋಮುಖವಾಗಿ ಬೆಳೆದು ವಿಶ್ವದಲ್ಲೆಲ್ಲ ವ್ಯಾಪಿಸುವಂತಾಗಲಿ.



ಹಂಪೆಯ ಪುರಂದರ ಮಂಟಪದಲ್ಲಿನ



ಶ್ರೀ ಪುರಂದರದಾಸರು

# ದಾಸ ಸಾಹಿತ್ಯವನ್ನು ಕುರಿತು ಬಂದ ಕೃತಿಗಳು



ಲೇಖಕರು : ಡಾ|| ಕೆ. ಎಂ. ಕೃಷ್ಣರಾವ್, ಎಂ.ಎ., ಪಿಎಚ್.ಡಿ.

"ಕನ್ನಡ ನುಡಿ" ಪತ್ರಿಕೆಯ ಬೆಳ್ಳಿ ಸಂಚಿಕೆಯ ಸಮಯದಲ್ಲಿ ಈ ಇಪ್ಪತ್ತೈದು ವರುಷಗಳಲ್ಲಿ ಕನ್ನಡ ವಾಙ್ಮಯ ಲೋಕದಲ್ಲಿ ಆಗಿರುವ ಹುಲುಸು ಬೆಳೆಯನ್ನು ಅವಲೋಕಿಸುವುದು ಉಚಿತವಾದ ಉಪಯುಕ್ತವಾದ ಕಾರ್ಯ. ಸಾಹಿತ್ಯದ ವಿವಿಧ ಮುಖಗಳಲ್ಲಿ ಆಗಿರುವ ಕೃಷಿಯನ್ನು ಒಂದೆಡೆ ಕಂಡುಕೊಂಡು ಹೆಮ್ಮೆಪಡುವ ಸಮಯದಲ್ಲೇ ಮುಂದೆ ಆಗಬೇಕಾದು ದೇನು ಎಂಬ ಕಡೆಗೂ ಗಮನ ಹರಿಸಲು ಅದು ದಿಕ್ಸೂಚಿಯಾಗುವುದು. ಕನ್ನಡ ಸಾಹಿತ್ಯದ ವಿವಿಧ ವಲಯಗಳಲ್ಲಿನ ಬೆಳೆಯನ್ನು ಕುರಿತು ಇಲ್ಲಿ ವಿವಿಧ ಲೇಖಕರು ಬರೆದಿದ್ದಾರೆ. ಅದರೊಂದಿಗೆ ಕನ್ನಡ ಸಾರಸ್ವತ ಲೋಕದ ಒಂದು ಪ್ರಮುಖ ಭಾಗವಾದ ಹರಿದಾಸ ಸಾಹಿತ್ಯವನ್ನು ಕುರಿತು ಏನು ಕೆಲಸ ನಡೆದಿದೆ ಎಂಬುದನ್ನು ಇಲ್ಲಿ ಸ್ಥೂಲವಾಗಿ ವಿವೇಚಿಸುವ ಪ್ರಯತ್ನ ನಡೆದಿದೆ.

ಇದನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಮೊದಲನೆಯದು ದಾಸ ಸಾಹಿತ್ಯವನ್ನೇ–ಮೂಲಕೃತಿಗಳು–ಪ್ರಕಟಪಡಿಸಿರುವ ಕಾರ್ಯ. ಎರಡನೆಯದು ಆ ಸಾಹಿತ್ಯದ ಹಿರಿಮೆಗರಿಮೆಗಳನ್ನು ತೂಗಿನೋಡುವ, ಬೆಲೆ ಕಟ್ಟುವ ವಿಮರ್ಶೆಯ ಕಾರ್ಯ. ಈ ಎರಡೂ ಕೆಲಸ ಈ ಕಾಲದಲ್ಲಿ ಅಷ್ಟೋ ಇಷ್ಟೋ ನಡೆದಿದೆ ಎಂಬುದು ಸಮಾಧಾನದ ವಿಚಾರ. ಸಾಲದು, ಇನ್ನೂ ಬೇಕು ಎಂಬುದು ಬೇರೆ ವಿಚಾರ.

ಮೊದಲನೆಯ ವಿಭಾಗದಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದುವೆಂದರೆ ಬೆಂಗಳೂರಿನ ಸುಬೋಧ ಪ್ರಕಟಣೆಗಳು. ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು, ಪುರಂದರದಾಸರು, ಕನಕದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಮೋಹನದಾಸರು ಮೊದಲಾದವರ ಕೃತಿಗಳನ್ನು ಸುಬೋಧ ಪ್ರಕಟಿಸಿದೆ. ಆಯಾ ಕೃತಿಕಾರರ ಜೀವನ ಚರಿತ್ರೆ, ಹಿರಿಮೆಗಳನ್ನು ಸಂಕ್ಷೇಪವಾಗಿ ಪೀಠಿಕೆ ಬರೆದು ಕೃತಿಗಳ ಮೊದಲ ಸಾಲುಗಳ ಅನುಕ್ರಮಣಿಕೆಗಳೊಂದಿಗೆ ಈ ಹೊತ್ತಗೆಗಳು ಹೊರಬಿದ್ದಿವೆ. ಮೂಲ ಸಾಹಿತ್ಯ ನಮಗೆ ಇಲ್ಲಿ ಪೂರ್ಣವಾಗಿ ಅಲ್ಲದಿದ್ದರೂ, ಶುದ್ಧ ಸ್ವರೂಪದಲ್ಲಿಯೂ ಅಲ್ಲದಿದ್ದರೂ, ಅಲ್ಪಸ್ವಲ್ಪ ದೊರೆಯುತ್ತದೆ. ಇದಕ್ಕಾಗಿ ಶ್ರೀ ಸುಬೋಧ ರಾಮರಾಯರು ಅಭಿವಂದನೀಯರು. ಇದೇ ಬಗೆಯ ಪ್ರಕಟಣಾ ಕಾರ್ಯ ಮಾಡಿರುವ ಮತ್ತೊಬ್ಬ ಮಹನೀಯರೆಂದರೆ ಉಡುಪಿಯ ಶ್ರೀ ಪಾವಂಜೆ ಗುರುರಾಯರು. ಪುರಂದರದಾಸರ ಕೃತಿಗಳನ್ನು ಐದು ಭಾಗಗಳಲ್ಲಿ ಸುಮಾರು ೧೨೦೦ ಕೃತಿಗಳಷ್ಟು ಇವರು ಪ್ರಕಟಿಸಿದ್ದಾರೆ. ಹಲವು ಆವೃತ್ತಿಗಳನ್ನು ಪಡೆಯುವ ಭಾಗ್ಯವನ್ನೂ ಈ ಗ್ರಂಥ ಪಡೆದಿದೆ. ಇದಲ್ಲದೆ ಕನಕದಾಸರು ಜಗನ್ನಾಥದಾಸರು ಮೊದಲಾದವರ ಕೃತಿಗಳನ್ನೂ ಇವರು ಪ್ರಕಟಿಸಿದ್ದಾರೆ. ಜಗನ್ನಾಥದಾಸರ ತತ್ತ್ವಸುವಾಲಿಗಳನ್ನು ಪ್ರಕಟಿಸಿದ್ದಾರೆ. ಅದೇ ದಾಸರ ಪ್ರಸಿದ್ಧ ಕೃತಿ ಹರಿಕಥಾಮೃತಸಾರವನ್ನು ಈ ಇಬ್ಬರೂ ಪ್ರಕಟಿಸಿರುತ್ತಾರೆ.

ಈ ನಿಟ್ಟಿನಲ್ಲಿ ಕೆಲಸ ಮಾಡಿರುವ ಮೂರನೆಯ ಮಹನೀಯರು ಲಿಂಗಸುಗೂರಿನ ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಾಲೆಯ ಪರವಾಗಿ ಶ್ರೀ ಗೋರಬಾಳ್ ಹನುಮಂತರಾವ್ ಕುಲಕರ್ಣಿಯವರು. ತುಂಬ ಪ್ರಯಾಸದಿಂದ ಕೈಬರೆಹ ಪ್ರತಿಗಳನ್ನು ಪತ್ತೆ ಮಾಡಿ, ಸಂಗ್ರಹಿಸಿ ಇವರು ಇದುವರೆಗೆ ಎಪ್ಪತ್ತೊಂದು ಹೊತ್ತಗೆಗಳನ್ನು ಹೊರಡಿಸಿದ್ದಾರೆ. ಎಲ್ಲ ದಾಸಸಾಹಿತ್ಯಕ್ಕೇ ಸಂಬಂಧಿಸಿದುವಾಗಿವೆ. ಇವರು ಹರಿಕಥಾಮೃತಸಾರವನ್ನು ಕೇವಲ ಗ್ರಂಥವನ್ನು ಮಾತ್ರ ಪ್ರಕಟಿಸಿರುವುದರೊಂದಿಗೆ, ಈಚೆಗೆ ಪಂಚರತ್ನ ಪ್ರಕಾಶಿಕಾ ಎಂಬ ಐದು ಬೇರೆ ಬೇರೆ ಟೀಕೆಗಳನ್ನೊಳಗೊಂಡ (ಕೆಲವು ಕಡೆ ಮೂರು-ಎರಡು ಟೀಕೆಗಳು ಮಾತ್ರ ಇವೆ) ಗ್ರಂಥವನ್ನು ಪ್ರಕಾಶಪಡಿಸುತ್ತಲಿದ್ದಾರೆ. ನಾಲ್ಕು ಭಾಗಗಳು ಹೊರಬಿದ್ದಿವೆ, ಇನ್ನೂ ಎರಡಾಗಬಹುದು. ಟೀಕಾ ಸಮೇತವಾದ ಹರಿಕಥಾಮೃತಸಾರವನ್ನು—ಭಾವ ಪ್ರಕಾಶಿಕ, ಗುರು ಹೃದಯ ಪ್ರಕಾಶಿಕಾ—ಇನ್ನಿಬ್ಬರು ಪ್ರಕಟಿಸಿದ್ದಾರೆ.

ಇದಲ್ಲದೆ ಹರಿಕಥಾಮೃತಸಾರವನ್ನು ಶಾಸ್ತ್ರೀಯವಾದ ಆಧುನಿಕ ರೀತಿಯಲ್ಲಿ ಸಂಪಾದಿಸಿ, ಟಿಪ್ಪಣಿ ಬರೆದು, ವಿವರ ವಿಷಯಾನುಕ್ರಮಣಿಕೆ, ಆಕರ ಗ್ರಂಥಗಳ ಸೂಚಿ, ಮೊದಲ ಸಾಲುಗಳ ಅನುಕ್ರಮಣಿಕೆಗಳ ಸಮೇತ ಶ್ರಮವಹಿಸಿ

ಸಂಪಾದಿಸಿದ ಈ ಲೇಖಕನ ಕೃತಿಯೊಂದು ಮೈಸೂರಿನ ಉಷಾ ಸಾಹಿತ್ಯ ಮಾಲೆಯಿಂದ ಪ್ರಕಾಶಿತವಾಗಿದೆ. ಜಗನ್ನಾಥ ದಾಸರ ತತ್ತ್ವ ಸುವಾಲಿಗಳನ್ನು ಈ ಲೇಖಕ ಹೀಗೆಯೇ ಸಂಪಾದಿಸಿದ್ದರೂ, ಅದು ಪ್ರಕಾಶಕ್ಕೆ ಬರುವ ಕಾಲ ಇನ್ನೂ ಒದಗಿ ಬಂದಿಲ್ಲ.

ಸಾಮಾನ್ಯವಾಗಿ ಮೇಲೆ ಹೇಳಿದ ದಾಸರ ಕೃತಿಗಳೆಲ್ಲವೂ ಸಂಖ್ಯೆಯಲ್ಲಿ ಹಲವು ಪ್ರಕಟವಾಗಿದ್ದರೂ ಶಾಸ್ತ್ರೀಯ ವಾಗಿ ಸಂಪಾದಿಸಿದ ಕೃತಿಗಳು ತುಂಬ ಕಡಿಮೆ—ಎಂಬುದೊಂದು ದೊಡ್ಡ ಕೊರತೆ ಇದ್ದೇ ಇದೆ. ಈ ದೃಷ್ಟಿಯಿಂದ ತುಂಬ ಕೆಲಸ ಅಗತ್ಯವಾಗಿ ಆಗಬೇಕಾದುದಿದೆ.

ಹರಿದಾಸರು ಮತ್ತು ಹರಿದಾಸ ಸಾಹಿತ್ಯವನ್ನು ಕುರಿತು ಈ ಇಪ್ಪತ್ತೈದು ವರ್ಷಗಳಲ್ಲಿ ಹಲವು ಕೃತಿಗಳು ಹೊರ ಬಿದ್ದಿವೆ. ಒಳ್ಳೆಯ ಕೆಲಸ ಈ ವಲಯದಲ್ಲಿ ನಡೆದಿದೆ ಎಂದು ಕೊಂಚ ಹೆಮ್ಮೆಯಿಂದಲೇ ಹೇಳಿಕೊಳ್ಳಬಹುದಾದ ಪರಿಸ್ಥಿತಿಯೂ ಇಲ್ಲುಂಟು.

ಈ ದೃಷ್ಟಿಯಿಂದ ಮೊದಲು ಹೇಳಬೇಕಾದ ಗ್ರಂಥಗಳೆಂದರೆ ದಿವಂಗತ ಬೇಲೂರು ಕೇಶವದಾಸರ "ಭಕ್ತ ವಿಜಯ" ಮತ್ತು "ಹರಿದಾಸ ಸಾಹಿತ್ಯ (ವಿಮರ್ಶೆ)" ಎಂಬುವು. ಚಾರಿತ್ರಿಕ ದೃಷ್ಟಿಯಿಂದ ಅನೇಕ ಹರಿದಾಸರ ಜೀವನ ಮತ್ತು ಕೃತಿ ಗಳನ್ನು ಇಲ್ಲಿ ಅವಲೋಕಿಸಲಾಗಿದೆ. ಅವರ ವ್ಯಕ್ತಿತ್ವಗಳ ವೈಶಿಷ್ಟ್ಯಗಳನ್ನು ಎತ್ತಿ ತೋರಿಸಲಾಗಿದೆ. ಕೆಲವೆಡೆಗಳಲ್ಲಿ ಪವಾಡಗಳನ್ನೇ ಹೆಚ್ಚಾಗಿ ಹೇಳಿರುವುದು ಕಂಡುಬರುವುದಾದರೂ ಕೇಶವದಾಸರದು ವಿಶಿಷ್ಟ ಕಾಣಿಕೆ ಎಂಬುದರಲ್ಲಿ ಸಂದೇಹ ವಿಲ್ಲ. ಈ ವಲಯದಲ್ಲಿ ಮೊದಮೊದಲು ಬಂದ ಕೃತಿಗಳೇ ಇವರದಾದುದರಿಂದಲೂ ಪ್ರಾಶಸ್ತ್ಯ ಹೆಚ್ಚು ಎನ್ನಬಹುದು. ಮುಂದೆ ಈ ಸಾಹಿತ್ಯ ಭಾಗದಲ್ಲಿ ಸಂಶೋಧನೆ ಮಾಡುವವರಿಗೆ ಇವು ಮಾರ್ಗದರ್ಶಿಯಾಗಿವೆ ಎಂಬುದರಲ್ಲಿ ಸಂದೇಹವಿಲ್ಲ, ಭಕ್ತ ವಿಜಯದ ಎರಡನೆಯ ಮುದ್ರಣ ಕೂಡ ಈಚೆಗೆ ಸುಬೋಧದವರಿಂದಾಗಿದೆ. ಇದು ಈ ಕೃತಿಯ ಜನಪ್ರಿಯತೆ ಯನ್ನು ಸೂಚಿಸುತ್ತದೆ.

ಶ್ರೀ ರಂ. ರಾ. ದಿವಾಕರ ಅವರ ಹರಿಭಕ್ತಿ ಸುಧೆ ಮೂರು ನಾಲ್ಕು ಮುದ್ರಣಗಳನ್ನು ಕಂಡು ಜನಪ್ರಿಯವಾಗಿದೆ. ದಾಸ ಸಾಹಿತ್ಯವನ್ನು ಹಲವು ವಿಭಾಗಗಳಾಗಿ ವಿಂಗಡಿಸಿ, ಆರಿಸಿದ ಕೃತಿಗಳನ್ನು ಆಯಾ ವಿಭಾಗಗಳಿಗೆ ದೃಷ್ಟಾಂತಗಳಾಗಿ ಕೊಟ್ಟು ಹರಿಭಕ್ತಿಸುಧೆಯನ್ನು ಇಲ್ಲಿ ಹರಿಸಲಾಗಿದೆ. ದಾಸರ ಚರಿತ್ರೆಯನ್ನೂ ಇಲ್ಲಿ ತುಂಬ ಸಂಕ್ಷೇಪವಾಗಿ ಕೊಡಲಾಗಿದೆ.

ಶ್ರೀ|| ರಾ. ಸ್ವಾ. ಪಂಚಮುಖಿಯವರ "ಹರಿದಾಸ ಸಾಹಿತ್ಯ" ಹಿರಿಯ ಹೊತ್ತಗೆ. ಕನ್ನಡ ಸಾಹಿತ್ಯ ಪರಿಷತ್ತಿ ನಲ್ಲಿರುವ ಶ್ರೀ ಅಸುಂಡಿಯವರ ದತ್ತಿ ನಿಧಿಯಿಂದ ಈ ದೊಡ್ಡ ಗ್ರಂಥ ಪ್ರಕಟವಾಯಿತು. ಇಲ್ಲಿ ವಿಸ್ತಾರವಾದ ಪೀಠಿಕೆಯೊಂದಿಗೆ ದಾಸ ಸಾಹಿತ್ಯದ ಉಗಮದಿಂದ ಹಿಡಿದು ಅದರ ಬೆಳೆವಣಿಗೆಯನ್ನು ವಿದ್ವತ್ಪೂರ್ಣವಾಗಿ ವಿವೇಚಿಸಿದ್ದಾರೆ. ಗ್ರಂಥಕರ್ತರು ಸಂಸ್ಕೃತ, ದ್ವೈತ ಸಿದ್ಧಾಂತಗಳಲ್ಲಿ ವಿದ್ವಾಂಸರಾಗಿರುವುದರಿಂದ ಅದರ ಪ್ರಭಾವ ಅವರ ಕನ್ನಡ ಕೃತಿಯ ಮೇಲೂ ಆಗಿದೆ. ಕೆಲವು ಕಡೆ ಆದ್ದರಿಂದಲೇ ಕ್ಲಿಷ್ಟವಾಗಿಯೂ ಇದೆಯೇನೋ. ಇನ್ನೂ ತಿಳಿಗನ್ನಡದಲ್ಲಿ ಸರಳ ಶೈಲಿಯಲ್ಲಿ ವಿಚಾರ ಲಹರಿ ರಸವತ್ತಾಗಿ ಇಲ್ಲಿ ಹರಿದಿದ್ದರೆ ಈ ಗ್ರಂಥದ ಪ್ರಯೋಜನ, ಸ್ಥಾನ ಅಧಿಕವಾಗುತ್ತಿತ್ತು ಎಂದು ನಮ್ಮ ಭಾವನೆ. ಆದರೂ ಹರಿದಾಸ ಸಾಹಿತ್ಯದ ವಿವೇಚನಾ ವಲಯದಲ್ಲಿ ಈ ಗ್ರಂಥವೊಂದು ಮುಖ್ಯವಾದ ಮೈಲಿಗಲ್ಲು ಎಂಬುದನ್ನು ಮರೆಯ ಲಾಗದು. ಇದೇ ಗ್ರಂಥಕರ್ತೃಗಳ ಮತ್ತೊಂದು ಚಿಕ್ಕ ಕೃತಿ ಶ್ರೀ ಪುರಂದರದಾಸರ ಚರಿತ್ರೆ. ಹೊಸಪೇಟೆಯ ಪುರಂದರದಾಸ ಸೇವಾ ಸಮಿತಿಯವರು ಇದನ್ನು ಪ್ರಕಟಿಸಿದ್ದಾರೆ. ಪುರಂದರದಾಸರ ಜೀವನವನ್ನು ಚಾರಿತ್ರಿಕವಾಗಿ ಇಲ್ಲಿ ವಿವೇಚಿಸ ಲಾಗಿದೆ.

ಪ್ರೊ|| ರಂ. ಶ್ರೀ. ಮುಗಳಿಯವರು ತಮ್ಮ "ಕನ್ನಡ ಸಾಹಿತ್ಯ ಚರಿತ್ರೆ"ಯಲ್ಲಿ ಹರಿದಾಸ ಸಾಹಿತ್ಯವನ್ನು ಚೆನ್ನಾಗಿ ವಿಮರ್ಶಿಸಿದ್ದಾರೆ. ಅನೇಕ ಹರಿದಾಸರುಗಳ ಕಾಣಿಕೆಯನ್ನು ಈ ವಿಮರ್ಶಕರೂ ಮೆಚ್ಚಿಕೊಂಡಿದ್ದಾರೆ.

ಪ್ರೊ|| ಬಿ. ನಾಗೇಶರಾಯರ "ಪುರಂದರೋಪನಿಷತ್ತು", ಶ್ರೀ ಜಿ. ವರದರಾಜರಾವ್ ಅವರ "ಪುರಂದರದಾಸರ ಕೀರ್ತನೆಗಳು", ಶ್ರೀ ಎಲ್. ಗೋಪಾಲಕೃಷ್ಣ ಉಡುಪ ಅವರ "ಶ್ರೀ ವಿಜಯದಾಸರು" ಎಂಬ ಪ್ರಬಂಧಗಳು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗಿವೆ. ಕೊನೆಯ ಎರಡು, ಪರಿಷತ್ತಿನ ಪ್ರಬಂಧ ಸ್ಪರ್ಧೆಯಲ್ಲಿ ಬಹುಮಾನ ಪಡೆದ ಲೇಖನ ಗಳೂ ಅಹುದು. ಅಸುಂಡಿಯವರ ಹರಿದಾಸ ಸಾಹಿತ್ಯ ನಿಧಿಯ ಆಶ್ರಯದಲ್ಲಿ ಪುಸ್ತಕ ಪ್ರಕಟಣೆ, ಪ್ರಬಂಧ ಸ್ಪರ್ಧೆ, ಉಪನ್ಯಾಸಗಳು ನಡೆದಿವೆ. ಈ ಉಪನ್ಯಾಸಗಳು ಪ್ರಬಂಧಗಳು ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗುತ್ತವೆ. ಪುರಂದರದಾಸ

ರನ್ನು ಕುರಿತ ಒಂದು ಪುಸ್ತಕವೂ ಅವರ ೪೦೦ ವರ್ಷಗಳ ಆರಾಧನೆಯ ಹೊತ್ತಿಗೆ ಈ ದತ್ತಿಯ ನಿಧಿಯಿಂದ ಪರಿಷತ್ತು ಪ್ರಕಟಿಸಲಿದೆ.

ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಿಂದ ಪ್ರಕಟವಾದ ಹಲಗೂರು ಕೃಷ್ಣಾಚಾರ್ಯರ "ಕರ್ನಾಟಕ ಸಂಗೀತವೂ, ದಾಸಕೂಟವೂ" ಎಂಬ ಪುಸ್ತಕ ತುಂಬ ವಿದ್ವತ್ಪೂರ್ಣವಾದುದು. ದಾಸಕೂಟದ ಉಗಮ, ಚರಿತ್ರೆ, ಸಂಗೀತ ಶಾಸ್ತ್ರದ ಬೆಳೆವಣಿಗೆಗೆ ದಾಸಕೂಟದ ಸೇವೆ, ಕಾಣಿಕೆಗಳ ವಿಚಾರವಾಗಿ ಬೆಲೆಯುಳ್ಳ ವಿವೇಚನೆ ಇಲ್ಲಿದೆ. ಅದೇ ಸಂಸ್ಥೆಯವರು ಪ್ರಕಟಿಸಿರುವ ಪ್ರೊ|| ಡಿ. ಕೆ. ಭೀಮಸೇನರಾಯರ "ಅನುಭವಾಮೃತವೂ ಹರಿಕಥಾಮೃತಸಾರವೂ" ಎಂಬ ಪ್ರಬಂಧ ತುಲನಾತ್ಮಕ ದೃಷ್ಟಿಯಿಂದ ಈ ಎರಡೂ ಗ್ರಂಥಗಳನ್ನು ವಿವೇಚಿಸಿದುದಾಗಿದೆ.

ಶೇಷಾಚಾರ್ಯ ಕಟ್ಟಿಯವರ "ಕವಿ ಕನಕದಾಸರು" ಎಂಬ ಗ್ರಂಥ ತುಂಬ ಉಪಯುಕ್ತವಾದ ಕಾಣಿಕೆಯೆನ್ನ ಬಹುದು. ಕನಕದಾಸರ ಕಾಲ, ಜೀವನ, ಕೃತಿಗಳ ವಿವರ ವಿವೇಚನೆ ಈ ಗ್ರಂಥದಲ್ಲಿ ತುಂಬ ಚೆನ್ನಾಗಿ ಅಡಕವಾಗಿದೆ. ಚಾರಿತ್ರಿಕವೂ ವಿಮರ್ಶಾತ್ಮಕವೂ ಆದ ಈ ಗ್ರಂಥ ಮಾನ್ಯವಾದುದಾಗಿದೆ.

ಶ್ರೀ ಕೃಷ್ಣಶರ್ಮ ಬೆಟಗೇರಿ ಅವರ "ಹರಿದಾಸ ಭಕ್ತಿಸಾಧನೆ" ಮತ್ತು "ಕರ್ಣಾಟಕ ಜನಜೀವನ" ಎಂಬ ಗ್ರಂಥ ದಲ್ಲಿನ "ಕನಕದಾಸರು ಕಂಡ ವಿಜಯನಗರ" ಎಂಬ ಲೇಖನ ಎರಡೂ ಇಲ್ಲಿ ಗಮನಾರ್ಹವಾದುವು.

ಡಾ|| ಎ. ಟಿ. ಪಾಟೀಲ ಅವರ ಶ್ರೀ ಪ್ರಸನ್ನ ವೆಂಕಟದಾಸರು ಎಂಬ ಕೃತಿಯೊಂದು ಮಿಂಚಿನ ಬಳ್ಳಿಯವರಿಂದ ಪ್ರಕಾಶಿತವಾಗಿದೆ. ದಾಸರ ಜೀವನ ಮತ್ತು ಕೃತಿಗಳ ವಿವೇಚನೆ ಇಲ್ಲಿರುವುದಲ್ಲದೆ, ಅವರ ಕೆಲವು ಕೃತಿಗಳನ್ನೂ ಇಲ್ಲಿ ಕೊಡಲಾಗಿದೆ. ಇದು ಲೇಖಕರು ಬೊಂಬಾಯಿ ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿಗಾಗಿ ಬರೆದ ಗ್ರಂಥವೆನ್ನ ಲಾಗಿದೆ. ಆದರೆ ಪ್ರಕಟವಾಗಿರುವುದು ಪೂರ್ಣ ಪ್ರಬಂಧವಲ್ಲ. ಪೂರ್ಣವಾಗಿ ಆ ಪ್ರಬಂಧ ಅಚ್ಚಾಗಿದ್ದರೆ ಒಳಿತಾಗಿತ್ತೇನೊ. ಸಮಗ್ರ ಚಿತ್ರ ದೊರೆಯುವುದು ಆಗ ಸಾಧ್ಯವಾಗುತ್ತಿತ್ತು. ಆ ಕೊರತೆ ಈ ಪುಸ್ತಕದಲ್ಲಿ ಕಾಣುತ್ತದೆ.

ಮತ್ತೊಂದು ಪಿಎಚ್.ಡಿ. ಮಹಾ ಪ್ರಬಂಧ ಪ್ರಕಟವಾಗಿರುವುವೆಂದರೆ ಈ ಲೇಖಕನ "ಶ್ರೀ ಜಗನ್ನಾಥದಾಸರು". ಇದು ಸಮಗ್ರವಾಗಿಯೇ ಪ್ರಕಟವಾಗಿರುವ ಪ್ರಬಂಧ. ಇಲ್ಲಿ ಪ್ರಪಂಚದ ಭಕ್ತಿ ಮತ್ತು ಅನುಭಾವ ಪಂಥಗಳ ಸ್ಥೂಲ ವಿವೇಚನೆ, ಹರಿದಾಸ ಸಾಹಿತ್ಯದ ಉಗಮ, ಬೆಳೆವಣಿಗೆ ಮತ್ತು ವೈಶಿಷ್ಟ್ಯ, ಕೆಲವು ಪ್ರಮುಖ ಹರಿದಾಸರುಗಳ ಹಿರಿಮೆ ಗಳನ್ನು ಮುಖ್ಯ ಪ್ರಬಂಧಕ್ಕೆ ಹಿನ್ನೆಲೆಯಾಗಿ ವಿವೇಚಿಸಿ, ಅನಂತರ ಶ್ರೀ ಜಗನ್ನಾಥದಾಸರ ಜೀವನ–ವ್ಯಕ್ತಿತ್ವಗಳನ್ನು ವಿವರವಾಗಿ ನಿರೂಪಿಸಿ, ಅವರ ಕೃತಿಗಳನ್ನು ವಿಸ್ತಾರವಾಗಿ ಅವಲೋಕಿಸಲಾಗಿದೆ. ಸಹಜವಾಗಿಯೇ ಹರಿಕಥಾಮೃತಸಾರ ಗ್ರಂಥದ ವಿವೇಚನೆಗೆ ಇಲ್ಲಿ ವಿಶೇಷ ಪ್ರಾಶಸ್ತ್ಯ ದೊರೆತಿದೆ. ಆ ಗ್ರಂಥದ ವೈಶಿಷ್ಟ್ಯವನ್ನು ವಿಸ್ತಾರವಾಗಿ ಇಲ್ಲಿ ನೋಡ ಬಹುದು. ಈ ಗ್ರಂಥದಿಂದ ಲೇಖಕರಿಗೆ ಪಿಎಚ್.ಡಿ. ಪದವಿ ದೊರೆತಿರುವುದಲ್ಲದೆ, ಮೈಸೂರು ಸರ್ಕಾರದ ಸಾಹಿತ್ಯ ಬಹುಮಾನವೂ, ದೇವರಾಜ ಬಹದ್ದೂರ್ ಸಾಹಿತ್ಯ ಪ್ರಥಮ ಪಾರಿತೋಷಕವೂ, ಲೋಕಶಿಕ್ಷಣ ಸಾಹಿತ್ಯ ಪಾರಿತೋಷಕವೂ ಮೈಸೂರು ವಿಶ್ವವಿದ್ಯಾನಿಲಯದ ಸಹಾಯಧನಗಳೂ ದೊರೆತಿರುವುದು, ಈ ಗ್ರಂಥದ ಪ್ರಾಶಸ್ತ್ಯವನ್ನು ಸೂಚಿಸುತ್ತದೆ. ಈ ಲೇಖಕರು "ಶ್ರೀ ಜಗನ್ನಾಥದಾಸರು" ಮತ್ತು "ಹರಿಕಥಾಮೃತ ಸಾರ" ಎರಡಲ್ಲದೆ ಹರಿದಾಸ ಸಾಹಿತ್ಯವನ್ನು ಕುರಿತು– ಬೇರೆ ಬೇರೆ ಹರಿದಾಸರನ್ನು ಕುರಿತು "ಹರಿದಾಸಭಾರತೀ", "ಪರಿಮಳ", ಅನೇಕ ಸವಿನೆನಪು ಗ್ರಂಥಗಳು, ಸಂಭಾವನಾ ಗ್ರಂಥಗಳಲ್ಲಿ ಸುಮಾರು ಮೂವತ್ತಕ್ಕೂ ಮಿಕ್ಕು ಲೇಖನಗಳನ್ನು ಆಗಾಗ್ಗೆ ಬರೆದಿದ್ದಾರೆ.

ಮಹೀಪತಿದಾಸರ ಜೀವನ ಮತ್ತು ಕೃತಿಗಳನ್ನು ಅವಲೋಕಿಸುವ ಶ್ರೀ ಮನೋಹರರಾವ್ ದೇಶಪಾಂಡೆ ಅವರ "ಸಾನಂದ ಸಾಮ್ರಾಜ್ಯ"ವೆಂಬ ಕೃತಿಯೊಂದು ಈಚೆಗೆ ಪ್ರಕಾಶಕ್ಕೆ ಬಂದಿದೆ. ಇಲ್ಲಿ ದಾಸರ ಅನೇಕ ಕೃತಿಗಳನ್ನೂ ಕೊಡ ಲಾಗಿದೆ.

ಇವುಗಳಲ್ಲದೆ ಪುರಂದರದಾಸರು ಮತ್ತು ಕನಕದಾಸರ ಹಲವು ಕೃತಿಗಳಿಗೆ ಸ್ವರಪ್ರಸ್ತಾರ ಹಾಕುವ ಕಾರ್ಯವನ್ನು ಕೆಲವು ಸಂಗೀತ ವಿದ್ವಾಂಸರು ಕೈಗೊಂಡು ಹರಿದಾಸ ಸಾಹಿತ್ಯ ಪ್ರಚಾರಕ್ಕೆ ನೆರವಾಗಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಹರಿದಾಸ ಕೃತಿಮಂಜರಿಯನ್ನು ವೈಣಿಕ ವಿದ್ವಾನ್ ಶ್ರೀ ಎಲ್. ರಾಜಾರಾಯರು ಮಾಡಿ ಕೊಟ್ಟಿದ್ದಾರೆ. ವಿದ್ವಾನ್ ಎಚ್. ಕೆ. ಅಶ್ವತ್ಥನಾರಾಯಣ ಶಾಸ್ತ್ರಿಗಳು ಪುರಂದರದಾಸರ ಮತ್ತು ಕನಕದಾಸರ ಅನೇಕ ಕೃತಿಗಳಿಗೆ ಸ್ವರಪ್ರಸ್ತಾರ ಹಾಕಿ ಪ್ರಕಟಿಸಿರುತ್ತಾರೆ. ಮೈಸೂರಿನ ಗಾನಕಲಾ ಸಿಂಧು, ಸಂಗೀತ ಚೂಡಾಮಣಿ ಶ್ರೀ ಬಿ. ಕೆ.

ಪದ್ಮನಾಭರಾವ್ ಅವರು ಪುರಂದರದಾಸರ ಅನೇಕ ಕೃತಿಗಳಿಗೆ ಸ್ವರ ಪ್ರಸ್ತಾರ ಹಾಕಿರುವ ಕೃತಿಯೊಂದು ಪುರಂದರದಾಸರ ನಾಲ್ಕುನೂರು ವರ್ಷಗಳ ಆರಾಧನಾ ಮಹೋತ್ಸವ ಸಮಿತಿಯುವರಿಂದ ೧೪-೧-೧೯೬೪ ರಂದು ಪ್ರಕಟವಾಗುವುದಿದೆ.

ಪುರಂದರದಾಸರ ಈ ಉತ್ಸವದ ಅಂಗವಾಗಿ ಕೆಲವು ಪುಸ್ತಕಗಳು ಹೊರಬೀಳಲಿವೆ. ಅವುಗಳಲ್ಲಿ ಶ್ರೀ ಎಸ್. ಕೆ. ರಾಮಚಂದ್ರರಾವ್ ಅವರ ಪುರಂದರದಾಸರ ಚರಿತ್ರೆ ಆಗಲೇ ಸಿದ್ಧವಾಗಿದೆ. ಧಾರವಾಡದ ಸಮಿತಿಯುವರು ಈಗಾಗಲೇ "ಪೂಜಾ ತತ್ತ್ವ" ಎಂಬ ದಾಸರ ಹಲವು ಕೃತಿಗಳನ್ನು ಪ್ರಕಟಿಸಿದ್ದಾರೆ. ಒಂದು ಸಾವಿರದ ಐನೂರು ಕೃತಿಗಳು ತಮಗೆ ದೊರೆತಿವೆಯೆಂದೂ, ಅವೆಲ್ಲವನ್ನು ಒಟ್ಟು ಆರು ಭಾಗಗಳಲ್ಲಿ ಪ್ರಕಟಪಡಿಸುವುದಾಗಿಯೂ ಅವರು ಹೇಳಿದ್ದಾರೆ. ಸಂಶೋಧನೆ ನಡೆಯುತ್ತಿದೆ.

ಹಲವು ಪತ್ರಿಕೆಗಳು ಈ ಉತ್ಸವಕ್ಕಾಗಿ ವಿಶೇಷಾಂಕಗಳನ್ನು ಹೊರಡಿಸುವುದಾಗಿ ಪ್ರಕಟಿಸಿವೆ. ಕೆಲವು ಸಂಸ್ಥೆಗಳು ಸವಿನೆನಪು ಗ್ರಂಥಗಳನ್ನು ಆ ಹೊತ್ತಿಗೆ ಪ್ರಕಾಶಗೊಳಿಸಲಿದ್ದಾರೆ. ಇಲ್ಲೆಲ್ಲಾ ಪುರಂದರದಾಸರನ್ನು ಕುರಿತ ಹಲವು ವಿದ್ವತ್ ಲೇಖನಗಳನ್ನೂ ನಾವು ನಿರೀಕ್ಷಿಸಬಹುದು.

ಬೊಂಬಾಯಿನ ಪ್ರೊ|| ಶಣೈ ಅವರು "ಪುರಂದರ ದರ್ಶನ"ವೆಂಬ ಗ್ರಂಥವನ್ನು ಪ್ರಕಟಿಸಿದ್ದಾರೆ. ಧಾರವಾಡದ ಮಿಂಚಿನ ಬಳ್ಳಿಯವರೂ ತಮ್ಮ "ಪುರಂದರ ದರ್ಶನ"ವೆಂಬ ಲೇಖನಮಾಲೆಯನ್ನು ಸಿದ್ಧಗೊಳಿಸುತ್ತಿದ್ದಾರೆ. ಅಂತೂ ಪುರಂದರದಾಸರ ಈ ಚತುರ್ಥ ಶತಮಾನೋತ್ಸವ ವಿದ್ವಾಂಸರ ಹರಿದಾಸ ಸಾಹಿತ್ಯ ವಿವೇಚನೆಗೆ ಸದವಕಾಶವನ್ನಿತ್ತಿದೆ. ಹಲವು ಬಗೆಯ ಲೇಖನಗಳು - ಪುಸ್ತಕಗಳು ನಿರೀಕ್ಷಣೆಯಲ್ಲಿವೆ.

ಭದ್ರಗಿರಿ ಶ್ರೀ ಕೇಶವದಾಸರು "ಪುರಂದರೋಪನಿಷತ್ತು" ಎಂಬ ಪುಸ್ತಕವನ್ನು ಐದು ಭಾಗಗಳಾಗಿ ಪ್ರಕಟಿಸಲು ಸಂಕಲ್ಪಿಸಿ ಎರಡು ಭಾಗಗಳನ್ನು ಆಗಲೇ ಪ್ರಕಟಿಸಿದ್ದಾರೆ. ತಮ್ಮ "ದಾಸಬಂಧು" ಪತ್ರಿಕೆಯ ಮೂಲಕವೂ ಈ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಬರೆಯುತ್ತಿದ್ದಾರೆ. ಪುರಂದರದಾಸರನ್ನು ಕುರಿತ ಗೀತಾ ನಾಟಕವನ್ನು ರಚಿಸಿ ಪ್ರದರ್ಶಿಸಿದ್ದಾರೆ.

ಹೀಗೆ ಈ ಎಲ್ಲ ಕೆಲಸ ತುಂಬ ಕಡಿಮೆಯ ಕೃಷಿಯೇನೂ ಅಲ್ಲ. ಇನ್ನೂ ಹೆಚ್ಚು ಬೆಳೆ ಆಗಬೇಕು ಎಂಬ ಆಸೆ ಇರಬೇಕಾದ್ದೇ ಆದರೂ ನಾಡವರ ಪ್ರೋತ್ಸಾಹ ಪುಸ್ತಕ ಕೊಂಡು ಓದುವುದರ ಮೂಲಕ ಹೆಚ್ಚು ಹೆಚ್ಚಾಗಿ ದೊರೆತರೆ ಲೇಖಕರಿಗೆ ಹುರುಪು ಬರುವುದು ಸಾಧ್ಯ. ಸಮಾಜದವರ ಸಹಾಯ ಈ ವಲಯದಲ್ಲಿ ತುಂಬ ಕಡಿಮೆ ಎಂಬುದು ವಿಷಾದದಿಂದ ಒಪ್ಪಬೇಕಾದ ಸಂಗತಿ. ಬರೆಯುವವರಿಗೆ ಬೆಂಬಲವಾಗಿ ಸಮಾಜದವರು ನಿಂತರೆ, ಕನ್ನಡಿಗರ ಪ್ರೋತ್ಸಾಹವೂ ಅಧಿಕವಾಗಿ ದೊರೆತರೆ, ಕೃತಿ ನಿರ್ಮಾಣ ಕೃಷಿಗೆ ಕಳೆಯೇರುವುದು ತಡವಾಗದು. ಅಂತಹ ಬೆಂಬಲ, ಪ್ರೋತ್ಸಾಹ ಇನ್ನು ಮುಂದಾದರೂ ದೊರೆತು ಈ ಬೆಳೆ ಅಧಿಕವಾಗಲಿ, ಮೌಲ್ಯ ಹೆಚ್ಚಾಗಲಿ ಎಂದು ಹಾರೈಸುತ್ತಾ ಈ ಕೃತಿಗಳ ವಿಹಂಗಮ ನೋಟವನ್ನು ನಿಲ್ಲಿಸುತ್ತೇನೆ.

ಹರಿದಾಸ ಸಾಹಿತ್ಯವನ್ನು ಕುರಿತು ಬಂದ ಕೃತಿಗಳೆಂಬ ಈ ಸ್ಥೂಲ ನೋಟದ ಪುಟ್ಟ ಲೇಖನ ಕನ್ನಡ ಹರಿದಾಸ ಸಾಹಿತ್ಯವನ್ನು, ಹರಿದಾಸರ ವಿಚಾರವನ್ನೂ ತಿಳಿಯಬಯಸುವವರಿಗೆ ದಿಕ್ಸೂಚಿಯಾಗುವುದೆಂದು ಲೇಖಕನ ಭಾವನೆ.*



* ಉದ್ದೇಶಪೂರ್ವಕವಾಗಿ ಇಲ್ಲಿ ಯಾರ ಹೆಸರನ್ನೂ, ಹೊತ್ತಗೆಯನ್ನೂ ಹೇಳದೇ ಬಿಟ್ಟಿಲ್ಲ. ಮರೆವಿನಿಂದಲೋ, ಗಮನಕ್ಕೆ ಬಾರದೆಯೋ ಕೈಬಿಟ್ಟು ಹೋಗಿದ್ದರೆ, ಅವರು ಮನ್ನಿಸಬೇಕೆಂದು ಲೇಖಕನ ಕೋರಿಕೆ.

ಕರ್ನಾಟಕಾದ್ಯಂತ ಯಶಸ್ವಿಯಾಗಿ ಪ್ರದರ್ಶಿಸಲ್ಪಡುತ್ತಿರುವ

# ದೀಪಾವಳಿ ಉಡುಗೊರೆ..







ಕರ್ನಾಟಕ
ಫಿಲಂಸ್
ಅರ್ಪಿಸುವ...









ಶ್ರೀ ಸರಸ್ವತಿ
ಚಿತ್ರ ರವರ...

# ಜೇನು ಗೂಡು

(ಕನ್ನಡ)







ಸಂಭಾಷಣೆ..
ಸೋರಟ್ ಅಶ್ವಥ್

ಗೀತೆಗಳು · ಕು.ರ.ಸೀತಾರಾಮ ಶಾಸ್ತ್ರಿ
ಸೋರಟ್ ಅಶ್ವಥ್

ಸಂಗೀತ · ವಿಜಯಕೃಷ್ಣಮೂರ್ತಿ

ಛಾಯಾಗ್ರಹಣ · ಆರ್. ಮಧು

ಹಂಚಿಕೆ...
ಮುಂಬಯಿ
ಕರ್ನಾಟಕ

ಶ್ರೀನಿವಾಸ
ಪಿಕ್ಚರ್ಸ್
ಗದಗ..





ನಿರ್ದೇಶನ... ವೈ. ಆರ್. ಸ್ವಾಮಿ ಬಿ.ಎ.

NEGATIVE RIGHTS CONTROLLED BY | KARNATAKA FILMS LTD., BANGALORE-9.

ನಿಮ್ಮ ನೆಚ್ಚಿನ ಚಿತ್ರಮಂದಿರಗಳಲ್ಲಿ ಬರುತ್ತದೆ!




ಹೆಚ್.ಎಮ್.ಬಾಬಾ ರವರ...

# ಮೋಹಿನಿ ಭಸ್ಮಾಸುರ

(ಕನ್ನಡ)

ನಿರ್ದೇಶಕ ಎನ್.ಎಸ್.ವರ್ಮ B.Sc.F.P. ನಿರ್ಮಾಪಕ ಟಿ.ಮದಾರ್

ಅತಿ ಶೀಘ್ರದಲ್ಲಿಯೇ ಬರುತ್ತದೆ

ಮುಖ್ಯ ಭೂಮಿಕೆಯಲ್ಲಿ
ರಾಜಾ ಶಂಕರ್
ಬಾಲಕೃಷ್ಣ
ನರಸಿಂಹರಾಜು
ಬಿ.ರಾಘವೇಂದರ್‌ರಾವ್
ಬಿ.ಕೆ.ಈಶ್ವರಪ್ಪ
ಅಶ್ವಥ್
(ಬಾಲನಟ) ರಾಮ್‌ಕುಮಾರ್
ಬಾಲನಟ ಉದಯಕುಮಾರ್
ಹರಿಣಿ
ಲಕ್ಷ್ಮೀದೇವಿ
ಪಾಪಮ್ಮ
ರಮಾದೇವಿ
ಶಾಂತಮ್ಮ
ಮುಂತಾದವರು

ಎಮರಾಲ್ಡ್ ಪ್ರೊಡಕ್ಷನ್ಸ್ ರವರ

# ಹಳ್ಳಿಯ ಹುಡುಗಿ (ಕನ್ನಡ)



ಸಂಗೀತ:
ವಿಜಯಭಾಸ್ಕರ್

ಹಾಡುಗಳು:
ಕಣಗಲ್ ಪ್ರಭಾಕರಶಾಸ್ತ್ರಿ
ಕು.ರಾ. ಸೀತಾರಾಮಶಾಸ್ತ್ರಿ
ಕರೀಮ್‌ಖಾನ್

ಸಂಭಾಷಣೆ:
ಗೀತಾಪ್ರಿಯ

ಛಾಯಾಗ್ರಹಣ:
ಜಿ.ಚಂದ್ರನ್

ಸ್ಟುಡಿಯೊ
ವಾಹಿನಿ

ಚಿತ್ರಕಥೆ - ನಿರ್ದೇಶನ
G.ಕೃಷ್ಣಮೂರ್ತಿ B.A.

ನಿರ್ಮಾಪಕರು
D.ನಾರಾಯಣಪ್ಪ

ಮೈಸೂರು ಹಂಚಿಕೆದಾರರು:
ಶೀಲಾ ಪಿಕ್ಚರ್ ಸರ್ಕ್ಯೂಟ್
ಬೆಂಗಳೂರು

ಜನವರಿ ಬಿಡುಗಡೆ!



ತಾರಾಗಣ :
ರಾಜಕುಮಾರ್
ಹೆಚ್.ಪಿ.ಸರೋಜ
ಆದವಾನಿ ಲಕ್ಷ್ಮಿ
ಪಂಡರಿಬಾಯಿ
ಕೆ.ಎಸ್.ಅಶ್ವಥ್
ಹೆಚ್.ಆರ್.ಶಾಸ್ತ್ರಿ - ನಿರಂಜನ್
ರಮಾದೇವಿ - ಜಯ - ರತ್ನಾಕರ್
ವರದರಾಜು - ಜಿ.ಎನ್.ಪ್ರಧಾನ್
ಮತ್ತು
ವೈ.ವಿ.ರಾವ್

ಶ್ರೀ ಜಗದೀಶ್ವರಿ ಫಿಲಂಸ್ ರವರ

# ಹೆಣ್ಣಿನ ಬಾಳು ಕಣ್ಣೀರು

ಸಂಭಾಷಣೆ: ಕುಂದಾನಿ ಸತ್ಯನ್
ಸಂಗೀತ: H.R.ಪದ್ಮನಾಭ ಶಾಸ್ತ್ರಿ
ಗೀತೆಗಳು: ವಿಜಯನರಸಿಂಹ ಮತ್ತು ಎಂ.ಎನ್.ಆರಾಧ್ಯ
ಕಲೆ: ರಾಜು

ಛಾಯಾಗ್ರಹಣ - ನಿರ್ಮಾತೃ-ನಿರ್ದೇಶಕ - ಸ್ಟುಡಿಯೋ
ಜಿ.ದೊರೈ - ವೈ.ವಿ.ರಾವ್ - ಮೆಜೆಸ್ಟಿಕ್

Negative Rights Controlled by:
B.M.MUTHUKUMARAPPA REDDIAR, MADRAS.

Krishnan

AMRITAKALA PRODUCTIONS

ಅಮೃತಕಲಾ ಪ್ರೊಡಕ್ಷನ್ಸ್‌ರವರ

ಮಹೋನ್ನತ ಪೌರಾಣಿಕ ಚಿತ್ರ.



# ಶ್ರೀರಾಮಾಂಜನೇಯ ಯುದ್ಧ

ನಿರ್ದೇಶನ.
ಎಂ.ಎಸ್.ನಾಯಕ್ M.A.

ತಾರಾಗಣ. ರಾಜಕುಮಾರ್. ಉದಯಕುಮಾರ್. ಕೆ.ಎಸ್.ಅಶ್ವಥ್
ಡಿಕ್ಕಿಮಾಧವರಾವ್. ಪಂಡರಿಬಾಯಿ. ಅದವಾನಿಲಕ್ಷ್ಮಿ. ಚಂದ್ರಕಲಾ. ಅಮೃತಕಲಾ.
& ಬೇಬಿ ಪದ್ಮಿನಿ..

ಂಚಿಕೆಗಾರರು: ಹಳೇ ಮೈಸೂರು ರಾಜ್ಯಕ್ಕೆ : ಬೃಂದಾವನ್ ಫಿಲಿಂಸ್, ಬೆಂಗಳೂರು-೯.
ಬೊಂಬಾಯಿ ಕರ್ನಾಟಕಕ್ಕೆ : ಜ್ಯೋತಿ ಫಿಲಿಂಸ್, ಹುಬ್ಬಳ್ಳಿ.

CHITRA

Reg. No. B. G. 4—December 1963

Licensed to Post withou[t]
pre-payment. License No

# ಪ್ರತಿಜ್ಞೆ ಸ್ವೀಕರಿಸಿದ್ದೇವೆ.

# ಪಣ ತೊಟ್ಟಿದ್ದೇವೆ.

ನನ್ನ ಮಾತೃ ಭೂಮಿಯ ರಕ್ಷಣೆಗಾಗಿ
ನಾನು ನನ್ನ ಸರ್ವಸ್ವವನ್ನೂ
ಸಮರ್ಪಿಸುತ್ತೇನೆ
ಮತ್ತು
ವೈರಿಯ ವಶದಲ್ಲಿರುವ
ಭರತ ಭೂಮಿಯ
ಪ್ರತಿಯೊಂದು ಅಂಗುಲ ನೆಲವನ್ನೂ
ಸ್ವಾಧೀನ ಪಡಿಸಿಕೊಳ್ಳುವವರೆಗೆ
ವಿಶ್ರಾಂತಿ ಪಡೆಯುವುದಿಲ್ಲ
ಎಂದು ಪ್ರತಿಜ್ಞೆ ಮಾಡುತ್ತೇನೆ.

ಚೀನೀ ಆಕ್ರಮಣಕಾರರ ಮೇಲೆ
ಜಯಗಳಿಸುತ್ತೇವೆ.

ಪ್ರಕಟಣೆ

# ಮೈಸೂರು ಇಂಪ್ಲಿಮೆಂಟ್ಸ್ ಫ್ಯಾಕ್ಟರಿ,

# ಹಾಸನ.

[illegible] ಕನ್ನಡ ಸಾಹಿತ್ಯ ಪರಿಷತ್ತು, [illegible]



ಸಂಪಾದಕ

ಜಿ. ವೆಂಕಟಸುಬ್ಬಯ್ಯ

ಸಂಪಾದಕ ಮಂಡಲಿ

ಶ್ರೀನಿವಾಸರಾವ್ ಕೊರಟಿ

ಆರ್. ರಾಚಪ್ಪ

# ಕನ್ನಡ ನುಡಿ




ಜನವರಿ ೧೯೬

ಸಂಪುಟ ೩೨
ಸಂಚಿಕೆ ೧

ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ,
ಬೆಂಗಳೂರು-೧೮

**ಕಾದಂಬರಿ**

ಹಳ್ಳಿಯಿಂದ ದಿಳ್ಳಿಗೆ; ಲೇ: ಸರೋಜ ನಾರಾಯಣ ರಾವ್; ಪ್ರ: ಸುದರ್ಶನ ಪ್ರಕಾಶನ, ತಾರಾನಿವಾಸ, ತಿಪಟೂರು; ಪುಟ: ೧೩೦; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೦೦, ೧೯೬೮.

ಆಸೆಯ ಸೇತುವೆ; ಲೇ: ಸರೋಜ ನಾರಾಯಣರಾವ್; ಪ್ರ: ಪ್ರಕಾಶನ ಸಾಹಿತ್ಯ, ತಲಕಾಡು ಸುಬ್ಬರಾವ್‌ಗಲ್ಲಿ, ಅರಳೇಪೇಟೆ, ಬೆಂಗಳೂರು-೨; ಪುಟ: ೧೨೮; ಆಕಾರ: ಕ್ರೌನ್: ಅಷ್ಟದಳ; ಬೆಲೆ: ರೂ. ೨-೦೦, ೧೯೬೮.

**ಕಥಾಸಂಕಲನ**

ಒಂದು ಕಥೆ ಒಂದು ವ್ಯಥೆ; ಲೇ: ಶಿವರಾಮು; ಪ್ರ: ರಾಷ್ಟ್ರೋತ್ಥಾನ ಸಾಹಿತ್ಯ, ಗವೀಪುರಂ ಮಾರ್ಗ, ಕೆಂಪೇಗೌಡನಗರ, ಬೆಂಗಳೂರು-೧೯; ಪುಟ: ೮ + ೨೩೬; ಆಕಾರ: ಕ್ರೌನ್ ಅಷ್ಟದಳ; ಬೆಲೆ: ೪-೫೫, ೧೯೬೮.

ಬಾಳಯೋಗಿ; ಲೇ: ಶ್ರೀಮತಿ ಇಂದುಮತಿ ವಿಭೂತಿ; ಪ್ರ: ಸಿಂಪಿ ಲಿಂಗಣ್ಣ, ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ವಿಜಾಪುರ ಜಿಲ್ಲೆ; ಪುಟ: ೬ + ೭೭; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೫೦, ೧೯೬೮.

**ನಾಟಕ**

ಶಾಂತವೀರ ಕೆಂಪೇಗೌಡ; ಲೇ: ಕುಂದಾನಿ ಸತ್ಯನ್; ಪ್ರ: ಶ್ರೀ ಸುರಭಿ ಕಲಾವಿದರು, ಮೈಸೂರು; ಪುಟ: ೭೩; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೦೦, ೧೯೬೭.

ವರದಕ್ಷಿಣೆ; ಲೇ: ಕುಂದಾನಿ ಸತ್ಯನ್; ಪ್ರ: ಶ್ರೀ ಸುರಭಿ ಕಲಾವಿದರು, ಮೈಸೂರು; ಪುಟ: ೨೭; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೦೦, ೧೯೬೭.

ಪುರೂರವ; ಲೇ: ದಾಸಪ್ಪ, ಕೆ.; ಪ್ರ: ಕದಂಬ ಮಿತ್ರ ಕಲಾಸಂಘ, ಮೈಸೂರು; ಪುಟ: ೩೫; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೦-೭೫, ೧೯೬೮.

**ಕವನ**

ತರಣಿ ಅವತರಣಿಕೆ; ಲೇ: ಈಶ್ವರಪ್ಪ, ಚಿಕ್ಕೋಳ, ಚ. ಪ್ರ: ಶ್ರೀ ವಾಗ್ದೇವಿ ಮಂದಿರ ಪ್ರಕಾಶನ, ಹಿರೇಕೂನಲೂರು ಚೆನ್ನಗಿರಿ ತಾಲ್ಲೂಕು, ಶಿರಾ ಮಾರ್ಗ; ಪುಟ: ೪೮; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೫೦, ೧೯೬೮.

ಮಥನ; ಲೇ: ಸುಂದರನಾಡಕರ್ಣಿ; ಪ್ರ: ಜಿ. ಎಸ್. ನಾರಾಯಣರಾವ, ಉಪ್ಪುಂದ, (ದ.ಕ) ಪುಟ: ೨ + ೩ + ೫೯ + ೧೧; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೫೦, ೧೯೬೮.

ಚಾಟಿಚುಟಿಕಗಳು; ಲೇ: ಭಾಲಚಂದ್ರಘಾಣೇಕರ: ಪ್ರ: ಸಮಾಜ ಬುಕ್‌ಡಿಪೋ, ಶಿವಾಜೀಬೀದಿ, ಧಾರವಾಡ-೧; ಪುಟ: ೪ + ೨೪; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೦-೫೦, ೧೯೬೮.

ಶ್ರುತಾಶ್ರುತ; ಲೇ: ಲಿಂಗಣ್ಣ, ಸಿಂಪಿ; ಪ್ರ: ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ವಿಜಾಪುರ ಜಿಲ್ಲೆ; ಪುಟ: ೧೬ + ೧೩೦; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೦೦, ೧೯೬೮.

**ಷಟ್ಪದಿ**

ಶಾಕುಂತಲಾ; ಲೇ: ರಾಮುರಾಯರು, ಸಮೇತನಹಳ್ಳಿ; ಪ್ರ: ರಾಸಪ್ರಕಾಶನ, ಮಂಡ್ಯ; ಪುಟ: ೨೮೬; ಆಕಾರ: ಕ್ರೌನ್ ಅಷ್ಟದಳ; ರೂ. ೭-೦೦, ೧೯೬೮.

**ಪ್ರಬಂಧ**

ಅಭಿವ್ಯಕ್ತಿ; ಪ್ರ: ಕರ್ನಾಟಕ ಸಂಘ, ಪ್ರಭಾಕರ ಬಿಲ್ಡಿಂಗ್ಸ್, ಉಡುಪಿ (ದ.ಕ); ಪುಟ: ೯೬; ಬೆಲೆ: ೪-೦೦, ೧೯೬೮.

**ದೇವರ ನಾಮುಗಳು**

ವೀರವಿರಾಸ್ವಾಮಿದಾಸರ ದೇವರ ನಾಮುಗಳು; ಲೇ: ರವಿಚಂದ್ರ; ಪ್ರ: ಚೂಡಾಮಣಿ ಪ್ರಕಾಶನ, ೧೮, ಸುಬ್ಬಯ್ಯ ಕಾಲೊನಿ, ಜಿ. ಇ. ಎಫ್. ಅಂಚೆ, ಬೆಂಗಳೂರು-೨೬; ಪುಟ: ೨೬; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೦-೩೦, ೧೯೬೮.

**ಹಾಡುಗಳು**

ನಿವೇದನೆ; ದಿಗಂಬರ ಜೋಶಿ; ಪ್ರ: ಸಾಹಿತ್ಯಪ್ರಕಾಶನ, ಬೆಳಗಾಂವ; ಪುಟ: ೧೪; ಬೆಲೆ: ರೂ. ೦-೫೫, ೧೯೬೮.

# ಕನ್ನಡ ನುಡಿ

'ಕನ್ನಡ ನುಡಿ' ಕರ್ನಾಟಕದ ಗೆಜೆಟಿಯರ್ ಆಗಬೇಕು
—ಬಿ.ಎಂ.ಶ್ರೀ



ಸಂಪುಟ : ೩೨
ಸಂಚಿಕೆ : ೧
ಜನವರಿ ೧೯೬೯

ಈ ಸಂಚಿಕೆಯಲ್ಲಿ . . .



## ರಾಜ್ಯೋದಯ



ಬರಿಯ ರಾಜ್ಯೋದಯದಿಂ ಗಳಿಸಿ ಉಳಿಸಿದುದೇನು
ಎಂದು ಎಂದಾದರೂ ನೀನು ಚಿಂತಿಸಿಹೆಯಾ ?
ಚಿಂತಿಸಲು ಏನುಂಟು ; ಸುತ್ತ ತುಂಬಿದೆ ಇಂದು
ಕಲಹ ಕಚ್ಚಾಟವಿದ ನೀನಱಿಯೆಯಾ ?

* * *

ಹಲವು ನೆರೆನಾಡಿನಲಿ ಹರಿದು ಹಂಚಿದ ತುಂಡು
ನೆಲದ ನಂಟಿನ ಸವಿಯೆ ಇದರ ಗುರಿಯೆ ?
ನುಡಿಗಾಗಿ, ಗಡಿಗಾಗಿ, ನದಿಗಾಗಿ, ನೆಲಕಾಗಿ
ಅಣ್ಣ-ತಮ್ಮನ ಕಲಹ ಇದರ ಸಿರಿಯೆ ?

* * *

ಮದ್ರಾಸಿ ನಾನೆಂಬ ; ಮೈಸೂರು ನನದೆಂಬ
ನೀ ಅನ್ಯ ತೊಲಗೆಂಬುದಿದರ ಪರಿಯೆ ?
ನೆಲವೊಂದೆ ; ಜಲವೊಂದೆ ತಾವೊಂದೆ ಎಂಬಂಥ
ಅಱಿವನಱಿಯದ ಇರವು ಏಕೊ ಅಱಿಯೆ

* * *

ಬರಿಯ ಭಾಷೆಯ ಬಂಧ ; ಬರಡು ಹಸುವಿನ ಅಂದ
ಎಂದು ತಾರದು ಜನದಿ ಐಕ್ಯೋದಯ
ಎಲ್ಲರೂ ನನ್ನವರು ; ನಾ ಎಲ್ಲರವನೆಂಬ
ತಿಳಿವು ಬಂದಾಗಲೇ ದಿಟದಿ ರಾಜ್ಯೋದಯ



ಕೆ. ಆರ್. ಗಣೇಶರಾವ್

# ಚಾಮುಂಡಿ – ಕಾರ್ತೀಕ

೧

ಇರುಳ ತೆರೆಯೊಡಲಲ್ಲಿ ಮಿಂಚಿನಲೆಗಳು ಚಿಮ್ಮಿ
ರೂಹಾಗಿ ಮೈವೆತ್ತು ಬಾನ್‌ಬಯಲು ಬಳಸಿ
ಹೆಜ್ಜೆಸೋಂಕಿಗೆ ಸುಳಿದ ತಮುಹರಿಸಿ ನೆಲ ಒರಸಿ
ಕಾಳರಾತ್ರಿಯ ನುಂಗಿ ನಿಂದ ಓ ! ಮಾತಾಯೆ !
ಮಿಂಚುಗೋಲನು ಪಿಡಿದು ವಿಶ್ವಪಟರಂಗದಲಿ
ಕಿಡಿವಜ್ರಕಡೆವಂತೆ ಉತ್ಸವಾನ್ವಿತೆಯಾಗಿ
ಒಂದೊಂದೆ ತಾರೆಯನು ತೇಲಿಸಿದೆ ಪುಟಗಳಲಿ
ಕವನಪುಷ್ಪವ ಹೆಣೆವ ಬೊಮ್ಮನರಸತಿಯಂತೆ !

೨

ನೀಲಿ ಪಟದಲಿ ತೋರ್ದ ಚಿಕ್ಕಿಯಕ್ಕರಗಳಲಿ
ಸಾಮ್ರಾಜ್ಯ ಸೀಗುರಿಯ ಬೆಳ್ಗೊಡೆಗಳುರುಳಿ
ಮುಕುಟಗದ್ದಿಗೆಯಾಳ್ಕೆ ಹಣೆಯ ಬರಹವ ತೊಡೆದು
ಕುಲಪಟ್ಟ ಹೆಮ್ಮೆಗಳನೊರಸಿ ತೀರಿಸಿ ನಿಂದು
ಸಂಹಾರಲೀಲೆಯಲಿ ರುದ್ರನಾಟ್ಯವ ತೋರಿ
ಪದಬಂಧ ಸಿಂಗಾರ ಉಪಮೆ ಗೆಜ್ಜೆಯ ಕುಣಿಸಿ
ವಿಲಯಾಗ್ನಿ ಕಿಡಿಗಳಲಿ ಇತಿಹಾಸಮಂ ಬರೆದು
ನಿಂದನಿಲವಿಗೆ ಬೆಚ್ಚಿ ' ಚಾಮುಂಡಿ ' ನೀನೆಂದೆ !

೩

ಶ್ಯಾಮಲಾಂಚಲೆ ಧರೆಯ ಬಯಲಸಿರಿ ಬನದಲ್ಲಿ
ಗೃಹವನಿತೆಯರಸಾಲು ಕೈದೀಪ ಸಾಲಿರಿಸಿ
ಕಾರ್ತೀಕವಾಚರಿಸಿ ಕವನಕಟ್ಟುವರೇನು ?
ಕನಸು ನನಸಾಗಿಸುವ ರಸಪೂರ್ಣ ಕೃತಿಯಲ್ಲಿ
ತಿರೆಯ ಚಿರಹಾಸವನ್ನು ಇನ್ನು ಬಯಸುವರೇನು ?
ಶತಮಾನ ಶತವುರುಳಿ ನೆನ್ನೆನೆನ್ನೆಗೆ ಸೇರಿ
ನಾಳೆಬಹುದೇನೆಂಬ ಹಾಳು ! ನೆನಪಿಗೆ ಪೊಸತೆ ?
ಓ ಕಾಳಿ ! ಮಾಕಾಳಿ ! ಇದು ಮತ್ತೆ ನಿನಲೀಲೆ !

೪

ಓ ತಾಯೆ ! ಮುನಿಯದಿರು ! ' ನಾಶದೊಡಲೊಳಗೆಲ್ಲೊ
ನವಸೃಷ್ಟಿ ಮಲಗಿಹುದು ' ಎಂದೆಂಬ ಕಲ್ಪನೆಗೆ
ಇಂದಿನೆಲ್ಲವನಳಿಸಿ ಹೊಸಲಿಪಿಯ ಬರೆಯುವೆಯ ?
ಯುಗವೊಂದರೋಟದಲಿ ನನ್ನಾಯು ಬರಿಚಿಕ್ಕೆ !
ಮೇರೆಯರಿಯದ ಮೈಮೆ ನಿನ್ನದೆಲೆ ಮಾದೇವಿ !
ಆದರೂ ನೀಡುತಿರು ! ಹಣತೆಯೊಂದರ ಕೊನೆಯ
ಕದರಿನೊಳಗಡಗಿರುವ ಶಾಂತಿಶುಭಗಳ ಹೂಡು !
ಸರ್ವಜನದೆದೆಯಲ್ಲಿ ನೆಮ್ಮುನೆಚ್ಚನು ಹಾಡು !

ಡಿ|| ಟಿ. ಎನ್. ಮಹಾದೇವಯ್ಯ

---

# ಉತ್ತುಂಗ ಸಾಹಿತಿ ಉತ್ತಂಗಿ

ಎಸ್. ಆರ್. ಗುಂಜಾಳ

ಸಾಮಾನ್ಯವಾಗಿ, ಭಾರತದಲ್ಲಿಯೇ ಸಂಸಾರಿಕರ ಜೀವನ ಚರಿತ್ರೆ ಬರೆಯುವ ಪರಿಪಾಠವಿಲ್ಲ ; ಭಾರತೀಯರ ಪುರಾತನ ಸಾಹಿತ್ಯವೆಲ್ಲ ದೇವಾನುದೇವತೆಗಳ, ರಾಜರಾಜೇಶ್ವರರ ಚರಿತ್ರೆಗೇ ಮೀಸಲಾಗಿತ್ತು. ಮಧ್ಯಯುಗೀನ ಹಾಗೂ ಅರ್ವಾಚೀನ ಸಾಹಿತ್ಯದಲ್ಲಿ ಮಾನವರಿಗೆ ಹೆಚ್ಚಿನ ಪ್ರಾಶಸ್ತ್ಯ ಕಂಡುಬರುತ್ತಿದ್ದರೂ ಅದರಲ್ಲಿ ವ್ಯವಹಾರಲೋಕದ, ಸಾಮಾನ್ಯ ಮಾನವರಿಗೆ ಸ್ಥಾನವೇ ಇಲ್ಲ. ಸಾಧು-ಸತ್ಪುರುಷರೋ, ವೀರಧೀರರೊ ಕೃತಿನಾಯಕರಾಗಿರುವರು. ಕವಿಪುಂಗವರ, ಸಾಹಿತ್ಯ-ಶ್ರೇಷ್ಠರ, ಸಂಶೋಧಕರ ಚರಿತ್ರೆಗಳು ಇಂದಿಗೂ ನಮಗೆ ದುರ್ಲಭವಾಗಿವೆ. ನಮ್ಮಂತೆಯೇ ಹುಟ್ಟಿ, ನಮ್ಮೊಡನೆಯೇ ಬೆಳೆದು, ನಮ್ಮೆಲ್ಲರಿಗೂ ಆದರ್ಶಪ್ರಾಯವಾದ ಜೀವನವನ್ನು ನಡೆಸಿಕೊಂಡು ಬಂದಿರುವ ಪೂಜ್ಯ ಉತ್ತಂಗಿ ಅವರ ಜೀವನವು ಜನಸಾಮಾನ್ಯರಿಗೆ ಉಜ್ವಲ ಆದರ್ಶವಾಗಿದೆಯೇ ಹೊರತು, ಸಂಸಾರವೆಂದರೆ ಮಾಯೆಯೆನ್ನುವ ಸನ್ಯಾಸಿಯ ಜೀವನವಾಗಲೀ, ಜಗತ್ತೆಂದರೆ ತನ್ನ ಪೌರುಷ ಪ್ರದರ್ಶನದ ರಂಗಭೂಮಿಯೆಂದು ತಿಳಿಯುವ ಪುಂಡಾಟಿಕೆಯ ವೀರಾಧಿವೀರರ ಜೀವನವಾಗಲಿ ನಮಗೆ ಆದರ್ಶವಾಗಲಾರದು. ನಮ್ಮ ನಿತ್ಯವ್ಯವಹಾರದಲ್ಲಿ, ನಮ್ಮ ಎಡ-ಬಲದಲ್ಲಿ ಉನ್ನತ ಜೀವನವನ್ನು ನಡೆಸುವ ಗೃಹಸ್ಥರನ್ನು ಗುರುತಿಸಿ ಗೌರವಿಸುವ ಬುದ್ಧಿಯನ್ನು ಕಲಿಯುವವರೆಗೂ ನಾವೆಂದೂ (ಭಾರತೀಯರು) ಉಜ್ವಲ ಜನಾಂಗವಾಗಿ ಬಾಳಲಾರೆವು ; ನಾವೆಂದೂ ಸಾಮಾನ್ಯ ಕುಟುಂಬದಲ್ಲಿ ಸನ್ಮಾನಿತ ವ್ಯಕ್ತಿಗಳನ್ನು ಹುಟ್ಟಿಸಲಾರೆವು.

ಸಾಹಿತ್ಯಕ್ಕೂ ಜನಜೀವನಕ್ಕೂ ನಿಕಟ ಸಂಬಂಧವಿದೆ. ಉಜ್ವಲ ಸಾಹಿತ್ಯವು ಉನ್ನತ ಜನಾಂಗದ ಉಗಮಸ್ಥಾನವಾಗಿದೆ. ಸಾರಯುತವಾದ ಸತ್ವಯುತವಾದ ಸಾಹಿತ್ಯವಿದ್ದ ದೇಶದಲ್ಲಿ ಸತ್ವಶಾಲಿ ಜನಾಂಗವು ಇದ್ದೇ ತೀರುತ್ತದೆ. ಉನ್ನತ ಸಾಹಿತ್ಯ ಭಾಂಡಾರವಿದ್ದ ದೇಶದ ಜನಜೀವನವೇ ಉಚ್ಚರೀತಿಯದಾಗಿರುತ್ತದೆ. ಇದಕ್ಕೆ ಇಂಗ್ಲಂಡ ದೇಶವೇ ನಿದರ್ಶನವಾಗಿದೆ. ಆಂಗ್ಲ ಭೂಮಿಯಲ್ಲಿ ಹುಟ್ಟಿಬೆಳೆದ ಯಾವ ಯೋಗ್ಯತಾ ಸಂಪನ್ನ ಸ್ತ್ರೀಪುರುಷರೂ, ಅನಾಮಧೇಯರಾಗಿ, ಅಪ್ರಸಿದ್ಧರಾಗಿ ಮುಳುಗಿ ಹೋಗಿರುವದಿಲ್ಲ. ಅಲ್ಲಿ ಒಬ್ಬ ಯೋಗ್ಯತಾಸಂಪನ್ನ ವ್ಯಕ್ತಿಯ ಚರಿತ್ರೆಯನ್ನು ಆ ವ್ಯಕ್ತಿಗಿಂತ ಶ್ರೇಷ್ಠವಾದ ಇನ್ನೊಬ್ಬ ವ್ಯಕ್ತಿಯು ಬರೆಯುವದುಂಟು.

ಆದರೇನು ? ನಮ್ಮ ಜನತೆಯಲ್ಲಿ ಅಂತಹ ಸತ್ಸಂಪ್ರದಾಯ ಆದೆಂದು ಬೆಳೆದುಬರುವುದೋ ಇರಲಿ. ಪ್ರಸ್ತುತ ಲೇಖನದಲ್ಲಿ ಕನ್ನಡದ ಉತ್ತುಂಗ ಸಾಹಿತಿಗಳಾದ ಉತ್ತಂಗಿ ಚನ್ನಪ್ಪನವರ ಜೀವನ ಮತ್ತು ಅವರ ಕೃತಿಗಳ ಪರಿಚಯವನ್ನು ಮಾಡಿಕೊಡಲಾಗಿದೆ.

ದಿವಂಗತ ಪೂಜ್ಯ ಉತ್ತಂಗಿಯವರು ಉತ್ತಮ ತರಗತಿಯ ಬೋಧಕರು, ಹೆಸರಾಂತ ವಿಮರ್ಶಕರು, ಅತ್ಯುತ್ಕೃಷ್ಟ ಮೇಧಾವಿಗಳು, ಪಾಂಡಿತ್ಯದಲ್ಲಿ ಮೇಲುಗೈಯುಳ್ಳವರು, ಮಹಾನುಭಾವಿಗಳು, 'ತಿರುಳ್ಗನ್ನಡ ತಿರುಕರು', 'ಹಿಂದೂಸಮಾಜದ ಹಿತಚಿಂತಕರು', 'ಕ್ರಿಸ್ತನ ಅಂತರಂಗದ ಭಕ್ತರು', 'ಬಸವಣ್ಣನವರ ಬಳಗದವರು'.

ಕನ್ನಡ ನಾಡನ್ನು ಭದ್ರವಾದ ತಳಹದಿಯ ಮೇಲೆ ಕಟ್ಟಲು ಸದ್ದುಮಾಡದೆ ಅವಿಶ್ರಾಂತವಾಗಿ ದುಡಿದ ಕನ್ನಡಿಗರಲ್ಲಿ ಇವರು ಶ್ರೇಷ್ಠರು. "ನೀವು ಪ್ರಾರ್ಥನೆ ಮಾಡುವಾಗ ಕಪಟಿಗಳ ಹಾಗೆ ಮಾಡಬೇಡಿರಿ. ಜನರು ನೋಡಬೇಕೆಂದು ಅವರು ಸಭಾಮಂದಿರಗಳಲ್ಲಿಯೂ ಬೀದಿಚೌಕಗಳಲ್ಲಿಯೂ ಪ್ರಾರ್ಥನೆ ಮಾಡುವದಕ್ಕೆ ಇಷ್ಟಪಡುತ್ತಾರೆ. ಅವರು ತಮಗೆ ಬರತಕ್ಕ ಫಲವನ್ನು ಹೊಂದಿದ್ದಾಯಿತೆಂದು ಸತ್ಯವಾಗಿ ಹೇಳುತ್ತೇನೆ. ಆದರೆ ನೀನು ಪ್ರಾರ್ಥನೆ ಮಾಡಬೇಕಾದರೆ ನಿನ್ನ ಏಕಾಂತವಾದ ಕೋಣೆಯೊಳಗೆ ಹೋಗಿ ಬಾಗಿಲನ್ನು ಮುಚ್ಚಿಕೊಂಡು ಅಂತರಂಗದಲ್ಲಿಯೂ ಇರುವ ನಿನ್ನ ತಂದೆಗೆ ಪ್ರಾರ್ಥನೆ ಮಾಡು ; ಅಂತರಂಗದಲ್ಲಿ ನಡೆಯುವದನ್ನು ನೋಡುವ ನಿನ್ನ ತಂದೆಯೂ ನಿನಗೆ ಫಲ

ಕೊಡುವನು. ಆದರೆ ಪ್ರಾರ್ಥನೆ ಮಾಡುವಾಗ ಅಜ್ಞಾನಿಗಳ ಹಾಗೆ ಹೇಳಿದ್ದನ್ನೇ ಸುಮ್ಮಸುಮ್ಮನೆ ಹೇಳಬೇಡ; ಅವರು ಬಹಳ ಮಾತುಗಳನ್ನಾಡಿದರೆ ತಮ್ಮ ಪ್ರಾರ್ಥನೆಯನ್ನು ದೇವರು ಕೇಳುತ್ತಾನೆಂದು ನೆನೆಸುತ್ತಾರೆ. ಆದುದರಿಂದ ನೀವು ಅವರಹಾಗೆ ಆಗಬೇಡಿರಿ"[1] ಎಂಬ ಕ್ರಿಸ್ತದೇವನ ವಚನವು ಪೂಜ್ಯ ಚನ್ನಪ್ಪನವರ ಜೀವನವನ್ನು ನೆನೆಸಿಕೊಂಡಾಗ ನೆನಪಿಗೆ ಬರುತ್ತದೆ. ಇವರು ಕನ್ನಡನಾಡಿನ ಭವ್ಯ ಕಟ್ಟಡಕ್ಕೆ ಕಲ್ಲು-ಮಣ್ಣು ಹೊತ್ತರು.

ಕನ್ನಡ ದೇವಿಯ ಸೇವೆಯನ್ನು ಮೌನದಿಂದ ಮಾಡಿದರು. ಯಾವದೇ ವಿಶ್ವವಿದ್ಯಾಲಯದ ಉದ್ಬುದ್ಧ ಪದವಿಗಳನ್ನು ಪಡೆದು ಪದವಿಯ ಹೆಸರಿನಲ್ಲಿ ಹೊಟ್ಟೆಹೊರೆದ ಹೆಂಗಿನ ಜೀವನ ಅವರದಲ್ಲ. ಸ್ವಂತ ಪರಿಶ್ರಮದ ಮೇಲೆ ತನ್ನತನವನ್ನು ಕಂಡ ಮಹಾನುಭಾವರವರು. ಸಾಹಿತ್ಯ ಪ್ರಪಂಚದಲ್ಲಿ ಅವರು ತಮ್ಮ ಆದರ್ಶಮೂರ್ತಿಯಾದ ಸರ್ವಜ್ಞ ಕವಿಯಂತೆ ಹಿಂಡನಗಲಿದ ಗಜರಾಜನಂತಿದ್ದವರು. ಮೇಲೆ ಬಿದ್ದು ಯಾರನ್ನೂ ಹಚ್ಚಿಕೊಳ್ಳಹೋಗಲಿಲ್ಲ. ಅಂತಹ ದುರಹಂಕಾರ ಮೆರೆಯಿಸಿದಾಗ ಕಣ್ಣೆತ್ತಿ ನೋಡಿದವರಲ್ಲ.

ಹೀಗಾಗಿ ಪೂಜ್ಯ ಉತ್ತಂಗಿಯವರು ತಮ್ಮದೇ ಆದ ಸ್ತುತಿಪಾಠಕರ ಗುಂಪು ಕಟ್ಟಿಕೊಂಡಿರಲಿಲ್ಲ. ಹಾಗೆ ಪಂಗಡ ಕಟ್ಟಿಕೊಳ್ಳಬೇಕೆಂಬ ವಿಚಾರ ಅವರ ಸನಿಹದಲ್ಲಿ ಸುಳಿಯಲೂ ಇಲ್ಲ. ಆದರೆ ತಾಯ್ನಾಡಿನಲ್ಲಿಷ್ಟೇ ಅಲ್ಲ, ಇಂಗ್ಲಂಡ, ಜರ್ಮನಿ ಮುಂತಾದ ವಿದೇಶಗಳಲ್ಲಿ ತಮ್ಮ ಅಭಿಮಾನಿಗಳನ್ನೂ ಆಪ್ತ ಸ್ನೇಹಿತರನ್ನೂ ಪಡೆದಿದ್ದರು.

ಉತ್ತಂಗಿಯವರ ಇಂತಹ ಆತ್ಮೀಯ ಗೆಳೆಯರು ಪ್ರಕಟಿಸಿದ ಸ್ತುತಿಪರ ಅಭಿಪ್ರಾಯ ಉದ್ಗಾರಗಳಷ್ಟೇ ಎಂದಾಗಲೀ, ಇವೇ ಶ್ರೇಷ್ಠತಮವೆಂದಾಗಲೀ ಯಾರೂ ಭಾವಿಸಕೂಡದು. ಅವರ ಸುದೀರ್ಘ ಸುಂದರ ಬಾಳಿನಲ್ಲಿ ಅವರ ಜೀವನದ ಆದರ್ಶ ರೀತಿನೀತಿಗಳನ್ನು ಅವರ ಕೃತಿಯ ಕೀರ್ತಿ ಮಹತಿಗಳನ್ನು ಮೆಚ್ಚಿ ಪತ್ರರೂಪದಲ್ಲಿ, ಭಾಷಣಗಳಲ್ಲಿ, ಪತ್ರಿಕೆ ಪುಸ್ತಕಗಳಲ್ಲಿ, ಬರೆದ ನಲ್ನುಡಿಗಳೆಷ್ಟೋ ಇವೆ. ಕೀರ್ತಿಕಾಮಿನಿಯ ಬೆನ್ನುಹತ್ತದ ಅವರು ಅವುಗಳನ್ನೆಲ್ಲ ಎಲ್ಲೆಲ್ಲಿಯೋ ಚೆಲ್ಲಿಕೊಟ್ಟರು.

ಅವರ ಸಂಗ ಹೆಜ್ಜೇನಿನ ಸವಿ. ಅವರ ನುಡಿ ಆದರಕ್ಕೂ ಸಿಹಿ, ಉದರಕ್ಕೂ ಸಿಹಿ! ಅವರ ನಡೆ ಸನ್ಯಾಸಿಗಳಿಗೂ ಆದರ್ಶ, ಸಂಸಾರಿಗಳಿಗೂ ಆದರ್ಶ. ಅವರ ಒಡನಾಟವೆಂದರೆ ಅದೊಂದು ಅನುಭಾವದೂಟ. (Mystic Experience) ಅವರ ಜೊತೆ, ಕೂಟವೇ ಅನುಭವ ಮಂಟಪ. ಅವರೊಂದಿಗೆ ಯಾವುದಾದರೊಂದು ಗಹನ ವಿಷಯದ ಬಗ್ಗೆ ಚರ್ಚೆ ಮಾಡುತ್ತ ಕುಳಿತುಕೊಳ್ಳಬೇಕು. ಕಿವಿಯೇ ಕಣ್ಣಾಗಿ, ಮೈಯೇ ಮನವಾಗಿ ಏಕೈಕಚಿತ್ತರಾಗಿ, ನಾಲ್ಕಾರು ನಿಮಿಷ ಪ್ರಯತ್ನಪಟ್ಟು ಕುಳಿತುಕೊಳ್ಳಬೇಕು. ಹಾಗೆ ಕುಳಿತುಕೊಂಡಿರುವದರ ಅರಿವಾಗುವದು ಒಂದೆರಡು ಘಂಟೆಗಳ ನಂತರ! ಅಷ್ಟು ಭಾವಾವೇಶದಿಂದ ಪರವಶರಾಗಿ ಆ ವಿಷಯವನ್ನು ಕುರಿತು ವಿಚಾರಪೂರ್ಣವಾಗಿ ವಿವೇಚಿಸುತ್ತಿದ್ದರು. ಹಾಗೆ ವಿವೇಚಿಸುತ್ತಿರುವಾಗ ಆ ವಿಷಯದ ಬಗೆಗಿರುವ ಸಾಧಕ-ಬಾಧಕಗಳನ್ನು ಕುರಿತು ಪಾಂಡಿತ್ಯಪೂರ್ಣವಾಗಿ ವಿವರಿಸಿ ಕೊನೆಗೆ ತಮ್ಮದೇ ಆದ ಒಂದು ನಿರ್ಣಯಕ್ಕೆ, ಸಿದ್ಧಾಂತಕ್ಕೆ ಬಂದು ಮುಟ್ಟುತ್ತಿದ್ದರು. ಅವರು ಕೊಡುವ ಉದಾಹರಣೆ-ಉಪಮೆಗಳು ಸಮಯೋಚಿತವಾಗಿರುತ್ತಿದ್ದವು. ಇಂತಹ ಸಮಂಜಸ ಸಾಕ್ಷ್ಯಗಳು ಅವರ ಸ್ಮರಣಪಟಲದ ಮೇಲೆ ಹೇಗೆ ಬರುತ್ತಿದ್ದವೋ! ಒಂದು ತಾಸಿಗೆ ಹದಿನೈದು-ಇಪ್ಪತ್ತು ಸಾಕ್ಷಿ, ದೃಷ್ಟಾಂತ, ಪ್ರಮಾಣ ಕಥೆ-ಇವೆಲ್ಲ ತಮ್ಮ ವಿಷಯದ ಸಿದ್ಧಾಂತಕ್ಕೆ ಪೂರಕವಾಗಿ, ಒಂದೊಂದಾಗಿ ಬಂದು ಹೋಗುತ್ತಿದ್ದವು. ಅಷ್ಟು ಅನುಪಮವಾದುದು ಅವರ ವಾದ ಸರಣಿ.

"ನಾನೊಬ್ಬ ತಿಳಿ ತಿಳಿವಿನ ತಿರುಕ. ತಿರುಳ್ಗನ್ನಡ ತಿರುಕ. ಕಾಡಿ ಬೇಡಿದವನಲ್ಲ. ಬೇಡಿ ಬಾಳಿದವನಲ್ಲ. ನೋಡಿ ಬಿಟ್ಟವನಲ್ಲ. ಮಹಾಕವಿಗಳು ಒಗೆದುಬಿಟ್ಟಿದ್ದ ಎಂಜಲವನ್ನು ಪ್ರಸಾದವೆಂದೆತ್ತಿ ತಂದು ಕನ್ನಡಕ್ಕಾಗಿ ಹಸಿದ ಮಕ್ಕಳೆಲ್ಲರನ್ನೂ ಕರೆದುಕೊಂಡುಂಡ ತಿರುಕ. ಇದಕ್ಕಾಗಿ ತಲೆತಿರುಕನೊಬ್ಬನನ್ನು (ಸರ್ವಜ್ಞ) ತಳಕು ಹಾಕಿಕೊಂಡ ತಿರುಕ. ನಾನು ಕವಿಯಲ್ಲ, ಕವನಗಾರನಲ್ಲ, ಕತೆಗಾರನಲ್ಲ. ಆದರೂ ನಾನೊಂದು ಹಾಡು ಹಾಡುವೆ. ಪ್ರಾಸವಿಲ್ಲದ ಹಾಡು. ಮೌನದ ಹಾಡು. ಅದನ್ನು ನೆನೆದಾಗಲೆಲ್ಲ ಉದುರುವ ಕಂಬನಿಗಳೇ ಅದರ ನುಡಿಗಳು. ನನ್ನ ಹಾಡನ್ನು ಬರೆದುಳಿಸಬೇಕೆಂಬ ಹಂಬಲ ನನ್ನಲ್ಲಿರಲಿಲ್ಲ. ಆದರೂ ಬರೆದ ಮುಂದಣ ಪೀಳಿಗೆಯ ಏಳಿಗೆಗಾಗಿ, ಸುಖಜೀವಿಗಳಾದ ಸಾಹಿತಿಗಳಿಗಾಗಿ ಅಲ್ಲ; ಕಷ್ಟಜೀವನದ ಕನ್ನಡ ಸಾಹಿತಿಗಳಿಗಾಗಿ, ಲಕ್ಷ್ಮಿಯು ಬಿಟ್ಟುಹೋದ ಮನೆಯಲ್ಲಿ ಹುಟ್ಟಿದ ಸರಸ್ವತಿಯ ಪುತ್ರರಿಗಾಗಿ, ಬಡತನದ ಗೋಳಿನಲ್ಲಿ ಬಾಳುವ

1 ಹೊಸ ಒಡಂಬಡಿಕೆ, ಮತ್ತಾಯ ೬

ವರಿಗಾಗಿ, ಸಾಹಿತ್ಯ ಸೇವೆಯಲ್ಲಿ, ಕಾರಣಾಂತರಗಳಿಂದ ಕಂಗೆಟ್ಟ ಕನ್ನಡಿಗರಿಗಾಗಿ."[2]

"ನಾನು ಹುಟ್ಟು ಕನ್ನಡಿಗ. ಜನಿಸಿದ್ದು ಇ. ಸ. ೧೮೮೧ ರಲ್ಲಿ. ನನ್ನ ಗತಿ ಯಂತ್ರ ಕಲೆಯಲ್ಲಿ, ಮತಿ ತತ್ವವಿಚಾರ ದಲ್ಲಿ, ಸ್ಥಿತಿ ಸಾಹಿತ್ಯದಲ್ಲಿ. ಈ ಅನಿಷ್ಟವನ್ನರಿಯದ ಅನೇಕರು, ಅತ್ಯಲ್ಪವಾದ ನನ್ನ ಸಾಹಿತ್ಯ ಸೇವೆಯನ್ನೇ ಮೇಲು ಮಾಡಿ ಮಾತಾಡಿದ್ದುಂಟು. ಆದರೆ ಇದು ತಪ್ಪಾದ ಭಾವನೆ. ನಾನು ಮೊತ್ತಮೊದಲು ಯಂತ್ರಕಲಾ ಪ್ರೇಮಿ, ಕಟ್ಟಕಡೆಗೆ ಕನ್ನಡ ಪ್ರೇಮಿಯೂ ಆಗಿದ್ದೇನೆ. ಇವೆಲ್ಲವುಗಳನ್ನು, ಅಖಂಡವಾಗಿ ಕಟ್ಟಿಕೊಂಡು ಯಾವಜ್ಜೀವದಲ್ಲಿ ನಾನು ಮಾಡಿದ ಹೋರಾಟವು ಕೇವಲ ಪ್ರತಿಕೂಲವಾದ ಪರಿಸ್ಥಿತಿಯಲ್ಲಿ. ಬಡತನದ ಚಿಂತೆ, ಸಂಸಾರದ ದುಃಖ, ಕ್ರೈಸ್ತಸಮಾಜ ಸ್ವಾತಂತ್ರ್ಯಕ್ಕಾಗಿ ದೇಶಿವಿದೇಶಿಯರ ವಿರೋಧ, ಅನಾರೋಗ್ಯ ಶರೀರ, ತಂದೆತಾಯಿಗಳ ನಿಧನ, ಪುತ್ರಶೋಕ, ಸಾಹಿತ್ಯಸೇವೆಯಲ್ಲಿ ಸಹಭಾಗಿಯಾಗಿದ್ದ ಹೆಂಡತಿಯ [೨೫ ವರ್ಷಗಳ] ಕಾಯಿಲೆ, ಇವೇ ಮುಂತಾದ ಸಪ್ತಾಗ್ನಿಗಳು ಕನ್ನಡ ಸಾಹಿತ್ಯ ಸೇವೆಯ ತಪಸ್ಸಿಗಾಗಿ ನನ್ನನ್ನು ಸಿದ್ಧಪಡಿಸಿದುವೆಂದು ಹೇಳಲು ಹೆಮ್ಮೆಪಡುತ್ತೇನೆ. ಸಹೃದಯರಾದ ಕನ್ನಡಿಗರು ಮಾತ್ರ ನನ್ನ ಹಾಡನ್ನು ತಿಳಿಯಲು ಶಕ್ತರು.

"ನನಗೆ ಬಾಲ್ಯದಲ್ಲಿ ಜ್ಞಾಪಕಶಕ್ತಿ ಕಡಿಮೆ. ಆದುದರಿಂದ ನಾನು ಬುದ್ಧಿಯಲ್ಲಿ ಮಂದ, ಕಲಿಯುವದರಲ್ಲಿ ಹಿಂದೆ, ತರಗತಿಯಲ್ಲಿ ಕಡೆಯವನಾಗಿದ್ದೆ. ಹೀಗಾಗಿ ನನಗೆ ತಂದೆಯವರಿಂದ ಜಾಣತನಕ್ಕಾಗಿ ಮೆಚ್ಚು ಸಿಕ್ಕಿದ್ದಕ್ಕಿಂತ ದಡ್ಡತನಕ್ಕಾಗಿ ಪೆಟ್ಟು ಸಿಕ್ಕಿದ್ದೇ ಹೆಚ್ಚು."[3]

"ಹದಿನೆಂಟು ವರ್ಷ ತುಂಬಿದಾಗ ನನ್ನಲ್ಲಿ ಅಪೂರ್ವವಾದ ಜಾಗೃತಿಯುಂಟಾಯಿತು. ಈ ಪರಿವರ್ತನೆಯ ಕಾಲದಲ್ಲಿ, ಅಂದರೆ ನನ್ನ ವ್ಯಕ್ತಿತ್ವವೇ ಸಮೂಲ ನವಸ್ವರೂಪವನ್ನು ಹೊಂದುತ್ತಿದ್ದ ಸಮಯದಲ್ಲಿ ನನ್ನ ಬುದ್ಧಿ ಅರಳಿತು. ಕತ್ತಲೆಯ ಮನೆಯಲ್ಲಿ ಬೆಳಕು ಪ್ರಕಾಶಿಸಿದಂತಾಯಿತು. ನಾನು ಇದುವರೆಗೆ ಹೆಡ್ಡನೆನಿಸಿಕೊಂಡುದಕ್ಕೆ ನನ್ನ ಬುದ್ಧಿಶಕ್ತಿ ಇಷ್ಟು ತಡವಾಗಿ ವಿಕಸಿತವಾದುದೇ ಕಾರಣವೆಂದು ತಿಳಿದುಬಂದಿತು. ಆಗ ಜ್ಞಾನ ವಿಜ್ಞಾನಕ್ಕೆ ಸಂಬಂಧಿಸಿದ ಸಕಲ ವಿಷಯಗಳನ್ನೂ ಸೂಕ್ಷ್ಮವಾಗಿ ಶಾಸ್ತ್ರೀಯವಾಗಿ ಅರಿತುಕೊಳ್ಳಬೇಕೆಂಬ ಆಸೆ ಹುಟ್ಟಿತು . . ."[4]

## ತತ್ತ್ವಶಾಸ್ತ್ರ

"ಮಂಗಳೂರಿನ ದೈವಜ್ಞಾನ ಶಾಲೆಯಲ್ಲಿಯ ಗುರುಗಳಿಗೂ ನನಗೂ ತಿಕ್ಕಾಟ ಪ್ರಾರಂಭವಾಯಿತು. ಗುರುಗಳೊಡನೆ ಕಾದಾಡಿ ವಿನಾ ಕಾರಣ ಮನಸ್ತಾಪಕ್ಕೊಳಗಾಗುವದಕ್ಕಿಂತ, ನಿರ್ಜೀವ ಗ್ರಂಥಗಳೊಡನೆ ವಾಗ್ವಾದ ನಡೆಯಿಸುವದು ಉತ್ತಮ ಉಪಾಯವೆಂದು ತಿಳಿದು ಗುರುಗಳನ್ನು ಬಿಟ್ಟು ಗ್ರಂಥಗಳಿಗೆ ಗಂಟು ಬಿದ್ದೆ.

ನನ್ನ ಪ್ರೇಮದ ವಿಷಯವೆಂದರೆ ತತ್ವಶಾಸ್ತ್ರ. ನಾನು ೨೫ ವರ್ಷ ಪ್ರಾಚ್ಯ, ಹಾಗೂ ಪಾಶ್ಚಾತ್ಯ ತತ್ವದರ್ಶನಗಳ ವ್ಯಾಸಂಗ ಮಾಡಿರುವೆ. ತತ್ವಶಾಸ್ತ್ರವು ಕೊನೆಗೆ ಗಣಿತ ಶಾಸ್ತ್ರದಲ್ಲಿ ಪರ್ಯವಸಾನ ಹೊಂದುವದೆಂದು ನನ್ನ ಮತ. ಹೀಗಾಗಿ ಒಂದು ವೇಳೆ ಬರೆದಿದ್ದರೆ ಗಣಿತಶಾಸ್ತ್ರದ ತತ್ವದರ್ಶನ [Mathematics of Philosophy] ಎಂಬ ಗ್ರಂಥವೊಂದನ್ನು ಬರೆಯಬಹುದಿತ್ತು. ಆದರೆ, ದರ್ಶನಗಳೆಲ್ಲ ಏಕದೇಶೀಯವಾಗಿದ್ದು, ಪ್ರತಿಯೊಂದು ತತ್ವವು ಕೊನೆಗೆ ನಿಲುಗಡೆಯಿಲ್ಲದೆ ಹೋಗುವದೆಂದು ತಿಳಿದುಬಂದುದರಿಂದ ಆ ವಿಷಯವಾಗಿ ನನಗೆ ಅತ್ಯಂತ ಜುಗುಪ್ಸೆಯುಂಟಾಯಿತು. ನನಗೆ ಇಷ್ಟವಿದ್ದ ತತ್ವಶಾಸ್ತ್ರದ ಹಾಡೇ ಹೀಗಾದ ಬಳಿಕ, ಇಷ್ಟವಿಲ್ಲದ ಭಾಷಾಶಾಸ್ತ್ರವಂತೂ ಬಹುದೂರ ಉಳಿಯಿತು. ಸಾಹಿತ್ಯಕ್ಕೂ ನನಗೂ ಇರುವ ಸ್ನೇಹ ಹಾವಿಗೂ-ಹದ್ದಿಗೂ ಇದ್ದಂತೆ. ಹೀಗೆ ತತ್ವ ವಿಷಯವೂ ವಿಷಯಸಾಧನವಾದ ಭಾಷಾ ವಿಷಯವೂ ನನ್ನ ಪಾಲಿಗೆ ಶೂನ್ಯವಾಗಿ ಹೋದುದರಿಂದ ಗ್ರಂಥ ರಚನೆಯನ್ನು ಬಿಟ್ಟು, ಆತ್ಮಜ್ಞಾನ ಮಾಡಿಕೊಂಡು ಸದ್ದಿಲ್ಲದೇ ಒಂದು ದಿನ ಈ ಲೋಕವನ್ನು ಬಿಟ್ಟು ಹೋದರಾಯಿತು ಎಂದು ನನ್ನೊಳಗೆ ನಿಷ್ಕರ್ಷೆ ಮಾಡಿಕೊಂಡಿದ್ದೆ. ಹೀಗೆ ಭಗ್ನಾಶನಾಗಿ ಸಾಗುತ್ತಿದ್ದ ನನ್ನ ಜೀವನದ ಹಾದಿಯಲ್ಲಿ ಸರ್ವಜ್ಞನೆಂಬ ತಿರುಕನ ಸಂದರ್ಶನವಾಯಿತು. ಉಭಯತ್ರರ ಹಾಡು ಒಂದೇ ಎಂದು ಅನಿಸಿತು. ಆಗ ನಾನು ಅವನಲ್ಲಿ ನನ್ನನ್ನು ಕಂಡೆ. ಇಬ್ಬರಿಗೂ ಮೇಳವಾಯಿತು. 'ಕರಿಗೆ ಕರಿ ಕೂಡಿದಂತಾಗಿ ಪರಸ್ಪರರಲ್ಲಿ ಹಿರಿದು ಸ್ನೇಹ' ಉಂಟಾಯಿತು. ಪ್ರಿಯನು ಪ್ರೇಯಸಿಯ ಭಾಷೆಯನ್ನು ಕಲಿಯುವಂತೆ ನಾನು ಸರ್ವಜ್ಞನಿಂದ ಸರ್ವಜ್ಞನಿಗಾಗಿ, ಕನ್ನಡವನ್ನು ಕಲಿತೆ. ಕನ್ನಡ ವ್ಯಾಕರಣ,

2 ಪೂಜ್ಯ ಉತ್ತಂಗಿಯವರ ಜೀವನ ಚರಿತ್ರೆ, ಪುಟ ೨೦

3 ಪೂಜ್ಯ ಉತ್ತಂಗಿಯವರ ಜೀವನ ಚರಿತ್ರೆ, ಪುಟ ೨೪

4 ಪೂಜ್ಯ ಉತ್ತಂಗಿಯವರ ಜೀವನ ಚರಿತ್ರೆ, ಪುಟ ೨೫-೨೬

ಛಂದಸ್ಸು, ಕಾವ್ಯ, ಅಲಂಕಾರ ಮುಂತಾದ ಶಾಸ್ತ್ರಗ್ರಂಥಗಳನ್ನು ಓದಿದ್ದು ಸರ್ವಜ್ಞನ ಕಾರ್ಯವನ್ನು ಕೈಕೊಂಡ ನಂತರ. ನಾನು ವೀರಶೈವ ಧರ್ಮವನ್ನರಿತುಕೊಳ್ಳಲು ಯತ್ನಿಸಿದ್ದು ಸರ್ವಜ್ಞನಿಗಾಗಿಯೇ. ಇದೇ ಸಮಯಕ್ಕೆ "ಜ್ಞಾನವೆಂದರೆ ಕ್ರಿಯೆ, ಕ್ರಿಯೆ ಎಂದರೆ ಜ್ಞಾನ" ಎಂದು ನನಗೆ ಮನವರಿಕೆಯಾದುದರಿಂದ ಕ್ರಿಯಾರಹಿತವಾದ ತತ್ವ ವಿಚಾರಕ್ಕೆ ವಿಮುಖನಾಗಿ ಕ್ರಿಯಾಸಹಿತವಾದ ಅನುಭಾವಕ್ಕೆ ಅಭಿಮುಖನಾದೆ. ಮುತ್ತು ಕಳೆದುಕೊಂಡವನಿಗೆ ಮಾಣಿಕ ದೊರೆತಂತಾಯಿತು. ನನ್ನಿಂದ ಶೋಧಿಸಲ್ಪಟ್ಟ "ಅನುಭವ ಮಂಟಪವು" ನನಗೆ ನೆರೆಮನೆಯಾಯಿತು. 'ಅನುಭವಿಯ ವೇದವೇ ವೇದ'ವೆಂಬ ಸರ್ವಜ್ಞನ ಅನುಭಾವ ಸೂತ್ರವು ನನಗೆ ಮಂಗಲಸೂತ್ರವಾಯಿತು. ಅನುಭಾವದ ಆಗರಗಳಾದ ಉಪನಿಷತ್ತು, ಭಗವದ್ಗೀತೆ, ವಚನಶಾಸ್ತ್ರ ಮುಂತಾದ ಉದ್ಗ್ರಂಥಗಳು ನನ್ನ ಪ್ರೀತಿಗೆ ಪಾತ್ರವಾದುವು. ಪ್ಲೇಟೊ, ಕಾಂಟ, ಬ್ರ್ಯಾಡ್ಲೆ ಮುಂತಾದವರ ಮೇಲಿದ್ದ ಪ್ರೇಮವು ವಿಲ್ಯಮ್ ಜೇಮ್ಸ, ಬರ್ಗಸನ್, ಬೊಹಿಮೆ ಮುಂತಾದ ಅನುಭಾವಿಗಳತ್ತ ಹೊರಳಿತು. ಸರ್ವಜ್ಞಗ್ರಂಥವು ನನ್ನ ಓಂಪ್ರಥಮ ಸಾಹಿತ್ಯವಾಯಿತು."[5]

ಈ ಅನುಭಾವ ಪಾಂಡಿತ್ಯಗಳನ್ನು ದೊರಕಿಸುತ್ತಿರುವ ವೇಳೆಯಲ್ಲಿಯೇ ಅವರು ಏಸುಕ್ರಿಸ್ತನ ತತ್ವಬೋಧಕರಾಗಿ ಕನ್ನಡನಾಡಿನ ಹಳ್ಳಿ ಹಳ್ಳಿಗಳಲ್ಲಿ ಸಂಚರಿಸಿದರು. ಅವರ ಬೋಧನ ಪದ್ಧತಿಯು ಸಹ ಬಹು ಕ್ರಾಂತಿಕಾರಕವಾದುದೂ ಆದರ್ಶಪ್ರಾಯವಾದುದೂ ಆಗಿತ್ತು. ಹಿಂದೂ ದೇಶದಲ್ಲಿ ಕ್ರೈಸ್ತಧರ್ಮ ಪ್ರಸಾರಕ್ಕಾಗಿ ಪ್ರೊಟೆಸ್ಟಂಟ ಮಿಶನರಿಗಳು ಕೈಕೊಂಡ ಉದ್ದೇಶ ವಿಧಾನಗಳಿಂದಾಗಿ ಅವರಿಗೆ 'ಸ್ವಧರ್ಮ ಪ್ರಕಾಶಕರು, ಪರಧರ್ಮನಿಂದಕರು' ಎಂಬ ನಾಮಧೇಯ ದೊರೆತಿದೆ. ಹೀಗಾಗಲು ಕಾರಣವೇನಿರಬಹುದೆಂಬುದನ್ನು ವಿಚಾರಿಸಲಾಗಿ, ಅವರು ಪರಧರ್ಮದಲ್ಲಿರುವ ದೋಷಗಳನ್ನು ದೊಡ್ಡದಾಗಿ ಕಂಡು ಅವುಗಳಲ್ಲಿರುವ ಸತ್ಯಾರ್ಥಗಳನ್ನು ಕಡೆಗಣ್ಣಿನಿಂದ ನೋಡಿದ್ದೇ ಮುಖ್ಯ ಕಾರಣವೆಂದು ಕಂಡುಬಂದಿತು. ಕೂಡಲೆ ನಾನು ಮಿಶನರಿಗಳ ಖಂಡನ ಪದ್ಧತಿಗೆ ಪ್ರತಿಕೂಲವಾಗಿ ನನ್ನದೊಂದು ಉಪದೇಶ ಪದ್ಧತಿಯನ್ನು ಪ್ರಾರಂಭಿಸಿ ಪರಧರ್ಮದಲ್ಲಿರುವ ಉದಾತ್ತ ವಿಚಾರಗಳನ್ನು ಶ್ಲಾಘಿಸಹತ್ತಿದೆ. ಇದನ್ನು ಕಂಡು ಮಿಶನರಿಗಳಲ್ಲಿ ಕೆಲವರು ಕ್ರೈಸ್ತಧರ್ಮದಲ್ಲಿ ವಿಶ್ವಾಸವಿಲ್ಲದ ಉಪದೇಶಕನೆಂದು ನನ್ನ ವಿಷಯವಾಗಿ ತಮ್ಮೊಳಗೆ ಆಡಿಕೊಳ್ಳಹತ್ತಿದರು. ಸ್ವಲ್ಪ ದಿವಸಗಳಲ್ಲಿ ಈ ವಿಷಯವನ್ನೆತ್ತಿ ಬಹಿರಂಗವಾಗಿ ನನ್ನನ್ನು ಕೇಳಿಯೇ ಬಿಟ್ಟರು. ಆಗ ನಾನು ಅವರಿಗೆ ಹೇಳಿದ ಮಾತುಗಳು ಹೀಗಿವೆ: ದೇವರ ಸೇವೆಯ ಹೆಸರಿಟ್ಟುಕೊಂಡು ಹೊರಟ ಮಿಶನರಿ ಕಾರ್ಯವು ಜನಸಂಖ್ಯೆಯನ್ನು ಬೆಳೆಸುವ ಭರದಲ್ಲಿ ವ್ಯಾಪಾರದ ಕಲಂಕವನ್ನು ಹಚ್ಚಿಕೊಂಡಿದೆ. ಈ ತರಹದ ಕಲಂಕವನ್ನಿಟ್ಟುಕೊಂಡು ಮಾಡಿದ ಕಾರ್ಯ ಉಸುಬಿನ ಮೇಲೆ ಮನೆ ಕಟ್ಟಿದಂತಾಗುವದರಿಂದ ಅದು ಬಹುಕಾಲ ಬಾಳದು. ನಾವು ಅಜ್ಞಜನರಿಗೆ ಅವರ ಧರ್ಮದಲ್ಲಿರುವ ಸತ್ಯಾಂಶಗಳನ್ನು ತಿಳಿಸಿಕೊಟ್ಟಮೇಲೆಯೂ ಅವರು ಸ್ವಧರ್ಮದಲ್ಲಿ ಶಾಂತಿಯನ್ನು ಕಾಣದೆ, ಕ್ರೈಸ್ತ ಧರ್ಮವನ್ನು ಸ್ವೀಕರಿಸುವದಕ್ಕೆ ಸಿದ್ಧರಾದರೆ ಮಾತ್ರ ಅದು ನಿಜವಾದ ಧರ್ಮಾಂತರ. ಇದು ಮಾತ್ರವಲ್ಲದೆ ಅವರಿಂದ ಸಂಬಳ ತೆಗೆದುಕೊಳ್ಳುತ್ತಿದ್ದ ಕಾಲದಲ್ಲಿಯೇ ಅನೇಕ ಕಡೆಗೆ ಪಯಣ ಬೆಳೆಸಿ, ಅನುಭಾವ ಶಿರೋಮಣಿಗಳಾದ ಬಸವಣ್ಣನವರು, ಅವರಿಂದ ಸ್ಥಾಪಿತವಾದ 'ಅನುಭವ ಮಂಟಪ', ಅದರಲ್ಲಿ ಮೆರೆಯುತ್ತಿದ್ದ ಶಿವಶರಣರು ಮುಂತಾದವರನ್ನು ಕುರಿತು ಪೂಜ್ಯ ಭಾವದಿಂದ ಭಾಷಣಗಳನ್ನು ಕೊಡಲಾರಂಭಿಸಿದೆ. ಇದನ್ನು ಕಂಡು ಕೆಲವರು—ನಾನು ಕ್ರಿಸ್ತನನ್ನು ಬಿಟ್ಟು ಬಸವಣ್ಣನನ್ನು ಸಾರಲಿಕ್ಕೆ ಹತ್ತಿದೆನೆಂದೂ, ತತ್ಪ್ರಯುಕ್ತವಾಗಿ ಲಿಂಗಾಯತ ಮತಕ್ಕೆ ಸೇರಲಿರುವನೆಂದೂ ಅಪಪ್ರಚಾರ ಮಾಡಿದರು.[6]

ಸ್ಪಷ್ಟ ದೃಷ್ಟಿಯವರಾದ, ಸತ್ಯನಿಷ್ಠರಾದ, ಕ್ರಾಂತಿಕಾರಕ ವಿಚಾರಿಗಳಾದ, ಸ್ವಾತಂತ್ರ್ಯ ಪ್ರಿಯರಾದ ಉತ್ತಂಗಿಯವರು ಇಂತಹ ದೂಷಣೆಗೊಳಗಾದುದು ಆಶ್ಚರ್ಯದ ಸಂಗತಿಯೇನಲ್ಲ. "ನಾನು ಕತ್ತಲಲ್ಲಿ ನಿಮಗೆ ಹೇಳುವದನ್ನು ನೀವು ಬೆಳಕಿನಲ್ಲಿ ಹೇಳಿರಿ; ಮತ್ತು ಕಿವಿಯಲ್ಲಿ ಹೇಳಿರುವದನ್ನು ಮಾಳಿಗೆಗಳ ಮೇಲೆ ನಿಂತು ಸಾರಿರಿ; ಇದಲ್ಲದೆ ದೇಹವನ್ನು ಕೊಂದು ಆತ್ಮವನ್ನು ಕೊಲ್ಲಲಾರದವರಿಗೆ ಹೆದರಬೇಡಿರಿ"[7] ಎಂಬ ಏಸುಕ್ರಿಸ್ತನ ಮಾತುಗಳಲ್ಲಿ ಅತ್ಯಂತ ಶ್ರದ್ಧೆಯನ್ನಿಟ್ಟ "ಕ್ರಿಸ್ತನ ಅಂತರಂಗದ" ಹಾಗು "ನಿಷ್ಠಾವಂತ ಭಕ್ತ"ರೆಂದು ಪ್ರಸಿದ್ಧರಾದ ಉತ್ತಂಗಿಯವರು ತಮಗೆ ಕಂಡ ಸತ್ಯವನ್ನು ಎತ್ತಿ ಹೇಳುವಲ್ಲಿ ಹಿಂದುಮುಂದು ನೋಡುವವರಲ್ಲ. ದಾಕ್ಷಿಣ್ಯಭಾರಕ್ಕೆ ಬೀಳುವವರಲ್ಲ. ಅವರು ಮುಪ್ಪಿನ ವಯಸ್ಸಿನಲ್ಲಿಯೂ ಸಹ ನಮ್ಮ ಜೊತೆಗೆ ಏಸುಸ್ವಾಮಿಯ

5 ಪೂಜ್ಯ ಉತ್ತಂಗಿಯವರ ಜೀವನ ಚರಿತ್ರೆ ಪುಟ ೨೭

6 ಪೂಜ್ಯ ಉತ್ತಂಗಿಯವರ ಜೀವನ ಚರಿತ್ರೆ ಪುಟ ೩೧–೩೩

7 ಹೊ. ಬ. ಮತ್ತಾಯ ೧೦

ಅಲೌಕಿಕ ವ್ಯಕ್ತಿತ್ವದ ಬಗ್ಗೆ ವಿಚಾರಪೂರಿತವಾಗಿ ಪರವಶರಾಗಿ ತಾಸೆರಡು ತಾಸುಗಳವರೆಗೆ ಒಂದೇ ಸವನೆ ಬಹು ರಮ್ಯವಾಗಿ ವಿವರಿಸಿ ಮಾತನಾಡುತ್ತಿದ್ದುದನ್ನು ಅನೇಕ ಸಾರಿ ಕಂಡು ಆಶ್ಚರ್ಯಪಟ್ಟಿದ್ದೇವೆ. "ಕ್ರಿಸ್ತನಲ್ಲಿ ಪ್ರಕಟವಾದ ಈ ಅದ್ವಿತೀಯ ಹಾಗೂ ಅಪಾರ ದೈವೀ ಪ್ರೇಮದಲ್ಲಿ ಸಕಲ ಮಾನವಕುಲದ -ಉಚ್ಚ ತತ್ವಜ್ಞಾನ, ಉಚ್ಚ ಅನುಭವ ಜ್ಞಾನ, ಉಚ್ಚ ನೈತಿಕ ಆಚಾರ ವಿಚಾರಗಳೆಲ್ಲವೂ ಕೇಂದ್ರೀಕೃತವಾಗಿ ಬಹು ಉತ್ಕೃಷ್ಟವಾದ ರೀತಿಯಲ್ಲಿ ಸಾಮರಸ್ಯವನ್ನು ಹೊಂದಿರುತ್ತವೆ. ಆದುದರಿಂದ ಈ ವ್ಯಕ್ತಿಯನ್ನು ನಾನು ಆದರ್ಶಮೂರ್ತಿಯನ್ನಾಗಿಟ್ಟುಕೊಂಡಿರುವದಲ್ಲದೆ ಆತನನ್ನು ನನ್ನ ತಾರಕನೆಂದೂ ರಕ್ಷಕನೆಂದೂ ಸ್ವಾಮಿಯೆಂದೂ ಹೃತ್ಪೂರ್ವಕವಾಗಿ ಅಂಗೀಕರಿಸಿದ್ದೇನೆ" ಇದು ಅವರ ಮನಸ್ಸಾಕ್ಷಿ, ಗಾಢ ನಂಬಿಕೆ, ಉಗ್ರನಿಷ್ಠೆ !

ಪರಮಾತ್ಮನ ಅಪಾರ ಪ್ರೇಮವೇ ಭೂಲೋಕಕ್ಕೆ ಏಸು ಸ್ವಾಮಿಯ ರೂಪದಲ್ಲಿ ಕ್ರಿಯಾತ್ಮಕವಾಗಿ ಬಂದಿದೆಯೆಂದು ಉತ್ತಂಗಿಯವರ ಸಂಪೂರ್ಣ ನಂಬುಗೆ. ಏಸು ಹಿಡಿದು ಹೋದ ಮಾರ್ಗದ ಪ್ರಯಾಣಿಕರು ಶಿವಶರಣರಾದುದರಿಂದ ಅವರ ಮೇಲೆ ಉತ್ತಂಗಿಯವರದು ಎಲ್ಲಿಲ್ಲದ ಪ್ರೇಮ. ಉತ್ತಂಗಿಯವರ ಜೊತೆ ಶಾಂತಚಿತ್ತರಾಗಿ ಕುಳಿತು ಶಿವಶರಣರ ಅನುಭವ ಮಂಟಪದ ವರ್ಣನೆಯನ್ನು ಅವರ ಬಾಯಿಯಿಂದಲೇ ಕೇಳಬೇಕು ! ಕೇಳುವವರನ್ನು ಕೆಲವೇ ನಿಮಿಷಗಳಲ್ಲಿ ಪರವಶರನ್ನಾಗಿ ಮಾಡಿ ೮೦೦ ವರ್ಷಗಳ ಪೂರ್ವದ ಕಲ್ಯಾಣ ಪಟ್ಟಣದಲ್ಲಿ ಶೋಭಿಸುತ್ತಿದ್ದ ಅನುಭವ ಮಂಟಪಕ್ಕೆ ಕರೆದೊಯ್ದು ಅಲ್ಲಿಯ ಮೂಲೆ ಮೂಲೆಯನ್ನು ಸಹ ಬಿಡದೆ ತೋರಿಸುತ್ತಿದ್ದರು. ಅಂತಹ ಗಾರುಡಿ ವಿದ್ಯೆ ಅವರದು. "ದೇಹಕ್ಕೆ ಬಣ್ಣ, ದೇಶಕ್ಕೆ ಬಣ್ಣ, ಆತ್ಮಕ್ಕೆ ಯಾವ ಬಣ್ಣ ?"

ಅವರು ತಮ್ಮ ಜೀವಮಾನ ಕಾಲದಲ್ಲಿ ಸಿದ್ಧಿಸದೆ ಹೋದ ಒಂದು ಬಯಕೆಯನ್ನು ಅನೇಕ ಸಾರೆ ನಮ್ಮೆದುರು ಬಹು ಕಳಕಳಿಯಿಂದ ಹೇಳಿದ್ದುಂಟು. ಅದು ಭಾರತ ಜ್ಯೋತಿ ಬಸವೇಶ್ವರನ ಜೀವನ ಚರಿತ್ರೆ ಬರೆಯುವದು. ಆದರೆ ಮಾಡುವದೇನು ? ತಿರುಕನಿಗೆ ಆತನ ಗೆಳೆಯನಾದ "ತಲೆತಿರುಕ"ನೇ ಉತ್ತರ ಹೇಳಲಿಕ್ಕೆ ಸಮರ್ಥನು.

ಎಲ್ಲ ಬಲ್ಲವರಿಲ್ಲ | ಬಲ್ಲವರು ಬಹಳಿಲ್ಲ |
ಬಲ್ಲಿದರು ಇದ್ದು ಬಲವಿಲ್ಲ, ಸಾಹಿತ್ಯ |
ವೆಲ್ಲರಿಗಿಲ್ಲ ಸರ್ವಜ್ಞ ||

---

# ತಾಯ್ನುಡಿ

ಹರಸಲಿ ಹರಸಲಿ ಕನ್ನಡ ತಾಯಿಯು
ನಮ್ಮಯ ಮನ ಸೆಳೆದು
ನಮ್ಮಯ ಉಸಿರನು ಜೀವವ ಬೆಳಗಿಸಿ
ಮೊಳಗಲಿ ಕನ್ನಡ ಡಿಂಡಿಮವು

ಸ್ಫೂರ್ತಿದಾಯಕ ಮುಕ್ತಿಪ್ರದಾಯಕ
ಹರಸಲಿ ನಮ್ಮಯ ಕನ್ನಡವು
ನೆತ್ತರು ಸುರಿಸುತ ಹೋರಾಡುವನಕ
ತೊರೆಯದಿರಲಿ ವಿಜಯ ಪತಾಕೆ

**ಜಿ. ಅಬ್ದುಲ್‌ಬಷೀರ್**

ಒಂದು ವಿವೇಚನೆ:

# ಕರ್ಣನ ಸ್ವಾಮಿನಿಷ್ಠೆ

## ಪುಟ್ಟಬಸವೇಗೌಡ

ಕನ್ನಡ ಸಾಹಿತ್ಯವು ಸುಮಾರು ಒಂದುಸಾವಿರ ವರ್ಷ ಗಳಿಂದ ಬೆಳೆದು ಬಂದಿದೆ. ಅನೇಕ ಕವಿ ಕೃತಿಗಳಿಂದ ವೈವಿಧ್ಯ ರಮಣೀಯವಾಗಿದೆ. ಸಾಹಿತ್ಯ ಕ್ಷೇತ್ರದಲ್ಲಿ ನಾಲ್ಕು ಪ್ರಬಲವಾದ ಪರಿವರ್ತನೆಯ ಘಟ್ಟಗಳನ್ನು ಗುರುತಿಸ ಬಹುದು. ಒಂದನೆಯದು ಹತ್ತನೆಯ ಶತಮಾನದಲ್ಲಿ; ಎರಡನೆಯದು ಹನ್ನೆರಡನೆಯ ಶತಮಾನದಲ್ಲಿ; ಮೂರನೆಯದು ಹದಿನಾಲ್ಕು ಹದಿನೈದನೆಯ ಶತಮಾನ ದಲ್ಲಿ. ನಾಲ್ಕನೆಯದು ಹತ್ತೊಂಬತ್ತು ಇಪ್ಪತ್ತನೆಯ ಶತಮಾನದಲ್ಲಿ.

ಕನ್ನಡ ಸಾಹಿತ್ಯವು ತೃತೀಯ ನವೋದಯದಲ್ಲಿ ವೈಷ್ಣವ ಭಕ್ತಿರೂಪದಲ್ಲಿ ಪುನರುತ್ಥಾನವಾದ, ಆ ರಸ ಸ್ಫೂರ್ತಿ ಕುಮಾರವ್ಯಾಸ ಬಿರುದಿನ ನಾರಣಪ್ಪನ ಮಹಾ ಕೃತಿಯಲ್ಲಿ ತನ್ನ ವಿಯಚ್ಚುಂಬಿಯಾದ ಬೃಹದ್‌ಗೋಪುರವನ್ನು ಕಂಡ ರಿಸಿಕೊಂಡಿದೆ. ಬೃಹತ್ತು ಮಹತ್ತುಗಳೆರಡರಲ್ಲಿಯೂ ಭಾರತವನ್ನು ಮೀರಿಸುವ ಕಾವ್ಯ ಮತ್ತೊಂದಿಲ್ಲ. ಪಂಚಮ ವೇದವೆಂದು ಕೀರ್ತಿಯನ್ನು ಗಳಿಸಿದ ಕಾವ್ಯ ಇದು. ಈ ಕಾವ್ಯ ವಾರಿಧಿಯಿಂದ ನೂರಾರು ಕವಿಗಳು ತಮ್ಮ ಕಾವ್ಯ ಗಳಿಗೆ ವಸ್ತುರತ್ನವನ್ನು ಆಯ್ದುಕೊಂಡಿದ್ದಾರೆ.

ಮಹಾಭಾರತ ಕಥೆಯನ್ನು ಕನ್ನಡದಲ್ಲಿ ಹೇಳಿದ ಕವಿ ಗಳು ಮುಖ್ಯವಾಗಿ ಇಬ್ಬರು, "ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ" ಸಮಸ್ತ ಭಾರತವನ್ನು "ಅಪೂರ್ವ ಮಾಗೆ ಸಲೆಪೇಳ್ದ" ಆದಿ ಕವಿಯೆನಿಸಿದ ಪುಲಿಗೆರೆಯ ಪಂಪ. ಆತನ ತರುವಾಯ ಪ್ರಖ್ಯಾತನಾದ ಗದುಗಿನ ನಾರಣಪ್ಪ. ಈ ಇಬ್ಬರೂ ಒಂದೊಂದು ದೃಷ್ಟಿಯಿಂದ ಅದ್ವಿತೀಯರು. ಪಂಪ ಕಾವ್ಯವನ್ನು ಬರೆದುದು ತನ್ನ ದೊರೆ ಅರಿಕೇಸರಿಯ ಮೆಚ್ಚಿಕೆಗಾಗಿ, ಆತನ ಶೌರ್ಯವನ್ನು ಮೆರೆಸುವುದಕ್ಕಾಗಿ ಮತ್ತು ಆಸ್ಥಾನ ಕವಿಗಳ ಮೆಚ್ಚಿಕೆ ಗಾಗಿ: ಕುಮಾರವ್ಯಾಸನ ದೃಷ್ಟಿ ಜನಸಾಮಾನ್ಯರ ಮನೋರಂಜನೆ ಮತ್ತು ಉದ್ಧಾರ. ಕುಮಾರವ್ಯಾಸನಿಗೆ ಭಾರತ ಭಗವದ್ವಿಲಾಸದ ಭೂಮಿಕೆಯಾಯಿತು. ನಾರಣ ಪ್ಪನ ಸಂವಿಧಾನದಲ್ಲಿ ಕೃಷ್ಣನಿಂದ ಭಾರತಕ್ಕೆ ಆದಿ, ಮಧ್ಯ, ಮುಕ್ತಾಯ. ಭಾರತದ ಎಲ್ಲ ಮಜಲುಗಳಲ್ಲಿಯೂ ಕೃಷ್ಣನ ಕೈವಾಡವೇ ಕೈವಾಡ (ವಿರಾಟಪರ್ವದ ವಿನಾ). ಹಾಗೆಂದು ಕನ್ನಡ ಭಾರತ ಕೇವಲ ಕೃಷ್ಣಪುರಾಣವಲ್ಲ. ಭಾವರಸ ವ್ಯಕ್ತಿ ವ್ಯವಹಾರಗಳಿಂದ ಸಮೃದ್ಧವಾದ ಕಾವ್ಯ. ಮನುಷ್ಯ ಪ್ರಪಂಚದ ಕಮನೀಯ ಪ್ರತಿಬಿಂಬ ಪಂಪನಿಗೆ ಭಾರತ ಲೌಕಿಕ ಕಾವ್ಯವಾಯಿತು. ಕಾವ್ಯ ಪ್ರತಿಭೆಯ ಪ್ರಕಾಶನದ ಒಂದು ಪ್ರಕಾರವಾಯಿತು. ಕುಮಾರವ್ಯಾಸ ನಿಗೆ ಆತ್ಮಪ್ರಕಾಶನದ ಏಕೈಕ ಪ್ರಕಾರವಾಯಿತು. ಹೀಗಾಗಿ ಪಂಪನ ಪ್ರತಿಭೆ ಇರ್ಕಡಿಯಾಗಿ ಅವನ ಎರಡು ಕಾವ್ಯಗಳಲ್ಲಿ ವ್ಯಕ್ತವಾದರೆ, ಇವನ ಪ್ರತಿಭೆ ಒಂದೇ ಕೃತಿಯಲ್ಲಿ ಏಕೀ ಭವಿಸಿ ಜಾಜ್ವಲ್ಯಮಾನವಾಯಿತು. ಪಂಪನ ಮಾತು ಗಳೆಲ್ಲವೂ ಸೂತ್ರದಂತೆ. ಒಂದು ಕತೆಯಲ್ಲಿ ಹೇಳಬೇಕಾ ದ್ದನ್ನು ಕೇವಲ ಎರಡು ಮಾತುಗಳಲ್ಲಿ ಹೇಳುವ ಶಕ್ತಿಯಿದೆ. ಕುಮಾರವ್ಯಾಸನ ಗುಣ ಕತೆಯನ್ನು ಹಿಗ್ಗಲಿಸುವುದು. ಪಂಪನ ಒಂದು ಪದ್ಯದಲ್ಲಿ ಹೇಳಿದ ಜರಾಸಂಧವಧೆ ಈತನ ಕೈಯಲ್ಲಿ ೧೪೯ ಪದ್ಯಗಳ ಒಂದು ಸಂಧಿಯಾಗಿ ಪಸರಿಸಿದೆ. ಪಂಪ ಹತ್ತು ಹನ್ನೆರಡು ಪದ್ಯಗಳಲ್ಲಿ ಅಡಕಮಾಡಿದ ಶಿಶು ಪಾಲ ವಧೆಗೆ, ನಾರಣಪ್ಪ ನಾಲ್ಕು ಸಂಧಿಗಳನ್ನೇ ಮೀಸ ಲಾಗಿಡುತ್ತಾನೆ. ಪಂಪನ ಕಾವ್ಯವನ್ನು ಓದುವಾಗ ಓದು ಗರು ಮೈಯೆಲ್ಲಾ ಕಣ್ಣಾಗಿ ಎಚ್ಚರಗೊಂಡಿರಬೇಕು. ನಿಂತು ನಿಂತು ಕಾವ್ಯರಸವನ್ನು ಚಪ್ಪರಿಸುತ್ತ ನಿಧಾನವಾಗಿ ಸಾಗ ಬೇಕು. ನಾರಣಪ್ಪನ ಕಾವ್ಯದಲ್ಲಿ ಈ ಕಷ್ಟವಿಲ್ಲ. ಅರ್ಥ ವೈಮುರೆತಿದ್ದರೂ ಕಥಾಸರಣಿಯನ್ನು ಅನುಸರಿಸಿಕೊಂಡು ಹೋಗಬಹುದು. ಪಂಪನ ಕಾವ್ಯ ಸಮತಲ ಪ್ರದೇಶದಲ್ಲಿ ಹರಿಯುವ ಪೂರ್ಣ ಪ್ರವಾಹದಂತೆ ಗಂಭೀರ. ಕುಮಾರ ವ್ಯಾಸನ ಕಾವ್ಯ ಹಿಮಾಲಯ ಪ್ರದೇಶದಲ್ಲಿ ಹರಿಯುವ ಬ್ರಹ್ಮಪುತ್ರ ನದಿಯಂತೆ, ಬೆಟ್ಟ, ಗುಡ್ಡಗಳಲ್ಲಿ ಭೋರ್ಗರೆ ಯುತ್ತ ಪ್ರವಹಿಸುತ್ತದೆ. ಪಂಪ ತನ್ನ ಕಾವ್ಯಕ್ಕೆ ಅಲಂಕಾರ

ಛಂದಸ್ಸು ವ್ಯಾಕರಣಗಳ ಕಡಿವಾಣವಿಕ್ಕಿ ಹೆದ್ದಾರಿಯಲ್ಲಿ ನಡೆಸುತ್ತಿದ್ದರೆ, ನಾರಣಪ್ಪನ ಕವಿತಾಪಕ್ಷಿ ಸ್ವಚ್ಛಂದವಾಗಿ ಗಿರಿ ವನ ವಿಹಾರಗಳಲ್ಲಿ ಹಾರುತ್ತಿರುತ್ತದೆ. ಕುಮಾರವ್ಯಾಸ ಪಂಡಿತ ಸಮೂಹದಲ್ಲಿ ಪಂಪನಷ್ಟು ಪ್ರಸಿದ್ಧನಾಗಿಲ್ಲದಿರಬಹುದು. ಆದರೆ ಕುಮಾರವ್ಯಾಸನಿಗೆ ದೊರೆತ ಸಾಮಾನ್ಯ ಜನಪ್ರಿಯತೆ, ಪೂಜ್ಯಭಾವನೆ ಪಂಪನಿಗೆ ದೊರೆಯಲಿಲ್ಲ. ನೀರಿಳಿಯದ ಜನಸಾಮಾನ್ಯರ ಗಂಟಲಿನಲ್ಲಿ ಪಂಪಭಾರತದ ಕಡಬು ಇಳಿಯಲು ಸಾಧ್ಯವೆ? ಒಟ್ಟಿನಲ್ಲಿ ಪಂಪ, ನಾರಣಪ್ಪರಿಬ್ಬರು ಸೂರ್ಯ ಚಂದ್ರರಂತೆ ಕನ್ನಡ ಸಾಹಿತ್ಯಾಕಾಶದಲ್ಲಿ ಚಿರಸ್ಥಾಯಿಯಾಗಿರುವರು.

ವಸ್ತು, ಪಾತ್ರ, ರಸ—ಇವುಗಳಲ್ಲಿ ಯಾವ ದೃಷ್ಟಿಯಿಂದ ಪರಿಶೀಲಿಸಿದರೂ ಕನ್ನಡ ಭಾರತದಲ್ಲಿ ಉದ್ಯೋಗಪರ್ವ ಅತ್ಯುತ್ಕೃಷ್ಟವಾಗಿದೆ. "ಭಾರತೇ ಸಾರಮುದ್ಯೋಗಃ" ಎಂಬ ಆರ್ಯೋಕ್ತಿಯನ್ನು ಇಲ್ಲಿ ನೆನೆಯಬಹುದಾಗಿದೆ. ಈ ಪರ್ವದ ಹನ್ನೊಂದು ಸಂಧಿಗಳಲ್ಲಿ ಅತ್ಯಂತ ಮುಖ್ಯವಾದ, ರಸವತ್ತಾದ, ಓದುಗರ ಮನಸ್ಸನ್ನು ಸೆರೆ ಹಿಡಿಯುವಂಥ ಭಾಗವೆಂದರೆ ಹತ್ತನೆಯ ಸಂಧಿ. ನಾರಣಪ್ಪನ ಉಕ್ತಿವೈಚಿತ್ರ್ಯ, ಮಾತಿನ ಗಾರುಡಿಯನ್ನು ಪ್ರಧಾನವಾಗಿ ಇಲ್ಲಿ ಕಾಣಬಹುದಾಗಿದೆ.

ಪ್ರಸ್ತುತ ಲೇಖನದ ನಾಯಕನಾದ, ಹಾಗೂ ಮಹಾಭಾರತದ ಮುಖ್ಯ ವ್ಯಕ್ತಿಗಳಲ್ಲೊಬ್ಬನಾದ ಕರ್ಣನ ವ್ಯಕ್ತಿತ್ವದ ಉಜ್ವಲತೆ, ಸ್ವಾಮಿಭಕ್ತಿ, ದೃಢನಿಶ್ಚಯ ವಾಚಕರಿಗೆ ಸಂಪೂರ್ಣವಾಗಿ ಪರಿಚಯವಾಗುವುದು ಈ ಸಂಧಿಯಲ್ಲೇ. ಇದಕ್ಕಿಂತ ಮುಂಚೆ ಉಳಿದ ಪರ್ವಗಳಲ್ಲಿ ಕರ್ಣನ ಚಿತ್ರ ಅಲ್ಲಷ್ಟು ಇಲ್ಲಷ್ಟು ಕಾಣಿಸಿಕೊಂಡರೂ ಕತ್ತಲಲ್ಲಿ ಮಿಣುಕುವ ಮಿಂಚುಹುಳುವಿನ ಪ್ರಭೆಯಂತೆ; ಮರಳಿನಲ್ಲಿ ಹರಿಯುವ ಕಿರು ದೊರೆಯಂತೆ.

ಕರ್ಣನ ಜನನ ಬಾಲ್ಯದ ಬಗ್ಗೆ ಸಂಕ್ಷಿಪ್ತವಾಗಿ ಹೇಳುವುದಾದರೆ ಕುಂತಿ, ದುರ್ವಾಸರಿಂದ ಪಡೆದ ಮಂತ್ರಗಳಲ್ಲಿ ಒಂದನ್ನು ಪರೀಕ್ಷಿಸಲು ಹೋಗಿ ಸೂರ್ಯನಿಂದ ಕರ್ಣಕುಂಡಲ ಸಹಿತನಾದ ಮಗುವನ್ನು ಪಡೆಯುತ್ತಾಳೆ. ಲೋಕಾಪವಾದಕ್ಕೆ ಹೆದರಿ ಗಂಗೆಯಲ್ಲಿ ತೇಲಿಬಿಡಲು ಮಗು ಬೆಸ್ತರವನಿಗೆ ಸಿಕ್ಕಿ ರಾಧೇಯನಾಗಿ ಬೆಳೆದು ಕರ್ಣನೆಂದು ಪ್ರಸಿದ್ಧಿ ಪಡೆಯುತ್ತಾನೆ. ಹುಟ್ಟುವಾಗಲೇ ವಿಧಿಯ ಕೈವಾಡಕ್ಕೆ ಸಿಲುಕಿದ ಕರ್ಣ ಜೀವನದ ಉದ್ದಕ್ಕೂ ವಿಧಿವಿಲಾಸದಿಂದ ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಮುಂದೆ ಕುರು ಪಾಂಡವರ ಶಸ್ತ್ರವಿದ್ಯಾಪ್ರದರ್ಶನ ಸಮಯದಲ್ಲಿ ತನ್ನ ತೇಜಸ್ಸು ಪರಾಕ್ರಮಗಳ ಮಹಿಮೆಯಿಂದ, ದುರ್ಯೋಧನನ ಸಖ್ಯಕ್ಕೆ ಪಾತ್ರನಾಗಿ ಅಂಗರಾಜ್ಯಾಧಿಪತಿಯಾಗುತ್ತಾನೆ. ಅಂದಿನಿಂದ ಕರ್ಣ ದುರ್ಯೋಧನರು ಪ್ರಾಣ ಸ್ನೇಹಿತರಾದರು. ಕೌರವನ ವೈರಿಗಳು ಕರ್ಣನ ವೈರಿಗಳಾದರು. ದುರ್ಯೋಧನನ ಅಭ್ಯುದಯ ಮೇಲ್ಮೆ ಕರ್ಣನ ಅಭ್ಯುದಯ ಮೇಲ್ಮೆಗಳಾದುವು.

ಕಾವ್ಯಕಲಾಖನಿಯಾದ ಮಹಾಭಾರತದಲ್ಲಿ ಉದ್ಯೋಗ ಪರ್ವದ ಹತ್ತನೆಯ ಸಂಧಿ ಒಂದು ನಾಯಕ ರತ್ನ. ಶ್ರೀಕೃಷ್ಣನ ರಾಜತಂತ್ರ ಭೇದೋಪಾಯಕ್ಕೆ ಅದೊಂದು ಒರೆಗಲ್ಲು. ಕರ್ಣನು ಸ್ನೇಹಶಕ್ತಿಯ, ಸ್ವಾಮಿನಿಷ್ಠೆಯ, ಮಾತೃಭಕ್ತಿಯ ಪರೀಕ್ಷೆಯಲ್ಲಿ ಉತ್ತೀರ್ಣನಾಗುವುದು ಈ ಸಂಧಿಯಲ್ಲೇ! ಮಾತೆಯಾದ ಕುಂತಿಯ ಪಕ್ಷಪಾತ, ಸ್ವಾರ್ಥತೆಗೆ ಸಾಕ್ಷಿಯಾಗಿದೆ. ಕುಮಾರವ್ಯಾಸನು ಶ್ರೀಕೃಷ್ಣನ ಪ್ರಲೋಭನ ಕಾರ್ಯದ ಕಥೆಯನ್ನೂ, ಮುರಮಥನ ಮತ್ತು ರಾಧೇಯರ ಸಂಭಾಷಣೆಯನ್ನು ಸುರಮ್ಯ ನಾಟಕೀಯವಾಗಿ ಚಿತ್ರಿಸಿದ್ದಾನೆ. ಅಲ್ಲಿಯ ಪಾತ್ರಗಳ ನೋವುನಲಿವುಗಳಲ್ಲಿ ನಾವೂ ಭಾಗಿಯಾಗುತ್ತೇವೆ. ವಾಚಕರ ಭಾಗಕ್ಕೆ ಕಥೆಯು ಹೊಚ್ಚಹೊಸದಾಗುತ್ತದೆ. ಮುಂದೇನಾಗುವುದೋ ಎಂದು ಉದ್ವೇಗಗೊಳ್ಳುತ್ತೇವೆ.

"ಒಲಿದವರನುಜ್ಜೀವಿಸುವ ಬಗೆ ಬಲುಹು ಮುರಮಥನಂಗೆ ಮುನಿದೊಡೆ ತಲೆಯ ಬರಹವ ತೊಡೆವನಲ್ಲದೆ ವೈರಿಪನೆ?" ಸಂಧಿ ಮುರಿದ ಸಂಜೆ ಕೃಷ್ಣನನ್ನು ಬೀಳ್ಕೊಡಲು ಬಂದಾಗ ಎಲ್ಲರನ್ನೂ ಕಳುಹಿಸಿ ಮಧುಸೂಧನನು ಇನತನೂಜನನ್ನು ಮಾತ್ರ ಹತ್ತಿರಕ್ಕೆ ಕರೆದು 'ಬಂದುಕಿಜೀದೆಡೆಗಾಗಿ ಕಳುಹುವುದು' ಎಂದು ಕೇಳಿಕೊಳ್ಳುತ್ತಾನೆ. ಕರ್ಣನ ಬಾಳಿನಲ್ಲಿ ವಿಷಮ ಹಾಗೂ ಪರೀಕ್ಷಾ ಸಮಯ. "ಇನತನೂಜನ ಕೂಡೆ ಮೈದುನತನದ ಸರಸವನೆಸಗಿ ರಥದೊಳು ಧನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀಠದಲಿ." ಕೃಷ್ಣನ ಈ ಅತಿಪ್ರೇಮ ಕರ್ಣನಿಗೆ ಸಂಶಯ ಹುಟ್ಟಿತು. ನಸು ಹಿಂಜರಿದು "ಎನಗೆ ನಿಮ್ಮಡಿಗಳಲಿ ಸಮ ಸೇವನೆಯೆ ದೇವ ಮುರಾರಿಯಂಜುವೆ" ಎಂದನು. ಕರ್ಣನಲ್ಲಿ ನಂಬುಗೆ ಹುಟ್ಟಿಸಲು "ತೊಡೆ ಸೋಂಕಿನಲಿ ಸಾರಿ" ಶೌರಿಯಿಂತೆಂದ: "ಭೇದವಿಲ್ಲೆಲೆ ಕರ್ಣ, ನಿಮ್ಮೊಳು ಯಾದವರು ಕೌರವರೊಳಗೆ ಸಂವಾದಿಸುಡನ್ವಯದ ಮೊದಲೆರಡಿಲ್ಲ." ಕೃಷ್ಣನ ಮಾತುಗಳನ್ನು ಬಣ್ಣಿಸುತ್ತಾ ಕವಿಯು "ದಾನವ ಸೂಧನನು ರವಿಸುತನ ಕಿವಿಯಲಿ ಬಿತ್ತಿದನು ಭಯವ" ಎಂದು ಹಾಡಿದ್ದಾನೆ. ಕರ್ಣನು "ದಾನವಾಂತಕ ಬೆಸಸು ವಂಶವಿಹೀನನ ನಿಮ್ಮಡಿಗಳಲಿ ಸಮಾನಿಸುವರೆ" ಎಂದು ಕೈಮುಗಿಯುತ್ತಾನೆ. ಶ್ರೀಕೃಷ್ಣನು "ಮಾನನಿಧಿ, ನಿನ್ನಾಣೆ|

ಬಾರೈ ನೀನು ನಮ್ಮೆಲ್ಲರ ಹವಣು ವರಭಾನು ವಂಶಲಲಾಮ ನೀ ರಾಮಂಗೆ ಸರಿ" ಎಂದು ಬರಸೆಳೆದು ಅವನ ಕರದೊಳು ಕರವನಿಕ್ಕಿ, ವೀಳೆಯವ ಕೊಟ್ಟು "ಎಲೆ ದಿವಾಕರತನಯಾ! ನಿನ್ನಯಕುಲವನರಿಯೆಯಲಾ! ಸುಯೋಧನನಲಿ ವೃಥಾ ಸೇವಕತನದಲಿರುವುದು ಉಚಿತವೆ?

ಲಲನೆ ಪಡೆದೀಯೈದು ಮಂತ್ರಂ
ಗಳಲಿ ಮೊದಲಿಗ ನೀನು ನಿನ್ನಯ
ಬಳಿ ಯುಧಿಷ್ಠಿರದೇವ ಮೂರನೆಯಾತ ಕಲಿಭೀಮ |
ಫಲುಗುಣನು ನಾಲ್ಕನೆಯಲೈದನೆ
ಯಲಿ ನಕುಲಸಹದೇವರಾದರು
ಬಳಿಕ ಮಾದ್ರಿಯಲೊಂದು ಮಂತ್ರದೊಳಿಬ್ಬರು
ದಿಸಿದರು ||

ಆದ್ದರಿಂದ ಪಾಂಡವರಲ್ಲಿ ಐವರ ಮೊದಲಿಗ ನೀನಿರಲು ಧರಣಿಯ ಕದನವು ಇತ್ತಂಡಕ್ಕೆ ಕಾಮಿತವಲ್ಲ. ಇದು ನಿಜ ಸಂಗತಿ. ನನ್ನ ಸಂಗಾತ ಬಾ. ಪಾಂಡವರೈವರನ್ನೂ ನಿನ್ನ ಪದತಲದಲ್ಲಿ ಕೆಡಹುತ್ತೇನೆ.

ನಿನಗೆ ಹಸ್ತಿನಪುರದ ರಾಜ್ಯದ
ಘನತೆಯನು ಮಾಡುವೆನು ಪಾಂಡವ
ಜನಪ ಕೌರವಜನಪರೋಲೈಸುವರು ಗದ್ದುಗೆಯ |
ನಿನಗೆ ಕಿಂಕರವೆರಡು ಸಂತತಿ
ಯೆನಿಸಲೊಲ್ಲದೆ ನೀನು ದುರಿಯೋ
ಧನನ ಬಾಯ್ದಂಬುಲಕೆ ಕೈಯಾನುವರೆ

ಹೇಳು? ಕೃಷ್ಣ ಇಷ್ಟಕ್ಕೇ ನಿಲ್ಲಿಸಲಿಲ್ಲ. ತನ್ನ ಮಾತಿನ ಬಾಣವನ್ನು ಮುಂದುವರಿಸುತ್ತಾನೆ. ಎಡದ ವೈಯಲಿ ಕೌರವೇಂದ್ರರ ಗಡಣ! ಬಲದ ವೈಯಲಿ ಪಾಂಡುಪುತ್ರರ ಗಡಣ! ಇದಿರಲಿ ಮಾದ್ರ ಮಾಗಧ ಯಾದವಾದಿಗಳು! ನಡುವೆ ನೀನು ಓಲಗದೊಳೊಪ್ಪುವ ಕಡುವಿಲಾಸವಬಿಟ್ಟು ದುರ್ಯೋಧನನ ಬಳಿಯಲ್ಲಿ ಜೀಯ, ಹಸಾದ ಎಂದು ಬಿದ್ದಿರಬೇಕೆ. ನಿನಗೆ ಶೌರ್ಯದಲ್ಲಿ ಇದಿರಿಲ್ಲ. ಕುಲದಲ್ಲಿ ಸೂರ್ಯನ ಮಗ. ಒಡಹುಟ್ಟಿದವರು ಐವರು ಪಾಂಡುತನಯರು. ನಿನ್ನ ವೈಭವಕ್ಕೆ ಸರಿಸಮಾನರಾರು? ನಡೆ ಧಾರಣೀಪತಿಯಾಗು! ನೀನು ಮನಸ್ಸು ಮಾಡಿದರೆ "ವೈರ ವಿತ್ತಂಡಕ್ಕೆ ಬಳಿಕಿಲ್ಲ." ಕೃಷ್ಣನ ಬಾಯಿಯಿಂದ ಏಕಪ್ರಕಾರವಾಗಿ ಬರುತ್ತಿದ್ದ ಈ ಮಾತುಗಳನ್ನು ಮೌನದಿಂದ ಆಲಿಸುತ್ತಿದ್ದ ಕರ್ಣನ ಹೃದಯದಲ್ಲಿ ಎಂತಹ ಭಾವನೆಗಳು ಮೂಡಿರಬಹುದು. ಮುರಾರಿಯ ವಿಷಮಯವಾದ ಕೃತವದ ಅಸೌಥತೆಯನ್ನು ಅರಿತನು.

ಕೊರಳ ಸೆರೆ ಹಿಗಿದುವು ಧೃಗುಜಲ
ಉರವಣಿಸಿ ಕಡುನೊಂದನಕಟಾ
ಕುರುಪತಿಗೆ ಕೇಡಾದುದೆಂದನು ಮನದೊಳಗೆ

ಕುರುಪತಿಗೆ ಕೇಡಾಯಿತಲ್ಲಾ ಎಂಬುದೇ ಕರ್ಣನ ಚಿಂತೆ.

ಕಾದಿ ಕೊಲುವಡೆ ಪಾಂಡುಸುತರು ಸ
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದೊಡೆ ಕೌರವಂಗವನಿಯಲಿ ಹೊಗಲಿಲ್ಲ |
ಭೇದದಲಿ ಹೊಕ್ಕಿರಿದನೋ ಮಧು
ಸೂದನಕಟಕಟೆನುತ ಘನ ಚಿಂ
ತೋದಧಿಯಲದ್ದವೊಲು ಮೌನದೊಳಿದ್ದನಾ
ಕರ್ಣ ||

ಕರ್ಣನ ಮೌನದ ಅರ್ಥವನ್ನರಿತ ಕೃಷ್ಣ ಮರಳಿ ಮಾತನಾಡತೊಡಗಿದನು. ಏನು? ಹೇಳೈ ಕರ್ಣ! ಚಿತ್ತಗ್ಲಾನಿ ಯಾವುದು ಮನಕೆ? ಕುಂತೀಸೂನುಗಳ ಬೆಸಕೈಸಿಕೊಂಬುದು ಸೇರದೇ ನಿನಗೆ? ಮೌನ ಏತಕ್ಕೆ? ಮರುಳುತನ ಬೇಡ; ನಾನು ನಿನ್ನ ಆ ಪದೆಸೆಯ ಬಯಸುವನಲ್ಲ, ಹೇಳು! ಕರ್ಣನು ದೃಢ ಮನಸ್ಸಿನಿಂದ ಮಹಿಯ ರಾಜ್ಯದ ಆಸೆ ನನಗಿಲ್ಲ. ಆದರೆ,

ಹೊರೆದ ದಾತಾರಂಗೆ ಹಗೆವರ
ಶಿರವ ನರಿದೊಪ್ಪಿಸುವೆನೆಂಬೀ
ಭರದೊಳಿರ್ದೆನು ಕೌರವೇಂದ್ರನ ಕೊಂದೆ ನೀನೆಂದ ||

ಇನ್ನು ಎಷ್ಟು ಹೇಳಿ ಏನು ಪ್ರಯೋಜನ? "ಎನ್ನೊಡೆಯ ನಾದಂತಹೆನು ಬಾರೆನು ಪೊಡವಿಯಲಿ ನೀಹರಹಿಕೊಳು, ನಿನ್ನವರ ನಿಲಿಸು" ಎಂದು ಹೇಳಿ "ವೀರಕೌರವರಾಯನೆ ದಾತಾರನ್! ಆತನ ಹಗೆಯೆ ಹಗೆ! ಕೈವಾರವೆ ಕೈವಾರ! ನಾಳೆ ಸಮರದಲಿ ತೋರುವೆನು ನಿಜಭುಜ ಶೌರಿಯದ ಸಂಪನ್ನತನವನು ಪಾಂಡುತನಯರಲಿ!" "ಕೌರವೇಶ್ವರನ ಒಲುಮೆ ತಪ್ಪಿಸಿ ಭುವನದೊಳಗೆನಗಾಪ್ತಜನವಿಲ್ಲ" ನನ್ನ ಹೀನಕುಲವನ್ನೂ ಲೆಕ್ಕಿಸದೆ ಅಂಗರಾಜ್ಯಾಧಿಪತಿಯಾಗಿ ಮಾಡಿದ ಕೌರವನನ್ನು ಅದೆಂತು ಮರೆವಪೆನು?

ನೋಡಿದಣಿಯನು ಬಿರುದ ಹೊಗಳಿಸಿ
ಹಾಡಿದಣಿಯನು ನಿಚ್ಚಲುಚಿತವ

ಮಾಡಿತಣಿಯನು ಮಾನನಿಧಿಯನದೆಂತು
ಮರೆದಪೆನು |
ಕಾಡಲಾಗದು ಕೃಷ್ಣ ಖಾತಿಯ
ಮಾಡಲಾಗದು ಬಂದೆನಾದೊಡೆ
ರೂಢಿ ಮೆಚ್ಚದು ಕೌರವನ ಹಗೆ ಹರಿಬ ತನಗೆ ||

ಕೌರವನ ಋಣವು ಹಿಂಗುವಂತೆ ಯುದ್ಧಮಾಡಿ ಸುಭಟ ಕೋಟಿಯನ್ನು ಸಂಹಾರ ಮಾಡಿ, ಪತಿ ಕಾರ್ಯದಲ್ಲಿಯೇ ನನ್ನ ಶರೀರವನ್ನು ಸವೆಸುವೆನು. ಕರ್ಣನು ಸ್ವಲ್ಪ ಹೊತ್ತು ಮೌನದಿಂದಿದ್ದು, ನಿನ್ನ ಪಂಚ ಪ್ರಾಣದಂತಿರುವ "ವೀರರೈವರ ನೋಯಿಸೆನು ರಾಜೀವ ಸಖನಾಣೆ" ಎಂದು ದೃಢವಾಗಿ ಹೇಳುತ್ತಾನೆ. ಶ್ರೀಕೃಷ್ಣ ಕರ್ಣನ ದೃಢವ ಕಂಡು ಮನದೊಳುತ್ಸಾಹಿಸಿದನು. ಆದರೂ ಸುಮ್ಮನಾಗದೆ, ಕೌರವೇಶ್ವರನು ನಿನ್ನ ಮಾತನ್ನು ಮೀರುವುದಿಲ್ಲ. ಅವನಿಗೆ ಹೇಳಿ, ಪಾಂಡವರಿಗೆ ರಾಜ್ಯವನ್ನಾದರೂ ಕೊಡಿಸು ಎನ್ನುತ್ತಾನೆ. ಕರ್ಣನ ಈ ವಿಷಮ ಪರಿಸ್ಥಿತಿಯನ್ನು ಕಂಡ ಯಾರಿಗಾದರೂ ಮನಸ್ಸು ಕರಗದಿರದು. ಯುದ್ಧಕ್ಕಾಗಿ ಸರ್ವಸನ್ನಾಹಗಳೂ ಸಿದ್ಧವಾಗಿರುವಾಗ, ಸಂಧಿಯ ಮಾತನ್ನೆತ್ತುವುದು ಕರ್ಣನಿಗೆ ಉಚಿತವಾಗಿ ತೋರಲಿಲ್ಲ. "ಮುರವೈರಿ ಸಂಧಿಯನರಿಯೆ ನಾನು" ಎನ್ನುತ್ತಾನೆ. ಸಾಯಂಕಾಲ ಸಮೀಪಿಸಿದ್ದರಿಂದ, ನನಗೆ ಅಪ್ಪಣೆ ಕೊಡಿ, ಹೊರಟುಹೋಗುತ್ತೇನೆ. ಹುತ್ತದ ಬಳಿಯಿದ್ದ ಹುಲ್ಲಿನ ಸರವೂ ಹಾವೆಂಬ ಭ್ರಮೆಯನ್ನು ಹುಟ್ಟಿಸುತ್ತದೆ ಎಂದು ಹೇಳಿ ಬೀಳ್ಕೊಂಡು ತನ್ನ ಮನೆಗೆ ಬರುತ್ತಾನೆ.

ಕೃಷ್ಣ ಕರ್ಣರ ಸಂಭಾಷಣೆ ಇಂತು ಕೊನೆಗೊಂಡಿತು. ಕೃಷ್ಣನ ಭೇದೋಪಾಯ ಫಲಿಸಲಿಲ್ಲ. ಮನೆಗೆ ಬಂದ ಮೇಲೂ ಕರ್ಣನಿಗೆ ಸಮಾಧಾನವಿಲ್ಲ.

ಬೀಳುಕೊಂಡನು ಮನೆಗೆ ಬಂದು ವಿ
ಶಾಲಮತಿ ಚಿಂತಿಸಿದನಾ ಸಿರಿ
ಲೋಲ ಮಾಡಿದ ತಂತ್ರ ಮನದಲಿ ನಟ್ಟು ಬೇರೂರಿ|
ಹಾಳು ಮಾಡಿದನಕಟ ಕೌರವ
ಬಾಳಲರಿಯದೆ ಕೆಟ್ಟನೀ ಗೋ
ಪಾಲ ಬರಿದೇ ಬಿಡನು ಜೀವವ ಕೊಳ್ಳದಿರನೆಂದ ||

ಸೂತ್ರಪ್ರಾಯವಾದ ಕರ್ಣನ ಮಾತು ಆತನ ಮನದಲ್ಲಿ ಮೆರೆದವು, ಎದೆಯಲ್ಲಿ ಮೊಳಗಿದುವು. ತನಗೂ ತನ್ನ ಸ್ವಾಮಿಗೂ ಮುಂದೊದಗುವ ಅಮಂಗಳ ಕರ್ಣನ ಬಗೆಯಲ್ಲಿ ಮಿಂಚಿತು. ಆ ರೀತಿ ಕೃಷ್ಣನು ಕರ್ಣನನ್ನು ಸಂಧಿಸಿ, ಅವನ ಜನ್ಮವೃತ್ತಾಂತವನ್ನು ಅರುಹಿ, ಮನಸ್ಸನ್ನು ಕಲಕಿ, ಭೇದೋಪಾಯದಲ್ಲಿ ಹೊಕ್ಕಿರಿದ ದೃಶ್ಯವನ್ನು ಕಾಣುತ್ತೇವೆ.

ಕರ್ಣನ ಸುಲಿಗೆಯ ಕಥೆ ಇಲ್ಲಿಗೇ ಮುಗಿಯಲಿಲ್ಲ. ಸಾಯುವವರೆಗೂ ವಿಧಿಯು ಅವನನ್ನು ಸುಲಿಯುತ್ತಲೇ ಇತ್ತು. ಹತ್ತನೆಯ ಸಂಧಿಯ ಉತ್ತರಾರ್ಧದಲ್ಲಿ ಕವಿಯು, ಕುಂತಿಯು ಕರ್ಣನನ್ನು ಭೇಟಿ ಮಾಡಿ ಸರಳನ್ನು ಬೇಡಿದ ವಿಚಾರವನ್ನು ಬರೆದಿದ್ದಾನೆ. ಸನ್ನಿವೇಶವೇನೊ ರಸಪೂರ್ಣವಾದುದು. ಆದರೆ ಕವಿ ನಾರಣಪ್ಪನಿಗೆ ಅದರ ಕೋಮಲತೆಯನ್ನು, ಶೋಕರಸಪೂರ್ಣತೆಯನ್ನು, ಸೂಕ್ಷ್ಮತೆಯನ್ನು, ದುರಂತವನ್ನು ಚಿತ್ರಿಸುವ, ಬಣ್ಣಿಸುವ ಮಹಿಮೆ ಸಾಲದು, ಸಾಮರ್ಥ್ಯ ಸಾಲದು ಎಂದರೆ ತಪ್ಪಾಗಲಾರದು. ಭೀಮನ ಗದೆಯನ್ನು ಹಿಡಿದು ವಿಸ್ಮಯಕರವಾಗಿ ತಿರುಗಿಸಬಲ್ಲನೇ ಹೊರತು ಹೂವಿನ ಚೆಂಡಾಟದ ಲಾಲಿತ್ಯ ರಮಣೀಯತೆಯನ್ನು ಪ್ರದರ್ಶಿಸಲಾರನು. ಕುಮಾರವ್ಯಾಸನು ಅರಬ್ಬೀ ಟಾಕಣವನ್ನು ಚೆನ್ನಾಗಿ ಸಾಕಿ ಸವಾರಿ ಮಾಡಬಲ್ಲನೇ ಹೊರತು, ಮುದ್ದಾದ ಮೊಲದ ಮರಿಯನ್ನು ಪೊರೆದು ಸಲಹಿ ಆಡಿಸಲರಿಯನು. ಆತನು ಶ್ರವಣಬೆಳ್ಗೊಳದ ಗೊಮ್ಮಟೇಶ್ವರನನ್ನು ಕೆತ್ತಬಲ್ಲನು. ಆದರೆ ಬೇಲೂರಿನ ಶಿಲಾ ಬಾಲಿಕೆಯರನ್ನು ಕೆತ್ತಲಾರನು, ಕಡೆಯಲಾರನು. ಆದ್ದರಿಂದಲೇ ಶ್ರೀಕೃಷ್ಣ–ಕರ್ಣರ ಸಂಭಾಷಣೆಯನ್ನು ನಿರುಪಮವಾಗಿ ರಸವತ್ತಾಗಿ ಚಿತ್ರಿಸಿದ ಆತನು ತೊರೆದ ಮಗನನ್ನು ತಾಯಿ ಮರಳಿ ನೋಡಿದ ದೃಶ್ಯವನ್ನು ರಸವತ್ತಾಗಿ ಬಣ್ಣಿಸಲರಿಯದೆ, ಕಥೆಯು ಸಾಗಲು ಎಷ್ಟು ಬೇಕೋ ಅಷ್ಟನ್ನೇ ಲೆಕ್ಕಾಚಾರದಂತೆ ಹೇಳಿ ಮುಗಿಸಿದ್ದಾನೆ.

ಸಂಧಿ ಮುರಿದ ಮೇಲೆ, ಶ್ರೀಕೃಷ್ಣನು ಕುಂತಿಯನ್ನು ಏಕಾಂತದಲ್ಲಿ ಕಂಡು, ನಿನ್ನ ಐವರು ಮಕ್ಕಳನ್ನು ತಲೆಗಾಯುವಂತೆ ಕರ್ಣನನ್ನು ಪ್ರಾರ್ಥಿಸು ಎಂದು ಹೇಳಿ ಹೋಗುತ್ತಾನೆ. ರವಿಸುತನು ಒಂದು ದಿನ ಭಾಗೀರಥೀ ತೀರದಲ್ಲಿ ಸೂರ್ಯನಿಗೆ ಅರ್ಘ್ಯವನ್ನು ಕೊಡುತ್ತಿರಲು ಕುಂತಿಯು ಅಲ್ಲಿಗೆ ಬರುವಳು. ಕರ್ಣನು ಆಕೆಗೆ ನಮಸ್ಕಾರ ಮಾಡುತ್ತಾನೆ. ತಾಯಿ ಮಗನನ್ನು ಬಿಗಿದಪ್ಪುವಳು. ಗಂಗಾದೇವಿ ಪ್ರತ್ಯಕ್ಷಳಾಗಿ ಕೈಯೆಡೆಯ ಕಂದನನು ಒಪ್ಪುಗೊಳು ನೀನು ಎಂದು ಹೇಳಿ ಮಾಯವಾಗುವಳು. ರವಿಯೂ ಅಲ್ಲಿಗೆ ಬಂದು ಕರ್ಣನನ್ನು ಎಕ್ಕಟಿಕರೆದು ಎಲೆ ಮಗನೆ ಕುಂತಿದೇವಿ ತಾಯಹುದು "ಮುರಹರನ ಮತದಿಂದ ನಿನ್ನಯ ಸರಳ ಬೇಡಲು ಬಂದಳಂದಿನ ಹರಿಗೆ ಕವಚವನಿತ್ತವೊಲು ಮರುಳಾಗಬೇಡ" ಎನ್ನಲು, ತಂದೆಗೆ ಹಸಾದ ಹೇಳಿಕಳಿಸಿ, ತಾಯಿಯ ಕಡೆ ತಿರುಗಿ "ಒಸೆದು ಬಿಜಯಂಗೈದ ಹದನನು

ವುಸುರ ಬೇಹುದು ತಾಯೆ ಎನಲು, ಕುಂತಿ ಶೋಕಿಸುತ ನುಡಿದಳು. ಮೊತ್ತಮೊದಲು ಮಗನೆ ತಮ್ಮಂದಿರನು ಪಾಲಿಸು ಎಂಬ ಸ್ವಾರ್ಥವನ್ನೇ ಹೇಳಿ ತರುವಾಯ "ವಿಗಡತನವನು ಮಾಣು, ಪರರೋಲಗವ ನೀ ಮಾಡುವರೆ? ನಿನಗಿತ್ತಂಡವನುಜರೆಲೆ? ಹಿಸುಣರ ಬಗೆಯ ನೀ ಕೇಳದಿರು, ಸಲಿಸೆನ್ನ ವಚನಮನ್ ಎನ್ನುತ್ತಾಳೆ. ಅದಕ್ಕೆ ಕರ್ಣನು ತಾಯಹುದು ಬಲ್ಲೆನ್, ಎನಗೆ ಪಿತನರುಹೆ ತಿಳಿದೆನು. ಕೌರವರಾಯನು ಎನ್ನನ್ನು ನೆಚ್ಚಿಪೊರೆದನು. ಸಾಯಲಳುಕುವೆನೆ? ಸುಡು! ಏತರದೀಯಿಳೆಯ ಬಾಳಿಕೆ? ಕೃತಘ್ನತೆಗಿಲ್ಲ ಗತಿ; ರಾಯನ ಹಿಂದಿನ ಉಪಕಾರವನ್ನು ಮರೆತರೆ ಹೇಸಳೇ ಜಯಲಕ್ಷ್ಮಿ ತನಗೆ", ಬಂದು ಪಾಂಡವರೊಡನೆ ಕೂಡುವ ಶೌರಿಯ ಮಾತು ಆದಂತಿರಲಿ, ಇಂತು ನಿಮ್ಮಡಿಬಂದ ಕಾರ್ಯವ ಬೆಸಸಿ ನೀವ್ ಎನ್ನುತ್ತಾನೆ. ಕುಂತಿಯು ಹಿಂದುಮುಂದು ನೋಡದೆ, ತಾನು ಬೇಡುವ ವರವೇ ಮಗನಿಗೆ ಮೃತ್ಯುವಾಗಬಹುದು ಎಂಬುದನ್ನೂ ಕೂಡ ಬಗೆಯದೆ, ಸಂದರ್ಭ ಸಿಕ್ಕಿದ್ದೇ ಸಾಕು ಎಂದು ಬಗೆದಳೋ ಎಂಬಂತೆ ಹೇಳುವಳು :

ಆದೊಡೈವರ ಮಕ್ಕಳನು ತಲೆ
ಗಾಯ್ದು ತೋರ್ಕೈಕಂದ ನಿನಗಿ
ನ್ನೀ ದುರಾಗ್ರಹವೊಪ್ಪುವುದೆ ಕೌರವನ ಸೇವೆಯಲಿ |
ಹೋದ ಬಾಣವ ಮರಳಿ ತೊಡದಿರು
ಮಾದು ಕಳೆ ವೈರವನೆನಲ್ಕೆ ಹ
ಸಾದವೆಂದನು ಬೀಳುಕೊಟ್ಟನು ಬಂದವರ ಮನೆಗೆ ||

ಮುಗಿದೇ ಹೋಯಿತು, ತಾಯಿ ಮಕ್ಕಳ ಭೇಟಿಯ ಕತೆ. ವ್ಯವಹಾರದಲ್ಲಿ ಒಬ್ಬನು ಮಿತ್ರರ ಅಂಗಡಿಗೆ ಸಾಮಾನು ಕೊಂಡುಕೊಳ್ಳಲು ಹೋದಾಗ ಕೂಡ ಇಷ್ಟು ಸಂಕ್ಷೇಪವಾಗಿ ಮಾತನಾಡಿ ಬರುವುದಿಲ್ಲ. ಕುಂತಿಯು ಮಾತ್ರ ಕರ್ಣನ ಅಂಗಡಿಗೆ ಹೋಗಿ ತನ್ನ ತಾಯ್ತನವೆಂಬ ನಗದು ಹಣವನ್ನು ಕೊಟ್ಟು ಸರಳ ಭಿಕ್ಷೆಯನ್ನು ಕೊಂಡುಕೊಂಡೇ ಬಂದಳು.

ಕುಮಾರವ್ಯಾಸನ ಕರ್ಣನ ಪಾತ್ರ ನಿರೂಪಣೆಯಲ್ಲಿ ಕೆಲವು ಸಂದೇಹಗಳು ತಲೆದೋರುತ್ತವೆ. ಕರ್ಣನ ಸ್ವಾಮಿಭಕ್ತಿ, ಸ್ವಾಮಿನಿಷ್ಠೆಯ ಬಗ್ಗೆ ಪ್ರಶ್ನಿಸಬೇಕಾಗುತ್ತದೆ. ಕೃಷ್ಣ, ಕುಂತಿಯರು ಕರ್ಣನನ್ನು ಭೇದಿಸಿದ ಮತ್ತು ಕರ್ಣಾರ್ಜುನರ ಕಾಳಗದ ಸಂದರ್ಭಗಳಿಂದ ಈ ವಿಷಯವನ್ನು ವಿಶ್ಲೇಷಿಸಬಹುದಾಗಿದೆ. ಜೋಳವಾಳಿಯನ್ನು ನೆನೆದ 'ಹೊರೆದ ದಾತಾರಂಗೆ ರಿಪುಗಳ ಸಿರವ ತರಿದು ಒಪ್ಪಿಸುವೆನು' ಆಳ್ದನಹಿತಕ್ಕಾಗಿ ನನ್ನ ದೇಹವನ್ನು ಈಡಾಡುವೆನು, ಎನ್ನುತ್ತಿದ್ದ ಕರ್ಣ, ಕೃಷ್ಣನಿಗೆ ನಿನ್ನಯ ವೀರರೈವರ ನೋಯಿಸೆನು ರಾಜೀವಸಖನಾಣೆ ಎಂದು ಆಣೆಯಿಕ್ಕಿ ಹೇಳುತ್ತಾನೆ. ತಾಯಿ, ಮಗನ ಭೇಟಿಯಲ್ಲೂ ಸೂರ್ಯನು ಬಂದು ಎಚ್ಚರಿಸಿದರೂ ಆಗಲಿ ಎಂದವನು, ಕುಂತಿ ಅಲ್ಲಿಗೆ ಬಂದು "ತೊಟ್ಟ ಬಾಣ ತೊಡಬೇಡ, ತಮ್ಮಂದಿರನ್ನು ಕೊಲ್ಲಬೇಡ" ಎಂದರೆ ಆ ಮಾತಿಗೂ ಹಸಾದ ಎಂದು ಪಕ್ಕನೆ ಹೇಳಿಬಿಡುತ್ತಾನೆ. ಇದೂ ಅಲ್ಲದೆ ಕರ್ಣಾರ್ಜುನರ ಯುದ್ಧದಲ್ಲಿ ಶಲ್ಯನು ಎದೆಗೆ ಬಾಣದ ಗುರಿ ಇಡೆಂದರೂ, ತನ್ನ ತಾಯಿಗೆ ಕೊಟ್ಟ ವಚನದಂತೆ, ಪುನಃ ಗುರಿ ಬದಲಿಸಲಿಲ್ಲ. ಸರ್ಪಾಸ್ತ್ರ ಪುನಃ ಬಂದು ನನ್ನನ್ನು ತೊಡು ಎಂದರೆ ಉಪೇಕ್ಷೆಯಿಂದ ತೊಡುವುದಿಲ್ಲವೆನ್ನುತ್ತಾನೆ. ಇದನ್ನೆಲ್ಲಾ ನೋಡಿದರೆ ಕರ್ಣನು ದುರ್ಯೋಧನನಲ್ಲಿಟ್ಟಿದ್ದ ನಿಷ್ಠೆ, ಭಕ್ತಿ, ನಿಜವೇ ಅಥವಾ ಬರಿಯ ತೋರಿಕೆಯೇ? ಎನ್ನಿಸದಿರದು. ಕೌರವೇಶ್ವರನಿಗೆ ಬೇಕಾಗಿರುವುದು ಪಾಂಡವರ ನಾಶ. ಮುಖ್ಯವಾಗಿ ಅರ್ಜುನನಿಗೆ ಸರಿಸಾಟಿಯಾಗಿರಲೆಂದೇ ಸೂತಪುತ್ರನೆನ್ನುತ್ತಿದ್ದ ಕರ್ಣನನ್ನು ಗೌರವಿಸಿ ಅಂಗರಾಜ್ಯಾಧಿಪತಿಯಾಗಿ ಮಾಡುತ್ತಾನೆ. ಕರ್ಣನ ಬಗ್ಗೆ ಅವನಲ್ಲಿ ಎಳ್ಳಷ್ಟೂ ಅನುಮಾನವಿಲ್ಲ. ರಾಜ್ಯಾಡಳಿತದಿಂದ ಅಂತಃಪುರದವರೆಗೂ ಕರ್ಣನನ್ನು ನಂಬಿ, ನೆಚ್ಚಿಪೊರೆದ ದಾತಾರ. ಇದನ್ನು ಕರ್ಣನೇ ಅನೇಕ ಸಾರಿ ತನ್ನ ಬಾಯಿಂದ ಹೇಳಿದ್ದಾನೆ. "ನೋಡಿ ದಣಿಯನು, ಬಿರುದು ಹೊಗಳಿಸಿ ಹಾಡಿ ದಣಿಯನು ನಿಚ್ಚಲುಚಿತವ ಮಾಡಿ ತಣಿಯನು ಮಾನನಿಧಿಯನದೆಂತು ಮರೆದಪೆನು" ಎಂದು ಹೇಳಿದ ಕರ್ಣ "ಕಾದಿ ಕೊಲುವೊಡೆ ಪಾಂಡುಸುತರು ಸಹೋದರರು" ಎಂದು ಅನುಮಾನಿಸುವುದು ಸರಿಯೆ? ಹೀಗೆ ಅನೇಕ ಪ್ರಶ್ನೆಗಳು ತಲೆದೋರುತ್ತವೆ. ಕರ್ಣನ ಈ ರೀತಿಯ ಸ್ವಾಮಿನಿಷ್ಠೆ ಸರಿಯೆ? ಕರ್ಣನು ತಾನು ಏನು ಮಾಡುತ್ತಿರುವೆನೆಂಬುದನ್ನು ಆಮೂಲಾಗ್ರವಾಗಿ ಅರಿಯದ, ವಿಚಾರ ಮಾಡದ ಗೊಂದಲಬಡಕ ಎನ್ನೋಣವೆ? ಸಮಯ, ಸಂದರ್ಭ, ಸನ್ನಿವೇಶಗಳ ಅರಿವಿಲ್ಲದ ಆತನ ದಾನಸ್ವಭಾವವೂ ಸರ್ವಜನಗಳಿಂದಲೂ ಒಪ್ಪುವ ಹಾಗಿಲ್ಲ. ಕುಮಾರವ್ಯಾಸನು ಕರ್ಣನನ್ನು ಚಿತ್ರಿಸಿರುವುದನ್ನು ನೋಡಿದರೆ, ಸಾಹಿತ್ಯದ, ಲೌಕಿಕ ವಾಸ್ತವಿಕತೆಯ ದೃಷ್ಟಿಗಿಂತ ಭಕ್ತಿಮಾರ್ಗದ ದೈವಿಕ ಭಾವನೆಯು ಈತನ ಬರವಣಿಗೆಯಲ್ಲಿ ಎದ್ದು ಕಾಣುತ್ತದೆ. ಭಾರತದ ಎಲ್ಲ ಮಜಲುಗಳಲ್ಲಿಯೂ ಕೃಷ್ಣನ ಕೈವಾಡವಿರಬೇಕು. ಪ್ರತಿಯೊಂದು ಪಾತ್ರಗಳೂ, ಸೂತ್ರಧಾರನಾದ ಕೃಷ್ಣನ ಕೈಗೊಂಬೆಗಳು. ಪರಮಾತ್ಮನ ಮಹಿಮೆಯನ್ನು ಮೆರೆಸ

ಬೇಕು. ಇದು ಕುಮಾರವ್ಯಾಸನ ದೃಷ್ಟಿ. ಕುಮಾರ ವ್ಯಾಸ ಭಾರತದಲ್ಲಿ ಕೃಷ್ಣನೊಬ್ಬನನ್ನು ಬಿಟ್ಟರೆ ಉಳಿದವರೆಲ್ಲರೂ ಮಾನವ ಸ್ವಭಾವದ ಸಮಾನ ವ್ಯಕ್ತಿಗಳು. ಕರ್ಣನಲ್ಲೂ ಮಾನವೀಯ ದೌರ್ಬಲ್ಯಗಳನ್ನು ಕವಿ ಚಿತ್ರಿಸಿದ್ದಾನೆ.

ಕುಮಾರವ್ಯಾಸನ ಕರ್ಣನ ಚಿತ್ರವನ್ನು ನೋಡಿದ ನಾವು ಪಂಪನು ಕರ್ಣನನ್ನು ಹೇಗೆ ಚಿತ್ರಿಸಿದ್ದಾನೆ, ಅಲ್ಲಿ ತಲೆದೋರುವ ಸಂದೇಹಗಳಾವುವು ಎಂಬುದನ್ನು ನೋಡಬಹುದಾಗಿದೆ.

ಪಂಪ ಭಾರತದಲ್ಲೂ ಕೂಡ ಸಂಧಾನವು ವಿಫಲವಾದ ಮೇಲೆ ಕೃಷ್ಣನು ರಥಮಂ ಏರಿ ಕರ್ಣನ ಮನೆಯ ಮುಂದೆ ಬಂದು 'ಎಮ್ಮಂ ಕಿರಿದಂತರಂ ಕಳಿಪಿ ಮಗುಳ್ವೆ ಬಾ ಪೋಪಂ' ಎಂದು ರಥದಲ್ಲಿ ಕುಳ್ಳಿರಿಸಿಕೊಂಡು ಬಂದು ಆತನ ಹುಟ್ಟನ್ನು, ಸಂಬಂಧವನ್ನು ಅರುಹುತ್ತಾನೆ. ದುರ್ಯೋಧನನು ನಿನ್ನನ್ನು 'ಮುಳ್ಳೊಳೆ ಮುಳ್ಳಂ ಕೀಳಲ್' ನಯದಿಂದ ಪೆರ್ಚಿ ಪೊರೆದಿದ್ದಾನೆ ಎಂದು ಮುಂತಾಗಿ ಕೌರವನ ಪ್ರೀತಿಯ ರಹಸ್ಯವನ್ನು ಅರುಹುತ್ತಾನೆ. ಇಲ್ಲಿಯೂ ಕೂಡ ಕರ್ಣ, ದುರ್ಯೋಧನು ನನಗೆ ಮಾಡಿದ ಉಪಕಾರ, ಮನ್ನಣೆಯನ್ನು ಮರೆತರೆ 'ಆನ್ ಬೇಡರಿಂ ಕಡೆಯಲ್ಲವೆ? ಎನ್ನುತ್ತಾನೆ. ಕೃಷ್ಣ ಸಂಧಾನ ಮುರಿದ ಮೇಲೆ ಕರ್ಣನು ಚಿಂತಾಕ್ರಾಂತನಾಗಿ ಮನೆಗೆ ಬಂದು 'ಸುಯೋಧನನ್ ಎನ್ನನೆ ನಚ್ಚಿ ಪೆರ್ಚಿ ಮುಂಪೊರೆದನ್, ಎನ್ನಯ ಸೋದರರ್ ಇದಿರ್ಚಿ ಕಾದುವರ್, ಎನ್ನವರಂ ಎಂತುಕೊಲ್ವೆನ್? ಎನ್ನ ಒಡಲನೆ ತವಿಪೆನ್ ರಣರಂಗ ಭೂಮಿಯೊಳ್' ಎನ್ನುತ್ತಾನೆ. ಧರ್ಮಸಂಕಟದಿಂದ ಚಡಪಡಿಸುತ್ತಾನೆ.

ಕೃಷ್ಣನ ಆದೇಶದಂತೆ ಒಂದು ರವಿವಾರ ಕರ್ಣನು ಆದಿತ್ಯಂಗೆ ಅರ್ಘ್ಯಮಂ ಕೊಡುತ್ತಿರುವಾಗ ಕುಂತಿಯು ಬರುತ್ತಾಳೆ. ಕರ್ಣ ಸಾಷ್ಟಾಂಗ ನಮಸ್ಕಾರ ಮಾಡುತ್ತಾನೆ. ಕುಂತಿಯು ನಿಜನಂದನನ್ನು ಪ್ರೀತಿಯಿಂದ ಅಪ್ಪಿ ಆಶೀರ್ವಾದ ಮಾಡುತ್ತಾಳೆ. ಗಂಗಾದೇವಿಯು ಪ್ರತ್ಯಕ್ಷಳಾಗಿ 'ಕೆಯ್ಯಡೆಯೆಂದು ಅಪ್ಪೈಸಿದ ನಿನ್ನ ಮಗನಂ' ನೀನು ಒಪ್ಪಿಸಿಕೊ ಎಂದು ಹೇಳಿ ಹೋಗುತ್ತಾಳೆ. ಇತ್ತ ರವಿಯು ಪ್ರತ್ಯಕ್ಷನಾಗಿ, ಎಲೆ ಮರುಳ್ ಮಗನೆ ಮುಂ ಹರಿಗೆ ಕವಚಮಂ ಇತ್ತೈ, ಅದು ಆಯ್ತು ಪೊಯ್ತು. ಇಂದು ನಿನ್ನ ಅಂಬಿಕೆ ಕೊಂತಿ ಹರಿಯ ಮತದಿಂ ತನ್ನ ಸುತರಂ ಕಾಯಲ್ಕೆ ಒಡರಿಸಿ ಬಂದಳ್ ಎನಿತು ಲಲ್ಲೈಸಿದೊಡಂ ಪುರಿಗಣೆಯಂ ಕುಡದಿರ್' ಎಂದು ಹೇಳಿ ಅಂತರ್ಧಾನವಾಗುತ್ತಾನೆ. ಇತ್ತ ತಿರುಗಿ ಕರ್ಣನು ಕುಂತಿಯನ್ನು ನೀವು ಬಂದ ಕಾರಣ ವೇನು ಎಂದು ಕೇಳುತ್ತಾನೆ. ಕುಂತಿಯು 'ನಂಬಿದ ನಿನ್ನ ಅನುಜರ್ ನಿನ್ನಂ ಬೆಸಕೈಯೆ ನೀನೆನೆಲನುಂ ಆಳ್ವುದು ಕಂದಾ' ಎನಲು, ಕರ್ಣ ಮುಗುಳ್ನಕ್ಕು "ಭಯಮುಂ ಲೋಭಮುಂ ಎರಡುಂ ಪಾಪಕ್ಕೆ ಪಕ್ಕಾಗೆ ಅಳ್ದನ್ ಗೆಯ್ದ ಸುಕೃತಮುಮಂ ಪಿಂತಿಕ್ಕಿ ಜೋಳಕ್ಕೆ ತಪ್ಪಿ ಇಂ ಬಾಳ್ವುದೆ? ಅಬ್ಬೆ, ಈ ಒಡಲ್ ಏಂ ಕಲ್ಪಾಂತಸ್ಥಾಯಿಯೆ? ಎನ್ನಲು ಕುಂತಿಯು ಇನ್ನು ಚಂದ್ರವಂಶವು ಅಳಿಯಿತೆಂದು ಗೋಳಾಡುತ್ತಾಳೆ. ಇದನ್ನು ನೋಡಿದ ಕರ್ಣನು, ಅಬ್ಬೆ, ಇನಿತೇಂ ಚಿಂತಾಂತರಂ ಪೇಳ್; ಆಯುತ್ತ ನರನ್ ಎಡೆಗೊಂಡೊಡಂ ಪಿಡಿಯೆನ್ ಪುರಿಗಣೆಯಂ, ನಿನ್ನ ಉಳಿದ ಮಕ್ಕಳಂ ಏರ್ದೊಡಂ ಅಳಿಯೆನ್, ಪೆರ್ಜಸಮನೆ ಪಿಡಿದು ಎನ್ನನೆ ರಣದೊಳ್ ಅಳಿವೆನ್" ಎಂದು ಮಾತು ಕೊಡುತ್ತಾನೆ.

ಪಂಪನ ಕರ್ಣನಲ್ಲೂ, ಆತನ ನಿಷ್ಠೆ, ಸ್ವಾಮಿಭಕ್ತಿಯ ಬಗ್ಗೆ ಸಂದೇಹ ಮೂಡುತ್ತದೆ. ಕೃಷ್ಣನ ಸಂಧಿಗೆ ಒಪ್ಪದ ಕರ್ಣ, ಮನೆಗೆ ಬಂದು ಎನ್ನ ಸೋದರರಂ ಎಂತು ಕೊಲ್ವೆನ್? ಎನ್ನುತ್ತಾನೆ. ಧರ್ಮಸಂಕಟದಿಂದ ಕೂಡಿದ ತೋಲಾಯಮಾನ ವ್ಯಕ್ತಿಯಾಗಿ ಎನ್ನ ಅರಸನಿಂ ಮುಂಚೆ ಆನೆ ಸಾವೆನ್! ಎನ್ನುತ್ತಾನೆ. ದುರ್ಯೋಧನನಿಗೆ ಬೇಕಾದ್ದು ಕರ್ಣನ ಸಾವಲ್ಲ. ಪಾಂಡವರ ನಾಶ. ಆದ್ದರಿಂದಲೇ ಕರ್ಣನನ್ನು ಮೆಚ್ಚಿ ಪೊರೆದಿದ್ದಾನೆ. ಕುಂತಿಯು ಬಂದ ಸಮಯದಲ್ಲೂ ಸೂರ್ಯನು ಎಚ್ಚರಿಸಿದರೂ ಕುಂತಿಯ ದುಃಖವನ್ನು ನೋಡಿ, ನರನ್ ಎಡೆಗೊಂಡೊಡಂ ಪಿಡಿಯೆನ್ ಪುರಿಗಣೆಯಂ, ನಿನ್ನ ಉಳಿದ ಮಕ್ಕಳಂ ಏರ್ದೊಡಂ ಅಳಿಯೆನ್, ಎಂದು ಪಕ್ಕನೆ ಹೇಳುತ್ತಾನೆ. ಸ್ವಾಮಿ ಭಕ್ತ, ಸ್ವಾಮಿನಿಷ್ಠನೆಂದು ಹೇಳಿಕೊಳ್ಳುತ್ತಿದ್ದ ಕರ್ಣ ಸ್ವಲ್ಪವೂ ವಿಚಾರ ಮಾಡಬಾರದೆ? ಅಲ್ಲದೆ ಈ ಎಲ್ಲಾ ವಿಚಾರಗಳನ್ನೂ ದುರ್ಯೋಧನನಿಂದ ಬಚ್ಚಿಡುತ್ತಾನೆ. ಹೊರಗೆ ಮಾತ್ರ ತೋರಿಕೆಗೆ ಪಾಂಡವರ ವೈರಿಯಂತೆ ನಟಿಸುತ್ತಾನೆ ಎಂದು ಹೇಳಬಹುದೆ? ಇದಾವ ನಿಷ್ಠೆ? ಇದಾವ ಜೋಳದ ಪಾಳಿ? ಕೃಷ್ಣ, ಕುಂತಿಯರಿಗೆ ಮಾತು ಕೊಟ್ಟ ಕರ್ಣ, ಭೀಷ್ಮಾಚಾರ್ಯರಿಗೆ ಮೊದಲು ಪಟ್ಟ ಕಟ್ಟಲು ಹೋದಾಗ ನನಗೆ ಮೊದಲು ಪಟ್ಟ ಕಟ್ಟು ಎಂದು ವಾದಿಸುತ್ತಾನೆ. ಈ ಸಂದರ್ಭವೂ ಪಂಪನಲ್ಲಿ ರಮ್ಯವಾಗಿ ಚಿತ್ರಿತವಾಗಿದೆ. ಮೊದಲೆಲ್ಲಾ ವಚನ ಕೊಟ್ಟ ಕರ್ಣ ನಿಷ್ಠೆಯಿಂದ ಕಾದಲು ಸಾಧ್ಯವೆ? ಅಥವಾ ಬರೀ ತೋರಿಕೆಯ ಮಾತೆ? ಇದಾದನಂತರ ತನ್ನ ಪಟ್ಟದ ಸರದಿ ಬಂದಾಗ ಭೀಷ್ಮರಲ್ಲಿ ಹೋಗಿ ಕ್ಷಮಾಪಣೆ ಕೇಳುತ್ತಾನೆ. ಈ ಸಂದರ್ಭವೂ ಪಂಪನಲ್ಲಿ ರಮ್ಯವಾಗಿ ಚಿತ್ರಿಸಲ್ಪಟ್ಟಿದೆ. "ಆನ್ ಮಾತು ಅರಿಯದೆ ಮುಳಿದುಂ ನಿಮ್ಮಡಿಯಂನೋಯೆ ನುಡಿದೆನ್...

ಮನದ ಉಮ್ಮಚ್ಚರಂ, ಅಜ್ಜ, ಮರೆವುದು" ಎನ್ನುತ್ತಾನೆ. ಅಲ್ಲದೆ ತನ್ನಿಂದ ಪಾಂಡವರನ್ನು ಗೆಲ್ಲುವುದು ಸಾಧ್ಯವಿಲ್ಲ ಎಂದು ಸೂಚಿಸುವ ಅವನ ಮಾತನ್ನು ನೋಡಬಹುದು. "ಧುರದೊಳ್ ನಿಮ್ಮಡಿಯುಂ ಗೆಲಲರಿಯವು, ಪಾಂಡು ಸುತರಂ ಎಮ್ಮಂದಿಗರ್ ಗೆಲ್ವರ್ ಎಂಬುದು ಅಚ್ಚರಿಯಲ್ತೆ? ಇದನ್ನೆಲ್ಲಾ ನೋಡಿದರೆ ಕರ್ಣನು ಹಿಂದು ಮುಂದು ಯೋಚನೆ ಮಾಡದ, ಅವಸರದ, ಅನುಮಾನ ಪ್ರಕೃತಿಯ ವ್ಯಕ್ತಿಯೆಂದು ಹೇಳಬಹುದೆ? ಈ ರೀತಿ ಮನಸ್ಸಿನ ಹೊಯ್ದಾಟದಿಂದ ಕೂಡಿದ ವ್ಯಕ್ತಿ ವೈರಿಗಳ ಶಿರವನ್ನು ತರಿಯಲು ಸಾಧ್ಯವೆ? ದುರ್ಯೋಧನನು, ಕರ್ಣನಿಗೆ ವೀರ ಪಟ್ಟ ಕಟ್ಟಿದ ಮೇಲೆ "ಅಂಗಮಹೀತಳಾಧಿಪಾ, ಪಾಂಡವ ಬಲಂ ನಿನಗೆ ನಡುಗುವುದು ; ಎನ್ನ ಬೆಳ್ಗೊಡೆಯುಮಂ, ಎನ್ನ ಪಟ್ಟಮುಮಂ, ಎನ್ನನುಂ ಕಾವುದು" ಎಂದು ಬಿನ್ನವಿಸುವನು. ಕರ್ಣನು ಇದನ್ನು ಎಷ್ಟರಮಟ್ಟಿಗೆ ಪಾಲಿಸಿದ? ಯುದ್ಧ ಮಾಡುವಾಗಲೂ ಕರ್ಣ ನಿಷ್ಠೆಯಿಂದ ಕಾದಲು ತನ್ನ ಹಿಂದಿನ ವಚನಗಳು ಅಡ್ಡಿ ಬರುತ್ತವೆ. ಯುಧಿಷ್ಠಿರನನ್ನು ಮೂರ್ಛೆಗೊಳಿಸಿದಾಗ ದುಃಖದಿಂದ ಚಿಂತಾಕ್ರಾಂತನಾಗಿ "ಅಂತು ಕೊಂತಿಗೆ ನಾಲ್ವರೊಳ್ ಆರುಮಂ ಕೊಲ್ಲೆನೆಂದು ನುಡಿದ ತನ್ನನನ್ನಿಗೆ ಬನ್ನ ಬಂದಪುದು" ಎಂದು ಸುಮ್ಮನಾಗುತ್ತಾನೆ. ಕರ್ಣಾರ್ಜುನರ ಯುದ್ಧದಲ್ಲೂ, ಶಲ್ಯನು ಹೇಳಿದರೂ ಗುರಿಯನ್ನು ಬದಲಿಸುವುದಿಲ್ಲ. ಉಗ್ರಶರವು ಬಂದು ಪುನಃ ನನ್ನನ್ನು ತೊಡೆಂದು ಕೇಳಿಕೊಂಡರೂ, ಕೆಲವು ನೆಪಗಳನ್ನು ಮುಂದೊಡ್ಡಿ ಬಾಣತೊಡುವುದಿಲ್ಲ. ಇದರಿಂದ ಶಲ್ಯನಿಗೂ ಕೋಪ ಬಂದು, ಇಂತಪ್ಪ ಏಕಗ್ರಾಹಿಗಂ, ಒರಂಟಂಗಂ ರಥಮಂ ಎಸಗೆನ್' ಎಂದು ಮೂದಲಿಸಿ ಹೊರಟು ಹೋಗುತ್ತಾನೆ. ಇಂದು ಕರ್ಣ ಸಾರಥಿಯಿಲ್ಲದ ಯೋಧ. ಕೆಸರಿನಲ್ಲಿ ಹೂತ ರಥದ ಗಾಲಿಯನ್ನು ಎತ್ತುತ್ತಿದ್ದಾಗ, ಕೃಷ್ಣನ ಕುತಂತ್ರದಿಂದ ಅರ್ಜುನ ಅವನ ಶಿರವನ್ನು ಛೇದಿಸುತ್ತಾನೆ. ಇಲ್ಲಿಗೆ ಕರ್ಣನ ಕತೆ ಮುಗಿಯುತ್ತದೆ.

ಪಂಪನ ರಚನೆಯೂ ಕೂಡ ಕರ್ಣನ ಕೃತಜ್ಞತೆ ಸ್ವಾಮಿನಿಷ್ಠೆಗಳಿಗೆ ಸುಸಂಬದ್ಧವಾಗಿದೆಯೆಂದು ಹೇಳಲಿಕ್ಕಾಗುವುದಿಲ್ಲ. ಕರ್ಣನ ತ್ಯಾಗ ಮನೋಭಾವನೆಗೆ ವಾಚಕರು ತಲೆದೂಗಿದರೂ, ಸ್ವಾಮಿ ನಿಷ್ಠೆ, ನಂಬುಗೆ ಪ್ರಶ್ನೆ ಬಂದಾಗ ಧಾರಾಳವಾಗಿ ಕರ್ಣನನ್ನು ಹೊಗಳುವ ಹಾಗಿಲ್ಲ. ದೈವಿಕ ಮತ್ತು ಮಾನುಷ ಶಕ್ತಿಗಳು ಅವನನ್ನು ಎಚ್ಚರಿಸಿದರೂ, ವಿಚಾರ ಮಾಡದೆ ನಡೆದದ್ದರಿಂದ ಕರ್ಣ, ದುರ್ಯೋಧನನಿಗೆ ತಿಳಿಯದ ಹಾಗೆ ವಂಚನೆ ಮಾಡಿದನೆಂದು ಹೇಳುವವರೂ ಇದ್ದಾರೆ. ಒಳಗೊಂದು ಹೊರಗೊಂದು ಮಾತಿನ ವಂಚಕನೆಂಬ ಅಪವಾದ ಆತನನ್ನು ಆವರಿಸುವ ಸಂಭವವಿಲ್ಲವೆ? ಇದು ಕರ್ಣನ ವ್ಯಕ್ತಿತ್ವಕ್ಕೆ ಒಪ್ಪುವುದೆ?

ಕರ್ಣನ ಈ ರೀತಿಯ ನಡವಳಿಕೆಗೆ ಕಾರಣವೇನು ಎಂದು ನಾವು ಯೋಚಿಸಿದ್ದೇ ಆದರೆ, ಪ್ರತಿಯೊಂದು ಪರೀಕ್ಷಾ ಸಮಯದಲ್ಲೂ ಆತನಿಗೊದಗುವ ಉಭಯಸಂಕಟ ವಾಚಕರಿಗೆ ಮನದಟ್ಟಾಗದಿರದು. ಒಂದು ಕಡೆ ತನ್ನನನ್ನಿ, ಮತ್ತೊಂದು ಕಡೆ ಸ್ವಾಮಿನಿಷ್ಠೆ. ಯಾವ ವೇಳೆಯಲ್ಲಿ ಯಾರು ಏನನ್ನೇ ಕೇಳಿದರೂ, ಇಲ್ಲ ಎಂದುದಿಲ್ಲ. ಆಡಿದ ಮಾತಿಗೆ ತಪ್ಪಿದುದಿಲ್ಲ. ಕೃಷ್ಣನು ಕರ್ಣನನ್ನು ಭೇದಿಸಲು ಬಂದ ಸಂದರ್ಭದಲ್ಲಿ ಕರ್ಣನ ಮನೋವೇದನೆಯನ್ನು ನಾವು ಅರಿಯಬಹುದಾಗಿದೆ. ಕೃಷ್ಣ ಒಂದೇ ಸಮನೆ ಮಾತಿನ ಬಾಣ ಪ್ರಹಾರ ಮಾಡಿದ್ದಾನೆ. ಪಾಂಡವರ ಹಿತಕ್ಕೆ ಅನೇಕ ಕೇಳಿಕೆಗಳನ್ನು ಮುಂದೊಡ್ಡುತ್ತಾನೆ. ಕೇಳುತ್ತಿರುವವನು ಭಗವಂತನಾದ ಕೃಷ್ಣ. ತನ್ನ (ಕರ್ಣನ) ಸೋದರರ ಹಿತಕ್ಕೋಸ್ಕರ. ಈ ಉಭಯ ಸಂಕಟದಲ್ಲಿ, ಆ ಅತಿಕ್ಷಣದಲ್ಲಿ ತನ್ನ ಮನಸ್ಸಿನಲ್ಲಾದ ಉದ್ವೇಗದಿಂದ "ನಿನ್ನಯ ವೀರರ್ವೈವರ ನೋಯಿಸೆನು ರಾಜೀವ ಸಖನಾಣೆ" ಎಂದು ಹೇಳಿರಬಹುದೆಂದು ತೋರುತ್ತೆ. ಅಲ್ಲದೆ ಕವಿಯ ಇಚ್ಛೆಯೂ ಕೂಡ ಭಾರತದ ತುಂಬೆಲ್ಲಾ ಕೃಷ್ಣನ ಕೈವಾಡ ಮೇಲಾಗಿರಬೇಕಲ್ಲವೆ?

ಕುಂತಿಯು ಕರ್ಣನನ್ನು ಸಂಧಿಸಿದ ಸಂದರ್ಭ ಅತ್ಯಂತ ರಸವತ್ತಾದುದು. ಕರುಣರಸ ಪೂರ್ಣವಾದುದು. ತನಗೆ ತಾಯಿಯೇ ಇಲ್ಲ. ಕೀಳು ಜಾತಿಯವ ಎಂದು ಅನೇಕ ಸಂದರ್ಭಗಳಲ್ಲಿ, ಅನೇಕ ಜನಗಳಿಂದ ಮೂದಲಿಕೆಗೆ ಗುರಿಯಾಗಿದ್ದ ಕರ್ಣನಿಗೆ ಇಂದು ತಟಕ್ಕನೆ ಅದರಲ್ಲೂ ಕುಂತಿ ತನ್ನ ತಾಯಿ ಎಂದು ತಿಳಿದ ಮೇಲೆ, ಆಕೆ ಅಪ್ಪಿಕೊಂಡು ಮುದ್ದಾಡಿ ಗೋಳಾಡಿದ ಮೇಲೆ, ಆತನ ಮನಸ್ಸಿನ ಮೇಲೆ ಎಂತಹ ಪರಿಣಾಮವಾಗಿರಬಹುದು ಎಂಬುದನ್ನು ನಾವು ಗಮನಿಸಬಹುದಾಗಿದೆ. ಕರ್ಣ ಕುಂತಿಯರ ಭೇಟಿ ಸಂಭಾಷಣೆಯನ್ನು ಕವಿ ಮಿಂಚಿನ ವೇಗದಲ್ಲಿ ಚಿತ್ರಿಸಿದ್ದಾನೆ. ಆ ಕ್ಷಣದಲ್ಲಿ ಆತನಿಗೆ ಸ್ವಾಮಿನಿಷ್ಠೆ ಮತ್ತು ಇತರ ವಿಚಾರಗಳು ಅಪ್ರಧಾನ, (secondary) ತಾಯ್ತನಕ್ಕೆ ತಾನು ಮೊದಲು ಮನ್ನಣೆ ಕೊಡಬೇಕೆಂದು ಆತನ ಮನಸ್ಸಿನಲ್ಲಿ ಹೊಳೆದಿರಬಹುದು. ಆ ಕ್ಷಣದ ಉದ್ರೇಕ, ಉದ್ವೇಗಗಳಿಂದ ಆವೃತನಾಗಿದ್ದಾನೆ. ಅನೇಕ ಭಾವನೆಗಳು ಆತನ ಮನಸ್ಸಿನಲ್ಲಿ ಮಿಂಚಿವೆ. ತನ್ನ ಬಗೆ, ತನ್ನ ಸ್ವಾಮಿನಿಷ್ಠೆ ಎಲ್ಲವನ್ನೂ ಅಪ್ರಧಾನವೆಂದು ಬಗೆದು ಕುಂತಿ ಕೇಳಿದ್ದಕ್ಕೆಲ್ಲ ಹಸಾದ

ಎನ್ನುತ್ತಾನೆ. ಇಲ್ಲಿ ಕರ್ಣ ಸೌಜನ್ಯದ ತ್ಯಾಗಮೂರ್ತಿಯಾಗಿ ಕಾಣುತ್ತಾನೆ. ಕುಂತಿ ತಾಯಿಯಾಗಿ ಕರ್ಣನ ಆಗುಹೋಗು, ಯೋಗಕ್ಷೇಮವನ್ನು ಯೋಚಿಸದಿರಬಹುದು. ಆದರೆ ಕರ್ಣ ಮಗನಾಗಿ, ತ್ಯಾಗಮೂರ್ತಿಯಾಗಿ ತನ್ನ ಕರ್ತವ್ಯವನ್ನು ಮಾಡಿದ್ದಾನೆ ಎಂದು ಹೇಳಿದರೆ ತಪ್ಪಾಗಲಾರದೆಂದು ತೋರುತ್ತೆ. ಬೇರೆಯವರು ಏನು ಕೇಳಿದರೂ ಇಲ್ಲ ಎನ್ನದ ಕರ್ಣ ಇಂದು ತನ್ನ ತಾಯಿಯೇ ಪ್ರತ್ಯಕ್ಷವಾಗಿ ಬಂದು "ಐವರು ಮಕ್ಕಳನು ತಲೆಗಾಯಿ" ಎಂದರೆ ಇಲ್ಲ ಎನ್ನುತ್ತಾನೆಯೆ? ಪ್ರಕೃತಿ ನಿಯಮವಾದ ಮಾನವೀಯ ದೌರ್ಬಲ್ಯಗಳೂ ಕರ್ಣನಲ್ಲಿವೆ ಎಂಬುದನ್ನು ನಾವು ಮರೆಯಲಾಗದು. ಮೇಲಿನ ಈ ಕಾರಣಗಳಿಂದ ತನ್ನ ತಾಯಿ ಕೇಳಿದ್ದಕ್ಕೆಲ್ಲಾ ಹಸಾದ ಎಂದು ಹೇಳಿ ನನ್ನಿಯನ್ನೂ, ತಾಯ್ತನಕ್ಕೆ ಮನ್ನಣೆ ಕೊಟ್ಟು ಮಗನಾಗಿ ತನ್ನ ಕರ್ತವ್ಯವನ್ನೂ ಕರ್ಣ ಮೆರೆದಿದ್ದಾನೆಂದು ಹೇಳಿದರೆ ತಪ್ಪಾಗಲಾರದೆಂದು ತೋರುತ್ತದೆ. ಮೇಲೆ ತಲೆದೋರಿದ ಕೆಲವು ಸಂದೇಹಗಳಿಗೆ ಸಮಾಧಾನೋಕ್ತಿಗಳನ್ನು ವಾಚಕರ ಅವಗಾಹನೆಗೆ ಕೊಟ್ಟು, ಅಂತಿಮ ತೀರ್ಮಾನವನ್ನು ವಾಚಕರಿಗೇ ಬಿಡಲಾಗಿದೆ.

ಅಲ್ಪ ಸ್ವಲ್ಪ ಬದಲಾವಣೆಗಳನ್ನು ಬಿಟ್ಟರೆ, ಪಂಪ, ಕುಮಾರವ್ಯಾಸರಿಬ್ಬರೂ ಕರ್ಣನನ್ನು ಒಂದೇ ದೃಷ್ಟಿಯಿಂದ ಚಿತ್ರಿಸಿದ್ದಾರೆ. ಇಬ್ಬರ ವರ್ಣನೆಗಳೂ ಕರ್ಣನ ನನ್ನಿಯನ್ನು ಮೆರೆಸಿದರೂ ಸ್ವಾಮಿನಿಷ್ಠೆಯ ಮಾತು ಬಂದಾಗ ನಾಲಗೆ ಹಿಡಿಯುತ್ತೆ. ಇಬ್ಬರೂ ಕರ್ಣನ ವ್ಯಕ್ತಿತ್ವವನ್ನು ಹೊಗಳಿದ್ದಾರೆ. "ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂ, ನೆನೆವೊಡೆ ಕರ್ಣನಂ ನೆನೆಯ . . . ಕರ್ಣ ರಸಾಯನಮಲ್ತೆ ಭಾರತಂ" ಎಂದು ಪಂಪ ಹೇಳಿದರೆ, "ಅಳುಕಿದನೆ ರಥ ಮುಳುಗಿದರೆ? ಕಳವಳಿಸಿದನೆ ಶಲ್ಯಾಪಸರಣಕೆ? ನರನು ಅವಗಡಿಸಿಕಾದಿದಡೆ ಕೆಲಬಲಕೆ ಹಾರಿದನೆ? ಭಾಪುಭಾಪೆಂದು ಹೊಗಳಿತು ವಂದಿ ಸಂದೋಹ," "ಕೊಟ್ಟ ಭಾಷೆಗೆ ಮರಳಿಬಾಣವ ತೊಟ್ಟನೆ? . . . ಕೌರವ ಕೆಟ್ಟನು ಅಕಟಾ ಎನುತ, ಕಾಯವಬಿಟ್ಟನು. ಕರ್ಣನೊಳ್ ಆರುಸರಿ? ಎನುತಿರ್ದುದು ಅಮರಗಣ" ಎಂದು ಕುಮಾರವ್ಯಾಸ ಹೊಗಳಿದ್ದಾನೆ. ಪಾಂಡವರಿಗೂ ಸುಲಭವಾಗಿ ದೊರೆಯದ ಪರಮ ಪದ ಕರ್ಣನಿಗೆ ಕೃಷ್ಣನಿಂದ ದೊರೆಯುತ್ತೆ. "ಪರಮ ಕರುಣಾಸಿಂಧು, ಕರ್ಣಂಗಿರದೆ ನಿಜಮೂರ್ತಿಯನು ತೋರಿದನುರುತರ ಪ್ರೇಮದಲಿ ಮುಕುತಿಯ ಪದವನೇಮಿಸಿದ." ಪಂಪ ಕುಮಾರವ್ಯಾಸರ ಕರ್ಣನ ಮರಣಾನಂತರ, ಹೊಗಳಿಕೆಗಳಿದ್ದರೂ, ಇವರ ವರ್ಣನೆಯಿಂದ ಕರ್ಣನ ದೋಷಗಳ ಅರಿವೂ ವಾಚಕರಿಗೆ ಮನದಟ್ಟಾಗದಿರದು. ಪಂಪನು, ಶಲ್ಯನ ಬಾಯಿಯಿಂದ ಆಡಿಸಿದ ಮಾತನ್ನು ಸ್ಮರಿಸಬಹುದಾಗಿದೆ.

ಮಹಾಭಾರತದ, ಮೂಲವ್ಯಾಸರ ಕಥೆಗೂ, ಪಂಪ, ಕುಮಾರವ್ಯಾಸರ ಕಥೆಗೂ ಅನೇಕ ವ್ಯತ್ಯಾಸಗಳನ್ನು ಕಾಣುತ್ತೇವೆ. ಸಂಸ್ಕೃತ ಭಾರತ ಮತ್ತು ಕನ್ನಡ ಭಾರತಗಳಲ್ಲಿ ಕಾಣುವ ಕೆಲವು ವ್ಯತ್ಯಾಸಗಳು, ಪ್ರತಿಯೊಬ್ಬರ ದೃಷ್ಟಿಯಲ್ಲೂ ಕರ್ಣನ ಪಾತ್ರ ಇವುಗಳ ಬಗ್ಗೆ ಕೂಲಂಕಷವಾಗಿ, ವಿಷದವಾಗಿ ಅಭ್ಯಾಸ ಮಾಡಿದರೆ ಒಂದು ಸ್ವಾರಸ್ಯವಾದ ಕೃತಿ ಹೊರಬರುತ್ತದೆ. ಪ್ರಸ್ತುತ ಲೇಖನದಲ್ಲಿ ಪಂಪ, ಕುಮಾರವ್ಯಾಸರ ಕರ್ಣನ ವ್ಯಕ್ತಿತ್ವದ ಬಗ್ಗೆ ಸಂಕ್ಷೇಪವಾಗಿ ವಿವೇಚಿಸಲಾಗಿದೆ.

ಒಟ್ಟಿನಲ್ಲಿ ಕರ್ಣನ ಕಥೆ ಕರುಣಾರಸಪೂರ್ಣವಾದುದು. ಯಾವ ಸಂದೇಹ ತಲೆದೋರಿದರೂ, ಆತನ ಸೂರ್ಯ ಸನ್ನಿಭ ಪ್ರಕಾಶದೆದುರಿನಲ್ಲಿ ಅದು ಮರೆಯಾಗಿ ಹೋಗುತ್ತದೆ. ಕರ್ಣನ ಕಥೆಯನ್ನು ಓದುವಾಗ ಆತನ ಪರವಾದ ಆತ್ಮೀಯತೆಯಿಂದ ಕಣ್ಣೀರು ಕೋಡಿವರಿಯುತ್ತದೆ. ಪರಮಾತ್ಮನ ಮಹಿಮೆಯನ್ನು ವರ್ಣಿಸಿ ಜನರಲ್ಲಿ ಭಕ್ತಿಯನ್ನು ಬೆಳೆಸಬೇಕೆಂದು ನಮ್ಮ ಕವಿಗಳು ಪ್ರಯತ್ನಪಟ್ಟಿದ್ದಾರೆ. ನಮ್ಮ ಮನಸ್ಸು ಪಾವನವಾಗಿ, ಭಕ್ತಿಯನ್ನು ಆಲಿಂಗಿಸಿ, ಕೃಷ್ಣನಲ್ಲಿ ಸಾಯುಜ್ಯವನ್ನಪೇಕ್ಷಿಸಿ ಕೃತಾರ್ಥರಾಗುತ್ತೇವೆ.

ಕರ್ಣನ ಪಾತ್ರದಲ್ಲಿ ಕುಮಾರವ್ಯಾಸ ಅಧ್ಯಾತ್ಮದ ಹೊನ್ನಿನೆಳೆಯನ್ನು ಕಂಡು ಅವನ ಸೌಂದರ್ಯವನ್ನು ಮತ್ತಷ್ಟು ಉಜ್ವಲಗೊಳಿಸಿದ್ದಾನೆ. ಭಾಸ-ಪಂಪರು ಕಂಡರಿಸಿದ ವಿಗ್ರಹಕ್ಕೆ ಕುಮಾರವ್ಯಾಸ ಅಧ್ಯಾತ್ಮದ ವಜ್ರಕಿರೀಟವನ್ನು ತೊಡಿಸಿದ್ದಾನೆ. ಆದ್ದರಿಂದ ಕರ್ಣನ ಮೂರ್ತಿ ನಮ್ಮ ಜನತೆಯ ಮನೋಮಂದಿರದಲ್ಲಿ ಕುಂದದ ಪ್ರಭೆಯಿಂದ ಸಚೇತನವಾಗಿದೆ.

---

# ಕನ್ನಡ ನಾಡು, ಕನ್ನಡ ಭಾಷೆ ಮತ್ತು ಸಂಸ್ಕೃತಿ

**ತಿ. ತಾ. ಶರ್ಮ**

**ಯಾರೀ ಕಂಪಿಲ?**

ಶಿವಮುಗ್ಗಿ ತಾಲ್ಲೂಕು ಬೆಂಕಿಪುರ ಹೋಬಳಿ ಕೂಡಲಿ ಗ್ರಾಮದ ಕಲ್ಲುಮಠದ ಮುಂದೆ ಮೇಲ್ಭಾಗ ಮುರಿದ ಶಾಸನಗಲ್ಲೊಂದಿದೆ. ಶಾಸನ ಪಾಠವಿದು.

"ಬೆರಸು ದಿಗ್ವಿಜಯ ಪ್ರಯಾಣ ಭೇರಿಯಂ ಪೊಯಿಸಿ
ಪೊಱಮಟ್ಟು ಶ್ರೀಮನ್ಮಹಾಮಣ್ಡಲಿಕ ಖಣ್ಡೆಯ
ರಾಯಾ ಶಿವಾರ ಸ್ವಯಂಭು ನಾಯಕಾಚಾರ್ಯ್ಯನ
ಮಲಚಿ. . . ಲಗಂ ಗಣ್ಡಗೋವ ಮಿಾಸೆಯರಗಣ್ಡ
ಪಿಙ್ಗಲಿರಾಯ ರಖ ಪಾಲಕ ವೀರ ಕಂಪಿಲದೇವ
ಉದಗ್ಗಗರ್ಬ್ಬಸರ್ಬ್ಬ ಸ್ವಾ ಪ ಹಾ ರ ಂ ಗೊ ಳ ಲ್
ಅಂದು ಶುಭಮುಹೂರ್ತದೊಳು ಸೇನಾಭಿಮುಖ
ವೂಗ್ಗ್ಗೆ ನಡೆದಲ್ಲಿ

ಮ|| ವಿ|| ಭರದಿನ್ದಂ ಸಿರಗುಪ್ಪೆಗೆಯ್ದಿ ಬಿಡಲಂ
ತಾ ವಾರ್ತ್ತೆಯಂ ಕಂಪಿಲಂ
ನಿರುತಂ ಕೇಳಿರದಲ್ಲಿ ಬನ್ದು ಬಯಲೊಳ್
ಸೊಂಪಾಗೆ ಮಾರ್ಕೊಣ್ಡು ಭೂ
ಧರ ಬಲ್ಲಾಳ ನ್ರಿಪಾಳ ನಿಕ್ಕೆಲನ ನೋಡ
ಲ್ಕಂಬೆ ದಣ್ಡಾಧಿಪಂ
ದುರದೊಳ್ಪೊಕ್ಕಿಱಿದೊಕ್ಕಲಿಕ್ಕಿ ಕಡಿದಂ
ಸರ್ಬ್ಬೋರ್ಬ್ಬಿ ಬಾಪ್ಪೆಂಬಿನಂ"

ವಚನ "ಅನ್ತು ಯೆಳೆಯುದ್ದವಾದ ಸಂಗ್ರಾಮ
ರಂಗದೊಳು ಘಟಿಯೊಳೆಗಣ್ಡ ಭುಜವೀರ
ಘಟಾವೀರ ಪಾಣ್ಡೆ ವೀರ ದಮ್ಮೆಡೆಗೆ ಖಾತಿ
ಮಾಡುವ ರಾವುತರಗಣ್ಡ ಮೇದಿನೀಮಿಸೆ
ಯರಗಣ್ಡ ಚಿಪ್ಪೆಯ ದಣ್ನಾಯ್ಕರ
ಮಯ್ದುನ ಸಕ್ಕಿ ಸಾಹಣಿಯರು ತನ್ನಾ
ಳ್ದನೆನಿಸುವ ಬಲ್ಲಾಳ ಭೂಪಾಲಙ್ಗೆ
ಬಾಸೆಯಂ ಕೊಟ್ಟವ"

ಅಮೂಲ್ಯವಾದ ಐತಿಹಾಸಿಕ ಅಂಶಗಳನ್ನು ಒಳಗೊಂಡ ಶಾಸನವಿದು. ದುರದೃಷ್ಟ, ಶಾಸನದ ಮೇಲ್ಭಾಗ ಒಡೆದಿದೆ; ಕಡೆಯಲ್ಲಿ ಶಾಸನ ಮುಗಿದಿಲ್ಲ. ಇದು ಚಂಬೆಯ ದಂಡ ನಾಯಕನ ವೀರಗಲ್ಲಿರಬೇಕೆಂದು ಪ್ರಾಚೀನ ಲಿಪ್ಯ ನ್ವೇಷಣಾಧಿಕಾರಿಗಳು ವರದಿ (೧೯೨೩) ಯಲ್ಲಿ ಹೇಳಿದ್ದಾರೆ.

ಮುಮ್ಮಡಿ ವೀರಬಲ್ಲಾಳ ಹೊಯ್ಸಳನ ಆಳ್ವಿಕೆಯ ಕಾಲವನ್ನು ಕ್ರಿ. ಶ. ೧೨೯೧ರಿಂದ ೧೩೪೨ರ ವರೆಗೆಂದು ಈವರೆಗಿನ ತಿಳಿವಳಿಕೆ. ೧೩೩೬ರಲ್ಲಿ ವಿಜಯನಗರ ಸ್ಥಾಪನೆ ಯಾಯಿತು. ಹೊಯ್ಸಳ ರಾಜ್ಯದ ಕೊನೆಗಾಲ, ವಿಜಯ ನಗರ ರಾಜ್ಯದಾರಂಭಕಾಲ; ಈ ಸಂಧಿಕಾಲದಲ್ಲಿದ್ದವ ಪರ ದಾರ ಸೋದರ ರಾಮನಾಥನ 'ಪದಕೃತಿ' ಕಾರ, ನಂಜುಂಡ ಕವಿ, ರಾಮನಾಥನ ತಂದೆ ಕಂಪಿಲರಾಯನನ್ನು ಕುರಿತು ವಿಸ್ತಾರವಾಗಿ ಬರೆದಿದ್ದಾನೆ.

"ಹೊಕ್ಕಿಱುವನು ಬಲ್ಲಾಳನ ರಾಜ್ಯವ
ನೊಕ್ಕಲಿಕ್ಕುವ ನೋರುಗಲ್ಲ
ಎಕ್ಕತುಳದ ವೀರರುದ್ರನ ರಾಜ್ಯವ
ಮಿಕ್ಕವರೆಣೆಯೆ ಕಂಪಿಲಗೆ"

"ಡಿಲ್ಲಿಯ ಸುರುತಾಳನ ರಾಜ್ಯವೆಲ್ಲವ
ಕೊಳ್ಳಿಗೊಂಬನು ಕೋಪಿಸಿದೊಡೆ
ತಳ್ಳಂಕಗೊಳಿಸುತಿಹನು ಗಜಪತಿರಾಯ
ಗುಳ್ಳ ದೇಶವನೆಲ್ಲವನು"

"ಬಲ್ಲಿದ ಸುರುತಾಳಕ್ಕಿದ ಠಾಣ್ಯವ
ನೆಲ್ಲವ ಹೊಕ್ಕಿಱಿದಿಱಿದು
ಚಲ್ಲಪಿಲ್ಲಿಯ ಮಾಡಿ ಖಾನಖಾನರಿಗೆದೆ
ದಲ್ಲಣವಾಗಿರುತಿಹನು"

ಇದು ಕಂಪಿಲರಾಯನ ಕ್ಷಾತ್ರ! ಮೇಲಿನ ಶಾಸನದುಲ್ಲುಕ್ತ ವಾಗಿರುವ "ಸಿರಗುಪ್ಪೆ"ಯ ಕಾಳಗ ಯಾವಾಗ ಆಯಿತೋ ಸ್ಪಷ್ಟವಿಲ್ಲ. ದ್ವಾರಸಮುದ್ರದ ಮುಮ್ಮಡಿ ವೀರಬಲ್ಲಾಳನೂ, ಹೊಸಮಲೆಯ ಕಂಪಿಲ ನೃಪತಿಯೂ, ಇಬ್ಬರೂ ಈ ರಣ ಭೂಮಿಯಲ್ಲಿ ಎದುರೆದುರಾಗಿದ್ದರೂ ಇರಬಹುದು.

ಹಾಸನ ಜಿಲ್ಲೆಯ ಹೊಳೆನರಸೀಪುರದ ತಾಲ್ಲೂಕು ಕಸಬಾ ಹೋಬಳಿ ಬಾಗವಾಳದ ರಾಮೇಶ್ವರ ದೇವಸ್ಥಾನದ ಬಳಿಯಣ[1] ವೀರಗಲ್ಲೊಂದರಲ್ಲಿ ಮುಮ್ಮಡಿ ವೀರಬಲ್ಲಾಳನ ಮಯ್ದುನ ಸೋಮಯ ದಂಡನಾಯಕನು ಹೊಳಲ್ಕೆರೆಯ ಬಳಿ "ಸೇವಣರಣಿಯನಾಯ್ಕ ಕಂಪಿಲಿದೇವ" ನೊಡನೆ ಯುದ್ಧ ಮಾಡಿದ ವಿಚಾರ ತಿಳಿದುಬರುತ್ತದೆ. ಈ ಶಾಸನ ಕ್ರಿ. ಶ. ೧೩೦೩ರಲ್ಲಿ ಹುಟ್ಟಿತೆಂದು ಹೇಳಲಾಗಿದೆ. ಈ ಕಂಪಿಲ ದೇವನೂ ಹೊಸಮಲೆಯ ಕಂಪಿಲ ನೃಪತಿಯೇ ಆಗಿರ ಬೇಕು.

"ಸೋಮೆಯದಣ್ಣಾಯಕರು ಬೆಂಮತೂರ
ದುರ್ಗವನಾಳುವಲ್ಲಿ ಸೇವಣರಣಿಯನಾಯ್ಕ
ಕಂಪಿಲಿದೇವನು ಹೊಳಲಕೆಱೆಗೆ ಯತ್ತಿ
ಬಂದಲ್ಲಿ ಆ ಬೆಮತೂರ ಕಲ್ಲಿಂದೆತ್ತಿ ಹೋಗಿ
ಆ ಕಂಪಿಲನೊಡನೆ ಹೊಯ್ದು ಹೊಕು . . . ಟ್ಟಾಡಿ
ಬಿದ್ದ ಬೀರಗಲ್ಲು"

ಎಂಬ ಶಾಸನ ಭಾಗದಿಂದ ನಡೆದ ಹೊಡೆದಾಟದಲ್ಲಿ ಸೋಮೆಯ ಬಿದ್ದ ಹಾಗೂ, ಅವನ ವೀರಗಲ್ಲನ್ನಲ್ಲಿ ಹಾಕಿದ ಹಾಗೂ ಕಂಡುಬರುತ್ತದೆ.

### ಜೋಳವಾಳಿಯ ಮಱದ

ಹಳೇಬೀಡು ಗ್ರಾಮದ ಪಟೇಲ್ ಚಿಕ್ಕಣ್ಣ ಗೌಡನ ಹೊಲದ ದಕ್ಷಿಣದ ಕಡೆ ಬಿದ್ದಿರುವ[2] ವೀರಗಲ್ಲು ೧೧೬೨ರಲ್ಲಿ ಹಾಕಿದ್ದು. ಹೊಯ್ಸಳ ವೀರನರಸಿಂಹನ ಕಾಲದ್ದು. ಶಾಸನದ ಈ ನಾಲ್ಕು ಪಾದಗಳನ್ನು ಗಮನಿಸಬೇಕು.

೪ ಹರಿಯಪನಾಯಕ ಮಗ ಮದಾನಾಯಕಾನು
ಮಡಿದ ಸ್ವರ್ಗಸ್ಥನಾದ
೫ ತಾಣ್ಡೆಯ ಬಳೆಗಱ ಬಮ್ಮಣ ಅಳಿಯ
ಬಪ್ಪಮಣ ದಾವಣ ದಣ್ಣನಾಯ
೬. ಕಲಿ ದೇವತಿ ಬರಲು ನರಸಿಗದೇವ ಹೇಳಲು
ಮಗುದು ಯಾದವನಯ
೭. ಕ ಜೊಳವಾಳಿಯ ಮಱದ

"ಜೊಳವಾಳಿ" ಎಂಬ ಮಾತು ಅನೇಕ ವಿದ್ವಾಂಸರ ಕಲಹವಲ್ಲ—ಭಿನ್ನಾಭಿಪ್ರಾಯಕ್ಕೆ ಕಾರಣವಾಗಿದೆ. ಮೇಲಿನ ಶಾಸನದಂತೆ "ನರಸಿಂಗದೇವನು ಹೇಳಲು ಯಾದವನಾಯಕ ಹೊಡೆದಾಡಿ ಸತ್ತ" ಎಂದರ್ಥ.

[3] "ಜೊಳದ ಪಾಟು ಎಂದರೆ ಅನ್ನದ ಋಣ
ಅಥವಾ ಅದಕ್ಕಾಗಿ ಸಲ್ಲಿಸುವ ಸೇವೆಯೆಂದೂ
ಅರ್ಥ. 'ಜೋಳದ ಪಾಟು'ಯನ್ನು ಈಗಿನ
'ಉಪ್ಪಿನ ಹಂಗಿ'ಗೆ ಹೋಲಿಸಬಹುದು"

ಎಂಬುದಾಗಿ ಡಾ|| ಎಂ. ಚಿದಾನಂದ ಮೂರ್ತಿಗಳು ಹೇಳಿದ್ದಾರೆ. ರಾಜನ ಉಪಕಾರ ತೀರಿಸುವ ಕರ್ತವ್ಯ ಬುದ್ಧಿಯೆಂದೂ ಸೂಚಿಸಿದ್ದಾರೆ.

### ಸ್ವತಂತ್ರ ರಚನೆ ಸುಲಭ, ಭಾಷಾಂತರ ಕಷ್ಟ

ಈಜಿಪ್ಟಿನಲ್ಲಿ ಅರಬ ಭಾಷೆ ಇದೆ; ಈ ಅರಬ ಭಾಷೆಯಲ್ಲಿ ಪ್ರತಿಯೊಂದು ಮಾತಿಗೂ ನಿಶ್ಚಿಷ್ಟಾರ್ಥವೊಂದಿದೆ. ಅದಕ್ಕೆ ಪ್ರತಿ (ವಿರುದ್ಧ)ಯಾದ ಅರ್ಥವೂ ಇದೆ. ಇಷ್ಟೇ ಸಾಲದೆಂದು ಒಂದಲ್ಲ ಒಂದು ರೀತಿಯಿಂದ ಆ ಮಾತಿಗೂ ಒಂಟೆಗೂ ಸಂಬಂಧವಿದೆ! ಅಂದರೆ ಒಂದೊಂದು ಮಾತಿಗೂ ಮೂರು ಮುಖಗಳಿವೆಯೆಂದಾಯಿತು. ಈ ಭಾಷೆಯ ಕೃತಿಗಳನ್ನು ಬೇರೆ ಭಾಷೆಗಳಿಗೆ ಭಾಷಾಂತರ ಮಾಡುವುದು ಬಹಳ ಸುಲಭವಲ್ಲವೆ!

ಅತ್ಯುತ್ತಮವಾದ ಭಾಷಾಂತರಗಳನ್ನೇ ತೆಗೆದುಕೊಳ್ಳಿ. "ಇದು ಚೆನ್ನಾಗಿದೆ" ಅನ್ನಬಹುದಷ್ಟೆ. "ಇದು ಪರಿಪೂರ್ಣವಾಗಿದೆ" ಅನ್ನಲಾಗದು. ಮೂಲಕ್ಕೆ 'ಚಾಚೂ' ತಪ್ಪದೆ ಇರಬೇಕೆಂದು ವಿಧಿಸಿದರೆ, ಹಾಗೆ ಮಾಡಿದ ಭಾಷಾಂತರವನ್ನು ಓದುವುದಕ್ಕೇ ಆಗುವುದಿಲ್ಲ. ಕಾರಣ ಒಂದೊಂದು ಭಾಷೆಗೂ, ಒಂದೊಂದು ಪ್ರತಿಭೆ, ವ್ಯಕ್ತಿತ್ವ, ಸಂಪ್ರದಾಯ, ಇದೆ. "ಮರ್ಯಾದೆ" ಯೆಂದು ಹೇಳುವುದುಂಟು. ಆ ಭಾಷಾ ಮರ್ಯಾದೆಗೆ ಊನ ತರಬಾರದು.

"ಗಂಡರ ಗಂಡ, ಮೂರು ರಾಯರ ಗಂಡ" ಎಂಬ ಬಿರುದನ್ನು

"Husband of husband ;
Husband of three husbands"

ಎಂದು ಆಂಗ್ಲ ಭಾಷೆಗೆ ಅನುವಾದ ಮಾಡಿದರೆ ಉಭಯ ಭಾಷೆಗಳಿಗೂ ಅಪಚಾರ ಮಾಡಿದಂತಾಯಿತಲ್ಲವೆ?

1 Ep. Carn. vol. XV Hassan, Holenarasipur 83

2 Ep. Can vol. XV Belur, No. 329

3 ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು, ೨೪೬

" ಜಾತ್ಯಶ್ವಗಳು ಕತ್ತೆಗಳಾಗಿವೆ !
ರಾಜ ಹಂಸಗಳು ಬಾತುಕೋಳಿಗಳಾಗಿವೆ ! "

ಅಂದ ವಿಮರ್ಶಕನೊಬ್ಬ ಭಾಷಾಂತರಗಳ ಮಾತು ಬಂದಾಗ.

ಕಾಳಿದಾಸನ "ಶಾಕುಂತಲ"ವನ್ನು ಅನೇಕರು ತಮ್ಮತಮ್ಮ ದೇಶಭಾಷೆಗಳಿಗೆ ಭಾಷಾಂತರ ಮಾಡಿದ್ದಾರೆ. ಪರದೇಶಿಗಳೂ ತಮ್ಮ ತಮ್ಮ ಭಾಷೆಗಳಿಗೆ ಭಾಷಾಂತರ ಮಾಡಿದ್ದಾರೆ. ಪ್ರತಿಯೊಬ್ಬ ಪ್ರಾಮಾಣಿಕನಿಗೂ ಗೊತ್ತು ಎಲ್ಲ ಭಾಷಾಂತರ ಗಳಲ್ಲೂ ಮೂಲದ ಸ್ವಾರಸ್ಯ, ಸೌರಭ, ಹೋಗಿದೆಯೆಂದು. ಇದು ಅನಿವಾರ್ಯ.

ರಷ್ಯದ ಡೆಸ್ಟೊಯೆವಿಸ್ಕಿ ಕೃತಿಗಳನ್ನು ಇಂಗ್ಲಿಷಿಗೆ ಭಾಷಾಂತರ ಮಾಡುವಾಗ ಆಂಗ್ಲನು ರಷ್ಯದ ಭಾಷಾ ಸಾಹಿತ್ಯಕ್ಕೇ ವಿಶಿಷ್ಟವೆನಿಸಿದ ಹಲವು ಲಕ್ಷಣಗಳನ್ನೂ, ಮರ್ಯಾದೆಗಳನ್ನೂ, ಬಿಟ್ಟುಬಿಡುತ್ತಾನೆ. ಕಾರಣ ಆಂಗ್ಲ ಭಾಷಾಂತರದಲ್ಲವು ಶೋಭಿಸುವುದಿಲ್ಲ.

ಆಂಧ್ರ ಪ್ರದೇಶದಲ್ಲಿ ಗುರುಜಾಡ ಅಪ್ಪಾರಾಯರ ಹೆಸರು ಬಹಳ ದೊಡ್ಡದು. ಅವರ "ಕನ್ಯಾಶುಲ್ಕ""ವೆಂಬ ಗದ್ಯ ಸಾಮಾಜಿಕ ನಾಟಕ ಮಹಾ ಪ್ರಸಿದ್ಧವಾದದ್ದು. ಕ್ರಾಂತಿ ಕಾರಕ ಪ್ರಕೃತಿಗಳಿಂದ ಕೂಡಿದ ಕೃತಿಯದು. ದಿ|| ಕಂದಾಡೆ ಕೃಷ್ಣಯ್ಯಂಗಾರ್ಯರದನ್ನು ಕನ್ನಡಕ್ಕೆ ಭಾಷಾಂತರ ಮಾಡಿದರು. ಆದರೆ ಅದು ಯಶಸ್ವಿಯಾಗಲಿಲ್ಲ. ತೆಲುಗರು ಬೈದಾಡುವ ವೈಖರಿಯೇ ಬೇರೆ! ಆ ಬೈಗಳನ್ನು ಯಾವ ಭಾಷೆಗೂ ಭಾಷಾಂತರ ಮಾಡಲು ಸಾಧ್ಯವಿಲ್ಲ. ಒಂದು ವೇಳೆ ಮಾಡಿದರೂ ಚೆನ್ನಾಗಿರುವುದಿಲ್ಲ.

ಭಾರತ ಸರಕಾರದವರು "ಸಂವಿಧಾನ"ವನ್ನು ಎಲ್ಲ ಭಾಷೆಗಳಿಗೂ ಭಾಷಾಂತರ ಮಾಡಿಸಿದರು; ಕನ್ನಡಕ್ಕೂ ಮಾಡಿಸಿದ್ದಾರೆ. ೫೩ (೩)ನೆಯ ವಿಧಿಯ ಕನ್ನಡ ನೋಡಿ :

" ರಾಷ್ಟ್ರಪತಿಯವರ ನಿರ್ವಾಚನವನ್ನು
ಏಕಲ ಸಂಕ್ರಮಣೀಯ ಮತದ್ವಾರಾ
ಅನುಪಾತೀ ಪ್ರತಿನಿಧಿತ್ವ ಪದ್ಧತಿಗ
ನುಸಾರವಾಗಿ ನಡೆಯಿಸತಕ್ಕದ್ದು.
ಮತ್ತು ಅಂಥ ನಿರ್ವಾಚನದಲ್ಲಿ ಮತ
ದಾನವು ಗೂಢ ಶಲಾಕ ದ್ವಾರಾ ನಡೆಯ
ತಕ್ಕದ್ದು."

ಇದರ ಆಂಗ್ಲ ಭಾಷಾ ಮೂಲವನ್ನು ಊಹಿಸಬಲ್ಲಿರೋ? ವೃಥಾ ಕ್ಲೇಶ ಬೇಡ; ಇದೋ ಆಂಗ್ಲ ಮೂಲ!

" 53 (a) The election of the President shall be held in accordance with the system of proportional representation by means of the single transferable vote and the voting at such elections shall be by secret ballot."

## ಪತ್ರ ಲೇಖನ ಸಾಹಿತ್ಯದ ಒಂದಂಗ

ಪ್ರಾಚೀನ ಭಾರತದಲ್ಲಿ ಸಾರ್ವಜನಿಕ ಜೀವನದ ವಿಕಾಸ ಪ್ರಕಾಶದ ಸಲುವಾಗಿ "ಪತ್ರಸಾಹಿತ್ಯ" ಕಲೆಯೊಂದು ರೂಪು ಗೊಂಡಿತೋ ಇಲ್ಲವೊ ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಕಾವ್ಯ ಗಳಲ್ಲಿ, ನಾಟಕಗಳಲ್ಲಿ, ಶಕುಂತಲೆ, ಸಾಗರಿಕೆಯಂಥವರು ತಮ್ಮ ಪ್ರಿಯತಮರಿಗೆ ಪತ್ರಗಳನ್ನು ಬರೆದ ಹೇಳಿಕೆಗಳಿವೆ. ಆದರೆ ಮೊಘಲರ ಕಾಲಕ್ಕೆ ಬರುವವರೆಗೂ ರಾಜಕೀಯಕ್ಕೆ ಸಾರ್ವಜನಿಕ ಜೀವನಕ್ಕೆ ಸಂಬಂಧಪಟ್ಟ ಪತ್ರಗಳು ಸಿಗುವು ದಿಲ್ಲ. ಮೊಘಲರ ಕಾಲದ ಪರ್ಶಿಯನ್ ಪತ್ರಗಳನೇಕ ಈಗ ಸಿಕ್ಕಿವೆ; ಮರಾಠಿ ಭಾಷೆಯ ಪತ್ರವ್ಯವಹಾರದ ಸಾಹಿತ್ಯ ಅಸಾಧ್ಯವಾಗಿ ದೊರೆತಿದೆ. ೧೮-೧೯ನೆಯ ಶತಮಾನದ ಕಾಲದ ಈ ಪತ್ರಸಾಹಿತ್ಯವನ್ನು ಸಂಶೋಧಕರು ಅಪಾರ ಪ್ರಮಾಣದಲ್ಲಿ ಹೊರಗಿಟ್ಟಿದ್ದಾರೆ.

ಕನ್ನಡನಾಡಿನಲ್ಲೂ ಬೇಕಾದಷ್ಟು ಸಾಹಿತ್ಯವಿದೆ. ಸಂಶೋಧನಾಕಾರ್ಯ ನಡೆದಿಲ್ಲ. ಮೈಸೂರು ಪ್ರಾಚೀನ ವಸ್ತು ವಾಸ್ತು ಮತ್ತು ಪ್ರಾಚೀನ ಲಿಪ್ಯನ್ವೇಷಣ ಶಾಖೆಯ ವರನೇಕ ಪತ್ರಗಳನ್ನು (ನಿರೂಪಗಳು ಇತ್ಯಾದಿ) ಪ್ರಕಟಿಸಿ ದ್ದಾರೆ. ಇಂತಹ ಪತ್ರಗಳು ಅನೇಕ ಮಠಗಳಲ್ಲಿವೆ. ಹೈದರ್-ಟೀಪುಗಳ ಅನೇಕ ಪತ್ರಗಳು ಶೃಂಗೇರಿ ಮಠ ದಲ್ಲಿವೆ. ಕೆಳದಿ, ಬಿಳಗಿ, ಸುರಪುರ, ಚಿತ್ರದುರ್ಗ, ತರೀಕೆರೆ, ಮುಂತಾದ ಪಾಳೆಯಗಾರರ ಕಾಲದ ಪತ್ರಗಳು ಸಾವಿರಾರು ನಮ್ಮ ದೃಷ್ಟಿಗೆ ಬಾರದೆ ಬಿದ್ದಿವೆ; ಹುಳು ತಿಂದು ಹಾಳಾಗು ತ್ತಿವೆ. ನಾವು ಉದಾಸೀನರು, ಅಭಿಮಾನಶೂನ್ಯರು. ಈ ಅಮೂಲ್ಯ "ಜೀವನ ಸಾಹಿತ್ಯ" ಒಮ್ಮೆ ಹೋದ ಮೇಲೆ ಮತ್ತೆಲ್ಲಿ ಸಿಗಬೇಕು? ಇದು ಮಹಾ ನಷ್ಟ. ಮುಂದಿನ ಪೀಳಿಗೆಯವರಿಗೆ ಈ ಪೀಳಿಗೆಯವರು ಮಾಡುವ ದ್ರೋಹ.

ಪತ್ರಸಾಹಿತ್ಯ ಸಂಗ್ರಹ ಮಾಡಿ, ಇತಿಹಾಸಕಾರರು, ಸಾಹಿತಿಗಳು, ಸಮಾಜ ವಿಜ್ಞಾನಿಗಳು, ರಾಜಕಾರಣಿಗಳು, ಅವುಗಳನ್ನು ಅವರವರ ಅಪೇಕ್ಷೆಯಂತೆ ಅಧ್ಯಯನ ಮಾಡ ಬೇಕು. ಆ ಅಧ್ಯಯನದ ಫಲ ಬೆಳಕಿಗೆ ಬಂದಾಗ 'ಪತ್ರ ಸಾಹಿತ್ಯವೊಂದು ಸಂಸ್ಕೃತಿಯ ಭಂಡಾರ' ವೆಂಬುದರ ಅರಿ ವುಂಟಾಗುತ್ತದೆ.

ಹದಿನೆಂಟನೆಯ ಶತಮಾನದ ಇಂಗ್ಲೆಂಡಿನಲ್ಲಿ ಅರ್ಲ್ ಚೆಸ್ಟರ್‌ಫೀಲ್ಡಿಗೆ ಅಗ್ರಸ್ಥಾನ ಕೊಡಬೇಕು; ಪತ್ರಸಾಹಿತ್ಯದ ಮಾತು ಬಂದಕೂಡಲೆ ಆತ ತನ್ನ ಮಗ ಫಿಲಿಪ್ ಸ್ಟ್ಯಾನ್‌ಹೋಪ್‌ಗೆ ४೦೦ ದೀರ್ಘ ಪತ್ರಗಳನ್ನು ಬರೆದಿದ್ದಾನೆ. ಬಹಳ ಕಟ್ಟುನಿಟ್ಟಾದ ತಂದೆ; ಈ ಶಿಸ್ತುಗಾರ ಮಗನಿಗೆ "ಬುದ್ಧಿನಿರೂಪ"ಗಳಂತೆ ಪತ್ರಗಳನ್ನು ಬರೆದಿದ್ದಾನೆ. ಎರಡುಕಲ್ಲು ಉಪ್ಪಿನಿಂದಾರಂಭಿಸಿ, ಒಪ್ಪಿಡಿನಡುವಿನ ಬಳ್ಳಿಯಂತೆ ಬಳುಕುವ ಬಾಲೆಯವರೆಗೆ, ವಾರವಾರವೂ ಪತ್ರಗಳಲ್ಲಿ ಬರೆಯುತ್ತಾ ಹೋಗಿದ್ದಾನೆ! ಮಗನ ಪಾಲಿಗೆ ತಂದೆ ಏನೇ ಆಗಿರಲಿ, ನಮ್ಮ ಪಾಲಿಗೆ ಇಂದು ಆ ಪತ್ರಗಳು ಜೀವನ ಕಲೆಯ ಮಹಾಕೃತಿಗಳಂತಿವೆ.

ಥಾಮಸ್‌ಗ್ರೇ ಕವನಗಳಂತೆಯೇ ಅವನು ತನ್ನ ಮಿತ್ರರಿಗೆ ಬರೆದ ಪತ್ರಗಳೂ ಶ್ರೇಷ್ಠ ಸಾಹಿತ್ಯ ಶ್ರೇಣಿಗೆ ಸೇರಿದುವು. ಆಂಗ್ಲ ಸಾಹಿತ್ಯೇತಿಹಾಸದಲ್ಲಿ ಪತ್ರಸಾಹಿತ್ಯದ ಸ್ಥಾನವೇನೂ ಅಲ್ಲಗಳೆಯತಕ್ಕದ್ದಲ್ಲ. ಕೌಪರ್, ಷೆಲ್ಲಿಗಳ ಪತ್ರಗಳೇನು ಕಡಿಮೆ? 'ಜೂನಿಯಸ್' ಪತ್ರಗಳ ಕೀರ್ತಿಯನ್ನಳೆಯಲು ಸಾಧ್ಯವೆ?

---



## ಬೆಣಚುಕಲ್ಲು

•

ಈ ಪುಟ್ಟ ಎದೆಯಲ್ಲಿ ಎಷ್ಟೊಂದು ಹಿರಿಯಾಸೆ
ಮೂಡಿ ಮರುಕ್ಷಣದಲ್ಲೆ ಮರೆಯಾಗುತಿಹವು.
ಗೆಲುವಿಂದ ದೂರಾಗಿ, ನೋವಿನಲೆ ಕೊನೆಯಾಗಿ
ತಮ್ಮ ಕಿರುಜೀವಿತವ ಕಳೆಯುತಿಹವು

ಒಂದು ಬಾನಂಗಳದಿ ಭ್ರಮೆಯ ಬಾವುಟವೆತ್ತಿ
ತಾರೆಗಳ ಆಯ್ದು ತಹೆನೆನುತಿರಲು;
ಯಾವುದೋ ಬಿರುಗಾಳಿ ಬೀಸಿ ನೆಲಕೊಗೆದಿರಲು
ಎದೆಯಲ್ಲಿ ತಾವಿಲ್ಲ ಸುತ್ತೆಲ್ಲ ಇರುಳು

ಕತ್ತಲಲಿ ತಡಕಾಡಿ ಮೇಲೇಳುವಂತಿಲ್ಲ
ಸೋಲಿನಲಿ ಸೆರೆಯಾಗಿ ಸರಿಯುತಿಹವು;
ಈ ಎದೆಯ ನಾಡಿನಲಿ ಅವಕಿನ್ನು ತಾವಿಲ್ಲ
ಕಪ್ಪಿನಲಿ ಕಪ್ಪಾಗಿ ಕರಗುತಿಹವು

ಒಂದೆ ಎರಡೆ ಮೂರೆ ಎದೆಕಟ್ಟಿದಾಸೆಗಳು
ಎಲ್ಲವೂ ಬಿರುಬಿಸಿಲ ಬೆಣಚುಕಲ್ಲು;
ಎಲ್ಲಿಯೋ ಕೇಳಿಸಿದ ಸುಸ್ವನವನರಸುತಿರೆ
ಸೊಳ್ಳೆಗಳ ಸಂಗೀತ ಹಗಲಿನಲ್ಲು

ತಂಗಾಳಿ ಬೀಸುತಿದೆ ಮೈಮನಕೆಷ್ಟುಹಿತ
ಎಂದು ಎದೆಯ ಕಿಟಕಿಗಳ ತೆರೆಯುತಿರಲು;
ಸತ್ತ ನಾಯಿಯ ನಾತ ಸುತ್ತಲೂ ಅಡರಿತ್ತು
ಎಲ್ಲ ಮುಚ್ಚಲು ಮತ್ತೆ ಕತ್ತಲೆಯ ಅಳಲು

ಕಬ್ಬಿಣದ ಸರಳುಗಳ ಸೆರೆಮನೆಯ ಹಿಂದುಗಡೆ
ಕಟ್ಟುತಿಹೆ ಬೆಳ್ಳಿ ಬಂಗಾರ ಕನಸು;
ಒಳಗಡೆಯ ವೈಭವಕು ಹೊರಗಿರುವ ವಾಸ್ತವಕು
ಅಂತರವು ಅರಿವಾಗೆ ಬೆಪ್ಪು ಈ ಮನಸು!

•

ಸು. ರುದ್ರಮೂರ್ತಿ ಶಾಸ್ತ್ರಿ

# ದೀಪದ ಹೆಜ್ಜೆಯಲ್ಲಿ ನವೀನತೆ

**ವಸಂತ ಕುಷ್ಟಗಿ**

ಡಾ|| ಜಿ. ಎಸ್. ಶಿವರುದ್ರಪ್ಪನವರು ಈಗ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ರೀಡರರಾಗಿದ್ದಾರೆ. ಇವರು ರಾಷ್ಟ್ರಕವಿ ಕುವೆಂಪು ಅವರ ಗರಡಿ ಮನೆಯಲ್ಲಿ ಪಳಗಿದ ಗರಡಿಯಾಳು. ಜೊತೆಗೆ ಪದ್ಮಶ್ರೀ ಗೋಕಾಕರ ನವ್ಯದೃಷ್ಟಿಯಿಂದ ತಮ್ಮ ಕಾವ್ಯಕಮಲಕ್ಕೆ ಕೆಲಕಿರಣಗಳನ್ನು ಪಡೆದು ಸ್ಫೂರ್ತಿಗೊಂಡಿರುವ ಕಾವ್ಯದ ಕೋಗಿಲೆಯಾಗಿದ್ದಾರೆ. ಹೊಸಗನ್ನಡದ ತಿರುಳು ನವ್ಯಕಾವ್ಯದ ಹುರುಳು ಮತ್ತೆ ವಿಜ್ಞಾನದ ದೃಷ್ಟಿ ಇವೆಲ್ಲ ಮೇಳವಿಸಿಕೊಂಡು ರಸಪಾಕವಾಗಿ ಬರುವ ಭಾವಗೀತೆಗಳಿಗೆ ನೆಲೆಯಾಗಿದ್ದಾರೆ ಶ್ರೀ ಶಿವರುದ್ರಪ್ಪನವರು.

ಇವರ ಕಾವ್ಯದಲ್ಲಿರುವ ನವೀನತೆಯನ್ನು ಅವರ 'ದೀಪದ ಹೆಜ್ಜೆ'ಯ ಬೆಳಕಿನಲ್ಲಿ ಕಂಡು ರಸಾಸ್ವಾದನೆ ಮಾಡುವುದು ಈಗಿನ ನಮ್ಮ ಉದ್ದೇಶ. ನವೀನತೆಯೆಂದರೆ ಹೊಸತು ಎಂದು ಅರ್ಥ. ದೇಹಕ್ಕೆ ಹಳೆಯ ಅಂಗಿ ಬಿಡಿಸಿ ಹೊಸ ಅಂಗಿ ತೊಡಿಸಿ ಅದನ್ನು ಲಕ್ಷಣವಾಗಿಸುವುದೇ ಚೊಕ್ಕಟತನವೆಂದು ಕರೆಯುತ್ತಾರೆ. ಈ ರೀತಿಯ ಶಿಸ್ತಿನಿಂದ ಸಂಸ್ಕೃತಿಯಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಅದರಂತೆ ಕಾವ್ಯದಲ್ಲಿಯೂ ಕೂಡ ಹೇಳುವ ಬಗೆ ಆಗಾಗ ಹೊಸದಾಗುತ್ತ ಇರಬೇಕು. ಎಂದರೆ ಸಹೃದಯನಿಗೆ ಬೇಸರಿಕೆಯು ಬರುವುದಿಲ್ಲ. ಇದಲ್ಲದೆ ಎಲ್ಲರ ಅನುಭವವು ಒಂದೇ ಆಗಿದ್ದರೂ ಕವಿಗಳು ಅದನ್ನು ವೈವಿಧ್ಯಪೂರ್ಣವಾಗಿ ಹೇಳಿದರೆ ಸಾಮಾನ್ಯನಿಗೆ ಜೀವನವು ಸತ್ವಪೂರ್ಣವಾಗುತ್ತದೆ. ಮಾನವನು ಮಗುವಾಗಿದ್ದಾಗಿನಿಂದಲೇ ಹೊಸತನ್ನು ಕಂಡಾಕ್ಷಣ ಹಿಗ್ಗುತ್ತಾನೆ. ಅದನ್ನು ಪಡೆದ ಆಯುಷ್ಯವನ್ನು ವರ್ಧಿಸಿಕೊಳ್ಳುತ್ತಾನೆ. ಆದ್ದರಿಂದ ಎಲ್ಲ ಕಡೆಗೂ ಹೊಸತು ಹೊಸತು ಕೇಳಿ ಬರಬೇಕು. ಅದೇ ಜೀವಂತ ಕಾವ್ಯದ ಲಕ್ಷಣ. ಜಗತ್ತಿನಲ್ಲಿ ಎಲ್ಲರೂ ಒಂದೇ ವಸ್ತುವನ್ನು ನೋಡಿದ್ದರೂ ಅವರವರ ರುಚಿಯ ಪ್ರಕಾರ ಚಿತ್ರಗಳನ್ನು ಭಾವಪಟಲದ ಮೇಲೆ ಆಯಾ ವಸ್ತುಗಳು ಮೂಡಿಸುತ್ತವೆ. ಅದೇ, ಪ್ರತಿಭೆಯಿದ್ದವನಿಂದ ಹೊಸ ಉಪಮೆಯೊಡನೆ ಕಾಗದದ ಮೇಲೆ ಮೂಡುತ್ತದೆ. ಜಗತ್ತನ್ನು ನೋಡಿ ಚಿತ್ರಿಸುವ ರೀತಿ ಅವರವರ ಕಲ್ಪನೆಯಂತೆಯೇ ಮೂಡಿ ಬರಬೇಕು. ಎಲ್ಲಿಯೋ ಕಾಳಿದಾಸ, ಪಂಪ, ರನ್ನ ಮೊದಲಾದವರು ಬಳಸಿದ ಉಪಮಾ ಪ್ರಪಂಚದ ವಸ್ತುಗಳನ್ನೇ ಬಳಸುವುದರಿಂದ ಹೊಸ ಹುರುಪು ಹೊಸ ಕಳೆ ಕಾವ್ಯದಲ್ಲಿ ಅರಳುವುದಿಲ್ಲ. ಆದರಿಂದ ಕಾವ್ಯಪ್ರಯೋಜನವೂ ಆಗಲಾರದು. ಅದನ್ನು ತಿಳಿದ ಇಂದಿನ ಕವಿಪ್ರಪಂಚವು ಹೊಸ ಮಾರ್ಗವನ್ನು ಹಿಡಿದು ಸಾಗುತ್ತಿದೆ. ಅದು ತನ್ನ ರಾಜಮಾರ್ಗವನ್ನು ಇನ್ನೂ ಕಂಡುಕೊಳ್ಳಬೇಕಾಗಿದೆ.

ಅಂತಹ ನಿಟ್ಟಿನಲ್ಲಿ ತಪಸ್ಸು ಸಾಧಿಸಲು ಹೊರಟ ಋಷಿಗಳಲ್ಲಿ ಶ್ರೀ ಶಿವರುದ್ರಪ್ಪನವರೊಬ್ಬರಾಗಿದ್ದಾರೆ. ಅವರು ಜೀವನದಲ್ಲಿ ದೀಪದ ಹೆಜ್ಜೆಗಳನ್ನು ಗುರುತಿಸಿ ತಾವು ಕಂಡಂತೆಯೇ ಅವುಗಳನ್ನು ಕಾವ್ಯದಲ್ಲಿ ಮೂಡಿಸಲು ಆ ಜಾಡಿನಲ್ಲಿ ಹೊರಟಿರುವುದೇ ಇವರ ವೈಶಿಷ್ಟ್ಯ.

'ದೀಪದ ಹೆಜ್ಜೆ' ಎಂಬ ಇವರ ಕವನ ಸಂಕಲನವು ಅವರೇ ಹೇಳುವಂತೆ ಬದುಕಿನ ಸಮಸ್ಯೆಯ ಎರಡು ಮುಖಗಳ ವಿವೇಚನೆ. ಒಂದು, ಮಾನವ-ಅಂತರಂಗ; ಮತ್ತೊಂದು ಮಾನವ-ಕಾಲ. ಹೀಗೆ ಮನ-ಮನೆ; ಮನ-ಜಗ ಎಂದು ಆ ಮುಖಗಳನ್ನು ಇನ್ನಷ್ಟು ಸ್ಪಷ್ಟಗೊಳಿಸಬಹುದು. ಅದನ್ನೇ ಬೇಕಾದರೆ ಜೀವನ ಹೋರಾಟವೆಂದು ಕರೆಯಬಹುದು. ಆ ಹೋರಾಟದಲ್ಲಿ ಮೂಡಿದ ಅನುಭವಗಳೇ ದೀಪದ ಹೆಜ್ಜೆಗಳು. ಅನುಭವದ ಮಥನದಿಂದ ತೇಲಿಬಂದ ಬೆಳಕಿನ ಬೆಣ್ಣೆಯ ಮುದ್ದೆಯ ಗುರುತುಗಳು. ಆ ಗುರುತುಗಳನ್ನು ಸಾಮಾನ್ಯರ ಜೀವನದಲ್ಲಿಯ ಬಳಕೆಯ ವಸ್ತುಗಳೊಡನೆ ಹೋಲಿಸಿ ಹೇಳುವುದರಿಂದ, ಇಂದಿನ ಸಮಾಜವನ್ನು ಅವು ಬಹುಬೇಗನೇ ಹಿಡಿದು ಅದಕ್ಕೆ ಕಾವ್ಯ ಸಂಸ್ಕಾರವನ್ನು ನೀಡುತ್ತವೆ.

ಭಾರತೀಯರಲ್ಲಿ ವಿಶೇಷವಾಗಿ "ಬದುಕಿನ ಗುರಿ-ಅಧ್ಯಾತ್ಮ" ಎಂದು ಸಾಧಿಸುವವರೇ ಹೆಚ್ಚು. ಎಂದರೆ ಅವರ ಸಾಧನೆಯು ಕೇವಲ ಅರಣ್ಯದಲ್ಲಿ ಸಂಸಾರ ಬಿಟ್ಟು ನಡೆಯಬೇಕಾದ್ದು ಎಂದು ಅವರ ಕಲ್ಪನೆ. ಆದರೆ ಈ ವಿಚಾರವು ಬಹಳ ದಿವಸಗಳವರೆಗೆ ಪ್ರಭಾವವನ್ನು ಬೀರಲಿಲ್ಲ. ಬಹುಬೇಗನೇ, ಈಜಬೇಕು ಇದ್ದು ಜಯಿಸಬೇಕು' ಎಂಬ ಸೂತ್ರದಂತೆ ಬಾಳಿ ಪೂರ್ಣತ್ವವನ್ನು ಪಡೆಯತೊಡಗಿತು ಕಾವ್ಯ

ವಾಣಿ. ನಿಜವಾದ ಜೀವನ ಸಂದೇಶವನ್ನು ನೀಡಿ ಅದು ಉಪಕಾರ ಮಾಡಿತು. ಆ ಮಾರ್ಗದಲ್ಲಿ ನಡೆದ ಶಿವರುದ್ರಪ್ಪನವರು ತಮ್ಮ ಕಾವ್ಯದಲ್ಲಿ ಬದುಕಿಗೊಂದು ನಂಬಿಗೆಯನ್ನು ಕಾಣಲೆಳಸಿದ್ದಾರೆ. ಬದುಕುವುದಾದರೆ ಚೆನ್ನಾಗಿ ಬದುಕಬೇಕು. ಅದಕ್ಕೆ ಚೇತನ ಮಾರ್ಗದರ್ಶನ ಯಾವ ಮೂಲೆಯಿಂದ ಬಂದರೇನು ? ಒಳ್ಳೆಯದು ಎಲ್ಲ ಕಡೆಯಿಂದಲೂ ಧಾವಿಸಲಿ. ಈ ಬಗೆಯಾಗಿ ವಿಚಾರ ಮಾಡಿದ ಕವಿ "ಅದೂ ಬೇಕು ಇದೂ ಬೇಕು ; ಎಲ್ಲವೂ ಬೇಕು ನನಗೆ! ನಮಗೆ ಬೇಕಾದದ್ದು ದಾಹ ಪರಿಹಾರ" ಎಂದು ಅಂತರಂಗದೊಡನೆ ನುಡಿಯುತ್ತಾನೆ. ಮತ್ತೊಂದು ಕಡೆಗೆ ಆಕಾಶದಲ್ಲಿಯ ಮಿಂಚಿನ ಸಾಹಸಕ್ಕಿಂತ ಭೂಮಿಯಲ್ಲಿ ನೆಲೆಯಾಗಿ ನಿಂತು ಸಾವಧಾನದಿಂದ ಜೀವನ ಮಾರ್ಗದಲ್ಲಿ ನಡೆಯುತ್ತ ಹೋಗುವುದು ಶ್ರೇಷ್ಠವೆಂದು ನಂಬಿ ವಿನೋಬಾರ ಜೀವನದಿಂದ ಸ್ಫೂರ್ತಿಯನ್ನು ಹೊಂದಿ, "ನೆಲವೇ ನನ್ನ ವಾಹನ" ಎನ್ನುವಾಗ ಬದುಕಿನ ಬೆಲೆ ಭೂಮಿಯ ಮೇಲೆಯೇ ಎಂಬುವ ಬಾಳಿನ ನಂಬಿಕೆಯು ಕವಿಯ ಮನಸ್ಸಿನ ಮೇಲೆ ಬಲವಾದ ಮುದ್ರೆಯನ್ನೊತ್ತಿರುವುದೆಂದು ಹೇಳಬೇಕಾಗುತ್ತದೆ.

ಡಾ|| ಶಿವರುದ್ರಪ್ಪನವರು ಕನ್ನಡ ಅಧ್ಯಾಪಕರು. ಇವರಲ್ಲಿ ಕೇವಲ ಸಂಪ್ರದಾಯದ ದೃಷ್ಟಿಯಿದೆಯೆಂದು ಮಾತ್ರ ತಿಳಿಯಬಾರದು. ಕೇವಲ ಈ ರೀತಿಯಿಂದ ನೋಡಿದರೆ ಅವರಲ್ಲಿರುವ ಪ್ರತಿಭೆ, ಲೋಕಾನುಭವ, ಸತತವಾದ ಅಭ್ಯಾಸ—ಇವುಗಳ ಸೀಮೆಯನ್ನು ನಾವು ನಮ್ಮ ದೃಷ್ಟಿಯಿಂದ ನೋಡಿ ಮೊಟಕುಗೊಳಿಸಿದಂತಾಗುತ್ತದೆ. ನಿಜವಾಗಿಯೂ ಅವರಲ್ಲಿ ಹೊಸತು ಹಳತುಗಳ ಸಂಗಮವಿದೆ. ಒಳ್ಳೆಯ ವಸ್ತು ಎಲ್ಲಿಯೇ ಸಿಗಲಿ ಅದನ್ನವರು ಬಿಡುವವರಲ್ಲ. ಹೀಗಾಗಿ ಅವರ ಕಾವ್ಯದಲ್ಲಿ ನವ್ಯಕಾವ್ಯದ ಪ್ರಗತಿಗಾಗಿ, ಪೂರ್ಣತ್ವ ಮುಟ್ಟುವುದಕ್ಕಾಗಿ ಆರೋಗ್ಯದ ಲಕ್ಷಣಗಳೇ ವಿಶೇಷವಾಗಿ ಕಂಡುಬರುತ್ತವೆ.

ಕನ್ನಡ ಸಾಹಿತ್ಯದಲ್ಲಿ ಸುಮಾರು ಎರಡು ದಶಕಗಳಿಂದ ನವ್ಯತೆಯ ಗಾಳಿಯು ಬಿರುಸಾಗಿ ಬೀಸುತ್ತಿದೆ. ಅದು ಒಮ್ಮೊಮ್ಮೆ ಹಿತವೆನಿಸುತ್ತದೆ. ಆದರೆ ನಮ್ಮ ಮೈ ಹೊಸತನ್ನು ಸಂಪೂರ್ಣವಾಗಿ ಅಳವಡಿಸಿಕೊಳ್ಳಬೇಕಾಗಿದೆ. ಅಲ್ಲಿಯವರೆಗೆ ಹೊಸ ಗಾಳಿಯ ಹೊಡೆತ ಆಗಾಗ ಅರ್ಥದ ಉಸಿರನ್ನೂ ಕಟ್ಟಿಸುತ್ತದೆ. ಆದರೆ ಶ್ರೀ ಶಿವರುದ್ರಪ್ಪನವರ ಕವಿತೆಗಳಲ್ಲಿ ನವ್ಯತೆಯ ಪ್ರಜ್ಞೆಯು ಬಂಗಾರದ ಹೊಳಪಾಗಿ ಸಾಮಾಜಿಕನಿಗೆ ಸಂತೋಷವಾಗುತ್ತದೆ. ಇಂದಿನ ಅದೆಷ್ಟೋ ಕವಿತೆಗಳ ಭಾವಾರ್ಥವನ್ನು ಕವಿಯೇ ಟಿಪ್ಪಣಿಸಬೇಕಾಗುತ್ತದೆ. ಇಲ್ಲದೆ ಹೋದಲ್ಲಿ ಕವನವು ಬುದ್ಧಿಗೆ ಹಣಿಯುವುದೇ ಇಲ್ಲ. ಇನ್ನು ಹೃದಯವನ್ನರಳಿಸುವ ಮಾತು ದೂರ ಉಳಿಯಿತು. ಆದರೆ ಈ ಕವಿತೆಗಳನ್ನೆಲ್ಲ ಆಮೂಲಾಗ್ರವಾಗಿ ಅಭ್ಯಾಸ ಮಾಡಿದಾಗ ಅವರ ವಿಚಾರ ಸ್ಪಷ್ಟತೆ, ಭಾವ ಸ್ಪಷ್ಟತೆ, ನಿರೂಪಣ ಸ್ಪಷ್ಟತೆಗಳು, ಅಲ್ಲಿ ಎಂತಹ ನವ್ಯಕಲ್ಪನೆಯಿದ್ದರೂ ನಿಚ್ಚಳವಾಗಿ ಸಾಮಾಜಿಕನ ಮನಸ್ಸನ್ನು ತಟ್ಟಿ ಕಾವ್ಯ ಸಂತೋಷವನ್ನುಂಟು ಮಾಡುತ್ತವೆ.

"ರಾತ್ರೋರಾತ್ರಿ—"ಎನ್ನುವ ಕವನದಲ್ಲಿಯ ಚಂದ್ರನ ಕಲ್ಪನೆಯು ಅವರ ನವ್ಯ ದೃಷ್ಟಿಗೆ ಸ್ಪಷ್ಟ ಉದಾಹರಣೆಯಾಗಿದೆ.

"ಚಿಕ್ಕೆ ಚಲ್ಲಾಪಿಲ್ಲಿ : ಕೋಳಿ ಕೆದರಿದ ಕಾಳು.
ಕತ್ತಲಿನ ತಿಪ್ಪೆಯ ರಾಶಿಯಂಚಿನಲ್ಲಿ
ತಿಂದೆಸೆದ **ಮಾವಿನವಾಟೆ** ಆ ಚಂದ್ರ!"

ಎಂಬುದು ಆ ನವ್ಯ ಕಲ್ಪನೆ. ಈ ಮೊದಲು ಚಂದ್ರನನ್ನು ಪೆಪ್ಪರ್ಮೆಂಟ್ ಎಂದೂ, ಅಮೃತ ಕುಂಭವೆಂದೂ ಇನ್ನೂ ಏನೇನೋ ವರ್ಣಿಸಿದ್ದಾರೆ. ಆದರೆ ಅದು ಮಾವಿನವಾಟೆಯೆಂದು ಹೇಳಿದುದು ಇದೇ ಮೊದಲೆಂದು ತೋರುತ್ತದೆ. ಅಜ್ಞಾನದ ಸಂಕೇತವು ಕತ್ತಲೆಯೇನೋ ನಿಜ. ಅದರ ಜೊತೆಗೆ ತಿಪ್ಪೆಯ ರಾಶಿ ಬಂದು ಸೇರಿದಾಗ ಅಜ್ಞಾನದ ಪರಮಾವಧಿಯ ಕಲ್ಪನೆಯು ತತ್‌ಕ್ಷಣವೇ ಬರುತ್ತದೆ. ಅಂತಹ ಕಗ್ಗತ್ತಲೆಯಲ್ಲಿಯೂ ಅನುಭವದ ರುಚಿ ನೋಡಿದ ಬೆಳಕು, "ಮಾವಿನವಾಟೆ"ಯನ್ನು ಕಾಣಬಹುದು. ಈ ಭಾವದಲ್ಲಿ ನವ್ಯತೆಯ ದೃಷ್ಟಿಯಿದ್ದರೂ ಆ ನವ್ಯಾಲಂಕಾರದಲ್ಲಿ ಅರ್ಥಸ್ಪಷ್ಟತೆಯಿದೆ. ಆದ್ದರಿಂದ ಕಾವ್ಯ ರಸಾತ್ಮಕವಾಗಿದೆ.

'ಇವನು' ಎನ್ನುವ ಭಾವಗೀತೆಯಲ್ಲಿ 'ತಲೆಯ ತಪ್ಪಲೆಯಲ್ಲಿ ವಿಚಾರಗಳ ಕುದಿತ' ಎನ್ನುವ ಕಲ್ಪನೆ ನವ್ಯವಿಚಾರದ ಸಾಂಕೇತಿಕ ಮಾತು. ಮಾನವನ ತಲೆಯ ತುಂಬ ಅನೇಕ ಸಮಸ್ಯೆಗಳು, ಅವುಗಳನ್ನು ಹೇಗೆ ಬಿಡಿಸಬೇಕೆನ್ನುವ ಅನೇಕ ವಿಚಾರಗಳು ತಲೆಯ ತುಂಬ ಮುರಿದು ನೋವನ್ನುಂಟುಮಾಡುತ್ತಿರುತ್ತವೆ. ಜೀವನದುದ್ದಕ್ಕೂ ನೂರಾರು ರೈಲುಗಳು ಸುತ್ತುಮುತ್ತು ಉರುಳುತ್ತ ಹೋಗುತ್ತವೆ. ಜಗತ್ತು ಆದರ್ಶವನ್ನು ಹೊತ್ತು ಸಾಗುತ್ತಲೆ ಇರುತ್ತದೆ. 'ಇವನು' ತನ್ನ ವಿಚಾರದಲ್ಲಿ ತಾನು ನಿಮಗ್ನನಾಗಿ ಮೌನಿಯಾಗಿರುತ್ತಾನೆ. ಅಂತಹ ಸಂದರ್ಭದಲ್ಲಿ,

" ಮುರುಕು ಜೋಪಡಿಯೊಳಗೆ
ಮಳೆಯ ನೀರಿಳಿವಂತೆ
ಇಳಿಯುತಿವೆ ತಲೆಯೊಳಗೆ ನೂರಾರು ಚಿಂತೆ ;
ಒಳಗೆಲ್ಲ ಕೆಸರು ; ಬರಿಕೆಸರು ಅದರೊಳಗು
ಮೊಳೆಯುತಿವೆ ಆಸೆಗಳು ಹಸುರಿನಂತೆ ! "

ವಿಜ್ಞಾನವು ಅರಳುತ್ತಿರುವಂತೆ ನವ್ಯಜೀವನದ ಪ್ರಜ್ಞೆಯು ಜನಜೀವನದ ನಾಡಿನಾಡಿಗಳಲ್ಲಿ ಮಿಡಿಯತೊಡಗಿವೆ; ಹೊಸ ಸಾಧನ ಸಾಮುಗ್ರಿಗಳ ಉಪಮಾ ಪ್ರಪಂಚವು ವಿಸ್ತಾರವಾಗುತ್ತ ಹೋಗಿ, ವಿಷಯಗಳನ್ನು ತಿಳಿದುಕೊಳ್ಳುವಲ್ಲಿ ಮಾನವನು ತನ್ನ ಬುದ್ಧಿಶಕ್ತಿಯನ್ನು ಬಹು ನಿಶಿತಗೊಳಿಸಿಕೊಳ್ಳಬೇಕಾಗಿದೆ. ಅದರ ಜೊತೆಗೆ ಇಂದಿನ ಪ್ರಪಂಚದ ನೀತಿರೀತಿಗಳ ವಿವೇಕವೂ ಅವನಿಗಿದ್ದು ಅವನ ಮನವು ಆದರಲ್ಲಿ ಮಾಗಿರಬೇಕು. ಆಗ ಹೊಸ ಕವನಗಳು ಹೆಚ್ಚು ಪರಿಣಾಮಕಾರಿಯಾಗುತ್ತವೆ. 'ಒಂದಿರುಳು' ಎಂಬ ಕವನದಲ್ಲಿ ನಾವು ಹೊಸ ಮಾತುಗಳು ಅಲಂಕಾರವಾಗಿರುವುದನ್ನು ನೋಡಬಹುದು.

" ಬೆಳಗಾಯಿತೊ, ಬಾಯ್ ತೆರೆಯುವುವೀ ಅಂಗಡಿ ;
ಹೋಟೆಲುಗಳ ರೇಡಿಯೊ ಕಿರುಚಾಡುವ ದನಿ
ಬಲೆಯಾಡುವುದೀ ಬೀದಿಯಲಿ
ಸಾವಿರ ಪ್ರಶ್ನೆಯ ನೊಗವೆಳೆಯುವ ಮುಖ ನಡೆವುವು"

ಹೀಗೆ ಜೀವನವು ಸಾಗುತ್ತಿರುವಾಗ, ದುಃಖಾಂತ ಜೀವನವೆಂದು ಬಗೆದವನ "ಕಪ್ಪನೆ ಟಾರೆದೆಯೊಳಗೂ" ಸುಖಾಂತವಿದು ಜೀವನವೆಂಬುವ ಆಶೆ "ಹ್ಯಾಲೀಂಟು"ವ ಭಾವ ತುಸು ಮಿಂಚುತ್ತದೆ. ಇಲ್ಲಿರುವ ಹೊಸ ಜೀವನದಲ್ಲಿರುವ ಬದುಕಿನ ಮಾತುಗಳೇ ಅಲಂಕಾರವಾಗಿ ಜೀವನ ತತ್ತ್ವವನ್ನು ಪರಿಣಾಮಕಾರಿಯಾಗಿ ಹೇಳುವಲ್ಲಿ ಸಿದ್ಧಿಯನ್ನು ಪಡೆದಿವೆ. ಇದೇ ಪದ್ಯದಲ್ಲಿ, "ಶಿಳ್ಳೆನುತಿದೆ ಗಸ್ತಿನ ಪೋಲಿಸರ 'ಶೀಟಿ', ಕತ್ತಲೆ ಮಾಟ" ಎನ್ನುವ ನವೀನ ಹೋಲಿಕೆಯಲ್ಲಿ ನೀತಿಯ ಎಚ್ಚರಿಕೆಯಿದೆ, ಅಂತರಾಳದ ಮಾಟು ವಿಕೆಯ ಹಿನ್ನೆಲೆಯಲ್ಲಿ.

ಇದೇ ರೀತಿ, "ಬೆರಳ ಬಂಡೆಯ ಮೇಲೆ ಬಜ್ಜಿಯಾಗಿದೆ ಸೊಪ್ಪು" "ಮುದಿ ಎತ್ತು ಸತ್ತಿಹುದು ದುರ್ವಾಸನೆ", "ಬೆಳಕ ಮುಡಿಯಲಿ ಹೊತ್ತು ನಿಂತ ಲಾಂದ್ರದ ಹಾಗೆ" "ಈ ಕೃಪಣೆಯ ಕಲ್ಲೆದೆಯನು ಕರಗಿಸಿ, ಹಸುರನೆತ್ತಬೇಕು ಈ ಎಲುಬಿನ ಯಾತಗಳು", ಎತ್ತರದ ಹುತ್ತಗಳ ಹಾವುಗಣ್ಣಿನ ಮಹಲು", ಮೊದಲಾದ ಮಾತುಗಳಲ್ಲಿ ನವೀನತೆಯ ದೃಷ್ಟಿಯಿಂದ ಬಾಳಿನ ನೆಲೆಬೆಲೆಯನ್ನು ಅಳೆಯುವ ಮಾಪನವಿದೆ.

'ಅರೆಮುಗಿದ ಕವನ' ಎಂಬುದು ಜೀವನದ ಅನಂತತೆಯನ್ನು ತೋರಿಸುತ್ತದೆ. ನಾವು ಸ್ವತಂತ್ರವಾಗಿದ್ದರೂ ಪೂರ್ಣತ್ವವು ದೊರೆಯಬೇಕಾದರೆ ಈಶನ ಕರುಣೆಯು ಬೇಕು ಎಂಬ ಹಳೆಯ ಮಾತುಗಳನ್ನೇ ಹೊಸ ರೀತಿಯಲ್ಲಿ ಇಡುವ ರೀತಿಯು ಕವಿಯ ಲೌಕಿಕ ಜ್ಞಾನದ ಹರವನ್ನು ತೋರಿಸಿಕೊಟ್ಟು ಆದರಲ್ಲಿಯೇ ತತ್ತ್ವ ಸಂಶೋಧನೆಯನ್ನೂ ಮಾಡಿಸುತ್ತದೆ :

" ಅರೆಮುಗಿದ ಕವನ ಇದು . . .
ಬ್ಯಾಂಕಿನೆಡೆ ಬಂದು ಕಂಡೆನು ನಾನು
ಕೈಯೊಳಿದೆ ರುಜುವಿರದ ಚೆಕ್ಕು
ಹಣವಿದೆಯಲ್ಲಿ; ಆದರಿದಕಿನ್ನಾರು ಹಣಕೊಟ್ಟಾರು
ಯಾರಿಗಿದೆ ಕೊಡುವ ಹಕ್ಕು
ಕೊಟ್ಟವನು ಇದಕೆ ರುಜು ಹಾಕಿದರೆ ತಾನೆ
ಕೈಗೆ ರೂಪಾಯಿ ಝುಣಕು ಝುಣಕು ?
ಅವನು ಎಲ್ಲಿದ್ದಾನೊ ಹುಡುಕಬೇಕು."

ಹೀಗೆ ಜೀವನದ ಇತಿಹಾಸಕ್ಕೊಂದು ಸೂತ್ರವಾಗಿದೆ 'ಅರೆಮುಗಿದ ಕವನ' ಹೊಸ ದೃಷ್ಟಾಂತವನ್ನು ಹೊತ್ತು.

" ಸುತ್ತ ನಾಲ್ಕರ ಮಗ್ಗಿ ಒಟಗುಡುವ ಕಪ್ಪೆ ;
ಬೇಸರದ ಮುಖಮುಂಡಿಸಿದೆ ಕುರ್ಚಿಯಲಿ
ಕೆಸರ ಕುಪ್ಪೆ !

*    *    *

ವಿಶ್ವ ಭೂಪಟದಂಥ ಹಳೆಯ ಕೋಟು !

*    *    *

ಹೊಡೆದೀತೆ ಗಂಟೆ ?
ಯಾವಾಗ ಮುಗಿದೀತು ಈ ಗೋಳು ಸಂತೆ ?"

ಎನ್ನುವ 'ಮೇಷ್ಟ್ರು' ಎಂಬ ಕವಿತೆಯಲ್ಲಿ ಮೂಡಿದ ಕವಿವಾಣಿಯು ಇಂದಿನ ಸಮಾಜದಲ್ಲಿ ಪ್ರೀತಿ, ಶಿಸ್ತು ಮಾಯವಾಗುವುದಕ್ಕೆ ಕಾರಣವೇನು ? ಎಂದು ಹುಡುಕುವಂತಿದೆ. ಶಿಕ್ಷಕರು ಆರ್ಥಿಕ ರೀತಿಯಿಂದ ಸುವ್ಯವಸ್ಥಿತವಾಗಿದ್ದರೆ ಅವರ ಮನಸ್ಸು ಪ್ರಸನ್ನವಾಗಿದ್ದು ಶ್ರೇಷ್ಠ ನಾಗರಿಕರ ನಿರ್ಮಾಣದಲ್ಲಿ ಸಫಲರಾಗುತ್ತಾರೆ. ಸಮಾಜದಲ್ಲಿಯೂ ಅವರಿಗೆ ಗೌರವ ಲಭಿಸುತ್ತದೆ. ಆದರೆ ಇಂದಿನ ಪ್ರಪಂಚ ಶಿಕ್ಷಕರ ಸುವ್ಯವಸ್ಥಿತ ಜೀವನದ ಬಗ್ಗೆ ಕಣ್ಣು ಮುಚ್ಚಿದೆ. ಅಂತೆಯೇ ಅವನು ಲೋಕದ ಕಣ್ಣಿನಲ್ಲಿ ಬಹು ಕನಿಕರದ

ವ್ಯಕ್ತಿಯಾಗಿದ್ದಾನೆ. ಇರುವ ಈ ಸ್ಥಿತಿಯನ್ನು ನೆನೆದು, ಭವಿಷ್ಯದ ಕಗ್ಗತ್ತಲೆಯನ್ನು ಊಹಿಸಿ ಮುಂದೆ ಹೇಗಿರಬೇಕೆನ್ನುವುದರ ಕಡೆಗೆ ಕವಿವಾಣಿ ಸೂಚನೆಯನ್ನು ನೀಡುತ್ತಿದೆ. ಇಲ್ಲಿ ಪ್ರಯೋಗಿಸಿರುವ ಹೊಸ ಹೋಲಿಕೆಯ ಸಾಮಗ್ರಿಗಳು ವಿಷಯವನ್ನು ಇನ್ನಷ್ಟು ಪ್ರಭಾವಕಾರಿಯನ್ನಾಗಿ ಮಾಡಿವೆ. ಈ ರೀತಿಯ ಪರಿಣಾಮವೇ ಉತ್ತಮ ಕಾವ್ಯದ ಲಕ್ಷಣವಲ್ಲವೆ?

ಈ ಒಂದು ಚಿಕ್ಕ ಸಮಾಲೋಚನೆಯಲ್ಲಿ ಡಾ|| ಶಿವರುದ್ರಪ್ಪನವರು ಜಗತ್ತನ್ನು ಇಂದಿನ ದೃಷ್ಟಿಯಿಂದ ನೋಡಿ ವಿಮರ್ಶಿಸಿ ಅದನ್ನು ಹೊಸ ಹೋಲಿಕೆಗಳ ಅಲಂಕಾರದಿಂದ ಸಾಮಾಜಿಕರ ಮನಸ್ಸಿನ ಮೇಲೆ ಪ್ರತಿಬಿಂಬಿಸುವ ಶೈಲಿಯಲ್ಲಿ ಮೂಡಿಸಿ ಧನ್ಯರಾಗಿದ್ದಾರೆಂಬುದನ್ನು ಕಂಡುಕೊಂಡೆವು. ಮತ್ತು ಅವರ ಪ್ರತಿಭೆಯ ಮೂಸೆಯಲ್ಲಿ ಭಾವನೆಗಳು ನವ್ಯಾಲಂಕಾರಗಳನ್ನು ಹೊಂದಿ ಕಣ್ಣು ಕೋರೈಸಿ ಮನವ ಸಂತೈಸುವ ವಿಚಾರವನ್ನೂ ಮನಗಾಣಬಹುದು. ಈ ಸಾಂತ್ವನದಿಂದ ಬದುಕು ಹೊಸ ಜೀವನ ತಳೆದು,

"ವಿಫಲತೆಯೊಳು ಸಫಲತೆ ಚಿಗುರಿಡುವುದನ್ನು"

ಕಾಣಲು ಆರಂಭಿಸಿ,

"ಅಳಿವಿನಲ್ಲು ಉಳಿವ ಚೋದ್ಯವನ್ನು"

ಕಂಡು ಅದಕ್ಕೆ ಬೆರಗಾಗಿ,

"ನೋವನುಂಗಿ ನಗೆಯನೀವ ಆತ್ಮಶಕ್ತಿ"

ಒಮ್ಮೆಗೆ ಆವಿರ್ಭಾವ ಹೊಂದಿ ಗರುಡಶಕ್ತಿಯಾಗುವುದು.

---

# ನನ್ನವಳ ಸೌಂದರ್ಯ!

ಬೇಸಿಗೆಯ ಬಿಸಿಗಾಲಕ್ಕೆ
ಹೋಲಿಸಲೆ ನಾ ಅವಳ?
ಇದಕಿಂತಲೂ ಹೊಳಪು
ನನ್ನವಳ ಸುರರೂಪ
ದಟ್ಟನೆಯ ಬಿರುಗಾಳಿ
ಮುದ್ದಾದ ಮೊಗ್ಗುಗಳ ಕೊಡವಿ
ತೂರೋಡುವುದು
ಎನಿತಾದರಾ ಕಾಲ ಕೊಂಚಮತ್ತೆ
ಸೂರ್ಯನಾ ಹೊಂಗಿರಣ
ರಭಸದಿಂ ಮಿಂಚುವುದು
ಹೊಳಪಿನಾ ಹೊಂಗಿರಣ
ಕ್ಷಯವಾಗಲು ಬಹುದು
ಪ್ರಕೃತಿಯ ತಿರುಮುರುವು
ಮೆರೆದಾಟದಲ್ಲಿ
ಸೌಂದರ್ಯ ವಸ್ತುಗಳು
ನಾಶವಾಗಲು ಬಹುದು
ನನ್ನವಳ ಸೌಂದರ್ಯ
ಮಾಸಲಾಗದು ಎಂದು
ನನ್ನವಳ ಆ ಚೆಲುವು
ಮರೆಯಾಗದೆಂದು
ಕಾಲದ ಜೊತೆಗೂಡಿ ಬೆಳೆಯುತಿರೆ ರೂಪ
ಕಾಲಯಮ ತಾನೇನು
ಮಾಡಲಾರನು ಅವಳ
ಮರಣ ಸೋಕಲಾರದವಳ ನೆರಳ
ಯಾವರೆಗೆ ಬಾಳಿಪನೊ
ಮನುಜ ತಾ ಬಾಳಿನಲ್ಲಿ
ಯಾವರೆಗೆ ನೋಡಲು
ನೇತ್ರಗಳ ಹೊಂದಿಹನೊ
ಅಂದಿಗಂದಿಗು ಅಮರ ನನ್ನವಳ ಸೌಂದರ್ಯ

(ಷೇಕ್ಸ್‌ಪಿಯರ್ ಕವಿಯ 'TO HIS LOVE' ಎಂಬ ಕವನದ ಭಾವಾನುವಾದ)

ಎಸ್. ರೇವಣಸಿದ್ದಪ್ಪ

# ಭೋಜಮಹಾಕವಿಯ ಸಾಹಸಿ ವಾಲಿಯ ವೀರಪತ್ನಿ ತಾರೆ

ಕೆ. ರಾಜಗೋಪಾಲಾಚಾರ್

ಚಂಪೂಕಾವ್ಯಗಳ ಜನ್ಮ ಹೀಗೆ ಎಂದು ನಿರ್ಧರಿಸಿ ಹೇಳುವಂತಿಲ್ಲ. ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ಬಲ್ಲವರಿಗೆ ಚಂಪುವಿನ ವಿಪುಲತೆ ಗೊತ್ತಿಲ್ಲದಿಲ್ಲ. 'ತಿಣಿಕಿದನು ಫಣಿರಾಯ ರಾಮಾಯಣದ ಭಾರದಲಿ' ಎಂಬಂತೆ ರಾಮಾಯಣ ಕಥಾವಸ್ತುವನ್ನ ಳವಡಿಸಿಕೊಂಡು ಬರೆದಿರುವ ಚಂಪೂಕಾವ್ಯಗಳ ಸಂಖ್ಯೆ ಸುಮಾರು ೪೫ ಎಂದು ಈಗ ತಿಳಿದು ಬಂದಿದೆ. ಈ ಎಲ್ಲಾ ಕಾವ್ಯಗಳೂ ಪ್ರಚಲಿತವಾಗದಿರುವುದು ಸಾಹಿತ್ಯೋಪಾಸಕರಿಗೆ ಅಪಾರ ನಷ್ಟವೇ ಸರಿ. ರಾಮಾಯಣ ಚಂಪೂ ಎಂದರೆ ಭೋಜಚಂಪುವೇ ಎಂದು ಕೇಳುವಷ್ಟು ಭೋಜನ 'ಚಂಪೂರಾಮಾಯಣ'ವು ಜನಪ್ರಿಯವಾಗಿದೆ. ಸರಳಶ್ಲೋಕಗಳು, ಗದ್ಯಭಾಗಗಳಲ್ಲಿ ಸಮಾಸಪದಗಳ ಆಡಂಬರ, ಶಬ್ದಜಾಲ, ಕವಿತಾಪ್ರೌಢಿಮೆಗಳ ಪ್ರದರ್ಶನಕ್ಕೆಡೆಗೊಡದೆ ಇದು ರಚಿತವಾಗಿದೆ. ಪ್ರತಿಭೆಗೆ ನವಿರಾದ ಪ್ರೌಢಿಮೆಯನ್ನು ಕಲೆಹಾಕಿ ಸಮಯೋಚಿತ ವರ್ಣನೆಗಳಿಂದ ಕೂಡಿ ಪ್ರಸಿದ್ಧ ವೈದರ್ಭೀ ರೀತಿಯಲ್ಲಿ ಬರೆದಿರುವ 'ಚಂಪೂರಾಮಾಯಣ'ವು ಯಾರಿಗೆ ಗೊತ್ತಿಲ್ಲ? ಈ ಕಾರಣಗಳಿಂದಲೇ ರಾಮಾಯಣದ ಆಧಾರದ ಚಂಪೂ ಕರ್ತೃಗಳೆಲ್ಲರೂ ವಾಲ್ಮೀಕಿಗೆ ಪ್ರಥಮತಃ ಮಣಿದು ಅನಂತರ ಭೋಜನನ್ನು ಸ್ಮರಿಸಿಕೊಳ್ಳುತ್ತಾರೆ. ಹಲವಾರು ಶ್ಲೋಕ, ಭಾವನೆ ಮತ್ತು ಸನ್ನಿವೇಶ ನಿರೂಪಣೆಗಳಲ್ಲಿ ಭೋಜನು ತನ್ನ ವೈಶಿಷ್ಟ್ಯವನ್ನು ತೋರಿಸಿದ್ದಾನೆ. ಅವುಗಳಲ್ಲಿ ತಾರಾ ವಿಲಾಪದ ಪ್ರಸಂಗ ಮುಖ್ಯವಾದುದು.

ರಾಮನ ನಿಶಿತ ಬಾಣಕ್ಕೆ ವಾಲಿಯು ತುತ್ತಾಗಿ ಭೂಶಾಯಿಯಾಗಿದ್ದಾನೆಂದು ತಿಳಿದು ಅಲ್ಲಿಗೆ ಧಾವಿಸಿಬಂದ ತಾರೆಯನ್ನು ವಾಲ್ಮೀಕಿಯು ಕಿಷ್ಕಿಂಧಾಕಾಂಡ ೨೦, ೨೩ ಮತ್ತು ೨೪ನೆಯ ಸರ್ಗಗಳಲ್ಲಿ ಅನಾಥ ಶಿಶುವಿನ ತಾಯಿಯನ್ನಾಗಿ ವೈಧವ್ಯ ದುಃಖಪರಿತಪ್ತಳನ್ನಾಗಿ ಕರುಣಾಜನಕ ಮೂರ್ತಿಯನ್ನಾಗಿ ನಿರೂಪಿಸಿದ್ದಾನೆ:

> ಸಮಾಶ್ವಾಸಯಪುತ್ರಂತ್ವಂ ಸಂದೇಶಂ ಸಂದಿಶಸ್ವಚ|
> ಮೂರ್ಧ್ನಿಚೈನಂ ಸಮಾಘ್ರಾಯಪ್ರವಾಸಂ
> ಪ್ರಸ್ಥಿತೋಽಹ್ಯಸಿ||
> ೪-೨೦-೧೭

> ಮತ್ತಃಪ್ರಿಯತರಾನೂನಂ ವಾನರೇಂದ್ರಮಹೀತವ|
> ಶೇಷೇಹಿತಾಂ ಪರಿಷ್ವಜ್ಯ ಮಾಂಚನಪ್ರತಿಭಾಷಸೇ||
> ೪-೨೩-೩

> ಶೂರಾಯ ನಪ್ರದಾತವ್ಯಾ ಕನ್ಯಾಖಲು ವಿಪಶ್ಚಿತಾ|
> ಶೂರಭಾರ್ಯಾಂ ಹತಾಂಪಶ್ಯ ಸದ್ಯೋಮಾಂ
> ವಿಧವಾಂ ಕೃತಾಂ||
> ೪-೨೩-೮

> ಪತಿಹೀನಾತು ಯಾನಾರೀ ಕಾಮಂಭವತು ಪುತ್ರಿಣೀ
> ಧನಧಾನ್ಯೈಃ ಸುಪೂರ್ಣಾಪಿ ವಿಧವೇತ್ಯುಚ್ಯತೇ
> ಜನೈಃ||
> ೪-೨೩-೧೨

ಅನಂತರ ರಾಮನನ್ನುದ್ದೇಶಿಸಿ ಹೀಗೆ ಹೇಳುತ್ತಾಳೆ:

> ಯೇನೈಕಬಾಣೇನ ಹತಃಪ್ರಿಯೋಮೇ ತೇ ನೈವ
> ಮಾಂತ್ವಂಜಹಿಸಾಯ ಕೇನ|
> ಹತಾಗಮಿಷ್ಯಾಮಿ ಸಮೀಪಮಸ್ಯ ನಮಾಮೃತೇ
> ರಾಮರಮೇತವಾಲೀ||
> ೪-೨೪-೩೩

> ಯಚ್ಚಾಪಿಮನ್ಯೇತ ಭವಾನ್ಮಹಾತ್ಮಾ ಸ್ತ್ರೀಘಾತ
> ದೋಷೋನಭವೇತ್ತುಮಹ್ಯಂ|
> ಆತ್ಮೇಯ ಮಸ್ಯೇತಿಚ ಮಾಂ ಜಹಿತ್ವಂ ನ ಸ್ತ್ರೀವಧಃ
> ಸ್ಯಾನ್ಮನುಜೇಂದ್ರ ಪುತ್ರ|
> ಶಾಸ್ತ್ರಪ್ರಯೋಗಾದ್ವಿವಿಧಾಚ್ಚ ವೇದಾದಾತ್ಮಾಹ್ಯ
> ನನ್ಯಃ ಪುರುಷಸ್ಯದಾರಾಃ||
> ೪-೨೪-೩೭

ವಾಲ್ಮೀಕಿಯ ನಂತರ ಭಾಸನು ವಾಲಿಯಿಂದ "ಸುಗ್ರೀವ, ಸಂವಾರ್ಯತಾಂ ಸಂವಾರ್ಯತಾಂ ಸ್ತ್ರೀಜನಃ| ಏವಂಗತಂ ನಾರ್ಹತಿಮಾಂದ್ರಷ್ಟುಂ" ಎಂದು ಹೇಳಿಸಿ ತಾರಾದ್ವಿಪತ್ನಿಯರನ್ನು ರಂಗದ ಮೇಲೆ ಬರಮಾಡದೆ ತನ್ನ ಸ್ವಪ್ರಥಮ ನಾಟಕವಾದ ಅಭಿಷೇಕ ನಾಟಕದ ಅಭಿಮಾನಸೃಷ್ಟಿಯಾದ ವಾಲಿಯ ಗೌರವಕ್ಕೆ, ಸ್ವಾಭಿಮಾನಕ್ಕೆ ಎಳ್ಳಷ್ಟೂ ಧಕ್ಕೆ

ಬಾರದಂತೆ ನೋಡಿಕೊಂಡಿದ್ದಾನೆ. ಯುದ್ಧದಲ್ಲಿ ತನ್ನ ಎದುರು ಬಾರದೆ ಪ್ರಚ್ಛನ್ನವಧಾ ದೋಷಕ್ಕೆ ಕಾರಣನಾದ ರಾಮನು ತನ್ನೊಂದಿಗೆ ವಾಗ್ಯುದ್ಧವನ್ನಾದರೂ ಮಾಡ ಲೆಂದು ಕಣಕ್ಕೆ ಎಳೆಯುತ್ತಾನೆ. ಅಭಿಷೇಕ ನಾಟಕದಲ್ಲಿ ವಾಲಿ ರಾಮರ ಸಂಭಾಷಣೆ ಸುಂದರವಾದುದು. ಅಷ್ಟೇ ಹೃದಯಸ್ಪರ್ಶಿಯೂ ಹೌದು. ರಾಮಾಯಣದಲ್ಲಿ ವಿಸ್ತೃತ ವಾಗಿರುವ ಸನ್ನಿವೇಶಗಳನ್ನು ಚರ್ವಿತ ಚರ್ವಣ ಮಾಡಲು ಇಷ್ಟವಿಲ್ಲದಿರುವ ಕಾಳಿದಾಸ ಮಹಾಕವಿಯು ಈ ಪ್ರಸಂಗ ವನ್ನು ರಘುವಂಶದ ೧೩ನೇ ಸರ್ಗದಲ್ಲಿ :

> ಸ ಹತ್ವಾ ವಾಲಿನಂ ವೀರಸ್ತತ್ಪದೇ ಚಿರಕಾಂಕ್ಷಿತೇ |
> ಧಾತೋಃ ಸ್ಥಾನ ಇವಾದೇಶಂ ಸುಗ್ರೀವಂ ಸಂನ್ಯ
> ವೇಶಯತ್ ||

ಎಂದು ಚಿಟಿಕೆ ಹಾರಿಸುವಂತೆ ಹೇಳಿ ಮುಂದಕ್ಕೆ ಹೋಗು ತ್ತಾನೆ.

ವಾಲ್ಮೀಕಿಯ ಕಾಲದಿಂದ ರಾಮನು ದೇವನೋ ಮಾನವನೋ ಎಂಬ ವಿಚಾರಮಥನ ಸಾಗಿದ್ದು ಭೋಜ ಮಹಾಕವಿಯ ಕಾಲಕ್ಕೆ ರಾಮನನ್ನು ವಿಷ್ಣುವಿನ ಅವತಾರ ವೆಂದೇ ಒಪ್ಪಿಕೊಂಡಾಗಿತ್ತೆಂದು ಕಾಣುತ್ತದೆ. ಆದುದ ರಿಂದಲೇ ಭಾಸನಿರೂಪಿತ ವಾಲಿರಾಮರ ಸಂಭಾಷಣೆ–ಅಲ್ಲ– ಚರ್ಚೆಯನ್ನು ಒಪ್ಪಿಕೊಳ್ಳಲು ಸಾಧ್ಯವೆನಿಸಲಿಲ್ಲ ದೇವ ಭಕ್ತ ಭೋಜನಿಗೆ. ರಾಮನನ್ನು ಬಹುಬಾರಿ ದೇವರೆಂದೇ ಉಲ್ಲೇಖಿಸಿರುವ ಈ ಕವಿಯು ರಾಮಕೃತ ವಾಲಿವಧೆಯನ್ನು ಧರ್ಮಬಾಹಿರವೆಂದು ಹೇಗೆ ತಾನೇ ನಿರೂಪಿಸಲು ಸಾಧ್ಯ? 'ರಾಮಬಾಣ'ದಿಂದ ಪೆಟ್ಟುತಿಂದು ಗತಪ್ರಾಣನಾಗಲಿರುವ ವಾಲಿಯು ರಾಮನನ್ನು 'ಚೀರವಲ್ಕಲಧಾರಿಣಾ ವೇಷ ವಿಪರ್ಯಸ್ತ ಚಿತ್ರೇನ ಮಮಭ್ರಾತ್ರಾ ಸಹ ಯುದ್ಧ ವ್ಯಗ್ರಸ್ಯ ಅಧರ್ಮ್ಯಃ ಖಲು ಪ್ರಚ್ಛನ್ನೋವಧಃ' ಎಂದು ಕೇಳುವುದೇ? ಈ ಕಾರಣದಿಂದ ಮಾತ್ರವಲ್ಲದೆ, ಸಂಪ್ರದಾಯ ದೃಷ್ಟಿಯಿಂದ ಲ್ಲದಿದ್ದರೂ ಸಾಹಸಿಗ ವಾಲಿಯ ವೀರಪತ್ನಿ ತಾರೆಗೆ ಒಂದು ವಿಶಿಷ್ಟ ಸ್ಥಾನವನ್ನು ಕೊಟ್ಟು ತನ್ನ ವೈಶಿಷ್ಟ್ಯವನ್ನು ಕಿಷ್ಕಿಂಧಾಕಾಂಡದಲ್ಲಿಯೂ ತೋರಿಸಿದ್ದಾನೆ ಭೋಜಮಹಾ ಕವಿ. ರಾಮಬಾಣದಿಂದ ಮರ್ಮಾಹತನಾಗಿ ಪತಿಯು ಮರಣಶಯ್ಯೆಯಲ್ಲಿದ್ದಾನೆಂದು ತಿಳಿದು ಶೀವ್ರಗತಿಯಿಂದ ಬಂದ ತಾರೆಯು ಅವನನ್ನು ಅಪ್ಪಿಕೊಂಡು ಅವನ ಶಿರಸ್ಸನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ರಾಮನಿಗೆ ಹೇಳುವ ಮಾತು ಅವಳ ಗಾಂಭೀರ್ಯಕ್ಕೆ, ಸ್ಥಾನಮಾನಗಳಿಗೆ, ಶೋಕಾಭಿಭೂತ ಹೃದಯಕ್ಕೆ ಒಪ್ಪತಕ್ಕದ್ದು. ತಾರೆಯ ಪ್ರಲಾಪವೋ ವೀರಾಲಾಪವೋ ಎಂಬ ಪ್ರಶ್ನೆ ಎದ್ದರೂ ಸರಿಯೆ !

"ಮನುಕುಲನಾಥನೇ, ಶೀತಲ ಕಿರಣಗಳನ್ನು ಹೊಂದಿ ರುವ ಚಂದ್ರನಿಗೆ ಸಂತಾಪ ಹರಿಸುವ ಶೈತ್ಯವು ಹೇಗೆ ಸಹಜ ಗುಣವೋ ಹಾಗೆಯೇ ರಮ್ಯ ಕೀರ್ತಿಗಳಿಸಿರುವ ನಿನಗೆ ಕಾರುಣ್ಯವೂ ಕೂಡ ಎಂಬುದು ಚಿರಪ್ರಸಿದ್ಧ. ನಿನ್ನಿಂದ ಅದು ನನ್ನ ಪಾಪದಿಂದಾಗಿ ಹೇಗೆ ತಾನೇ ಓಡಿಸಲ್ಪಟ್ಟಿತು? ರಘುಪುಂಗವನೇ, ನನ್ನ ಪತಿಯು ಈ ರೀತಿ ಮರಣಶಯ್ಯೆ ಯಲ್ಲಿರುವಾಗ ಎಲೈ ತಾಟಕಾರಿಯೇ, ನನ್ನನ್ನೂ ರಾಕ್ಷಸಿ ಯೆಂದೇ ತಿಳಿದು ಬಾಣವನ್ನು ಬಿಡು. ಅಗಲಲಿರುವ ಪತಿ ಯೊಂದಿಗೆ ನನ್ನನ್ನು ಸೇರಿಸಿದಲ್ಲಿ ನಿನಗೆ ಶ್ರೇಯಸ್ಸೇ ಉಂಟಾಗುವುದು. ಬೇಟೆಯು ರಾಜಯೋಗ್ಯಕ್ರೀಡೆ ಎಂದು ಇಲ್ಲಿ ಸೇರಿರುವವರಿಗೆಲ್ಲಾ ತಿಳಿಸಿದೆಯಲ್ಲವೆ, ಸತ್ಯ ವಾಂಛ ನಿರತ? ನಿನ್ನ ನಿಶಿತಬಾಣದಿಂದ ಇದೋ ಈ ಶಾಖಾ ಮೃಗಿಯನ್ನೂ ಕೊಲ್ಲುವವನಾಗು. ರಾಮನೇ, ಯಾವ ಬೇಟೆಗಾರ ತಾನೇ ಹೆಣ್ಣುಮೃಗವೆಂದು ದಯೆತೋರಲು ಸಿದ್ಧನಿದ್ದಾನೆ? ಈ ಬಂಧುವು (ಸುಗ್ರೀವನು) ಗಡಗುಟ್ಟಿ ನಡುಗಿ ಹೇಗೆ ಹಿಂದೆ ಋಷ್ಯಮೂಕ ಪರ್ವತವನ್ನು ಶರಣು ಹೊಕ್ಕನೋ ಹಾಗೆ ಈ ನನ್ನ ಪತಿಯೂ ಎಲೈ ರಾಮನೇ, ನಿನ್ನ ಶರಕ್ಕೂ ಅಭೇದ್ಯವಾದ ನನ್ನ ಹೃದಯವೆಂಬ ಸಮ್ಯಗ್ರಕ್ಷಣಾ ಕೋಟೆಯನ್ನು ಸೇರಿದ್ದಾನೆ. ನಾನು ಸುಕೇತು ತನಯೆಯಾದ ತಾಟಕಿಯಲ್ಲ. ಸಪ್ತಸಾಲತತಿ ಯಲ್ಲ. ಮೂಲೋಕ ಪ್ರಸಿದ್ಧವಾದ ವಾಲಿಯೂ ಅಲ್ಲ. ಬಾಣಗಳಿಂದಲೂ ನಿರ್ಭಿನ್ನ ವಜ್ರಹೃದಯಿಯಾದ ತಾರೆ ನಾನು. ರಾಘವ! ನನ್ನನ್ನು ಸಂಹರಿಸದಿರುವ ನೀನು ಎಂತು ತಾನೇ ಬಿಲ್ಲುಗಾರನಾಗುವೆ? ಜನ್ಮತಃ ರಾಜಕುವ ರರು. ಶೌರ್ಯಕ್ಕೆ ಆಕರರೆಂಬಂತೆ ಹಾಗೆಯೇ ಅವರಿಗೆ ವಿಚಾರ ಶೂನ್ಯತೆಯೂ ಜನ್ಮತಃ ಧರ್ಮವೋ ಏನೋ! ಅದಕ್ಕೆ ನನ್ನ ಹೃದಯಸ್ಥನಾಗಿ ಕಪಿರಾಜನು ಅಪಾಯರಹಿತನಾಗಿರುವು ದನ್ನು ನೋಡಿಕೊಂಡೂ ಚಾಪಹಸ್ತನಾಗಿ ಇನ್ನೂ ಹಾಗೆಯೇ ನಿಂತಿರುವೆ" ಅಬ್ಬಾ! ರಾಮನಿಗೆ ತಾರೆಯು ಹೇಳಬಹುದಾದ ಮಾತೇ ಇವು ! !

ಮೇಲಿನ ಮಾತುಗಳನ್ನು ಪರಿಶೀಲಿಸಿದಲ್ಲಿ ತಾರೆಯ ಅಂತರ್ಗತ ಭಾವನೆ ಮಾತ್ರವಲ್ಲ ಭೋಜನ ಅಂತರಂಗವೂ ನಮಗೆ ಸುಸ್ಪಷ್ಟವಾಗುತ್ತದೆ. ಆರ್ತಳಾಗಿ ತಾರೆಯು ರಾಮನನ್ನು ಪ್ರಥಮತಃ ಚುಚ್ಚು ಮಾತನ್ನಾಡುತ್ತಾಳೆ. ಹೆಸರಿಗೆ ತಕ್ಕಂತೆ ರಾಮನು ಆಹ್ಲಾದಕ್ಕೆ ಆಕರನಾಗಿರ ಬೇಡವೇ? ಚಂದ್ರನಂತೆ ತಂಪನ್ನೀಯದೇ ತದ್ವಿರುದ್ಧವಾಗಿ

ಅವಳ ಭಾಗಕ್ಕೆ ರಾಮನು ಕ್ರೂರಿಯಾಗಬೇಕಿತ್ತೇ? ತನ್ನ ಹೆಸರಿಗೂ ಕಳಂಕ ತಂದುಕೊಳ್ಳಬೇಕಾಗಿತ್ತೇ? ಪಾಪ, ದೈನ್ಯಪರಾಕಾಷ್ಠತೆಯಿಂದಲೋ ಏನೋ, ಸರ್ವಜ್ಞೆಯೆಂದು ಹೇಳಿಸಿಕೊಳ್ಳುವ ಅವಳಿಗೂ ತಿಳಿಯಲಿಲ್ಲ. ಚಂದ್ರನು ಎಲ್ಲರಿಗೂ ಸಮಾನ ಪರಿಣಾಮ ಕರ್ತೃವಲ್ಲ ಎಂದು ಸಂಯುಕ್ತ ಪ್ರೇಮಿಗಳಿಗೊಂದು ರೀತಿಯಾದಲ್ಲಿ ವಿಯುಕ್ತರಿಗೆ ಮಗದೊಂದುರೀತಿ. ಸುಗ್ರೀವನಿಗೂ ಮತ್ತು ತಾರೆಗೂ ಬೇರೆ ಬೇರೆ ರೀತಿಯಲ್ಲಿ ತನ್ನ ಪ್ರಭಾವವನ್ನು ತೋರಿಸಿ ಕೊಟ್ಟ ರಾಮನೂ ಕೂಡ ಹಾಗೆಯೇ. ಪತಿವಿಯೋಗ ವಿತಪ್ತ ಒಡಲಿನ ಬೇಗೆಯೇ ಈ ಮಾತಿಗೆ ಕಾರಣ ಎಂದು ಭೋಜನು ವಾಚ್ಯವಾಗಿ ಹೇಳಲೇಬೇಕೇನು?

ಅವಳು ರಾಮನನ್ನು 'ತಾಟಕಾರಿಯೇ' ಎಂದು ಸಂಬೋಧಿಸುವಾಗ ಅವಳ ಕಟಕಿ ಹೃದಯದ ನೆಲೆ ಸಹೃದಯರಿಗೆ ಗೊತ್ತಾಗಿರಲೇ ಬೇಕು. 'ಸ್ತ್ರೀಹತ್ಯೆ ಕೂಡದು' ಎಂಬ ಅಳುಕು ನಿನ್ನ ಹೃದಯದಲ್ಲಿದ್ದರೆ ಅದನ್ನು ಬಿಟ್ಟುಬಿಡು. ಹಿಂದೆ ತಾಟಕಿಯ ಸಂಹಾರವು ನಿನ್ನಿಂದಲೇ ಆಗಲಿಲ್ಲವೇ? ಹಾಗೆಯೇ ನನ್ನದೂ ನಡೆದುಹೋಗಲಿ. ನಿನಗೆ ಅದೇನೂ ಹೊಸತಲ್ಲವಲ್ಲ' ಎಂದು ಸ್ವಯಂ ಪ್ರಚೋದಿಸುವಳು. ಪತಿದುರುಳನೆಂಬ ಭಾವನೆ ಇರುವವನಿಗೆ ಅವನ ಸಹಚರಿಯೂ ದುರುಳೆ ಎಂಬುದು ಗೊತ್ತಾಗಬೇಡವೇ? ಪಾಪಕರ್ಮಿಯಾಗಿರುವ ಅವನಿಗೆ ಶ್ರೇಯೋಮಾರ್ಗವೊಂದಿದೆ. ಏನೆಂದರೆ ಪತಿಯೊಂದಿಗೆ ತನ್ನನ್ನೂ ಕಳುಹಿಸುವುದು. ಅಗಲಿರುವ ಪತಿ ಪತ್ನಿಯರನ್ನು ಸೇರಿಸುವುದು ಎಷ್ಟೊಂದು ಪುಣ್ಯದಾಯಕ! ತೀವ್ರಾಘಾತದಿಂದ ಭೂಶಾಯಿಯಾಗಿರುವ ವಾಲಿಯನ್ನು ಸಪ್ರಾಣನನ್ನಾಗಿ ಹೇಗೆ ಮಾಡುವುದು? ಅದು ದುಸ್ಸಾಧ್ಯವಿರುವಾಗ ರಾಮನಿಗೆ ಉಳಿದಿರುವುದು ಒಂದೇ ಮಾರ್ಗ. ಬಾಣವನ್ನು ಬಿಟ್ಟು ತಾರೆಯನ್ನೂ ವಾಲಿಯ ಹಿಂದೆ ಮರಣವನ್ನಪ್ಪುವಂತೆ ಮಾಡುವುದು! ವಾಲಿಯ ಮರಣದಿಂದಾಗಿ ಜೀವನವೇ ಬೇಡವಾಗದೆ ನೊಂದಿರುವ ತಾರೆಯ ಹೃದಯಕ್ಕೆ ಮರಣವಲ್ಲದೆ ಮತ್ತೆ ಯಾವುದು ತಾನೇ ಅಮೃತಸೇಚನವಾದೀತು?

'ಸತ್ಯವಾದಿಯೆ' ಎಂದು ರಾಮನನ್ನು ತಾರೆಯು ಕರೆದಾಗ ಅವಳ ಕಟಕಿಯ ಪರಿಚಯವಾಗುತ್ತದೆ. ಬೇಟೆಯಾಡುವುದು ರಾಜಸಿದ್ಧಕ್ರೀಡೆಯೆಂದು ಇಲ್ಲಿರುವವರಿಗೆಲ್ಲಾ ಹೇಳಿದೆಯಲ್ಲವೇ? 'ಯಾವ ಬೇಟೆಗಾರ ವಿವೇಚನೆಯಿಂದ ಹೆಣ್ಣು ಮೃಗದಲ್ಲಿ ದಯೆ ತೋರುತ್ತಾನೆ ಎಂದು ಹೇಳುವಾಗ ಸಾಯಲು ಸಿದ್ಧಳಾಗಿದ್ದು ರಾಮನ ಮುಂದೆ ವೀರೆಯಾಗಿ ಸೆಟೆದುನಿಂತಿರುವ ನಿರ್ಭೀತ ತಾರೆಯು ನಮ್ಮ ಮನಃಪಟಲದಲ್ಲಿ ಹಾದುಹೋಗುತ್ತಾಳೆ. ವಿಧವಾಜೀವನಕ್ಕಿಂತ ಮರಣವೇ ಲೇಸಲ್ಲವೇ? ರಾಮನ ದಯೆ ಅವಳಿಗೇನೂ ಬೇಡವೆಂದು ಹೇಳುವುದರ ಜೊತೆಗೆ ತನಗೆ ಅವನಲ್ಲಿರುವ ತಿರಸ್ಕಾರವನ್ನೂ ಸೂಚಿಸುತ್ತಾಳೆ.

ವೀರನ ಒಡನಾಡಿಯಾಗಿ ಇದುವರೆಗೂ ತುಂಬು ಜೀವನವನ್ನು ನಡೆಸಿದ್ದ ತಾರೆಗೆ ವಿಯೋಗದುಃಖವೊಂದು ಕಡೆಯಾದರೆ ತನ್ನ ಪತಿಯ ಮರಣಕ್ಕೆ ಕಾರಣನಾಗಿರುವ ರಾಮನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂಬ ಹಟ ಮತ್ತೊಂದುಕಡೆ "ವಾಲಿಯನ್ನು ಕೊಂದೆನೆಂಬ ಗರ್ವವನ್ನು ಬಿಡು" ಎಂದು ಹೇಳುವಳೋ ಎಂಬಂತೆ ಭಾಸವಾಗುತ್ತದೆ. ತನ್ನ ಸುಭದ್ರ ಹೃದಯಕೋಟೆಯನ್ನು ವಾಲಿಯು ಪ್ರವೇಶಿಸಿರುವಾಗ ಹೇಗೆತಾನೇ ರಾಮನು ಅವನನ್ನು ಕೊಂದಿರಲು ಸಾಧ್ಯ? "ಅವನನ್ನು ಕೊಲ್ಲಲಿಚ್ಛೆಯಿದ್ದರೆ ಇದೋ, ಈ ನನ್ನ ಹೃದಯವನ್ನೇ ನಿನ್ನ ಬಾಣಕ್ಕೆ ತುತ್ತಾಗಿಸದೇ ವಿಧಿಯಿಲ್ಲ" ಎಂದು ತಾರೆಯು ವಾಚ್ಯವಾಗಿಯೇ ಹೇಳಬೇಕೇಕೆ? 'ತಾಟಕಿ ನಾನಲ್ಲ. ಸಪ್ತಸಾಲಿಯಲ್ಲ. ಕೊನೆಗೆ ವಾಲಿಯೂ ಅಲ್ಲ. ನಾನು ವಜ್ರಹೃದಯ ತಾರೆ' ಎಂದು ಹೇಳುವಾಗ ತಾರೆಯು ಎಷ್ಟೇ ಆಗಲಿ ಸಾಹಸಿಗ ವಾಲಿಯ ವೀರಪತ್ನಿಯಲ್ಲವೇ ಅವಳು ಎಂದು ಮೆಚ್ಚುಗೆಯನ್ನು ಕೊಡದೆ ವಿಧಿಯಿಲ್ಲ. ಹೆಣ್ಣಿರಬಹುದು. ಆದರೆ, ಗಂಡಸಿಗೇ ಸವಾಲುಹಾಕುವ ಗುಂಡಿಗೆಯ ಹೆಣ್ಣನ್ನು ಹೇಗೆ ಅಲಕ್ಷಿಸುವುದು? ಇದಾವುದನ್ನೂ ಲೆಕ್ಕಿಸದೆ ರಾಮನು ತನ್ನನ್ನು ಶಿಕ್ಷೆಗೊಳಪಡಿಸದೆ ಸುಮ್ಮನಿರುವನೇ? ಈ ಪರಿಸ್ಥಿತಿಯನ್ನರಿತೇ ತಾರೆಯು 'ನನ್ನನ್ನು ಕೊಲ್ಲಲಾಗದ ನೀನು ಎಂತು ತಾನೇ ಹೆಸರಾಂತ ಬಿಲ್ಲುಗಾರ' ಎಂದು ಚುಚ್ಚುಮಾತನ್ನಾಡುತ್ತಾಳೆ. ಅವಳ ಅಭೀಷ್ಟ ಒಂದೇ ಒಂದು. 'ಈಗಲೂ ರಾಮ ತನ್ನನ್ನು ಹೊಡೆದು ಸಾಯಿಸಬಾರದೇ' ಎಂದು ಅದು ಸಿದ್ಧಿಸಿದರೆ ಅವಳಂತಹ ಧನ್ಯೆ ಯಾರೂ ಇರರು ಎಂಬ ಭಾವನೆ ಅವಳಲ್ಲಿ ಹೃದ್ಗತವಾಗಿದ್ದಿರಬೇಕು.

ಇಷ್ಟೊಂದು ಅಣಕಮಾತೂ ಸಾಕಾಗಲಿಲ್ಲವೆಂದು ಕಂಡಿತೋ ಏನೋ ತಾರೆಗೆ – ಅದಕ್ಕೇ ಹೇಳುತ್ತಾಳೆ – ಎಂತಹ ಮೂಢ ರಾಮ ನೀನು! ಚಾಪಹಸ್ತನಾಗಿಯೂ ಸುಮ್ಮನಿರುವೆಯಲ್ಲ. ಇದು ರಾಜಕುಮಾರನಿಗೆ ಒಪ್ಪವೇ? ಬಚ್ಚಿಟ್ಟುಕೊಂಡಿರುವ ಮೃಗಗಳನ್ನು ಬೇಟೆಯಾಡುವುದು ರಾಜಕುಮಾರರ ಪ್ರತಾಪಕ್ಕೇನೋ ಪತಾಕೆ. ಆದರೆ, ಮೃಗವಾದ ನನ್ನ ಪತಿಯು ಈ ನನ್ನ ಹೃದಯವನ್ನು ಪ್ರವೇಶಿಸಿದ್ದಾನೆ ಎಂದು ತಿಳಿದೂ ಸುಮ್ಮನಿರುವೆಯಲ್ಲಾ!

ಶೌರ್ಯವೇನೋ ರಾಜಕುವರನ ಆಜನ್ಮಸಿದ್ಧ ಎಂದು ತಿಳಿದಿದ್ದೆ. ಆದರೆ ಮೌಢ್ಯವೂ ಹಾಗೆಯೇ ಸರಿ ಎನ್ನುವುದು ನನಗೆ ಗೊತ್ತೇ ಇರಲಿಲ್ಲ. ಅದು ಈಗ ನಿನ್ನಿಂದಾಗಿ ಗೊತ್ತಾಯಿತೆ? ಹೀಗೆ ಅವಳು ಸೂಚ್ಯವಾಗಿ ಹೇಳುವಾಗ ಅವಳ ವ್ಯಂಗ್ಯಪೂರಿತ ಹೃದಯವೊಂದೇ ಅಲ್ಲಿ ನಮಗೆ ಪರಿಚಯವಾಗುವುದು, ಅವಳ ಪತಿ ಪರಾಯಣತೆ ಹಾಗೂ ಸಹಿಸಲಸಾಧ್ಯವಾದ ವೈಧವ್ಯ ದುಃಖವೂ ಕೂಡ. ಸಾಲದೇ ಸಾಹಸಿಗ ವಾಲಿಯ ವಿಯೋಗ ವಿದಗ್ಧತಾರಾ ಹೃದಯದ ಅಂತರಾಳ ಬತ್ತಳಿಕೆಯಿಂದ ರಾಮಬಾಣಕ್ಕೂ ಮಿಗಿಲಾದ ಕೂರಲಗಿನ ವಾಗ್ಬಾಣಗಳ ಸುರಿಮಳೆ?

ಹೆಂಗಸು ಗಂಡಸಿಗೆ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ಸವಾಲು ಹಾಕುವುದು ವಾಲ್ಮೀಕಿಯ ರಾಮಾಯಣದಲ್ಲೂ ಉಲ್ಲೇಖಿತವಾಗಿದೆ. ಕಾಮಲೋಲುಪನಾದ ಸುಗ್ರೀವನು ಪ್ರತಿಜ್ಞಾಭಂಗಮಾಡಲಿದ್ದಾನೆಂದು ತಿಳಿದು ಪ್ರಕೋಪದಿಂದ ಲಕ್ಷ್ಮಣನು ಕಿಷ್ಕಿಂಧಾದ್ವಾರಕ್ಕೆ ಬಂದಾಗ ಸುಗ್ರೀವ ಪ್ರೇರಿತ ತಾರೆಯ ಭಂಗಿಯು ಗಾರುಡಿಗನ ಸಮಕ್ಷಮದಲ್ಲಿ ಸರ್ಪವು ಹೇಗೋ ಹಾಗೆ ಅವನನ್ನು ಅವನತಮುಖನನ್ನಲ್ಲದೆ ಮೌನಿಯಾಗಿ ಅವಳ ಹಿಂದೆ ಸುಗ್ರೀವನಲ್ಲಿಗೆ ಹೊಗಿಸುತ್ತದೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡೇ ಭೋಜನು ತೀವ್ರ ದುಃಖ ನಿಮಗ್ನ ತಾರೆಯ ಬಿಸಿಯುಸಿರು ಅಪ್ರತಿಹತ ರಾಮನ ಹೃದಯವನ್ನು ತಟ್ಟುವಂತೆ ಮಾಡಿ ಆ ವೀರ ವರನನ್ನೂ ಮೌನಿಯಾಗಿಸುತ್ತಾನೆ. ಭೋಜನೇ ಹೇಳುವಂತೆ 'ಏವಂ ವಿಲಪಂತ್ಯಾ ಹಾರಾಯಿತಾಶ್ರು ಧಾರಾಯಾಸ್ತಾರಾಯಾಃ ಪರಿದೇವನರವೈಃ ಬಾಷ್ಪಾಂಬುಕಣಾಭ್ಯುಕ್ಷಣೈಃ ಅಕ್ಷೀಣೈಃ ನಿಶ್ವಾಸಾನಿಲೈಶ್ಚ ಕೃತಾಶ್ವಾಸ ಇವ' ಲಬ್ಧಿಸಂಜ್ಞನಾದನಂತೆ ವಾಲಿ. ತನ್ನ ಪತ್ನಿಯ ಇಂತಹ ಅಭಿಮಾನಪೂರಿತ ಮಾತುಗಳನ್ನು ಕೇಳಿಯೂ ಅಭಿಮಾನ ಪರಾಕ್ರಮಿ ವಾಲಿಯು ಮತ್ತೂ ವಿಸಂಜ್ಞನಾಗಿರಲು ಸಾಧ್ಯವೇ?

---

## ಜಿ. ಪಿ. ರಾ

ಕನ್ನಡದ ನುಡಿಗೊಂದು
ಹೊಸ ರಂಗುತಂದ
ವಿಶ್ವಮಾತೆಯ ಮುಡಿಗೆ
ಹೂವಾಗಲೆಂದ

—ಚಂದ್ರಶೇಖರ ತಾಳ್ಯ

# ಶಾಸನದಲ್ಲಿ ಪಂಪನ ಆದಿಪುರಾಣದ ಒಂದು ಪದ್ಯ

ಎಂ. ಎಂ. ಕಲಬುರ್ಗಿ

ಪಂಪನ ತಮ್ಮ ಜಿನವಲ್ಲಭನಿಗೆ ಸಂಬಂಧಿಸಿದ ಶಾಸನವೊಂದನ್ನು ಗಂಗಾಧರಂ ಗ್ರಾಮದಲ್ಲಿ ಶೋಧಿಸಿದ ಡಾ|| ವೆಂಕಟರಮಣಯ್ಯನವರು ಪಂಪನಿಗೇ ಸಂಬಂಧಿಸಿದ ಶಾಸನವೊಂದನ್ನು ವೃಷಭಾದ್ರಿ[೧]ಯಲ್ಲಿ ಶೋಧಿಸುವ ಪ್ರಯತ್ನ ನಡೆಸಿರುವರೆಂದು ತಿಳಿದುಬಂದಿದೆ. ಹೀಗೆ ಒಂದು ಶಾಸನವನ್ನು ಹುಡುಕಿ ಇನ್ನೊಂದು ಶಾಸನವನ್ನು ಹುಡುಕುತ್ತಿರುವ ಈ ಪ್ರಸಂಗದಲ್ಲಿ ಶಾಸನೋಕ್ತವಾದ ಪಂಪನ ಆದಿಪುರಾಣದ ಪದ್ಯವೊಂದನ್ನು ಗುರುತಿಸಿ ಕೊಡುವುದು ಈ ಲೇಖನದ ಉದ್ದೇಶವಾಗಿದೆ.

ರನ್ನನ ಅಜಿತಪುರಾಣದ ಕೆಲವು ಪದ್ಯಗಳು ಲಕ್ಕುಂಡಿ ಶಾಸನದಲ್ಲಿ, ನಾಗಚಂದ್ರನ ಪಂಪರಾಮಾಯಣದ ಕೆಲವು ಪದ್ಯಗಳು ಬಿಜಾಪುರ ಮತ್ತು ಶ್ರವಣಬೆಳ್ಗೊಳ ಶಾಸನಗಳಲ್ಲಿ ಸ್ಥಾನ ಪಡೆದ ಸಂಗತಿ ಸರ್ವಶ್ರುತ. ಇದೇ ರೀತಿಯಲ್ಲಿ ಪಂಪನ ಆದಿಪುರಾಣದ ಪದ್ಯ (೧-೧೫) ವೊಂದು ಹಾಸನ ಜಿಲ್ಲೆಯ ಬೇಲೂರ ಗ್ರಾಮದ 'ಆದಿನಾಥಬಸ್ತಿಯ ಗರ್ಭಾಂಕಣದ ಬಾಗಿಲುವಾಡದ ಮೇಲಿನ ಶಾಸನ'ದಲ್ಲಿ ಕಂಡುಬರುತ್ತದೆ. E.C. XV ಪುಟ ೮೭. ನಂಬರ ೩೩೫ರಲ್ಲಿ ಪ್ರಕಟವಾದ ಈ ಶಾಸನದ ಕಾಲ ಕ್ರಿ. ಶ. ೧೧೩೮.

ಶಾಸನದ ಪ್ರಾರಂಭದಲ್ಲಿ ಸ್ತುತಿ, ಆಶೀರ್ವಾದ ರೂಪದ ಮಂಗಳ ಪದ್ಯಗಳನ್ನು ಬರೆಯುವುದು ಸರ್ವಸಾಮಾನ್ಯ ಪದ್ಧತಿ. ಪ್ರಸ್ತುತ ಬೇಲೂರ ಶಾಸನದಲ್ಲಿ ಪಂಪನ ಆದಿಪುರಾಣದಿಂದ ಆಶೀರೂಪದ ಮಂಗಲ ಪದ್ಯವೊಂದನ್ನು ಬಳಸಿಕೊಳ್ಳಲಾಗಿದ್ದು, ಅದು ಕೆಳಗಿನಂತಿದೆ.

ಮುನಿಜನದೋದಿಸಿದೋಜೆ**ಯು** |
**ಲನು**ವದಿಪುದಿದೊಂದೆ ಕೊಣ್ಡಕುಂದಾನ್ವಯ ನ |
ನ್ದನವನ ಶುಕವೆಂದೆನಗಿನಿ |
**ತನನುಗ್ರಹಂ** ಗೆಯ್ಗೆ ಕರುಣದಿಮ್ಮುನಿ ನಿವಹಂ |

ಈ ಪದ್ಯ ಆದಿಪುರಾಣದಲ್ಲಿ ಹೀಗೆ ಬರುತ್ತದೆ.

ಮುನಿಜನದೋದಿಸಿದೋಜೆ**ಯೊ** |
**ಳನು**ವದಿಪುದಿದೊಂದೆ ಕೊಣ್ಡಕುಂದಾನ್ವಯ ನಂ |
ದನವನ ಶುಕಮೆಂದೆನಗಿನಿ |
**ತನುಗ್ರಹಂ** ಗೆಯ್ಗೆ ಕರುಣದಿಂ ಮುನಿ ನಿವಹಂ |

ಈ ಎರಡು ಪದ್ಯಗಳಲ್ಲಿ 'ಯಲನು—ಯೊಳನು' ಮತ್ತು 'ತನನುಗ್ರಹಂ—ತನುಗ್ರಹಂ' ಎಂಬೆರಡು ಪಾಠಭೇದಗಳು ಕಂಡುಬರುತ್ತವೆ. ಇವುಗಳಲ್ಲಿ 'ಯಲನು—ಯೊಳನು' ಎಂಬ ಪಾಠ ಭೇದದಿಂದ ಪದ್ಯದ ಅರ್ಥ ಛಂದಸ್ಸು ಪ್ರಾಸಗಳ ವಿಷಯದಲ್ಲಿ ಯಾವ ವ್ಯತ್ಯಾಸವೂ ತೋರಿಬರುವುದಿಲ್ಲ. ಆದರೆ 'ತನನುಗ್ರಹಂ—ತನುಗ್ರಹಂ'ಎಂಬಿವುಗಳಲ್ಲಿ ಶಾಸನ ಪಾಠ ನಕಾರವೊಂದನ್ನು ಹೆಚ್ಚಿಗಿಟ್ಟುಕೊಂಡು ಛಂದೋದೋಷಕ್ಕೊಳಗಾಗಿದೆ. ಇದರಿಂದಾಗಿ ಕಂದದ ನಾಲ್ಕನೆಯ ಚರಣಕ್ಕೆ ಒಂದು ಮಾತ್ರೆ ಅಧಿಕವಾಗಿದೆ. ಆ ಕಾಲದ ಹಸ್ತಪ್ರತಿಯ ಲಿಪಿಕಾರನಿಂದಲೋ, ಶಾಸನದ ಲಿಪಿಕಾರನಿಂದಲೊ ಈ ದೋಷ ಉಂಟಾಗಿರಬೇಕು ಒಟ್ಟಿನಲ್ಲಿ.

(೧) ಕ್ರಿ. ಶ. ೯೪೧ರಲ್ಲಿ ಪೂರ್ಣಗೊಂಡ ಆದಿಪುರಾಣದ ಹಸ್ತಪ್ರತಿ ಕ್ರಿ. ಶ. ೧೧೩೮ರ ಸುಮಾರಿಗೆ ಹಳೇಬೀಡು-ಬೇಲೂರಿನ ಕಡೆ ಪ್ರಸಾರಗೊಂಡಿತ್ತು.

(೨) ಪಂಪನ ಹಸ್ತದಿಂದ ಇಳಿದು ೧೯೭ ವರುಷ ದಾಟಿ ಬರುವಲ್ಲಿ ಆದಕ್ಕೆ ಭಿನ್ನಪಾಠಗಳು ಪ್ರಾರಂಭವಾಗಿದ್ದವು.

(೩) ಶಾಸನದಲ್ಲಿ ಸ್ಥಾನ ಪಡೆಯುವಷ್ಟು ಆ ಕಾವ್ಯದ ಪದ್ಯಗಳು ಜನತೆಯ ಮೆಚ್ಚುಗೆ ಗಳಿಸಿದ್ದವು.

(೪) ಈಗಿನ ಮಟ್ಟಿಗೆ ಪ್ರಾಚೀನತಮ ಮಿತಿಯುಳ್ಳ ಆದಿಪುರಾಣದ ಪದ್ಯವಿದು.

---

೧ ಅರಿಕೇಸರಿಯು ಪಂಪನಿಗೆ ಧರ್ಮಪುರವನ್ನು ದತ್ತಿಯಾಗಿಕೊಟ್ಟ ವಿಷಯುವನ್ನೊಳಗೊಂಡ ಶಾಸನವೊಂದು ವೃಷಭಾದ್ರಿಯಲ್ಲಿದೆಯೆಂದು ಜಿನವಲ್ಲಭನ ಗಂಗಾಧರಂ ಶಾಸನದಿಂದ ತಿಳಿದು ಬರುತ್ತದೆ.

# ವಿಮರ್ಶನರಂಗ

**ದೇವಗಂಗೆ: ಪಂಡಿತರತ್ನಂ ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ ಪ್ರಶಸ್ತಿ ಗ್ರಂಥ ; ಪ್ರಕಾಶಕರು : ಬಿ. ಶಿವಮೂರ್ತಿಶಾಸ್ತ್ರಿಗಳವರ ಷಷ್ಟ್ಯಬ್ದಿ ಶಾಂತಿ ಸಮಾರಂಭ ಸಮಿತಿ, ಬೆಂಗಳೂರು–೨ ; ಕ್ರೌನ್ ೧/೪ ಪುಟಗಳು ೬೧೨+೭೦ ; ಬೆಲೆ ರೂ. ೩೦.**

ಪಂಡಿತರತ್ನಂ, ಕೀರ್ತನಾಚಾರ್ಯ, ಕೀರ್ತನಕೇಸರಿ, ಕವಿರತ್ನ, ಕೀರ್ತನ ವಿಚಕ್ಷಣ, ಶಿವಕೀರ್ತನ ಕವಿರಾಜ, ವಿಮರ್ಶನಾಚಾರ್ಯ, ವಿದ್ಯಾವಾರಿಧಿ, ಕರ್ಣಾಟಕ ಕವಿ ಭೂಷಣ, ಸಮಾಜ ಭಾಸ್ಕರ, ಪದ್ಮಶ್ರೀ. ಮೊದಲಾದ ಅನೇಕ ಬಿರುದು ಗೌರವಗಳನ್ನು ಸಂಪಾದಿಸಿ ಅರಮನೆ ಗುರುಮನೆಗಳಿಂದ ಗೌರವವನ್ನು ಪಡೆದು ಒಂಭತ್ತು ವರ್ಷಗಳ ಕಾಲ ಸಾಹಿತ್ಯ ಪರಿಷದಧ್ಯಕ್ಷರಾಗಿದ್ದು ಕನ್ನಡ ನಿಘಂಟು ಸಮಿತಿ, ವಿಶ್ವಕೋಶ ಸಮಿತಿ, ರಾಜ್ಯ ಅಕಾದಮಿ ಮೊದಲಾದ ಪ್ರಮುಖ ಸಂಸ್ಥೆಗಳ ಸದಸ್ಯರಾಗಿದ್ದುಕೊಂಡು ಸ್ವತಂತ್ರ ಕರ್ಣಾಟಕವೆಂಬ ವಾರ ಪತ್ರಿಕೆಯನ್ನು ನಡಸುತ್ತಿದ್ದು, ಶರಣಸಾಹಿತ್ಯಮಾಸ ಪತ್ರಿಕೆಯನ್ನೂ ಮೂವತ್ತು ವರ್ಷಗಳ ಕಾಲ ನಡಸಿಕೊಂಡು ಬಂದು, ಕರ್ಣಾಟಕ ಏಕೀಕರಣಕ್ಕಾಗಿ ದುಡಿದವರೂ ಸಾಹಿತ್ಯದ ವಿವಿಧ ಪ್ರಕಾರಗಳ ಹದಿನೈದು ಗ್ರಂಥಗಳನ್ನು ಬರೆದು, ಇಪ್ಪತ್ತು ಸಂಪಾದಿತ ಗ್ರಂಥಗಳನ್ನು ಪ್ರಕಟಿಸಿ, ಪ್ರಮುಖ ಪತ್ರಿಕೆಗಳಿಗೆ ಧರ್ಮ, ಸಾಹಿತ್ಯ, ಸಂಶೋಧನೆ, ವಿಮರ್ಶೆ ಮೊದಲಾದ ವಿವಿಧ ವಿಷಯಗಳ ನೂರಾರು ಲೇಖನಗಳನ್ನು ಬರೆದು, ಆಲೂರು ವೆಂಕಟರಾಯರಿಂದ ಹಿಡಿದು ನವಪೀಳಿಗೆಯ ನವಸಾಹಿತಿಗಳವರೆಗೂ, ಸರ್ ಎಂ. ವಿಶ್ವೇಶ್ವರಯ್ಯನವರಿಂದ ಹಿಡಿದು ಇಂದಿನ ಮಂತ್ರಿಮಂಡಲದ ರಾಜಕೀಯ ಧುರೀಣರವರೆಗೂ ಚಿರಪರಿಚಿತರಾಗಿ, ಅರವತ್ತೈದರ ವಯಸ್ಸು ದಾಟಿದರೂ 'ಕಾಯಕವೇ ಕೈಲಾಸ'ವೆಂದು ತರುಣರಂತೆ ಉತ್ಸಾಹದಿಂದ ಶ್ರದ್ಧೆಯಿಂದ ಕನ್ನಡ ನಾಡುನುಡಿಗಳ ಸೇವೆ ಮಾಡುತ್ತಾ ಜಾತಿಮತಗಳ ಭೇದವಿಲ್ಲದಂತೆ ಕೇಳಿದವರ ಸಹಾಯಕ್ಕೆ ಒದಗಿ, ಸ್ನೇಹಪರರಾಗಿ, ಕನ್ನಡ ಸಂಸ್ಕೃತ ತೆಲುಗು ತಮಿಳು ಭಾಷೆಗಳ ಪಾಂಡಿತ್ಯದಿಂದಲೂ ಇಂಗ್ಲಿಷು ಹಿಂದಿ ಭಾಷೆಗಳ ವ್ಯವಹಾರ ಜ್ಞಾನದಿಂದಲೂ ಸ್ಫೂರ್ತಿಗೊಂಡು ಅವಿರತವಾಗಿ ಸಾಹಿತ್ಯ ಸೇವೆ ಮಾಡುತ್ತಿರುವ ಬಸವಯ್ಯಸ್ವಾಮಿ ಶಿವಮೂರ್ತಿಗಳ ಷಷ್ಟ್ಯಬ್ದಿ ಸಮಾರಂಭವನ್ನು 'ದೇವಗಂಗೆ' ಯಂತಹ ಬೃಹತ್ ಪ್ರಶಸ್ತಿ ಗ್ರಂಥದ ಪ್ರಕಟನೆಯಿಂದ ಸ್ಮರಿಸುವಂತೆ ಮಾಡಿರುವ ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಷಷ್ಟಿಪೂರ್ತಿ ಶಾಂತಿ ಸಮಾರಂಭ ಸಮಿತಿಯವರಿಗೆ ಕನ್ನಡಿಗರು ಕೃತಜ್ಞತೆಯನ್ನರ್ಪಿಸುವುದು ಆವಶ್ಯಕವಾಗಿದೆ. ಇದರ ಒಂದು ಭಾಗದಲ್ಲಿ ಮೇಲೆ ಸೂಚಿತವಾಗಿರುವ ಶ್ರೀ ಶಾಸ್ತ್ರಿಗಳ ವಿವಿಧ ಮುಖಗಳ ವ್ಯಕ್ತಿತ್ವದ ಪರಿಚಯವಾಗುತ್ತದೆ- ಅರಮನೆ ಗುರುಮನೆಗಳವರೂ ಮಿತ್ರರೂ ಅವರಿಗೆ ಶುಭವನ್ನು ಕೋರಿ, ಅವರ ಸೇವೆಯನ್ನು ಸ್ಮರಿಸಿದ್ದಾರೆ. ಮುಂದಿನ ಪೀಳಿಗೆಯವರಿಗೆ ಇದು ತುಂಬಾ ಪ್ರಯೋಜಕವಾಗಿರುತ್ತದೆ.

ಈ 'ದೇವಗಂಗೆ'ಯ ಇನ್ನೊಂದು ಭಾಗದಲ್ಲಿ ನಾನ್ನೂರು ಪುಟಗಳಿಗೂ ಮೀರಿದಷ್ಟು ಆಲ ವಿದ್ವಾಂಸರ ವಿದ್ವತ್ಪೂರ್ಣವಾದ ಲೇಖನಗಳಿವೆ. ಡಾ|| ಮುಗಳಿಯವರಿಂದ ಹಿಡಿದು ಜ. ಚ. ನಿ. ಸ್ವಾಮಿಗಳವರೆಗೆ, ಸಕಲ ಸಾಹಿತ್ಯ ಪ್ರಕಾರಗಳನ್ನು ಕುರಿತ, ಪ್ರಾಚೀನ ಅರ್ವಾಚೀನ ಕನ್ನಡ ಸಾಹಿತ್ಯ ಗ್ರಂಥಗಳನ್ನು ಕುರಿತ ಕತೆ, ಕವಿತೆ, ನಾಟಕ, ಅಲಂಕಾರ, ಛಂದಸ್ಸು, ಶಾಸನ, ಇತಿಹಾಸ ಇವುಗಳ ಬಗ್ಗೆ ವಿಮರ್ಶಾತ್ಮಕವಾದ ಲೇಖನಗಳು 'ದೇವಗಂಗೆ'ಯ ಪ್ರವಾಹವನ್ನು ಹರಿಸಿ ಸಾಹಿತಿಗಳಿಗೆ ರಸದೌತಣವನ್ನು ಉಣಿಸಿವೆ. ಪ್ರಶಸ್ತಿ ಗ್ರಂಥಗಳು ಹಿರಿಯ ಸಾಹಿತಿಗಳನ್ನು ಕನ್ನಡ ಜನಕ್ಕೆ ಪರಿಚಯ ಮಾಡಿಕೊಡುವುದಲ್ಲದೆ ಹಿರಿಯ ಸಮಕಾಲೀನ ಸಾಹಿತಿಗಳಿಂದ ಉತ್ತಮ ಲೇಖನಗಳನ್ನೂ ಬರೆಸಿ ಸಾಹಿತಿಗಳ ಸಾಹಿತ್ಯಾಭ್ಯಾಸಕ್ಕೆ ಸಹಾಯವಾಗುವ ಹಾಗೂ ಕೆಲ ಕಾಲ ನಿಲ್ಲುವ ಸಾಹಿತ್ಯದ ಕೊಡುಗೆಯನ್ನೂ ನೀಡುತ್ತವೆ. ಶ್ರೀ ಶಿವಮೂರ್ತಿಶಾಸ್ತ್ರಿಗಳ ತುಂಬು ಜೀವನದ ನೆನಪಿನ ದೃಷ್ಟಿಯಿಂದಲೂ ಮತ್ತು ಸಾಹಿತ್ಯ ಸೇವೆಯ ದೃಷ್ಟಿಯಿಂದಲೂ 'ದೇವಗಂಗೆ' ಎಲ್ಲ ಕನ್ನಡಿಗರ ಮನೆ ಗ್ರಂಥ ಭಂಡಾರಗಳಲಂಕರಿಸಲು ತಕ್ಕುದಾಗಿದೆ. ಆದರೆ ಶ್ರೀ ಶಾಸ್ತ್ರಿಗಳ ವ್ಯಕ್ತಿತ್ವದಂತೆಯೇ ದಪ್ಪ ಅಕ್ಷರಗಳ ದಪ್ಪ ಪುಸ್ತಕವಾದ ದೇವಗಂಗೆ ಮುದ್ರಣ ದೋಷಗಳಿಂದಲೂ ದೂರವಾಗಿರಬಹುದೆನಿಸುತ್ತದೆ.

**ಕೈವಾರ ರಾಜಾರಾವ್**

**ಮಾನಸಗಳ್ಳಿ : ಲೇ : ಶಾಂತರಸ ; ಪ್ರ : ಸತ್ಯಸ್ನೇಹ ಪ್ರಕಾಶನ, ರಾಯಚೂರು ; ಬೆಲೆ ೩-೦೦ ; ಪುಟ ೮೦.**

ನಾಟಕಗಳ ಮೂಲಕ ಪರಿಚಿತರೆನಿಸಿದ ಶಾಂತರಸರು ಕವಿಗಳಾಗಿ 'ಮಾನಸಗಳ್ಳಿ'ಯನ್ನು ಓದುಗರ ಮುಂದಿಟ್ಟಿದ್ದಾರೆ. ಈ ಸಾಹಿತ್ಯ ಪ್ರಕಾರದಲ್ಲಿ ಇದು ಅವರ ಪ್ರಥಮ ಪ್ರಯತ್ನ. 'A poet should always be a realist'

ಎಂಬಂತೆ ಶಾಂತರಸರು ತಮಗೆ ಅನಿಸಿದ್ದನ್ನು ಪ್ರಾಮಾಣಿಕವಾಗಿ ಮೂಡಿಸುವ ಪ್ರಯತ್ನವನ್ನು ಮಾಡಿದ್ದಾರೆ.

ಈ ಸಂಕಲನದಲ್ಲಿ ಮನಸೆಳೆಯುವ ಕವನಗಳು ಕೆಲವೇ ಆದರೂ ಅಲ್ಲಿನ ಚಿಂತನೆ, ಭಾವ, ಭಾಷೆ, ಮೆಚ್ಚುವಂತಹುದು. ಬಹಳಷ್ಟು ಪದ್ಯಗಳು ನಮ್ಮ ಮನಸೆಳೆಯದಿದ್ದರೂ ಕೆಲವೊಂದು ಕವನಗಳು ಅವರ ಕವಿಶಕ್ತಿಯ ಪ್ರತೀಕಗಳಾಗಿವೆ.

'ಚಿಮಣಿ' ಮೂರೆತಾಸು ಬದುಕುವ ಆ ಬೆಳಕು ಬಾಳಿನ ಇತಿಹಾಸದ ಸಂಕೇತ. ಜನತೆಯಲ್ಲಿನ ಅಂಧಕಾರವನ್ನು ನೀಗುವ ಭವ್ಯಸಾಕಾರ-ಮನೆಯವರ ಚಿಂತಾಮಣಿಯಾಗಿದೆ. ಹಾಗೆಯೆ ಮನುಜ ಬಾಳು ಗಾಳಿಪಟದಂತೆ. ಗಾಳಿ ರುದ್ರ-ಗಂಭೀರ-ಭಯಂಕರವಾದರೂ ರಮ್ಯ-ಮೋಹಕ. ಅದು ದಿಟ್ಟಿಸುವ ದೃಷ್ಟಿಯಲ್ಲಿ ಏನಿದೆಯೆಂದು ಹೇಳಲಾಗದಷ್ಟು ಗೂಢ-ಆ ನೋಟ. ಮಾನವನನ್ನು ಗಿಳಿ ಮಾಡಿ ಮುಂಗೈ ಮೇಲೆ ಆಡಿಸುವುದೆಂಬಂಶವನ್ನು ಸ್ಪಷ್ಟಗೊಳಿಸಿದ್ದಾರೆ, 'ಯಾವ ಮದ್ದಿನಿಂದೇನು' ಕವನದಲ್ಲಿ. ಕವಿಸೂರ್ಯೋದಯವನ್ನು ಕಂಡಿರುವ ರೀತಿ ಹೊಸದು. ಕಾಗೆಯ ಧ್ವನಿ-ಅತಿಥಿಯಾಗಮನದ ಪ್ರತೀಕವೆಂಬ ನಂಬಿಗೆಯ ಆಧಾರದ ಮೇಲೆ ಹೊಸ ದಿನದ ಒಸಗೆ ಹೇಳುವ ಈ ಅತಿಥಿ (ಸೂರ್ಯ-ಉದಯವನ್ನು ಕುರಿತು ಸೊಗಸಾದ ಕಲ್ಪನೆ. 'ಆವ ಅತಿಥಿಯು ಬರುವನಿಂದೆನ್ನ ಮನೆಗೆ' ಕನನದಲ್ಲಿದೆ. ಮನಸ್ಸಿನಲ್ಲಿ ಮೂಡಿಬರುವ ರಾಗ-ದ್ವೇಷ; ನೋವು-ನಲಿವುಗಳ ಸ್ಪಷ್ಟ ಚಿತ್ರ 'ಮಾನಸಗಳ್ಳಿ' ಕವನದಲ್ಲಿದೆ.

ಒಟ್ಟಿನಲ್ಲಿ ಈ ಕವನ ಸಂಕಲನದಲ್ಲಿ ಸತ್ವವಿದೆ. ಲಯಬದ್ಧ ನಿರೂಪಣೆಯಿದೆ. ಒಳ್ಳೆ ಕವಿಗಳಾಗುವ ಸೂಚನೆಯಿದೆ.

* * *

**ನಂದಿಕೋಲು :** ಲೇ : ಚಂದ್ರಕಾಂತ ಕುಸುನೂರು ; ಪ್ರ : ಸತ್ಯಸ್ನೇಹ ಪ್ರಕಾಶನ, ರಾಯಚೂರು. ಬೆಲೆ ಎರಡು ರೂಪಾಯಿ. ಪುಟ ಎಂಬತ್ತಾರು.

ಚಂದ್ರಕಾಂತ ಕುಸುನೂರರ ಮೊದಲ ಕವನ ಸಂಕಲನ 'ನಂದಿಕೋಲು'. ಈ ಹೆಸರನ್ನು ಸೂಚಿಸುವ ಕವನವೊಂದು ಈ ಸಂಕಲನದ ಕೊನೆಯಲ್ಲಿದೆ. ಕನ್ನಡ ಕಾವ್ಯ ತೇರಿನ ಮುಂದೆ ಉತ್ಸಾಹವೇರಿ-ಆಕಾಶ ತೂರಿ-ಹೊಸತಾಳ ತಂತಿ ಲಯಗಳಿಂದ ಕುಣಿವ ಕೋಲೆ ಇದು ಎಂದು ಭಾವಿಸಿ ಈ ಕೃತಿಗಿಟ್ಟಿರುವ ಹೆಸರನ್ನು ಸಾರ್ಥಕಗೊಳಿಸುವ ಪ್ರಯತ್ನ ನಡೆಸಿದ್ದಾರೆ. ಈ ಸಂಕಲನದಲ್ಲಿನ ವಿಚಾರ ಧಾರೆ ತೀಕ್ಷ್ಣವಾದದ್ದು. ಗಂಭೀರವೂ ಹೌದು. ಅತಿ ಆಧುನಿಕ ಸಂವೇದನೆ ಇಲ್ಲಿದೆ. ಅವರೇ ಹೇಳುವಂತೆ 'ಉಸಿರು ಕಟ್ಟಿಸುವ ವಾತಾವರಣದಲ್ಲಿ ಜೀವಿಸಲು ಹೇಸಿ ಹೊಸ ಸ್ಥಳವನ್ನು ಹುಡುಕುವುದು ಮಾನವ ಸ್ವಭಾವ, ಅದರಂತೆ ಆ ಹೊಸತನವನ್ನು ಹುಡುಕಲು ದಿಟ್ಟ ಹೆಜ್ಜೆ ಇಟ್ಟಿದ್ದಾರೆ ಕುಸುನೂರುರವರು.

ಇಂದಿನ ಸಮಾಜದ ನೈಜ ಚಿತ್ರ ಮೂಡಿ ಅಲ್ಲಿನ ನಗ್ನ ಸತ್ಯವನ್ನು ಹೊರತರುವ ಸಾಹಸ ಮಾಡಲಾಗಿದೆ. ಮಾನವ ಬಾಳು ಶವದಂತೆ. ಮನುಷ್ಯ ತನ್ನ ಶವವನ್ನು ತನ್ನ ಹೆಗಲ ಮೇಲೆ ಹಾಕಿಕೊಂಡು ಹೊರಟಿದ್ದಾನೆ. ಎಲ್ಲಿಗೆಂದು ಗೊತ್ತಿಲ್ಲ. ಅಲ್ಲದೆ—

" ಬತ್ತಳಿಕೆಯಲಿ-
ಕೆಲವು ಮುರುಕ-
ಬಾಣಗಳಿಟ್ಟುಕೊಂಡು
ಬೇಟೆಗೆ ಹೋಗುತ್ತಿರುವ-
ತಿರಕ ಸೂರ್ಯ . . . "

ನಂತೆ ಇಲ್ಲಿನ ಜೀವನ ಧ್ಯೇಯ. ಸಮಾಜದಲ್ಲಿರುವ ಅಂಧಾನುಕರಣೆ, ಅಶ್ಲೀಲತೆಯ ವಿಡಂಬನೆ, ಟೀಕೆ ಸಾಕಷ್ಟು ಇದೆ. ನಿಸ್ತೇಜ, ನಿರ್ಜೀವ ವ್ಯಕ್ತಿಯಾಗಿ ಮಾನವ ಬದುಕುತ್ತಿರುವ ಕಠೋರ ಸತ್ಯಪ್ರದಿಪಾದನೆ ಆಗಿದೆ. 'ಕಾಲಚಕ್ರ' 'ನಾನೇಕೆ ಬದುಕಿರುವೆ?' ಈ ನಿಡಿದಾದ ಕವನಗಳಲ್ಲಿ ಸಮಾಜದಲ್ಲಿನ ಕೊಳಕು ಅದನ್ನು ನಿವಾರಿಸುವ ಶಕ್ತಿ ಇದ್ದರೂ ನಿಶ್ಚಿಂತೆಯಿಂದ ಬದುಕುವ ಬುದ್ಧಿಜೀವಿಗಳ ಟೀಕೆ ನಡೆದಿದೆ. ಪುರಾಣದಲ್ಲಿ ಬರುವ ಅಂಶಗಳನ್ನು ಬಳಸಿಕೊಂಡು ಇಂದಿನ ಸಮಾಜ ಚಿತ್ರ ಸ್ಪಷ್ಟಗೊಳಿಸಿದ್ದಾರೆ. ಜನತೆಯ ಬಾಳು 'ಗಾಂಧಾರಿಯ ಅಂಧಕಾರ'ದಂತಾಗಿದೆ. ಬಯಸಿ ಬೇಡಿಕೊಂಡ ಕುರುಡುತನ ಇಲ್ಲಿದೆ. 'ಊರು ಕೊಳ್ಳೆ ಹೋದ ಮೇಲೆ ಬಾಗಿಲು ಹಾಕಿದರಾಯ್ತೆ' ಎಂಬಂತೆ ಯುಗ ಯುಗಗಳಲ್ಲಿಸಂಭವಿಸುವ ಭಗವಂತನನ್ನು ಟೀಕಿಸಿದ್ದಾರೆ.

ಒಟ್ಟಿನಲ್ಲಿ ಕೆಲವೊಂದು ಕವನಗಳು ನೀರಸವೆನಿಸಿದರೂ ಶಕ್ತಿಯುತವಾದ ಚಿಂತನೆ, ಅಭಿವ್ಯಕ್ತಿ ಹೊಂದಿರುವ ಕವಿಗಳೆಂದು ಮನಸ್ಸಿಗೆ ಮೆಚ್ಚಾಗುತ್ತಾರೆ ಕುಸುನೂರು.

**ಆರ್. ರಾಚಪ್ಪ**

# ಜ್ಞಾನಪೀಠ–ಬಹುಮಾನ

ಶ್ರೀ ಶಾಂತಿಪ್ರಸಾದ ಜೈನ್ ಅವರು ಇಂದಿಗೆ ಸುಮಾರು ಇಪ್ಪತ್ತೈದು ವರುಷಗಳ ಹಿಂದೆ ಜ್ಞಾನಪೀಠವನ್ನು ಧರ್ಮದರ್ಶಿಗಳ ಆಶ್ರಯದಲ್ಲಿ ನಡೆಯುವ ಒಂದು ಸಂಸ್ಥೆಯನ್ನಾಗಿ ಸ್ಥಾಪಿಸಿ ಮಹಾಕಾರ್ಯವನ್ನು ಮಾಡಿದ್ದಾರೆ. ಈ ಸಂಸ್ಥೆಗೆ ಭಾರತೀಯ ಸಾಹಿತ್ಯ ಮತ್ತು ಭಾರತ ಸಂಸ್ಕೃತಿ ಇವುಗಳ ಅಭಿವೃದ್ಧಿ ಪ್ರಚಾರಗಳು ಮುಖ್ಯ ಉದ್ದೇಶಗಳಾಗಿವೆ. ಭಾರತದ ಅನೇಕ ಭಾಷೆಗಳಿಂದ ಪರಸ್ಪರ-ಸ್ನೇಹವು ಬೆಳೆದು ಭಾರತದ ಸರ್ವತೋಮುಖವಾದ ಬೆಳವಣಿಗೆಯಾಗಲೆಂಬ ದೃಷ್ಟಿಯಿಂದ, ಈಚೆಗೆ ಐದು ವರ್ಷಗಳ ಹಿಂದೆ, ಭಾರತದಲ್ಲಿ ಪ್ರಕಟವಾದ ಆಯಾ ವರ್ಷದ ಅತ್ಯುತ್ತಮ ಕೃತಿಗೆ ಪ್ರತಿವರ್ಷವೂ ಒಂದುಲಕ್ಷ ರೂಪಾಯಿಗಳ ಬಹುಮಾನವನ್ನು ಕೊಡುವ ಯೋಜನೆಯನ್ನು ಈ ಸಂಸ್ಥೆಯು ಹಾಕಿಕೊಂಡಿದೆ. ಬಂಗಾಳಿ, ಮಲಯಾಳ, ಗುಜರಾತಿ, ಕನ್ನಡ – ಮುಂತಾದ ಭಾಷೆಗಳ ಗ್ರಂಥಗಳಿಗೆ ಈ ಬಹುಮಾನ ಬಂದಿದೆ. ಈ ವರ್ಷ ಕನ್ನಡದ ಹಿರಿಯಕವಿ ಕೆ. ವಿ. ಪುಟ್ಟಪ್ಪನವರಿಗೆ ಈ ಬಹುಮಾನವು ಬಂದುದು ಕನ್ನಡಿಗರಿಗೆಲ್ಲ ಆನಂದದಾಯಕವಾದ ವಿಚಾರವಾಗಿದೆ.

ಜ್ಞಾನಪೀಠದ ಈ ಬಹುಮಾನ ವಿತರಣೆ ದೆಹಲಿಯಲ್ಲಿ ನಡೆದು ಭಾರತದಲ್ಲೆಲ್ಲ ಕನ್ನಡದ ಹಿರಿಮೆ ಮೆಚ್ಚುಗೆಯನ್ನು ಗಳಿಸಿದೆ. ಪ್ರತಿವರ್ಷವೂ ಬಹುಮಾನ ಪಡೆಯುವ ಕೃತಿಯನ್ನು ಭಾರತದ ಇತರ ಭಾಷೆಗಳಿಗೆಲ್ಲ ಅನುವಾದಮಾಡುವ ಕಾರ್ಯವನ್ನೂ ಕೈಕೊಳ್ಳುವುದು ಸಾಧ್ಯವಾದರೆ ಭಾರತದ ಭಾಷಾಬಾಂಧವ್ಯಕ್ಕೆ ಮತ್ತಷ್ಟು ಪುಷ್ಟಿ ದೊರೆಯುತ್ತದೆ.

ಡಾ. ಎ. ಎನ್. ಉಪಾಧ್ಯೆಯವರ ನೇತೃತ್ವದಲ್ಲಿ, ಜ್ಞಾನಪೀಠದ ಆಶ್ರಯದಲ್ಲಿ ಕನ್ನಡದ ಪ್ರಾಚೀನ ಜೈನ ಗ್ರಂಥಗಳ ಹೊಸ ಸಂಪಾದನ ಕಾರ್ಯವು ಮುಂದುವರಿಯುತ್ತಿದೆ. ಈ ಸಂಪಾದನ ಕಾರ್ಯದಲ್ಲಿ ಕನ್ನಡದ ಅನೇಕ ವಿದ್ವಾಂಸರು ನಿರತರಾಗಿದ್ದಾರೆ. ಪಾಮರರಿಗೂ ಅರ್ಥವಾಗುವಂತೆ ಪ್ರಾಚೀನ ಕನ್ನಡ ಗ್ರಂಥಗಳ ಪದ್ಯಗಳಿಗೆ ಅದೇಪುಟದ ಕೆಳಭಾಗದಲ್ಲಿ ಸರಳ ಗದ್ಯದಲ್ಲಿ ಅರ್ಥವಿವರಣೆಯನ್ನು ಕೊಡುವ ಏರ್ಪಾಟಾಗಿದೆ. ಇದರಿಂದ ಜನಸಾಮಾನ್ಯರಿಗೆ ಬಹಳ ಪ್ರಯೋಜನವುಂಟು.

ಪಾಶ್ಚಾತ್ಯರಲ್ಲಿ ನೊಬೆಲ್ ಬಹುಮಾನಕ್ಕೆ ಮಹಾಮನ್ನಣೆಯಿದೆ. ಆ ಮನ್ನಣೆಗೆ ಅರ್ಹವಾಗಬೇಕಾದರೆ ಇತರ ಭಾಷೆಗಳ ಕೃತಿಗಳು ಇಂಗ್ಲಿಷಿಗೆ ಅನುವಾದವಾಗಿ ಇತರ ಭಾಷೆಗಳವರಿಗೆ ಪರಿಚಯವಾಗಬೇಕು. ಭಾರತದ ಜ್ಞಾನಪೀಠದ ಬಹುಮಾನವೂ ಈ ನೊಬೆಲ್ ಬಹುಮಾನಕ್ಕೆ ಯಾವ ರೀತಿಯಲ್ಲಿ ಕಡಮೆಯಾದುದೇನಲ್ಲ. ಭಾರತದ ಎಲ್ಲ ಭಾಷೆಗಳಲ್ಲೂ ರಚಿತವಾದ ಗ್ರಂಥಗಳಲ್ಲಿ ಮೊದಲ ಸ್ಥಾನವನ್ನು ಆಕ್ರಮಿಸಬಲ್ಲ ಒಂದು ಸಾಹಿತ್ಯ ಕೃತಿಗೆ ವಿಶ್ವದಲ್ಲಿಯೂ ಬಹು ಪ್ರಧಾನ ಸ್ಥಾನವಿರಲೇಬೇಕೆಂಬ ಬಗ್ಗೆ ಯಾರಿಗೂ ಅನುಮಾನಬೇಕಿಲ್ಲ.

ಇಂತಹ ಆತ್ಮಪ್ರತ್ಯಯವನ್ನು ನಮ್ಮ ಜನತೆಗೆ ಒದಗಿಸುವ ಮಹತ್ಕಾರ್ಯಕ್ಕಾಗಿ ಜ್ಞಾನಪೀಠವನ್ನು ನಾವು ಅಭಿನಂದಿಸಬೇಕು.

'ಕುವೆಂಪು' ತಮ್ಮ ಸಾಹಿತ್ಯಕೃತಿಗಳಿಂದ ಕನ್ನಡಕ್ಕೆ ಒಂದು ಎತ್ತರವನ್ನು ತಂದುಕೊಟ್ಟಿದ್ದಾರೆ. ಕವಿ ಚೈತನ್ಯವು ಒಂದು ಬಾಳಿನಲ್ಲಿ ಏನನ್ನು ಸಾಧಿಸಬಹುದೋ ಅದನ್ನೆಲ್ಲ ಸಾಧಿಸಿದ ಅಪರೂಪದ ಮಹಾವ್ಯಕ್ತಿಯಾಗಿ ಅವರು ವಿರಾಜಮಾನರಾಗಿದ್ದಾರೆ. ಅವರು ತಮ್ಮ ಕೃತಿನಿರ್ಮಾಣಶಕ್ತಿಯ ಸಾರ್ಥಕ್ಯವನ್ನು ಕಂಡದ್ದು 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ. ಅದಕ್ಕೆ ಸಂದ ಜ್ಞಾನಪೀಠದ ಬಹುಮಾನವೂ ಸಾರ್ಥಕವಾದಂತಾಗಿದೆ. ಈ ಹಿರಿತನವನ್ನು ಕನ್ನಡಕ್ಕೆ ತರಿಸಿ ಕೊಟ್ಟುದಕ್ಕಾಗಿ 'ನುಡಿ' ಕುವೆಂಪು ಅವರನ್ನು ಅಭಿನಂದಿಸಿ, ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತದೆ.

---

# ಪರಿಷತ್ತಿನ ಸುದ್ದಿಗಳು

**ಪರಿಷತ್ತಿನಲ್ಲಿ ಕಾವ್ಯವಾಚನ**

ದಿನಾಂಕ ೨೦-೧೨-೧೯೬೮ನೆಯ ಶುಕ್ರವಾರ ಸಂಜೆ ಪರಿಷನ್ಮಂದಿರದಲ್ಲಿ ಗಮಕ ವಿದ್ವಾನ್ ಶ್ರೀ ಕೆ.ಎಸ್. ವೆಂಕಟೇಶಯ್ಯನವರು ಜೈಮಿನಿ ಭಾರತದಲ್ಲಿ "ಸೀತಾಪರಿತ್ಯಾಗ"ದ ಭಾಗವನ್ನು ವಾಚನ ಮಾಡಿದರು.

**ಸತ್ಕಾರ ಸಮಾರಂಭ**

ದಿನಾಂಕ ೨೨-೧೨-೧೯೬೮ರ ಭಾನುವಾರ ಮುಂಬಯಿ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಪ್ರಧಾನ ಕಾರ್ಯದರ್ಶಿಗಳಾಗಿದ್ದವರೂ ಮುಂಬಯಿ ಕನ್ನಡಿಗರ ಸಾಹಿತಿಕ ಸಾಂಸ್ಕೃತಿಕ ಅಭಿವೃದ್ಧಿಗಾಗಿ ಅನವರತ ಶ್ರಮಿಸುತ್ತಿರುವವರೂ ಆದ ಶ್ರೀ ವರದರಾಜ ವಿ. ಆದ್ಯ ಅವರನ್ನೂ ಮತ್ತು ವಿದೇಶಕ್ಕೆ ಪ್ರಯಾಣ ಮಾಡಲಿರುವ "ಪ್ರಜಾವಾಣಿ"ಯ ಪ್ರಮುಖ ವರದಿಗಾರರಾದ ಶ್ರೀ ಎಸ್. ವಿ. ಜಯಶೀಲರಾವ್ ಅವರನ್ನ ಪರಿಷತ್ತಿಗೆ ಬರಮಾಡಿಕೊಂಡು ಸತ್ಕರಿಸಲಾಯಿತು.

**ಗಮಕ ಪ್ರವೇಶ ಪರೀಕ್ಷೆಗಳು—೧೯೬೯**

೧೯೬೮-೬೯ನೆಯ ಸಾಲಿನ ಲಿಖಿತ ಭಾಗದ ಗಮಕ ಪ್ರವೇಶ ಪರೀಕ್ಷೆಯನ್ನು ಎಲ್ಲ ಕೇಂದ್ರಗಳಲ್ಲೂ ತಾ|| ೨-೨-೧೯೬೯ನೆಯ ಭಾನುವಾರ ಬೆಳಗ್ಗೆ ೯ ಘಂಟೆಯಿಂದ ೧೧-೩೦ ಘಂಟೆಯವರೆಗೆ ನಡೆಸಲಾಗುವುದು.

**ಗಮಕ ಪ್ರೌಢ ಪರೀಕ್ಷೆಗಳು—೧೯೬೯**

೧೯೬೮-೬೯ನೆಯ ಸಾಲಿನ ಗಮಕ ಪ್ರೌಢ ಪರೀಕ್ಷೆಗೆ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಪರೀಕ್ಷಾ ಶುಲ್ಕವನ್ನು ಆವೇದನ ಪತ್ರದೊಡನೆ ಪರಿಷತ್ತಿಗೆ ಸಲ್ಲಿಸುವ ಅವಧಿಯನ್ನು ೧೯೬೯ನೆಯ ಫೆಬ್ರವರಿ ತಿಂಗಳ ಕೊನೆಯವರೆಗೆ (ಎಂದರೆ ತಾ|| ೨೮-೨-೧೯೬೯ರ ವರೆಗೆ) ಮುಂದುವರಿಸಲಾಗಿದೆ. ಈ ಪರೀಕ್ಷೆಯನ್ನು ನಡೆಸುವ ತಿಂಗಳು ತಾರೀಖು ಮುಂತಾದ ವಿವರಗಳನ್ನು ಮುಂದೆ ತಿಳಿಸಲಾಗುವುದು.

**ಪರಿಷತ್ತಿನ ಆಶ್ರಯದಲ್ಲಿ ನಡೆದ ಸಭೆಗಳು**

ದಿನಾಂಕ ೧೫-೧೨-೧೯೬೮ನೆಯ ಭಾನುವಾರ ಸಂಜೆ ೫ ಘಂಟೆಗೆ ರಾಜಾಜಿನಗರದ ವಿದ್ಯಾವರ್ಧಕ ಸಂಘದಲ್ಲಿ "ಡಾ|| ಆರ್. ಸಿ. ಹಿರೇಮಠ ಅವರ ಕೃತಿಗಳು" ಎಂಬ ವಿಷಯವನ್ನು ಕುರಿತು ಶ್ರೀ ಹಂಪ. ನಾಗರಾಜಯ್ಯನವರು ಉಪನ್ಯಾಸ ಮಾಡಿದರು.

ದಿನಾಂಕ ೨೯-೧೨-೧೯೬೮ನೆಯ ಭಾನುವಾರ ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದಲ್ಲಿ "ಕನ್ನಡಕುಲ ಪುರೋಹಿತ ದಿ|| ಆಲೂರ ವೆಂಕಟರಾಯರ ಸಾಹಿತ್ಯ ಸೇವೆ" ಎಂಬ ವಿಷಯವಾಗಿ ಶ್ರೀ ಮಂಗಳವೇಡೆ ಶ್ರೀನಿವಾಸರಾಯರು ಉಪನ್ಯಾಸ ಮಾಡಿದರು. ಇದು ಗಾಂಧಿ ಸಾಹಿತ್ಯ ಸಂಘದಲ್ಲಿ ನಡೆದ ಕವಿಕೃತಿ ಸ್ಮರಣೆಯ ಉಪನ್ಯಾಸಮಾಲೆಯ ೨೩ನೆಯ ಕಾರ್ಯಕ್ರಮ.

**೧೯೬೯ನೆಯ ಜನವರಿಯಲ್ಲಿ ನಿಯೋಜಿತ ಕಾರ್ಯಕ್ರಮ**

೧. ೨-೧-೧೯೬೯: ಕಾವ್ಯವಾಚನ: ಶ್ರೀ ಎ. ಜಿ. ಜಯರಾಯರಿಂದ ಕುಮಾರವ್ಯಾಸ ಭಾರತದ ಉದ್ಯೋಗ ಪರ್ವದಲ್ಲಿ "ದುರ್ಯೋಧನನ ಗರ್ವಭಂಗ"- ಎಂಬ ಭಾಗ.

೨. ೬-೧-೧೯೬೯: ದಿವಂಗತ ಗಳಗನಾಥರ ಜನ್ಮ ಶತಾಬ್ದಿಯ ಆಚರಣೆ.

ಸಣ್ಣ ಕುಟುಂಬ,
ಸುಖದ ಕುಟುಂಬ
ಎರಡು ಅಥವಾ ಮೂರು ಮಕ್ಕಳು ಸಾಕು.



ಮಿತ ಸಂತಾನ,
ಸುಖ ಸಂಸಾರ
ಎರಡು ಅಥವಾ ಮೂರು ಮಕ್ಕಳು ಸಾಕು.

Reg. No. B. G. 4—January 1969

Licensed to Post without pre-payment, Licence No. 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಬೆಂಗಳೂರು-೧೮

ಸಂಪಾದಕ
ಜಿ. ವೆಂಕಟಸುಬ್ಬಯ್ಯ

ಸಂಪಾದಕ ಮಂಡಲಿ
ಶ್ರೀನಿವಾಸರಾವ್ ಕೊರಟಿ
ಆರ್. ರಾಚಪ್ಪ

# ಕನ್ನಡ ನುಡಿ



ಫೆಬ್ರವರಿ ೧೯೬೯

ಸಂಪುಟ ೩೨
ಸಂಚಿಕೆ ೨

ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ.
ಬೆಂಗಳೂರು-೧೮

# ಕನ್ನಡ ನುಡಿ

‘ಕನ್ನಡ ನುಡಿ’ ಕರ್ಣಾಟಕದ ಗೆಜೆಟಿಯರ್ ಆಗಬೇಕು

—ಬಿ.ಎಂ.ಶ್ರೀ



ಸಂಪುಟ : ೩೨

ಸಂಚಿಕೆ : ೨

ಫೆಬ್ರವರಿ ೧೯೬೯

•

ಈ ಸಂಚಿಕೆಯಲ್ಲಿ . . .



# ಪಿಟೀಲು ಚೌಡಯ್ಯನವರು

ಡಿ. ಲಿಂಗಯ್ಯ

•

ಮೈಸೂರ ನೂರಡಿ ರಸ್ತೆಯಲಿ
ಐದು ಚಿಲ್ಲರೆ ಅಡಿ ಗಾನವಿಹಾರಿ
ತಿರುಗಾಡುತ್ತಿದ್ದುದೊಂದು ಸೊಗಸು ;
ಬೂಟಾಟಿಕೆಯ ಬಹಿರ್ಲೋಕ ಜಂತುಗಳರಿವಿಗೆ
ಬೀಳದೆ ಮೆಲುಕು ಹಾಕುತ್ತಿತ್ತು ‘ ಸಂಗೀತ
ಕಲಾನಿಧಿ ’ಯ ಮನಸು.

ಕೀರ್ತಿ ಗಗನಕ್ಕೇರಿದ್ದರೂ
ಸರಳತೆ ಬೆತ್ತಲೆ ಭೂಮಿಯ ಅಪ್ಪಿತ್ತು :
ಬೆಳ್ಳೂರೆ ಪಂಚೆ ಕಚ್ಚೆ, ಮೈಸೂರು ಸಿಲ್ಕು ಜುಬ್ಬ,
ಬೆನ್ನಡರಿದ ಶಲ್ಯ, ಕಾಲಿಗೆ ಎಕ್ಕಡ . . .
ಇಷ್ಟೆ.

ಪಿಟೀಲು ಪ್ರಯೋಗ
ವೈಜ್ಞಾನಿಕ ಯುಗದತ್ಯಾಧುನಿಕ
ಊಹೆಗತೀತವಾಗಿದ್ದರೂ
ಸಂಪ್ರದಾಯದ ಬೇರು ಬಲವಾಗಿ ಇಳಿದಿತ್ತು :
ಗೌರವರ್ಣದ ಹಣೆಗೆ ಅನಂತಗಾನ ಸಾಮ್ರಾಜ್ಯದ
ಭೂತ ಭವಿಷತ್ ನಾದಪ್ರಪಂಚವನು ವರ್ತಮಾನದಲಿ
ತೋರುವಂತೆ
ವಿಭೂತಿ ಪಟ್ಟೆ ;
ನವನಾಡಿಗಳ ದಿವ್ಯಗಾನ ಮಿಡಿತ ಹೃದಯಕೆ ಕಿವಿಗೊಟ್ಟು
ತೂಗಿದಾಗ ತಲೆ
ಲಕಲಕಿಸುವ ಹತ್ತ ಕಡಕು ;
ಬ್ರಹ್ಮಾಂಡ ಮೋಹನದರಿವು ಮೂಡಿದ ಕಪಾಲದಲಿ
ಕಂಡೂಕಾಣದ ತೊಳೆದೆಳ್ಳಿನ ಕ್ರಾಪು ;
ಒಟ್ಟಿನಲಿ,
ಪರಂಪರೆಯ ಕಲ್ಪವೃಕ್ಷದಲಿ
ಬಾಹ್ಯಾಂತರ್ದೃಷ್ಟಿ ದರ್ಶನಗಳಲಿ

ಟಿಸಿಲೊಡೆದು ಪೂತ ಹೂವರಳಿ ನಿಂತ ಅಪರೂಪ ಫಲ ;
ಅನಂತಾನಂದನಾದಲೋಲರ ಭಾವನೆಗೆ ಬಾಳುವೆಗೆ
ತಾವಿತ್ತನಾಡಿನಲಿ ಅನುಪಮ ತಂತಿ ಮಿಡಿದ ಕನ್ನಡಿಗ.

ಸಂಭಾವಾಭಿವ್ಯಕ್ತತೆಯ ಪ್ರಪ್ರಕಾಶಕೆ
ನಾಕು ಹಿಂದುಳಿದು ತಂತಿ
ಭಾವ ಹಾರಿತು ಒಂಬತಕೆ,
ಲಭಿಸಿತು ಗಾನ ಸುಧಾ
ಭವ್ಯಾಕಾಂಕ್ಷಿ ಚೇತನಕೆ ;
ಅಶ್ವತ್ಥ ಸಾಧನೆ ಬೆಳೆಯೆ
ಹಾಡಲು ಜಿಗಿಯಿತು ಸರಿಗಮ ಪದನಿಸ
ಹತ್ತೊಂಬತರ ವೈದಾನಕೆ ;
ಭವಿಷ್ಯಫಲ ಆದರು ಸರಿಯೆ
ಸವಾಲು ಹಾಕಿತು ವಿಜ್ಞಾನಕೆ ;
ವಾದನದಿಂದ ಸಸ್ಯವು ಬೆಳೆಯೆ
ಹೊಸಕೋಡು ಮೂಡಿತು ಸಂಗೀತಕೆ.

ಎದೆಗೊತ್ತಿ ಕರ್ಣನೆಟ್ಟು ಶಿವನಾಡಿಗಳ ಮೇಲೆ
ಕಮಾನು ಆಡಿಸಿದಾಗ :
ಗಂಗೆಯ ಶಾಂತ ನಡೆ ಬ್ರಹ್ಮಪುತ್ರದ ಆರ್ಭಟ ನುಗ್ಗು
ಕಾವೇರಿಯ ಸೌಂದರ್ಯದ ಪಡೆ
ಪುರುಷ ಪ್ರಕೃತಿಗಳ ಸಂಘರ್ಷಣಾ ಸಾಂತ್ವನಾ
ಲಗು ಬಿಗು ಹಮ್ಮು ಬಿಮ್ಮು ಏರು ಬೀಳು
ನಗು ಅಳು ಕೇಕೆ ಸಿಟ್ಟು ಸಿಡುಕು ಕೋಪ . . .
ನಾದ ಮಾಧುರ್ಯಗಳ ಭವ್ಯದೊಂಬರಾಟ
ಮರ್ತ್ಯಲೋಕದಲೆ ಕಿನ್ನರ ಕಿಂಪುರುಷರ ನಾದದಾಟ
ಕರ್ಣಗಳಿಗಾನಂದಗಾನದಮರ್ತ್ಯದೂಟ :
ಆಗ ನೋಡಬೇಕಿತ್ತು ಸಂಗೀತ ಕಲಾನಿಧಿಯ–
ಅಂಗುಲಿಗಳೋಡಾಟ ಕಮಾನ ನಲಿದಾಟ
ವೈಮನಗಳ ಕುಲುಕಾಟ ತಲೆದೂಗಾಟ ;
ಆಗ ಪರಿಭಾವಿಸಬಹುದಿತ್ತು–
ಸಹೃದಯ ಶಿವರ ದಿವ್ಯಸಂಭಾಷಣೆಯ.
ಆ ಗಳಿಗೆ–
ಅಂತರ್ಭಾವದ ಕ್ಯಥಾರಿಸಿಸ್‌ನಿಂದ ರಸದೀಪ್ತಿ ಸಿದ್ಧಿಸುವ
ಜನ್ಮಜನ್ಮಾಂತರದ ಸುಕೃತ ಫಲ.

ವಿಜ್ಞಾನ ವರನನು ಕೈ ಹಿಡಿದು ಅಪ್ಪಿದ
ಸಂಗೀತ ವಧುವಿನ ಸತ್ಪತಿನು
ಸಂಗೀತ ಸುತರಿಗೆ ಸತ್ಪಥವ ತೋರಿ
ನಲಿದಾಡುತಿರುವ ಅನಂಗನು.

ಈ ವ್ಯಕ್ತಿ ನಡೆದ ಈ ವ್ಯಕ್ತಿ ನುಡಿದ
ಈ ವ್ಯಕ್ತಿ ಮಿಡಿಸಿದೆಲ್ಲೆಡೆಯೂ
ಕೇಳಿದರೆ
ಕಿವಿಗೊಟ್ಟು
ಹೃದ್ವೇದ್ಯವಾಗುವುದು
ಅಮರಗಾನದ ಪಲ್ಲವಿಯು
ಪಿಟೀಲುವಾದನದನುಪಲ್ಲವಿಯು.

ಶತಮಾನೋತ್ಸವ ಸ್ಮರಣೆ:

# ದಿವಂಗತ ವೆಂಕಟೇಶ ತಿರಕೊ ಗಳಗನಾಥ

ಸಂಗ್ರಹ: **ಕೊ. ಶ್ರೀ.**

ಗಳಗನಾಥ ಎಂಬುದು ಅವರ ಕಾವ್ಯನಾಮದಂತಾಗಿತ್ತು. ಮೂಲ ಹೆಸರು ವೆಂಕಟೇಶ ತಿರಕೊ ಕುಲಕರ್ಣಿ. ಗಳಗನಾಥ ಇದು ಅವರ ಹುಟ್ಟಿದ ಊರು. ಅವರ ತಂದೆಯವರು ಆ ಊರ ಹಕ್ಕಿನ ಕುಲಕರಣಿಕರು. ವೆಂಕಣ್ಣನೇ ಚೊಚ್ಚಲು ಮಗ. ಶಾಲಿವಾಹನಶಕದ ವಿಭವ ಸಂವತ್ಸರದ ಪುಷ್ಯ ಮಾಸದ ಷಷ್ಠಿಯ ದಿನ ವೆಂಕಣ್ಣನು ಹುಟ್ಟಿದನು. (ಕ್ರಿ. ಶ. ೧೮೬೯) ಆ ಊರಲ್ಲಿಯ ಗಳಗೇಶ್ವರ ದೇವಸ್ಥಾನದಲ್ಲಿ ಹೆಚ್ಚಿನ ಸಂಭ್ರಮದ ಪೂಜೆಪುನಸ್ಕಾರ ನಡೆದುವು.

ವೆಂಕಣ್ಣನ ಎಳೆಯ ವಯಸ್ಸೆಲ್ಲ ಗಳಗನಾಥದಲ್ಲಿಯೆ ಕಳೆಯಿತು. ಗಳಗನಾಥ ಊರು ತುಂಗಭದ್ರೆಯ ತಡಿಯಲ್ಲಿದೆ. ದೇವಾಲಯ, ನದೀತೀರ, ಗಿಡಮರಗಳು, ಪಾಠಕ್ರಮ, ಇವೆಲ್ಲ ಗುರುಕುಲದ ಕಲ್ಪನೆಯನ್ನು ಕೊಡುವಂತಿದ್ದುವು.

ವೆಂಕಣ್ಣನಿಗೆ ಗಳಗನಾಥ ಬೇಸರ ಬಂದರೆ ಸಮೀಪದಲ್ಲಿದ್ದ ತಂಗಿಯ ಊರಿಗೆ ಹೋಗುವನು. ತಂಗಿ ದರುಗವ್ವನನ್ನು ಹಾವನೂರಿಗೆ ಕೊಟ್ಟಿತ್ತು.

ಮುಲ್ಕಿ ಪರೀಕ್ಷೆಗಾಗಿ ಹಾವೇರಿಗೆ ಬರಬೇಕಾಯಿತು. ಮುಲ್ಕಿಯಲ್ಲಿ ಮೇಲಿನ ನಂಬರು ಬಂತು ವೆಂಕಣ್ಣನಿಗೆ. ಅದೇ ಅವನನ್ನು ಮುಂದೆ ಧಾರವಾಡದ ಟ್ರೈನಿಂಗ್ ಕಾಲೇಜಿಗೆ ಸೇರಿಸಿತು. ಶಿಕ್ಷಕ ವೃತ್ತಿಗೆ ಎಳೆಯಿತು. ಧಾರವಾಡವು ವೆಂಕಣ್ಣನನ್ನು ವೆಂಕಣ್ಣ ಮಾಸ್ತರನ್ನಾಗಿ ಮಾಡಿತು. ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಡಿಸಿತು. ಸಾಹಿತಿಯನ್ನಾಗಿ ಮಾಡಿತು.

೧೮೮೫ನೆಯ ಇಸ್ವಿಯಲ್ಲಿ ೨೦ ರೂಪಾಯಿಯ ಸರ್ಟಿಫಿಕೇಟು ಪಡೆದುಕೊಂಡು ಶಿರಗುಪ್ಪ ಶಾಲೆಯ ಮುಖ್ಯಾಧ್ಯಾಪಕನೆಂದು ವೆಂಕಣ್ಣ ಮಾಸ್ತರರು ಧಾರವಾಡ ಬಿಟ್ಟರು. ಕಲಿಯುವುದು ಮುಗಿದು ನೌಕರಿ ಪ್ರಾರಂಭವಾಯಿತು; ಮದುವೆಯೂ ಆಯಿತು.(ಮುಂದೆ ನರೇಂದ್ರ ... ಉಪ್ಪಿನ ಬೆಟಗೇರಿ... ಬಂಕಾಪುರ ... ಮುಂಡರಿಗೆ ... ಗುತ್ತಲ...) ಗುತ್ತಲದ ಸಮೀಪ ಇರುವ ಅಗಡಿಯಲ್ಲಿಯ ಶ್ರೀ ಶೇಷಾಚಲ ಸ್ವಾಮಿಗಳ ಪ್ರಭಾವ ವೆಂಕಣ್ಣ ಮಾಸ್ತರ ಮೇಲೆ ಆಗತೊಡಗಿತು. (ಧಾರವಾಡ ಟ್ರೈನಿಂಗ್ ಕಾಲೇಜಿನ ಕೆಲಸವನ್ನು ವೈಮನಸ್ಸಿನಿಂದಾಗಿ ಬಿಟ್ಟ ಮೇಲೆ) ಅಗಡಿಗೆ ಬಂದು ಶ್ರೀ ಶೇಷಾಚಲ ಸ್ವಾಮಿಗಳ ಆಶೀರ್ವಾದ ಪಡೆದು ಒಂದು ಪ್ರಿಂಟಿಂಗ್ ಪ್ರೆಸ್ಸು ಹಾಕಿದರು. ಆನಂದವನದ ಆ ವಾರದಲ್ಲಿ ಸಂಸ್ಕೃತ ಪಾಠಶಾಲೆಯನ್ನು ಆರಂಭಿಸಿದರು. ಬಿಡುವಿನ ವೇಳೆಯಲ್ಲಿ ಆಪ್ಟೆಯವರ ಕಾದಂಬರಿಗಳನ್ನು ಭಾಷಾಂತರ ಮಾಡುವುದು ತಮ್ಮದೇ ಆದ ಸದ್ಬೋಧ ಚಂದ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸುವುದು ಆಮೇಲೆ ಪುಸ್ತಕ ಮಾಡುವುದು... ಹನ್ನೆರಡು ವರ್ಷಕಾಲ ಅಗಡಿಯಲ್ಲಿ ವಾಸವಾಯಿತು.

ಅಲ್ಲಿ ೧೨ ವರ್ಷಗಳು ವಾಸವಾಗುವಷ್ಟರಲ್ಲಿ ಶ್ರೀ ಶ್ರೀ ಶೇಷಾಚಲಸ್ವಾಮಿಗಳು ಕಾಲವಾದರು. ಆಗ ಅವರ ಶಿಷ್ಯರಾದ ನಾರಾಯಣ ಭಗವಾನರ ಜತೆಗೆ ಇವರಿಗೆ ಸರಿಬರಲಿಲ್ಲ. ಗಳಗನಾಥರು ಅಗಡಿಯ ಆನಂದವನ ಬಿಡಬೇಕಾಯಿತು.

ಆ ತಿಕ್ಕಾಟದನಂತರ ಗಳಗನಾಥರು ಹಾವೇರಿಗೆ ಬಂದರು. ಮತ್ತೊಂದು ಮುದ್ರಣಾಲಯ ತೆಗೆದುಕೊಂಡು 'ಸದ್ಗುರು' ಎಂಬ ಪತ್ರಿಕೆ ಪ್ರಾರಂಭಿಸಿದರು. ಅಗಡಿಯಲ್ಲಿಯ ಪಾಠಶಾಲೆಯಂತೆಯೇ ಹಾವೇರಿಯಲ್ಲಿ ಪಾಠಶಾಲೆಯೊಂದನ್ನು ಪ್ರಾರಂಭಿಸಿದರು.

ಗಳಗನಾಥರ ಕೊನೆಯ ದಿನಗಳನ್ನು ನೆನೆದರೆ ಕನ್ನಡಿಗರ ಬಗ್ಗೆ ಅದೆಷ್ಟು ರೋಷ ಬರುವುದೊ ... ಅವರ ಮುಪ್ಪಿನ ವಯಸ್ಸಿನಲ್ಲಿಯೂ ... ಪುಸ್ತಕದ ಗಂಟನ್ನು ಹೆಗಲ ಮೇಲೆ ಹೊತ್ತು ಕೈಯಲ್ಲಿ ಹಿಡಿದು ಬರಿಗಾಲಿನಿಂದ ದಾರಿ ತುಳಿದು (ಸಾಲ ತೀರಿಸುವ ಹಠದಿಂದ) ಕನ್ನಡನಾಡಿನಲ್ಲಿ ಅಡ್ಡಾಡಿ ... ಕೊನೆಗೆ ಕ್ಯಾನ್ಸರಕ್ಕೆ ಆಹುತಿಯಾದರು— ೧೯೪೨ರ ಏಪ್ರಿಲ್ ತಿಂಗಳ ೨೨ನೆಯ ದಿನ, ಬೆಂಗಳೂರ ವಿಕ್ಟೋರಿಯಾ ಆಸ್ಪತ್ರೆಯಲ್ಲಿ.

**ನೆಗಳೂರ ರಂಗನಾಥ**

ಗಳಗನಾಥರು ಕನ್ನಡ ಗ್ರಂಥಗಳನ್ನು ಬರೆಯಲು ಪ್ರಾರಂಭಿಸಿದುದರ ಕಾರಣವೇನು? ಕನ್ನಡ ಶಿಕ್ಷಣ ಕನ್ನಡ ಓದುವವರ ಸಂಖ್ಯೆ, ಕನ್ನಡಕ್ಕಾಗಿ ಅಭಿಮಾನ—ಎಲ್ಲವೂ ತೀರ ಸಣ್ಣ ಪ್ರಮಾಣದಲ್ಲಿರುವಾಗ ಬರಿಯ ಪಾರಿತೋಷಕದ ಆಸೆಗಾಗಿ ಒಂದು ಗ್ರಂಥವನ್ನೆ ಬರೆಯಬಹುದೆ? ನಂಬಲಾಗದು. ತೀರಾ ವಿಷಮ ಮತ್ತು ನಿರಾಶಾಜನಕ ಪರಿಸ್ಥಿತಿಯಲ್ಲೂ ಅವರಿಂದ ಗ್ರಂಥವನ್ನು ಬರೆಯಿಸಲು, ಭವಭೂತಿ ಹೇಳುವಂತೆ ಯಾವುದೋ ಒಂದು ಪ್ರಬಲವಾದ -ಅಂತರ: ಕೋಪಿಹೇತು-ಒಳಸಾಮರ್ಥ್ಯವೊಂದಿರಬೇಕು; ಆ ಸಾಮರ್ಥ್ಯಕ್ಕೆ ಪ್ರೇರಕವಾಗುವ ಸನ್ನಿವೇಶವೂ ಇರಲೇಬೇಕು. ಕ. ವಿ. ವ. ಸಂಘದ ಧ್ಯೇಯದಿಂದ ಸ್ಫೂರ್ತರಾಗಿ ನಿಸ್ವಾರ್ಥ ಬುದ್ಧಿಯಿಂದ ಕನ್ನಡದ ಬಾವುಟವನ್ನು ಎತ್ತಿದ ಮೊದಲಿಗರು ಗಳಗನಾಥರು. ಆ ಸ್ಫೂರ್ತಿ, ಆ ನಿಸ್ವಾರ್ಥ ಬುದ್ಧಿ ಅಷ್ಟು ನಿರ್ಮಲವಾಗಿದ್ದುವೆಂದೇ ಗಳಗನಾಥರು ಫಲಾಫಲಗಳನ್ನು ಲೆಕ್ಕಿಸದೆ ಅವಿಶ್ರಾಂತವಾಗಿ ದುಡಿದು ವಾಚನಾಭಿರುಚಿಯನ್ನೂ, ಆನಂದವನ್ನೂ, ಉತ್ತಮ ಕಾದಂಬರಿಗಳನ್ನೂ ಹುಟ್ಟಿಸಿದರು, ಹೆಚ್ಚಿಸಿದರು.

**ಆದ್ಯ ರಂಗಾಚಾರ್**

. . . ಗಳಗನಾಥರ ಕಾಲವೆಂದರೆ ಕನ್ನಡ ಕಾದಂಬರಿಯು ತನ್ನ ಶೈಶವಾವಸ್ಥೆಯನ್ನು ಬಿಟ್ಟು ಧೈರ್ಯವಾಗಿ ಹುಮ್ಮಸ್ಸಿನ ಹೆಜ್ಜೆಯನ್ನು ಮುಂದಿಕ್ಕಿದ ಕಾಲ. ಕನ್ನಡ ಕಾದಂಬರಿಯ ಇಂದಿನ ಬೆಳವಣಿಗೆಯನ್ನೂ ರೀತಿಯನ್ನೂ ನೋಡಿ ಮೆಚ್ಚಿದವರಿಗೆ ಗಳಗನಾಥರ ಕೃತಿಗಳು ಕೃತಿಮವೆನಿಸಬಹುದು. ವಾಸ್ತವಿಕತೆಯಿಂದ ದೂರವಾಗಿದೆ ಎನಿಸಬಹುದು. ಆದರೆ ಈ ತೆರನಾಗಿ ನಾವು ಪ್ರತಿಪಾದಿಸುವಾಗ ಐತಿಹಾಸಿಕ ದೃಷ್ಟಿಯಿಂದ ಕಾದಂಬರಿಯ ಬೆಳವಣಿಗೆಯನ್ನು ಮರೆತುಬಿಡುತ್ತೇವೆ. ಈ ಐತಿಹಾಸಿಕ ದೃಷ್ಟಿ ನಮಗೆ ಒಂದು ವಿಷಯವನ್ನು ಸ್ಪಷ್ಟವಾಗಿ ತಿಳಿಸುವುದುಂಟು. ಅದೇನೆಂದರೆ ಗಳಗನಾಥರ ಆ ಕೃತಿಗಳು ಆ ಕಾಲದಲ್ಲಿ ಆ ರೀತಿಯಾಗಿ ಬರದೆಹೋಗಿದ್ದರೆ ನಮ್ಮ ಇಂದಿನ ಕಾದಂಬರಿ ಈ ರೀತಿಯಾಗಿ ಮುನ್ನಡೆಯನ್ನು ಸಾಧಿಸುವುದೇ ಸಾಧ್ಯವಿರಲಿಲ್ಲವೆಂದು ಖಂಡಿತವಾಗಿ ಹೇಳಬಹುದು. ಇದೇ ಗಳಗನಾಥರ ಕಾಣಿಕೆ; ಇದೇ ಗಳಗನಾಥರ ಮಹತ್ವ.

**ವಿ. ಎಂ. ಇನಾಮದಾರ**

ಪುನರುಜ್ಜೀವನದ ಹಾದಿಯಲ್ಲಿ ಕಾಲಿಡುತ್ತಿದ್ದ ಕನ್ನಡ ನಾಡಿಗೂ ನುಡಿಗೂ ಈ ಶತಮಾನದಲ್ಲಿ ಹೊಸಕಳೆಯನ್ನು ಬೆಳೆಯನ್ನು ಒದಗಿಸಿದ ಕೆಲವೇ ಕೆಲವು ಹಿರಿಯರಲ್ಲಿ ದಿವಂಗತ ಗಳಗನಾಥರು ಮೇಲ್ಪಂಕ್ತಿಯವರೆನ್ನಬಹುದು . . . ಗಳಗನಾಥರು ಒಳ್ಳೆ ಶೈಲಿಯನ್ನು ಹಾಕಿಕೊಟ್ಟರು, ಶ್ರೇಷ್ಠ ಸಾಹಿತ್ಯವನ್ನು ಸೃಷ್ಟಿಸಿದರು; ಕರ್ನಾಟಕದ ಮೂಲೆ ಮೂಲೆಯಲ್ಲೆಲ್ಲ ವಾಚನಾಭಿರುಚಿಯನ್ನು ಹೆಚ್ಚಿಸಿದರು: ಆದರೆ ಇವೆಲ್ಲಕ್ಕಿಂತ ಅವರು ಮಾಡಿದ ಹೆಚ್ಚಿನ ಕಾರ್ಯವೆಂದರೆ ಹೊಸಗಾಲದ ಹೊತ್ತಾರೆಯಲ್ಲಿ ಎಚ್ಚರಿಸಲು ಹಾತೊರೆಯುತ್ತಿದ್ದ ಕನ್ನಡದ ಹೊಸ ಹೃದಯಗಳಿಗೆ ಸಾಹಿತ್ಯದ ಸವಿಯ ಸೋಂಕಿನೊಂದಿಗೆ ಕರ್ನಾಟಕತ್ವದ ಅರಿವಿನ ಸಂದೇಶವನ್ನು - ಕಂಡೋ ಕಾಣದೆಯೋ - ಅಂಟಿಸಿದ್ದು . . .

ಕಲ್ಪಕತೆ, ಭಾವೋದ್ರೇಕ, ಸ್ವಾವಿಷ್ಕರಣದ ಆವೇಗ, ಮೇಲಾಗಿ ದೇಶಭಕ್ತಿಯ ಆವೇಶ, ಇವಲ್ಲದೆ ಐತಿಹಾಸಿಕ ಉಜ್ವಲತೆಯುಗಳನ್ನೊಳಗೊಂಡ ಗಳಗನಾಥರ ಶೈಲಿ ಹದಿನಾರಾಣೆಯ ಗಂಡು ಶೈಲಿ . . .

ಒಟ್ಟಾರೆ, ಪಾರತಂತ್ರ್ಯ, ಹೊರಗಿನ ವ್ಯಾಮೋಹ, ತಮ್ಮರಿವಿನ ಅಭಾವಗಳು ನಾಡನ್ನು ಮುಚ್ಚಿ ಮುಸುಕಿದ್ದಾಗ ಜನತೆಯನ್ನು ಎಚ್ಚರಿಸುವ ಸಾಹಿತ್ಯವನ್ನು ಗಳಗನಾಥರು ನಮ್ಮ ನಾಡಿಗೆ ಸಲ್ಲಿಸಿದರು. ಈಶ್ವರೀಯತೆಯ ಭಾವದಿಂದ ಮುಳುಗಿದ ಅವರ ರೀತಿಯನ್ನೇ ಹೇಳುವದಾದರೆ ಅವರು ಕರ್ನಾಟಕಕ್ಕೆ ಬಂದ ದೇವದೂತರೊಬ್ಬರು ಎನ್ನಬಹುದು.

**ಕೃಷ್ಣಕುಮಾರ**

ಆಗಿನ ಭಿನ್ನ ಭಿನ್ನ ಕರ್ನಾಟಕದ ಒಂದು ತೀರಾ ಹಿಂದುಳಿದ ಭಾಗವಾಗಿದ್ದ ಉತ್ತರ ಕರ್ನಾಟಕದಲ್ಲಿ ಹುಟ್ಟಿದ ಶ್ರೀ ಗಳಗನಾಥರಿಗೆ ಲೋಕಮಾನ್ಯತಿಲಕ, ಮಹಾತ್ಮಾ ಗಾಂಧಿ, ಕವೀಂದ್ರ ರವೀಂದ್ರ ಅವರಿಗೆ ದೊರೆತಂತಹ ಶೈಕ್ಷಣಿಕ ಅನುಕೂಲತೆ ದೊರೆಯುವುದಕ್ಕೆ ಸಾಧ್ಯವಿರಲಿಲ್ಲ. ಏಕೆಂದರೆ: ಆ ಕಾಲದಲ್ಲಿ ಮುಂಬಯಿ ರಾಜ್ಯಕ್ಕೆ ಸೇರಿದ ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಒಂದಕ್ಕಿಂತ ಹೆಚ್ಚು ಹೈಸ್ಕೂಲು ಇರಲಿಲ್ಲ; ಕಾಲೇಜಿನ ವಿಷಯ ಅಂದಿನ ಜನರ ಕನಸಿನಲ್ಲಿಯೂ ಮೂಡಿರಲಾರದು - ಎಂದಮೇಲೆ ಉತ್ತರ ಕರ್ನಾಟಕದ ದಕ್ಷಿಣದ ಜಿಲ್ಲೆಯಲ್ಲಿಯ ಒಂದು ಹಳ್ಳಿಯ ಮಧ್ಯಮವರ್ಗದ ಮನೆತನವೊಂದರಲ್ಲಿ ಹುಟ್ಟಿದ ಗಳಗನಾಥರಿಗೆ, ಉಚ್ಚ ಶಿಕ್ಷಣವು ದೊರೆಯುವ ಬಗೆ ಹೇಗೆ? . . . ಗಳಗನಾಥರು ಕನ್ನಡ ಪ್ರಾಥಮಿಕ ಶಾಲೆಯಲ್ಲಿಯೇ ಕಲಿತರು; ಮುಂದೆ ಕನ್ನಡ ಪ್ರಾಥಮಿಕ ಶಾಲೆಯಲ್ಲಿಯೇ ಕಲಿಸುವ ಶಿಕ್ಷಕರಾದರು . . .

ಗಳಗನಾಥರ ಆಯುಷ್ಯದ ಪ್ರಾರಂಭ ಭಾಗದಲ್ಲಿ ಅವರಿಗೆ ಪಠ್ಯ ಪ್ರಾಥಮಿಕ ಪುಸ್ತಕಗಳಲ್ಲದೆ, ಬೇರೆ ಯಾವ ಗ್ರಂಥಗಳೂ ದೊರೆತಿರಲಾರವು. ಏಕೆಂದರೆ, ಆ ಕಾಲದಲ್ಲಿ ಕನ್ನಡ ಲೇಖಕರು ಇರಲಿಲ್ಲ; ಓದಲು ಯೋಗ್ಯವಾದ ಗ್ರಂಥಗಳೂ ಇರಲಿಲ್ಲ. ಅಷ್ಟೇ ಅಲ್ಲ, ದೇಶವಿದೇಶದ ಸುದ್ದಿ ಸಂಗತಿಗಳನ್ನು ಕನ್ನಡ ನುಡಿಯಲ್ಲಿ ತಿಳಿಸುವ ವೃತ್ತಪತ್ರಿಕೆಗಳೂ ಇರಲಿಲ್ಲ...

ಇಂಥ ವಿರುದ್ಧ ಪರಿಸ್ಥಿತಿಯ ಪ್ರವಾಹದಲ್ಲಿಯೇ ಶ್ರೀ ಗಳಗನಾಥರು ಕೈಕಾಲುಗಳನ್ನು ಬಡಿಯುತ್ತ, ಮೇಲಕ್ಕೆ ಮೊಗವೆತ್ತಿ ಪ್ರವಾಹದೆದುರಿಗೆ ತೇಲುತ್ತ ಮುಂದುವರಿಯಬೇಕಾಗಿತ್ತು...

ದಿವಂಗತ ಗಳಗನಾಥರಿಗೆ ಕನ್ನಡದಲ್ಲಿ ಗ್ರಂಥಗಳನ್ನು ಬರೆಯಲೇಬೇಕೆಂಬ ಅಭಿಮಾನ ಜಾಗೃತವಾಗಿ ಇದ್ದಿರಬಹುದು. ಆದರೆ ಮೊದಮೊದಲು ಸ್ವತಂತ್ರವಾಗಿ ತಾವು ಏನು ಬರೆಯಬೇಕೆಂಬುದು ಗೊತ್ತಾಗದೆಹೋಗಿರಬಹುದು. ಏಕೆಂದರೆ ಸ್ವತಂತ್ರ ಕೃತಿಗಳನ್ನು ರಚಿಸುವಂತಹ ವಾತಾವರಣದ ಹಿನ್ನೆಲೆಯ ಬಲವು ಅವರಿಗೆ ಇರಲಿಲ್ಲ; ವಾಚನ ಬಲವನ್ನು ಹೆಚ್ಚಿಸಿಕೊಳ್ಳುವಂತಹ ಪರಿಸ್ಥಿತಿಯು ಅವರಿಗೆ ದೊರತಿರಲಿಲ್ಲ... ಆದ್ದರಿಂದಲೇ ಶ್ರೀ ಗಳಗನಾಥರು ಅನ್ಯ ಭಾಷೆಯ ರಸವತ್ತಾದ ಕಾದಂಬರಿಗಳ ಕನ್ನಡಾನುವಾದ ಕಾರ್ಯದಿಂದಲೇ ತಮ್ಮ ಸಾಹಿತ್ಯ ನಿರ್ಮಾಣ ಕಾರ್ಯವನ್ನು ಆರಂಭಿಸಿದರು. ಮುಂದೆ ಮೂರು ನಾಲ್ಕು ವರ್ಷಗಳಲ್ಲಿಯೆ ಸ್ವತಂತ್ರವಾಗಿ ಬರೆದು ಪ್ರಕಟಿಸಿದ 'ಕುಮುದಿನಿ' ಎಂಬ ಐತಿಹಾಸಿಕ ಕಾದಂಬರಿಯು ಇವರ ಕಲ್ಪನೆಗೂ ಸ್ವತಂತ್ರ ಪ್ರತಿಭೆಗೂ ಪ್ರತ್ಯಕ್ಷ ಸಾಕ್ಷಿ ಎನಿಸುವಂತಿದೆ...

ಗಳಗನಾಥರ ಎಲ್ಲ ಕಾದಂಬರಿಗಳೂ ಪಂಡಿತ ಪಾಮರರಿಬ್ಬರ ಮನಸ್ಸು ಹೃದಯಗಳನ್ನು ಆಕರ್ಶಿಸಿ ನಾಡಿಗರಲ್ಲೆಲ್ಲ ಓದುವ ಅಭಿರುಚಿಯನ್ನು ಹುಟ್ಟಿಸಿದುವು. ಗಳಗನಾಥರು ಸಾಹಿತ್ಯ ನಿರ್ಮಾಣ ಕಾರ್ಯವನ್ನು ಕೈಗೊಳ್ಳುವುದಕ್ಕಿಂತ ಮೊದಲು, ಹೊಸಗನ್ನಡದ ಗದ್ಯ ಶೈಲಿಯ ಪಾಕ, ಇನ್ನೂ ಕುದಿಯುವುದರಲ್ಲಿಯೇ ಇದ್ದಿತು; ಆದರೆ ಗಳಗನಾಥರು ತಮ್ಮ ನಿರ್ಮಿತಕಾರ್ಯವನ್ನು ಆರಂಭಿಸಿದ ಮೇಲೆ, ಆ ಪಾಕಕ್ಕೆ ಒಂದು ಹದ ಬಂದು, ಹೊಸಗನ್ನಡ ಗದ್ಯಶೈಲಿಯು ಒಂದು ವಿಶಿಷ್ಟ ರೂಪ ಪಡೆಯಿತು. ಇವರ ತರುವಾಯ ಬಂದ ನವೀನ ಲೇಖಕರನೇಕರು ಗಳಗನಾಥರ ಗದ್ಯಶೈಲಿಯನ್ನೇ ಆದರ್ಶವೆಂದು ಸ್ವೀಕರಿಸಿ ಕನ್ನಡಿಗರ ಸುಖ ವಾಚನಕ್ಕೆ ಹಲವಾರು ಸರಸ-ಸುರಸ ಗ್ರಂಥಗಳನ್ನು ಒದಗಿಸಿದ್ದಾರೆ.

**ಬೆಟಗೇರಿ ಕೃಷ್ಣಶರ್ಮ**

...ಶ್ರೀ ಗಳಗನಾಥರ ಬರಹ ಎಂದರೆ ಅದೊಂದು ಮಹಾಸಾಗರವಿದ್ದಂತೆ. ಆ ಸಮುದ್ರದಲ್ಲಿ ಹುಡುಕಿದಷ್ಟು ಹೊಸ ಹೊಸ ಮುತ್ತುಗಳು ಹೊರಡುವುವು; ಅವನ್ನು ಕಡೆದಷ್ಟು ತರತರದ ಕೌಸ್ತುಭಗಳು ಅದರೊಳಗೆ ಕಾಣಿಸುವವು. ... ಶ್ರೀ ಗಳಗನಾಥರ ಕೃತಿಗಳಲ್ಲಿ ಮೊದಲು ಸ್ಥೂಲವಾಗಿ ಮೂರು ವಿಭಾಗಗಳನ್ನೂ ಮಾಡಬಹುದು. ಒಂದನೆಯದಾಗಿ ಸ್ವತಂತ್ರ ಕೃತಿಗಳು; ಎರಡನೆಯದಾಗಿ ಅನುವಾದಗಳು ಮತ್ತು ಕೊನೆಯದಾಗಿ ಪತ್ರಿಕಾ ಲೇಖನಗಳು. ...

ಶ್ರೀ ಗಳಗನಾಥರದು ಗಂಡುಶೈಲಿ. ಕೇವಲ ಸಂಸ್ಕೃತ ಶಬ್ದಗಳ ಜಡವಾದ ಪದ ಪ್ರಯೋಗಗಳಿಗೆ ಅವರು ಮರುಳಾಗದೆ, ಅದರ ಉಪಯೋಗವನ್ನು ಆವಶ್ಯಕ ಅನಿಸುವಷ್ಟು ಮಾತ್ರ ಮಾಡಿಕೊಂಡು, ಅನೇಕ ತಿರುಳುಗನ್ನಡ ಶಬ್ದಗಳನ್ನು, ಎಷ್ಟೋಸಲ ಕನ್ನಡದ, ಹಳಗನ್ನಡದ ಶಬ್ದ ಸರಣಿಯನ್ನು ಲೇಖನ ಪರಂಪರೆಯನ್ನು ಅವರು ಕಾಪಾಡಿಕೊಂಡು ಬಂದುದು ನಮಗೆ ಗೋಚರವಾಗುವದು. ಅಷ್ಟೆ ಅಲ್ಲದೆ ಮನೆಮಾತುಗಳ, ಗಾದೆಮಾತುಗಳ ಕಣಿಗಳನ್ನ ಕಂಡು ಹಿಡಿದು ಜನರಿಗೆ ಅದರ ಗುರುತುಮಾಡಿಕೊಟ್ಟು ರುಚಿ ಹಚ್ಚಿದವರಲ್ಲಿ ಶ್ರೀ ಗಳಗನಾಥರು ಅಗ್ರಣಿಗಳು ಎಂದು ಹೇಳಬಹುದು.

**ಎಚ್. ಎಸ್. ಪಾಟೀಲ**

ಗಳಗನಾಥರ ಜನಪ್ರಿಯತೆಗೆ ಮುಖ್ಯಕಾರಣವೆಂದರೆ ಅವರ ನೇರವಾದ ಮನಮುಟ್ಟುವ ಭಾಷಾ ಶೈಲಿ, ಕಥಾ ವಸ್ತುವನ್ನೂ, ನಾಯಕರನ್ನೂ ಆಯ್ದು ಉದಾತ್ತತೆಗೆ ಅವರು ನೀಡುತ್ತಿದ್ದ ಮಹತ್ವ ಮತ್ತು ನೀತಿಬೋಧೆ ಎಂದೇ ಹೇಳಬೇಕು. ಮೂಲದಲ್ಲಿದ್ದಕ್ಕಿದ್ದಂತೆ ಅವರು ಅನುವಾದ ಮಾಡಿದ ಕಾದಂಬರಿ ಎಂದರೆ ಪ್ರಬುದ್ಧ ಪದ್ಮನಮನೆಯೊಂದೆ. ಮುಂದಿನ ಪ್ರತಿಯೊಂದು ಅನುವಾದಿತ ಕಾದಂಬರಿಗಳಲ್ಲೂ ಅವರು ಅನುಸರಿಸಿದ ರೀತಿಯೆಂದರೆ ಯಾವುದೇ ಕಾದಂಬರಿಯಲ್ಲಿಯ ರಸವತ್ತಾದ ಭಾಗವನ್ನುಮಾತ್ರ ಸ್ವೀಕರಿಸಿ, ಅದಕ್ಕೆ ಪೂರಕವಾದ ಅಂಶಗಳನ್ನು ಬೇರೆಡೆಯಿಂದ ಸಂಗ್ರಹಿಸಿ ಸ್ವಾತಂತ್ರವೆಂಬಂತೆಯೆ ಬರೆಯುತ್ತಿದ್ದರು. ಆದರೆ ಯಾವ ಕಾಲಕ್ಕೂ ಮೂಲಲೇಖಕರ ಉಪಕಾರಸ್ಮರಣೆಯನ್ನು ಮಾತ್ರ ಅವರು ಮರೆತಿಲ್ಲ.

**ಮಾಧವ**

....ನಾವು ಕೊಟಡಿಗೆ ಹೋದಾಗ ಗಳಗನಾಥರು ಪೆಟ್ಟಿಗೆಯ ಮುಂದೆ ಬರೆಯುತ್ತ ಕುಳಿತಿದ್ದರು. ಹಣೆ ಭುಜ

ಗಳ ಮೇಲೆ ತ್ರಿಪುಂಡ್ರ, ಮಣ್ಣು ಬಣ್ಣದ ಧೋತ್ರ, ಸುಮಾರು ಅದೇ ಬಣ್ಣದ ಷರಟು, ಉದ್ದನೆಯ ಮೂಗಿನ ಮೇಲೆ ಚಷ್ಮ . . . .

ನಾನು ಕುಳಿತುಕೊಂಡು "ಷಾಜಹಾನ್ ನೋಡಿದ್ರಾ ನೀವು" ಎಂದೆ.

"ನಿಮ್ಮ ಗೆಣೆಯ ಈ ಸಿಂಹ ದಿನಾಲೂ ಕರೀತಾನಾ. ಇನ್ನೂ ಹೋಗಿಲ್ಲ."–ಕೆಲವು ಕ್ಷಣಗಳ ಅನಂತರ "ಹೆಂಡತೀಗೆ ಗೋರಿ ಕಟ್ಟಿಸಿ, ಮಗನ ಕೈಸೆರೆಯಾದ ಆ ಮುದಿ ರಾಜನ ಕಥೇರಿ, ಏನದ ಅಭಿನಯ ನೋಡಕ್ಕ!"

ನಾನು ಅವಾಕ್ಕಾದೆ. ಚೇತರಿಸಿಕೊಂಡು ಕೇಳಿದೆ: "ಡಿ. ಎಲ್. ರಾಯರ ಪ್ರಸಿದ್ಧ ನಾಟಕದ ಅನುವಾದ ಇದು. ಬಂಗಾಳಿ ರಂಗಭೂಮಿಯಲ್ಲೂ ಕೀರ್ತಿ ಪಡೆದಿದೆ"

ಗಳಗನಾಥರು ಹುಸಿನಗೆ ಹಾರಿಸಿ ಹೇಳಿದರು: "ಪರರ ಕೀರ್ತಿ ನಂಬಿ ನಾವು ಕುಳಿತೆವು ಅಂದ್ರ ಕೆಟ್ಟ ಹಾಂಗೇ ನೋಡ್ರಿ. ನಾನು ಕೆಲವು ಮರಾಠೀ ಕಾದಂಬರಿಗಳನ್ನು ಅನುವಾದ ಮಾಡೀನಿ. ಆದ್ರ ಬರಿತಾ ಬರಿತಾ ಅವುಗಳ ಲೋಪ ದೋಷಗಳನ್ನು ಸರಿಪಡಿಸಿಕೊಂಡು ಬರೆಯುವುದರೊಳಗೆ ಅವು ಸ್ವತಂತ್ರ ಕಾದಂಬರಿಗಳೇ ಆಗಿಬಿಟ್ಟವು. ಅದಕಾಗೆ ನಾನು ಅವನ್ನ ರೂಪಾಂತರ ಎಂತ ಕರದೀನಿ."

ನಾನು ಸಿಂಹರ ಮುಖ ನೋಡಿದೆ. ಸಿಂಹರು ನನ್ನ ಮುಖ ನೋಡಿದರು. ಅನಂತರ ನಾವಿಬ್ಬರೂ ಅವರ ಕಡೆ ತಿರುಗಿದೆವು.

ನಾನು ಹೇಳಿದೆ: "ಭಾಷಾಂತರ ಒಂದು ಕಲೆ. ನಿಮ್ಮ ಅನುವಾದಗಳು ಮೂಲಕ್ಕಿಂತ ಚನ್ನಾಗಿದೆ ಅಂತ ಮರಾಠಿ ತಿಳಿದೋರು ಹೇಳಿದ್ದನ್ನ ಕೇಳಿದ್ದೇನೆ."

ಗಳಗನಾಥರ ಮುಖದಲ್ಲಿ ಪ್ರಸನ್ನತೆ ಮೂಡಿತು. "ನಮ್ಮ ದೇಶದ ಚರಿತ್ರೆ ಕುರಿತು ನೀವೊಂದು ಸ್ವತಂತ್ರ ನಾಟಕ ಬರೀರಿ" ಎಂದರು.

ನಾನು ಒಪ್ಪಿಕೊಂಡೆ. ಆದರೆ ಈ ಅಭಿವಚನದಂತೆ ನಡೆಯಲು ನನಗೆ ಸಾಧ್ಯವಾದದ್ದು ಹದಿನೈದು ವರ್ಷಗಳ ನಂತರ "ಬಿಡುಗಡೆಯ ಬಿಚ್ಚುಗತ್ತಿ" ಬರೆದಾಗ.

**ಬಿ. ಪುಟ್ಟಸ್ವಾಮಯ್ಯ**

ಆಧುನಿಕ ಕನ್ನಡ ಸಾಹಿತ್ಯದ ಆರಂಭಕಾಲದ ಕೃತಿಗಳೆಂದು ಗಳಗನಾಥರ ಕಾದಂಬರಿಗಳಿಗೆ ಐತಿಹಾಸಿಕ ಮಹತ್ವ ಉಳಿಯುತ್ತದೆ. ಕಷ್ಟಪಟ್ಟು ಕಾಡು ಕಡಿದು, ನೆಲ ಹದಗೊಳಿಸಿ, ಗುಡಿಸಲುಕಟ್ಟಿ, ಅಡವಿಯಲ್ಲಿ ಜನವಸತಿ ನಿರ್ಮಿಸಿದ ಕೀರ್ತಿ ಗಳಗನಾಥರದು.

**ಬಸವರಾಜ ಕಟ್ಟೀಮನಿ**

ಗಳಗನಾಥರ ಹೃದಯವು ಬಹುವಿಶಾಲವಾಗಿತ್ತು. ಔದಾರ್ಯ ಅವರ ವ್ಯಕ್ತಿತ್ವದ ಪ್ರಧಾನ ಗುಣವಾಗಿತ್ತು. ಅವರ ಜೀವನವನ್ನು ಆ ಔನ್ನತ್ಯಕ್ಕೆ ಕೊಂಡೊಯ್ಯಲು ಅವರ ಉದಾರ ಗುಣವೇ ಪ್ರೇರಕ ಶಕ್ತಿಯಾಗಿತ್ತು. ಈ ಔದಾರ್ಯಕ್ಕೆ ಗಳಗನಾಥರ ಶ್ರದ್ಧಾ ಭಕ್ತಿಗಳಂತೆ ಅವರ ದಯಾಗುಣವೂ ಆರ್ದ್ರ ಅಂತಃಕರಣವೂ ಕಾರಣವಾಗಿದ್ದವು.

**ಕೃಷ್ಣಮೂರ್ತಿ ಕಿತ್ತೂರ**

ನಮ್ಮ ಗೋಶಾಲೆಯ ಆಕಳುಗಳು ಒಂದು ದಿನ ಕಬ್ಬಿನ ತೋಟದಲ್ಲಿ ಹೊಕ್ಕಿದ್ದವು. ಅದನ್ನು ಕೇಳಿದಾಗ ಅಪ್ಪ (ದಿ|| ಗಳಗನಾಥರು) ಪಾಪ ಅವಕ್ಕೆ ಕಬ್ಬಿನಮ್ಯಾಲೆ ಆಸೆ ಆಗಿದೆಯೇನೋ ಎಂದು ಆ ಕಬ್ಬಿನ ತೋಟವನ್ನೇ ಹಣಕ್ಕೆ ಕೊಂಡು ಅವುಗಳಿಗೆ ತಿನ್ನಿಸಿಬಿಟ್ಟರು.

**ಬಿಷ್ಟಪ್ಪ**

(ಗಳಗನಾಥರ ದತ್ತುಪುತ್ರ)

ಹತ್ತನೆ ಶತಮಾನದ ಆದಿಭಾಗವು ಬ್ರಿಟಿಷರ ದಬ್ಬಾಳಿಕೆ, ರಾಷ್ಟ್ರೀಯ ಅಂದೋಳನ, ದೇಶಾಭಿಮಾನಿಗಳ ಸಂಘಟನೆಯ ಕಾರ್ಯ ನಡೆದಕಾಲವಾಗಿತ್ತು. ಇಂಥ ಸಂದರ್ಭದಲ್ಲಿ ಗಳಗನಾಥರ ಐತಿಹಾಸಿಕ ಕಾದಂಬರಿಗಳು ಸ್ವಾಭಾವಿಕವಾಗಿಯೇ ರಾಷ್ಟ್ರೀಯ ಮನೋಭಾವನೆಯನ್ನು ನಿರ್ಮಿಸಲು ಕಾರಣವಾದವು . . . ಬಿಜಾಪುರದ ಮಹಮ್ಮದಶಹಾ, ದಿಲ್ಲಿಯ ಔರಂಗಜೇಬ್ ಮತ್ತು ಮುಹಮ್ಮದ್ ತಘಲಕನ ಅತ್ಯಾಚಾರ ದಬ್ಬಾಳಿಕೆಗಳನ್ನು ವರ್ಣಿಸಿ, ಮರಾಠರು, ರಜಪೂತರು ಮತ್ತು ಕನ್ನಡಿಗರು ಕೊಚ್ಚಿನಿಂದ ಎದುರಿಸಿದ್ದನ್ನು ವಿವರಿಸಿಯೂ ಗಳಗನಾಥರು ನವಚೇತನವನ್ನು ನಿರ್ಮಿಸಿದರು.

**ಧ್ರುವರಾಜ ಮುತಾಲಿಕ ದೇಸಾಯಿ**

ಕನ್ನಡ ಭಾಷೆಗೆ ತನುಮನಧನವನ್ನು ಅಕ್ಷರಶಃ ಅರ್ಪಿಸಿದವರು ಗಳಗನಾಥರು. ಎದೆಯಲ್ಲಿ ಹುರುಪು ಇರುವ ವರೆಗೆ, ಮೈಯಲ್ಲಿ ಸಾಮರ್ಥ್ಯವಿರುವವರೆಗೆ ಅವರು ಭಾಷೆ ಗಾಗಿ ದುಡಿದರು.

**ವಿಠಲ ಕುಲಕರ್ಣಿ**

...ಗಳಗನಾಥರ ಕಾದಂಬರಿಗಳೆಂದರೆ ಗುಂಗು ಹಿಡಿ ಸುವ ಮಾದಕ ದ್ರವ್ಯವಾಗಿದ್ದವು. ಎಂತಹ ಅರಸಿಕನೂ ಗಳಗನಾಥರ ಕಾದಂಬರಿಯನ್ನು ಕೈಗೆ ಎತ್ತಿಕೊಂಡರೆ ಅದನ್ನು ಮುಗಿಸದೆ ಕೆಳಗಿಳಿಸಲು ಮನಸ್ಸುಮಾಡುತ್ತಿರಲಿಲ್ಲ. ಸರಳವಾದ, ಸುರಸವಾದ ಬಳಕೆಯ ಬಂಧುರ ಶೈಲಿ, ಕತೆ ಗಾರಿಕೆಯನ್ನು ಹದವರಿತು ಹೇಳುವ ಕುಶಲತೆ ಇವು ಓದುಗರ ಮನಗಳನ್ನು ಸೆರೆಹಿಡಿಯುತ್ತಿದ್ದವು.

**ಎನ್ಕೆ. ಕುಲಕರ್ಣಿ**

ಹೀಗೆಯೇ ನಾನು ನನ್ನ ಪುಸ್ತಕಗಳ ಮಾರಾಟಕ್ಕಾಗಿ ಹೈದರಾಬಾದಿಗೆ ಹೋಗಿದ್ದೆ... ನಮ್ಮ ಉತ್ತರ ಕರ್ನಾಟಕ ದಿಂದ ಅಲ್ಲಿಗೆ ಹೋಗಿ ನೆಲೆಸಿದ ಡಾಕ್ಟರೊಬ್ಬರ ಕಡೆಗೂ ಆಗ ನಾನು ಹೋಗಿದ್ದೆ. ಸಾಕಷ್ಟು ಹಣ ಸಂಪಾದಿಸಿ ಸಿರಿವಂತ ರಾದ ಡಾಕ್ಟರ್ ಅವರು.

ನಾನು ನನ್ನ ಪುಸ್ತಕಗಳ ಗಂಟನ್ನು ಹೊತ್ತುಕೊಂಡು ಹೋಗಿ ನಿಂತಾಗ ಅವರು ನನ್ನನ್ನು ಸ್ವಾಗತಿಸಲಿಲ್ಲಕೂಡ. ನಾನೇ ಒಂದು ಕುರ್ಚಿಯ ಮೇಲೆ ಕುಳಿತು ನಾನಾರೆಂಬು ದನ್ನೂ ಏತಕ್ಕೆ ಬಂದಿರುವೆನೆಂಬುದನ್ನೂ ಅವರಿಗೆ ವಿವರಿಸಿ ಹೇಳಿದೆ.

'ನಮಸ್ಕಾರ, ನಮ್ಮ ಮನೆಯಲ್ಲಿ ಯಾರಿಗೂ ಕನ್ನಡ ಪುಸ್ತಕ ಓದಲಿಕ್ಕೆ ಬರುವುದಿಲ್ಲ ಎಂದಮೇಲೆ ನಿಮ್ಮ ಪುಸ್ತಕ ತೆಗೆದುಕೊಂಡು ನಾನೇನು ಮಾಡಲಿ? ಇಲ್ಲಿ ಕನ್ನಡಿಗರು ಸಾಕಷ್ಟು ಜನರಿದ್ದಾರೆ. ಅವರ ಬಳಿಗೆ ಹೋದರೆ ಅಲ್ಪ ಸ್ವಲ್ಪ ನಿಮಗೆ ಸಹಾಯ ದೊರಕೀತು! ನಾನು ಅವರಿಗೆ ಬಿಚ್ಚುನುಡಿಗಳಲ್ಲಿ ಹೇಳಿದೆ:

'ನೀವೂ ಕನ್ನಡಿಗರೆಂದು ನಿಮ್ಮ ಬಳಿಗೆ ಬಂದಿದ್ದೇನೆ. ಪುಸ್ತಕಕ್ಕಾಗಿ ನೀವು ನನಗೆ ಕೊಟ್ಟ ಹಣ ವ್ಯರ್ಥವಾಗುವು ದಿಲ್ಲ. ಸಾಂಸ್ಕೃತಿಕ ಸಂಸ್ಥೆಗಾಗಿ ವೆಚ್ಚವಾಗುತ್ತದೆ! ದಯ ಮಾಡಿ ಕೆಲವು ಪುಸ್ತಕಗಳನ್ನಾದರೂ ಕೊಂಡುಕೊಳ್ಳಿರಿ!'

ಕೂಡಲೆ ಅವರು ಜೇಬಿನಿಂದ ಎಂಟಾಣೆಯ ನಾಣ್ಯ ವೊಂದನ್ನು ತೆಗೆದಿಟ್ಟು

'ಇಷ್ಟು ಬೆಲೆಗೆ ಯಾವ ಪುಸ್ತಕ ಬರುವುದೋ ಅದನ್ನು ಕೊಟ್ಟುಬಿಡಿರಿ' ಎಂದು ಹೇಳಿದರು. ನಾನು ಅಷ್ಟೇ ಬೆಲೆಯ ಚಿಕ್ಕ ಪುಸ್ತಕವೊಂದನ್ನು ಅವರ ಟೇಬಲ್ಲಿನ ಮೇಲೆ ಇರಿಸಿ ಎಂಟಾಣೆಯನ್ನು ತೆಗೆದುಕೊಂಡು ಅಲ್ಲಿಂದ ಹೊರಟು ಬಿಟ್ಟೆನು.

ಆದರೆ ಆಶ್ಚರ್ಯದ ಸಂಗತಿ ಎಂದರೆ ಅಂದೆಯೆ ರಾತ್ರಿ ಎಂಟುಗಂಟೆಗೆ ಆ ಡಾಕ್ಟರರ ಹೆಂಡತಿ ನನ್ನನ್ನು ಹುಡುಕಿ ಕೊಂಡು ನಾನಿದ್ದಲ್ಲಿಗೆ ಬಂದರು ಅವರು ಬೊಮ್ಮನಹಳ್ಳಿ ಯವರಂತೆ. ನನ್ನ ಪುಸ್ತಕಗಳನ್ನೆಲ್ಲ ಬಿಡದೆ ಓದುವವರಂತೆ ...ತಮ್ಮ ಪತಿಯ ನಡವಳಿಕೆಗಾಗಿ ನನ್ನಲ್ಲಿ ಕ್ಷಮೆಯಾಚಿಸಿ ಮರುದಿನ ಮಧ್ಯಾಹ್ನ ತಮ್ಮ ಮನೆ ಊಟಕ್ಕೆ ಬರಬೇಕೆಂದು ಔತಣವಿತ್ತರು.

ಮರುದಿನ ನನ್ನನ್ನು ಕರೆದುಕೊಂಡು ಹೋಗಲು ಡಾಕ್ಟರರ ಕಾರು ಬಂದಿತು. ಹೋದಮೇಲೆ ಸವಿಯಡಿಗೆಯ ಊಟ... ನಾನು ಜತೆಗೆ ತೆಗೆದುಕೊಂಡು ಹೋದ ನನ್ನ ಪ್ರತಿಯೊಂದು ಪುಸ್ತಕದ ಒಂದೊಂದು ಪ್ರತಿಯನ್ನೂ ಅವರಿಗೆ ಕೊಟ್ಟಾಯಿತು... ಮೊದಲ ದಿನ ಮನಸ್ಸಿಲ್ಲದೆ ಎಂಟಾಣೆ ಕೊಟ್ಟ ಆ ಡಾಕ್ಟರರೇ ಆಗ ಹೆಂಡತಿಯ ದಾಕ್ಷಿಣ್ಯಕ್ಕಾಗಿ ಇನ್ನೂರಮೂವತ್ತು ರೂಪಾಯಿಗಳನ್ನು... ಸಮಾಧಾನ ಮನಸ್ಕರಾಗಿದ್ದೇ ನನಗೆ ಸಲ್ಲಿಸಿದರು. ಅಷ್ಟೇ ಅಲ್ಲ, ಮೊದಲ ದಿನದ ತಮ್ಮ ಉಪೇಕ್ಷೆಯ ವರ್ತನೆಗಾಗಿ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿದರು.

ಗಳಗನಾಥರ ಒಂದು ಅನುಭವ

(ಆಕರ ಜಿ. ಕೃಷ್ಣಶರ್ಮ)

ಶ್ರೀ ಗಳಗನಾಥರ ಧಾರ್ಮಿಕ ಗ್ರಂಥಗಳು ವೈಶಿಷ್ಟ್ಯ ಪೂರ್ಣವಾಗಿವೆ. ಕೇವಲ ಕಥಾ ನಿರೂಪಣೆ ಇವುಗಳ ಗುರಿ ಯಲ್ಲ. ಕಥಾ ನಿರೂಪಣೆಯ ಜೊತೆಗೆ ಗ್ರಂಥಾರ್ಥ ರಹಸ್ಯ ಪ್ರಕಾಶನವೂ ಅಷ್ಟು ಮುಖ್ಯ ಎಂದು ಬಗೆದಿದ್ದ ಶ್ರೀ ಗಳಗನಾಥರು ತಮ್ಮ ಧಾರ್ಮಿಕ ಗ್ರಂಥಗಳಲ್ಲೆಲ್ಲಾ ಅವುಗಳ ರಹಸ್ಯಾರ್ಥವನ್ನು ತಪ್ಪದೆ ವಿವರಿಸಿದ್ದಾರೆ. ಈ ಗ್ರಂಥಗಳಲ್ಲಿ ಕಥೆಗಿಂತ ಈ ರಹಸ್ಯ ವಿರಣಾತ್ಮಕ ಪ್ರಕರಣ ಗಳು ಜನಮನವನ್ನು ತಿದ್ದಲು ಅಧಿಕ ಸಮರ್ಥವಾಗಿವೆ...

ಶ್ರೀ ಗಳಗನಾಥರು ತಮ್ಮ ವಿಪುಲ ಗ್ರಂಥರಾಶಿಯನ್ನು ನೀಡಿದ್ದು ಜನಸಾಮಾನ್ಯಕ್ಕಾಗಿ ಎಂಬ ಮಾತನ್ನು ಒತ್ತಿ ಹೇಳಬಹುದಾಗಿದೆ. ಅವು ತಮ್ಮ ಅಂತಸ್ಸತ್ವದಿಂದ ಪಂಡಿತ ವರೇಣ್ಯರ ಮನ್ನಣೆಗೆ ಪಾತ್ರವಾಗಿದೆ, ಆ ಮಾತು ಬೇರೆ.

ಆದರೆ ಕನ್ನಡ ಕುಲಕೋಟಿಯನ್ನು ರಂಜಿಸಬೇಕು, ತನ್ಮೂಲಕ ಅವರ ಉನ್ನತಿಯನ್ನು ಸಾಧಿಸಬೇಕು ಎಂಬ ಉದಾತ್ತ ಧ್ಯೇಯದಿಂದ ಪ್ರೇರಿತರಾಗಿ ಶ್ರೀ ಗಳಗನಾಥರು ಗ್ರಂಥ ರಚನೆಮಾಡಿದರು.

**ದ. ಲ. ಕೆರೂರ**

ಶ್ರೀ ಗಳಗನಾಥರು ತಮ್ಮ ಪ್ರತಿಯೊಂದು ಕಾದಂಬರಿಯಲ್ಲಿ ವೀರಾಗ್ರಣಿಯನ್ನೇ ನಾಯಕನನ್ನಾಗಿ ಆರಿಸಿಕೊಂಡಿರುವರು; ಅವನ ಮುಖಾಂತರ ವೀರಶ್ರೀಯನ್ನು ಮೆರೆಯಲು ಅವರು ಯತ್ನಿಸಿರುವರು . . . ಅವರ ಕಾದಂಬರಿಗಳ ಭಾಷೆ ಸುಲಲಿತವಾಗಿದ್ದು ಸರ್ವರಿಗೂ ಸುಲಭವಾಗಿ ಗ್ರಾಹ್ಯವಾಗುವಂತಿರುವುದು . . . ಇದರ ಜೊತೆಗೆ ಅವರು ಹಳಗನ್ನಡ, ನಡುಗನ್ನಡ, ಹೊಸಗನ್ನಡ, ಸಂಸ್ಕೃತ ಹೀಗೆ ಎಲ್ಲವುಗಳನ್ನು ಅರಗಿಸಿಕೊಂಡು ಅವನ್ನು 'ಗಳಗನಾಥಭಾಷೆ' ಯಲ್ಲಿ ಎರಕಹೊಯ್ದು ಹೊಸ ಒಪ್ಪದೊಂದಿಗೆ ರೂಪಿಸಿದ್ದಾರೆ. ಕಥೆ ಸುಗಮವಾಗಿ ಸಾಗಲು ರಭಸದಿಂದ ಓಡಲು ಕಣ್ಣಿಗೆ ಕಟ್ಟಿ ನಿಲ್ಲುವಂತಾಗಲು ಅವರ ವಿಶಿಷ್ಟ ಭಾಷಾ ಸೌಂದರ್ಯವೇ ಕಾರಣವೆಂದು ಹೇಳಬೇಕು.

**ಎಸ್. ವಿ. ಪಾಟೀಲ**

ತಮ್ಮ ನಾಡುನುಡಿಗಳಿಗಾಗಿ ತಾವು ಕರ್ತವ್ಯವೊಂದನ್ನು ಮಾಡಬೇಕಾಗಿದೆ ಎಂಬ ಪ್ರಜ್ಞೆ ಅವರಲ್ಲಿ ಜಾಗೃತನಾಗಿತ್ತು. ಅದಕ್ಕಾಗಿ ಅವರು ತಮ್ಮ ಕಾದಂಬರಿಗಳನ್ನು ಬರೆದು ಈ ಕರ್ತವ್ಯವನ್ನು ಮಾಡಿ ಮುಗಿಸಿದರು. . . . ಆರ್ಥಿಕ ಅಡಚಣೆಗಳನ್ನು ಅವರು ಲಕ್ಷಿಸಲಿಲ್ಲ. ರೋಗ ರುಜಿನಗಳನ್ನು ಗಮನಿಸಲಿಲ್ಲ. ಮುಪ್ಪು ಸಾವುಗಳಿಗೂ ಸೊಪ್ಪು ಹಾಕದೆ ಅವರು ತಮ್ಮ ಕರ್ತವ್ಯವನ್ನು ಮಾಡಿದರು; ಮಾಡಿ ಮಡಿದರು.

**ಚಿದಂಬರಾನಂದ**

ಕನ್ನಡಕ್ಕಾಗಿ ತನ್ನನ್ನೇ ಅರ್ಪಿಸಿಕೊಂಡು ನಿರ್ವಂಚನೆಯಿಂದ ಸೇವೆಗೈದ ಈ ಮಹಾನುಭಾವನಿಗೆ ಕೊನೆಗೊದಗಿದ ಗತಿಯೇನು? ಗ್ರಂಥ ಪ್ರಕಟನೆಗಾಗಿ ಮಾಡಿದ, ಹೊತ್ತರೂ ಹೊರಲಾಗದಷ್ಟು ಸಾಲ ತೀರಿಸಲೆಂದು ಗಳಗನಾಥರು ತಮ್ಮ ಪುಸ್ತಕಗಳನ್ನು ಹೊತ್ತುಕೊಂಡು ಮಾರಾಟ ಮಾಡಲು ಊರೂರಿಗೆ ಅಲೆಯಬೇಕಾಯಿತು! ಅದಕ್ಕಾಗಿ ಅವರು ಸುತ್ತದಿದ್ದ ಭಾಗವೇ ಇಲ್ಲ. ಉತ್ತರ ಕರ್ನಾಟಕದ ಪ್ರತಿಯೊಂದು ಹಳ್ಳಿಗೂ ಅವರು ಹೋಗಿ ಬಂದಿರಬೇಕು. ಆದರೂ ಅದು ತಿರುಪತಿ ತಿಮ್ಮಪ್ಪನ ಸಾಲವಾಗಿಯೇ ಉಳಿಯಿತು.

ಜೀವಿತ ಕಾಲದಲ್ಲಿ ಗಳಗನಾಥರನ್ನು ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ವಿದ್ಯಾವರ್ಧಕ ಸಂಘ, ಮೈಸೂರಿನ ಮಹಾರಾಜ ಕಾಲೇಜು ಗೌರವಿಸಿದುವೆಂಬುದು ನಿಜ. ಆದರೆ ಸಾಹಿತ್ಯ ಸರಸ್ವತಿಯ ಉಪಾಸಕನಿಗೆ ದೊರೆಯಬಹುದಾದ ಸರ್ವೋಚ್ಚ ಗೌರವ-ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪದ ಮಾತ್ರ-ಅವರಿಗೆ ದೊರೆಯದೇ ಹೋಯಿತು.

**ಬದರೀನಾಥ ಮಹಿಷಿ**

ಗಳಗನಾಥರ ಶತಮಾನೋತ್ಸವ ಸಂದರ್ಭದಲ್ಲಿ ಕನ್ನಡಿಗರು ಅವರನ್ನು ಯಾವ ರೀತಿ ಸ್ಮರಿಸಿಕೊಳ್ಳಬೇಕೋ ಆ ರೀತಿ ಇಲ್ಲದಿರುವುದು ವಿಷಾದದ ಸಂಗತಿ. ಇಂದಿನ ಕನ್ನಡಿಗರಿಗೆ 'ಗಳಗನಾಥ ಯುಗ' ಮುಗಿದು ಹೋಗಿರಬಹುದು. ಆದರೆ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ "ಗಳಗನಾಥರ ಯುಗ"ವೊಂದು ಇದ್ದೇ ಇರುತ್ತದೆ ಎಂಬುದನ್ನು ನಾವು ಮರೆಯಬಾರದು.

**ಹಾ. ಮಾ. ನಾಯಕ**

[ಗಳಗನಾಥ ಗ್ರಂಥ, ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಕರ್ಮವೀರ ಮತ್ತು ಕನ್ನಡ ಪ್ರಭ ಪತ್ರಿಕೆಗಳ ಕೃಪೆಯಿಂದ]

# ಅರವತ್ತು ತುಂಬಿದ ಕನ್ನಡಿಗರಡಿಯಾಳು: ಜಿ. ಪಿ. ರಾಜರತ್ನಂ

'ಕೈ'

"ರಾಜರತ್ನಂ ಜೀಪಿ ಎಂಬೆಂ-
ಗೇಜಿನವರೆಂಅತ್ತು ಕನ್ನಡ
ಪೇಜಿನೊಳಗೊಂದೆರಡೇನೊ
ಪದ್ಯದ ಬುಕ್ಕುಗಳ ಬರೆದು . . ."

ಇದು 'ಎಂಗೇಜ್'ನಲ್ಲಿದ್ದ ಜಿ. ಪಿ. ರಾಜರತ್ನಂ ಬಗ್ಗೆ ರಾಜರತ್ನಂ ಕಲ್ಪಿತ ಗುಪ್ತಸಂಪಾದಕ ಪಂಚಕದ ಬೈಲಿಂಗ್ಯು ಯಲ್ ಬಿಗ್ ಭಾರತಿ ಬರೆದ ಸಾಲುಗಳು. ಈಗ 'ಎಂಗೇಜ್' ಮೀರಿ ಷಷ್ಠಿಪೂರ್ತಿಯ ಘಟ್ಟದಲ್ಲಿದ್ದರೂ ಸಾಹಿತ್ಯ ಬರವಣಿಗೆಯ 'ಎಂಗೇಜ್‌ಮೆಂಟ್'ನಲ್ಲಿ ಸತತ ನಿರತರಾಗಿರುವವರು.

'ಗುಂಡ್ಲು ಪಂಡಿತ'ರ ವಂಶದವರು 'ಗುಂಡು' ಪಂಡಿತ ರಾಗಿ (ಅರ್ಥಾತ್ ಯೆಂಡ್ಕುಡ್ಕ ರತ್ನರಾಗಿ 'ಮರಿ ಹೆಂಡ' ವಾಗಿ) ಮಾರ್ಪಡುವಾಗ 'ಅತ್ತರತ್ತರತರೆಂದು ಹೊತ್ತು ಮೂರು ಅಳುವೆ ನೀನು' ಎಂಬ ಬಾಲಿಶ, ಅನುಕರಣೆಯ ಸಾಲುಗಳಿಂದ ಹಿಡಿದು,

'ರೆಕ್ಕೆ ಬಿಳುಪ್ನ ತೆಗೆದ್ ಎರಚ್ದಂಗೆ
ಸ್ನಾನ ಮಾಡಿದ ಕೊಕ್ರೆ' ಯಲ್ಲದೆ
'ಸುತ್ತಾ ಸಾಯೋ ಬಿಸಿಲೀನ್ ಚಾಪೆ
ಅಲ್ಲಲ್ಲೇ ಒಸಿ ನೆರಳೀನ್ ತೇಪೆ'

ಯಂಥ ಸಾಲಿನವರೆಗೆ ಕಾವ್ಯ ಪ್ರತಿಭೆ ಪ್ರದರ್ಶನದವರೆಗಿನ ಬೆಳವಣಿಗೆ ಅಪಾರ.

**ಕ್ರಾಂತಿ ಕಹಳೆ**

ಕಾವೇರಿಗೆ ಕಾಸೆಸೆದರೆ ಕೈವಲ್ಯಕ್ಕೆ ಕಾಲುಮಣೆ ಎಂದು ನಂಬಿದ್ದ ಚಿನ್ನದ ಗಂಟೆ ಚಿಕ್ಕರಂಗರಾಯರು, ಭಿಕ್ಷುಕನಿಗೆ ಕಾಸು ಕೊಡದೆ ಕಾವೇರಿಗೆ ಎಂಟಾಣೆ ಹಾಕಬೇಕಾಗಿ ಬಂದ ಪ್ರಸಂಗದ ತೆಳು ವಿಡಂಬನೆಯಿಂದ ಹಿಡಿದು, ಅಭಿರಾಮತರ ಗಾನ ಹಾಡಿದ ವಿಕಾರ ಸ್ವರೂಪದ ಮುದುಕಿಯನ್ನು ಕಂಡು, 'ಇಂಥ ಕೊರಳ ಕೃಷ್ಣನಿಗೆ ಇಂಥ ಗುಡಿಯನ್ನು ಕಟ್ಟಿದ ದೇವರಾದರೂ ಯಾವ ಮ್ಲೇಚ್ಛನಿಗೆ ಕಡಿಮೆ?' ಎಂದು ಗುಡುಗಿದ ರಾಜರತ್ನಂ, ಹರಿತದ ಲೆಕ್ಕಣಿಕೆಯನ್ನು ಬಿಸಿನೆತ್ತರಿನಲ್ಲದ್ದಿ ಬರೆದು 'ಮಸೆಯಲ್ಲಿ ಕ್ರಾಂತಿಯ ಕ್ರೂರ ಕಠಾರಂ' ಎಂದು 'ಗಂಡುಗೊಡಲಿ'ಯನ್ನು ಮಸೆದರು.

'ಕೈಲಿ ಕಿಸೀದೆ ಕರ್ಮಾಂತ್ ಕಿರ್ಲೊ
ಕಂಜೋರ್ ಆದ್ಮಿ ಬಕ್ರ'

ಎಂದು ಕರ್ಮವಾದಿಗಳನ್ನು ಮೂದಲಿಸಿ, 'ನಾಡಿನ ಬಡವ ಸರ್ಕಸ್ ಸಿಮ್ಮ'ನಿಗೆ ಕ್ರಾಂತಿಗೆ ಕರೆಕೊಟ್ಟ ರಾಜರತ್ನಂ, ಅಹಿಂಸಾಮೂರ್ತಿ ಬುದ್ಧನಿಗೆ ಸಂಬಂಧಿಸಿದ ಸಾಹಿತ್ಯದಲ್ಲಿ ಕೈಯಾಡಿಸಿ, ಶಿಶು ಸಾಹಿತ್ಯದಲ್ಲಿ ಮಕ್ಕಳ ಬಾಯಿಯಲ್ಲಿ ನಲಿದಾಡುವ ಹತ್ತಾರು ಪದ್ಯಗಳ 'ಬಣ್ಣದ ತಗಡಿನ ತುತೂರಿ' ಯೂದಿದರು. (ಆಗಾಗ್ಗೆ 'ಗಗಗಗ ಸದ್ದನು ಮಾಡಿದರು' ಎಂದೂ ಹೇಳಬಹುದು).

'ಕರ್ನಾಟಕವೊ ಕರ್ಣಾಟಕವೊ'ಎಂಬ 'ನ ಣ' ವಿವಾದ ವೆದ್ದಾಗ 'ನೊಣ'ವನ್ನು 'ಮಣ' ಮಾಡಿದರೆಂದು, ಪುರುಷ ಸರಸ್ವತಿಯನ್ನು ಆವಾಹಿಸಿ ಕನ್ನಡಕ್ಕೇ ವಿನೂತನ ವಿಡಂಬನೆ ಸಾಹಿತ್ಯ ಒದಗಿಸಿದರು.

'ಕೌಂಗು ನೀ ನಾ ಕುರುಚಲೆನ್ನೀ
ಟಾಂಗದೆದುರಿಗೆ ಬಸ್ಸು ನೀ
ಕಿಂಗ್‌ಕಾಂಗ್ ನೀ ಕ್ರಿಮಿ ನಾನು
ಪುಂಗವ ನೀನು, ನಾನೇನು?'

ಎಂದು 'ಪುರುಷ ಸರಸ್ವತಿಯ' ನೆಪದಲ್ಲಿ ಕುಕವಿ ನಿಂದೆ ಯಲ್ಲದೆ ಸಾಹಿತ್ಯ ಲೋಕದ ಒಳಹೊರಗುಗಳ ಜನ್ಮ ಜಾಲಾಡಿದರು.

'ನೂರು ಪುಟಾಣಿ' ನೂರು ಚುಟಕಗಳ, ನೂರು ಮುಕ್ತಕಗಳ ಮಾಲೆ.

'ಗುರು ಮಹಾವಾಗ್ಮಿ –
ಮಾತಾಡಿದರೆ ಘಂಟೆ, ಕಂಚು.
ಶಿಷ್ಯರೊ ಏಳೆ –
ಗೋಡೆ ನಾಲ್ಕರ ಜೊತೆಗೆ ನೂರು ಬೆಂಚು

ಆದರೆ ಕಂಚುಕಂಠಿಯಾದ ರಾಜರತ್ನಂ ಮಾತನಾಡಿ ದಾಗ ಇರುವುದು ನೂರು ಬೆಂಚು–ಅದರ ಮೇಲೆಲ್ಲ ಕಿವಿ ಅಗಲಿಸಿ ಕುಳಿತ ಶ್ರೋತೃಗಳೇ.

ಪದ್ಯದಲ್ಲಿ, ಮುಕ್ತಕದಲ್ಲಿ, ಪ್ರತಿಭೆ ಮಿಂಚಿದ 'ರತ್ನನ ಪದಗಳಲ್ಲಿ', ವಿಡಂಬನೆಯಲ್ಲೇ ಮುಗಿಯಿತೇ? ಇಲ್ಲ ಮತ್ತೆ ಸಿದ್ಧವಾಗಿತ್ತು.

'ನಾ ನಾಗಮುತ್ತು
ಶಾನೆ ದಿನಾಗಿತ್ತು
ಎಡೇನೆತ್ತಿ ನಿತ್ತು'

ನಾಗನ ಪದಗಳಲ್ಲಿರುವ ಪ್ರಾಸ ಚಮತ್ಕಾರ, ಪದ್ಯದ ಓಟ:

'ಯಾಂಡಲ್ ಯಿರ್ಗ್ ಇಡೀಕ್ಕ
ಶೀಟ್ ಮ್ಯಾಗ್ ಮಡೀಕ್ಕ.
ಐ, ನಾಚಿಕ್ಯಾಕ್ ಮಲ್ಲಿ?
ಯಾರ್ ಔರ್ ಇಲ್ಲಿ?
ಸುತ್ತೆಲ್ಲ ತಿಂಗಳ ಮಬ್ಬು
ನನ್ನಿಲ್ಲೇ ಇಂಗೇ ತಬ್ಬು
ನೋಡಕ್ ಯಾರಿಲ್ಲ'

'ರತ್ನ'ರನ್ನು ಮೆಚ್ಚಿದವರಿಗೆ ಅನಿರೀಕ್ಷಿತ ಆಶ್ಚರ್ಯ.

'ವೋಯ್ತುಲ್ಲೋ ವೋಯ್ತು ನಮ್ಮಳ್ಳಿಮರ
ಪ್ಯಾಟೆ ಪಟ್ನಕೆ ಬಂತು ಸುಡುಗಾಡು ಸೌದೇ ಬರ'

—ಇದರಲ್ಲಿ ಅವರ ಮಾಮೂಲು ಕವನಗಳಿಗೆ ಮೀರಿ, ಸಂಕೇತವಾಗಿ ವಿಜೃಂಭಿಸುವ ಅಶ್ವತ್ಥ ಮರ.

ಕಾವ್ಯದ ಪ್ರತಿಭೆ ಹೀಗೆ ಮಿಂಚಿದರೂ ಅವರದೇ ಪಂಥವಾಗುವಂತೆ ಪ್ರಭಾವ ಬೀರಲಿಲ್ಲವೇಕೆ? ಕಾರಣ ಅವರ ಸಾಹಿತ್ಯ ಶಕ್ತಿ, ಉಳಿದ ಹಿರಿಯರ ಪ್ರತಿಭೆಗೆ ಮಾರುಹೋದುದಲ್ಲದೆ, ಅವರ ಸತ್ವವನ್ನು ಇತರರಿಗೆ ಉಣಬಡಿಸುವ ಪರಿಚಾರಿಕೆಗೆ ಕಾಲವೆಲ್ಲ ಮೀಸಲಾದುದಿರಬಹುದೆ?

## ಮತ್ತೆ ಕೆರಳಲಿ

ಡಿ. ವಿ. ಜಿ., ಕೈಲಾಸಂ, ಗೋವಿಂದ ಪೈ, ಸಂಸ—ಇವರ ಸಾಹಿತ್ಯ ಪ್ರಚಾರಕ್ಕೆಲ್ಲ ತಮ್ಮ ಸರ್ವಶಕ್ತಿ ನೀಡಿದುದಲ್ಲದೆ, ಕೆ. ವಿ. ಅಯ್ಯರ್, ರಾ. ಶಿ. ಇವರಿಗೆಲ್ಲ ಸತತ ಉತ್ತೇಜನ ಕಾರ್ಯದಲ್ಲಿ ನಿರತರಾದುದಲ್ಲದೆ, ಮಹಾರಾಜ ಕಾಲೇಜ್, ಸೆಂಟ್ರಲ್ ಕಾಲೇಜ್-ಎಲ್ಲಿದ್ದರಲ್ಲಿ ವಿದ್ಯಾರ್ಥಿಗಳನ್ನು ಕಲೆಹಾಕಿ ಅವರಿಂದ ಕಥೆ, ಕವನ, ಪ್ರಬಂಧ, ಉಪನ್ಯಾಸಗಳ ಪ್ರಕಟಣೆಗೆ ಸಿದ್ಧ.

ಹಿಂದೆ ಯೌವನದ ವೈಕಟ್ಟಿನ ಗಂಡುಗೊಡಲಿಯ ಈ 'ಕನ್ನಡಿ-ಗರಡಿಯಾಳು' ವಯೋಧರ್ಮದಿಂದ ಮೆದುವಾದರೂ ಸದಾ 'ಕನ್ನಡಿಗ-ರಡಿಯಾಳು' ಎಂಬುದು ನಿಸ್ಸಂದೇಹ.

ಇವರು ಬರೆದ ಕೃತಿಗಳನ್ನು ಪಟ್ಟಿಮಾಡುವುದು, ನೆನಪಿಡುವುದು ಸುಲಭವಲ್ಲ. 'ಇಷ್ಟೆಲ್ಲ ಬರೆಯುತ್ತೀರಲ್ಲ, ಇದರಿಂದ ಏನು ಬಂತು?' ಎಂಬ ಪ್ರಶ್ನೆಗೆ ಉತ್ತರ: Satisfaction (ತೃಪ್ತಿ). ಆದರೆ ಅದರಲ್ಲೇ ಬದುಕುವುದಕ್ಕಾಗುವುದಿಲ್ಲವಲ್ಲ. ಅದಕು, ಇದಕು, ಎದಕು ಅದನ್ನು ಬಳಸಿಕೊಳ್ಳುವುದಕ್ಕಾಗುವುದಿಲ್ಲವಲ್ಲ.

'ಕವಿತೆಯೊಳಾಸೆಗೆಯ್ವ ಫಲಮಾವುದೊ' ಎಂದು—ಪಂಪ ಪ್ರಶ್ನಿಸಿ, 'ಪೂಜೆ, ನೆಗಳ್ತೆ, ಲಾಭ' ಎಂದು ಉತ್ತರ ಕೊಡುತ್ತಾನೆ.

'ಪೂಜೆ ತನಗಿನಿಸಿಲ್ಲವೆಂದೆ
ನ್ರೇಜುಗೊಂಡಿಹರಂತೆ
ತದ್ರೇಜಿನಿಂದಲೆ ನ್ಯಾಷ್ಟಿಯಾಗಿಹರಂತೆ
ಪೂರ್ ಓಲ್ಡ್ ಚಾಪ್'

ಎಂದು ತಮ್ಮ ಮೇಲೇ ಬರೆದು ಗೇಲಿ ಮಾಡಿಕೊಂಡಿದ್ದರು.

ಆದರೆ ಅರುವತ್ತಕ್ಕೆ ದೊರಕುವ ಪೂಜೆ ನೆಗಳ್ತೆ (ಕೀರ್ತಿ) ಅಲ್ಲದೆ ಪಂಪ ಹೇಳಿದ 'ಲಾಭ' ಬೇರೆ ಅರ್ಥದಲ್ಲಿರಬಹುದು. ಪೂಜೆ,ನೆಗಳ್ತೆ ಅವರಿಗೆ ದೊರೆತರೂ ಓದುಗರಾದ ನಮಗೆ ಒಂದು ರೀತಿಯಲ್ಲಂತೂ ಆ ಸಾಹಿತ್ಯದಿಂದ ಲಾಭವಾಗಿದೆ.

My works are more of irritation than inspiration ಎನ್ನುತ್ತಾರೆ ರಾಜರತ್ನಂ. ಅರುವತ್ತಾದರೂ ಕೆರಳುವುದು ಕಡಿಮೆಯಾಗಿಲ್ಲ ಎಂದು ನಂಬಲು ಆಶೆ. ಈ ನೆತ್ತರು ಆರದಿರಲಿ ಮತ್ತೆ ಯಾರಾದರೂ ಅವರನ್ನು ಕೆಣಕಬಾರದೆ? 'ನಾಗನ ಪದ'ವನ್ನು ಮೀರಿದ ಕೃತಿ ನಮಗೆ ಬರಬಾರದೆ?

[ಪ್ರಜಾವಾಣಿ ಕೃಪೆಯಿಂದ]

# ಅಭಿನಯ ಲೋಕದ ಧ್ರುವತಾರೆಗಳ ಮರೆಯಲಾರದ ನೆನಪುಗಳು

**ಹ. ವೆಂ. ಸೀತಾರಾಮಯ್ಯ**

ಕನ್ನಡ ರಂಗಭೂಮಿಯನ್ನು ಕಟ್ಟಿ ಬೆಳೆಸಿದ, ಆ ಗುರಿಯನ್ನು ಹೊತ್ತು ದುಡಿದು ಕಣ್ಮರೆಯಾಗಿರುವ ಹಾಗೂ ದುಡಿಯುತ್ತಿರುವ, ರಂಗಭೂಮಿ ಕಲಾವಿದರನ್ನು ಇಂದು ನೆನಪುಮಾಡಿಕೊಳ್ಳುವವರೇ ವಿರಳ. ಅವರ ಹೆಸರುಗಳನ್ನು ಮರೆತವರೂ ಇಲ್ಲದಿಲ್ಲ. ಸಂಗೀತಗಾರ, ಚಿತ್ರಕಾರ, ಶಿಲ್ಪಿ ಇವರ ಕೃತಿಗಳು ಧ್ವನಿಮುದ್ರಿಕೆ, ಚಿತ್ರಶಿಲ್ಪಗಳ ರೂಪದಲ್ಲಿ ಉಳಿಯುತ್ತದೆ. ಆದರೆ ನಟ-ನಟಿಯರ, ನರ್ತಕರ ಕೃತಿಗಳನ್ನು ಬಳಸಿಕೊಳ್ಳುವ ಸಾಧನವಿಲ್ಲ. ಇತಿಹಾಸವೊಂದೇ ಇವರನ್ನು ಚಿರಸ್ಥಾಯಿಗೊಳಿಸಬಲ್ಲದು. ಭವಿಷ್ಯದ ಪೀಳಿಗೆಯಲ್ಲಿ ಕಲಾವಿಲಾಸಿಗಳಿಗೆ ರಂಗಭೂಮಿಯ ಈ ಅಮರಜೀವಿಗಳ ಪುಣ್ಯಸ್ಮರಣೆಗಳೇ ನಿರಂತರ ಸ್ಫೂರ್ತಿಯ ಸೆಲೆ. ಈ ನಿಟ್ಟಿನಲ್ಲಿ ರಂಗಭೂಮಿಯ ಸೇವೆಗೆ ತಮ್ಮ ಜೀವನವನ್ನೇ ಸಮರ್ಪಿಸಿ ಕಲೈಕ್ಯರಾಗಿರುವ ಮುಹಮದ್ ಪೀರ್, ಸಿ. ಬಿ. ಮಲ್ಲಪ್ಪ, ಬಳ್ಳಾರಿ ರಾಘವ, ವಿಶ್ರಾಂತಿ ಜೀವನವನ್ನನುಭವಿಸುತ್ತಿರುವ ಹಮ್ಮಿಗಿ ನೀಲಕಂಠಪ್ಪ, ಜೋಳದರಾಶಿ ದೊಡ್ಡನಗೌಡ, ಹುಲಿಮನೆ ಸೀತಾರಾಮಶಾಸ್ತ್ರಿ ಮೊದಲಿಗರ ಬಣ್ಣದ ಬದುಕಿನ ಮರೆಯಲಾಗದ ಸನ್ನಿವೇಶಗಳನ್ನು ನೆನಸಿಕೊಳ್ಳುವುದು ನಮ್ಮ ಆದ್ಯ ಕರ್ತವ್ಯವಾಗಿದೆ.

## ಮುಹಮದ್ ಪೀರ್

ಗೌತಮಬುದ್ಧ, ದಾರಾ ಅವರುಗಳನ್ನು ರಂಗಭೂಮಿಯ ಮುಖೇನ ಜೀವಂತವಾಗಿಸಿ ಮೆರೆಸಿದ ಕಲಾತಪಸ್ವಿ ಮುಹಮದ್ ಪೀರ್ ಕನ್ನಡ ರಂಗಭೂಮಿಯ ಇತಿಹಾಸ ಗ್ರಂಥದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹ ಅಭಿನಯವನ್ನಿತ್ತು ಕಲೈಕ್ಯರಾದ ಕಲಾತಪಸ್ವಿ. ಅಭಿನಯ ಕಲೆಯು ಸಹಜತೆಯ ಅನುಕರಣ ಮಾತ್ರವಲ್ಲವೆಂದೂ, ಮನೋಧರ್ಮದ ವಿರೋಧ ಸ್ವಭಾವವನ್ನು ಸಹಜವಾಗಿಯೇ ಅಭಿನಯಿಸಲು ಸಾಧ್ಯವೆಂಬ ಸಿದ್ಧಾಂತವನ್ನು ಅನುಷ್ಠಾನದಿಂದ ಋಜುವಾತುಮಾಡಿದ ಪೀರ್ ಅವರ ಬುದ್ಧ, ದಾರಾ ಪಾತ್ರಗಳು ಅಭಿನಯ ವಿಜಯದ ವೈಜಯಂತಿಗಳಾಗಿದ್ದವು. ಅವರ ತನ್ಮಯತೆಯ ಅಭಿನಯಕ್ಕೆ ಈ ಒಂದು ಸನ್ನಿವೇಶ ಸಾಕ್ಷಿಯಂತಿದೆ.



ಜನಪ್ರಿಯ ಕಾದಂಬರಿಕಾರ ಶ್ರೀ ಅ. ನ. ಕೃಷ್ಣರಾಯರು ಒಮ್ಮೆ ತಮ್ಮ ಅಚ್ಚುಮೆಚ್ಚಿನ ಸ್ನೇಹಿತರಾದ ಪೀರ್ ಸಾಹೇಬರನ್ನು ತಮ್ಮ ಮನೆಗೆ ಭೋಜನಕ್ಕೆ ಆಹ್ವಾನಿಸಿದ್ದರು. ಆಗ ಅವರ ಮನೆಯಲ್ಲಿ ಅವರ ಅಜ್ಜಿಯವರಲ್ಲದೆ ಬೇರೆ ಯಾರೂ ಇರಲಿಲ್ಲ. ಸರಿ, ಭೋಜನವಾಯಿತು. ಎಲೆ ತೆಗೆಯುವವರು ಯಾರು? ಮಡಿವಂತಿಕೆಯ ಅಜ್ಜಿ, ಮನೆಗೆ ಬಂದಿರುವ ಅತಿಥಿ ಮುಹಮದೀಯರೆಂದು ತಿಳಿದು ಮನಸ್ಸನ್ನು ಕಸಿವಿಸಿ ಮಾಡಿಕೊಂಡರು. ತಮ್ಮ ಅಜ್ಜಿಯ ಮನೋಗತವನ್ನು ಅರಿತ ರಾಯರೇ ಎಲೆ ಎತ್ತಿದರು. ಅಜ್ಜಿಗೆ ಪೀರ್ ಅವರ ವ್ಯಕ್ತಿತ್ವದ ಪರಿಚಯವನ್ನು ಮಾಡಿಕೊಡಬೇಕೆಂದು ನಿರ್ಧರಿಸಿ ಅದೇ ದಿನ "ಗೌತಮ ಬುದ್ಧ" ನಾಟಕಕ್ಕೆ ಆಕೆಯನ್ನು ಕರೆದೊಯ್ದರು. ರಾಯರು ಅಜ್ಜಿಯ ಪಕ್ಕದಲ್ಲೇ ಆಸೀನರಾಗಿದ್ದರು. ನಾಟಕದಲ್ಲಿ ಬುದ್ಧ ತನ್ನ ಪತ್ನಿಯನ್ನೂ, ಮಗನನ್ನೂ, ಅತುಳ ಐಶ್ವರ್ಯ

ವನ್ನೂ, ಅರಮನೆಯನ್ನೂ ತ್ಯಜಿಸಿ ಹೋಗುವ ದೃಶ್ಯ. ಪೀರ್ ತನ್ಮಯತೆಯಿಂದ ಅಭಿನಯಿಸುತ್ತಿದ್ದರು. ಪ್ರೇಕ್ಷಕ ವೃಂದದಲ್ಲಿ ಬಹುಮಂದಿ ಕಣ್ಣೀರಿಡುತ್ತಿದ್ದರು. ಅಜ್ಜಿಯೂ ಇದಕ್ಕೆ ಹೊರತಾಗಿರಲಿಲ್ಲ. ರಾಯರು ಅಜ್ಜಿಯನ್ನು ನೋಡಿ ನಸುನಕ್ಕರು. ಅಜ್ಜಿ ದುಃಖವನ್ನು ತಡೆಯಲಾರದೆ, "ಕಿಟ್ಟು, ಬುದ್ಧನ ಪಾತ್ರಧಾರಿ ಯಾರಪ್ಪಾ? ಆತ ನಟನಲ್ಲಪ್ಪ, ದೈವಾಂಶ ಸಂಭೂತ" ಎಂದು ಉದ್ಗಾರವೆತ್ತಿದರು. ಅದಕ್ಕೆ ಅ. ನ. ಕೃ. "ಬೆಳಗ್ಗೆ ಊಟಕ್ಕೆ ಬಂದಿದ್ದರಲ್ಲ, ಆ ಸಾಹೇಬರೆ ಬುದ್ಧ" ಎಂದುತ್ತರಿಸಿದರು. ಅಜ್ಜಿ ದಂಗುಬಡಿದು ಹೋಗಿ "ಆತ ಮುಸಲ್ಮಾನನಲ್ಲಪ್ಪ, ಬ್ರಾಹ್ಮಣ" ಎಂದರು. ಎಂತಹ ಕಲ್ಲೆದೆಯವರನ್ನಾದರೂ ಕರಗಿಸಿಬಿಡುವಂತಹ ಪ್ರತಿಭೆ ಪೀರರದು. ಪೀರ್ ಸಾಹೇಬರ ಬುದ್ಧನ ಪಾತ್ರವನ್ನು ವೀಕ್ಷಿಸಿದ ಸಾಲಗಾರರೂ ಸಹ ಕಣ್ಣೀರು ಸುರಿಸಿ ತಾವು ಕೊಟ್ಟ ಸಾಲವನ್ನೇ ಮರೆತು ಹಿಂತಿರುಗುತ್ತಿದ್ದರಂತೆ. ಪೀರ್ ಸಾಹೇಬರಿಗೆ ತಮ್ಮ ಜೀವಿತಕಾಲದಲ್ಲಿ ನಾಟಕ ಕರ್ತೃ ದ್ವಿಜೇಂದ್ರ ಲಾಲ್‌ರಾಯ್ ಅವರ (ಕನ್ನಡದಲ್ಲಿ ನಾಟಕ ಕರ್ತೃ ಶ್ರೀ ಬಿ. ಪುಟ್ಟಸ್ವಾಮಯ್ಯ) ಇನ್ನೊಂದು ಐತಿಹಾಸಿಕ ನಾಟಕ ಸಾಮ್ರಾಟ್ ಚಂದ್ರಗುಪ್ತ ನಾಟಕವನ್ನು ಕನ್ನಡ ರಂಗಮಂಚಕ್ಕೆ ಬಹು ಅದ್ದೂರಿಯಾಗಿ ತರಬೇಕೆಂಬುದು ಬಯಕೆಯಾಗಿತ್ತು. ಆದರೆ ಅದು ನೆರವೇರುವ ಮೊದಲೇ ಅವರು ಕಾಲನ ಕರೆಗೆ (೧೯೩೭ರಲ್ಲಿ) ಓಗೊಡಬೇಕಾಯಿತು. ಚಾಣಕ್ಯನ ಪಾತ್ರದಲ್ಲಿ ಪೀರ್ ಅವರ ಅಭಿನಯವನ್ನು ನೋಡುವ ಅವಕಾಶ ಕನ್ನಡ ಕಲಾರಸಿಕರ ಪಾಲಿಗೆ ದೊರೆಯಲಿಲ್ಲ. ಪೀರ್ ಅವರು ಕೀರ್ತಿಗಳಿಸಿದರು. ಪ್ರತಿಷ್ಠೆ ಕೈಸೇರುವ ಮೊದಲೇ ವಿಧಿ ಎದುರಾಯಿತು.

## ಸಿ. ಬಿ. ಮಲ್ಲಪ್ಪ

ಕನ್ನಡ ರಂಗಭೂಮಿಯಲ್ಲಿ ಭಕ್ತಿರಸಪ್ರಧಾನ ಪಾತ್ರಗಳ ನೆನಪು ಬಂದಾಗ ಅಭಿನವ ಭಕ್ತ ಶಿರೋಮಣಿ ದಿವಂಗತ ಸಿ. ಬಿ. ಮಲ್ಲಪ್ಪ ಅವರ ಕಬೀರ್ ಪಾತ್ರವನ್ನೂ ಸ್ಮರಿಸಬೇಕಾದೀತು.



ತಮ್ಮ ಅಭಿನಯ ವಿಶೇಷದಿಂದ ಪ್ರೇಕ್ಷಕರನ್ನು ಮುಗ್ಧಗೊಳಿಸುತ್ತಿದ್ದ ಸಿ. ಬಿ. ಮಲ್ಲಪ್ಪನವರ ಕಲಾವಂತಿಕೆಗೆ ನಿದರ್ಶನಗಳಿವು: ಒಮ್ಮೆ ಮೈಸೂರಿನ ಅರಮನೆಯಲ್ಲಿ ಮಲ್ಲಪ್ಪನವರಿಗೆ ಕಬೀರ್ ನಾಟಕದಲ್ಲಿ ಹಾಡುತ್ತಿದ್ದ ಭಕ್ತಿಗೀತೆಗಳನ್ನು ಹಾಡುವ ಅವಕಾಶ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್ ಅವರಿಂದ ದೊರಕಿತು. "ವಸಂತ ಮಹಲ್"ನಲ್ಲಿ ಮಲ್ಲಪ್ಪನವರ ಕಾರ್ಯಕ್ರಮ ಏರ್ಪಾಡಾಯಿತು. ಕಬೀರ್ ರಾಮಧ್ಯಾನವನ್ನು ಮಾಡುವ ದೃಶ್ಯದ ಭಕ್ತಿಗೀತೆಗಳನ್ನು ಪ್ರಭುಗಳ ಸನ್ನಿಧಾನದಲ್ಲಿ ಹಾಡಿದರು. ಪ್ರಭುಗಳು ಗೀತೆಗಳನ್ನು ಕೇಳಿ ಭಕ್ತಿಪರವಶರಾದರು. ಒಮ್ಮೆಲೇ ಎದ್ದುನಿಂತು, ಕಬೀರ್ ಪಾತ್ರದ ಗೀತೆಗಳನ್ನು ಹಾಡುತ್ತಿರುವವರು ಮಲ್ಲಪ್ಪನವರು ಎಂಬುದನ್ನು ಮರೆತು ಕೈಜೋಡಿಸಿದರು.

೧೯೨೩ರ ಮಾತು. ಗುಬ್ಬಿ ಕಂಪೆನಿ ಸ್ತ್ರೀಯರಿಗಾಗಿಯೇ "ಕಬೀರ್ ದಾಸ್" ನಾಟಕವನ್ನಾಡುವ ಪರಿಪಾಠವನ್ನಿಟ್ಟುಕೊಂಡಿತ್ತು. ಹಿಂಭಾಗದ ಪ್ರಭುಗಳು (ಎಂಟಾಣೆಯ ಕ್ಲಾಸಿನವರು) ಕಿಕ್ಕಿರಿದಿದ್ದರು. ರಾಮಭಜನೆಯ ದೃಶ್ಯ ಆರಂಭವಾಯಿತು. ಭಜನೆಯನ್ನು ಆಲಿಸುತ್ತಿದ್ದ ಪ್ರೇಕ್ಷಕವೃಂದ ಭಕ್ತಿಸಾಗರದಲ್ಲಿ ಲೀನವಾಗಿತ್ತು. ಆ ಭಜನೆಯನ್ನು ಕೇಳುತ್ತಾ ಓರ್ವ ಹೆಂಗಸು ದೇಹಭಾವವನ್ನೇ ಮರೆತಳು. ಕಬೀರ್ ರಾಮನಿಗೆ ಪೂಜೆಮಾಡಿದ್ದ ಪ್ರಸಾದ ಹಾಗೂ ತೀರ್ಥವನ್ನು ಪ್ರೋಕ್ಷಿಸಿದ ನಂತರ ಪವಾಡವೋ ಏನೋ ಎಂಬಂತೆ ಆಕೆಗೆ ಜ್ಞಾನ ಬಂದಿತು.

ಮತ್ತೊಂದು ನಿದರ್ಶನವೂ ಮರೆಯಲಾರದಂತಹುದು : "ಕಬೀರ್‌ದಾಸ್" ನಾಟಕದಲ್ಲಿ ಕಬೀರ್ ತನ್ನ ಪುತ್ರ ಕಮಾಲ್‌ನ ತಲೆ ಕತ್ತರಿಸುವ ದೃಶ್ಯ. ಮತ್ತೊಂದು "ಹರಿಶ್ಚಂದ್ರ" ತನ್ನ ಅರ್ಧಾಂಗಿ ಚಂದ್ರಮತಿಯ ಶಿರಚ್ಛೇದನಮಾಡುವ ದೃಶ್ಯ. ಈ ಪಾತ್ರಗಳಲ್ಲಿ ಮಲ್ಲಪ್ಪನವರು ತೋರುತ್ತಿದ್ದ ಮನೋಜ್ಞವಾದ ಅಭಿನಯ, ಅವರಲ್ಲಿದ್ದ ಪಾತ್ರ ಪರಿಜ್ಞಾನ, ಅವರ ಹೆಸರನ್ನು ಅಜರಾಮರ ಮಾಡಿತಲ್ಲವೆ ಕನ್ನಡ ನಾಡಿನ ಮನೆಮಾತಾಗಿಸಿತು.

## ಬಳ್ಳಾರಿ ರಾಘವ

ಬಹು ವರ್ಷಗಳ ಹಿಂದಿನ ಮಾತು. ಆಂಧ್ರ ರಂಗಮಂಚದ ಪ್ರಸಿದ್ಧ ನಟ ಪದ್ಮಶ್ರೀ ಸ್ಥಾನಂ ನರಸಿಂಹರಾವ್ ಅವರು ರಾಜಮಂಡ್ರಿಯಲ್ಲಿ ಜರುಗಲಿದ್ದ ನಾಟಕವೊಂದರ ವೀಕ್ಷಣೆಗಾಗಿ ತೆನಾಲಿಯಿಂದ ರೈಲಿನಲ್ಲಿ ಹೊರಟಿದ್ದರು. ರೈಲುಹತ್ತಿ ಕುಳಿತ ಸ್ವಲ್ಪ ಹೊತ್ತಿನಲ್ಲೇ ಅವರ ಗಮನ ಆಜಾನುಬಾಹುವಾದ ಐದು ದಶಕಗಳನ್ನು ದಾಟಿದ್ದ ಓರ್ವ ವ್ಯಕ್ತಿಯತ್ತ ನೆಟ್ಟಿತು. "ದೇಹದ ಬಿಗಿ ಸ್ವಲ್ಪವೂ ಸಡಿಲಗೊಂಡಿಲ್ಲದ ಸ್ಫುರದ್ರೂಪಿ, ಆಕರ್ಷಕ ನೇತ್ರ, ವಿಶಾಲವಾದ ಹಣೆ, ಕಪ್ಪಾದ ಮುಂಗುರುಳು, ಸಂಪಿಗೆ ಎಳಸಿನಂತಹ ಉದ್ದವಾದ ನಾಸಿಕ, ಸರಸ ಸಂಭಾಷಣೆ, ಕಿರುನಗೆ ಇಷ್ಟನ್ನೂ ಮೈಗೂಡಿಸಿಕೊಂಡಿರುವ ಈ ವ್ಯಕ್ತಿ ನಟನಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ?" ಎಂದುಕೊಂಡರು. ರೈಲು ಬೆಜವಾಡ ನಿಲ್ದಾಣವನ್ನು ತಲುಪಿತು. ನಿಲ್ದಾಣದಲ್ಲಿ ಅಸಂಖ್ಯಾತ ಜನ ಹೂಮಾಲೆಗಳನ್ನು ಹಿಡಿದು ನಿಂತಿದ್ದರು. ರೈಲು ನಿಂತನಂತರ ಸ್ಥಾನಂ ಅವರ ಗಮನವನ್ನು ಸೆಳೆದಿದ್ದ ಆ ಆಜಾನುಬಾಹುವಾದ ವ್ಯಕ್ತಿ ಕಿಕ್ಕಿರಿದಿದ್ದ ಜನಸ್ತೋಮಕ್ಕೆ ವಂದಿಸಿ ಮುಗುಳು ನಗೆ ಬೀರಿತು. ಪ್ರಚಂಡ ಜನಸ್ತೋಮ ನಿಲ್ದಾಣದ ಛಾವಣಿ ಹಾರಿಹೋಗುವಂತೆ "ನಾಟ್ಯಕಲಾಪ್ರಪೂರ್ಣ ಜಿಂದಾಬಾದ್", "ಬಳ್ಳಾರಿ ರಾಘವ ಜಿಂದಾಬಾದ್" ಎಂದು ಕೂಗತೊಡಗಿದರು. ತಮ್ಮ ಗಮನವನ್ನು ಸೆಳೆದ ವ್ಯಕ್ತಿ ಬೇರೆ ಯಾರೂ ಅಲ್ಲ. ಧರ್ಮಾವರಂ ಕೃಷ್ಣಮಾಚಾರ್ಯರ ಅಳಿಯ, ಪ್ರಖ್ಯಾತ ವಕೀಲ, ಪ್ರಸಿದ್ಧ ರಂಗನಟ, ಬಳ್ಳಾರಿ ರಾಘವ ಎಂಬುದು ತಿಳಿದು ಹೋಯಿತು. ಹರ್ಷಭರಿತರಾದ ಅವರು ರಾಘವರನ್ನು ಭೇಟಿಮಾಡಿಯೇ ತೀರಬೇಕು ಎಂದುಕೊಂಡು ನಾಟಕವನ್ನು ವೀಕ್ಷಿಸಲು ರಂಗಮಂದಿರಕ್ಕೆ ತೆರಳಿದರು. ಅಂದಿನ ನಾಟಕ "ವಿಜಯನಗರ ಸಾಮ್ರಾಜ್ಯ ಪತನ." ಪ್ರೇಕ್ಷಕವೃಂದ ರಂಗಮಂದಿರದಲ್ಲಿ ಕಿಕ್ಕಿರಿದಿದ್ದಿತು. ಪಠಾಣ್ ಪಾತ್ರದಲ್ಲಿ ರಾಘವರು ರಂಗಮಂದಿರದ ಮೇಲೆ ಕಾಣಿಸಿಕೊಂಡರು. ಅವರ ತನ್ಮಯತೆಯ ಧೀಮಂತ ಅಭಿನಯ ಅಯಸ್ಕಾಂತದಂತೆ ಪ್ರೇಕ್ಷಕರನ್ನು ಸೆರೆಹಿಡಿಯಿತು. ಶಿಲಾಪ್ರತಿಮೆಯಂತಾಗಿ ಹೋದರು. ಸ್ಥಾನಂ ಅವರು ಆ ಅಭಿನಯಕ್ಕೆ ಮೈಮರೆತರು. ನಾಟಕ ಮುಕ್ತಾಯವಾದ ನಂತರ ನೇರವಾಗಿ ಗ್ರೀನ್ ರೂಮಿಗೆ ಪ್ರವೇಶಿಸಿ ರಾಘವರನ್ನು ಭೇಟಿಮಾಡಿ ತಮ್ಮ ಪರಿಚಯವನ್ನು ತಾವೇ ಮಾಡಿಕೊಂಡರು. ಸ್ಥಾನಂ ಅವರ ಅನಿರೀಕ್ಷಿತ ಭೇಟಿ ರಾಘವರಿಗೂ ಅಪಾರ ಸಂತಸವನ್ನುಂಟುಮಾಡಿತು.



ತಾವು ಏನೂ ತಿಳಿದುಕೊಳ್ಳಬಿದ್ದರೆ ಒಂದೆರಡು ಪ್ರಶ್ನೆಗಳನ್ನು ತಮ್ಮ ಮುಂದಿಡಬೇಕೆಂದಿದ್ದೇನೆ ಎಂದು ರಾಘವರನ್ನು ಸ್ಥಾನಂ ಕೇಳಿದರು.

ನಟ ರಂಗಭೂಮಿಯಲ್ಲಿ ಬಹುಕಾಲ ಉಳಿಯಬೇಕಾದರೆ ಏನು ಮಾಡಬೇಕು ? "ನಾಟಕ ಪ್ರದರ್ಶನಗಳಲ್ಲಿ ಕೇಳಿಬರುವ ಸಂಗೀತಕ್ಕಿಂತಲೂ, ವಿಸ್ತೃತವಾದ ಆಂಗಿಕಾಭಿನಯಕ್ಕಿಂತಲೂ, ಶಬ್ದೋಚ್ಚಾರಣೆಯ

ಆಡಂಬರಕ್ಕಿಂತಲೂ ಮುಖ್ಯವಾಗಿ ಯಾವ ಪಾತ್ರಧಾರಿ ಪಾತ್ರೋಚಿತವಾದ ಭಾವವನ್ನು ಹೆಚ್ಚಾಗಿ ಪ್ರದರ್ಶಿಸುವನೋ ಅವನೇ ಬಹುಕಾಲ ರಂಗಭೂಮಿಯಲ್ಲಿ ಬೆಳಗುತ್ತಾನೆ. ಉಳಿದವರು ಕೇವಲ ವೇಷಧಾರಿಗಳಾಗಿಯೇ ಉಳಿಯುತ್ತಾರೆ" ಎಂದು ರಾಘವರು ತಟ್ಟನೆ ಉತ್ತರಿಸಿದರು.

ಪ್ರೇಕ್ಷಕರನ್ನು ಆಕರ್ಷಿಸಲು ನಟ ಏನನ್ನು ಮೈಗೂಡಿಸಿಕೊಂಡಿರಬೇಕು ? ಸ್ಥಾನಂ ಅವರ ದ್ವಿತೀಯ ಪ್ರಶ್ನೆ !

"ಯಾವ ಪಾತ್ರಧಾರಿಯೇ ಆಗಲಿ ರಂಗಮಂಚದ ಮೇಲಿರುವಾಗ ಅವನಿಗೆ ಸಂಭಾಷಣೆಯ ಸಮಸ್ಯೆ ಎದುರಾದಾಗ ಅವನ ಎದುರಿಗಿರುವ ಮತ್ತೊಬ್ಬ ಪಾತ್ರಧಾರಿ ಪಾತ್ರದ ಸಂಭಾಷಣೆ, ಭಾವಪ್ರಕಟಣೆಗೆ ಅನುಗುಣವಾಗಿ ತಾನೂ ಭಾವಪ್ರಕಟಣೆ ಮಾಡುವುದು ಮುಖ್ಯ ಲಕ್ಷ್ಯವಾಗಿರಬೇಕು. ಇದನ್ನರಿತು ನಟನೆಯನ್ನು ಮೈಗೂಡಿಸಿಕೊಂಡ ನಟನ ರಸಜ್ಞತೆ ಪ್ರೇಕ್ಷಕ ಕೋಟಿಯನ್ನು ಆಕರ್ಷಿಸುತ್ತದೆ."

ನಾಟಕ ಕಲೆಯಲ್ಲಿ ರಾಘವರಿಗಿದ್ದ ಪಾಂಡಿತ್ಯಕ್ಕೆ ಸ್ಥಾನಂ ಅವರು ತಲೆದೂಗಿದರು. ರಾಘವರು ಭಕ್ತ ರಾಮದಾಸ್, ಸುಭದ್ರ, ಚಿತ್ರಾನಲಿಯಂ, ಪಾದುಕಾಪಟ್ಟಾಭಿಷೇಕಂ, ಸಾರಂಗಧರ, ಸಾವಿತ್ರಿ-ಸತ್ಯವಾನ್, ತಪ್ಪೆವರದಿ, ಕಿಂಗ್‌ಲಿಯರ್, ಓಥೆಲ್ಲೋ, ಹ್ಯಾಮ್ಲೆಟ್, ಚಿತ್ರ, ಪೃಥ್ವಿರಾಜ್, ತಾಳಿಕೋಟೆ, ದೀನಬಂಧು ಕಬೀರ್, ಮೊದಲಾದ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ಲೀಲಾಜಾಲವಾಗಿ ನಿರ್ವಹಿಸುತ್ತಿದ್ದರೂ "ವಿಜಯನಗರ ಸಾಮ್ರಾಜ್ಯ ಪತನಂ", "ರಾಮದಾಸ್" ನಾಟಕಗಳಲ್ಲಿ ಅವರು ನಿರ್ವಹಿಸುತ್ತಿದ್ದ ಪಾತ್ರಗಳು ಮರೆಯಲಾರದಂತಹುದು.

## ಹಮ್ಮಿಗಿ ನೀಲಕಂಠಪ್ಪ

ದಿವಂಗತ ಗರೂಡ ಸದಾಶಿವರಾಯರು 'ಶ್ರೀ ದತ್ತಾತ್ರೇಯ ನಾಟಕ ಮಂಡಳಿ'ಯಲ್ಲಿ ಸಾಧನೆಮಾಡಿದ ಹಲವಾರು ಮಂದಿ ನಟರಲ್ಲಿ ಅವರ ಜೀವನದುದ್ದಕ್ಕೂ ಮೆಚ್ಚುಗೆಯ ಶಿಷ್ಯರೆನಿಸಿದ್ದ "ನಾಟ್ಯ ಸಾಮ್ರಾಜ್ಞಿ" ಬಿರುದಾಂಕಿತ ಶ್ರೀ ಹಮ್ಮಿಗಿ ನೀಲಕಂಠಪ್ಪ ಅವರೂ ಓರ್ವರು. ಅದೊಂದು ಕಾಲ. ಪುರುಷರು ಸ್ತ್ರೀ ಪಾತ್ರಗಳನ್ನು ವಹಿಸಬೇಕಾಗುತ್ತಿದ್ದಿತು. ಸ್ತ್ರೀ ಸಹಜವಾದ ಎಲ್ಲಾ ಲಕ್ಷಣಗಳನ್ನು ಹೊಂದಿ, ನಾರೀ ಕಳೆಯ ಮೊಗ, ಉಬ್ಬಿದ ಸ್ತನ ಭಾರದಂತೆ ತೋರ್ಪಡಿಸಬೇಕಾದ ಎದೆ, ನಾಜೂಕು ಶರೀರ, ಎಲ್ಲಕ್ಕೂ ಮಿಗಿಲಾಗಿ ಕೋಮಲ ಕಂಠ, ಅದಕ್ಕೆ ತಕ್ಕಂತೆ ಹಾಡುಗಾರಿಕೆ, ಈ ರೀತಿಯ ಪುರುಷನಟರು ರಂಗಭೂಮಿಗೆ ವಿರಳರಾಗಿದ್ದರು. ಆ ಕೊರತೆಯನ್ನು ನೀಗಿಸಿ, ಸಹಜ ಸ್ತ್ರೀ ಪಾತ್ರಾಭಿನಯ ಮಾಡಿದ ಶ್ರೇಯಸ್ಸು ಶ್ರೀಯುತ ಹಮ್ಮಿಗಿ ನೀಲಕಂಠಪ್ಪ ಅವರದು. ತಮ್ಮ



ಪಾತ್ರಕ್ಕೆ ಬೇಕಾದ ಸ್ತ್ರೀ ಸ್ವಭಾವದ ಗುಣಗಳು ಶ್ರೀಯುತರಲ್ಲಿ ದೈವದತ್ತವಾಗಿ ಬಂದಿದ್ದರೂ ಅವರು ಅದನ್ನು ಸತತ ಸಾಧನೆ, ಸ್ವಪ್ರಯತ್ನ, ಶ್ರದ್ಧೆಗಳಿಂದ ಮತ್ತಷ್ಟು ಕರಗತ ಮಾಡಿಕೊಂಡು, ತಮ್ಮದೇ ಆದ ಒಂದು ವೈಶಿಷ್ಟ್ಯವನ್ನು ಸ್ಥಾಪನೆಮಾಡಿಕೊಂಡರು. ಸ್ತ್ರೀಯರೇ ಇವರ ಆಕೃತಿಯ ವಿಷಯದಲ್ಲಿ ಸಂದೇಹಪಡುತ್ತಿದ್ದರೆಂದರೆ ಇವರ ಸ್ತ್ರೀ ಪಾತ್ರದ ಬಗ್ಗೆ ಹೆಚ್ಚು ವಿವರಣೆ ಅನಗತ್ಯ.

ಒಮ್ಮೆ ಗರೂಡ ಸದಾಶಿವರಾಯರಿಗೆ "ರಂಗಭೂಮಿಯ ರಾಣಿ" ಎಂಬ ಬಿರುದು ತನಗೇ ಕಟ್ಟಿಟ್ಟ ಬುತ್ತಿ ಎಂಬ ಅಹಂಕಾರ ನೀಲಕಂಠಪ್ಪನಲ್ಲಿ ತುಂಬಿಕೊಂಡಿದೆ ಎಂದೆನಿಸಿತು. ಆ ಅಹಂಕಾರ ನೀಲಕಂಠಪ್ಪನ ಪ್ರಗತಿಗೆ ಅಡ್ಡಿಯಾಗಿ ನಿಲ್ಲಬಾರದೆಂದು ಗರೂಡರು ರಂಭಾಸಾನಿ ಎಂಬೋರ್ವ ನಟಿಯನ್ನು ಕರತಂದರು. ಸರಿ! ಅಂದಿನ ಪ್ರಥಮ ದಿನದ ನಾಟಕದ ವೀಕ್ಷಣೆಗೆ ಅವಳ ಪ್ರವೇಶವಾಯಿತು. ನೀಲಕಂಠಪ್ಪ ಅವರು ತಮ್ಮ ಪಾತ್ರದಲ್ಲಿ ಮೈಮರೆತರು. ಆ ಅಭಿನಯವನ್ನು ವೀಕ್ಷಿಸುತ್ತಿದ್ದ ರಂಭಾಸಾನಿ ದಂಗುಪಡೆದಳು. ತನ್ನಿಂದ ಆ ಪಾತ್ರಗಳನ್ನು ನಿರ್ವಹಿಸುವುದು ಸಾಧ್ಯವಿಲ್ಲವೆಂದು ತಿಳಿದುಕೊಂಡಳು. ಬಣ್ಣದ ಲೋಕದಲ್ಲಿ ಮಿಂಚಬೇಕೆಂದಿದ್ದ ರಂಭಾಸಾನಿ ತನ್ನ ನಿರ್ಧಾರವನ್ನು ಗರೂಡರಲ್ಲಿ ಅರಿಕೆ ಮಾಡಿಕೊಂಡು ಅಲ್ಲಿಂದ ಕಾಲ್ತೆಗೆದಳು. ಈ ಘಟನೆ ನೀಲಕಂಠಪ್ಪನವರ ಶ್ರೇಯಸ್ಸಿಗೊಂದು ಕಳೆಯನ್ನು ತಂದುಕೊಟ್ಟಿತು.

ಇವರ ಕಲಾಸಿದ್ಧಿಯನ್ನು ಸ್ವತಃ ಗರೂಡರವರೇ ಮೆಚ್ಚಿ ಆಶೀರ್ವದಿಸಿದರು.

## ಜೋಳದರಾಶಿ ದೊಡ್ಡನಗೌಡ

ಗಮಕ ಕಲಾ ವಿದ್ವಾನ್ ಪ್ರಸಿದ್ಧ ನಟ ಶ್ರೀ ಜೋಳದರಾಶಿ ದೊಡ್ಡನಗೌಡರ ನಾಮಧೇಯವನ್ನು ತಿಳಿಯದ ಕನ್ನಡಿಗರೇ ಇಲ್ಲವೆನ್ನಬಹುದು. ಶೋಕರಸ ಪ್ರತಿಪಾದನೆಯಲ್ಲಿ, ಭಾವಪ್ರಧಾನ ಅಭಿನಯದಲ್ಲಿ ನಿಷ್ಣಾತರೆನಿಸಿದ ಗೌಡರು ಅಭಿನಯ ಆತ್ಮವಿಕಾಸದ ಸಾಧನೆಯೆಂದು ನಂಬಿರುವವರು.



ಒಮ್ಮೆ ಗೌಡರು ರಾಯಚೂರಿನಲ್ಲಿ ರಾಘವರೊಂದಿಗೆ "ಭಕ್ತ ಮಾರ್ಕಂಡೇಯ" ನಾಟಕದಲ್ಲಿ ನಾರದರ ಪಾತ್ರವನ್ನು ನಿರ್ವಹಿಸುತ್ತಿದ್ದರು. ಗೌಡರನ್ನು ಪರೀಕ್ಷಿಸಬೇಕೆಂದು ಮಾಯಾ ಬ್ರಾಹ್ಮಣ ಪಾತ್ರದಲ್ಲಿದ್ದ ರಾಘವರಿಗೆ ಮನಸ್ಸಾಯಿತು. ಅನಿರೀಕ್ಷಿತವಾಗಿ, ಆಶುವಾಗಿ ರಂಗಭೂಮಿಯಲ್ಲಿ ಮಾತು ಪ್ರಾರಂಭಿಸಿದರು. ಗೌಡರು ಬೆಪ್ಪಾದರು. ಆದರೂ ಧೃತಿಗೆಡದೆ ಧೈರ್ಯ ತಂದುಕೊಂಡು ಆ ಪ್ರವೇಶಕ್ಕೆ ತಕ್ಕ ಸಂಭಾಷಣೆಗಳನ್ನಾಡಿ ಯಶಸ್ವಿಯಾದರು. ಆಗ ರಾಘವರು ಆನಂದದಿಂದ 'ನಿಮಗೆ ಶಿವನ ಕೃಪೆ ಇದೆ' ಎಂದು ಮುಕ್ತಕಂಠದಿಂದ ಪ್ರಶಂಸಿಸಿದರು.

ಇನ್ನೊಮ್ಮೆ ಬಳ್ಳಾರಿಯಲ್ಲಿ "ಕನಕದಾಸ" ನಾಟಕ ಪ್ರದರ್ಶನಗೊಳ್ಳುತ್ತಿತ್ತು. ಗೌಡರೇ ಕನಕದಾಸನ ಪಾತ್ರಕ್ಕೆ ಬಣ್ಣ ಹಚ್ಚಿದ್ದರು. ರಂಗಮಂಚದಮೇಲೆ ನಿಂತು ಭಾವಪರವಶರಾಗಿ ತಮ್ಮನ್ನು ತಾವೇ ಮರೆತು, ಕೀರ್ತನೆಗಳನ್ನು ಹಾಡತೊಡಗಿದರು. ಪ್ರೇಕ್ಷಕ ವೃಂದ ಗೌಡರ ಕಂಠಮಾಧುರ್ಯಕ್ಕೆ ಮನಸೋತು "ಶಹಭಾಸ್" ಎಂದರು. ರಾಘವರು ಥಟ್ಟನೆ ರಂಗಮಂಚಕ್ಕೆ ಧಾವಿಸಿ ಗೌಡರನ್ನು ಅಪ್ಪಿಕೊಂಡು "ಆನಂದಬಾಷ್ಪ" ಗರೆದರು. ರಂಗಭೂಮಿಯಲ್ಲಿ ಅವರಿಗೆ ಹೆಸರು ತಂದ ಪಾತ್ರಗಳೆಂದರೆ ಕಬೀರ್, ನಾರದ, ಚಂದ್ರಗುಪ್ತ, ಕೌರವ ಮೊದಲಾದವು. ರಂಗಮಂದಿರದ ಮೇಲೆ ಅವರಾಡುತ್ತಿದ್ದ ಮಾತು, ನಡೆಯುವ ನಡಿಗೆ, ನಿಲ್ಲುವ ಭಂಗಿ ಎಲ್ಲವೂ ಕಲಾತ್ಮಕವೆನಿಸಿದ್ದುವು.

ಗೌಡರು ರಾಘವರೊಂದಿಗೆ ಸೀತಾಪುರದಲ್ಲಿ "ಭಕ್ತ ರಾಮದಾಸ್" ನಾಟಕದಲ್ಲಿ 'ಕಬೀರ್' ಪಾತ್ರ ನಿರ್ವಹಿಸುತ್ತಿದ್ದರು. ಅನಿರೀಕ್ಷಿತವಾಗಿ ಎಂದಿಗೂ ಕಾಡಲಾರದ ಹೊಟ್ಟೆನೋವು ಕಾಡತೊಡಗಿತು. ತಕ್ಷಣ ರಾಘವರು "ಗೌಡರೇ, ಅಂಜಬೇಡಿ. ಆ ಶಿವನನ್ನು ನಂಬಿ ಪಾತ್ರ ನಿರ್ವಹಿಸಿ" ಎಂದು ಬೆನ್ನುತಟ್ಟಿ ರಂಗ ಭೂಮಿಗೆ ಕಳುಹಿಸಿದರು. ಹೊಟ್ಟೆನೋವು ಜಾದೂವಿನಂತೆ ಮಾಯವಾಗಿ ಅವರ ಪಾತ್ರವು ಎಂದಿನಂತೆ ಶೋಭಿಸಿತು.

## ಹುಲಿಮನೆ ಸೀತಾರಾಮಶಾಸ್ತ್ರಿ

ಕನ್ನಡ ರಂಗಭೂಮಿಯ ಹಳೆಯ ಹುಲಿ ಹುಲಿಮನೆ ಸೀತಾರಾಮಶಾಸ್ತ್ರಿ ಅವರ ಹೆಸರು ಜ್ಞಾಪಕಕ್ಕೆ ಬಂದಾಗ ಟಿಪ್ಪೂ ಸುಲ್ತಾನ್, ಜಾಂಬವಂತ, ಬನಬೀರ, ಲಕ್ಷ್ಮೀಪತಯ್ಯ ಮೊದಲಾದ ಪಾತ್ರಗಳು ಕಣ್ಣು ಮುಂದೆ ಬಂದು ನಿಲ್ಲುತ್ತವೆ. ಶಾಸ್ತ್ರಿಗಳ ಅಭಿನಯ ಕೌಶಲ್ಯ ಅಸಾಧಾರಣವಾದುದು ಎಂಬುದಕ್ಕೆ ೧೯೩೩ರಲ್ಲಿ ದಾವಣಗೆರೆಯಲ್ಲಿ ನಡೆದ "ವೀರಧಾತ್ರಿ ಪನ್ನಾ" ನಾಟಕದ ಒಂದು ಘಟನೆ ಸಾಕ್ಷಿಯಂತಿದೆ. ಈ ನಾಟಕದಲ್ಲಿ ಶಾಸ್ತ್ರಿಗಳು ಬನವೀರನ ಪಾತ್ರವನ್ನು ನಿರ್ವಹಿಸಿದ್ದರು. ದಾಸಿಯ ಮಗನಿಗೆ ಬನಬೀರನು ಚೂರಿಯನ್ನು ಹಾಕುವ ಸಂದರ್ಭ. ಕ್ರೂರ ಮುಖಮುದ್ರೆಯಿಂದ ಶಾಸ್ತ್ರಿಗಳು ಚೂರಿ ಹಿಡಿದು ಮಗುವನ್ನು ಸಂಹರಿಸಲು ಮಗುವಿನೆಡೆ ಸಾಗುತ್ತಿದ್ದಾಗ ಪ್ರೇಕ್ಷಕರಲ್ಲಿ ಓರ್ವ ಎದ್ದುನಿಂತು "ಬೋ . . . ಮಗನೆ" ಎಂದು ಕೂಗುತ್ತ ಕೈಯಲ್ಲಿದ್ದ ಅಡಕತ್ತರಿ (ಅಡಿಕೆ ಕತ್ತರಿಸುವ ಕತ್ತರಿ)ಯನ್ನು ಶಾಸ್ತ್ರಿಗಳ ಮುಖಕ್ಕೆ ಸರಿಯಾಗಿ ಗುರಿಯಿಟ್ಟು ಎಸೆದ ಪರಿಣಾಮವಾಗಿ ಶಾಸ್ತ್ರಿಗಳ ಹಣೆಯಿಂದ ರಕ್ತ ಸೋರತೊಡಗಿತು. ರಂಗಮಂದಿರದಲ್ಲಿ ಗುಲ್ಲೋಗುಲ್ಲಾಯಿತು. ನಾಟಕವನ್ನು ಆಗ ಒಂದು ಘಂಟೆ ನಿಲ್ಲಿಸಲಾಯಿತು.

೧೯೩೫ರಲ್ಲಿ ಇವರು ಬೆಂಗಳೂರಿನಲ್ಲಿ "ವರದಕ್ಷಿಣೆ" ಆಡುತ್ತಿದ್ದರು. ಶ್ರೀ ಸಿ. ಕೆ. ವೆಂಕಟರಾಮಯ್ಯನವರು ನಾಟಕವನ್ನು ವೀಕ್ಷಿಸಲು ಮುಖ್ಯ ಅತಿಥಿಯಾಗಿ ಬಂದಿದ್ದರು. ಶಾಸ್ತ್ರಿಯವರ ಲಕ್ಷ್ಮೀಪತಯ್ಯನ ಪಾತ್ರವನ್ನು ಮೆಚ್ಚಿ ಮಾರನೆಯದಿನ ತಮ್ಮ ಮನೆಗೆ ಆಹ್ವಾನಿಸಿದರು.

ಮರುದಿನ ಶಾಸ್ತ್ರಿಗಳು ಸಿ. ಕೆ. ವೆಂ. ಅವರ ಮನೆಗೆ ಹೋದಾಗ ಅವರಿಗೆ ಇವರ ಗುರುತೇ ತಿಳಿಯದಾಯಿತು. "ತಾವು ಯಾರು?" ಎಂದರು. ಶಾಸ್ತ್ರಿಗಳು ತಮ್ಮ ಪರಿಚಯವನ್ನು ತಾವೇ ಮಾಡಿಕೊಳ್ಳಬೇಕಾಯಿತು. ಸಿ. ಕೆ. ವೆಂ. ಅವರು ಅಚ್ಚರಿಗೊಂಡರಲ್ಲದೆ ಆನಂದಾಶ್ರುಗಳೊಡನೆ ಶಾಸ್ತ್ರಿಗಳನ್ನು ಆಲಿಂಗಿಸಿಕೊಂಡರು. ೬೦ ವರ್ಷದ ವೃದ್ಧನ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸಿದ ಶಾಸ್ತ್ರಿಗಳು ೨೮ ವರ್ಷದ ತರುಣರೆಂದು ಅವರು ಕನಸಿನಲ್ಲಿಯೂ ಊಹಿಸಿರಲಿಲ್ಲ. ೧೯೬೧ರ ಏಪ್ರಿಲ್‌ನಲ್ಲಿ ರಾಷ್ಟ್ರಪತಿ ಬಾಬು ರಾಜೇಂದ್ರಪ್ರಸಾದ್ ಅವರ ಸಮ್ಮುಖದಲ್ಲಿ "ಟಿಪ್ಪುಸುಲ್ತಾನ್" ಪಾತ್ರವನ್ನು ಅಭಿನಯಿಸಿ ಮೆಚ್ಚಿಗೆಗೆ ಪಾತ್ರರಾದ ಶಾಸ್ತ್ರಿಗಳು ನಾಟಕಕಾರರೂ ಹೌದು. ಪುತ್ರಾಪೇಕ್ಷೆ, ವರದಕ್ಷಿಣೆ, ವೀರಧಾತ್ರಿ ಪನ್ನಾ, ಸಂಶಯ ಸಾಮ್ರಾಜ್ಯ, ಸತೀ ಸಾವಿತ್ರಿ, ಟೀಪೂ ಸಲ್ತಾನ್, ಮಾಯಾವಿ, ನಡುದಾರಿಯಲ್ಲಿ, ತಪ್ಪುಗಂಟು ಈ ಮೊದಲಾದ ನಾಟಕಗಳು ಶಾಸ್ತ್ರಿಗಳ ಲೇಖನಿಯಿಂದ ಹೊರಬಿದ್ದಿವೆ. ಇವುಗಳಲ್ಲಿ "ಪುತ್ರಾಪೇಕ್ಷೆ" ಮಾತ್ರ ಅಚ್ಚಿನಮನೆ ಕಂಡಿದೆ.

# 'ಗಂಡುಗೊಡಲಿ'- ಒಂದು ದೃಷ್ಟಿಕೋನ




## ವಿಜಯಶ್ರೀ

ನಮ್ಮ ನಾಡಿನ ಹಿತಕ್ಕೆ, ಮೇಲ್ಮೆಗೆ, ಬೆಳವಣಿಗೆಗೆ ತಮ್ಮ ಪಾಲನ್ನು ತಮ್ಮದೇ ಆದ ರೀತಿಯಲ್ಲಿ ನಿರಪೇಕ್ಷೆಯಿಂದ ಧಾರೆಯೆರೆದ ಕೆಲವೇ ಹಿರಿಯರಲ್ಲಿ ರಾಜರತ್ನಂ ಅವರ ಸೇವೆ ಪ್ರಶಂಸಾರ್ಹವಾದುದು. ಕಾವ್ಯಕ್ಷೇತ್ರದಲ್ಲಿ ಇವರ ನೂತನ ಪ್ರಯೋಗ ಕನ್ನಡಕ್ಕೊಂದು ವೈಶಿಷ್ಟ್ಯಪೂರ್ಣ ಕೊಡುಗೆ ಯಾಗಿ ಪರಿಣಮಿಸಿದೆ. ಇವರ ಸಾಹಿತ್ಯಸೇವೆ ಕೇವಲ ರತ್ನನ ಪದಗಳಿಗೆ ಮಾತ್ರ ಸೀಮಿತವಲ್ಲ. ಎಲ್ಲದರಲ್ಲೂ ಹೊಸತನ್ನು ಕಾಣುವ, ಮೂಡಿಸುವ ಇವರ ಪ್ರತಿಭೆ ಸಾಹಿತ್ಯಕ್ಷೇತ್ರದಲ್ಲೂ ಕೈಯಾಡಿಸಿದೆ. ಅವರ ಪ್ರಸ್ತುತ ನಾಟಕ 'ಗಂಡುಗೊಡಲಿ' ಕೇವಲ ಪರಶುರಾಮನ ಕಥೆ ಯಾಗುಳಿಯದೆ ಭಾರತದ ಜನತೆ ಪರದಾಸ್ಯದಿಂದ ಮುಕ್ತ ವಾಗಲು ತೊಟ್ಟ ಆವೇಶಪೂರ್ಣ ಧೀರನಿಲುವಿಗೆ ಸಂಕೇತ ವಾಗಿ ನಿಲ್ಲುತ್ತದೆ. ಪರಶುರಾಮನ ಒಂದೊಂದು ಮಾತೂ ಕೆರಳಿದ ಭಾರತೀಯರ ಪ್ರತಿಧ್ವನಿಯಾಗಿದೆ. ಎಲ್ಲರಿಗೂ ಚಿರಪರಿಚಿತವಾದ ಪರಶುರಾಮನ ಕಥೆ ರಾಜರತ್ನಂ ಅವರ ಕೈಯಲ್ಲಿ ನಾಟ್ಯಗುಣಪೂರ್ಣವಾದ ರಸೋತ್ಕಟ ಚಿತ್ರವಾ ಗಿದೆ. ಸಮಕಾಲೀನ ಆವರಣದ ಹಿನ್ನೆಲೆಯಲ್ಲಿ ರೂಪು ಗೊಂಡಿರುವ ಈ ನಾಟಕ ಪೌರಾಣಿಕ ಘಟನೆಯೊಂದರ ಕಲಾತ್ಮಕ ಚಿತ್ರವಾಗುವುದರ ಜೊತೆಗೆ ಸಮಕಾಲೀನ ಜನ ತೆಯ ಸ್ವಾತಂತ್ರ್ಯಪ್ರೇಮವನ್ನು ಪ್ರತಿಧ್ವನಿಸುತ್ತದೆ. ಇದ ರಲ್ಲಿ ಕ್ರೋಧವೇ ಸ್ಥಾಯೀಭಾವ. 'ಮಸೆ, ಮಸೆ, ಕೊಡಲಿ ಮಸೆ'ಎಂಬ ಸಿಡಿಲಿನಿಂದ ಪ್ರಾರಂಭವಾಗುವ ನಾಟಕ ಕೊನೆವರೆವಿಗೂ ಅದೇ ಆವೇಶದಲ್ಲಿ ಸಾಗುತ್ತದೆ. ಪರಶು ರಾಮ ಇಲ್ಲಿ ವ್ಯಕ್ತಿಸ್ವಾತಂತ್ರ್ಯದ ಸಂಕೇತ.

ಮಾಹಿಷ್ಮತಿಯ ಅರಸು ಕಾರ್ತವೀರ್ಯನ ದುರಾಚಾರ, ದೌರ್ಜನ್ಯದಿಂದ ಬೇಸತ್ತ ರಾಮು ಅವನನ್ನು ನಿಗ್ರಹಿಸಲನು ವಾಗುತ್ತಾನೆ. ಆದರೆ ತಂದೆಯ ಮಾತಿಗೆ ಕಟ್ಟುಬಿದ್ದು ಸುಮ್ಮನಿರಬೇಕಾಗುತ್ತದೆ. ಮುಂದೆ ತಂದೆಯ ಕೊಲೆ ಕಾರ್ತವೀರ್ಯನಿಂದ ನಡೆದಾಗ ; ಕೇವಲ ಕಾರ್ತವೀರ್ಯನನ್ನು ಕೊಂದುದಲ್ಲದೆ, ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ ಕ್ಷತ್ರಿಯ ಕುಲವನ್ನೇ ನಿರ್ನಾಮ ಮಾಡಿ, ಸಕಲಾವನಿ ಯನ್ನೂ ದಾನವಿತ್ತು, ಶಸ್ತ್ರಸನ್ಯಾಸ ಪಡೆದು, ತಪಕ್ಕೆ ಹೊರಡುತ್ತಾನೆ. ಇದು ನಾಟಕದ ಸ್ಥೂಲ ಕಥಾ ಪರಿಚಯ.

ರಾಮನೇ ನಾಟಕದ ಕೇಂದ್ರ ವ್ಯಕ್ತಿ. ಮಿಕ್ಕ ಪಾತ್ರ ಗಳೆಲ್ಲ ಅವನ ವ್ಯಕ್ತಿತ್ವಕ್ಕೆ ಪೂರಕವಾಗಿ ಬರುತ್ತವೆ. ರಾಮುನ ಕರ್ತವ್ಯನಿಷ್ಠೆ, ಸಹನೆ, ಛಲ, ಧೀರ ಸತ್ಯಾಗ್ರಹಿಯ ನಿಲು ವನ್ನು ವ್ಯಕ್ತಪಡಿಸುತ್ತದೆ. ನಾಟಕದಲ್ಲಿ ರಾಮು ತಂದೆ ಯೊಂದಿಗೆ, ಮಿತ್ರರೊಂದಿಗೆ ಆಡುವ ಪ್ರತಿಯೊಂದು ಮಾತೂ ಗಮನಾರ್ಹ. ನಿರ್ವೀರ್ಯ ಭಾರತೀಯನ ಪ್ರತಿಮೂರ್ತಿ ವಟು, ಶಾಂತಿಯೇ ಮೈತಳೆದ ತಂದೆ, ಇವರ ನಡುವೆ ರಾಮುನ ಉರಿಯುವ ಕ್ರೋಧಾನಲದ ಉಗ್ರಚಿತ್ರ. ಎಚ್ಚೆತ್ತ ಭಾರತೀಯನ ಮಾತುಗಳನ್ನು ರಾಮುನ ಬಾಯಲ್ಲಿ ಕೇಳು ತ್ತೇವೆ. "ಸೈರಿಪುದು, ಸೈರಿಪುದೆನಿತು ಕಾಲ" ಎನ್ನುವ ಮಾತು ಭಾರತೀಯರ ಅಸಹನೆಯನ್ನು ಧ್ವನಿಸುತ್ತದೆ. ಎಂತಹ ಶಾಂತ ಮನಸ್ಕರು ಕೂಡ ತುಳಿಯಲ್ಪಟ್ಟಾಗ ತಿರುಗಿ ಬೀಳುತ್ತಾರೆ ಎಂಬುದಕ್ಕೆ ರಾಮು ಕೊಡುವ ಉದಾ ಹರಣೆ ಸುಂದರ. "ನೇಗಿಲೆಳೆಯುವ ಹೋರಿ-ಸಾಧುಗಳ ಸಾಧುವದು ಕೆರಳು ಹೆಚ್ಚಲು ತನ್ನ ಯಜಮಾನನು ಕೂಡ ಕೊಂಬುಗಳ ಮಸೆಯುತ್ತ ಗಗನಕ್ಕೆ ಚಿಮ್ಮಿಸದೆ?" ಇದು ಬ್ರಿಟಿಷರ ದಬ್ಬಾಳಿಕೆ, ದೌರ್ಜನ್ಯದಿಂದ ಬೇಸತ್ತು ಸ್ವತಂತ್ರ ನಾಗಬೇಕೆಂದು ಕನಲಿ ನಿಂತ ಭಾರತೀಯನನ್ನು ಚಿತ್ರಿಸು ತ್ತದೆ. ಹೀಗೆ ನಾಟಕದುದ್ದಕ್ಕೂ ಭಾರತ ಸ್ವಾತಂತ್ರ್ಯ ಸಂಗ್ರಾಮದ ಚಿತ್ರದೊಂದಿಗೆ ಪರಶುರಾಮನ ಕಲ್ಪನೆ ಹಾಸು ಹೊಕ್ಕಾಗಿ ಬಂದಿದೆ. ಸತ್ಯಾಗ್ರಹದ ಸಮಗ್ರ ಚಿತ್ರ ಅಭಿ ವ್ಯಕ್ತಿಗೊಂಡಿದೆ. ಲೇಖಕರು ನಾಟಕವನ್ನು ಅಲ್ಲಿಗೇ ನಿಲ್ಲಿ ಸದೆ ಕಶ್ಯಪನ ಮೂಲಕ ಸ್ವಾತಂತ್ರ್ಯೋತ್ತರ ಭಾರತೀಯರ ಕರ್ತವ್ಯಪ್ರಜ್ಞೆಯನ್ನು ಎಚ್ಚರಿಸಿದ್ದಾರೆ. "ಕ್ಷಾತ್ರಮಂ ಸಮರಿದುದು ಹೆಚ್ಚಲ್ಲ ಭಾರ್ಗವ. ಲೋಕಮಂ ಕಾಪಿಡು ವುದಕ್ಕಿಂತ ಮುಖ್ಯತಮ" ಎಂದು ಸ್ವಾತಂತ್ರ್ಯ ಗಳಿಕೆಗಿಂತ ಅದರ ನಿರ್ವಹಣೆ ಅತಿ ಕಷ್ಟ ಎಂಬ ಕಲ್ಪನೆ ಕೊಟ್ಟಿದ್ದಾರೆ. ಹೀಗೆ ಪ್ರಾಚೀನ ಭಾರತದ ಪೌರಾಣಿಕ ಕಥೆಯೊಂದನ್ನು ನೆಲಗಟ್ಟಾಗಿ ಮಾಡಿಕೊಂಡು ಅದರ ಮೂಲಕ ವರ್ತಮಾನ ಭಾರತದ ನಿಜಕಥೆಯನ್ನು ಧ್ವನಿಸಲಾಗಿದೆ.

ರಾಜರತ್ನಂ ಅವರ ಉಕ್ತಿವೈಚಿತ್ರ್ಯ ವಿಶಿಷ್ಟವಾದುದು. ಅನೇಕ ಮಾತುಗಳ ಮೂಲಕ ವ್ಯಕ್ತಪಡಿಸಲು ಕಷ್ಟವಾದ ಭಾವವನ್ನು ಒಂದೇ ಸಾಲಿನಲ್ಲಿ ಅಥವಾ ಒಂದೆರಡು ಪದ ಗಳಲ್ಲಿ ಅರ್ಥಪೂರ್ಣವಾಗಿ ಮೂಡಿಸಿದ್ದಾರೆ. ಐದನೆಯ

ದೃಶ್ಯದಲ್ಲಿ ರಾಮನ ಎಲ್ಲ ದೀರ್ಘ ಮಾತಿಗಿಂತ "ನಿನ್ನ ಬಾಳಿನ ನೂಲು ಸವೆದು ಸಣ್ಣಾಗಿಹುದು" ಎಂಬ ಒಂದೇ ಮಾತು ಅವನ ಕೋಪ, ಛಲ, ಅವನ ಅವನತಿಯ ಚಿತ್ರ ಮೂಡಿಸುತ್ತದೆ. ಮತ್ತೊಮ್ಮೆ ರಾಮ ವಟುವೊಬ್ಬನಿಗೆ ಅರ್ಜುನನ ಮೈದುನನ ದುರಾಚಾರವನ್ನೂ ಅವನ ಮರಣ ವನ್ನೂ ತಿಳಿಸುತ್ತಾನೆ.

"ಅರ್ಜುನನಮೈದುನಗೆ
ರಕ್ತಾಭಿಷೇಕ ಮಾಯ್ತು –
ಯಮನೊಡನೆ ನಿಷೇಕವಾಯ್ತು."

ಎನ್ನುತ್ತಾನೆ. ಈ ವಾಕ್ಯ ಹಲವು ಹನ್ನೊಂದು ಮಾತು ಗಳಲ್ಲಿಯೂ ಹೇಳಲಾಗದ ಭಾಗವನ್ನು ಬಹು ಮನೋಹರ ವಾಗಿ ಬೆಳಗುತ್ತದೆ.

ನಾಟಕದ ಇನ್ನೊಂದು ಹೆಚ್ಚಳ ಕಾಣಬರುವುದು ಪುನ ರಾವೃತ್ತಿಯಲ್ಲಿ. ಕೊಲೆಗೆ ಕಾರಣ ಕಾರ್ತವೀರ್ಯ ಎಂದರಿ ತಾಗ ಅವನದನ್ನು ದೃಢಪಡಿಸಿಕೊಳ್ಳುವ ರೀತಿ :

ಪರಶು : ರೇವೆಗರ್ಜುನ ಬಂದನೆ ?
ಕಾರ್ತವೀರ್ಯಾರ್ಜುನನು ?
ಮಾಹಿಷ್ಮಾತೀಕ್ಷ್ಮಾಪ
ಕಾರ್ತವೀರ್ಯಾರ್ಜುನನು ?
ಹದಿನೈದು ದಿನ ಹಿಂದೆ ದೇವಧೇನುವಳೆನೆಯ
ಲೆತ್ನಿಸಿದವನು ?
ಪ್ರಜಾಪೀಡಕ ಕಾರ್ತವೀರ್ಯ?
ಅಮ್ಮನಿಗೆ ಕಣ್ಣಿಟ್ಟವನು ?

ಇಲ್ಲಿ ಒಂದೊಂದು ಪದದಲ್ಲೂ ಅವನಕೋಪ, ಛಲ ಜುಗುಪ್ಸೆ, ಆಂದೋಲವನ್ನು ಕಾಣಬಹುದು.

ನಾಟಕದ ಮತ್ತೊಂದು ವೈಶಿಷ್ಟ್ಯ, ನಾಟಕದಲ್ಲಿ ಕೊನೆ ಯಿಂದ ಮೊದಲವರೆಗೆ ಕೇಳಬರುವ ಕಾರ್ತವೀರ್ಯ ಒಮ್ಮೆಯೂ ರಂಗದ ಮೇಲೆ ಕಾಣಬರುವುದಿಲ್ಲ. ಅವನ ಪೂರ್ಣ ವ್ಯಕ್ತಿಚಿತ್ರಣ ದೊರಕುವುದು ಭಾರ್ಗವನ ಮಾತಿ ನಿಂದ.

ಇಂತಹ ಭದ್ರ ತಳಪಾಯದ ಮೇಲೆ ರೂಪಿತವಾಗಿರುವ ಈ ಸುಂದರ, ಸುಭದ್ರ ಸೌಧದಲ್ಲೂ ಅಲ್ಲಲ್ಲಿ ಬಿರುಕು ಬಿಟ್ಟಿ ರುವುದು ನಾಟಕವನ್ನು ಆಮೂಲಾಗ್ರವಾಗಿ ಓದಿದಾಗ ಕಾಣಬರುತ್ತದೆ. ಜಮದಗ್ನಿಯ ಸಾವಿನಂತಹ ದುರ್ಭರ, ಆಕಸ್ಮಿಕ ಸನ್ನಿವೇಶದಲ್ಲೂ ರಾಮ ತನ್ನ ಎಂದಿನ ಧೋರಣೆ ಯಲ್ಲೇ ದೀರ್ಘ ಸಂಭಾಷಣಕ್ಕೆ ತೊಡಗುವುದು ಅಸಹಜ. ಪತಿಯ ಮರಣದ ದುಃಖದಿಂದ ಚೀತರಿಸಿಕೊಳ್ಳುವ ಮುನ್ನವೇ ರೇಣುಕೆ ಕೊಡುವ ಒಂದು ಪುಟದ ದೀರ್ಘ ಆಶೀರ್ವಾದ ಹಾಸ್ಯಾಸ್ಪದವಾಗಿ ತೋರುತ್ತದೆ. ಇದು ಓದುವಾಗ ಮಾತ್ರವಲ್ಲ ರಂಗದ ಮೇಲೂ ಸ್ಪಷ್ಟವಾಗಿ ಕಾಣುವ ಲೋಪ. ಎಂತಹ ಸ್ಥಿತಪ್ರಜ್ಞರಿಗೂ ಕೂಡ ಅಂತಹ ಆಕಸ್ಮಿಕ ಸನ್ನಿವೇಶದಲ್ಲಿ ಸಮತೋಲನ ಮನೋ ಭಾವದಿಂದ, ಶಾಂತಮನಸ್ಕತೆಯಿಂದ ಆಶೀರ್ವದಿಸುವುದು ಅಸಾಧ್ಯ ಎನ್ನಿಸುತ್ತದೆ. ಈ ಕೊರತೆಯೊಂದಿಲ್ಲದಿದ್ದರೆ ನಾಟಕ ಮತ್ತೂ ತೀವ್ರ ಪರಿಣಾಮ ಬೀರುತ್ತಿತ್ತು, ಯಶಸ್ವಿ ಯಾಗುತ್ತಿತ್ತು.

ಈ ಮೇಲಿನ ಅಭಿಪ್ರಾಯಕ್ಕೆ ಹಲವರ ಆಕ್ಷೇಪ ಬರ ಬಹುದು. ನಾಟಕ ಏಕಾಂಕವಾದುದರಿಂದ ಸಂಭಾಷಣೆ ದೀರ್ಘವಾಗದೆ ಗತ್ಯಂತರವಿಲ್ಲ ಎಂದು. ಆದರೆ ಲೇಖಕರು ಎಲ್ಲವನ್ನೂ ವಾಚ್ಯವಾಗೇ ತಿಳಿಸುವ ಆವಶ್ಯಕತೆ ಇಲ್ಲ. ಓದುಗನ ಕಲ್ಪನೆಗೂ ಅವಕಾಶ ಕೊಡಬೇಕು. ಕೆಲವು ಸಣ್ಣ ಶಬ್ದಗಳು ಬೃಹತ್ತಾರ್ಥ ಹೊಂದಿರುತ್ತವೆ. ಅವುಗಳ ಉಪಯೋಗದಿಂದ ಸಂಭಾಷಣೆಯನ್ನು ಮೊಟಕುಗೊಳಿಸ ಬಹುದು. ನಾವು ಅದನ್ನು ಈ ನಾಟಕದಲ್ಲೇ ಕಾಣು ತ್ತೇವೆ. ರೇಣುಕೆಯ ಹತ್ಯೆಯ ಮುನ್ನ ಭಾರ್ಗವ ವಂದಿಸಿ ದಾಗ ಅವಳು "ಚಿರಂಜೀವಿಯಾಗು" ಎಂದು ಆಶೀರ್ವದಿ ಸುತ್ತಾಳೆ. ಅವಳ ಈ ಒಂದು ಪದದ ಆಶೀರ್ವಚನದ ಸಮಕ್ಕೆ ನಂತರದ ಅವಳ ಒಂದು ಪುಟದ ದೀರ್ಘ ಆಶೀರ್ವ ಚನ ಬರಲಾರದು. ಇನ್ನೊದು ಘಳಿಗೆಗೆ ತನ್ನನ್ನು ಕೊಲ್ಲುವ ಮಗನನ್ನೂ ಚಿರಂಜೀವಿಯಾಗುವಂತೆ ಆಶೀರ್ವ ದಿಸುವ ಅವಳ ಅಂತಃಸತ್ವದ, ಮಾತೃಮಮತೆಯ ಪೂರ್ಣ ಕಲ್ಪನೆ ಬರುತ್ತದೆ. ಎರಡರ ಸಫಲತೆ ವಿಫಲತೆಯನ್ನೂ ಈ ನಾಟಕದಲ್ಲೇ ಕಾಣಬಹುದು.

ಏಕಾಂಕದ ಎಲ್ಲ ನಿಯಮವನ್ನೂ ಅಳವಡಿಸಿರುವ ಈ ನಾಟಕ ಏಕಾಂಕಕ್ಕೆ ಉತ್ತಮ ಉದಾಹರಣೆ. ಪರದೆ ಮೇಲೆದ್ದಾಗಲೇ ಸನ್ನಿವೇಶದ ಪೂರ್ಣ ಕಲ್ಪನೆ ಪ್ರೇಕ್ಷಕನಿ ಗಾಗುತ್ತದೆ. ಒಂದೇ ಭಾವ ಸ್ಥಾಯಿಯಾಗಿ ನಾಟಕದು ದ್ದಕ್ಕೂ ಬಂದಿದೆ. ಓದುಗನ ಅಥವಾ ನೋಟಕನ ಕುತೂ ಹಲ ಕೆರಳುತ್ತದೆ. ದೀರ್ಘ ಸಂಭಾಷಣೆಯಿಂದ ಮುಕ್ತ ವಾಗಿದ್ದಿದ್ದರೆ ನಾಟಕ ಅತ್ಯುತ್ತಮ ಏಕಾಂಕಗಳ ಪಂಕ್ತಿ ಸೇರುತ್ತಿತ್ತು ಎನ್ನುವುದು ನಿರ್ವಿವಾದ.

# ಕಾರಂತರ ಹೊಸ ಕಾದಂಬರಿ: "ಮೂಕಜ್ಜಿಯ ಕನಸುಗಳು"

'ಸುಮನಾ'

ಕನ್ನಡದ ಕಾದಂಬರಿಕಾರರಲ್ಲಿ ಮಿಕ್ಕೆಲ್ಲರದೇ ಒಂದು ತೂಕವಾದರೆ ಕಾರಂತರದೇ ಒಂದು ತೂಕ. ಅವರನ್ನು ಕುರಿತ ಪಕ್ಷಪಾತದಿಂದಲಾಗಲಿ, ವ್ಯಕ್ತಿಪೂಜೆಯ ಅಂಧ-ಶ್ರದ್ಧೆಯಿಂದಲಾಗಲಿ ಈ ಮಾತು ಆಡಿದುದಲ್ಲ. ಅವರ ಸಾಹಿತ್ಯದಲ್ಲಿನ ವೈವಿಧ್ಯ, ವಿಸ್ತಾರ, ಪಾತ್ರಸೃಷ್ಟಿ-ಪರಿಪೋಷಣೆ, ಅವುಗಳ ನಡೆ-ನುಡಿ, ಆಚಾರ-ವ್ಯವಹಾರ, ಶೀಲ-ಸಂಸ್ಕೃತಿ, ಜೀವನ-ದರ್ಶನ ಎಲ್ಲವೂ ಅಸಾಧಾರಣವಾದುವು. ಸ್ವಂತ ಬಾಳಿನಲ್ಲಿ ಮೈಗೂಡಿಸಿಕೊಂಡಿರುವ ಅಪಾರ ಅನುಭವ, ಬದುಕಿನ ಅಂತರಾಳದ ವಿವಿಧ ಮುಖಗಳನ್ನು, ಮಜಲುಗಳನ್ನು ಅರಿಯುವ ಮನಸ್ಸು, ಕಂಡ ಸೊಬಗು, ವಿಲಾಸಗಳನ್ನು ಮೆಚ್ಚುವ ಕಣ್ಣು—ಎಲ್ಲದರ ಕಾಣ್ಕೆ ಅವರ ಕೃತಿಗಳಲ್ಲಿ ಜೀವಂತವಾಗಿ ಚಿತ್ರಿತವಾಗಿರುವುದರಿಂದಲೇ ಅವರ ಕೃತಿಗಳು ಅಮೌಲ್ಯವಾಗಿವೆ. ಕಾರಂತರ ಸೃಷ್ಟಿ, ದೃಷ್ಟಿ, ಸಾಧನೆ ಯಾವ ಸಾಹಿತಿಗಾದರೂ ಸಾಕಲ್ಯ, ಸಾಫಲ್ಯ ತರಬಲ್ಲುದು; ಯಾವ ಭಾಷೆಗಾದರೂ ಗೌರವ, ಹೆಮ್ಮೆ ಹುಟ್ಟಿಸಬಲ್ಲದು.

ತಮ್ಮ ಕಾದಂಬರಿಗಳ ಮೂಲಕ ಹಲವಾರು ದಿಕ್ಕುಗಳಿಗೆ ದಾರಿ ತೋರಿಸಿರುವ ಕಾರಂತರು ಈಚೆಗೆ 'ಇನ್ನೊಂದೇ ದಾರಿ'ಯನ್ನು ಪ್ರಕಟಿಸಿದ್ದಾರೆ. ಸಂಪ್ರದಾಯದಲ್ಲಿ ಶ್ರದ್ಧೆ-ನಿಷ್ಠೆ, ವಿರುದ್ಧವಾಗಿ ನಿಲ್ಲುವ ಆಧುನಿಕ ಮನೋಧರ್ಮದ ಜಿಜ್ಞಾಸತ್ವ-ಪರಸ್ಪರ-ಘರ್ಷಣೆ, ಮೌಲ್ಯ ವಿವೇಚನೆ ಇವು ಇಣಿಕುತ್ತವೆ. ಮಧ್ಯೆ ಹಾಸುಹೊಕ್ಕಾಗಿ ಸುತ್ತ ಬಲೆಯನ್ನು ನೆಯ್ದುಕೊಳ್ಳುವಂತೆ ಬಾಳಿನ ಬಳ್ಳಿಯನ್ನು ಹಬ್ಬಿಸಿದ್ದಾರೆ. ಕಾರಂತರ ಯಶಸ್ಸು ಯಾವೊಂದಕ್ಕೂ ಒಲಿಯದೆ, ಎರಡರಲ್ಲಿಯೂ ಸಮಾನ ಶ್ರದ್ಧೆಯನ್ನು ಕಲ್ಪಿಸಿ, ನಮ್ಮ ಅರ್ಥವಂತಿಕೆಯನ್ನು ಹೆಚ್ಚಿಸುವುದರಲ್ಲಿದೆ. ಅವರ ಎಲ್ಲ ರಚನೆಗಳಲ್ಲಿ ಬಹುಪಾಲು ಕಂಡುಬರುವ ಬದುಕನ್ನು ಕುರಿತ ಗಹನ, ವಿವೇಚನೆ, ಅದರ ವಿಸ್ತಾರವಾದ ಒಂದೊಂದೇ ಮುಖದ ಸ್ಥೂಲ ಪರಿಚಯ, ಒಳಿತು-ಕೆಡುಕುಗಳ ಪೂರ್ವಾಪರ ವಿವೇಚನೆ ಇಲ್ಲಿಯೂ ಕಂಡುಬರುತ್ತದೆ. ಹೊಸ ದೃಷ್ಟಿಕೋಣವೊಂದು ಕಣ್ಮುಂದೆ ಕಟ್ಟುತ್ತದೆ. ಅವರ ಯಾವ ಕೃತಿಯನ್ನೇ ಆಗಲಿ, ಸಪ್ಪೆ ಎನ್ನಲಾಗುವುದಿಲ್ಲ ಎಂಬುದನ್ನು ಈ ಕೃತಿಯೂ ಹೆಚ್ಚು ಸಮರ್ಥಿಸುತ್ತದೆ.

'ಇನ್ನೊಂದೇ ದಾರಿಯ' ಅನಂತರ ಮತ್ತೊಂದು ಕಾದಂಬರಿ "ಮೂಕಜ್ಜಿಯ ಕನಸುಗಳ"ನ್ನು ಕಾರಂತರು ಕನ್ನಡಿಗರಿಗೆ ಇತ್ತಿದ್ದಾರೆ. ಸಂಪ್ರದಾಯವನ್ನು ಕುರಿತ ಅವರ ವಿವೇಚನೆ ಇಲ್ಲಿಯೂ ಚಿತ್ರಿತವಾಗಿದ್ದರೂ, ಕಾದಂಬರಿಕಾರರು ಮತ್ತೊಂದು ಹೆಜ್ಜೆ ಮುಂದೆ ಹೋಗಿ, "ಸಾಂಪ್ರದಾಯಕತೆಯಿಂದ ಹೆರೆಗಟ್ಟಿಸಿದ ಮನಸ್ಸುಗಳನ್ನು ತುಸು ಕಾಯಿಸಿ, ಕರಗಿಸು"ವ ಪ್ರಯತ್ನ ಮಾಡಿ, ಯಶಸ್ವಿಗಳಾಗಿದ್ದಾರೆ. ಆ ಮೂಲಕ ಸಂಪ್ರದಾಯವನ್ನು ಕುರಿತು ನಮ್ಮ ಅರ್ಥವಂತಿಕೆಯನ್ನು ಹೆಚ್ಚಿಸಿದ್ದಾರೆ.

"ಈ ಕಾದಂಬರಿಗೆ ಕಥಾನಾಯಕನಿಲ್ಲ, ನಾಯಕಿಯಿಲ್ಲ." ಆದರೆ ಇಲ್ಲಿ ಬರುವ ಪ್ರಮುಖ ಪಾತ್ರಗಳು ಎರಡು—ಅಜ್ಜಿ ಮತ್ತು ಅವಳ ಮೊಮ್ಮಗ. ಅವರಿಬ್ಬರೂ ಸೇರಿ "ನಾಲ್ಕು ಐದು ಸಾವಿರ ವರ್ಷಗಳಿಂದ ಹರಿದುಬಂದ 'ಸೃಷ್ಟಿ ಸಮಸ್ಯೆ' ಯೊಂದನ್ನು ಮಥಿಸಲು ಇಲ್ಲಿ ಯತ್ನಿಸುತ್ತಾರೆ."

"ಅವಾಸ್ತವಿಕವೆನಿಸುವ ಅಜ್ಜಿ, ಅನೇಕ ವಾಸ್ತವಿಕ ಇತಿಹಾಸಾಂಶಗಳನ್ನು ತನ್ನ ಒಳದಿಳಿವಿನಿಂದ ನಮ್ಮ ಮುಂದಕ್ಕೆ ಇರಿಸುತ್ತಾಳೆ."

ಇನ್ನು ಈ ಅಜ್ಜಿ—ಮೊಮ್ಮಗರ ಪರಿಚಯ ಮಾಡಿಕೊಳ್ಳೋಣ."

೨

'ಅಜ್ಜಿ' ಎಂಬತ್ತರ ಹೊಸಲಿನ ಆಚೆ-ಈಚೆ ಕಾಲಿಟ್ಟಿದ್ದಾಳೆ. ಬಾಲ್ಯದಲ್ಲಿ ಮೂಕಾಂಬಿಕೆಯ ನೆನಪಿನಲ್ಲಿ ಅವಳ ಹಿರಿಯರು ಆಕೆಗಿಟ್ಟ ಹೆಸರು 'ಮೂಕಾಂಬಿಕೆ' ಎಂದೇ. ಆದರೆ ಅದರ ಹ್ರಸ್ವರೂಪದಲ್ಲಿ ವಾಡಿಕೆಯಿಂದ 'ಮೂಕಿ' ಎಂದೇ ಕರೆಯುತ್ತಿದ್ದರಾಗಿ, ಅದೇ ಅವಳಿಗೆ ಶಾಶ್ವತವಾಗಿ ಉಳಿಯಿತು. ಈಗ ಕಿರಿಯರು ಅವಳನ್ನು 'ಮೂಕಜ್ಜಿ'ಯನ್ನಾಗಿ ಮಾಡಿದ್ದಾರೆ. ಎಂಟು ದಶಕಗಳ ಸುದೀರ್ಘ ಬದುಕಿನ ಹಿಂದೆ ಅಪಾರ ಅನುಭವವಿದೆ; ನೋವು, ವೇದನೆಗಳ ಇತಿಹಾಸವಿದೆ. ಮೊದಲಿಂದಲೂ ಸುಖ-ಸಂತೋಷಗಳು ಅವಳ ಪಾಲಿಗೆ ಇರಲಿಲ್ಲ; ಎಂದಿಗೂ ಮುಂದೆ ಉಳಿಯಲಿಲ್ಲ. ಸಂಪ್ರದಾಯದಂತೆ ಅವಳಿಗೆ ಎಂಟನೆಯ ವಯಸ್ಸಿನಲ್ಲಿಯೇ

ಮದುವೆಯಾಗುತ್ತದೆ. ತನ್ನ ಗಂಡನ ಮುಖವನ್ನೂ ಆಕೆ ಸರಿಯಾಗಿ ಕಂಡವಳಲ್ಲ. ಮದುವೆಯಾದ ಮೂರು ತಿಂಗಳಿಗೊ ಆರು ತಿಂಗಳಿಗೊ ಸನ್ನಿಪಾತದಿಂದ ಗಂಡ ಕಣ್ಮರೆಯಾದ; ಅವಳು ವಿಧವೆಯಾದಳು. ತೌರಿಗೆ ಮರಳಿದ ಅವಳು ಗೃಹಕೃತ್ಯಗಳಲ್ಲಿ ಅಭಿರುಚಿ, ಶ್ರದ್ಧೆಗಳನ್ನು ವ್ಯಕ್ತಪಡಿಸುತ್ತಿದ್ದಳಾದರೂ ಯಾರೊಂದಿಗೂ ಹೆಚ್ಚು ಮಾತುಕತೆಯಾಡುತ್ತಿರಲಿಲ್ಲ. ಇಲ್ಲ, ಇದೆ, ಒಲ್ಲೆ ಎಂಬ ಪದಗಳಲ್ಲಿಯೇ ತನ್ನ ಸಂಭಾಷಣೆಯನ್ನು ಮುಗಿಸುತ್ತಿದ್ದಳು; 'ಮೂಕಿ' ಎಂಬ ತನ್ನ ನಾಮವನ್ನು ಅನ್ವರ್ಥವೆನಿಸಿದಳು. ವಯಸ್ಸಿಗೆ ಮೀರಿದ ಅನಾಸಕ್ತಿ, ವೈರಾಗ್ಯ ಅವಳಲ್ಲಿ ಬೇರೂರಿತು; ಪರಿಣಾಮ ಸ್ವರೂಪವಾಗಿ ಸಂಯಮ, ಸಹನೆ, ಅಂತರ್ಮುಖತೆ ಬೆಳೆಯಿತು. ಕತೆಯನ್ನು ನಿರೂಪಿಸುವವರಾಗಿ ಕಾಣಿಸಿಕೊಳ್ಳುವ ಮೊಮ್ಮಗನ—ತಾತಂದಿರು ಆಕೆಯನ್ನು ತಮ್ಮೊಡನೆ ಕಾಶೀಯಾತ್ರೆಗೆ ಕರೆದೊಯ್ಯಲು ಇಚ್ಛಿಸಿದಾಗ ಆಕೆ 'ಒಲ್ಲೆ, ಅಲ್ಲಿ ಇರುವ ದೇವರು ಇಲ್ಲಿಯೂ ಇದ್ದಾನೆ.' ಎಂದು ಉತ್ತರಿಸುತ್ತಾಳೆ. ಆ ಮನೆಯ ಸಾವು-ನೋವುಗಳಿಗೆ ಸುಖ-ಸಂತಸಗಳಿಗೆ ಮೂಕಸಾಕ್ಷಿಯಾಗಿ ತನ್ನ ಬದುಕನ್ನು ನಡೆಸುತ್ತಾಳೆ.

ಕತೆಗಾರರ (ಮೊಮ್ಮಗನ) ತಂದೆ ಗತಿಸಿದಾಗ ಮೂಕಜ್ಜಿ ಮೊದಲ ಬಾರಿಗೆ ಕಂಬನಿ ಮಿಡಿಯುತ್ತಾಳೆ—ತನ್ನ ಕಣ್ಣು ಮುಂದಿನ ಕುಡಿಗಳ ಅಂತ್ಯವನ್ನು ಕಣ್ಣಾರೆ ಕಾಣಬೇಕಾಯಿತೆಂದು; ಆದರೆ ಒಂದು ಚಣ ಮಾತ್ರ. ಮರುಕ್ಷಣ ಆತ್ಮಸಾಂತ್ವನ ಮಾಡಿಕೊಳ್ಳುತ್ತಾಳೆ; ಮನಸ್ಸನ್ನು ಕಲ್ಲು ಮಾಡಿಕೊಳ್ಳುತ್ತಾಳೆ. ತಾಯಿ-ತಂದೆಗಳಿಬ್ಬರನ್ನೂ ಕಳೆದುಕೊಂಡು ಅನಾಥರಾದಂತಿದ್ದ ಕತೆಗಾರರನ್ನು, ಅವರ ತಮ್ಮನನ್ನು ಹೇಗೆ ಹೇಗೊ ಸಾಕಿ ಸಲಹಿ, ದೊಡ್ಡವರನ್ನಾಗಿ ಮಾಡುತ್ತಾಳೆ. ಅವರಿಗೆ ಸೂಕ್ತ ವಿದ್ಯಾಭ್ಯಾಸ ದೊರಕಿಸುತ್ತಾಳೆ. ಪದವೀಧರನಾಗಿ ಹಿಂದಿರುಗಿದ ಹಿರಿಯನನ್ನು ಹಳ್ಳಿಯಲ್ಲಿಯೇ ನೆಲೆಗೊಳಿಸಿ ಹೆಣ್ಣೊಬ್ಬಳನ್ನು ಸೊಸೆಯಾಗಿ ತಂದು ಮದುವೆ ನಿಲಿಸಿ, ಅವರ ಸಂಸಾರವನ್ನು ಸಂಸ್ಥಾಪಿಸುತ್ತಾಳೆ. ಕಿರಿಯನು ಮಾಸ್ತರಿಕೆಯನ್ನು ಹಿಡಿದು ಸ್ವಲ್ಪ ದೂರದ ಊರಿನಲ್ಲಿ ವಾಸಿಸುತ್ತಾನೆ.

ಮನೆಗೆ ಬಂದ ಹೆಣ್ಣಿಗೆ ಮನೆಯ ಯಜಮಾನಿಕೆಯ ಪಟ್ಟ ಕಟ್ಟಿ, ತಾನು ಆ ಸಂಸಾರಕ್ಕೆ ಅಂಟಿಯೂ ಅಂಟದವಳಂತೆ ಇರಲು ತೊಡಗುತ್ತಾಳೆ. ಮನೆಯ ಎದುರಿನ ಅಶ್ವತ್ಥ ಕಟ್ಟೆಯೇ ಅವಳ ಪೀಠವಾಗುತ್ತದೆ; ದಿನದ ಹೆಚ್ಚು ಸಮಯವನ್ನೆಲ್ಲ ಆಕೆ ಅಲ್ಲಿಯೇ ಕಳೆಯುತ್ತಿರುತ್ತಾಳೆ. ಕರೆದಾಗ ಬಂದು ಒಪ್ಪತ್ತು ಉಣ್ಣುತ್ತಾಳೆ; ಮಾತನಾಡಿಸಬೇಕೆಂದು ಅನಿಸಿದರೆ ತಾನಾಗಿಯೇ ಮಾತನಾಡುತ್ತಾಳೆ; ಇಲ್ಲವಾದರೆ ಇಲ್ಲ. ತನ್ನ ಪಾಡಿಗೆ ತಾನು ಅಶ್ವತ್ಥ ಕಟ್ಟೆಯಲ್ಲಿ ಕುಳಿತು ಏನೇನೊ ಗೊಣಗಿಕೊಳ್ಳುತ್ತಾಳೆ! ಯಾರಿಗೂ ಯಾವ ಬಗೆಯ ಉಪದ್ರವವನ್ನೂ ಕೊಡುವವಳಲ್ಲ; ಕೊಟ್ಟವಳೂ ಅಲ್ಲ. ಯಾರೊಂದಿಗೂ ಮಾತಿಲ್ಲದೆ ಕತೆಯಿಲ್ಲದೆ ತನಗೆ ತಾನೆ ಗೊಣಗಿಕೊಳ್ಳುವ 'ಮೂಕಜ್ಜಿ'ಗೆ ಊರಿನ ಹಲವರು 'ಮರುಳಜ್ಜಿ' ಎಂದು ಪಟ್ಟಕಟ್ಟುತ್ತಾರೆ; ಮನೆಗೆ ಬಂದ ಸೊಸೆಯ ಅಭಿಪ್ರಾಯವೂ ಮೊದಮೊದಲು ಹೆಚ್ಚು ಕಡಮೆ ಅದೇ. ಆದರೆ ಅವಳಿಗೆ ಯಾವುದರ ಪರಿವೆಯೂ ಇಲ್ಲ; ಎಲ್ಲದರ ಪರಿವೆಯೂ ಇದೆ; ಸುಮ್ಮನೆ ತಿಳಿದೂ ತಿಳಿಯದಂತೆ ಇರುತ್ತಾಳೆ. ತನ್ನ ಕನಸುಗಳಲ್ಲಿಯೇ ಮುಳುಗಿ ತೇಲುತ್ತಿರುತ್ತಾಳೆ—ನಿರ್ಯೋಚನೆಯಿಂದ ತುಂಬು ಪ್ರಸನ್ನತೆಯಿಂದ.

೩

ಸುಬ್ರಾಯ—ಅವಳ ಮೊಮ್ಮಗ; ತನ್ನ ಅಜ್ಜಿಯ ಕನಸುಗಳನ್ನು ಕತೆಯನ್ನು ನಿರೂಪಿಸುವವನೂ ಅವನೇ. ಚಿಕ್ಕಂದಿನಲ್ಲಿಯೇ ತಂದೆ-ತಾಯಿಯರನ್ನು ಕಳೆದುಕೊಂಡ ಅವನಿಗೆ ತಮ್ಮನ್ನು ಸಾಕಿ ಸಲಹಿ ಮನುಷ್ಯರನ್ನಾಗಿಸಿದ ಮೂಕಜ್ಜಿಯ ಬಗೆಗೆ ಅಪರಿಮಿತ ಪ್ರೀತಿ ವಾತ್ಸಲ್ಯ, ಗೌರವಾದರಗಳಿವೆ. ಕೃತಜ್ಞತೆ ಇದೆ. ಯಾರೇ ಆಗಲಿ, ಅವಳಿಗೆ 'ಮರುಳು' ಎಂದಾಗೆಲ್ಲ ಅವನ ಮನಸ್ಸಿಗೆ ವೇದನೆಯಾಗುತ್ತದೆ; ಆದರೆ ಆತ ನಿಸ್ಸಹಾಯಕ. ಆಡುವವರ ಬಾಯನ್ನಂತೂ ಎಂದಿಗೂ ಮುಚ್ಚಲಾಗುವುದಿಲ್ಲವೆಂದು ಅವನಿಗೆ ಗೊತ್ತು. ಒಮ್ಮೊಮ್ಮೆ ಅಜ್ಜಿಯ ವಿಲಕ್ಷಣ ವರ್ತನೆಯಿಂದಾಗಿ ಅವನಿಗೂ ಸಂದೇಹದ ಸುಳಿ ಮೂಡುತ್ತದೆ; ಆದರೆ ಹೆಚ್ಚು ಕಾಲ ಸ್ಥಿರವಾಗಿ ನಿಲ್ಲದಂತೆ ಕೊಚ್ಚಿ ಹೋಗುತ್ತದೆ. ಇದಕ್ಕೆ ಕಾರಣ ಅವನ ವೈಚಾರಿಕ ಮನಸ್ಸು—ಸರಿ ತಪ್ಪುಗಳನ್ನು ಅರಿಯುವ, ತನ್ನ ಮನಸ್ಸಿನಂತೆ ತಾನು ನಡೆಯುವ ಮನೋವೃತ್ತಿ. ಹಳ್ಳಿಯಲ್ಲಿಯೇ ಅವನು ನೆಲೆಯೂರಿ ನಿಂತ ಮೇಲೆ ಅಜ್ಜಿಯೊಡನೆ ಹೆಚ್ಚು ಆಪ್ತತೆ ಬೆಳೆಯುತ್ತದೆ. ದಿನಗಳೆದಂತೆ ಅವಳ ಬಗೆಗೆ ಅವನ ಅರ್ಥವಂತಿಕೆ ಹೆಚ್ಚುತ್ತಾ ಹೋಗುತ್ತದೆ. ಅದು ವೃದ್ಧಿಸಿದಷ್ಟೂ ಅವನಿಗೆ ತನ್ನ ಅಜ್ಜಿಯ ಜೀವನ ದೃಷ್ಟಿಯ, ವೈಚಾರಿಕತೆಯ ಅರಿವು ಮೂಡುತ್ತದೆ. ಸಂಪ್ರದಾಯ ಮನೋಧರ್ಮದಲ್ಲಿ ಅವನು ಕಾಣುವ ಅತ್ಯಾಧುನಿಕ ವಿಚಾರಧಾರೆಗಳ ಪಡಿನೆಳಲು ಅವನಿಗೆ ವಿಸ್ಮಯ ತರುತ್ತದೆ. ಎಂಥ ಹಿರಿಯ ಜೀವ ಆಕೆಯದು ಎಂದು ಗುರುತಿಸಿದಾಗ ಗೌರವ ಹೆಚ್ಚು

ತ್ತದೆ. ಯಾವುದೇ ವಸ್ತುವಿನ ಬಳಿ ಸಾರಿದಾಗ, ಪ್ರಾಚೀನ ಅವಶೇಷಗಳನ್ನು ಕಂಡಾಗ, ಪಳೆಯುಳಿಕೆಗಳನ್ನು ಸ್ಪರ್ಶಿಸಿದಾಗ, ಆಕೆಗೆ ಏನೋ ವಿಲಕ್ಷಣ ಅನುಭವವಾಗುತ್ತದೆ; ತನ್ನ ಅಂತಃಪ್ರಜ್ಞೆಯಿಂದ ಅರಿತ ಅದನ್ನು ಕುರಿತ ಇತಿಹಾಸವನ್ನು ಅವಳು ನುಡಿಯುತ್ತಿರುತ್ತಾಳೆ. ಅಜ್ಜಿಯ ಈ ಶಕ್ತಿಯನ್ನು ಮೊಮ್ಮಗ ಗುರುತಿಸುತ್ತಾನೆ; ತನ್ನ ಊರಿನ, ಸುತ್ತಮುತ್ತಲ ಪ್ರಾಚೀನ ವಿವರಗಳನ್ನೆಲ್ಲ ಅರಿಯಲು ಅವನು ಪ್ರಯತ್ನಿಸಿ, ಅಜ್ಜಿಯೊಡನೆ ವಿವೇಚಿಸಿ, ವಿಶ್ಲೇಷಿಸಿ ಜಯಶೀಲನಾಗುತ್ತಾನೆ. ಅವಳ ಒಳಗಾಣ್ಕೆಯ ತಿಳಿವಿನಿಂದ ತನ್ನ ಜೀವನವನ್ನೂ ರೂಪಿಸಿಕೊಳ್ಳುತ್ತಾನೆ; ಜಗತ್ತಿನ ಸ್ವರೂಪವನ್ನು ತಿಳಿಯುತ್ತಾನೆ.

೪

ಮೂಕಜ್ಜಿಗೆ ಆ ಶಕ್ತಿ ಹೇಗೆ ಪ್ರಾಪ್ತವಾಯಿತೆಂಬುದು ವಿಸ್ಮಯಕಾರಿ ಸಂಗತಿಯಾಗಿದೆ. ಅದಕ್ಕೆ ಹೊಂದಿಯೊ ಹೊಂದದೆಯೊ ಇರುವ ಒಂದು ಘಟನೆ ಕಾದಂಬರಿಯಲ್ಲಿ ಬರುತ್ತದೆಯಾದರೂ, ನಮ್ಮ ನಿರ್ಧಾರವನ್ನು ಅದು ಎಷ್ಟರ ಮಟ್ಟಿಗೆ ಸಮರ್ಥಿಸುವುದೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಬದುಕಿನ ಬಗೆಗೆ, ಜಗತ್ತಿನ ಸ್ವರೂಪವನ್ನು ಕುರಿತಂತೆ ಅಷ್ಟು ಆಳವಾದ ಅರ್ಥವಂತಿಕೆ ಸ್ವಾನುಭವದಿಂದ, ಚಿಂತನದಿಂದ ಸಂಪಾದಿಸಿರಬಹುದೆಂದು ಒಪ್ಪಬಹುದಾದರೂ, ಯಾವುದೇ ವಸ್ತುವಿನ ಬಳಿ ಸಾರಿದಾಗ, ಸ್ಪರ್ಶಿಸಿದಾಗ, ಅನುಭವಿಸಿದಾಗ, ವಾಸನೆಯನ್ನು ಆಘ್ರಾಣಿಸಿದಾಗ ಆಕೆಗೆ ಅದರ ಗತಚರಿತ್ರೆಯೆಲ್ಲ ಮಸುಕುಮಸಕಾಗಿ ಕಾಣುವ, ಅದನ್ನು ಗುರುತಿಸುವ ಪರಿಜ್ಞಾನ ಮೂಡುತ್ತಿದ್ದುದು ಸ್ವಲ್ಪ ಸಂದೇಹಕ್ಕೆ ಎಡೆಕೊಡಬಲ್ಲದು. ಆ ಶಕ್ತಿ ಆಕೆಗೆ ಬಂದುದಾದರೂ ಹೇಗೆ?

ವಿಧವೆಯಾದ ಮೇಲೆ ಮೂಕಾಂಬಿಕೆ ಯಾರೊಂದಿಗೂ ಹೆಚ್ಚು ಮಾತನಾಡದೆ, ಮೂಕಿಯಾಗಿಯೇ ಉಳಿದಳೆಂದು ತಿಳಿಸಲಾಗಿದೆ. ಗ್ರಾಮದ ಪ್ರಾಚೀನ ದೇವತೆಯ ಉತ್ಸವಕ್ಕೆಂದು ಒಮ್ಮೆ ಆಕೆ ತನ್ನ ಸೋದರಿ (ತಿಪ್ಪಕ್ಕ) ಯೊಂದಿಗೆ ಹೋಗಿರುವಾಗ ಒಂದು ಆಕಸ್ಮಿಕ ಘಟನೆ ನಡೆಯುತ್ತದೆ: ಆ ದೇವತೆ ಮೂಕಾಂಬಿಕೆಯ ಮೈಮೇಲೆ ಬರುತ್ತದೆ. ಆಗ ಅವಳನ್ನು ಸಮಾಧಾನಪಡಿಸಲು ಪಟ್ಟ ಕಷ್ಟ ಹೇಳತೀರದ್ದು. ಮೊದಲೇ ಮೌನಿಯಾಗಿದ್ದವಳು ಈಗ ಮತ್ತೂ ಮೌನಿಯಾದಳು. ಆ ದುರ್ಭರ ಮೌನದ ಅವಧಿಯಲ್ಲಿ ಅವಳ ಚರ್ಯೆಯನ್ನು ಅಪಾರ್ಥ ಮಾಡಿಕೊಂಡು ಆಕೆಯನ್ನು ವಿನಾಕಾರಣ ಹಿಂಸಿಸಲಾಯಿತು; ಭೂತ ಹಿಡಿದಿದೆಯೆಂದು ಶಂಕಿಸಿ, ಮಂತ್ರವಾದಿಯನ್ನು ಕರೆಸಿ, ಯಂತ್ರ ಮಂತ್ರ ತಂತ್ರ ಪ್ರಯೋಗ, ಚಿಕಿತ್ಸೆ ನಡೆಸಲಾಯಿತು. ಇದರಿಂದಾದ ಉಪಯೋಜನವೆಂದರೆ ಅವಳ ಮನಸ್ಸು-ದೇಹಗಳೆರಡರ ಮೇಲೂ ದಂಡನೆ. ಹತ್ತು ವರ್ಷಗಳ ಅನಂತರವೇ ಅವಳು ಮೌನ ಮುರಿದು, ಎಲ್ಲರೊಡನೆ ಮಾತನಾಡಲಾರಂಭಿಸಿದ್ದು. ಮೌನವಾಗಿದ್ದಾಗಲೇ ಅನ್ನುತ್ತಿದ್ದ ಜನ, ಮಾತನಾಡಲಾರಂಭಿಸಿದಾಗ ಮತ್ತೂ ಅಂದರು. 'ಮರುಳು' ಎಂಬ ಬಿರುದೂ ದೊರೆಯಿತು. ಆದರೆ ಆಕೆ ಎಲ್ಲಕ್ಕೂ ನಿರ್ಲಕ್ಷ್ಯಳು.

ಆ ಘಟನೆ ನಡೆದಂದಿನಿಂದ ಅವಳಲ್ಲಿ ಸುಪ್ತವಾಗಿ ಅಡಗಿದ್ದ ಯಾವುದೊ ಶಕ್ತಿ ಎಚ್ಚತ್ತುಗೊಂಡಿರಬೇಕು. ಸುತ್ತಮುತ್ತಲ ಸೂಕ್ಷ್ಮಾತಿಸೂಕ್ಷ್ಮ ಚರಿತ್ರೆಯ ಅರಿವು ಮೂಡಲಾರಂಭಿಸಿತು; ಗತದ ವೈಭವ, ಬೆಳವಣಿಗೆಯ ಸಂಗತಿ ಕಣ್ಮುಂದೆ ನರ್ತಿಸಿದಂತೆ ಕಾಣತೊಡಗಿದವು. ಮನಸ್ಸಿಗೆ ಹೊಳೆದ ಸಂಗತಿಗಳನ್ನು ಆಕೆ ಅರಿತೊ ಅರಿಯದೆಯೊ ಭಾವಾವೇಶದಿಂದಲೊ ಅಥವಾ ಚಪಲ ತಡೆಯಲಾರದೆಯೊ ತನ್ನಷ್ಟಕ್ಕೆ ತಾನು ಗೊಣಗಿಕೊಳ್ಳಲಾರಂಭಿಸಿದಳು. ಇದರಿಂದ ಆಕೆಯ ಮೇಲಿನ ಆರೋಪಣೆಗೆ ಮತ್ತೂ ಸಮರ್ಥನೆ ದೊರೆಯಿತು. ಹಾಳುಬಿದ್ದ ವಸ್ತುಗಳನ್ನು ಕಂಡಾಗ, ಪಳೆಯುಳಿಕೆಗಳನ್ನು ಸ್ಪರ್ಶಿಸಿದಾಗ ಅವಳಿಗೆ ರೋಮಾಂಚವಾಗುತ್ತಿತ್ತು. ಅವುಗಳ ಸ್ವರೂಪ, ಸಂಬಂಧಿಸಿದ ವ್ಯಕ್ತಿಸ್ಥಿತಿ, ವಸ್ತು ಸಂಗತಿ ಅವುಗಳ ಅಂತರ್ಯ ಎಲ್ಲವೂ ಸ್ಪಷ್ಟವಾಗುತ್ತಿತ್ತು. ಭೂತಕಾಲದ ಸಂಗತಿಗಳ ಬಗೆಗೆ ಅವಳು ಹೇಳಿದುದು ಆಧುನಿಕ ವೈಜ್ಞಾನಿಕ ವಿಚಾರಧಾರೆಯ ನಿರ್ಧಾರ, ಕಲ್ಪನೆಗಳಿಗೆ ಸರಿದೂಗುತ್ತಿತ್ತು. ವರ್ತಮಾನದ ಬಗೆಗೆ ಅವಳ ಅಭಿಪ್ರಾಯ, ಹೇಳಿಕೆ ಸಟೆಯಾಗುತ್ತಿರಲಿಲ್ಲ. ಇವೆಲ್ಲ ಆಕೆ ಕಾಣುತ್ತಿದ್ದ "ಕನಸು"ಗಳು. ಆದ್ದರಿಂದಲೇ ಕಾದಂಬರಿಯ ಶೀರ್ಷಿಕೆಯೂ "ಮೂಕಜ್ಜಿಯ ಕನಸುಗಳು" ಎಂದಿಡಲಾಗಿದೆಯೇನೊ. ಆ ಕನಸುಗಳಿಗೆ ಮಾತು ಕೊಡಿಸುವುದು ಮೊಮ್ಮಗ. ಅವಳನ್ನು ಚರ್ಚೆಗೆ, ವಿವೇಚನೆಗೆ ಎಳೆದು ಕೆದಕಿ ಕೆದಕಿ ಅಭಿಪ್ರಾಯವನ್ನು ಕೇಳಿ ತಿಳಿದು, ಅದರ ಪ್ರಯೋಜನ ಲಾಭ ಪಡೆಯುವುದು ಅವನೇ.

೫

ಅವರು ಚರ್ಚಿಸುತ್ತಿದ್ದ ವಿವೇಚಿಸುತ್ತಿದ್ದ ಸಂಗತಿಗಳು ಒಂದೆ, ಎರಡೆ! ಹುಟ್ಟು-ಸಾವು, ಬದುಕು, ಕರ್ಮ, ಸೃಷ್ಟಿ-ಸ್ಥಿತಿ-ಲಯ, ಸ್ವರ್ಗ-ನರಕ, ದೇವರು-ದೆವ್ವ, ಇಹ-ಪರ,

-ಇನ್ನೆಷ್ಟೊ! ಅವಳ ಸ್ವಾನುಭವದ ಚಿಂತನ, ಪಡೆದಿದ್ದ ಗುಣ-ಗ್ರಹಣಶಕ್ತಿ-ಇವೆರಡೂ ಅವಳ ವಿವೇಚನೆಯ ಮೂಲ. ಮೊಮ್ಮಗ ಅದನ್ನು ವಿಶ್ಲೇಷಿಸಲು ಸಹಾಯಕನಾಗುವ ಮಾಧ್ಯಮ.

ಅವರ ಚರ್ಚೆಯ ನೆಳಲು-ಬೆಳಕಿನಲ್ಲಿ ಹಾದುಹೋಗುವ ಅಸಂಖ್ಯ ಸಮಸ್ಯೆ-ಪರಿಹಾರಗಳಲ್ಲಿ, ಪಡೆಯುವ ಸಮಾಧಾನದಲ್ಲಿ ಕತೆಗಾರರು-ಅವಳ ಮೊಮ್ಮಗ-ಪ್ರಮುಖವಾಗಿ ನಿರೂಪಿಸಿರುವುದು ಸಾವಿರಾರು ವರ್ಷಗಳಿಂದ ಹರಿದು ಬಂದಿರುವ ಸೃಷ್ಟಿ ಸಮಸ್ಯೆಯನ್ನು; ದೈವಸಂಬಂಧಿ ವಿಶ್ವಾಸವನ್ನು, ಕರ್ಮ-ಧರ್ಮ ಶ್ರದ್ಧೆಯನ್ನು. ಇಲ್ಲಿನ ಆಲೋಚನಾ ಲಹರಿ ಕಾರಂತರದೇ. ಇಂದಿನವರೆಗೆ ತಮ್ಮ ಸಾಕಲ್ಯ ಬದುಕಿನಲ್ಲಿ ಅವರು ಕಂಡು, ಅಭ್ಯಸಿಸಿ, ಚಿಂತಿಸಿ ಮುಟ್ಟಿದ ನಿರ್ಧಾರಗಳು, ಸಮಾಜಶಾಸ್ತ್ರ, ಧರ್ಮಶಾಸ್ತ್ರ, ಸಂಸ್ಕೃತಿ-ನಾಗರಿಕತೆಗಳ ಇತಿಹಾಸ, ಬೆಳವಣಿಗೆ-ಇವನ್ನು ಕುರಿತ ತಮ್ಮ ಅಭಿಪ್ರಾಯಗಳನ್ನು ಕಾದಂಬರಿಯಲ್ಲಿ ಪ್ರತಿಬಿಂಬಿಸಿದ್ದಾರೆ. ಅವರ ಅಭಿಪ್ರಾಯಗಳು ವೈಜ್ಞಾನಿಕವಾಗಿಯೂ, ಪಾಶ್ಚಿಮಾತ್ಯ-ಭಾರತೀಯ ನಂಬಿಕೆಗಳಿಗೆ ಹೋಲುವುದಲ್ಲದೆ ತನ್ನತನವನ್ನು ಉಳಿಸಿಕೊಂಡವೂ ಆಗಿವೆ. ಮೂಕಜ್ಜಿಯ ಜೀವನ ದೃಷ್ಟಿ, ಸಹನೆ, ಸಜ್ಜನಿಕೆ, ಮಾನವೀಯ ಕರುಣೆಗಳು ಆಕೆಯ ಪಾತ್ರವನ್ನು ಘನತೆಗೆ ಏರಿಸಿವೆ. ಒಮ್ಮೊಮ್ಮೆ ಆಕೆಯ ಮಾನವೀಯತೆಯ ಪ್ರದರ್ಶನ (ಉದಾ: ನಾಗಿಯ ಪ್ರಸಂಗ, ತಿಪ್ಪಕ್ಕನ ಅಂತ್ಯದ ಸಂದರ್ಭ) ತನ್ನ ಪರಾಕಾಷ್ಠೆಗೆ ಏರಿದಾಗ, ಅಂಥ ಜೀವವೂ ಈ ಜಗತ್ತಿನಲ್ಲಿ ಉಂಟೆ, ಇರಲು ಸಾಧ್ಯವೆ?-ಎನಿಸುತ್ತದೆ . . . ಆಕೆಯ ಜೀವನಾದರ್ಶ ಬದುಕಿಗೆ ದಾರಿ ದೀಪವಾಗಬಲ್ಲದು. ತಮ್ಮ ಅಭಿಪ್ರಾಯಗಳನ್ನು ತಮ್ಮದೇ ಆದ ರೀತಿಯಲ್ಲಿ ವೈಯಕ್ತಿಕತೆಯಿಂದ ಸಾಮಾನ್ಯತ್ವಕ್ಕೆ (Personal to impersonal) ಏರಿಸಿರುವ ಸಿದ್ಧಿಯನ್ನು ಕಾರಂತರು ಇಲ್ಲಿ ಪಡೆದಿದ್ದಾರೆ. ಮೂಕಜ್ಜಿಯ-ಆ ಮೂಲಕ ಕಾರಂತರ-ಬದುಕನ್ನು ಕುರಿತ 'ಫಿಲಾಸಫಿ'ಯ ಸಾರಸರ್ವಸ್ವವೆನ್ನಬಹುದಾದ ಈ ವಾಕ್ಯಗಳೊಂದಿಗೆ ಈ ಲೇಖನವನ್ನು ಮುಗಿಸಬಹುದು.

"ಹುಟ್ಟಿದ್ದೇವೆ; ಬದುಕಿದ್ದೇವೆ. ಯಾಕೆ ಅಂತ ನಮಗೆ ಗೊತ್ತಿಲ್ಲ. ಇರುವಷ್ಟು ದಿವಸ ನಮಗೂ ಹಿತವಾಗಿ, ನಾಲ್ಕು ಜನರಿಗೂ ಹಿತವಾಗುವ ಹಾಗೆ ಬಾಳುವುದು . . . ಜನ ಅಂದರೆ-ಬರಿಯ ಮನುಷ್ಯರಿನಷ್ಟೇ ಅಲ್ಲ; ಆಚೀಚಿನ ಎಲ್ಲ ಜೀವಗಳಿಗೂ ಹಿತವಾಗುವ ಹಾಗೆ ಇರಬೇಕು. ಹಾಗೆ ಇರುವುದು ಕಷ್ಟವಾಗಬಹುದು. ಇನ್ನೊಬ್ಬರಿಗೆ ಹಿತವನ್ನು ಮಾಡಲು ತ್ರಾಣವಿಲ್ಲದೆ ಹೋಗಬಹುದು. ನೂರಾರು ಜನರಿಗೆ, ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುವುದೇ ದೊಡ್ಡ ಕೆಲಸವಾಗುತ್ತದೆ. ಅಂಥವರಲ್ಲಿ-ಹೊರಗಿನವರ ಹಿತದ ಮಾತೇನು ಬಂತು? ಆಗ ಇಷ್ಟನ್ನಾದರೂ ಮಾಡಬಹುದು. ಇನ್ನೊಬ್ಬರಿಗೆ ಅನ್ಯಾಯವಾಗದ ರೀತಿಯಲ್ಲಿ ಬದುಕುವುದು ಪರರಿಗೆ ಸುಖ ಕೊಡಲು ಬಾರದೆ ಹೋದರೆ, ದುಃಖ ಕೊಡದೆ ಇರುವುದು . . . ಇರುವ ನಾಲ್ಕು ದಿನ ಚಂದವಾಗಿ ಇರುವುದು; ಹೋಗುವ ಕಾಲ ಬಂದರೆ ಹೋಗುವುದು . . ."

---

## ನಿನಗೆ

ತಿಳಿದೂ ತಿಳಿದೂ ನಿನ್ನನಾಚಾರ
ಮಾತಿನ ವಿಚಾರ-ಊಸರವಳ್ಳಿ ವ್ಯವಹಾರ
ತರಲೆ, ಎಡಬಿಡಂಗಿ ವಿದ್ಯೆ,
ಗುಳ್ಳೆನರಿ ಪಿತೂರಿಗೆ
ಪುಳ್ಳೆಹಾಕಲಾರೆ ಗೆಳೆಯ, ಬೆಂಕಿಗೆ ಬಲಿಯಾಗಲಾರೆ;
ವಿಚಾರ ಬೊಂತೆಯನೆಲ್ಲಾ
ನಿನ್ನ ಕೆಟ್ಟ ಕಲ್ಪಕತೆ ಕಂತೆಗೆಸೆಯಲಾರೆ—
ಬೆಸೆಯಲಾರೆ,
ಬೆಸೆದು ಬೇಯಲಾರೆ
ಆ ಮುನ್ನ, ನಿನ್ನ ತರಿಯಲಾರೆ—ತರಿಯದಿರಲಾರೆ.

ದೊಡ್ಡರಂಗೇಗೌಡ

# ಕನ್ನಡ-ಕನ್ನಡ ನಿಘಂಟು—ಒಂದು ಸಮೀಕ್ಷೆ

ಮ. ಗ. ಶೆಟ್ಟಿ

ಕನ್ನಡ ಸಾಹಿತ್ಯ ಪರಿಷತ್ತು ಕೈಕೊಂಡಿರುವ ನಿಘಂಟುವಿನ ಕಾರ್ಯ ಮೈಸೂರು ಅಥವಾ ಬೆಂಗಳೂರು ಯುನಿವರ್ಸಿಟಿಗೆ ಒಪ್ಪಿಸಬೇಕು ಎಂಬ ಬಗ್ಗೆ ಕಳೆದ ಕೆಲವರ್ಷಗಳಿಂದ ಚರ್ಚೆ ನಡೆದೇ ಇದೆ. ಒಂದು ವಿಷಯದಮೇಲೆ ಚರ್ಚೆಯಾಗುತ್ತದೆಂದರೆ ಅದು ಬೆಳೆವುದರ ಲಕ್ಷಣವನ್ನು ತೋರಿಸುತ್ತದೆ. ಈಗಿತ್ತಲಾಗಿ ಪತ್ರಿಕೆಗಳಲ್ಲಿ ಬಂದ ಆಕ್ಷೇಪಣೆಗಳನ್ನೂ ಇನ್ನಿತರ ಹಿರಿಯರ ಆಶಂಕೆಗಳನ್ನೂ ಪರಿಷತ್ತು ಕೈಕೊಂಡ ಕಾರ್ಯಕ್ರಮಗಳನ್ನೂ ಇಲ್ಲಿ ಚರ್ಚಿಸುವುದು ವಿಹಿತವೆಂದು ಭಾವಿಸಿದ್ದೇನೆ.

ಹಿರಿಯರ ಆಕ್ಷೇಪಣೆ ಮತ್ತು ಸಲಹೆಗಳನ್ನು ಈ ರೀತಿಯಾಗಿ ನಿವೇದಿಸಬಹುದು.

(೧) ನಿಘಂಟುವಿನ ಸಿಬ್ಬಂದಿ ವರ್ಗಕ್ಕೆ ಭವಿಷ್ಯತ್ತಿನ ಭರವಸೆಯಿಲ್ಲದಿದ್ದರೆ ನಿಘಂಟಿನ ಕಾರ್ಯ ತಡವಾಗಬಹುದು ಎಂದು ಶ್ರೀ ಕೋದಂಡರು ಅಭಿಪ್ರಾಯಪಟ್ಟಿದ್ದಾರೆ.

(೨) ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಚ್ಚುಕಟ್ಟಾದ ಪುಸ್ತಕ ಭಂಡಾರ, ಹಸ್ತಪ್ರತಿಗಳ ಸಂಗ್ರಹಾಲಯ, ಶಾಸನ ಇಲಾಖೆಗಳಿಗೆ ಸಂಬಂಧಿಸಿದ ಕಚೇರಿಗಳು ಇರುವುದರಿಂದ ಅಲ್ಲಿಗೆ ವರ್ಗಾಯಿಸುವುದು ಹಿತಕರವೆಂದು ಶ್ರೀ ಶಂಕರಾನಂದ ಅವರು ಸಲಹೆ ನೀಡಿದ್ದಾರೆ.

(೩) ಜನಸೇವಕ ಪತ್ರಿಕೆಯ ಅಕ್ಟೋಬರ ೨ನೆಯ ತಾರೀಖಿನ ಸಂಚಿಕೆಯಲ್ಲಿ ಸಂಪಾದಕರು ಸಾಹಿತ್ಯ ಪರಿಷತ್ತಿನ ಪ್ರಗತಿಯನ್ನು ವಿಮರ್ಶಿಸುತ್ತ "ಕನ್ನಡ ನಿಘಂಟುವಿನ ಕಾರ್ಯವಂತೂ ಅತಿ ಸಾವಕಾಶವಾಗಿ ಸಾಗಿದೆ. ಪ್ರಗತಿ ಇದೇರೀತಿ ಮುಂದುವರಿದರೆ ನಿಘಂಟು ಮುಗಿಯಲು ಕಾಲು ಶತಮಾನ ಬೇಕಾಗಬಹುದು. ಈ ಕಾರ್ಯವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸುವುದು ಒಳಿತು. ನಿಘಂಟಿನ ರಚನೆ ಸಾಹಿತ್ಯರಚನೆಯಲ್ಲ. ಪಾಂಡಿತ್ಯಕ್ಕೆ ಸಂಬಂಧಿಸಿದ ಕಾರ್ಯ. ಆದ್ದರಿಂದ ಈ ಕಾರ್ಯವನ್ನು ವಿಶ್ವವಿದ್ಯಾನಿಲಯವು ಹೆಚ್ಚು ಸಮರ್ಪಕವಾಗಿಯೂ, ಸಕಾಲದಲ್ಲಿಯೂ ಎಸಗಬಹುದು ಎಂದಿದ್ದಾರೆ.

(೪) ಮಾಜಿ ಮೇಯರ ಜಿ. ನಾರಾಯಣ ಅವರು ಪರಿಷತ್ತಿನ ಸರ್ವಸದಸ್ಯರ ಸಭೆಯಲ್ಲಿ ಮಾತನಾಡುತ್ತ

(ಅ) ನಿಘಂಟುವಿನ ಬಗ್ಗೆ ಸರಕಾರದ್ದಾಗಲೀ, ಜನದ್ದಾಗಲೀ ಹಣ ಕ್ಷಿಪ್ರವಾಗಿ ಮುಟ್ಟುವಂತೆ ಏರ್ಪಾಡು ನಡೆಯಬೇಕು. ಕಾಲವಿಲಂಬ ಸರ್ವಥಾ ಸಲ್ಲದು.

(ಆ) ಕಾಲಹರಣ ಮಾಡುವುದರಿಂದ ಕೊನೆಯ ಸಂಚಿಕೆ ಮುಗಿಯುವ ಹೊತ್ತಿಗೆ ಮೊದಲು ಮುದ್ರಣ ಮಾಡಿದ ಪ್ರಥಮ ಸಂಚಿಕೆಯ ಕಾಗದ ಹಾಳಾಗುವ ಸಂಭವವಿದೆ.

(ಇ) ನಿಘಂಟುವಿನ ಕೆಲಸ ಪರಿಷತ್ತು ಮಾಡಬಾರದೆಂದಿಲ್ಲ. ಇನ್ನಿತರ ಚಟುವಟಿಕೆಗಳಿಗೂ ಎಡೆ ಮಾಡಿ ಕೊಡಬೇಕು.

(ಈ) ಪರಿಷತ್ತಿಗೆ ಉತ್ಪನ್ನ ಬರುವ ಬಾಬುಗಳಲ್ಲಿ ಸದಸ್ಯರ ವಾರ್ಷಿಕ ಚಂದಾ, ದೇಣಿಗೆ, ಸರಕಾರದ ಸಹಾಯ ಮುಖ್ಯವಾದುದು. ಇದೀಗ ದೇಣಿಗೆ ಬರುವುದೂ ವಿರಳವಾಗಿದೆ. ಸದಸ್ಯರು ಆರು ರೂಪಾಯಿ ಚಂದಾ ತೆತ್ತರೆ, ಅವರಿಗೆ ಕನ್ನಡ ನುಡಿ ಪರಿಷತ್ ಪತ್ರಿಕೆ ಇನ್ನಿತರ ಆಮಂತ್ರಣ ಆಹ್ವಾನಗಳ ಪೂರೈಕೆಗಾಗಿ ಪರಿಷತ್ತು ಅದಕ್ಕೂ ಹೆಚ್ಚು ಸಲ್ಲಿಸಬಹುದಾಗಿದೆ. ಪರಿಷತ್ತಿಗೆ ಮುದ್ರಣ ವಿಭಾಗದಿಂದಲೂ ಕೆಲಮಟ್ಟಿಗೆ ನೆರವು ದೊರೆಯುವಂತಾಗಬೇಕು.

ಮೇಲ್ಕಾಣಿಸಿದ ಹಿರಿಯರು ಪರಿಷತ್ತಿನ ಏಳ್ಗೆಯ ದೃಷ್ಟಿಯಿಂದ – ನಿಘಂಟು ತೀವ್ರ ಮುದ್ರಿತವಾಗಬೇಕೆಂಬ ದೃಷ್ಟಿಯಿಂದ – ತಮ್ಮ ತಮ್ಮ ಸಲಹೆಗಳನ್ನು ನೀಡುತ್ತಿದ್ದಾರೆ. ಪರಿಷತ್ತು ನಡೆಸುತ್ತಿರುವ ಈ ಮಹಾಕಾರ್ಯದ ಬಗ್ಗೆ ನಮ್ಮ ರಾಜ್ಯದ ವಿಚಾರವಂತರು ಪ್ರಕಟಪಡಿಸುತ್ತಿರುವ ವಿಚಾರ ಮನನೀಯವಾಗಿದೆ. ಅದರಲ್ಲಿರುವ ಉತ್ತಮ ಅಂಶವನ್ನು ಗಮನಿಸಿ ಹೆಚ್ಚು ತತ್ಪರತೆಯಿಂದ ಕಾರ್ಯಸಾಗಿಸಬೇಕಾದುದು ಪರಿಷತ್ತಿನ ಕರ್ತವ್ಯವೇ ಆಗಿದ್ದರೂ ಪರಿಷತ್ತಿನಲ್ಲಿ ನಿಘಂಟುವಿನ ಕೆಲಸ ಸಾಗುತ್ತಿಲ್ಲ, ಯಾವುದೋ ಸಮರ್ಥ ಸಂಸ್ಥೆಗೆ ಒಪ್ಪಿಸಿದರೆ ಕಾರ್ಯ ಸುಗಮವಾಗುವುದು ಎಂದು ಹೇಳುವುದು ಸರ್ವಥಾ ಸರಿಯಲ್ಲ. ಕನ್ನಡನಾಡಿನ ಎರಡು ಕೋಟಿ ಜನ ಪರಿಷತ್ತಿನ ವಿಷಯದಲ್ಲಿ ಸದ್ಭಾವನೆ ತಳೆದರೆ, ಕಾರ್ಯಕರ್ತರು ನೆರವಿಗೆ ನಿಂತರೆ, ಸಾಹಿತ್ಯ ಪರಿಷತ್ತು ನಿಘಂಟನ್ನು ಒಂದೇ ಅಲ್ಲ, ಯೋಜಿಸಿರುವ ಅನೇಕ ಕೆಲಸಗಳನ್ನು ಪೂರ್ತಿಗೊಳಿಸಬಹುದು. ಆದುದರಿಂದ ಪರಿಷತ್ತು

ನಿಘಂಟನ್ನು ಮುಗಿಸಲಾರದು ಎಂಬ ಮನೋಭಾವವನ್ನು ನಮ್ಮ ಸ್ನೇಹಿತರು ಬಿಟ್ಟುಗೊಡಬೇಕು.

ಪರಿಷತ್ತು ನಿಂಘಟಿನ ಕೆಲಸ ಮುತುವರ್ಜಿಯಿಂದ ಮಾಡುವುದಕ್ಕೆ ತಕ್ಕ ಏರ್ಪಾಟು ಮಾಡುತ್ತಲಿದೆ. ಸಿಬ್ಬಂದಿ ವರ್ಗಕ್ಕೆ ಭದ್ರತೆಯನ್ನು ಉಂಟುಮಾಡುವುದಕ್ಕೆ ಸರಕಾರ ದೊಡನೆ ಪ್ರಯತ್ನಿಸಿ ಯಶಸ್ವಿಯಾಗಿದೆ. ಹೆಚ್ಚು ಸಿಬ್ಬಂದಿಯ ನೇಮಕಕ್ಕೆ ಸರಕಾರದೊಡನೆ ಒಂದು ವರ್ಷದಿಂದಲೂ ಪತ್ರ ವ್ಯವಹಾರ ಸಾಗಿಸುತ್ತಿದ್ದು ಮಂಜೂರಿಯು ಶ್ರೀಘ್ರದಲ್ಲಿಯೇ ದೊರೆಯಲಿದೆ. ಸಂಪಾದಕ ಮಂಡಳಿಯಿಂದ ಉಪಸಮಿತಿಯನ್ನು ನಿಯಮಿಸಿ ಪ್ರಕಟಣೆ ತ್ವರಿತಗೊಳ್ಳುವಂತೆ ಏರ್ಪಾಟಾಗಿದೆ. ಉಪಸಮಿತಿಯವರು ಕರಡನ್ನು ಸರಿಪಡಿಸುವ ಕಾಲಕ್ಕೆ ಹೊಸ ಹೊಸ ಶಬ್ದಗಳು ಹೊಳೆಯುವುದು ಸ್ವಾಭಾವಿಕವಾದುದರಿಂದ ಅವನ್ನೂ ಸೇರಿಸಿ ಗ್ರಂಥ ಪರಿಪೂರ್ಣವಾಗುವಂತೆ ನೋಡಿಕೊಳ್ಳಬೇಕೆಂಬ ಮನೀಷೆಯಿತ್ತು. ಆದರೆ ಶಬ್ದಕೋಶ ದಿನದಿನಕ್ಕೆ ಬೆಳೆಯುವದಾದುದರಿಂದ ಹೊಸದಾಗಿ ಹೊಳೆಯುವ ಶಬ್ದಗಳನ್ನು ಪ್ರತ್ಯೇಕವಾಗಿ ಪ್ರಕಟಿಸುವ ವಿಚಾರ ಈಗ ಮಾಡಿದ್ದಾರೆ. ಅದರಿಂದ ಕಾರ್ಯವು ಶೀಘ್ರವಾಗಿ ಮುಂದುವರಿಯುವ ನಿರೀಕ್ಷೆಯಿದೆ. ಆದರೆ ಈ ಸಲಹಾಸಮಿತಿ ತಿಂಗಳಿಗೊಮ್ಮೆ ಸೇರುವುದರ ಬದಲು ಪ್ರತಿವಾರಕ್ಕೊಮ್ಮೆ ಸೇರುವ ಏರ್ಪಾಟಾಗಬೇಕು. ಸಲಹಾಸಮಿತಿಯವರು ಹೊಸದಾಗಿ ಕಂಡುಹಿಡಿಯುವ ಶಬ್ದಗಳನ್ನು ವಾರ ಪತ್ರಿಕೆಗಳ ಭಾನುವಾರದ ಸಂಚಿಕೆಗೆ ಒದಗಿಸಿದರೆ ನಾಡಿನಲ್ಲಿಯ ಪಂಡಿತರು ತಮ್ಮ ತಮ್ಮ ಭಾಗದ ಶಬ್ದ ವ್ಯತ್ಯಾಸಗಳನ್ನು ಸೂಚಿಸಲು ಅನುಕೂಲವಾಗುವುದು.

ನಿಘಂಟುವಿನ ಕೆಲಸ ಸಾಹಿತ್ಯ ಪರಿಷತ್ತಿಗೆ ಕಷ್ಟಸಾಧ್ಯವಾದರೂ ಮಾಡಲೇಬೇಕಾದ ಕೆಲಸ. ನಿಘಂಟು ಒಮ್ಮೆ ಸಿದ್ಧವಾದರೆ ಅನೇಕ ಚಿಕ್ಕಪುಟ್ಟ ಆವೃತ್ತಿ, ವಿದ್ಯಾರ್ಥಿಗಳ ಆವೃತ್ತಿ ಹೊರಡಿಸಬಹು. ನಿಘಂಟು ಸಂಪಾದನೆಯಲ್ಲಿ ದುಡಿದ ಸಂಪಾದಕರು ತಾವು ಅಭ್ಯಾಸ ಮಾಡಿದ ಪುಸ್ತಕಗಳಿಂದ ಅನೇಕ ಉಪಕೃತಿಗಳನ್ನು ಹೊರಡಿಸಬಹುದು. ಉದಾಹರಣಾರ್ಥವಾಗಿ ಹಿಂದೀ ಕೋಶವನ್ನು ಪ್ರಕಟಿಸಿದ ಹಿರಿಯರು ತುಲಸೀದಾಸ ರಾಮಾಯಣದಲ್ಲಿ ಬಂದ ಅಲಂಕಾರ, ಉಪಮೆ, ವಾಗ್ಧೋರಣೆಗಳ ಮೇಲೆ ಭಿನ್ನ ಭಿನ್ನ ಕೃತಿಗಳನ್ನು ಬರೆದು ತಮ್ಮ ಸಾಹಿತ್ಯ ದೇವಿಯನ್ನು ಅಲಂಕರಿಸಿದರು. ಹೀಗೆ ಪ್ರಾಚೀನ ಕವಿಗಳ ಮೇಲೆ ಬೆಳಕು ಬೀರುವ ಅನೇಕ ಕೃತಿಗಳು ರೂಪುಗೊಂಡವು.

ಈ ನಿಘಂಟುವಿನ ಕೆಲಸ ಮುಗಿದರೆ ಪರಿಷತ್ತಿಗೆ ಸುಮಾರು ಒಂದು ಲಕ್ಷ ರೂಪಾಯಿಗಳ ನಿಧಿ ಸಂಶೋಧನೆ ಮುಂತಾದ ಕೆಲಸಕ್ಕೆ ಒದಗುತ್ತದೆ. ಇವಲ್ಲದೆ ಅನೇಕ ಪ್ರಕಟಣೆಗಳ ಹಕ್ಕು ಪರಿಷತ್ತಿನದಾಗುತ್ತದೆ. ಹೀಗೆ ನಿಘಂಟು ಪರಿಷತ್ತಿಗೆ ಹಿರಣ್ಯಗರ್ಭವಾಗುತ್ತದೆ. ಐವತ್ತು ವರ್ಷಗಳ ತಪಸ್ಸು ಫಲಪ್ರದವಾಗುತ್ತದೆ. ಪರಿಷತ್ತು ತನ್ನ ಪ್ರಕಟಣೆಗಳ ಬಗೆಗೂ ಉತ್ಸುಕವಾಗಿದೆ. ಅಲಭ್ಯ ಪ್ರಕಟಣೆಗಳ ಪುನರ್ಮುದ್ರಣ ಕೈಕೊಂಡಿದೆ. ಹೊನ್ನ ಹಬ್ಬದ ಸವಿನೆನಪಿಗಾಗಿ ಎರಡುಲಕ್ಷ ರೂಪಾಯಿಗಳ ಸಭಾಗೃಹ ಮತ್ತು ಪುಸ್ತಕ ಮಾರಾಟದ ಏರ್ಪಾಟಿಗಾಗಿ ಮಳಿಗೆಯನ್ನು ನಿರ್ಮಿಸಲು ಯೋಜಿಸಿದ್ದು ಕೇಂದ್ರ ಸರಕಾರದಿಂದ ಒಂದು ಲಕ್ಷ ರೂಪಾಯಿ ದೊರೆವ ಸಂಭವವಿದೆ.

ಈ ದೃಷ್ಟಿಯಿಂದ ಪರಿಷತ್ತು ನಿಘಂಟುವಿನ ಕೆಲಸ ಮುಂದುವರಿಸುವಂತೆ ಎಲ್ಲರೂ ನೋಡಿಕೊಳ್ಳಬೇಕು. ಪರಿಷತ್ತಿನಿಂದ ತಮಗೇನು ಲಾಭವಾದೀತು ಎಂಬುದನ್ನು ನೋಡದೆ ತಾವು ಪರಿಷತ್ತಿಗೆ ಏನು ಸೇವೆ ಸಲ್ಲಿಸಬಹುದೆಂಬುದನ್ನು ಯೋಚಿಸಬೇಕು. ಪರಿಷತ್ತು ಅಸಮರ್ಥವಾದರೆ ಕನ್ನಡ ಜನತೆಯೇ ದುರ್ಬಲವಾದ ಹಾಗೆ. "ತಾಯಳಿಯೆ ನಾನಳಿವೆ, ತಾಯುಳಿಯೆ ನಾನುಳಿವೆ" ಎಂಬ ಭಾವ ಕನ್ನಡದ ಎರಡುಕೋಟಿ ಜನ ಮಾನಸದಲ್ಲಿ ಮೂಡಬೇಕು. ಯೂನಿವರ್ಸಿಟಿಗಳು ಅಲ್ಲಿ ಓದುವವರ ಸಾಕುತಾಯಿಯಾದರೆ ಸಾಹಿತ್ಯ ಪರಿಷತ್ತು ಎಲ್ಲರ ತಾಯಿ. ಸಾಹಿತ್ಯ ಪರಿಷತ್ತಿನ ಹೊರತು ಇನ್ನಾವ ಸಂಸ್ಥೆಯೂ ಮಾತೃಸ್ಥಾನಕ್ಕೆ ಏರಲಾರದು. ಆ ಹಕ್ಕು ಕನ್ನಡ ಸಾಹಿತ್ಯ ಪರಿಷತ್ತಿಗೆ ಮಾತ್ರವೇ ಇದೆ.

ಡಿ. ವಿ. ಜಿ. ಹೇಳಿದ ಹಾಗೆ ಸಾಹಿತ್ಯ ಪರಿಷತ್ತಿಗೆ ವೆಂಕಟನಾರಣಪ್ಪನವರ ವ್ರತಬುದ್ಧಿ, ಶ್ರೀಯವರ ಸಂಪದ್ವಿನಿಯೋಗ ಬುದ್ಧಿ ಬೇಕಾಗಿದೆಯೇ ಹೊರತು ಪರಿಷತ್ತು ತನ್ನ ಏಳ್ಗೆಗೆ ಬಳಸಿಕೊಳ್ಳಬೇಕೆಂಬ, ಮುನ್ಸಿಪಲ್ ಕೌನ್ಸಿಲರ ಅಥವಾ ಬೆಂಚ ಮೆಜಿಸ್ಟ್ರೇಟನ ಬುದ್ಧಿ ಬೇಡ.

ಇದು ದೇವಾಲಯ; ದೇವಾಲಯ ಪ್ರವೇಶಿಸುವವರು ಕಾಲ್ಮರೆಯನ್ನು ಹೊರಗಿಟ್ಟು ಬರುವಂತೆ ಸ್ವಾರ್ಥವನ್ನು ತ್ಯಜಿಸಿ ಬನ್ನಿ. ಆಗ ಕನ್ನಡ ದೇವಿಯ ಸಾಕ್ಷಾತ್ಕಾರವಾಗುವುದು. ಆ ಭವ್ಯ ವಿಶ್ವರೂಪ ದರ್ಶನದಲ್ಲಿ ತಾನು ಎಂಬ ಅಹಂಕಾರ ಅಡಗಿಹೋಗುವುದು.

---

# ಅಬ್ಬಣಬ್ಬೆ-ಮಗಳಲ್ಲ; ಮೊಮ್ಮಗಳು

ಎಂ. ಎಂ. ಕಲಬುರ್ಗಿ

ಡಾ|| ಪಿ. ಬಿ. ದೇಸಾಯಿ ಅವರು 'ಪಂಪನನ್ನು ಕುರಿತ ಗಂಗಾಧರಂ ಶಾಸನ—ಒಂದು ತಿದ್ದುಪಡಿ' [1] ಎಂಬ ನನ್ನ ಲೇಖನವನ್ನು ವಿರೋಧಿಸಿ 'ಗಂಗಾಧರಂ ಶಾಸನ-ತಿದ್ದುಪಡಿಯ ಗಡಿಬಿಡಿ' [2] ಎಂಬ ಉತ್ತರವನ್ನು ಬರೆದರು. ಈ ಲೇಖನ ಅದಕ್ಕೆ ಬರೆದ ಮಾರುತ್ತರ.

ನನ್ನ ಲೇಖನದಲ್ಲಿ ಗಂಗಾಧರಂ ಶಾಸನದ 'ಅಭಿಮಾನ ಚನ್ದ್ರನ ಮರ್ಮಂ ಭೀಮಪಯ್ಯನ ಬೆಳ್ವೊಲದಣ್ಣಿಗೆಱೆಯದ ಜೋಯಿಸಸಿಂಘನ ಮರ್ಮ[ಂ]* ವಬ್ಬಣಬ್ಬೆಯ ಮಗಂ-ಜಿನವಲ್ಲಭಂ' ಎಂಬ ಭಾಗದಲ್ಲಿ ಅರ್ಥಕ್ಲಿಷ್ಟತೆ ಇವೆಯೆಂದು ವಿವರವಾಗಿ ತೋರಿಸಿಕೊಟ್ಟು ಇದನ್ನು ಕೆಳಗಿನಂತೆ ಮೂರು ಬಗೆಯಲ್ಲಿ ತಿದ್ದಬಹುದೆಂದು ಸೂಚಿಸಿದ್ದೆನು.

೧. "ಅಭಿಮಾನಚನ್ದ್ರನ ಮರ್ಮಂ ಭೀಮಪಯ್ಯನ [ಮಗಂ] ಬೆಳ್ವೊಲದಣ್ಣಿಗೆಱೆಯ ಜೋಯಿಸಸಿಂಘನ ಮರ್ಮ್ಮ[ಂ]* ವಬ್ಬಣಬ್ಬೆಯ ಮಗಂ-ಜಿನವಲ್ಲಭಂ."

೨. "ಅಭಿಮಾನಚನ್ದ್ರನ ಮರ್ಮ್ಮಂ ಭೀಮಪಯ್ಯನ ಬೆಳ್ವೊಲದಣ್ಣಿಗೆಱೆಯ ಜೋಯಿಸಸಿಂಘನ ಮರ್ಮ್ಮ[ಳ್] ವಬ್ಬಣಬ್ಬೆಯ ಮಗಂ-ಜಿನವಭಲ್ಲಂ."

೩. "ಅಭಿಮಾನಚನ್ದ್ರನ ಮಮ್ಮಂ ಭೀಮಪಯ್ಯನ ಬೆಳ್ವೊಲದಣ್ಣಿಗೆಱೆಯ ಜೋಯಿಸಸಿಂಘನ ಮರ್ಮ್ಮ[ಳ] ಬ್ಬಣಬ್ಬೆಯ ಮಗಂ-ಜಿನವಲ್ಲಭಂ."

ಈ ಮೂರರಲ್ಲಿ ಮೊದಲಿನದು ನನಗೆ ಸಮ್ಮತವಿಲ್ಲ. ಎರಡನೆಯದು ಅರ್ಥದೃಷ್ಟಿಯಿಂದ ಸಮ್ಮತವಿದೆ. ಮೂರನೆಯದೂ ಸಮ್ಮತವಿವೆ; ಆದರೆ ಶಾಸನಪಾಠ ನೋಡಿ ನಿರ್ಣಯಕ್ಕೆ ಬರಬೇಕೆಂದು ಮುಕ್ತಮನಸ್ಸಿನಿಂದ ಸೂಚಿಸಿದ್ದೆನು.

೨ ಮತ್ತು ೩ನೆಯ ತಿದ್ದುಪಡಿಗಳಿಂದ ಪಂಪನ ತಾಯಿಯು ಜೋಯಿಸಸಿಂಘನ ಮಗಳಲ್ಲ; ಮೊಮ್ಮಗಳು ಎಂದೂ ೩ನೆಯ ತಿದ್ದುಪಡಿಯಿಂದ ಆಕೆಯ ಹೆಸರು ವಬ್ಬಣಬ್ಬೆಯಲ್ಲ; ಅಬ್ಬಣಬ್ಬೆಯೆಂದೂ ಸೂಚಿಸಿದ್ದೆನು.

ಶ್ರೀ ದೇಸಾಯಿ ಅವರು ಇದನ್ನೊಪ್ಪದೆ ಮೂಲಪಾಠದಲ್ಲಿ ಯಾವ ಅರ್ಥಕ್ಲಿಷ್ಟತೆ ಇಲ್ಲವೆಂದೂ ಪಂಪನ ತಾಯಿ ಜೋಯಿಸಸಿಂಘನ ಮೊಮ್ಮಗಳಲ್ಲ; ಮಗಳೆಂದು ಹೇಳಿಕೆ ನೀಡಿದರು. ನನ್ನ ಊಹೆಯನ್ನು ಪ್ರಶ್ನಿಸುತ್ತ "ಈ ಸೂಚನೆಗೆ ಅಂತಹದೊಂದು ಸಾಹಿತ್ಯದ ಅಥವಾ ಶಾಸನದ ಪ್ರಮಾಣವನ್ನು ಒದಗಿಸಬೇಡವೇ? ಇಂಥ ಶಾಸನಬದ್ಧ ವಿಷಯದಲ್ಲಿ ನಿರಾಧಾರವಾಗಿ, ಸ್ವಕಪೋಲಕಲ್ಪಿತವಾಗಿ ತಿದ್ದುಪಡಿಯನ್ನು ಮಾಡಲು ಸಾಹಸ ತೊಟ್ಟರೆ ಇದಕ್ಕೆ ಇತಿಮಿತಿಯೆಲ್ಲಿ?" ಎಂದು ಬರೆದರು. ಆದರೆ ಆ ಮಾತನ್ನು ಶಾಸನಪಂಡಿತರಾದ ತಾವಾದರೂ ಮೂಲ ಶಾಸನವನ್ನು ನೋಡಿ ನನಗೆ ಹೇಳಿದ್ದರೆ ಅವರ ಅಭಿಪ್ರಾಯವನ್ನು ಶಿರಸಾ ವಹಿಸುತ್ತಿದ್ದೆನು. ಆದರೆ ಧಾರವಾಡದಲ್ಲಿ ಕುಳಿತು ದೂರದ ಗಂಗಾಧರಂ ಶಾಸನದ ವಿಷಯವಾಗಿ ಪ್ರತಿವಾದ ಹೂಡಿದ ಅವರ ಸಾಹಸ ನನಗೆ ಅಸಮಾಧಾನವನ್ನುಂಟುಮಾಡಿತು. ಅದಕ್ಕಾಗಿ ಕಳೆದ ಅಕ್ಟೋಬರ್ (೧೯೬೮)ನಲ್ಲಿ ಹೈದರಾಬಾದಿಗೆ ಹೋಗಬೇಕಾಯಿತು. ಅಲ್ಲಿ ಈ ಶಾಸನವನ್ನು ಪ್ರಕಟಿಸಿದ ಶ್ರೀ ವೆಂಕಟರಮಣಯ್ಯನವರನ್ನು ಕಂಡು ಅವರ ಬಳಿಯಲ್ಲಿರುವ ಶಾಸನದ ಪಡಿಯಚ್ಚನ್ನು ಕಣ್ಮುಟ್ಟ ನೋಡಿದೆನು. ಶ್ರೀ ವೆಂಕಟರಮಣಯ್ಯನವರು ತಮ್ಮ ಲೇಖನದಲ್ಲಿ 'ಮರ್ಮ[ಂ]*' ಎಂದು ಚೌಕಕಂಸಿನಲ್ಲಿ ಎಂದು ಊಹಿಸಿದ್ದಾರೆ. ಆದರೆ ಮೂಲದಲ್ಲಿ ಬಿಂದುವಿಲ್ಲ. ಎರಡನೆಯದಾಗಿ ಶ್ರೀ ವೆಂಕಟರಮಣಯ್ಯನವರು ಓದಿದ 'ವಬ್ಬಣಬ್ಬೆ' ಎಂಬಲ್ಲಿಯ 'ವ' ಕಾರದ ಮೇಲೆ ಕಚ್ಚುಬಿದ್ದಿರುವ ಕಾರಣ ಅದು ಪ್ರಥಮ ದೃಷ್ಟಿಗೆ 'ವ' ಕಾರವೆಂಬ ಭ್ರಾಂತಿಯನ್ನು ಹುಟ್ಟಿಸುತ್ತದೆ. ಆದರೆ ಸೂಕ್ಷ್ಮವಾಗಿ ನೋಡಿದರೆ ಅಲ್ಲಿ ಇದ್ದುದು 'ವ' ಕಾರವಲ್ಲ; 'ಳ' ಕಾರವೆಂಬುದು ನನಗೆ ಮನವರಿಕೆಯಾಯಿತು. ಇದನ್ನು ಶ್ರೀ ವೆಂಕಟರಮಣಯ್ಯನವರೂ ಒಪ್ಪಿಕೊಂಡರು.

---

೧. ಕನ್ನಡನುಡಿ, ೧೯೬೮, ಮೇ.

೨. ಕನ್ನಡನುಡಿ, ೧೯೬೮, ಆಗಸ್ಟು.

* ಈ ಗುರುತು ಶ್ರೀ ವೆಂಕಟರಮಣಯ್ಯನವರು ಊಹಿಸಿದ ಪಾಠವನ್ನು ಸೂಚಿಸುತ್ತದೆ.

[ ] ಈ ಗುರುತು ನಾನು ಊಹಿಸಿದ ಪಾಠವನ್ನು ಸೂಚಿಸುತ್ತದೆ.

ಅದಕ್ಕಾಗಿ ನಾನು ಮಾಡಿದ 'ಮಮ್ಮ್ರ್ಯಳಬ್ಬಣಬ್ಬೆ' ಎಂಬ ಮೂರನೆಯ ಊಹೆ ಸರಿಯಾದುದೆಂದೂ ಅದರ ಪ್ರಕಾರ ಪಂಪನ ತಾಯಿಯು ಜೋಯಿಸಸಿಂಘನ ಮಗಳಲ್ಲ. ಮೊಮ್ಮಗಳು.[1] ಅವಳ ಹೆಸರು ವಬ್ಬಣಬ್ಬೆಯಲ್ಲ; ಅಬ್ಬಣಬ್ಬೆ[2] ಎಂದು ಇನ್ನೊಮ್ಮೆ ಸೂಚಿಸಬಯಸುತ್ತೇನೆ.[3] ಇದರೊಂದಿಗೆ ಶ್ರೀ ದೇಸಾಯಿ ಅವರ 'ಗಡಿಬಿಡಿ ಲೇಖನ' ನಿರಾಧಾರವೆಂದೂ ಹೇಳಬಯಸುತ್ತೇನೆ.

---

1. ಹಳಗನ್ನಡ ಕಾವ್ಯಗಳಲ್ಲಿ ನನಗೆ ತಿಳಿದಂತೆ 'ಮರ್ಮ್ಮಳ್' ಎಂಬ ಪದ ಎಲ್ಲಿಯೂ ಬಳಕೆಯಾಗಿಲ್ಲ. ಬಹುಶಃ ಅದನ್ನು ಬಳಸುವ ಸಂದರ್ಭ ಎಲ್ಲಿಯೂ ಬಂದಂತೆ ಕಾಣುವದಿಲ್ಲ. ಒಂದು ವೇಳೆ ಬಂದಿದ್ದರೆ 'ಮರ್ಮ್ಮನ್' ಎಂಬುದರ ಸ್ತ್ರೀವಾಚಕ 'ಮರ್ಮ್ಮಳ್' ಎಂದೇ ಇರಬೇಕಾಗುತ್ತದೆ.

2. 'ಅಬ್ಬಲಬ್ಬೆ' ಎಂಬುದು ನೃಪತುಂಗನ ಮಗಳ ಹೆಸರು. ಅಬ್ಬಲಬ್ಬೆ, ಅಬ್ಬಣಬ್ಬೆ—ಎಂಬಿವು ಒಂದೇ ಮೂಲದ ಭಿನ್ನ ಹೆಸರುಗಳಾಗಿರುವುದರಿಂದ ಇದೊಂದು ಆ ಕಾಲದ ಪ್ರಚಲಿತ ಹೆಸರೆಂದು ಹೇಳಬಹುದು.

3. 'ನುಡಿ' ಯಲ್ಲಿಯ ನನ್ನ ಲೇಖನವನ್ನು ನೋಡಿ, "ಶ್ರೀ ಕಲಬುರ್ಗಿ ಅವರ ಊಹೆ ಸಾಧುವಾದುದು . . . ಇದು ಕೇವಲ ಊಹೆಯಲ್ಲ; ಶಾಸನ ಪಾಠವನ್ನು ಪರೀಕ್ಷಿಸಿ ನೋಡಿದರೆ 'ಜೋಯಿಸಸಿಂಗನ ಮಮ್ಮ್ರ್ಯ ವಬ್ಬಣಬ್ಬೆಯ ಮಗಂ' ಎಂಬಲ್ಲಿಯ 'ವ' ಎಂಬುದನ್ನು 'ಳ' ಎಂದೂ ಓದಲು ಸಾಧ್ಯವೆಂಬುದು ಗೊತ್ತಾಗುತ್ತದೆ. ('ಭಾರತಿ'ಯಲ್ಲಿ ಪ್ರಕಟವಾದ ಶಾಸನ ಛಾಯಾಚಿತ್ರವನ್ನು ನೋಡಿ ಮೇಲಿನ ಸಲಹೆ ಕೊಟ್ಟವರು ಶಾಸನತಜ್ಞರಾದ ಡಾ॥ ಕೆ.ವಿ. ರಮೇಶ್ ಮತ್ತು ಶ್ರೀ ಎಸ್. ನಾಗರಾಜ್ ಅವರು.)" ಎಂದು ಡಾ॥ ಎಂ. ಚಿದಾನಂದಮೂರ್ತಿಗಳು 'ಪ್ರಜಾವಾಣಿ' (೮-೧೨-೬೮) ಯಲ್ಲಿ ಹೇಳಿದ್ದಾರೆ. ಸತ್ಯವನ್ನು ತಾಳ್ಮೆಯಿಂದ ನೋಡಿ ಮುಕ್ತ ಮನಸ್ಸಿನಿಂದ ಮನ್ನಿಸಿದ ಅವರಿಗೆ ಶಾಸನ ಲಿಪಿಸೂಕ್ಷ್ಮಜ್ಞರಾದ ಡಾ॥ ರಮೇಶ್ ಮತ್ತು ಶ್ರೀ ನಾಗರಾಜ್ ಅವರಿಗೆ ನನ್ನ ಕೃತಜ್ಞತೆಗಳು. 'ವ' ಎಂಬುದನ್ನು 'ಳ' ಎಂದು ಓದಲು ಅವಕಾಶವಿದೆಯೆಂದು ಶಾಸನದ ಪಡಿಯಚ್ಚು ನೋಡಿ ಪತ್ರದ ಮೂಲಕ ತಿಳಿಸಿರುವ ಶ್ರೀ ಡಿ. ಕೆ. ಭೀಮಸೇನರಾಯರಿಗೆ ನನ್ನ ವಂದನೆಗಳು.

---

## ಯಾರೋ ಬಂದರು

ಯಾರೋ ಬಂದರು
ಏನೋ ಅಂದರು
ಕೇಳುತ್ತ ಕುಳಿತವನೆ
ದಿಗ್ಗನೆದ್ದೆ....ನಡೆದೆ
ಎಲ್ಲಿಗೇಕೇನೆಂಬ
ಪ್ರಶ್ನೆಗಳ ಹೊತ್ತು ನಡೆದೆ !

* *

ಎಲ್ಲಿಗೋ ಒಯ್ದರು
ಅಲ್ಯಾರೋ ಬಂದರು
ಏನೇನೋ ಅಂದರು
ಮತ್ತೇನಿದೆಂದೆದ್ದೆ....
ಮುಗ್ಗರಿಸಿಬಿದ್ದೆ !

* *

ಮೂರ್ಛೆ ತಿಳಿಯಿತು
ಅರಿವು ಮೂಡಿತು
ಹೊತ್ತು ನಡೆವರ
ಕಂಡು ನಕ್ಕು ನುಡಿದೆ.
"ಎತ್ತಲೋ ನಡೆವವನ
ಮತ್ತಿತ್ತ ನಡೆಸಿದಿರಿ
ಏಕಿಂತು ಹೊತ್ತು ನಡೆವಿರಿ
ನನ್ನ, ನಾ ನಡೆಯ ಬಲ್ಲೆ"ನೆಂದೆ

* *

ಕೆಳಗಿಳಿಸಿ ನಡೆದರು
ಹರಸಿ ಹಾರೈಸಿದರು
ತನ್ನಷ್ಟಕೆ ತಾನ್ನಡೆದರು.

ಎಸ್ಸೆಸ್ಸೂರ್ತಿ

# ವಿಮರ್ಶನರಂಗ

ಶಾಕುಂತಲಾ (ಅಧ್ಯಯನಾಂಗ) ಲೇ. : ಸಮೇತನಹಳ್ಳಿ ರಾಮರಾಯರು, ರಾಸ ಪ್ರಕಾಶನ, ಕ್ರೌನ್ ೧/೮ ೨೮೬+೮, ಬೆಲೆ : ರೂ. ೬–೦೦

ಸರಳ ರಗಳೆಯಲ್ಲಿ, ಮಹಾ ಕಾವ್ಯಗಳ ಮಾದರಿಯಲ್ಲಿ, ಜಗತ್ಪ್ರಸಿದ್ಧವಾದ ಶಾಕುಂತಲೆಯ ಕಥೆಯನ್ನು ಸ್ವತಂತ್ರವಾಗಿ ತಮ್ಮದೇ ಆದ ಒಂದು ವಿಶಿಷ್ಟ ರೀತಿಯಲ್ಲಿ ಚಿತ್ರಿಸಲು ಹೊರಟಿರುವ ಈ ಶಕುಂತಲಾಕಾವ್ಯದ ಮೊದಲ ಭಾಗವು ಈ ಪುಸ್ತಕದಲ್ಲಿ ಪ್ರಕಟವಾಗಿದೆ. ವ್ಯಾಸಭಾರತದಲ್ಲಿ ಬರುವ ಅಥವಾ ಕಾಳಿದಾಸನು ಚಿತ್ರಿಸಿರುವ ಶಾಕುಂತಲೆಯ ಪಾತ್ರಕ್ಕೂ ರಾಮರಾಯರು ಚಿತ್ರಿಸಿರುವ ಚಿತ್ರಕ್ಕೂ ತುಂಬಾ ವ್ಯತ್ಯಾಸವಿದೆ. ವ್ಯತ್ಯಾಸವಲ್ಲ ಬಹುಮಟ್ಟಿಗೆ ಹೋಲಿಕೆಯೇ ಇಲ್ಲವೆಂದರೂ ಒಪ್ಪುತ್ತದೆ. ವ್ಯಾಸರ ಶಾಕುಂತಲೆ ದಿಟ್ಟ ಹೆಂಗಸು. ಕಾಳಿದಾಸನ ಶಾಕುಂತಲೆ ಮುಗ್ಧ ಮನೋಹರೆ. ರಾಮರಾಯರ ಶಾಕುಂತಲೆ ದಿಟ್ಟಳೂ ಅಹುದು. ಪ್ರೌಢೆಯೂ ಅಹುದು. ತಪಸ್ವಿನಿಯೂ ಹೌದು. ಬಿಲ್ಲುಗಾರ್ತಿಯೂ ಧೀರಳೂ ವೀರಳೂ ಭಾವುಕಳೂ ಅಹುದು. ಕತೆಯನ್ನೂ ಸಹಾ ಅವರು ತಮ್ಮದೇ ಆದ ಒಂದು ರೀತಿಯಲ್ಲಿ ಚಿತ್ರಿಸಿಕೊಂಡಿದ್ದಾರೆ. ಮುನ್ನುಡಿ ಇತ್ಯಾದಿಗಳೇನೂ ಇಲ್ಲದಿರುವುದರಿಂದ ಇದು ಅವರ ಊಹಾಚಿತ್ರವೆಂಬ ಭಾವನೆಗೆ ಅವಕಾಶವಿದೆ. ಈ ಮೊದಲ ಭಾಗದ ಕತೆ ಈ ರೀತಿಯಾಗಿದೆ.

ದೇವರು ಪೃಥಿವಿ, ಸರಸ್ವತಿ, ವ್ಯಾಸವಾಲ್ಮೀಕಿ ಋಷಿಗಳು, ಪಂಪ ರನ್ನ ಮುದ್ದಣ ಕಾವ್ಯರ್ಷಿಗಳಿಗೆ ವಂದಿಸಿ ಕಾವ್ಯ ಪ್ರಾರಂಭವಾಗುತ್ತದೆ. ಕಣ್ವರ ಆಶ್ರಮದಲ್ಲಿ ಕಾತ್ಯಾಯನೀದೇವಿಯ ಬಳಿಗೆ ಮೇನಕೆ ಬಂದು ತಾನು ವಿಶ್ವಾಮಿತ್ರನಿಂದ ಪಡೆದ ಹೆಣ್ಣುಕೂಸನ್ನು ಸಾಕಿಕೊಳ್ಳುವಂತೆ ಪ್ರಾರ್ಥಿಸುವಳು. ಕಣ್ವರ ಒಪ್ಪಿಗೆಯಂತೆ ತಪದ ಪೆಣ್ ಕಣ್ವರ ಆಶ್ರಮವನ್ನು ಸೇರುತ್ತದೆ. ಆಟಪಾಟಗಳಿಂದಲೂ ಆತ್ಮಸಂಸ್ಕಾರದಿಂದಲೂ ಶಾಕುಂತಲೆ ಕಣ್ವರನ್ನು ತಣಿಸುವಳು. ಮುನಿಕುಲದ ಪರಿಷತ್ತಿನ ಮುಂದೆ ಶಾಕುಂತಲೆಯ ಭವಿಷ್ಯದ ನಿರ್ಣಯದ ಪ್ರಶ್ನೆ ಚರ್ಚೆಗೆ ಬಂದು ಎಲ್ಲರ ಆಶೀರ್ವಾದದ ಭದ್ರರಕ್ಷಣೆ ದೊರಕುತ್ತದೆ. ಕಣ್ವರು ಶಾಕುಂತಲೆಗೆ ಕಾವ್ಯ ವ್ಯಾಕರಣ ತರ್ಕ ವೇದಾಂತಗಳನ್ನೂ ಸಂಗೀತ ನೃತ್ಯಗಳನ್ನೂ, ಧನುರ್ವೇದವನ್ನೂ, ಸೃಷ್ಟಿಯ ಗುಟ್ಟನ್ನೂ ನಿತ್ಯಜೀವನದ ಗುರಿಯನ್ನೂ ಬೋಧಿಸಿ ದೇವಶಿಲ್ಪಿಯಾಗಿ ಶಾಕುಂತಲಾ ಆದರ್ಶಮೂರ್ತಿಯನ್ನು ಕಡೆಯುತ್ತಾರೆ. ಒಂದು ದಿನ ಒಬ್ಬ ವಿದ್ಯಾರ್ಥಿಗೂ ಶಾಕುಂತಲೆಗೂ ಆ ಆಶ್ರಮದ ದುಡಿದು ಕಲಿಯುವ ಸೂತ್ರದ ಬಗ್ಗೆ ಚರ್ಚೆಯಾಗಿ ಖತಿಗೊಂಡ ಆ ಕ್ಷತ್ರಿಯ ಬಾಲಕ ಕಣ್ವರಿಗೆ ದೂರಿಡಲು ಕಣ್ವರು ಮಗಳ ಪಾಂಡಿತ್ಯಪ್ರದರ್ಶನಕ್ಕೆ ಪೇಸಿ ಆತ್ಮಶುದ್ಧಿಗೆಂದು ಉಪವಾಸಮಾಡುತ್ತಾರೆ. "ಓರಗೆಯನೋವ್ವರ್ನನು ತಿಳಿಯದೆಯೆ ನೋಯಿಸಲ್ ಕಾರಣಂ ತಮ್ಮ ಕಲ್ಕೆಯ ಅಪಕ್ವತೆ ತಾನೆ" ಎಂಬುದು ಅವರ ವಾದ. ಅದಕ್ಕಾಗಿ ಶಾಕುಂತಲೆ ದುಃಖದಿಂದ ಕುದಿದು ಅಗ್ನಿಯನ್ನು ಪ್ರಾರ್ಥಿಸಿ ಅಗ್ನಿ ಪ್ರತ್ಯಕ್ಷನಾಗಲು ಸಹನೆ ಸಂಯಮ ನಿಸ್ವಾರ್ಥತೆಗಳ ವರಪಡೆದು ಪಶ್ಚಾತ್ತಾಪದಿಂದ ಪುನೀತಳಾಗುವಳು ; ಕಣ್ವರ ಆಶೀರ್ವಾದವನ್ನೂ ಪಡೆಯುವಳು. ಎಲ್ಲರಿಂದ ಧರ್ಮ ರಕ್ಷಣಾದೀಕ್ಷೆಯನ್ನು ಪಡೆದು ತನಗಾಗಿ ಬೇರೆ ಆಶ್ರಮವನ್ನು ಹುಡುಕಿ, ಕಟ್ಟಿಕೊಂಡು ತಪವನ್ನು ಆಚರಿಸುತ್ತ ತಾನೇ ತನ್ನ ಅದೃಷ್ಟದ್ರಷ್ಟಾರಳಾಗಿ ಬೆಳಗುವಳು. ಈ ಕಾಲದಲ್ಲಿ ಕಾತ್ಯಾಯನೀ ಮಾತೆ ಶಾಕುಂತಲೆಯ ಆಶ್ರಮಕ್ಕೆ ಬಂದು ಬುದ್ಧಿವಾದವನ್ನು ಹೇಳಿ ಸಿದ್ಧಿಮಾರ್ಗವನ್ನು ಬೋಧಿಸಿ ಮೆಚ್ಚಿಕೆಯನ್ನು ತಿಳಿಸಿ ಹೋಗುವಳು. ಇನ್ನೊಮ್ಮೆ ವೈಜಯಂತನೆಂಬುವನು ಶಾಕುಂತಲೆಯನ್ನು ಮೋಹಿಸಿ ಬಂದು ಅವಳ ತಪಶ್ಶಕ್ತಿಗೂ ಯುದ್ಧದ ಬೆದರಿಕೆಗೂ ಸೋತುಹೋಗುವನು. ಇತ್ತ ದೊರೆಯಾದ ದುಷ್ಯಂತ ಧರ್ಮದಿಂದ ರಾಜ್ಯವಾಳುತ್ತಿರಲು ಒಬ್ಬ ಮುದಿ ಆದಿವಾಸಿಯ ಮಗನನ್ನು ಪಸಿದ ಪುಲಿ ಎಳೆದೊಯ್ದುದೆಂದು ಕೇಳಿ ಅದು ಅವನ ಆಡಳಿತಲೋಪವೆಂದು ಬಗೆದು ಆ ಸತ್ತ ಮಗನ ಜಾಗಕ್ಕೆ ತನ್ನನ್ನು ದತ್ತು ತೆಗೆದುಕೊಳ್ಳುವಂತೆ ಆ ಮಗನ ತಾಯಿಯನ್ನು ಕೇಳುವನು. ಅವನ ತಾಯಿ ಒಪ್ಪದಿರಲು ಆ ಆಡಳಿತಲೋಪಕ್ಕೆ ಪರಿಹಾರವನ್ನು ಚಿಂತಿಸದೆ ಊರಿಗೆ ಹೋಗುವುದಿಲ್ಲವೆಂದು ಅರಣ್ಯದಲ್ಲೇ ಉಳಿದು ತಿರುಗಾಡುತ್ತಾ ಶಾಕುಂತಲಾಶ್ರಮಕ್ಕೆ ಬರುವನು. ಪರಸ್ಪರ ಪರಿಚಯವನ್ನು ಹೇಳಿಕೊಂಡಮೇಲೆ ಶಾಕುಂತಲೆಯ ತಪಸ್ಸಿನ ಪ್ರಭಾವದಿಂದ ಪ್ರಾಣಿಹಿಂಸೆಯ ಕ್ರೂರ ಮೃಗ ಪರಿವರ್ತನಗೊಂಡು, ಮಾಂಸದಾಹಾರಮಂ ತಪದೆಲ್ಲೆಯಲಿ ನಿಲ್ಲಿಸುದುದರಿಂದ ಮಾಂಸಾಹಾರಿ ಪ್ರಾಣಿಗಳಿಗೆ ಮಾಂಸ

ಸಿಗದೆ ಆದಿವಾಸಿಯ ಮಗನನ್ನು ಕೊಂಡೊಯ್ದಿತೆಂದು ತರ್ಕಿಸುವನು. ಈಗ ಧರ್ಮಸಂಕಟ ಪ್ರಾರಂಭವಾಗುತ್ತದೆ. ಶಾಕುಂತಲೆ ತನ್ನ ತಪದ ಮಹಿಮೆಯಿಂದ, ಘನತರೋದ್ವೇಶದಿಂದ ಧರ್ಮವನ್ನು ಬೆಳಸಬೇಕೆಂದಿರುವಲ್ಲಿ ಜನಪದ ಕ್ರೌರಗಿದುದು ವನ್ಯಮೃಗ ಹಿಂಸೆ. ಇದನ್ನು ಹೇಗೆ ಸರಿ ಪಡಿಸಬಹುದೆಂದು ಯೋಚಿಸಿ ತಪಶ್ಶಕ್ತಿಯನ್ನು ತಪಸ್ಸಿನಿಂದಲೇ ಗೆಲ್ಲಬೇಕೆಂದು ದುಷ್ಯಂತನೂ ತಪಸ್ಸಿಗೆ ಪ್ರಾರಂಭಿಸಿ ಕೃತಕಾರ್ಯನಾಗುವನು. ಆತನ ತಪೋವಿಜಯದಿಂ ಕಣ್ವಸುತೆ ಸಮಾನೋದ್ದಿಶ್ಯವ್ಯಕ್ತಿ ಸಂದರ್ಶನಂ ಪೂರ್ವ ಸಂಚಿತ ಸುಕೃತದಿಂ ಲಭ್ಯಮಾಯ್ತೆಂದು ತುಷ್ಟಿಪಡೆಯುವಳು.

"ದುಷ್ಯಂತ ಸಂಯಮಿತ ಚಿತ್ ಕಲಾಶ್ರೀ ಶಾಕುಂತಲಾ ಕಲಾದೀಧಿತಿಕ್ಷೇತ್ರಮಂ" ಪ್ರವೇಶಿಸಿತು. ಆ ಸಮಯಕ್ಕೆ ಅಪ್ರಾರ್ಥಿಕನಾಗಿ ಮದನ ವೈದೋರುವನು. "ದುಷ್ಯಂತನೆಂಬವನ ಚಳಿಪೆಟ್ಟನಿಂದೊಸದಾರ್ ರಸವನನನ್ಯಜಂ, ದೇಹದ ವಯೋಸಹಜತೆಯ ಪಾಳಿಯಂ ಪಿಡಿದು ಚಿರ ಸಂಭ್ರಮೋತ್ಸಾಹದಿಂ ಹರಡಿ ನಡೆದತ್ತು ಶಾಕುಂತಲಾರ್ಣವದ ದಿವ್ಯಲಾವಣ್ಯವಂ ಕುರಿತು "ಮಧುರ ಭಾವೋತ್ಕರ್ಷ ದುಷ್ಯಂತ ಶಾಕುಂತಲಾ ಮಿಥುನ ವೈಭವಕೆ ದೂಡಿದುದು." ಇದು ಶ್ರೀ ರಾಮರಾಯರ ಊಹಾ ಚಿತ್ರ. ಓದುತ್ತಾ ಹೋದಂತೆ ಕತೆಯನ್ನು ಅಲ್ಲಲ್ಲಿ ಅನಾವಶ್ಯಕವಾಗಿ ಲಂಬಿಸಿದಂತೆ ತೋರುತ್ತದೆ. ವರ್ಣನೆಯ ವಿವರಗಳು ಹೆಚ್ಚಾಗುತ್ತವೆ. ನೇರವಾಗಿ ಕತೆ ಸಾಗುವುದೇ ಇಲ್ಲ. ಮಾತು ಹೆಚ್ಚಾದಂತೆ ಬಿಗಿ ಕಡಮೆಯಾಗುತ್ತದೆ. ಕತೆಯ ಸನ್ನಿವೇಶಗಳು ಸಹೃದಯರಿಗೂ ಸಂಶಯಾಸ್ಪದವೆಂದು ಸೂಚಿತವಾಗುತ್ತವೆ. ತರ್ಕಮಾಡಿ ಸರಿ ಎಂದು ವಾದಿಸಬಹುದಾದರೂ ಮನಸ್ಸಿಗೆ ಮೆಚ್ಚಿಕೆಯಾಗುವುದಿಲ್ಲ. ಆದರೆ ಅದು ಶ್ರೀ ರಾಮರಾಯರ ಊಹೆಗೆ ಸೇರಿದುದಷ್ಟೆ.

ಇದು ಪೌರಾಣಿಕ ಕಾವ್ಯವಾದರೂ ಆಧುನಿಕತೆಯ ಪ್ರಸಂಗಗಳು ಸಮಯೋಚಿತವಾಗಿ ಸೂಚಿತವಾಗುತ್ತವೆ. ಮುನಿಕುಲದ ಪರಿಷತ್ತು ಪ್ರತಿನಿಧಿಸಭೆಯ ಚರ್ಚೆಗಳನ್ನೂ, ಕಣ್ವರ ಆತ್ಮಶುದ್ಧಿಯ ಉಪವಾಸ ಗಾಂಧೀಜಿಯವರ ಉಪವಾಸಗಳನ್ನೂ, ಆದಿವಾಸಿಯ ಮಗ ಸತ್ತ ಪ್ರಕರಣ ರಾಮಾಯಣದ ಶಂಭುಕ ತಾಂಡವಮುನಿಯು ಪ್ರಕರಣಗಳನ್ನೂ ನೆನಪಿಗೆ ತರುತ್ತವೆ. ಕಣ್ವರು ನೃತ್ಯಗೀತಾದಿಗಳನ್ನೂ ಬಿಲ್ಲು ವಿದ್ಯೆಯನ್ನೂ ಕಲಿಸುವುದು ಹೊಸ ಕಲ್ಪನೆ. ಸಂಸ್ಕೃತ ಮಹಾ ವಾಕ್ಯಗಳೂ ಇಂಗ್ಲಿಷ್ ಪ್ರಸಿದ್ಧ ವಾಕ್ಯಗಳೂ ಶ್ರೀ ರಾಮರಾಯರ ಕವಿತೆಯಲ್ಲಿ ನಿರರ್ಗಳವಾಗಿ ಹರಿದು ಹೊಸ ಅರ್ಥಗಳನ್ನು ಪಡೆಯುತ್ತವೆ. ಉದಾಹರಣೆಗೆ "ಪೂರ್ಣದಿಂ ಪೂರ್ಣಮಂ ತೆಗೆದರುಳಿವುದು ಮತ್ತೆ ಪೂರ್ಣಮೇ." "ಅಣುವಿನಿಂದಂಡಜಕೆ ಅಂಡಜಂ ಸಸ್ತನಿಗೆ ಅಣುವವತೆಯಿಂ ಮಾನವತೆಗೆ" (ಸೃಷ್ಟಿ) "ದುಡಿಮೆಯಿಂದುತ್ಪಾದನಂ, ಆದರಿಸಿಂ ಜೀವ", "ಋತದೊಡನೆ ಋತವಾದ ಋಜುಮಾನವರ್ತ್ಮನೆ, ಬದುಕು ಋತದಿಂ", 'ಚಿಚ್ಛಕ್ತಿ ಎನ್ನದಿದು ಅನ್ನಮಯ ಕೋಶಮಂ ದಾಂಟುತ್ತೆ ಪ್ರಾಣಕ್ಕೆ, ಅಲ್ಲಿಂ ಮನೋಮಯವ ಬಳಸುತ್ತೆ, ವಿಜ್ಞಾನಕಲ್ಲಿಂದ, ನಿರವದ್ಯವೆಂದೆನಿಪ ಆನಂದಮಯ ಕೋಶವಮಂ ತುಂಬಿ ಶಾಶ್ವತದ ಸುಖದಿ ನಿಲ್ವೊಂದು ಕಲೆ ಸಿದ್ಧಿಸಲೆನಗೆ', 'ಸೊಡರುರಿಯೆ ನಷ್ಟಮೇನಿಲ್ಲೆಂಬ ಜಾಣುನಾಣ್ಣುಡಿಯದೊಂದುಂಟಲ್ತೆ ಆಂಗ್ಲರೊಳ್' ಇತ್ಯಾದಿ. ೨೬೧ ಪುಟ, ೧೬೦ರ ಸಾಲಿನಲ್ಲಿ ಬರುವ 'ಶೌಚ', ೨೪೯-೧೪೯ ಓಕರಿಕೆ, ೨೪೪-೧೯೦ರ 'ಹಚ್ಚಡ', ೨೪೫-೧೭೭ರ 'ಮಂಚ' ಮತ್ತು 'ತೀಂಟೆ' ಈ ಪದಗಳು ಆ ಸನ್ನಿವೇಶಗಳ ಭಾವೋನ್ನತಿಗೆ ತಕ್ಕ ಪ್ರಯೋಗಗಳಲ್ಲವೆಂದು ತೋರುತ್ತದೆ. ೧೯೪ನೆಯ ಪುಟದ ೧೨೦ರಿಂದ ೧೩೦ರ ವರೆಗಿನ ಸಾಲುಗಳೂ ೨೪೧ನೇ ಪುಟದಲ್ಲಿ ಶಾಕುಂತಲೆ ದುಷ್ಯಂತನಿಗೆ ಮುಂದಾಗಬಹುದಾದ ಮಗುವಿಗೆ "ಕಂದನಾ ಮುದ್ದೊಗುವ ಪಾಲ್ಗೆನ್ನೆಯಂ ಪಿಡಿದು ನೀನೊತ್ತು ಮುತ್ತೆನ್ನದಂ ಎಂದು ಹೇಳುವ ಮಾತು ಅತಿರೇಕವೆನಿಸುತ್ತವೆ. ಆದರೆ ಇವು ಸಣ್ಣ ವಿಷಯಗಳು.

ಮುಖ್ಯವಾಗಿ ಇಲ್ಲಿ ಪರಿಚಯವಾಗುವ ಪಾತ್ರಗಳು, ಕಣ್ವರು, ಶಾಕುಂತಲೆ ಮತ್ತು ದುಷ್ಯಂತ. ಕಣ್ವರು ಆಶ್ರಮದ ಆಚಾರ್ಯರು, ಯಜಮಾನರು, ತಕ್ಕಂತೆ ತಪೋಧನರು ಮೇಧಾವಿಗಳು. ಅಲ್ಲಿ ಅವರ ಮಾತಿಗೆ ಎದುರಿಲ್ಲದಿದ್ದರೂ ಪ್ರಜಾಪ್ರಭುತ್ವದಂತೆ, ಆಶ್ರಮದ ಇತರ ಋಷಿಶ್ರೇಷ್ಠರ ಒಪ್ಪಿಗೆಯಂತೆಯೇ ಆಶ್ರಮದ ಮೇಲ್ವಿಚಾರಣೆಯನ್ನು ನಡೆಸುವವರು. ಶಾಕುಂತಲೆಯ ಮೇಲೆ ಅವರಿಗೆ ಅಪಾರವಾದ ವಾತ್ಸಲ್ಯ. ತಮ್ಮ ಜ್ಞಾನವನ್ನೆಲ್ಲಾ ಅವಳಿಗೆ ಧಾರೆಯೆರೆಯಬೇಕೆಂಬ ಬಯಕೆ. ಅವಳೂ ಅವರಿಗೆ ತಕ್ಕ ಶಿಷ್ಯಳೇ. ಮಹಾ ಮೇಧಾವಿ. ಅವರು ಹೇಳಿಕೊಟ್ಟುದನ್ನೆಲ್ಲಾ ಕಲಿತು, ತಾನೇ ಒಂದು ಆಶ್ರಮವನ್ನು ಕಟ್ಟಿಕೊಂಡು ತಪಸ್ಸುಮಾಡಿ ಕ್ರೂರಮೃಗಗಳೂ ಕೂಡ ತಮ್ಮ ಕ್ರೌರ್ಯವನ್ನು ತ್ಯಜಿಸುವ ಪ್ರಭಾವವನ್ನು ಬೀರುವಳು. ದುಷ್ಯಂತನೂ ಕೂಡ ಅವಳಿಗೆ ಸರಿಯಾದ ಜೋಡಿಯೇ. ರಾಜ, ವೀರ, ಸಹೃದಯ, ಸುಂದರ—ಇವಲ್ಲದೆ ತಪಸ್ಸಿನಲ್ಲಿಯೂ ಅವಳನ್ನು ಮೀರಿಸಿದ ವ್ಯಕ್ತಿ. ಈ ಪಾತ್ರಗಳ ಬಗೆಗೆ ಈಗ ಇಷ್ಟುಮಾತ್ರ ಹೇಳ

ಬಹುದು. ಆದರೆ ಈ ಪಾತ್ರಪರಿಚಯ ಕಾವ್ಯ ಮುಂದು ವರೆದ ಮೇಲೆ ಪರಿಪೂರ್ಣವಾಗಬೇಕಾಗುತ್ತದೆ.

ಶಾಕುಂತಲಾ ಕಾವ್ಯವನ್ನೋದುವವರಿಗೆ ಆಗುವ ರಸ ದೌತಣ ಶ್ರೀರಾಮರಾಯರ ಪಾಂಡಿತ್ಯ, ಪದಗಳ ಮೇಲಿನ ಹತೋಟಿ, ನಿರರ್ಗಳವಾಗಿ ಹರಿಯುವ ಕಾವ್ಯಝರಿಯ ಮಂಜುಳನಿನಾದ. ಯಾವ ಪುಟ ತೆರೆದು ಓದಿದರೂ ಇದರ ಅನುಭವವಾಗುತ್ತದೆ. ಸುಮಾರು ೭೦೦೦ ಸಾಲುಗಳಿರುವ ಸರಳರಗಳೆಯ ಈ ಕಾವ್ಯ ಕೇವಲ ಅರ್ಧದಷ್ಟು ಮಾತ್ರ ಮುಗಿದಿರುವುದರಿಂದ ಕತೆಯ ಅಥವಾ ಪಾತ್ರಗಳ ಬಗ್ಗೆ ಈಗಲೇ ಏನು ಹೇಳಿದರೂ ತಪ್ಪಾಗುವುದರಿಂದ ಅದನ್ನು ವಿಸ್ತರಿಸಿಲ್ಲ. ಈಗ ಅಡಿಗೆ ಅರ್ಧ ಮುಗಿದಿದೆ. ಬೇಳೆ ಬೆಂದಿದೆ, ಉಪ್ಪು ಹುಳಿ ಕಾರ ಒಗ್ಗರಣೆ ಹಾಕಬೇಕು. ಆಮೇಲೆ ತಾನೇ ರುಚಿ ನೋಡಬೇಕು. ಅಂತಹ ಸವಿ ರುಚಿ ಕೊಡುವ ಶ್ರೀ ರಾಮರಾಯರ ಕಾವ್ಯ ಬೇಗ ಮುಗಿದು ಕನ್ನಡಿಗರ ಕೈಸೇರಲಿ ಎಂದು ಹಾರೈಸುತ್ತೇವೆ.

**ಕೈನಾರ ರಾಜಾರಾವ್**

**ನಂಜು ನೊರೆವಾಲು :** ಲೇ : ಶಾಂತರಸ ; ಪ್ರ : ಸತ್ಯಸ್ನೇಹ ಪ್ರಕಾಶನ, ರಾಯಚೂರು ; ಬೆಲೆ ೩-೫೦ ; ಪುಟ ೯೭.

ಶಾಂತರಸರ ನಾಟಕ ಸಾಹಿತ್ಯದಲ್ಲಿ ದ್ವಿತೀಯ ಪ್ರಯತ್ನ ನಂಜು-ನೊರೆವಾಲು. ತಮಿಳಿನ 'ಪೆರಿಯ ಪುರಾಣಂ' ನಲ್ಲಿ ಪ್ರಸಿದ್ಧವಾಗಿರುವ 'ತಿರುನೀಲಕಂಠರ ಕಥೆ ಹರಿಹರನಲ್ಲಿ ತಿರುನೀಲಕಂಠರಗಳೆ'ಯಾಯ್ತು. ಅದರಲ್ಲಿನ ನಾಟಕೀಯತೆ ಮನಸೆಳೆಯುವಂತಹುದು. ಅದನ್ನು ಮನಗಂಡ ಶಾಂತರಸರು ನಾಟಕವನ್ನಾಗಿ 'ನಂಜು-ನೊರೆವಾಲು' ಎಂಬ ಅಂಕಿತದಲ್ಲಿ ನಿರೂಪಿಸಿದ್ದಾರೆ. ಭಾಷಾ ಶೈಲಿ, ತಂತ್ರ ರಚನೆ ಮೆಚ್ಚುವಂತಹುದು.

ಇಲ್ಲಿನ ಪಾತ್ರಗಳಲ್ಲಿ ಮನಸೆಳೆಯುವವರು ಮುತ್ತೈದೆ, ತಿರುನೀಲಕಂಠ, ವಿಳಾಸಿನಿ, ಜಂಗಮ. ಉಳಿದ ಪಾತ್ರಗಳಿಂದ ನಾಟಕದ ಬೆಳವಣಿಗೆಗೆ ಯಾವ ಪ್ರಯೋಜನವೂ ಆಗಿಲ್ಲ. ಕೆಲವೊಂದು ದೃಶ್ಯಗಳು ತೀರ ನೀರಸ ಹಾಗೂ ಅನಾವಶ್ಯಕವಾಗಿ ಕಾಣುತ್ತವೆ. ಈ ದೃಶ್ಯಗಳಿಂದ ಕೃತಿಯ ಗಾತ್ರ ಹೆಚ್ಚಾಗಿದೆಯೆ ಹೊರತು ಯಾವ ಉಪಕಾರವೂ ಇಲ್ಲ. ನಾಯಕ-ನಾಯಕಿಯರ ದಾಂಪತ್ಯ, ಅವರ ಪ್ರತಿಜ್ಞೆ, ಅದರ ಪ್ರಜ್ಞೆ, ಇವುಗಳನ್ನು ಎಚ್ಚರಿಕೆಯಿಂದ ಚೊಕ್ಕವಾಗಿ ನಿರ್ವಹಿಸಿದ್ದಾರೆ. ಕೆಲವೊಂದು ದೃಶ್ಯಗಳಲ್ಲಿ ಶಕ್ತಿ ಇದೆ. ಓಜಸ್ಸು ಇದೆ. ಅಂತೂ ಉದಯೋನ್ಮುಖ ಸಾಹಿತಿಗಳಾಗುವ ಭರವಸೆಯನ್ನು ತಮ್ಮ ಕಾವ್ಯಮಯ ಭಾಷೆಯಿಂದ ಓದುಗರಿಗೆ ನೀಡಿದ್ದಾರೆ.

**ಆರ್. ರಾಚಪ್ಪ**

**ನಮ್ಮ ಪಠ್ಯಪುಸ್ತಕಗಳು :** ಸಂಪಾದಕರು : ಶ್ರೀ ವೆಂಕಟೇಶ ಕುಲಕರ್ಣಿ, ಪ್ರಕಾಶಕರು : ಶಿಕ್ಷಕರ ಹಿತರಕ್ಷಕಸಂಘ-ಧಾರವಾಡ, ಪುಟಗಳು : ೫೨ : ಬೆಲೆ : ೫೦ ಪೈಸೆ.

ನಮ್ಮ ಶಿಕ್ಷಣವು ಪೂರ್ಣ ಪರಿಣಾಮಕಾರಿಯಾಗಬೇಕಾದರೆ ನಮ್ಮ ಪಠ್ಯಪುಸ್ತಕಗಳು ದೋಷಾತೀತವಾಗಿರಬೇಕು. ನಮ್ಮ ಪಠ್ಯಪುಸ್ತಕಗಳ ಅವನತಿವಿಚಾರವಾಗಿ ಈಗಾಗಲೇ ವಿಧಾನಪರಿಷತ್ತು, ಮತ್ತು ವೃತ್ತಪತ್ರಿಕೆಗಳಲ್ಲಿ ಸಾಕಷ್ಟು ಚರ್ಚೆಯಾಗಿದೆ. ಈಗಿನ ಕೆಲ ಪಠ್ಯಪುಸ್ತಕಳಲ್ಲಿನ ತಪ್ಪುಗಳನ್ನು ಈ ಪುಸ್ತಕದಲ್ಲಿ ಕಾಣಿಸಿ ಚರ್ಚಿಸಲಾಗಿದೆ.

ಸರಿ, ತಪ್ಪು ನಮ್ಮದೇ, ಪಠ್ಯಪುಸ್ತಕ ಸಲಹಾಸಮಿತಿಯವರದೇ, ಸರ್ಕಾರದ್ದೇ, ಲೇಖಕನದೇ, ಪ್ರಕಾಶಕನದೆ, ಮುದ್ರಕನದೇ, ಯಾರದೇ ಆಗಿರಲಿ, ಪಾಲಕರು, ಶಿಕ್ಷಕರು, ಸರ್ಕಾರ ಈ ಮೂವರೂ ಈ ವಿಚಾರದಲ್ಲಿ ಸಹಕರಿಸಿದರೆ ನಮ್ಮ ಉದ್ಧಾರ ಸಾಧ್ಯ.

ಪಠ್ಯಗ್ರಂಥ ಸಲಹಾಸಮಿತಿಯಿಂದ ಆಯ್ಕೆಗೊಂಡು ಮಾರಾಟವಾಗಿ ಸಾಕಷ್ಟು ಲಾಭಗಳಿಸುವುದನ್ನು ಕಂಡು, ಎರಡನೇ ದರ್ಜೆ ಲೇಖಕರು, ಹಣದಾಸೆಯ ಪ್ರಕಾಶಕರು, ಕೆಳಮಟ್ಟದ ಮುದ್ರಕರು ಸೇರಿ ಪಠ್ಯಪುಸ್ತಕಗಳನ್ನು ಅಂದಗೆಡಿಸಿ ಹಾಳುಮಾಡಿ ವಿದ್ಯಾರ್ಥಿಗಳ ಆಸಕ್ತಿಯನ್ನು ಕುಂಠಿತಗೊಳಿಸಿದರು.

ಈ ಸಣ್ಣ ಪುಸ್ತಕವು ಈ ದೃಷ್ಟಿಯಿಂದ ಬಹಳ ಉತ್ತಮವಾದ ಕಾರ್ಯವನ್ನು ಕೈಕೊಂಡಿದೆ. ಈಗಲಾದರೂ ಪಠ್ಯಪುಸ್ತಕ ಸಲಹಾಸಮಿತಿಯವರು ಯಾವ ಬಿಢೆ ಮುರವತ್ತು, ದಾಕ್ಷಿಣ್ಯಗಳಿಗೆ ಒಳಗಾಗದೇ ಉತ್ತಮ ಪುಸ್ತಕಗಳನ್ನು ಆರಿಸುವರೆಂದು ಆಶಿಸೋಣವೇ ? ಆಗ ಈ ಪುಸ್ತಕದ ಗುರಿ ಸಿದ್ಧಿಸೀತು.

* * *

**ಚಾರುಚಯನ :** (ಲಲಿತ ಪ್ರಬಂಧ ಸಂಕಲನ) ಲೇ : ಶ್ರೀ ಕೊ. ಅ. ಉಡುಪ, ಪ್ರಕಾಶಕರು : ಯುಗಪುರುಷ ಪ್ರಕಟನಾಲಯ ಕಿನ್ನಿಗೋಳಿ, ದ. ಕ. ಪುಟಗಳು : ೯೬, ಬೆಲೆ : ರೂ. ೧-೫೦.

ಸಾಹಿತ್ಯ ಪ್ರಕಾರಗಳಲ್ಲಿ ಪ್ರಬಂಧಗಳೂ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನೂ ಮತ್ತು ಗುಣಗಳನ್ನೂ ಹೊಂದಿವೆ.

ಪ್ರಬಂಧ ರಚನೆಯಲ್ಲಿ ಸಿದ್ಧ ಹಸ್ತರಾಗಿರುವ ಯೋಗ ಕೆಲವೇ ಕೆಲವು ಪ್ರತಿಭಾವಂತ ಸಾಹಿತಿಗಳಿಗೆ ದೊರಕಿದೆ.

ಪ್ರಸ್ತುತ ಕೃತಿಯ ಕರ್ತೃಗಳು ದಿಟ್ಟತನದಿಂದ ಈ ಸಾಹಸಕ್ಕೆ ಕೈಹಾಕಿದ್ದಾರೆ. ತಕ್ಕಮಟ್ಟಿಗೆ ಯಶಸ್ವಿಗಳೂ ಆಗಿದ್ದಾರೆ. ಶೀರ್ಷಿಕೆಯಲ್ಲಿ ಕಾಣಿಸಿರುವಂತೆ ಲಲಿತ ಪ್ರಬಂಧಗಳ ಗುಂಪಿಗೆ ಈ ಗ್ರಂಥದ ಪ್ರಬಂಧಗಳು ಸೇರಲಾರವು.

ಹೊರನೋಟಕ್ಕೆ ಕ್ಲಿಷ್ಟವೂ ಕಾವ್ಯಮಯವೂ ಆಗಿ ಕಾಣುವ ಈ ಪ್ರಬಂಧಗಳು ನಮ್ಮ ಜೀವನಕ್ಕೆ ಒಂದು ಬೋಧಪ್ರದ ಮಾರ್ಗಸೂಚಿಯಾಗಿದೆ. ಬಾಳಿನ ಹೋರಾಟದಲ್ಲಿ ಪ್ರವೇಶಿಸುವ ಆಗುಂತಕನಿಗೆ ಇದೊಂದು ದಿಕ್ಸೂಚಿ. ಆದರೂ ಶೈಲಿ ಕೆಲವೆಡೆ ಕವಿತೆಯಂತೆ ಅತಿ ರಂಜಿಸಿದಾಗ ಅದರ ಸ್ಪಷ್ಟತೆ ಕಡಿಮೆಯಾಗಿ ಓದುಗನಿಗೆ ಬೇಸರವೂ ಆಗುತ್ತದೆ. ಉದಾ:

"ಮುನಿದು ಮತ್ತೇರಿ ಸಿಡಿದು ಕಿಡಿ ಎಂದರೆ ಹಸಿವು ಬಂಜೆಯ ಬಸಿರು. . .ಕಂಗೊಳಿಸುವ ತಿಳಿಕಣ್ಣು ಕೆಂಪಡರಿದ ಕಾಳ್ಕಿಚ್ಚಿನ ಭುಗಿಲು, ಒಡಲೋ ಬಡವಾನಲದೊಲು ದಗದಗಿಸುವುದು, ನೆತ್ತರು ನಂಜೇರುವುದು . . . ಇತ್ಯಾದಿ."

ಆಳವಾಗಿ ಅಭ್ಯಸಿಸಬೇಕಾದ ಗ್ರಂಥ. ಶೈಲಿಯ ಸರಳತೆಯೊಂದಿದ್ದರೆ ಇದೊಂದು ಅಪೂರ್ವ ಗ್ರಂಥವಾಗಬಹುದಿತ್ತು. ಶ್ರೀ ಉಡುಪರಿಗೆ ಉತ್ತಮ ಭವಿಷ್ಯವಿದೆ.

* * *

**ಕನ್ನಡದ ಕವಿರತ್ನಗಳು** : (ಕನ್ನಡ ವಿದ್ಯಾರ್ಥಿಗಳ ಕೈಪಿಡಿ) ಲೇ: ಶ್ರೀ ಭಾಸ್ಕರ ಪಡುಬಿದ್ರಿ, ಪ್ರಕಾಶಕರು: ಪ್ರೇಕ್ಷಕ ಪಬ್ಲಿಕೇಷನ್ಸ್, ಮುಂಬಯಿ, ಪುಟಗಳು: ೧೨೯, ಬೆಲೆ: ರೂ. ೨-೦೦.

ಕನ್ನಡ ವಿದ್ಯಾರ್ಥಿಗಳಿಗಾಗಿ ಬರೆದ ಈ ಪುಸ್ತಕ, ಕೇವಲ ವಿದ್ಯಾರ್ಥಿಗಳಿಗೇ ಅಲ್ಲ, ಎಲ್ಲಾ ಸಾಹಿತ್ಯ ಪ್ರೇಮಿಗಳಿಗೂ ಉಪಯುಕ್ತವಾಗಿದೆ.

ನಮ್ಮ ನಾಡಿನ ಪವಿತ್ರ ಸಂಪತ್ತು ನಮ್ಮ ಸಾಹಿತ್ಯ ಭಂಡಾರ. ಈ ಭಂಡಾರವನ್ನು ತುಂಬಿದ ಮಹಾಮಹಿಮರ ಜೀವನವನ್ನು ಸ್ವಲ್ಪವಾದರೂ ಅರಿತಿರಬೇಕಾದ್ದು ಪ್ರತಿಯೋರ್ವ ಕನ್ನಡಿಗನ ಕರ್ತವ್ಯ. ಈ ದೃಷ್ಟಿಯಿಂದ ಬರೆದ ಈ ಕಿರುಹೊತ್ತಿಗೆಯಲ್ಲಿ ಕನ್ನಡ ನಾಡಿನ ಒಂಬತ್ತು ಕವಿರತ್ನಗಳ ಜೀವನ ದರ್ಶನವಿದೆ, ಅವರ ಕೃತಿಗಳ ವಿವರಣೆ ಇದೆ. ವಿದ್ಯಾರ್ಥಿಗಳಿಗೆ ಸುಲಭವಾಗಿ ಅರ್ಥವಾಗುವ ಶೈಲಿಯಲ್ಲಿ ರಚಿತವಾಗಿದೆ.

ನಮ್ಮ ನಾಡಿನಲ್ಲಿ ಕವಿಗಳಿಗೆ ಕೊರತೆ ಇಲ್ಲ. ಇಲ್ಲಿ ಕಾಣಿಸಿರುವ ಒಂಬತ್ತು ಏಕೆ, ಒಂಬತ್ತು ನೂರು ಜನ ಕವಿಗಳು ಸಿಕ್ಕುತ್ತಾರೆ. ನಮ್ಮ ಜನ "ಕುರಿತೋದದೆಯುಂ . . . ಪರಿಣತಮತಿಗಳ್" ರಸಿಕರ ನಾಡು ಕನ್ನಡಭೂಮಿ. ಇಲ್ಲಿ, ಪಂಪ, ನಾಗಚಂದ್ರ, ಹರಿಹರ, ರಾಘವಾಂಕ, ಕುಮಾರವ್ಯಾಸ, ರನ್ನ, ಲಕ್ಷ್ಮೀಶ, ರತ್ನಾಕರವರ್ಣಿ, ಮುದ್ದಣ. ಇವರ ಜೀವನಗಳನ್ನು ಕೃತಿಗಳನ್ನು ಸಂಕ್ಷಿಪ್ತವಾಗಿ ಕಾಣಿಸಲಾಗಿದೆ. ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಇಷ್ಟೆ ಎಂದಿಗೂ ಸಾಕಾಗಲಾರದು. ಆದರೂ ಈ ಪುಸ್ತಕದಿಂದ ಅವರ ಆಸಕ್ತಿ ಕೆರಳಿ, ಕನ್ನಡ ಸಾಹಿತ್ಯ ಸಾಗರದ ಇನ್ನೂ ಆಳವಾದ ಅಭ್ಯಾಸಕ್ಕೆ ಧುಮುಕಿದರೆ ಈ ಪುಸ್ತಕದ ಉದ್ದಿಶ್ಯ ಸಫಲವಾಗುತ್ತದೆ.

ಕೆಲ ಕವಿಗಳ ಚಿತ್ರಗಳು, ಅಂದವಾದ ಮುದ್ರಣ, ಕವಿಗಳ ಕೃತಿಭಾಗಗಳಿಂದ ಆಯ್ದ ಕೆಲ ಉತ್ತಮ ಕಾವ್ಯ ಖಂಡಗಳು, ನಮ್ಮ ಕುತೂಹಲವನ್ನು ಬಡಿದೆಬ್ಬಿಸುತ್ತದೆ. ಕನ್ನಡ ವಿದ್ಯಾರ್ಥಿಗಳಿಗೆ ಒಂದು ಸಹಾಯಕಾರಿಯಾದ ಕೈಪಿಡಿ.

**ಕೆ. ಎಸ್. ಸೂಳಿಬೆಲೆ**

ದಿ|| ತೀ. ನಂ. ಶ್ರೀ ಸ್ಮರಣ ಸಂಚಿಕೆ: ಪ್ರ.: ತೀ. ನಂ. ಶ್ರೀ ಕರ್ಣಾಟಕ ಯುವಕ ಸಂಘ, ಅರಳೇಪೇಟೆ, ಬೆಂಗಳೂರು-೨, ಪುಟ: ೧೬, ಬೆಲೆ: ೦-೨೫ ಪೈಸೆ.

ಕನ್ನಡವೇ ಜೀವದುಸಿರಾಗಿಸಿದ್ದ ಆಚಾರ್ಯ ತೀ. ನಂ. ಶ್ರೀಯವರ ನಾಮಾಂಕಿತದಲ್ಲಿ ಸ್ಥಾಪಿತವಾಗಿರುವ ಈ ಸಂಘ ೧೨ನೇ ರಾಜ್ಯೋತ್ಸವದ ಸಂದರ್ಭದಲ್ಲಿ ತೀ. ನಂ. ಶ್ರೀ. ಹೆಸರಿನಲ್ಲಿ ಸ್ಮರಣ ಸಂಚಿಕೆ ತಂದಿರುವುದು ಸ್ತುತ್ಯಾರ್ಹವೇ ಸರಿ. ಇದರಲ್ಲಿ ಕನ್ನಡ ನಾಡಿನ ಇತಿಹಾಸ, ಕನ್ನಡಿಗರ ಪ್ರಭಾವವನ್ನು ವಿವರಿಸುವ ಲೇಖನವಿದೆ. ಹಾಗೂ ತೀ. ನಂ. ಶ್ರೀಯವರ ಜೀವನ, ಅವರ ಕಾರ್ಯರಂಗಗಳನ್ನು ಪರಿಚಯ ಮಾಡಿಕೊಡುವ ಲೇಖನಗಳಿವೆ. ಇವು 'ಕನ್ನಡ ನುಡಿ'ಯ ಕೃಪೆಯಿಂದ ಪಡೆದುವು. ಈ ಸಂಘದ ಅಧಿಕಾರಿವರ್ಗದವರು ಹಿರಿಯ ಸಾಹಿತಿಗಳಿಂದ, ತೀ. ನಂ. ಶ್ರಿ ಸಾಮೀಪ್ಯ ಸಂಪರ್ಕ ಹೊಂದಿದ್ದವರಿಂದ ಲೇಖನಗಳನ್ನು ಬರೆಸಿ ಈ ಸಂಚಿಕೆ ತಂದಿದ್ದರೆ ಈ ಕಾರ್ಯ ಬಂಧುರವಾಗಿರುತ್ತಿತ್ತೆಂದು ನಮ್ಮ ನಮ್ರ ಅಭಿಪ್ರಾಯ. ಅಂತೂ ಈ ಸಾಹಸ ಮೆಚ್ಚತಕ್ಕುದೇ ಆಗಿದೆ.

* * *

ನಿವೇದನ : ಪ್ರ. : ಶ್ರೀ ಸರಸ್ವತಿ ಕಲಾ ನಿಕೇತನ್, ಮಲ್ಲೇಶ್ವರಂ, ಬೆಂಗಳೂರು, ಪುಟ : ೪೦

ಕಲಾವಿಲಾಸಿ ಸಂಘಗಳು ಕೇವಲ ನಾಟಕ ಆಡಲಿಕ್ಕಲ್ಲ ಅವು ಸಾಹಿತ್ಯ ಸೇವೆಯನ್ನೂ ಮಾಡಬಲ್ಲುವು ಎಂಬುದಕ್ಕೆ ಇದೊಂದು ನಿದರ್ಶನ – ಈ ಕೃತಿಯಲ್ಲಿ ತಾವು ನಡೆಸಿದ 'ಕಥಾ ಸ್ಪರ್ಧೆ', 'ಕವನ ಸ್ಪರ್ಧೆ'ಗಳಲ್ಲಿ ಬಹುಮಾನಗಳಿಸಿದ ಕತೆ, ಕವನಗಳನ್ನು ಮುದ್ರಿಸಿದ್ದಾರೆ. ತಮ್ಮ ಐದನೇ ವರ್ಷದ ಸವಿ ನೆನಪಿಗೆ ನಿವೇದನ ಸಂಚಿಕೆಯನ್ನು ತಂದಿದ್ದಾರೆ. ಈ ಅಲ್ಪಾವಧಿಯಲ್ಲಿ ಈ ಸಂಸ್ಥೆಯವರು ನಡೆಸಿರುವ ಸಾಹಿತ್ಯ ಸ್ಪರ್ಧೆ, ಕಲಾವಿದರ ಸನ್ಮಾನ ಸಂಗೀತ ಸ್ಪರ್ಧೆಗಳು ಸ್ತುತ್ಯಾರ್ಹವಾದವು.

ಇಲ್ಲಿ ಬರುವ ಕತೆಗಳಲ್ಲಿ 'ಗ್ರಹಪರಿಭ್ರಮಣ' ನಿಜಕ್ಕೂ ಉತ್ತಮ ಕತೆ-ಬಹುಮಾನ ಬಂದಿದೆಯೆಂದಲ್ಲ-ಅದರ ಸತ್ವ, ನಿರೂಪಣ ತಂತ್ರ ಅಂತಹುದು. ಕೋಲ್ಮಿಂಚು ಉತ್ತಮ ಕತೆಯಾದರೂ ತೀರ ಅಸಂಭವವಾದ ಘಟನೆ ಎನಿಸುತ್ತದೆ. 'ನೋವಿನಾಳದಿಂದ ಸಿಡಿದು ಬಂದನಾ ಯುವಕ'ಉತ್ತಮ ಕವನ. ಇಲ್ಲಿ ಬರುವ ಭಾವನೆ, ಚಿಂತನೆ, ಗಮನಾರ್ಹ. 'ಸುಟ್ಟ ಹಪ್ಪಳದ ಮುಖ, ಬೆಂದ ಬದನೆಯ ಮೂಗು' ಸುಂದರ, ಸಹಜ, ಚಿತ್ರಣವಾಗಿದೆ. 'ನನ್ನ ಮಗು' ಒಳ್ಳೆ ವಸ್ತು ಇದರೂ ನಿರೂಪಣೆಯಲ್ಲಿ ಶಕ್ತಿ ಸಾಲದು.

ಮುದ್ರಣ ಕಾರ್ಯದಲ್ಲಿ ಇನ್ನೂ ಆಸಕ್ತಿ ವಹಿಸಬೇಕಿತ್ತು ಎಸ್. ನಿಜಲಿಂಗಪ್ಪ ಎಂದು ಸುಪರಿಚಿತರಾದ ಮುಖ್ಯಮಂತ್ರಿಗಳು ಈ ಹೊತ್ತಗೆಯಲ್ಲಿ ಸಿ. ನಿಜಲಿಂಗಪ್ಪನವರಾಗಿರುವುದು, ವಿಮರ್ಶಕನಾದ ನನಗೂ ದಂಗು ಬಡಿಸಿದೆ. ಸಂಪಾದಕರು ಇಂತಹ ತಪ್ಪಿಗೆ ಅವಕಾಶ ಕೊಡಬಾರದಿತ್ತು.

* * *

ಹರಿಹರನ ಗಿರಿಜಾ ಕಲ್ಯಾಣ ಸಮಿಾಕ್ಷಾ ಪರಿಚಯ ; ಸಮಿಾಕ್ಷಕರು : ಪಂಡಿತ ರಾಮಾರಾಧ್ಯ ; ಸತ್ಕೃತಿ ಸಮಿಾಕ್ಷಾ ಗೋಷ್ಠಿ, ರಾಜಾಜಿನಗರ, ಬೆಂಗಳೂರು ; ಪುಟ : ೫೦, ಬೆಲೆ : ೦-೫೦ ಪೈಸೆ

ಬೆಂಗಳೂರಿನ ಸತ್ಕೃತಿ ಸಮಿಾಕ್ಷಾ ಗೋಷ್ಠಿಯವರು ತಿಂಗಳಿಗೊಮ್ಮೆ ಸಿದ್ಧಗಂಗಾ ಕ್ಷೇತ್ರದಲ್ಲಿ ಸಮಾವೇಶಗೊಂಡು ಕನ್ನಡದ ಪ್ರಸಿದ್ಧ ಕವಿಯೊಬ್ಬನ ಕೃತಿಯ ವಿಚಾರವಾಗಿ ಸಮಿಾಕ್ಷೆ ನಡೆಸುವ ಯೋಜನೆಯನ್ನು ಹಾಕಿಕೊಂಡಿರುತ್ತಾರೆ. ಹಾಗೆ ನಡೆದ ಪ್ರಥಮ ಸಮಿಾಕ್ಷೆಯ ಫಲವಾಗಿ 'ಹರಿಹರನ ಗಿರಿಜಾ ಕಲ್ಯಾಣ' ಎಂಬ ೫೦ ಪುಟಗಳ ಕಿರುಹೊತ್ತಿಗೆಯನ್ನು ಪ್ರಕಟಿಸಿದ್ದಾರೆ.

ಮೊದಲರ್ಧ ಭಾಗದಲ್ಲಿ ಸಮಿಾಕ್ಷಕರಾದ ಪಂಡಿತ ರಾಮಾರಾಧ್ಯರು ಕೃತಿಕಾರ ಹರಿಹರನ ಕಾಲ, ಸಾಧನೆ, ಮತನಿರ್ಣಯ ಮತ್ತು ಅವನ ಗಿರಿಜಾ ಕಲ್ಯಾಣದ ಮೂಲ ಹಾಗೂ ಬೆಳವಣಿಗೆಗಳನ್ನೂ, ಅದರ ಶೈಲಿ, ರಸಾಲಂಕಾರಗಳನ್ನೂ ಹಿತಮಿತ ಉದಾಹರಣೆಗಳೊಂದಿಗೆ ಸ್ಥೂಲ ವಿಮರ್ಶಾಯುಕ್ತವಾಗಿ ಚರ್ಚಿಸಿದ್ದಾರೆ.

ಉಳಿದರ್ಧ ಭಾಗದಲ್ಲಿ ಗಿರಿಜಾ ಕಲ್ಯಾಣದ ಸಂಕ್ಷಿಪ್ತ ಪರಿಚಯವನ್ನು ಮೂಲ ಗ್ರಂಥದ ಪದ್ಯಗಳೊಂದಿಗೆ ಒದಗಿಸಲಾಗಿದೆ. ಒಟ್ಟಿನಲ್ಲಿ ಹರಿಹರನ ಸತ್ಕೃತಿಯಾದ ಗಿರಿಜಾ ಕಲ್ಯಾಣದ ಸ್ಥೂಲ ಸಮಿಾಕ್ಷಾ ಗ್ರಂಥವಾದ ಈ ಕಿರುಹೊತ್ತಿಗೆ ನಿಷ್ಪಕ್ಷಪಾತ ವಿಮರ್ಶೆಯನ್ನೊಳಗೊಂಡು ಮೂಲ ಕೃತಿಯ ಅಧ್ಯಯನಕ್ಕೆ ಉತ್ತಮ ಕೈಪಿಡಿಯಾಗಿದೆ. ಕವಿ-ಕೃತಿ ಸಮಿಾಕ್ಷೆಯ ಯೋಜನೆಯನ್ನು ಧ್ಯೇಯವಾಗುಳ್ಳ ಸತ್ಕೃತಿ ಸಮಿಾಕ್ಷಾ ಗೋಷ್ಠಿಯವರು ಅಭಿನಂದನಾರ್ಹರು.

* * *

ಅಮೂಲ್ಯ ಕಾಣಿಕೆ (ಕಥಾ ಸಂಕಲನ) ಲೇ. : ದಾನಪ್ಪ ಸಿ. ಜತ್ತಿ ; ಭಾರತೀ ಸಾಹಿತ್ಯ ಭಂಡಾರ, ವಿಜಾಪುರ ; ಪುಟ : ೧೦೦ ಬೆಲೆ : ರೂ. ೧-೨೫.

ತರುಣ ಸಾಹಿತಿ ಶ್ರೀ ದಾನಪ್ಪ ಜತ್ತಿಯವರ ಪ್ರಥಮ ಸಣ್ಣ ಕತೆಗಳ ಸಂಕಲನವಾಗಿ 'ಅಮೂಲ್ಯ ಕಾಣಿಕೆ' ಹೊರಬಿದ್ದಿದೆ. ಇಲ್ಲಿ ಸಂಗ್ರಹಿಸಿರುವ ಹತ್ತು ಕತೆಗಳಲ್ಲಿ ಲೇಖಕರು ಬದುಕಿನ ನಾನಾ ಮುಖಗಳನ್ನು ಪ್ರತಿಬಿಂಬಿಸಿದ್ದಾರೆ. ಸಾಂಸಾರಿಕ ಜೀವನದ ನೋವು-ನಲಿವುಗಳು ; ಬಡತನ, ಶೋಷಣೆ, ಕಾಮುಕತೆಗಳ ದುರ್ಭರತೆಗಳು ಮತ್ತು ಸ್ವಾರ್ಥರಾಹಿತ್ಯ, ತ್ಯಾಗ ಹಾಗೂ ಆದರ್ಶಗಳು ಸ್ಫೂರ್ತಿಯನ್ನೊದಗಿಸಿವೆ. ಮೊದಲ ಕತೆ 'ಅಮೂಲ್ಯ ಕಾಣಿಕೆ'ಯ ಹಂದರ ಮನಸೆಳೆಯುವಂತಿದ್ದರೂ ವಾಸ್ತವಿಕತೆಯ ಅಂಶ ಅತ್ಯಲ್ಪ ; 'ಸ್ನೇಹ ಸೇತುವೆ'ಯ ಅಂತ್ಯ ಅನಿರೀಕ್ಷಿತವಲ್ಲದಿದ್ದರೂ ಅಪರಿಣಾಮಕಾರಿಯಾಗಿದೆ ; 'ರಕ್ತದಾನ'ದ ವಸ್ತುವಿಗೆ ಘಟನೆಗೆ ತಕ್ಕಂತೆ ಕತೆಯ ತೀವ್ರತೆ ಓಡದೆ ಕುಂಟುವುದು ಗಮನೀಯ ; ತ್ಯಾಗದ ಅಡಿಪಾಯ ಅಷ್ಟೇನೂ ಆಳವಾಗಿಲ್ಲದೆ ಅಸಹಜವೆನಿಸಿದೆ 'ಬಂಧು ಪ್ರೇಮ'—ಯಶಸ್ವಿಯಾಗಿಲ್ಲ. 'ಆತ್ಮಾಹುತಿ' ಹಾಗೂ 'ಕೃತಜ್ಞತೆ' ಈ ಸಂಕಲನದ ಉತ್ತಮ ಕತೆಗಳಾಗಿವೆ. ಎಲ್ಲ ಕತೆಗಳಲ್ಲಿಯೂ 'ಕಲ್ಪನೆಗಿಂತ ವಾಸ್ತವಿಕತೆಗೆ ಹೆಚ್ಚಿನ ಬೆಲೆ ಕೊಡಲಾಗಿದೆ' ಎಂಬ ಮುನ್ನುಡಿಕಾರರ ಅಭಿಪ್ರಾಯ

ವನ್ನು ಅನುಮೋದಿಸುವುದು ಸ್ವಲ್ಪ ಪ್ರಯಾಸಕರವೆನಿಸುತ್ತದೆ. ಭಾವುಕತೆ ಮತ್ತು ಆದರ್ಶದ ಅತಿರೇಕತೆಗೆ ಲೇಖಕರು ಮನಸೋತಿದ್ದಾರೆ. ಇದರಿಂದ ಸಂಕಲನದ ಹೆಚ್ಚು ಕತೆಗಳಲ್ಲಿ ಅಪಕ್ವತೆ ಹಾಗೂ ಅಸಹಜತೆಗಳು ಇಣಕುತ್ತವೆ. ನಿರೂಪಣೆಯೂ ಹಲವೆಡೆ ಯಶಸ್ವಿಯಾಗಿಲ್ಲ. ಲೇಖಕರ ಪ್ರಥಮ ಕೃತಿಯಾದರೂ, ತಮ್ಮ ಹೃದಯದ ಭಾವನೆಗಳನ್ನು ಸಹಜವಾಗಿ ಸರಳವಾಗಿ ಸಹೃದಯತೆಯೊಂದಿಗೆ ಅಭಿವ್ಯಕ್ತಗೊಳಿಸಬಲ್ಲ ಕಲೆ ಲೇಖಕರಿಗೆ ಸಿದ್ಧಿಸಿದೆ. ಒಟ್ಟಿನಲ್ಲಿ ಇದೊಂದು ಪ್ರಾಮಾಣಿಕ ಪ್ರಯತ್ನವೆನ್ನಬಹುದು.

* * *

**ಜ್ಯೋತಿಪಥ ಲೇ: ಉ. ಕಾ. ಸುಬ್ಬರಾಯಾಚಾರ್, ಸುರುಚಿ ಪ್ರಕಾಶನ, ಮೈಸೂರು, ಪುಟ: ೧೨೨, ಬೆಲೆ : ರೂ. ೨-೫೦**

ಅನಾದಿ ಕಾಲದಿಂದಲೂ ಭಾರತ ಅಧ್ಯಾತ್ಮಿಕ ಬೆಳಕಿನ ಸಂದೇಶವನ್ನು ವಿಶ್ವದ ಮೂಲೆ ಮೂಲೆಗೂ ನೀಡುತ್ತಾ ಬಂದಿದೆ. ಶತಮಾನಗಳುರುಳಿದರೂ ಭಾರತೀಯ ಅಧ್ಯಾತ್ಮಿಕ ಶಕ್ತಿಯನ್ನು ಅನೇಕ ಮಹಾಪುರುಷರು ತಮ್ಮ ಜೀವನ ಸಾಧನೆ, ಸಂದೇಶಗಳಿಂದ ಹಚ್ಚಹಸಿರಾಗಿಯೇ ಉಳಿಸಿರುವರಲ್ಲದೆ, ತಮ್ಮ ಜ್ವಾಜ್ವಲ್ಯಮಾನ ಪ್ರಭಾವದಿಂದ ಜನಜೀವನವನ್ನು ತಿದ್ದಿ, ಶಾಂತಿ ಸಹಬಾಳ್ವೆ ಮತ್ತು ಮುಕ್ತಿಪಥದತ್ತ ಮನುಕುಲವನ್ನು ಮುನ್ನಡೆಸುತ್ತಿದ್ದಾರೆ. ಶ್ರೀಯುತ ಸುಬ್ಬರಾಯಾಚಾರ್ಯರ 'ಜ್ಯೋತಿಪಥ' ಇಂತಹ ಹಲವು ಮಹಾಪುರುಷರ ಜೀವನ ಸಂದೇಶಗಳ ದರ್ಶನವನ್ನು ಮಾಡಿಸುವ ಕೃತಿಯಾಗಿದೆ.

ಇದರಲ್ಲಿ ಯುಗಾವತಾರ ಶ್ರೀ ರಾಮಕೃಷ್ಣ ಪರಮಹಂಸರು, ಅವರ ಪತ್ನಿಯಾಗಿ ಮಹಾಮಾತೆಯೆನಿಸಿದ ಶ್ರೀ ಶಾರದಾದೇವಿ, ಅವರ ಶಿಷ್ಯ ಕೋಟಿಯಲ್ಲಿ ಜಗತ್ಪ್ರಸಿದ್ಧರೆನಿಸಿದ ಶ್ರೀ ವಿವೇಕಾನಂದ ಮತ್ತು ಶಿವಾನಂದ, ಅರುಣಾಚಲದ ಮಹರ್ಷಿ ಶ್ರೀ ರಮಣ, ಮಹಾರಾಷ್ಟ್ರ ಸಂತ ಪ್ರಮುಖರಾದ ಜ್ಞಾನದೇವ, ನಾಮದೇವ, ಏಕನಾಥ ಮತ್ತು ತುಕಾರಾಮ, ವಿದೇಶೀಯರುಗಳಾದರೂ ಗಾಂಧೀಜಿಯವರ ಸತ್ತ್ವದಲ್ಲಿ ಅಚಲ ವಿಶ್ವಾಸವಿಟ್ಟ, ಆ ಮಹಾತ್ಮರ ಮಾನಸಪುತ್ರಿಯೆನಿಸಿದ ಮೀರಾಬೆನ್, ಪಾಂಡಿಚೆರಿಯ ಆಶ್ರಮದ ಪೂರ್ಣಯೋಗಿ ಅರವಿಂದರು- ಇವರೇ ಮೊದಲಾದವರ ಸಂಕ್ಷಿಪ್ತ ಜೀವನ ಪರಿಚಯ, ಅವರ ಮನೋಧರ್ಮ ಉಪದೇಶಸಾರ, ಜೀವನ ಸಂದೇಶಗಳನ್ನು ಕುರಿತು ಸುಲಭ ಸರಳ ಶೈಲಿಯಲ್ಲಿ ರಚಿಸಿದ ೧೩ ಲೇಖನಗಳಿವೆ. ಕೊನೆಯ ಎರಡು–"ಶ್ರೀ ಕೃಷ್ಣ" ವಿಚಾರಪ್ರದವೂ, 'ಗೀತೆಯ ಬೆಳಕು' ಭಗವದ್ಗೀತೆಯ ಸಾರಸರ್ವಸ್ವದ ಸಂಗ್ರಹ ಲೇಖನಗಳೂ ಆಗಿವೆ.

ಪುಟ ೪೫ರಲ್ಲಿ ಲೇಖಕರು ವಿವೇಚಿಸಿರುವ ವಿವೇಕಾನಂದರ ಉಪನ್ಯಾಸಗಳಲ್ಲಿ ಮೂರನೆಯದಾದ 'ನಮ್ಮ ಸಮಾಜದ ಲೋಪದೋಷಗಳು ಮತ್ತು ಅವುಗಳ ನಿವಾರಣೋಪಾಯ' ವಿಭಜನೆ ಲೇಖನದಲ್ಲಿ ಕಂಡುಬಂದಂತಿಲ್ಲ. ಕೆಲವು ವ್ಯಕ್ತಿಚಿತ್ರಗಳು ಬಹು ಸಂಕ್ಷಿಪ್ತತೆಯಿಂದ ಹ್ರಸ್ವವೆನಿಸುತ್ತವೆ. ಅರವಿಂದರ ದಿವ್ಯ ಜೀವನದ ಆದರ್ಶವನ್ನು ಕುರಿತ ಲೇಖನ ಚಿಕ್ಕದಾದರೂ ಬಹು ಚೊಕ್ಕವಾಗಿದೆ. ಈ ಮಹಾಪುರುಷರನ್ನು ಕುರಿತ ಹೆಚ್ಚಿನ ಅಧ್ಯಯನಕ್ಕೆ ಈ ಕೃತಿ ದಾರಿದೀವಿಗೆ ಹಾಗೂ ಪ್ರೇರಕಶಕ್ತಿಯಾಗಬಲ್ಲದು. ಸಾಮಾಜಿಕ ಜೀವನದಲ್ಲಿ ಅಶಾಂತಿಯ ವಿಷವರ್ತುಲ ಹಬ್ಬಿರುವ ಈ ಕಾಲದಲ್ಲಿ ಅಧ್ಯಾತ್ಮಿಕ ಅನಾಸಕ್ತಿಯೂ ಹೆಚ್ಚುತ್ತಿದೆ. ಇವುಗಳ ಮಧ್ಯೆ ಜೀವನದ ಮೌಲ್ಯಗಳನ್ನು ಅರಿತು, ಅರಸಿ ಆದರ್ಶದತ್ತ ನಡೆಯಬೇಕಾದರೆ ಮಹಾಪುರುಷರ ಜೀವನಾದರ್ಶಗಳನ್ನು, ಸಾಧನೆಗಳನ್ನು ಹಿಂದಿರುಗಿ ನೋಡಬೇಕಾಗಿದೆ. ಆ ದಿಸೆಯಲ್ಲಿ ಇಂತಹ ಕೃತಿಗಳು ಹೆಚ್ಚಿನ ಪರಿಣಾಮವನ್ನು ಉಂಟುಮಾಡಬಲ್ಲವು. ಒಟ್ಟಿನಲ್ಲಿ ಇದೊಂದು ಸರ್ವ ಸಂಗ್ರಾಹ್ಯವಾದ ಹೊತ್ತಿಗೆಯಾಗಿದೆ.

**'ಸುಮನಾ'**

---

# ಸುದ್ದಿ ಸಂಗ್ರಹ

## ಅರವತ್ತು ತುಂಬಿದ ರಾಜರತ್ನಂ

ಕಳೆದ ಡಿಸೆಂಬರ್ ತಿಂಗಳಿನಲ್ಲಿ, ಕನ್ನಡ ಸಾರಸ್ವತ ಭಂಡಾರವನ್ನು ತಮ್ಮ ಕವನಗಳು, ಕಥೆಗಳು, ವಿಮರ್ಶೆಗಳು, ಜೈನ, ಬೌದ್ಧ ಸಾಹಿತ್ಯ ಗ್ರಂಥಗಳಿಂದ ಸಮೃದ್ಧಗೊಳಿಸಿ, ಅಧ್ಯಾಪಕರಾಗಿ ಸಹಸ್ರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿ ನಾಡುನುಡಿಗಳ ಸೇವೆಯನ್ನು ಶ್ರೇಷ್ಠ ರೀತಿಯಲ್ಲಿ ಮಾಡುತ್ತಾ ಬಂದಿರುವ ಶ್ರೀ ಜಿ. ಪಿ. ರಾಜರತ್ನಂ ಅವರ ಅರವತ್ತನೆಯ ಹುಟ್ಟುಹಬ್ಬವನ್ನು ಅವರ ಅಭಿಮಾನಿಗಳೂ, ಗೆಳೆಯರೂ ಸೇರಿ, ನ್ಯಾಷನಲ್ ಕಾಲೇಜಿನ ಸಭಾಂಗಣದಲ್ಲಿ ಸರಳ ರೀತಿಯಲ್ಲಿ ಆಚರಿಸಿ, ಶ್ರೀಯುತರಿಗೆ ಶುಭವನ್ನು ಕೋರಿದರು.

ಆರಂಭದಲ್ಲಿ ಬಿ. ಬಿ. ಡಿ. ಪವರ್ ಪ್ರೆಸ್ಸಿನ ಶ್ರೀ ನರಸಿಂಹ ಮಲ್ಯ ಅವರು ಸ್ವಾಗತ ಭಾಷಣ ಮಾಡಿದರು. ಪೂಜ್ಯ ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರು ತಮ್ಮ ಆಶೀರ್ವಾದ ಭಾಷಣದಲ್ಲಿ ರಾಜರತ್ನಂ ಅವರ ಬರವಣಿಗೆಯನ್ನು ರತ್ನಕ್ಕೆ ಹೋಲಿಸಿ, ಅವರ ರತ್ನನ ಪದಗಳು ಲೋಕಸಾಹಿತ್ಯದ ಶ್ರೇಷ್ಠ ಕೃತಿಗಳ ಜೊತೆಯಲ್ಲಿ ತೂಗಬಹುದೆಂದು ಅಭಿಮಾನ ದಿಂದ ಹೇಳಿದರು.

ಹಿರಿಯರಾದ ಡಿ. ವಿ. ಜಿ. ಅವರು ಅನಂತರ ಮಾತನಾಡಿ ರಾಜರತ್ನಂ ಅವರು ಗಹನವಾದ ವಿಷಯಗಳನ್ನು ಸರಳವಾಗಿ ಹೇಳುವ ಕಲೆಯನ್ನು ಸಾಧಿಸಿದ್ದಾರೆಂದು ಮುಕ್ತಕಂಠದಿಂದ ಹೊಗಳಿ, ಮಂತ್ರಾಕ್ಷತಾಪೂರ್ವಕ ಆಶೀರ್ವದಿಸಿದರು.

ಡಾ. ಶಿವರಾಂ ಅವರು ಮಾತನಾಡಿ ತಮ್ಮ ಹಾಗೂ ರಾಜರತ್ನಂ ಅವರ ಮಧುರ ಮೈತ್ರಿಯನ್ನು ಹೃದಯಂಗಮ ವಾಗಿ ನಿವೇದಿಸಿ, ತಮ್ಮಂತಹ ವೈದ್ಯರ ಸಹಾಯ ಅವರಿಗೆ ಬಾರದಿರಲೆಂದು ಹಾರೈಸಿದರು.

ಬಿ. ಬಿ. ಡಿ. ಪವರ್ ಪ್ರೆಸ್ಸಿನವರು ಈ ಸಂದರ್ಭದಲ್ಲಿ ಪ್ರಕಟಿಸಿದ ಡಾ. ಶಿವರಾಂ ಅವರ ಗ್ರಂಥ 'ಇಂದಾನೊಂದು ಕಾಲದಲ್ಲಿ' ಗ್ರಂಥವನ್ನು ರಾಜರತ್ನಂ ಅವರಿಗೆ ಉಡುಗೊರೆ ಯಾಗಿ ಇತ್ತರು. ಇದರ ಹಾಗೂ ಕೈಲಾಸಂ ನೆನಪಿನ ನೂರು ಪ್ರತಿಗಳ ಮಾರಾಟದಿಂದ ಬರುವ ಮೊಬಲಗನ್ನು ಕೈಲಾಸಂ ಹೆಸರಿನಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ದತ್ತಿಯಾಗಿ ನೀಡುವುದಾಗಿ ತಿಳಿಸಿದ ರಾಜರತ್ನಂ ಅವರು, ತಮ್ಮ ಸಾಹಿತ್ಯ ಕೈಂಕರ್ಯಕ್ಕೆ ನೆರವಾದ ಎಲ್ಲ ಹಿರಿಯ ಕಿರಿಯ ಮಿತ್ರರನ್ನು ಕೃತಜ್ಞತೆಯಿಂದ ಸ್ಮರಿಸಿದರು.

ಶ್ರೀಯುತರಿಗೆ ಡಾ. ಗೋಕಾಕ್, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಜಿ. ವೆಂಕಟಸುಬ್ಬಯ್ಯ, ಡಾ. ಮುಗಳಿ ಮೊದಲಾದವರು ಪುಷ್ಪಹಾರಗಳನ್ನು ಅರ್ಪಿಸಿದರು.

ಕಲಾವಿದ ಶ್ರೀ ಎಸ್. ಆರ್. ಸ್ವಾಮಿ ಅವರು ರಾಜರತ್ನಂ ಅವರಿಗೆ ತಮ್ಮ ಕೃತಿಯೊಂದನ್ನು ಅರ್ಪಿಸಿದರು. ಕೊನೆಯಲ್ಲಿ ಶ್ರೀ ಮಾಧವ ಮಲ್ಯರು ವಂದನಾರ್ಪಣೆ ಮಾಡಿದರು.

## ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಚಿನ್ನದ ಹಬ್ಬ

ಕನ್ನಡ ನಾಡಿನ ಸಾಂಸ್ಕೃತಿಕ ಪುನರುಜ್ಜೀವನದಲ್ಲಿ ಪ್ರಧಾನ ಪಾತ್ರವಹಿಸಿ, ಪ್ರಬುದ್ಧ ಕರ್ಣಾಟಕವನ್ನು ಆರಂಭಿಸಿ, ನೂರಾರು ಸಾಹಿತಿಗಳಿಗೆ ಪ್ರೋತ್ಸಾಹಕೊಟ್ಟು, ಐವತ್ತು ವರ್ಷಗಳ ಸಾರ್ಥಕ ಸೇವೆಯನ್ನು ಮುಗಿಸಿ ನೂತನ ಮನ್ವಂತರಕ್ಕೆ ಕಾಲಿರಿಸುತ್ತಿರುವ ಕರ್ಣಾಟಕ ಸಂಘದ ಚಿನ್ನದ ಹಬ್ಬವನ್ನು ಕಳೆದ ಡಿಸೆಂಬರ್ ತಿಂಗಳಿನಲ್ಲಿ ಎ. ಆರ್. ಕೃ. ಮಂಟಪದಲ್ಲಿ ವೈಭವದಿಂದ ಆಚರಿಸ ಲಾಯಿತು.

ಈ ಮೊದಲು ಆರಂಭವಾಗಿದ್ದ ಉತ್ಸವದ ಸಮಾರೋಪ ಕಾರ್ಯಕ್ರಮವು ಮೂರು ದಿನಗಳವರೆಗೆ ನಡೆಯಿತು.

ನಾಡಿನ ಹಿರಿಯ ಕಿರಿಯ ಕವಿಗಳು ಸಾಹಿತ್ಯದೇವಿಯನ್ನು ಕಾವ್ಯಾರಾಧನೆಯಿಂದ ಅರ್ಚಿಸಿದರು.

ಕವಿವರ್ಯರಾದ 'ಅಂಬಿಕಾತನಯದತ್ತರ' ನೇತೃತ್ವದಲ್ಲಿ ಡಾ. ರಂ. ಶ್ರೀ. ಮುಗಳಿಯವರು ಕವಿಗಳ ಪರಿಚಯ ಮಾಡಿಕೊಟ್ಟರು.

ಹಿರಿಯ ಕವಿಗಳಾದ ವಿನಾಯಕರು ಜಿಜ್ಞಾಸುವಿನ ಜಿಜ್ಞಾಸೆ, ಪು.ತಿ.ನ. ಅವರು ಉಡಾವಣೆ, ಕೆ. ಎಸ್. ನರಸಿಂಹಸ್ವಾಮಿ ಅವರು ಹಿಂದಿನ ಸಾಲಿನ ಹುಡುಗರು ರಾಜರತ್ನಂ ಅವರು ಅಲ್ಲಾನ ಕರುಣೆ– ಈ ಕವನಗಳನ್ನು ಓದಿದರು. ಹೊಸತಲೆಮಾರಿನ ಹೊಸಪ್ರಜ್ಞೆಯ ಕವಿಗಳಾದ ಸರ್ವಶ್ರೀ ಕೆ. ಎಸ್. ನಿಸಾರ್ ಅಹಮದ್, ಪಿ. ಲಂಕೇಶ್ ಕ. ವೆಂ. ರಾಜಗೋಪಾಲ್, ಜಿ. ಎಸ್. ಸಿದ್ಧಲಿಂಗಯ್ಯ, ಕೆ. ಎನ್. ಶಿವಪ್ಪ ಮತ್ತು ಶ್ರೀಮತಿ ಎಲ್. ಜಿ. ಸುಮಿತ್ರ ಅವರು ತಮ್ಮ ಕವಿತೆಗಳನ್ನು ಓದಿದರು. ಇವರಲ್ಲದೆ ವಿದ್ಯಾರ್ಥಿ ಕವಿಗಳಾದ ಶ್ರೀ ದೊಡ್ಡರಂಗೇಗೌಡ, ಬಿ. ಲೋಹಿತೇಶರು ಭಾಗವಹಿಸಿದ್ದರು.

ಉತ್ಸವ ಸಮಿತಿಯ ಉಪಾಧ್ಯಕ್ಷ ಡಾ. ಜಿ. ಎಸ್. ಶಿವರುದ್ರಪ್ಪನವರು ವಂದನೆಗಳನ್ನು ಅರ್ಪಿಸಿದ ಮೇಲೆ ಮನೋರಂಜನೆಯ ಅಂಗವಾಗಿ ವಿದ್ಯಾರ್ಥಿಗಳಿಂದ ವೃಂದ ಗಾನ ಮತ್ತು ಶ್ರೀನಿವಾಸರ 'ಯಶೋಧರಾ' ನಾಟಕಾಭಿನಯ ನಡೆಯಿತು.

ಎರಡನೆಯ ದಿನದ ಕಾರ್ಯಕ್ರಮದ ಅಂಗವಾಗಿ ವಿಜ್ಞಾನ ವಿಚಾರಗೋಷ್ಠಿ ನಡೆಯಿತು. ಈ ವಿಚಾರ ಸಂಕೀರಣದಲ್ಲಿ ಸರ್ವಶ್ರೀ ರಾ. ಶಿ., ಜಿ. ಲಕ್ಷ್ಮಣರಾವ್, ಎಂ. ಷಡಕ್ಷರಸ್ವಾಮಿ, ಜಿ. ಪರಮಶಿವಯ್ಯ, ಡಿ. ವಿ. ರಾಮಣ್ಣ, ಪಿ. ಎಸ್. ವೆಂಕಟಾಚಲಪತಿಶೆಟ್ಟಿ, ವರದ ರಾಜನ್, ನಿಜಲಿಂಗಪ್ಪ ಮೊದಲಾದವರು ಭಾಗವಹಿಸಿದ್ದರು.

ಮೂರನೆಯ ದಿನದ ಕಾರ್ಯಕ್ರಮದ ಅಂಗವಾಗಿ ಡಾ. ಶಿವರಾಮ ಕಾರಂತರ ನೇತೃತ್ವದಲ್ಲಿ ಕಳೆದ ಐವತ್ತು ವರ್ಷಗಳ ಕನ್ನಡ ಸಾಹಿತ್ಯದಲ್ಲಿ ಸಾಮಾಜಿಕ ಮೌಲ್ಯಗಳನ್ನು ಕುರಿತು ವಿಚಾರಸಂಕೀರಣ ನಡೆಯಿತು. ಸ್ವಾತಂತ್ರ್ಯಪೂರ್ವದ ಮತ್ತು ಸ್ವಾತಂತ್ರ್ಯೋತ್ತರದ ಕಾಲದ ಕಾವ್ಯ, ನಾಟಕ, ಸಣ್ಣಕಥೆ ಮತ್ತು ಕಾದಂಬರಿಗಳನ್ನು ಕುರಿತು ಸರ್ವಶ್ರೀ ಎಂ. ವಿ. ಸೀತಾರಾಮಯ್ಯ, ಜಿ. ಎಸ್. ಸಿದ್ಧಲಿಂಗಯ್ಯ, ಡಾ. ಎಚ್. ಕೆ. ರಂಗನಾಥ್, ಕ. ವೆಂ. ರಾಜಗೋಪಾಲ, ಪಿ. ಲಂಕೇಶ್, ಎಸ್. ಅನಂತನಾರಾಯಣ, ಶ್ಯಾಮಭಟ್ಟರು ಭಾಗವಹಿಸಿದ್ದರು.

ಈ ಸಂದರ್ಭದಲ್ಲಿ 'ಸಂಶೋಧನ' ಎಂಬ ಗ್ರಂಥದ ಬಿಡುಗಡೆಯಾಯಿತು.

---

**ವಿನಂತಿ**

ಕನ್ನಡ ಸಾಹಿತ್ಯ ಪರಿಷತ್ತಿನ ೧೯೬೮ರ ಸಾಮಾನ್ಯ ಸದಸ್ಯತ್ವದ ಚಂದಾ ಡಿಸೆಂಬರ್ ತಿಂಗಳ ಕೊನೆಗೆ ಮುಗಿದಿರುವುದರಿಂದ, ೧೯೬೯ನೆಯ ವರ್ಷದ ಸದಸ್ಯತ್ವದ ಚಂದಾ ಹಣ ಆರು ರೂಪಾಯಿಗಳನ್ನು ಪರಿಷತ್ತಿನ ಕಛೇರಿಗೆ ಪಾವತಿ ಮಾಡಬೇಕಾಗಿ ಕೋರಿಕೆ.

ಪಂಪಮಹಾಕವಿ ರಸ್ತೆ
ಬೆಂಗಳೂರು – ೧೮

ಗೌರವ ಕಾರ್ಯದರ್ಶಿ
ಕನ್ನಡ ಸಾಹಿತ್ಯ ಪರಿಷತ್ತು

# ಪರಿಷತ್ತಿನ ಸುದ್ದಿಗಳು

## ಪರಿಷತ್ತಿನಲ್ಲಿ ಕಾವ್ಯವಾಚನ

ದಿನಾಂಕ ೨೧-೧-೧೯೬೯ನೆಯ ಗುರುವಾರ ಸಂಜೆ ಪರಿಷನ್ಮಂದಿರದಲ್ಲಿ ಶ್ರೀ ಎ. ಜಿ. ಜಯರಾಯರು ಕುಮಾರ ವ್ಯಾಸ ಭಾರತದ ಉದ್ಯೋಗಪರ್ವದ "ದುರ್ಯೋಧನ ಗರ್ವಭಂಗ" ಎಂಬ ಭಾಗವನ್ನು ವಾಚನ ಮಾಡಿದರು.

## ದಿ|| ಶ್ರೀ ಗಳಗನಾಥರ ಜನ್ಮ ಶತಮಾನೋತ್ಸವ

ದಿನಾಂಕ ೬-೧-೧೯೬೯ನೆಯ ಸೋಮವಾರ ಸಂಜೆ ಪರಿಷನ್ಮಂದಿರದಲ್ಲಿ ದಿ|| ಶ್ರೀ ವೆಂಕಟೇಶ ತಿರುಕೋ ಕುಲಕರಣಿ ಗಳಗನಾಥರವರ ಜನ್ಮಶತಮಾನೋತ್ಸವ ಸಮಾರಂಭವನ್ನು ಆಚರಿಸಲಾಯಿತು. ಸಮಾರಂಭದ ಅಧ್ಯಕ್ಷತೆಯನ್ನು ಪ್ರೊ|| ಎಸ್. ಆರ್. ಮಳಗಿಯವರು ವಹಿಸಿದ್ದರು. ಶ್ರೀಮತಿ ಕಮಲಮ್ಮ ಹಂಪನಾ, ಶ್ರೀ ವೆಂಕಟೇಶ ಸಾಂಗಲಿ ಮತ್ತು ಶ್ರೀ ಪಿ. ವಿ. ನಾರಾಯಣ— ಇವರುಗಳು ಭಾಷಣ ಮಾಡಿದರು.

## ಭಾವಚಿತ್ರ ಅನಾವರಣ

ದಿನಾಂಕ ೧೦-೧-೧೯೬೯ನೆಯ ಶುಕ್ರವಾರ ಸಂಜೆ ಪರಿಷನ್ಮಂದಿರದಲ್ಲಿ ಕನ್ನಡ ನಾಡಿನ ಶ್ರೇಷ್ಠ ಸಾಹಿತಿಗಳೂ ಗ್ರಂಥಕರ್ತರೂ ಆದ ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ (ಶ್ರೀ ಜ. ಚ. ನಿ.) ಭಾವಚಿತ್ರವನ್ನು ಶ್ರೀ ಸಿದ್ಧಗಂಗಾ ಮಹಾಕ್ಷೇತ್ರಾಧ್ಯಕ್ಷರಾದ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಅನಾವರಣ ಮಾಡಿದರು. ಕಾರ್ಯಕ್ರಮದ ಮೊದಲಲ್ಲಿ ಕುಮಾರಿ ಬಿ. ಕೆ. ವರಲಕ್ಷ್ಮೀ ಅವರಿಂದ ಪ್ರಾರ್ಥನೆಯಾದನಂತರ ಪರಿಷದಧ್ಯಕ್ಷ ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಸ್ವಾಗತ ಭಾಷಣಮಾಡಿದರು.

ಶ್ರೀ ಚ. ಸುಂದರೇಶನ್ ಅವರು ಶ್ರೀ ಜ. ಚ. ನಿ. ಅವರ ಸಾಹಿತ್ಯ ಮತ್ತು ಧರ್ಮಸೇವೆಯ ಬಗ್ಗೆ ಮಾತನಾಡಿದರು. ಸಂಗೀತ ವಿದುಷಿ ಶ್ರೀಮತಿ ಜಿ. ಚನ್ನಮ್ಮ ಮತ್ತು ಸಂಗಡಿಗರು ಶ್ರೀ ಜ.ಚ.ನಿ. ಅವರ ವಚನಗಳನ್ನು ಹಾಡಿದರು. ಪರಿಷತ್ತಿನ ವ್ಯವಸ್ಥಾಪಕ ಶ್ರೀ ಕೈವಾರ ರಾಜಾರಾಯರಿಂದ ವಂದನಾರ್ಪಣೆಯಾದನಂತರ ರಾಷ್ಟ್ರಗೀತೆಯೊಡನೆ ಸಮಾರಂಭ ಮುಕ್ತಾಯವಾಯಿತು.

## ಪರಿಷತ್ತಿನ ಆಶ್ರಯದಲ್ಲಿ ನಡೆದ ಸಭೆಗಳು

ದಿನಾಂಕ ೧೨-೧-೧೯೬೯ರಂದು ರಾಜಾಜಿನಗರದ ವಿದ್ಯಾವರ್ಧಕ ಸಂಘದಲ್ಲಿ "ಡಾ|| ಡಿ. ಎಸ್. ಕರ್ಕಿ ಅವರ ಕೃತಿಗಳು" ಎಂಬ ವಿಷಯವನ್ನು ಕುರಿತು ಪ್ರೊ|| ಎಸ್. ಆರ್. ಮಳಗಿಯವರು ಉಪನ್ಯಾಸಮಾಡಿದರು. ಇದು ವಿದ್ಯಾವರ್ಧಕ ಸಂಘದಲ್ಲಿ ನಡೆದ ಉಪನ್ಯಾಸಮಾಲೆಯ ೪೨ನೆಯ ಕಾರ್ಯಕ್ರಮ.

ದಿನಾಂಕ ೨೬-೧-೧೯೬೯ರಂದು ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದಲ್ಲಿ "ದಿ|| ಮುಳಿಯ ತಿಮ್ಮಪ್ಪಯ್ಯನವರ ಸಾಹಿತ್ಯ ಸೇವೆ" ಎಂಬ ವಿಷಯವನ್ನು ಕುರಿತು ಶ್ರೀ ಟಿ. ಕೇಶವಭಟ್ಟರು ಉಪನ್ಯಾಸಮಾಡಿದರು. ಇದು ಗಾಂಧಿ ಸಾಹಿತ್ಯ ಸಂಘದಲ್ಲಿ ನಡೆದ ಕವಿ–ಕೃತಿ ಸ್ಮರಣೆಯ ೨೪ನೆಯ ಕಾರ್ಯಕ್ರಮ.

## ಪರಿಷತ್ತಿನ ಚುನಾವಣೆಗಳು

ದಿನಾಂಕ ೧೨-೧-೧೯೬೯ರಂದು ಸೇರಿದ್ದ ಕಾರ್ಯ ಸಮಿತಿ ನಡವಳಿಕೆಯ ೭ನೆಯ ನಿರ್ಣಯದಿಂದ ಉದ್ಧರಿಸಿದ್ದು :

"(೧) ದಿನಾಂಕ ೮-೨-೧೯೬೯ನೆಯ ದಿನ ರಾತ್ರಿ ಏಳು ಗಂಟೆಯವರೆಗೆ ಸದಸ್ಯಚಂದಾವನ್ನು ಸಲ್ಲಿಸುವ ಹೊಸ ಸದಸ್ಯರಿಗೆ ಮುಂದಿನ ಚುನಾವಣೆಗಳಲ್ಲಿ ಭಾಗವಹಿಸುವ ಅವಕಾಶವಿರತಕ್ಕದ್ದೆಂದು ತೀರ್ಮಾನಿಸಲಾಯಿತು.

(೨) ಪರಿಷತ್ತಿನ ನಿಬಂಧನೆ ೭(೩)ರರ ಪ್ರಕಾರ ಹಳೆಯ ವಾರ್ಷಿಕ ಸಾಮಾನ್ಯ ಸದಸ್ಯರಿಗೆ ೩೧-೩-೬೯ರ ವರೆಗೆ ವಾರ್ಷಿಕ ಚಂದಾವನ್ನು ಕೊಟ್ಟು ಸದಸ್ಯತ್ವವನ್ನು ಮುಂದುವರಿಸಿಕೊಳ್ಳಲು ಅವಕಾಶವಿರುವುದರಿಂದ ಚುನಾವಣಾರ್ಹರಾದ ಸದಸ್ಯರ ಪಟ್ಟಿಯನ್ನು ಆ ವರೆಗೆ ತಯಾರುಮಾಡಲು

ಸಾಧ್ಯವಾಗುವುದಿಲ್ಲವೆಂಬುದನ್ನೂ ಅಲ್ಲಿಂದ ಮುಂದೆ ಚುನಾವಣೆಗೆ ಸಂಬಂಧವಾದ ಕಾರ್ಯಕ್ರಮುಗಳಿಗೆ ಉಪನಿಬಂಧನೆಗಳಲ್ಲಿ ಗೊತ್ತಾಗಿರುವಂತೆ ಸುಮಾರು ೭೫ ದಿವಸಗಳು ಬೇಕಾಗಿರುವುದೆಂಬುದನ್ನೂ, ಉಪನಿಬಂಧನೆಗಳಂತೆ ಚುನಾವಣೆಯ ಕಾರ್ಯಕ್ರಮುಗಳಿಗೆ ಅವಕಾಶ ಕೊಟ್ಟರೆ ಚುನಾವಣೆ ಬಹಳ ಮುಂದೆ ಹೋಗಬೇಕಾಗುವುದೆಂಬುದನ್ನೂ ಚರ್ಚೆಮಾಡಿ, ಸಕಲ ಸದಸ್ಯರ ಸಭೆಯ ಆದೇಶದಂತೆ ಏಪ್ರಿಲ್ ತಿಂಗಳಿನೊಳಗಾಗಿ ಚುನಾವಣೆ ನಡೆಯುವುದು ನಿಬಂಧನೆಗಳ ಅಡಚಣೆಯಿಂದ ಸಾಧ್ಯವಾಗದೆ ಇದ್ದರೆ ಆ ದಿನಕ್ಕೆ ಅತ್ಯಂತ ಸಮಿಪವಾದ ತಾರೀಖಿನಲ್ಲಿ ಚುನಾವಣೆಗಳನ್ನು ನಡೆಸಬೇಕೆಂದು ಒಪ್ಪಲಾಯಿತು. ಇದು ಸಾಧ್ಯವಾಗಬೇಕಾದರೆ ಉಪನಿಬಂಧನೆ ೨ನ್ನು ಬದಲಾಯಿಸಿಕೊಳ್ಳಬೇಕಾದುದು ಆವಶ್ಯಕವಾದ್ದರಿಂದ ಕಾರ್ಯಸಮಿತಿಗೆ ನಿಬಂಧನೆ ೧೯(೧)ರ ಪ್ರಕಾರ ದೊರೆಯುವ ಅಧಿಕಾರದಂತೆ ಈ ಉಪನಿಬಂಧನೆ ೨ ಪೂರ್ತ ಉಪನಿಬಂಧನೆಗಳ ಪಟ್ಟಿಯಿಂದ ತೆಗೆದುಹಾಕಿ ಚುನಾವಣೆಯನ್ನು ದಿನಾಂಕ ೧೧-೫-೧೯೬೯ರಲ್ಲಿ ನಡಸಲು ಅನುಕೂಲಿಸುವಂತೆ ಚುನಾವಣೆಯ ವೇಳಾಪಟ್ಟಿಯನ್ನು ರಚಿಸುವಂತೆ ಚುನಾವಣಾಧಿಕಾರಿಗಳನ್ನು ಪ್ರಾರ್ಥಿಸತಕ್ಕದ್ದೆಂದು ಗೊತ್ತುಮಾಡಲಾಯಿತು. ಅಲ್ಲದೆ ಈ ನಿಬಂಧನೆಯನ್ನು ತೆಗೆದುಹಾಕಿರುವ ವಿಚಾರವನ್ನು ಮುಂದಿನ ಕನ್ನಡ ನುಡಿಯಲ್ಲಿ ಪ್ರಕಟಿಸಬೇಕೆಂದೂ ತೀರ್ಮಾನಿಸಲಾಯಿತು."

## ಚುನಾವಣಾಧಿಕಾರಿ

ಕಾರ್ಯಸಮಿತಿಯ ಪ್ರಾರ್ಥನೆಯನ್ನು ಮನ್ನಿಸಿ ಶ್ರೀ ಜಿ. ವಿದ್ಯಾರಾಜ್, ಬಿ.ಎ., ಬಿ.ಎಲ್., ಅಡ್ವೋಕೇಟರು, ೫೯೧, ವಿಶ್ವೇಶ್ವರಪುರ, ಬೆಂಗಳೂರು-೪ - ಇವರು ಈ ಸಲದ ಪರಿಷತ್ತಿನ ಚುನಾವಣೆಗಳಿಗೆ ಚುನಾವಣಾಧಿಕಾರಿಗಳಾಗಿದ್ದು ಚುನಾವಣೆಗಳನ್ನು ನಡಸಿಕೊಡಲು ದಯಮಾಡಿ ಒಪ್ಪಿರುತ್ತಾರೆ.

* * *

ಚುನಾವಣಾಧಿಕಾರಿಗಳು ಈ ಕೆಳಗಿನ ಚುನಾವಣಾ ವೇಳಾಪಟ್ಟಿಯನ್ನು ಗೊತ್ತುಮಾಡಿರುತ್ತಾರೆ. ಇದನ್ನು ಸದಸ್ಯರ ಮತ್ತು ಸದಸ್ಯಸಂಸ್ಥೆಗಳ ಅವಗಾಹನೆಗೆ ತರಲಾಗಿದೆ :

## ಅಧ್ಯಕ್ಷರ ಚುನಾವಣಾ ಕಾರ್ಯಕ್ರಮ

| | | ದಿನಾಂಕ |
|---|---|---|
| ೧. | ಸದಸ್ಯರಾಗಲು ಕಡೆಯ ದಿನ .... | ೮-೨-೧೯೬೯ (ರಾತ್ರಿ ೭ ಗಂಟೆಯ ವರೆಗೆ) |
| ೨. | ಸದಸ್ಯರ ಪಟ್ಟಿ ಪ್ರಕಟನೆ ಪರಿಷತ್ತಿನ ಕಚೇರಿಯಲ್ಲಿ .... | ೧-೪-೧೯೬೯ |
| ೩. | ಸದಸ್ಯರ ಪಟ್ಟಿಯ ಬಗ್ಗೆ ಆಕ್ಷೇಪಣೆಗಳಿಗೆ ಕಡೆಯದಿನ .... | ೪-೪-೧೯೬೯ |
| ೪. | ಚುನಾವಣೆ ಮಾಡಲು ಅರ್ಹರಾದ ಸದಸ್ಯರ ಪಟ್ಟಿಯ ಪ್ರಕಟನೆ—ಪರಿಷತ್ತಿನ ಕಚೇರಿಯಲ್ಲಿ .... | ೫-೪-೧೯೬೯ |
| ೫. | ನಾಮಪತ್ರದ ಸ್ವೀಕಾರದ ಕಡೆಯ ದಿನ .... .... | ೧೨-೪-೧೯೬೯ |
| ೬. | ನಾಮಪತ್ರಗಳ ಪರಿಶೀಲನೆ—ಪರಿಷತ್ತಿನ ಕಚೇರಿಯಲ್ಲಿ .... | ೧೫-೪-೧೯೬೯ (ಬೆಳಗ್ಗೆ ೧೧ ಗಂಟೆ) |
| ೭. | ನಾಮಪತ್ರಗಳನ್ನು ಹಿಂತೆಗೆದುಕೊಳ್ಳಲು ಕಡೆಯದಿನ .... | ೧೮-೪-೧೯೬೯ (ಸಂಜೆ ೬ ಗಂಟೆಯ ವರೆಗೆ) |
| ೮. | ಉಳಿದ ಸ್ಪರ್ಧಿಗಳ ಹೆಸರುಗಳ ಪ್ರಕಟನೆ—ಪರಿಷತ್ತಿನ ಕಚೇರಿಯಲ್ಲಿ .... .... | ೧೮-೪-೧೯೬೯ (ರಾತ್ರಿ ೭-೩೦ ಗಂಟೆಗೆ) |
| ೯. | ಮತಪತ್ರಗಳು ಅಂಚೆಯ ಮೂಲಕ ಪರಿಷತ್ತಿನ ಕಚೇರಿಗೆ ತಲಪಬೇಕಾದ ಕಡೆಯದಿನ .... .... | ೧೦-೫-೧೯೬೯ |
| ೧೦. | ಚುನಾವಣಾ ಫಲಿತಾಂಶ ಪ್ರಕಟನೆ | ೧೧-೫-೧೯೬೯ |

(ರುಜು) **ಜಿ. ವಿದ್ಯಾರಾಜ್**
ಚುನಾವಣಾಧಿಕಾರಿ

## ಹೊಸ ಸದಸ್ಯರಿಗೆ 'ಕನ್ನಡ ನುಡಿ'

'ಕನ್ನಡ ನುಡಿ'ಯ ಫೆಬ್ರುವರಿ ಸಂಚಿಕೆಯ ಮೊದಲ ಪುಟಗಳು ಅಚ್ಚಿಗೆ ಹೋಗುವ ತಾರೀಖಿನವರೆಗೆ ಅಂದರೆ ತಾ|| ೧೫-೧-೧೯೬೯ ರೊಳಗಾಗಿ ಹೊಸದಾಗಿ ಸದಸ್ಯರಾಗಿ ಸೇರಿದವರಿಗೂ ಮತ್ತು ಹಳೆಯ ಸದಸ್ಯರಿಗೂ 'ಕನ್ನಡ ನುಡಿ'ಯ ಫೆಬ್ರುವರಿ ಸಂಚಿಕೆಯನ್ನು ಕಳಿಸಲಾಗುವುದು.

## ರತ್ನ ಪರೀಕ್ಷೆ – ನಿಯಮಾವಳಿ

೧೯೬೯ರ ದಸರಾ ರಜದಲ್ಲಿ 'ಕನ್ನಡ ರತ್ನ' ಪರೀಕ್ಷೆಯನ್ನು ನಡಸಬೇಕೆಂದು ತೀರ್ಮಾನಿಸಲಾಗಿದೆ. ಇದಕ್ಕೆ ಸರಕಾರದ ಮನ್ನಣೆ ದೊರೆತಿದೆ. ಈ ಮನ್ನಣೆಯಿಂದ ಇಂಥದೇ ಮಟ್ಟಕ್ಕೆ ಉಪಾಧ್ಯಾಯರಾಗಬಹುದೆಂಬ ಅಪ್ಪಣೆ ಬಂದಿಲ್ಲ. ಅಪ್ಪಣೆ ಪಡೆಯಲು ಪ್ರಯತ್ನ ನಡೆಯುತ್ತಿದೆ. ಪರೀಕ್ಷೆಯ ವಿವರಗಳು ಹೀಗಿವೆ:

೧. **ಅಭ್ಯಾಸ ವಿಷಯಗಳು :** (ಅ) ಪದ್ಯ, (ಆ) ಗದ್ಯ, (ಇ) ನಾಟಕ, (ಈ) ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆಯ ಮೂಲತತ್ತ್ವಗಳು, (ಉ) ಹಳಗನ್ನಡ ವ್ಯಾಕರಣ ಮತ್ತು ಭಾಷಾ ಚರಿತ್ರೆ, (ಊ) ಛಂದಸ್ಸು ಮತ್ತು ಅಲಂಕಾರ ಶಾಸ್ತ್ರ, (ಋ) ಸಂಸ್ಕೃತ.

೨. **ಅಭ್ಯಾಸದ ಅವಧಿ:** ೧೯೬೯ರ ಜನವರಿಯಿಂದ ಸೆಪ್ಟೆಂಬರ್ ತಿಂಗಳ ಕೊನೆಯವರೆಗೆ.

೩. **ಪರೀಕ್ಷೆ:** ೧೯೬೯ರ ದಸರಾ ರಜದಲ್ಲಿ ದಿನಾ ಒಂದೊಂದು ಪ್ರಶ್ನಪತ್ರಿಕೆಗೆ ಉತ್ತರ ಬರೆಯಬೇಕು.

೪. **ಪ್ರಶ್ನಪತ್ರಿಕೆ:** ಅಭ್ಯಾಸ ವಿಷಯಗಳು ಒಂದೊಂದಕ್ಕೂ ಒಂದೊಂದು ಪ್ರಶ್ನಪತ್ರಿಕೆ. ಪತ್ರಿಕೆಗಳಿಗೆ ಉತ್ತರ ಬರೆಯಲು ಕಾಲಾವಧಿ ಮೂರು ಗಂಟೆಗಳು. ಒಂದೊಂದು ಪತ್ರಿಕೆಗೂ ನೂರು ಅಂಕಗಳು.

೫. **ಫಲಿತಾಂಶ :** ಸಂಸ್ಕೃತ ಮಾತ್ರ ಮೈಸೂರು ಎಸ್.ಎಸ್.ಎಲ್.ಸಿ. ಮಟ್ಟದ್ದೇ ಆಗಿದ್ದು ತೇರ್ಗಡೆಯಾಗಲು ಕನಿಷ್ಠ ಮೂವತ್ತು ಅಂಕಗಳನ್ನು ಪಡೆಯಬೇಕು. ಕನ್ನಡ ಪತ್ರಿಕೆಗಳಲ್ಲಿ ತೇರ್ಗಡೆಯಾಗಲು ಕನಿಷ್ಟ ಮೂವತ್ತೈದು ಅಂಕಗಳನ್ನು ಪಡೆಯಬೇಕು. ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಮೇಲ್ಕಂಡ ಕನಿಷ್ಠಾಂಕಗಳನ್ನು ಪಡೆದು ಏಳು ಪತ್ರಿಕೆಗಳ ಸರಾಸರಿ ನಲವತ್ತು ಅಂಕಗಳನ್ನು ಪಡೆಯಬೇಕು.

ಫಲಿತಾಂಶವನ್ನು ಮೂರು ಶ್ರೇಣಿಗಳಲ್ಲಿ ವಿಂಗಡಿಸಲಾಗುವುದು.

(ಅ) **ಪ್ರಥಮ ಶ್ರೇಣಿ:** ಶೇಕಡ ಅರವತ್ತು ಮತ್ತು ಹೆಚ್ಚು ಅಂಕಗಳು.

(ಆ) **ದ್ವಿತೀಯ ಶ್ರೇಣಿ :** ಶೇಕಡ ಐವತ್ತರಿಂದ ಐವತ್ತೊಂಭತ್ತು ಅಂಕಗಳು.

(ಇ) **ತೃತೀಯ ಶ್ರೇಣಿ:** ಶೇಕಡ ನಲವತ್ತರಿಂದ ನಲವತ್ತೊಂಭತ್ತು ಅಂಕಗಳು.

೬. **ಪರೀಕ್ಷಾ ಶುಲ್ಕ ಕಟ್ಟಲು ಕೊನೆಯ ತಾರೀಖು :** ಪರೀಕ್ಷಾ ಶುಲ್ಕವನ್ನು ಕಟ್ಟಲು ೩೦-೮-೧೯೬೯ರ ಅಂತ್ಯದವರೆಗೆ ಅವಕಾಶವಿರುತ್ತದೆ.

೭. **ಪ್ರವೇಶಾವಕಾಶ :** (ಅ) ಸಾಹಿತ್ಯ ಪರಿಷತ್ತಿನ ಜಾಣ ಪರೀಕ್ಷೆಯಲ್ಲಿ ತೇರ್ಗಡೆಯಾದವರು, (ಆ) ಮೈಸೂರು ಸರ್ಕಾರದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾದವರು, (ಇ) ಸಂಸ್ಕೃತ ವಿದ್ವತ್ ಪರೀಕ್ಷೆಗೆ ಕುಳಿತು ಇಂಗ್ಲಿಷ್ ಪ್ರಶ್ನಪತ್ರಿಕೆಗೆ ಉತ್ತರ ಬರೆದು ತೇರ್ಗಡೆಯಾಗಿರತಕ್ಕವರು, (ಈ) ಶಾಲೆಗಳಲ್ಲಿ ಮೂರು ವರ್ಷದ ಅಧ್ಯಾಪಕವೃತ್ತಿಯ ಅನುಭವವುಳ್ಳವರು ಮತ್ತು ಮೇಲಿನ ಪರೀಕ್ಷೆಗಳಿಗೆ ಸಮಾನವಾದ ಬೇರೆ ಕನ್ನಡ ಪರೀಕ್ಷೆಗಳಲ್ಲಿ ತೇರ್ಗಡೆಯಾದವರು – ಮೇಲಿನ ಅರ್ಹತೆಯುಳ್ಳ ಯಾರಾದರೂ ಪರೀಕ್ಷೆಗೆ ಕುಳಿತುಕೊಳ್ಳಬಹುದು.

೮. **ಪರೀಕ್ಷಾ ಕೇಂದ್ರ :** ಪರೀಕ್ಷಾ ಕೇಂದ್ರಗಳನ್ನು ಪರಿಷತ್ತು ಅಭ್ಯರ್ಥಿಗಳ ಸಂಖ್ಯೆಯನ್ನು ಗಮನಿಸಿ ನಿರ್ಧರಿಸುತ್ತದೆ. ವ್ಯಾಸಂಗ ಕೇಂದ್ರಗಳು ಎಲ್ಲಿ ಬೇಕಾದರೂ ನಡೆಯಬಹುದು. ನಲವತ್ತು ವಿದ್ಯಾರ್ಥಿಗಳಿಗಿಂತ ಹೆಚ್ಚು ಜನ ಅಭ್ಯರ್ಥಿಗಳು ಇದ್ದರೆ ಅಲ್ಲಿ ಹೊಸ ಕೇಂದ್ರ ತೆರೆಯಲು ಅನುಮತಿ ನೀಡಲಾಗುವುದು. ಸಾಮಾನ್ಯವಾಗಿ ಪ್ರೌಢಶಾಲೆ ಇರುವ ತಾಲ್ಲೂಕುಗಳಲ್ಲಿ ಅಥವಾ ಜಿಲ್ಲಾ ಸ್ಥಳಗಳಲ್ಲಿ ಪರೀಕ್ಷೆ ನಡಸಲಾಗುವುದು.

೯. ಉತ್ತರ ಪುಸ್ತಕಗಳನ್ನು ಯಾವ ಕಾರಣದಿಂದಲೂ ಹಿಂದಿರುಗಿಸುವುದಿಲ್ಲ.

೧೦. ಉತ್ತರ ಪುಸ್ತಕಗಳಿಗೆ ಎರಡು ಸಲ ಬೆಲೆ ಕಟ್ಟಿಸಲಾಗುವುದಿಲ್ಲ.

೧೧. ಅಂಕಗಳನ್ನು ಪುನಃ ಎಣಿಸಲು ಎರಡು ರೂಪಾಯಿಗಳ ಶುಲ್ಕ ಕೊಡಬೇಕು.

೧೨. ಪರೀಕ್ಷೆಯ ಫಲಿತಾಂಶವು ಪ್ರಕಟವಾದ ಮೂವತ್ತು ದಿನಗಳಾದ ಮೇಲೆ ಅಂಕಗಳನ್ನು ಮತ್ತೆ ಎಣಿಸಲು ಅವಕಾಶವಿಲ್ಲ.

೧೩. ಅಂಕಪಟ್ಟಿ (Marks List) ಕಳುಹಿಸಲು ರೂ. ೧-೫೦ನ್ನು ಕೊಡಬೇಕು.

**ಪರೀಕ್ಷಾ ಶುಲ್ಕ : ಇಪ್ಪತ್ತೈದು ರೂಪಾಯಿಗಳು**

## ಪಠ್ಯಪುಸ್ತಕಗಳು

**ಪದ್ಯಸಾಹಿತ್ಯ :** (ಪತ್ರಿಕೆ ೧)

೧. ನಳಚಂಪುಸಂಗ್ರಹ
೨. ರಗಳೆ : ಪಂಪಾಹಣನ ರಗಳೆ—ಹರಿಹರ
೩. ಷಟ್ಪದಿ : ಜಯನೃಪಕಾವ್ಯ ಸಂಗ್ರಹ
೪. ಆಧುನಿಕ ಕವನ : ದೀಪದ ಹೆಜ್ಜೆ —ಶ್ರೀ ಜಿ. ಎಸ್. ಶಿವರುದ್ರಪ್ಪ

**ಗದ್ಯಸಾಹಿತ್ಯ :** (ಪತ್ರಿಕೆ ೨)

೧. ಹಳಗನ್ನಡ : ವಡ್ಡಾರಾಧನೆ
ಅದ್ಭುತ ರಾಮಾಯಣ
೨. ಹೊಸಗನ್ನಡ : ಆಧುನಿಕ ಗದ್ಯಸಾಹಿತ್ಯ (ಭಾಗ ೨)—ಪರಿಷತ್ತಿನ ಪ್ರಕಟನೆ
೩. ವಚನ : ಅಕ್ಕನ ವಚನಗಳು
೪. ವಿಮರ್ಶೆ : ಕಾವ್ಯಸಮೀಕ್ಷೆ—ಕಾವ್ಯಾಲಯ ಮೈಸೂರು

**ನಾಟಕಸಾಹಿತ್ಯ :** (ಪತ್ರಿಕೆ ೩)

೧. ಅಭಿಜ್ಞಾನ ಶಾಕುಂತಲಾ—ಶ್ರೀ ಬಸವಪ್ಪ ಶಾಸ್ತ್ರಿಗಳು
೨. ಕವಿಭಿಕ್ಷೆ—ಶ್ರೀ ಪರ್ವತವಾಣಿ
೩. ಕೀಚಕ—ಕೈಲಾಸಂ

**ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆಯ ಮೂಲತತ್ವಗಳು :** (ಪತ್ರಿಕೆ ೪)

೧. ಕನ್ನಡ ಸಾಹಿತ್ಯ ಚರಿತ್ರೆ—ಶ್ರೀ ರಂ. ಶ್ರೀ. ಮುಗಳಿ
೨. ಕಾವ್ಯ ಸೂತ್ರ—ಶ್ರೀ ಬಿ. ಎಚ್. ಶ್ರೀಧರ

**ಕನ್ನಡ ವ್ಯಾಕರಣ ಮತ್ತು ಭಾಷಾ ಚರಿತ್ರೆ :** (ಪತ್ರಿಕೆ ೫)

೧. ಶಬ್ದಮಣಿದರ್ಪಣ—ಶ್ರೀ ಡಿ. ಎಲ್. ನರಸಿಂಹಾಚಾರ್
೨. ಕನ್ನಡ ಕೈಪಿಡಿ—ಸಂಪುಟ ೧ (ಭಾಗ ೧ ಮತ್ತು ೪)—ಮೈಸೂರು ವಿಶ್ವವಿದ್ಯಾನಿಲಯ

**ಛಂದಸ್ಸು ಮತ್ತು ಅಲಂಕಾರ ಶಾಸ್ತ್ರ :** (ಪತ್ರಿಕೆ ೬)

೧. ಭಾರತೀಯ ಕಾವ್ಯಮೀಮಾಂಸೆ—ತೀ. ನಂ. ಶ್ರೀ
೨. ಕನ್ನಡ ಕೈಪಿಡಿ-ಸಂಪುಟ ೧ (ಭಾಗ ೨ ಮತ್ತು ೩) —ಮೈಸೂರು ವಿಶ್ವವಿದ್ಯಾನಿಲಯ

**ಸಂಸ್ಕೃತ :** (ಪತ್ರಿಕೆ ೭)

೧೯೬೯-೭೦ನೆಯ ಇಸವಿ ಬೆಂಗಳೂರು ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ನಿಯಮಿತವಾಗಿರುವ ಪಠ್ಯ ಪುಸ್ತಕ.

---

# ಗಳಗನಾಥರ ಜನ್ಮಶತಾಬ್ದ

ಕನ್ನಡದ ಹಿರಿಯ ಚೇತನಗಳನ್ನು ನೆನೆಸಿಕೊಳ್ಳುವಾಗ ಗಳಗನಾಥರ ಕಾರ್ಯಸಾಧನೆ ಕಣ್ಮುಂದೆ ಬಂದು ನಿಲ್ಲುತ್ತದೆ. ಗಳಗನಾಥರ ಜನನ ವಾದುದು ೫–೧–೧೮೬೯ರಲ್ಲಿ. ನಮ್ಮ ದೇಶದ ಅನೇಕ ಹಿರಿಯ ವ್ಯಕ್ತಿಗಳು ಹುಟ್ಟಿದ ದಶಕದಲ್ಲಿಯೇ ಅವರ ಜನನವಾಯಿತು. ಮಹಾತ್ಮಾ ಗಾಂಧಿ, ರವೀಂದ್ರ ಠಾಕೂರ್, ಲೋಕಮಾನ್ಯ ತಿಳಕ ಮುಂತಾದ ಮಹಾ ಚೇತನಗಳು ಅವತಾರವೆತ್ತಿದ ಕಾಲ ಅದು. ಅಂಥ ಸಮಯದಲ್ಲಿ ಕನ್ನಡ ನಾಡಿನಲ್ಲಿ ಹುಟ್ಟಿದ ಗಳಗನಾಥರು ಕನ್ನಡದ ಉದ್ಧಾರಕ್ಕಾಗಿ ಶ್ರಮಿಸಿ ಕೀರ್ತಿ ಗಳಿಸಿದ್ದಾರೆ. ಬೊಂಬಾಯಿ ಪ್ರಾಂತಕ್ಕೆ ಸೇರಿದ್ದ ಕನ್ನಡ ಭಾಗದಲ್ಲಿ ಅಂದು ಯಾವ ರೀತಿಯ ಅನುಕೂಲಗಳೂ ಕನ್ನಡಕ್ಕೆ ಇರಲಿಲ್ಲ. ಮಕ್ಕಳ ವಿದ್ಯಾಭ್ಯಾಸಕ್ಕೆ ಯಾವ ಅವಕಾಶವನ್ನೂ ಸರಕಾರ ಮಾಡಿಕೊಟ್ಟಿರಲಿಲ್ಲ. ಗಳಗನಾಥರಂಥ ಮೇಧಾವಿಗಳೂ ಪ್ರಾಥಮಿಕ ಶಾಲೆಯ ಮಟ್ಟದಿಂದ ಮುಂದುವರಿಯಲಾಗಲಿಲ್ಲ. ಆದರೆ ಶಾಲೆಯ ಶಿಕ್ಷಣ ದೊರಕದಿದ್ದರೇನು? ಬಾಳಿನ ಶಾಲೆಯಲ್ಲಿ, ಕಲ್ಪನೆಯ ಶಾಲೆಯಲ್ಲಿ ಗಾಢವಾಗಿ ಅಭ್ಯಾಸಮಾಡಿ ಹೃದಯವನ್ನೂ ಮನಸ್ಸನ್ನೂ ಬೆಳೆಸಿದ ಗಳಗನಾಥರಿಂದ ಎಷ್ಟೋ ಕಿರಿಯ ಚೇತನಗಳು ಬೆಳಕಿಗೆ ಬಂದವು. ಅಧ್ಯಾಪಕರಾಗಿ ಅವರು ಮಾಡಿದ ಕಾರ್ಯ ಕಡಮೆಯೇನಲ್ಲ. ಲೇಖಕರಾಗಿ ಅವರು ಬಿಟ್ಟುಹೋಗಿರುವ ಸಾಹಿತ್ಯರಾಶಿ ಅಪಾರ.

ಗಳಗನಾಥರ ಅಪಾರ ಕೃತಿರಚನೆಯಿಂದ ಅವರಿಗೆ ದೊರಕಿದುದು ಸಾಲದ ಹೊರೆ ಮಾತ್ರ. ತಲೆಯ ಮೇಲೆ ತಮ್ಮ ಗ್ರಂಥಗಳನ್ನು ಹೊತ್ತು ತಾವೇ ಊರೂರು ಅಲೆದು ಗ್ರಂಥಗಳನ್ನು ಮಾರಿ ತಮ್ಮ ಸಾಲದ ಹೊರೆಯನ್ನು ಇಳಿಸಿದರು. ತಮ್ಮ ಗ್ರಂಥಮಾಲೆಗೆ ಸಾಲವನ್ನು ತೀರಿಸುವ ಗ್ರಂಥಮಾಲೆಯೆಂದೇ ಹೆಸರಿಟ್ಟರು ಅವರು. ಆದರೂ ಕೊನೆಯುಸಿರು ಎಳೆಯುವ ವೇಳೆಗೆ ಇನ್ನೂ ಸಾಲ ಪೂರ್ತಿ ತೀರಿರಲಿಲ್ಲ. ಅವರು ಬರೆದ ಅನೇಕ ಗ್ರಂಥಗಳು ಇನ್ನೂ ಅಚ್ಚು ಕಂಡಿರಲಿಲ್ಲ. ಇನ್ನೂ ಈಗಲೂ ಅವು ಮುದ್ರಣವಾಗಿಲ್ಲ.

ಜನರ ಮನರಂಜನೆಯೊಂದನ್ನೇ ಗಳಗನಾಥರು ತಮ್ಮ ಗುರಿಯಾಗಿ ಇಟ್ಟುಕೊಂಡಿರಲಿಲ್ಲ. ಕನ್ನಡದಭಾಷೆ ಸಾಹಿತ್ಯಗಳ, ಸಂಸ್ಕೃತಿ ಸತ್ವಗಳ ಪರಿಚಯವನ್ನು ಮಾಡಿಕೊಟ್ಟು ಕನ್ನಡದ ಅಭಿಮಾನವನ್ನು ಕೆರಳಿಸಿ ಕನ್ನಡಿಗರನ್ನು ನಿದ್ದೆಯಿಂದೆಬ್ಬಿಸುವ ದೃಷ್ಟಿ ಅವರದಾಗಿತ್ತು.

ಗಳಗನಾಥರು ಬರೆದಿರುವ ಗ್ರಂಥಗಳಲ್ಲಿ ಹೆಚ್ಚಾಗಿ ಮರಾಠಿಯಿಂದ ಅನುವಾದವಾಗಿರುವ ಗ್ರಂಥಗಳಿವೆ. ಇವುಗಳಲ್ಲಿ ಮಹಾರಾಷ್ಟ್ರದ ಚರಿತ್ರೆಯ ಮತ್ತು ಸಂಸ್ಕೃತಿಯ ಪರಿಚಯವಾಗುತ್ತದೆ. ಈಶ್ವರೀ ಸೂತ್ರ, ಶಿವಪ್ರಭುವಿನ ಪುಣ್ಯ, ಮರಾಠರ ಅಭ್ಯುದಯ, ಛತ್ರಪತಿ, ಕುರುಕ್ಷೇತ್ರ ಮುಂತಾದ ಕಾದಂಬರಿಗಳಲ್ಲಿ ಮಹಾರಾಷ್ಟ್ರದ ಕಥೆಯೇ ಇದ್ದರೂ ನಮ್ಮ ಜನ ಬಂಕಿಮರ ಕಥೆಗಳನ್ನು ವೆಂಕಟಾಚಾರ್ಯರ ಅನುವಾದದ ಮೂಲಕ ಓದಿ ಮೆಚ್ಚಿಕೊಂಡಂತೆ, ಇವುಗಳನ್ನೂ ಮೆಚ್ಚಿದರು. ಅಲ್ಲದೆ, ಗಳಗನಾಥರ ಕ್ಷಾತ್ರತೇಜ, ರಾಣಾ ರಾಜಸಿಂಹ ಮುಂತಾದ ಕಾದಂಬರಿಗಳಲ್ಲಿ ರಾಜಪುತ್ರರ ಪ್ರತಾಪದ ಪರಿಚಯವನ್ನು ನಮ್ಮವರು ಪಡೆದರು. 'ಧರ್ಮರಹಸ್ಯ'ವೆಂಬ ಗ್ರಂಥದಲ್ಲಿ ಅಶೋಕ ಚಕ್ರವರ್ತಿಯ ಧರ್ಮಸಂಸ್ಥಾಪನೆಯ ಕಥೆಯಿದೆ.

**'ಮಾಧವ ಕರುಣಾವಿಲಾಸ'** ಎಂಬ ವಿಜಯನಗರ ಸಾಮ್ರಾಜ್ಯ ಸಂಬಂಧಿಯಾದ ಮಹಾ ಕಾದಂಬರಿ ಗಳಗನಾಥರ ಎಲ್ಲ ಚೈತನ್ಯಗಳನ್ನು ಪ್ರತಿಬಿಂಬಿಸುವ, ಕನ್ನಡ ಸಂಸ್ಕೃತಿಯನ್ನು ಪರಿಚಯ ಮಾಡಿಕೊಡುವ ಸತ್ವಶಾಲಿಯಾದ ಬೃಹದ್ಗ್ರಂಥ. ಇದನ್ನು ಓದಿ ನಾವು ಪುನೀತರಾಗಬೇಕು.

ಇಂಥ ಮಹಾನುಭಾವರ ಜನ್ಮದ ನೂರನೆಯ ವಾರ್ಷಿಕೋತ್ಸವವನ್ನು ಕನ್ನಡ ನಾಡು ಆಚರಿಸಿ ಈಗತಾನೆ ತನ್ನ ಕೃತಜ್ಞತೆಯನ್ನು ಸಮರ್ಪಿಸಿದೆ – ಈ ನಾಡಿನ ವರಪುತ್ರನೊಬ್ಬನಿಗೆ. ಮುಂದಾದರೂ ಗಳಗನಾಥರ ಗ್ರಂಥಗಳ ಪರಿಚಯ ಮಾಡಿಕೊಡುವ, ಅವರ ಜೀವನ ಪರಿಚಯಮಾಡಿಕೊಡುವ ಒಂದು ಬೃಹದ್ಗ್ರಂಥ ರಚಿತವಾಗಿ ಈ ಹಿರಿಯ ವ್ಯಕ್ತಿಗೆ ಸೂಕ್ತ ಸ್ಮಾರಕವಾಗಿ ಅದು ಬೆಳಗುತ್ತಿರಲಿ ಎಂದು ನುಡಿ ಹಾರೈಸುತ್ತದೆ.

# ಜಿ. ಪಿ. ರಾಜರತ್ನಂ – ಅರುವತ್ತು

ಕನ್ನಡದ ಆಧುನಿಕ ಸಾಹಿತಿಗಳಲ್ಲಿ ಬಹು ಪ್ರಸಿದ್ಧರಾದ ಕೆಲವೇ ಹಿರಿಯರಲ್ಲಿ ಶ್ರೀ ರಾಜರತ್ನಂ ಒಬ್ಬರು. ಸಾಹಿತ್ಯದಲ್ಲಿ ಹಿಂದಿನದನ್ನು ಮೆಚ್ಚಿಕೊಳ್ಳುವುದು ಸತ್ಸಂಪ್ರದಾಯವೇ ನಿಜ. ಆದರೆ ಹಿಂದಿನವರಂತೆಯೇ ಕೃತಿರಚನೆ ಮಾಡಿದರೆ ಚರ್ವಿತ ಚರ್ವಣವಾಗಿ ಬಿಡಬಹುದು. ಸತ್ವಶಾಲಿಯಾದ ಲೇಖಕನು ತನ್ನದೇ ಒಂದು ಮಾರ್ಗವನ್ನು ರೂಪಿಸಿಕೊಂಡು ಅದಕ್ಕೆ ಜನಪ್ರಿಯತೆಯನ್ನು ಒದಗಿಸಿಕೊಡುತ್ತಾನೆ. ಇಂಥ ನೂತನ ಮಾರ್ಗ ನಿರ್ಮಾಪಕರನ್ನು ಜನತೆ ಎಂದೆಂದಿಗೂ ಕೃತಜ್ಞತೆಯಿಂದ ಗೌರವಿಸುತ್ತದೆ. ಅಂಥ ಹೊಸ ಮಾರ್ಗರಚನೆಯಿಂದ ಕೀರ್ತಿಶಾಲಿಗಳಾಗಿದ್ದಾರೆ ಶ್ರೀ ರಾಜರತ್ನಂ.

'ರತ್ನನ ಪದಗಳು' ಕನ್ನಡದಲ್ಲಿ ಹೊಸ ಭಾಷಾಕೋಶವನ್ನೇ ನಿರ್ಮಾಣಮಾಡಿತು. ರತ್ನ, ಮುನಿಯ, ಪುಟ್ನಂಜಿ ಇವರು ಸಾಹಿತ್ಯ ಪ್ರಪಂಚದ ನೂತನ ಜೀವಂತ ವ್ಯಕ್ತಿಗಳಾಗಿ ಇಂದಿಗೂ ಕಂಗೊಳಿಸುತ್ತಿದ್ದಾರೆ. ಪುರುಷಸರಸ್ವತಿಯಂಥ ವಿಡಂಬನೆಯ ಗ್ರಂಥ ಕನ್ನಡಕ್ಕೆ ದೊರಕಿದುದೇ ಒಂದು ವೈಶಿಷ್ಟ್ಯ.

ಶಿಶು ಸಾಹಿತ್ಯ, ಪ್ರಾಚೀನ ಸಾಹಿತ್ಯ ಪರಿಚಯ, ಪಾಲಿಗ್ರಂಥಗಳ ಪರಿಚಯ, ಕೆಲವು ಉತ್ತಮ ಅನುವಾದಗಳು ಇವುಗಳಿಂದ ಕನ್ನಡದ ಬೊಕ್ಕಸವನ್ನು ಶ್ರೀ ರಾಜರತ್ನಂ ತುಂಬಿದ್ದಾರೆ. ವಿದ್ಯಾರ್ಥಿಪ್ರಿಯ ಅಧ್ಯಾಪಕರಾಗಿ ಅನೇಕ ವರ್ಷ ಭಾಷೆ ಸಾಹಿತ್ಯಗಳನ್ನು ಬೋಧಿಸಿದ್ದಾರೆ. ನಾಡನ್ನು ಸಂಚರಿಸಿ ಸಂಸ್ಕೃತಿಯ ಪರಿಚಯವನ್ನು ಜನರಿಗೆ ಒದಗಿಸಿದ್ದಾರೆ. ಇಂಥ ಕನ್ನಡದ ಲೇಖಕರು ಅರುವತ್ತು ವರ್ಷಗಳ ಸಾರ್ಥಕ ಬಾಳನ್ನು ನಡೆಸಿರುವುದು ಕನ್ನಡದ ಜನರಿಗೆಲ್ಲ ಸಂತೋಷ.

ಶ್ರೀಯುತರು ಶತಾಯುಗಳಾಗಿ ನಾಡಿನ ಸಾಹಿತ್ಯ ಕಾರ್ಯವನ್ನು ಮುಂದುವರಿಸಿಕೊಂಡುಹೋಗಲಿ, ಅವರಿಗೆ ಆ ಕಾರ್ಯದಲ್ಲಿ ಯಶಸ್ಸು ಲಭಿಸಲಿ ಎಂದು ಕನ್ನಡ ಸಾಹಿತ್ಯ ಪರಿಷತ್ತು ಹಾರೈಸುತ್ತದೆ.

Reg. No. B. G. 4—February 1969

Licensed to Post without pre-payment, Licence No 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಬೆಂಗಳೂರು-೧೮



ಸಂಪಾದಕ
ಜಿ. ವೆಂಕಟಸುಬ್ಬಯ್ಯ

ಸಂಪಾದಕ ಮಂಡಲಿ
ಶ್ರೀನಿವಾಸರಾವ್ ಕೊರಟಿ
ಆರ್. ರಾಚಪ್ಪ

# ಕನ್ನಡ ನುಡಿ



ಮಾರ್ಚಿ ೧೯೬೯

ಸಂಪುಟ ೩೨
ಸಂಚಿಕೆ ೩

ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ,
ಬೆಂಗಳೂರು-೧೮

# ಕನ್ನಡ ನುಡಿ

'ಕನ್ನಡ ನುಡಿ' ಕರ್ಣಾಟಕದ ಗೆಜೆಟಿಯರ್ ಆಗಬೇಕು

—ಬಿ.ಎಂ.ಶ್ರೀ



ಸಂಪುಟ : ೩೨

ಸಂಚಿಕೆ : ೩

ಮಾರ್ಚಿ ೧೯೬೯

•

ಈ ಸಂಚಿಕೆಯಲ್ಲಿ . . .



## ವಿಜಯ ವಿದ್ಯಾರಣ್ಯ

•

ಹೊನ್ನ ಮುಕುಟವನಿಟ್ಟೆ ಕನ್ನಡಾಂಬೆಗೆ ಅಂದು,
ವಿಜಯ ವಿದ್ಯಾರಣ್ಯ ನೀನುಧನ್ಯ ;
ನೀನೆ ತೋರಿದ ಬೆಳಕು ನಡೆಯಿಸುತಲಿಹುದೆಮ್ಮ
ಅದೆಸಾಕು ಬೇಕಿಲ್ಲವೆಮಗೆ ಅನ್ಯ.

ದೇವಿ ದುರ್ಗೆಯ ಭಜಿಸಿ ಅವಳ ದರ್ಶನ ಪಡೆದು
ಸ್ವರ್ಣ ವೃಷ್ಟಿಯನಂದು ಭುವಿಗೆ ಕರೆದೆ;
ಹಕ್ಕಬುಕ್ಕರ ಕೂಡಿ ಯವನರನು ಸದೆಬಡಿದೆ
ಸಾಮ್ರಾಜ್ಯವೈಭವಕೆ ನಾಂದಿ ಬರೆದೆ.

ವಿಜಯನಗರದ ಸ್ಥಳದಿ ಸಗ್ಗವನೆ ನಿರ್ಮಿಸಿದೆ
ಇತಿಹಾಸದೊಳು ಸ್ವರ್ಣಪುಟವ ತೆರೆದೆ.
ಕನ್ನಡಮ್ಮಗೆ ನೀನು ಅಮಿತ ಸೇವೆಯ ಗೈದೆ
ಪುರುಷಪುಂಗವನಾಗಿ ಜಗದಿ ಮೆರೆದೆ.

ಕನ್ನಡಮ್ಮನ ಸುತರ ಹೃದಯದೊಳು ನೀನಂದು
ದೇಶಭಕ್ತಿಯ ಬೀಜ ಬಿತ್ತಿ ನಡೆದೆ ;
ವಿಧಿ ವಿಧಾತನವೊಡನೆ ಚಕ್ಕಂದದಾಟವನು
ಆಡುತಾಡುತ ನುಡಿದೆ-ಮುಡಿದು ಗೆಲಿದೆ.

ನಿನ್ನ ಚರಣಕೆ ಮಣಿವೆ ಸ್ವೀಕರಿಸು ಓ ಗುರುವೆ
ಇನ್ನೊಮ್ಮೆ ಹುಟ್ಟಿಬಾ ದಿವ್ಯಜೀವಿ ;
ಕನ್ನಡದ ಮಕ್ಕಳೊಳು ಜಾಗೃತಿಯ ನೆಲೆಗೊಳಿಸು
ಅದ ನೋಡಿ ತೋಷಿಪಳು ನಾಡದೇವಿ.

•

ಜಿ. ಮಹಾಬಲೇಶ್ವರ ಭಟ್

## ಓ ನೋವೆ!

□

ಓ ನೋವೆ ಎಷ್ಟುದಿನ ಎದೆಯೊಳಗೆ ಕುಳಿತಿರುವೆ
ನಿನ್ನ ಅಧಿಕಾರವನು ನಡೆಸುತಿರುವೆ
ನಿನ್ನದಾಸ್ಯದಿ ನಾನು ಬಳಲಿ ಬಸವಳಿದಿರುವೆ
ಕುಗ್ಗಿ ಕುಸಿಯುತ ದಿನವು ಕೊರಗುತಿರುವೆ.
ನಗಬೇಕು ನಗಬೇಕು ಜನನೋಡೆ ನಗಬೇಕು
ನಗುವಾಗ ಬೆನ್ನಿನಲಿ ಕಾಯುತಿರುವೆ
ಕೃತಕನಗೆ ನಗಲಾರೆ ನಗಲಾರೆ ನಾನಿನ್ನು
ಬಿಡುಗಡೆಯ ಗಳಿಗೆಯನು ಬಯಸುತಿರುವೆ.
ಬಿಟ್ಟುಬಿಡು ಒಂದುಕ್ಷಣ ನನ್ನೆದೆಯ ಪಂಜರವ
ಒಂದುಸಲ ಶುದ್ಧನಗು ಚೆಲ್ಲಿಬಿಡುವೆ
ಈ ಕಪ್ಪು ಕೋಣೆಯನು ಬೆಳಗಿ ಬಿಡು ನೀನೊಮ್ಮೆ
ಹೊರಜಗದ ಬೆಳಕನ್ನು ನೋಡಿ ಬರುವೆ.
ನಗುವವರ ಮುಂದುಗಡೆ ನಾ ಅಳುತ ಕೂಡುವುದೆ
ನಗೆಯ ಬೆಳಕಿಗೆ ಕಪ್ಪ ಸವರಲಾರೆ
ಜಗವೆಲ್ಲ ಎಂದೆಂದು ಹೀಗೆಯೇ ನಗುತಿರಲಿ
ನಾನೊಬ್ಬ ಅಳಬಲ್ಲೆ ನಲಿಯಲಾರೆ
ಅವರ ಆ ನಗೆಯಲ್ಲಿ ಬೆರೆಯಲಾರೆ.
ನಿನ್ನ ಕಾಲನು ಒತ್ತಿ ನಿನ್ನ ಮೈಕೈ ಸವರಿ
ಎಲ್ಲ ಬಗೆ ಸೇವೆಯನು ಮಾಡುತಿರುವೆ
ಒಂದು ದಿನ ರಜಕೊಟ್ಟು ನಗೆ ಜನಕೆ ಕಳಿಸಿಕೊಡು
ಇಷ್ಟನೇ ನಾನಿನ್ನ ಬೇಡುತಿರುವೆ.

□

**ಸು. ರುದ್ರಮೂರ್ತಿಶಾಸ್ತ್ರಿ**

## ನಾವು ಮಾಡಿದ್ದು

□

" ಇವನು ಬದುಕಿದ್ದಾಗ,
ಇಷ್ಟು ಒಳ್ಳೆಯ ಹಾಸಿಗೆಯ ಮೇಲೆ,
ಎಂದೂ ಮಲಗಿರಲಿಲ್ಲ."

ನಿನ್ನ ಬೂದಿಯ ಮೇಲೆ ನಾಲ್ಕುಸಾಲು,
ಹಾಲುಗಲ್ಲಿನ ಮೇಲೆ ಕೊನೆಯ ಮಾತು.
ಬತ್ತಲೆಯ ಕನಸನ್ನು ನಕ್ಕು ಹೀಯಾಳಿಸಿವೆ
ನಾಯಬಾಲದ ಡೊಂಕು ಗಾದೆಮಾತು.

ದೇಶವನ್ನೆಲ್ಲಾ ಉಸಿರಾಗಿ ನಡೆಸಿದ
ಗಾಳಿಯನ್ನು,
ಮರದ ಹಲಗೆಯ ಮಧ್ಯೆ
ಕೂಡಿದ್ದೇವೆ.
ಬಿದಿರೆಲೆಯ ಕಡತದಲ ಗೆದ್ದಲಿನ ಮನೆಯಲ್ಲಿ
ನಿನ್ನ ಕನಸನು ಮರೆತು
ಹೂತಿದ್ದೇವೆ.

ಮಣ್ಣಿನಾಳದಿಂದ ಮೇಲಕೆದ್ದು ಬಂದ
ನಿನ್ನನ್ನು,
ಗಗನಮಂದಿರದಲ್ಲಿ ಕೂಡಿಸಿದ್ದೇವೆ.
ನೀನು ಹತ್ತಿಸಿ ಹೋದ ದೀಪದ ಬೆಳಕಿನಲ್ಲಿ
ಹಗಲು ದರೋಡೆಯನ್ನು ಮಾಡಿದ್ದೇವೆ.
ಹಸಿರಿನುಸುಬಿನ ಮೇಲೆ, ಬೆವರ ನೀರನು ಹೊಯ್ದು,
ಮರ್ಯಾದೆ ಮಹಲನ್ನು ಕಟ್ಟಿದ್ದೇವೆ.

ನಮ್ಮ ರೂಢಿಯೆ ಇಷ್ಟು, ಸಂಪ್ರದಾಯವೆ ಹೀಗೆ
ನೀನೇನೂ ಇದಕ್ಕೆ ಅಪವಾದವಲ್ಲ.
ಮಾತಿನ ಮಹತ್ವವನ್ನು ನಾವು ಅರಿತಿದ್ದೇವೆ.
ಪೂಜೆ ಮಾಡದೆ ನಿನ್ನ ಬಿಡುವುದಿಲ್ಲ.
ಯಾವ ಚಿಂತೆಯು ನಿನಗೆ ಈಗ ಇಲ್ಲ
ಎಚ್ಚರಾಗುವವರೆಗು ಲೋಕವಿಲ್ಲ

" ಇವನು ಬದುಕಿದಾಗ,
ಇಷ್ಟು ಒಳ್ಳೆಯ ಹಾಸಿಗೆಯ ಮೇಲೆ,
ಎಂದೂ ಮಲಗಿರಲಿಲ್ಲ."
ಅದನ್ನು ಬಯಸಲೂ ಇಲ್ಲ.

□

**ರಾಘವೇಂದ್ರ**

# ದಿವಂಗತ ಹೊಸಕೆರೆ ಚಿದಂಬರಯ್ಯನವರ ಸಾಹಿತ್ಯ ಸೇವೆ

**ಜೆ. ಗೋ. ರಮೇಶ್**

ಶ್ರೀಮಾನ್ ಚಿದಂಬರಯ್ಯನವರು ಕ್ರಿ. ಶ. ೧೮೬೫ರಲ್ಲಿ ಜನಿಸಿದರು. ಪ್ರಾರಂಭಕ್ಕೆ ಬಲು ಕಷ್ಟಜೀವನ ಅನುಭವಿಸಿದರು. ಅಂದಿನ ಕಾಲದಲ್ಲಿ ವಿದ್ಯಾವಂತರ ಸಂಖ್ಯೆ ತೀರ ಕಡಿಮೆ. ವಿದ್ಯಾಭ್ಯಾಸವೂ ಇಂದಿನಷ್ಟು ಸುಲಭವಾಗಿರಲಿಲ್ಲ. ಚಿದಂಬರಯ್ಯನವರ ವಿಷಯದಲ್ಲಿ ಇದು ಸತ್ಯವಾಯಿತು. ಅವರ ೧೬ನೆಯ ವಯಸ್ಸಿನವರೆಗೂ ಅವರನ್ನು ಇದು ಕಾಡಿಸಿತು. ಆಗ ಇವರು ಒಂದು ಚಿಲ್ಲರೆ ಅಂಗಡಿಯಲ್ಲಿ ಐದು ರೂ. ವೇತನಕ್ಕೆ ಕೆಲಸ ಮಾಡುತ್ತಿದ್ದು ಒಂದು ದಿನ ಒಡೆಯನ ಬೈಗುಳದಿಂದ ಮನನೊಂದವರಾಗಿ "ಏನಾದರೂ ಸರಿ, ವಿದ್ಯಾಭ್ಯಾಸ ಮಾಡಲೇ ಬೇಕು" ಎಂದು ಅಂದೇ ಮಾಗಡಿಗೆ ಚಿತ್ರದುರ್ಗದಿಂದ ಪ್ರಯಾಣ ಬೆಳೆಸಿದರು. ೧೭ನೆಯ ವಯಸ್ಸಿನಲ್ಲಿ ಸ್ವಂತ ವ್ಯಾಸಂಗದಿಂದ ಕನ್ನಡ ಲೋಯರ್ ಸೆಕೆಂಡರಿ (L.S.) ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಹಾಗೂ ೧೮ನೆಯ ವಯಸ್ಸಿನಲ್ಲಿ ಪ್ರಾಥಮಿಕ ಶಾಲೆಯ ಉಪಾಧ್ಯಾಯರಾಗಿದ್ದು ೨೦ನೆಯ ವಯಸ್ಸಿನೊಳಗೆ ಇಂಗ್ಲಿಷ್ L. S. ಪರೀಕ್ಷೆಯನ್ನು ಮಾಡಿಕೊಂಡರು ಅನಂತರ ಏ. ವಿ. ಸ್ಕೂಲ್ ಎಂಬಲ್ಲಿ ಹೆಡ್ಮಾಸ್ಟರಾದರು. ಮತ್ತೆ ಪ್ರೈವೇಟಾಗಿ ಅಪ್ಪರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಹೆಡ್ಮಾಸ್ಟರಾಗಿಯೇ ಇದ್ದರು. ೩೦ನೆಯ ವಯಸ್ಸಿನಲ್ಲಿ ಅಪ್ಪರ್ ಸೆಕೆಂಡರಿ ಟ್ರೈನಿಂಗಿಗೆ ಚುನಾಯಿತರಾದರು. ಆ ವೇಳೆಗೆ 'ಮನಃಶಿಕ್ಷಣ ಬೋಧನೆಯ ಸ್ವಭಾವ, ಬೋಧನ ಕ್ರಮ ಮತ್ತು ಉಪಾಧ್ಯಾಯರ ಯೋಗ್ಯತೆಗಳು' ಇವೇ ಮುಂತಾದ ಶಿಕ್ಷಣ ಗ್ರಂಥಗಳನ್ನು ಬರೆದು ಹೆಸರುವಾಸಿಯಾಗಿದ್ದರು. ಹೀಗಾಗಿ ಪ್ರಿನ್ಸಿಪಾಲರಾಗಿದ್ದ ಶ್ರೀ ಎಂ. ಹಿರಿಯಣ್ಣನವರು ಇವರೇ ಶಿಕ್ಷಕರಿಗೆ ಶಿಕ್ಷಣ ನೀಡಬಲ್ಲರು ಎಂದು ಹಿಂದಕ್ಕೆ ಕಳುಹಿಸಿದರಂತೆ.

## ವ್ಯಕ್ತಿತ್ವ-ನಿತ್ಯಜೀವನ-ಸಾಧನೆ

ಚಿದಂಬರಯ್ಯನವರು ಸರಳ ಜೀವಿಗಳು. ಸಹನಾಶೀಲ ಪ್ರವೃತ್ತಿವುಳ್ಳವರು. ಮಕ್ಕಳಲ್ಲಿ ಪ್ರೀತಿಯನ್ನು ಹಿರಿಯರಲ್ಲಿ ಗೌರವವನ್ನು ಉಳ್ಳವರೂ ಆಗಿದ್ದರು. ಗೆಳೆಯರಲ್ಲಿ ವಿಶ್ವಾಸ ಅಪಾರ ಇವರಿಗೆ. ಇವರಲ್ಲಿ ಹೆಚ್ಚು ಸ್ನೇಹ ಗಳಿಸಿದ ವಿದ್ವಾಂಸರೆಂದರೆ ಶ್ರೀ ವೈ.ಸುಬ್ಬರಾವ್ (ಈಗ ಹೊಳೆನರಸೀಪುರದ ಸ್ವಾಮಿಗಳು) ಇವರ ಸ್ನೇಹ ದೇಹ ಎರಡು, ಆದರೆ ಆತ್ಮ ಒಂದೇ ಎಂಬಂತೆ ಇತ್ತು. ಮೊದಲಿಗೆ ಕಡೂರಿನಲ್ಲಿ ಇವರಿಬ್ಬರ ಸ್ನೇಹ ಬೆಳೆಯಿತು. ಚಿದಂಬರಯ್ಯನವರ ಬಗ್ಗೆ ಒಂದು ಕಡೆ ಶ್ರೀ ಸುಬ್ಬರಾವ್ ಹೀಗೆ ತಿಳಿಸಿದ್ದಾರೆ:

"ಚಿದಂಬರಯ್ಯನವರಿಗೆ ಕನ್ನಡ, ಸಂಸ್ಕೃತ, ಇಂಗ್ಲಿಷ್ ಈ ಮೂರು ಭಾಷೆಗಳಲ್ಲಿಯೂ ಪಾಂಡಿತ್ಯವಿತ್ತು. ಕಾವ್ಯರಸವನ್ನು ಜೊತೆಯವರಿಗೂ ಉಣಿಸಬಲ್ಲ ಚತುರರಾಗಿದ್ದರು. ಸ್ವತಃ ಕವಿಗಳೂ ಆಗಿದ್ದರು. ಶಾಲೆಯ ಕೆಲಸದಲ್ಲಿ ಅತ್ಯಂತ ಆದರವುಳ್ಳವರಾಗಿದ್ದರು. ಬಿಡುವಿನ ಕಾಲದಲ್ಲಿ ಪರೀಕ್ಷೆಗೆ ಓದುವ ವಿದ್ಯಾರ್ಥಿಗಳಿಗಿಂತಲೂ ಹೆಚ್ಚಿನ ಅಕ್ಕರೆಯಿಂದ ಗ್ರಂಥಗಳನ್ನು ಚಿಂತನೆ ಮಾಡುತ್ತಿದ್ದರು."

ಚಿದಂಬರಯ್ಯನವರು ಕೆಲಸದಲ್ಲಿದ್ದಾಗ ತಮ್ಮ ದೈನಂದಿನ ಕಾರ್ಯಕ್ರಮಗಳಲ್ಲಿ ಸ್ವಲ್ಪವೂ ಲೋಪ ಉಂಟುಮಾಡುತ್ತಿರಲಿಲ್ಲ. ಸೂರ್ಯೋದಯಕ್ಕೆ ಮುಂಚೆಯೆ ಎದ್ದು ಸ್ನಾನಾದಿಗಳನ್ನು ಮುಗಿಸಿ ಪೂಜೆಗೆ ಕೂಡುತ್ತಿದ್ದರು. ಈ ಪೂಜೆ ಕೆಲವು ಗಂಟೆಗಳ ಕಾಲ ಸಾಗುತ್ತಿದ್ದವು. ರಾತ್ರಿವೇಳೆ ಭಜನೆ ಮಾಡುತ್ತಿದ್ದರು. ಹೆಚ್ಚು ಮಾತಿನವರಲ್ಲ. ಹೊರಗಿನ ಆಡಂಬರವನ್ನು ಕಂಡವರಲ್ಲ. ಸಂಪಾದನೆಗೋಸ್ಕರ ಗ್ರಂಥ ರಚನೆ ಮಾಡುತ್ತಿರಲಿಲ್ಲ. ಮೇಲಾಗಿ ಸ್ವಂತ ಪ್ರಯತ್ನದಿಂದ ಸಂಪಾದಿಸಿ ಅದನ್ನು ನಾಡಿನ ಸೇವೆಗೆ ಗ್ರಂಥ ರೂಪದಲ್ಲಿ ಸೂರೆಗೊಡುತ್ತಲೇ ಇದ್ದರು.

೧೯೦೬ರಲ್ಲಿ ಇವರಿಗೆ ಪತ್ನಿ ವಿಯೋಗವಾದ ಮೇಲೆ ಶಂಕರಾನಂದರ ಗೀತಾತಾತ್ಪರ್ಯ ಬೋಧಿನಿಯನ್ನು ಓದಿ ವೇದಾಂತ ಹುಚ್ಚು ಹಿಡಿಸಿಕೊಂಡುಬಿಟ್ಟರು. ದಾವಣಗೆರೆ ಏ. ವಿ. ಸ್ಕೂಲ್‌ನಲ್ಲಿದ್ದಾಗ ಕುರ್ತುಕೋಟಿ ಮಹಾಭಾಗವತರ ಆಪ್ತತೆ ಉಂಟಾಗಿ ಎರಡು ಮೂರು ವರ್ಷ ರಜ

[ದಿನಾಂಕ ೨೨-೬-೧೯೬೮ರಂದು ಮಲ್ಲೇಶ್ವರಂ ಗಾಂಧೀ ಸಾಹಿತ್ಯ ಸಂಘದಲ್ಲಿ ಕವಿ-ಕೃತಿ ಸ್ಮರಣೆ ಮಾಲೆಯಲ್ಲಿ, ದಿವಂಗತ ಹೊಸಕೆರೆ ಚಿದಂಬರಯ್ಯನವರ ಸಾಹಿತ್ಯ ಸೇವೆ ಕುರಿತು ಪಂ. ಶ್ರೀ ಎ. ರಾಮಚಂದ್ರರಾವ್ ಮತ್ತು ಶ್ರೀ ಕಂ. ಸು. ವೆಂಕಟಾದ್ರಿಶರ್ಮರವರುಗಳು ನೀಡಿದ ಉಪನ್ಯಾಸಗಳ ಸಾರಾಂಶ.—ಲೇ.]

ಪಡೆದು ಕುರ್ತುಕೋಟಿಯಲ್ಲಿ ಇದ್ದರು. ಆಗ ಅವರ ಚಿತ್ತವು ಧ್ಯಾನಯೋಗ, ಭಕ್ತಿಯೋಗಗಳಲ್ಲಿ ನೆಲೆಗೊಂಡಿತು. ಇಲ್ಲೇ ಅವರು 'ಪರಮಾರ್ಥ' ಎಂಬ ಮಾಸಪತ್ರಿಕೆಯ ಸಂಪಾದಕರಾಗಿಯೂ ಕೆಲಸ ಮಾಡಿದರು.

ಸುಮಾರು ೧೯೧೧ರಲ್ಲಿ ಶ್ರೀ ಭಾಗವತರ ದರ್ಶನ ಫಲವಾಗಿ ಅವರು ತೀವ್ರ ವೈರಾಗ್ಯದಿಂದ ಗೊಂದಾವಳಿಯ ಬ್ರಹ್ಮಚೈತನ್ಯ ಮಹಾರಾಜರೆಂಬ ಸದ್ಗುರುಗಳ ಸೇವೆ ಮಾಡಿದರು. ಕೊನೆಗೆ ಕುರ್ತುಕೋಟಿಯಲ್ಲಿ ಬ್ರಹ್ಮ ಚಿಂತನೆ ನಡೆಸಿದರು. ಮತ್ತೆ ಏ. ವಿ. ಸ್ಕೂಲ್‌ಗೆ ವಾಪಸ್ಸು ಬಂದು ಸ್ವಲ್ಪ ದಿನಗಳ ನಂತರ ರಾಜೀನಾಮೆ ಕೊಟ್ಟರು. ಇದಕ್ಕೆ ಕಾರಣ ಅವರ ಅಪಾರವಾದ ವೇದಾಂತದ ಒಲವು. ಹೀಗಾಗಿ ನಮಗೆ ಇಂದು ಅವರ ಅನೇಕ ವೇದಾಂತ ಗ್ರಂಥಗಳು ದೊರತಿವೆ.

ಚಿದಂಬರಯ್ಯನವರು ಸ್ಫಟಿಕದಂತೆ ಸ್ವಚ್ಛ. ಕೆಲಸಕ್ಕೆ ತಕ್ಕ ಮಾತುಗಾರರು. ೧೯೧೭ರ ವೇಳೆಗೆ ಅವರು ಬೆಂಗಳೂರಿಗೆ ಬಂದರು. ಆಗ ಬೆಂಗಳೂರಿನಲ್ಲಿ ಕೊಪ್ಪಳ ಜಯರಾಮಾಚಾರ್ಯರು ಹರಿಕೀರ್ತನ ಸಮ್ಮೇಳವೊಂದನ್ನು ಏರ್ಪಡಿಸಿದ್ದರು. ಚಿದಂಬರಯ್ಯನವರು ಆಗ 'ಭಕ್ತಬಂಧು' ಎಂಬ ಮಾಸಪತ್ರಿಕೆ ಹೊರಡಿಸಿದರು. ಆಗಿನಿಂದ ಚಿದಂಬರಯ್ಯನವರು ಪುರಾಣದ ಆಖ್ಯಾನಗಳನ್ನು ಕೀರ್ತನ ಪರವಾಗಿ ಬರೆಯುತ್ತಾ ಬಂದು ಕೊನೆಗೆ ಅದನ್ನು 'ಕೀರ್ತನ ಕಂಠಾಭರಣ' ಎಂಬ ಹೆಸರಿನಿಂದ ಒಟ್ಟುಗೂಡಿಸಿ ಪ್ರಕಟಿಸಿದರು. ಈ ಸಮಯದಲ್ಲಿ ಧಾರವಾಡದ ದೇಶೀಯ ವಿದ್ಯಾಶಾಲೆಯವರಿಂದ ಕರೆಬಂದು ಅಲ್ಲೂ ಎರಡು ಮೂರು ವರ್ಷಗಳು ಇದ್ದು ಅನೇಕ ಗ್ರಂಥಗಳನ್ನು ರಚಿಸಿದರು. 'ಕರ್ನಾಟಕ ಕವಿರತ್ನ' ಎಂಬ ಪ್ರಶಸ್ತಿ ಗಳಿಸಿ ಸುಮಾರು ಹತ್ತು ವರ್ಷಗಳಲ್ಲಿ ಮೂರು ನಾಲ್ಕು ಸಲ ಬಹುಮಾನಿತರಾದರು. ಒಂದು ವಿಶೇಷವೆಂದರೆ ಇವರು ರಚಿಸಿದ ಗ್ರಂಥಗಳು ಇವರ ಕಾಲದಲ್ಲೇ ಪಠ್ಯ ಗ್ರಂಥಗಳಾಗಿ ಮಾರ್ಪಟ್ಟವು. ಜತೆಗೆ ಅನೇಕ ಪುಸ್ತಕಗಳು ಪುನರ್ಮುದ್ರಣ ಕಂಡವು.

ಜೀವನದ ಕೊನೆಯಲ್ಲಿ ಪೂರ್ಣ ಶಾಂತಿ ಬಯಸಿ ತಿರುಮಕೂಡಲ ನರಸೀಪುರದಲ್ಲಿ ನೆಲೆಸಿ ಮೌನ, ಜಪ, ಗ್ರಂಥರಚನೆ ಇವುಗಳಲ್ಲಿ ತೊಡಗಿದ್ದು ಅದೇ ಸ್ಥಳದಲ್ಲಿ ೧೭-೪-೧೯೩೪ರಂದು ಜೀವನ ಸಮಾಪ್ತಿಗೊಳಿಸಿದರು.

## ಗ್ರಂಥಗಳ ಸ್ಥೂಲ ಪರಿಚಯ

ಇವರು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿರುವ ಸೇವೆ ಅಪಾರ. ಇವರು ಬಡವಾಗಿದ್ದ ಕನ್ನಡ ಸಾಹಿತ್ಯದ ಮನೆಯನ್ನು ಶ್ರೀಮಂತಗೊಳಿಸಿದರು. ಅಂದಿನ ಸಾಹಿತಿಗಳು ಬೆರಳೆಣಿಸುವಷ್ಟು ಮಂದಿ. ಆ ಕಾಲದಲ್ಲಿ ಶ್ರೀ ಚಿದಂಬರಯ್ಯನವರು ಬರೆದ ಒಟ್ಟು ಗ್ರಂಥಗಳು ೧೦೮. ಇವರ ಸಾಹಿತ್ಯದ ಪ್ರಕಾರ ೧೨. ಅವನ್ನು ಹೀಗೆ ವಿಂಗಡಿಸಬಹುದು. ಸಂಪಾದನ, ಕೀರ್ತನ ಸಾಹಿತ್ಯ, ಪ್ರಬಂಧ ಸಾಹಿತ್ಯ, ಧರ್ಮ ಗ್ರಂಥಗಳು, ವೇದಾಂತ ಸಾಹಿತ್ಯ, ಶಿಕ್ಷಣ ಗ್ರಂಥಗಳು, ನಾಟಕ, ಸ್ತೋತ್ರ, ಭಗವದ್ಗೀತೆ, ಜೀವನ ಚರಿತ್ರೆ, ದೇಶ ಭಕ್ತಿ ಮತ್ತು ಕಾದಂಬರಿ. ಹೀಗೆ ಇವರ ಸಮಸ್ತ ಸಾಹಿತ್ಯ ಸೇವೆಯಲ್ಲೂ ಅಧ್ಯಾಪಕನ ಪ್ರಭಾವ ಎದ್ದು ಕಾಣುತ್ತದೆ. ಇವರ ಭಾಷೆ ಸರಳ, ಶುದ್ಧ ಮತ್ತು ಸತ್ವಪೂರ್ಣ. ಗಾದೆಗಳ, ನುಡಿಮುತ್ತುಗಳ ಉಪಯೋಗ ರಮ್ಯ.

ಗ್ರಂಥಗಳಿಗೆ ಹೆಸರಿಡುವಿಕೆ ಇವರ ಒಂದು ಸಿದ್ಧ ಕಲೆ. ಹೆಸರೇ ಓದುಗರಿಗೆ ಸ್ಫೂರ್ತಿ ಉಂಟುಮಾಡುವುವು. ಉದಾಹರಣೆಗೆ: ಗೀತಾರ್ಥ ಚಂದ್ರಿಕೆ, ಗುಣನಿರೂಪಣೆ, ಭಗವದ್ಗೀತಾಸಾರ ವಿಚಾರ ಇತ್ಯಾದಿ.

ಒಂದು ಗಮನಿಸಬೇಕಾದ ಅಂಶವೆಂದರೆ, ಅಧ್ಯಾಯವೊಂದು ಮುಗಿದು ಮುಂದಿನ ಅಧ್ಯಾಯ ಪ್ರಾರಂಭಿಸುವಾಗ ಹಿಂದಿನ ಅಧ್ಯಾಯದ ಸಾರವನ್ನೆಲ್ಲ ಕೇವಲ ಮೂರು ನಾಲ್ಕು ಸಾಲುಗಳಲ್ಲಿ ಅಡಗಿಸಿ ಬರೆದಿರುವುದು. ಇವರ ಗದ್ಯ ಬರವಣಿಗೆ ಅನೇಕರಿಗೆ ಮಾರ್ಗದರ್ಶಕವಾಗಿದೆ. ಗದ್ಯ ಸಾಹಿತ್ಯಕ್ಕೆ ತಳಹದಿ ಹಾಕಿದ ಹಿರಿಯರಲ್ಲಿ ಇವರೂ ಒಬ್ಬರು. ಉತ್ತಮ ಅನುವಾದಕರು. ಹೊಸ ಹೊಸ ಛಂದಸ್ಸಿನ ಬಳಕೆಯಲ್ಲಿ ಮೊದಲಿಗರ ಗುಂಪಿನಲ್ಲಿ ಸೇರಿದ್ದರು. ಅನುಷ್ಟುಪ್ಪು, ಸಾಕಿ, ದಂಡಿ ಛಂದಸ್ಸುಗಳ ಉಪಯೋಗದಲ್ಲಿ ಇವರೇ ಮೊದಲಿಗರು. ಅನುಷ್ಟುಪ್ ಛಂದಸ್ಸಿನಲ್ಲಿ "ಮಾರುತಿಯ ಚರಿತ್ರೆ" ಎಂಬ ಕಾವ್ಯ ಬರೆದಿದ್ದಾರೆ.

ಇವರ ಗದ್ಯಗಳಲ್ಲಿ ಇವರೇ ಬಳಕೆಗೆ ತಂದಿರುವ ನುಡಿಗಳ ಬೆಡಗು ಎಷ್ಟೋ ಜನ ತರುಣರನ್ನು ಮುಗ್ಧಗೊಳಿಸುತ್ತದೆ.

ಇವರ ಅನೇಕ ಗ್ರಂಥಗಳಲ್ಲಿ ಎದ್ದು ಕಾಣುವುವು ವೇದಾಂತ ಮತ್ತು ಗೀತೆಯನ್ನು ಕುರಿತ ಗ್ರಂಥಗಳು.

ಗೀತೆಯನ್ನು ಕುರಿತು ಒಟ್ಟು ಆರು ಗ್ರಂಥಗಳನ್ನು ಬರೆದಿದ್ದಾರೆ. ಅದು ಗೀತೆಯ ಕೈಗನ್ನಡಿ, ಮಕ್ಕಳ ಕೈಗನ್ನಡಿ, ಗೀತಾರ್ಥ ವಿವರಣೆ, ಗೀತಾರ್ಥ ಚಂದ್ರಿಕೆ, ಭಗವದ್ಗೀತಾಸಾರ ವಿಚಾರ ಮತ್ತು ಗೀತೆಯ ತಿರುಳು. ಇವುಗಳು ಸುಲಭವೂ ಅರ್ಥಗರ್ಭಿತವೂ ಆಗಿವೆ. ಜತೆಗೆ ಉಪಮೆಗಳಿವೆ. "ಗೀತಾರ್ಥ ಚಂದ್ರಿಕೆ" ಎಂಬ ಗ್ರಂಥ ಸುಮಾರು ಐದುಬಾರಿ ಮುದ್ರಣಾಲಯವನ್ನು ಕಂಡಿದೆ.

ಇವರ ಒಟ್ಟು ವೇದಾಂತ ಗ್ರಂಥಗಳು ೧೫. ಈ ಗ್ರಂಥ

ಗಳನ್ನು ಬರೆಯುವ ಮುನ್ನ ಕಾಲಟಿಯಲ್ಲಿ ಕುಂಭಾಭಿಷೇಕ ನಡೆಯಿತು. ಆಗ ಇವರು ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳಲ್ಲಿ ಭಾಷ್ಯ ಶಾಂತಿಯನ್ನು ಮಾಡಿಸಿಕೊಂಡು ಧಾರವಾಡದಲ್ಲಿ ಹಾನಗಲ್ಲ ವಿರೂಪಾಕ್ಷ ಶಾಸ್ತ್ರಿಗಳವರಲ್ಲಿ ಸೂತ್ರ ಭಾಷ್ಯವನ್ನು ಶ್ರೀ ವೈ. ಸುಬ್ಬ ರಾಯರ ಜತೆ ಅಭ್ಯಾಸ ಮಾಡಿದರು. ಈ ಗ್ರಂಥಗಳೂ ಅಷ್ಟೇ ರಸಮಯವಾಗಿವೆ. ಅಲ್ಲಿ ಬಂದಿರುವ ಕೆಲವು ನುಡಿ ಮುತ್ತುಗಳನ್ನು ಇಲ್ಲಿ ಉದಾಹರಿಸಲಾಗಿದೆ.

"ವೇದಾಂತವೆಂಬುದು ಬ್ರಹ್ಮಾಂಡವನ್ನೇ ತೂಕಕ್ಕೆ ಹಾಕಿ, ಅದರ ಕೊರಳಿಗೆ ಅದರ ಬೆಲೆಯ ಚೀಟಿಯನ್ನು ಕಟ್ಟುವ ಶಾಸ್ತ್ರ."

"ಸಂಸಾರದಲ್ಲಿ ಹುರುಳಿಲ್ಲವೆಂಬುದೊಂದೇ ಅದರ ದೋಷ ವಲ್ಲ. ಅದರ ಒದ್ದಾಟ ಎಂತಹ ಕೆಚ್ಚೆದೆಯವರನ್ನಾದರೂ ಗಾಬರಿಗೊಳಿಸುವಂತಹುದು."

"ವೇದಾಂತವು ಭೂಲೋಕದಲ್ಲಿಯೇ ಅನುಭವಕ್ಕೆ ಬರುವ ನಂದನವನ. ಇದಕ್ಕೆ ಇಂದ್ರನ ವನದ ದ್ರಾಕ್ಷಿಗಳು ಅನಗತ್ಯ."

ಇಂತಹ ವಾಕ್ಯಗಳು ಅನೇಕ ಇವೆ. ಇವರ ವೇದಾಂತ ಗ್ರಂಥಗಳು – ಈಶಸಾರ, ಜೀವನ್ಮುಕ್ತಿ ವಿವೇಕ, ಬ್ರಹ್ಮ ಸೂತ್ರದ ಬೆಳಕು, ಭಕ್ತಿಯೋಗ, ವೇದಾಂತದ ರೂಪರೇಖೆ, ವೇದಾಂತದ ಗುಟ್ಟು, ವೇದಾಂತದ ಜೀವಾಳ ಇತ್ಯಾದಿ. ಶಿಕ್ಷಣದ ಬಗ್ಗೆ ಕೆಲವು ಗ್ರಂಥಗಳಲ್ಲಿ ಚಿದಂಬರಯ್ಯನವರು ಹೀಗೆ ಹೇಳಿದ್ದಾರೆ :

"ಈಗಿನ ವಿದ್ಯಾಭ್ಯಾಸ ಕ್ರಮದಲ್ಲಿ ತನ್ನ ಅರಿವು ತನಗೆ ಉಂಟಾಗಬೇಕೆಂಬ ಸೊಲ್ಲು ಕೂಡ ಇಲ್ಲ ಮತ್ತು ತನ್ನನ್ನು ತಾನು ಅರಿಯಬೇಕೆಂಬ ಮಾತಿಗೆ ಅರ್ಥವೂ ಇಲ್ಲ."

"ನಿಜವಾಗಿಯೂ ವಿದ್ಯಾಭ್ಯಾಸಕ್ಕೆ ಆರಂಭವೆಂಬುದೇ ಇಲ್ಲ."

ಕೀರ್ತನ ಕಂಠಾಭರಣ: ಅನೇಕ ಹರಿಕಥಾ ಉಪಾಖ್ಯಾನಗಳನ್ನೊಳಗೊಂಡ ಬೃಹದ್ಗ್ರಂಥ. (ಬೇರೆ ಬೇರೆ ಭಾಗಗಳಲ್ಲೂ ಸಿಗುತ್ತವೆ.) ಇಲ್ಲಿನ ಕೀರ್ತನೆಗಳಲ್ಲಿ ಹಳೆಯ ಕವಿಗಳ ಸಾಹಿತ್ಯವನ್ನೆಲ್ಲ ಅಡಗಿಸಿದ್ದಾರೆ. 'ಕೀರ್ತನೆ, 'ಹರಿಕಥೆ'ಗಳ ಬಗ್ಗೆ ಅವರು ನುಡಿದಿರುವ ಮಾತುಗಳು ಹೀಗಿವೆ :

"ಜನಮಂಡಲಿಗೆಲ್ಲಾ ಧಾರ್ಮಿಕ ಶಿಕ್ಷಣಕ್ಕೆ ಕೀರ್ತನವೇ ಗತಿ."

"ಕೀರ್ತನವು ಪ್ರಸಿದ್ಧ ಪ್ರಾಚೀನ ಕವಿಗಳ ಕವಿತಾವೈಭವದ ಪ್ರದರ್ಶನ ಶಾಲೆಯಾಗಬೇಕು."

"ಕೀರ್ತನವು ಹರಿಕಥಾ ಕಾಲಕ್ಷೇಪವಾಗಬೇಕೆ ಹೊರತು, ವಿನೋದ ಕಾಲಕ್ಷೇಪವಾಗಬಾರದು."

ಚಿದಂಬರಯ್ಯನವರು 'ಚೂಡಾಲೆ', 'ಸುಶೀಲಾಪರಿಣಯ', 'ಕೃಷ್ಣ ಮಹೇಶ್ವರಿ' ಮುಂತಾದ ಹತ್ತಾರು ನಾಟಕಗಳನ್ನು ರಚಿಸಿದ್ದಾರೆ. ಪ್ರಬಂಧ ಗ್ರಂಥಗಳನ್ನೂ ಬರೆದಿದ್ದಾರೆ. ಧರ್ಮದ ಬಗ್ಗೆ 'ಆರ್ಯಧರ್ಮ ಪ್ರದೀಪ' ಎಂಬ ಉತ್ಕೃಷ್ಟ ಗ್ರಂಥ ಬರೆದಿದ್ದಾರೆ, ಸ್ತೋತ್ರಗಳನ್ನು ವಿಶೇಷವಾಗಿ ಬರೆದಿದ್ದಾರೆ. 'ಭರತನ ಬಂಧುಪ್ರೇಮ', 'ತಾರಾನಾಥ ವಾಚಸ್ಪತಿ', 'ಭರತಖಂಡದ ಜೀವನ ಜ್ಯೋತಿಗಳು' ಮುಂತಾದ ಜೀವನ ಚರಿತ್ರೆಗಳನ್ನು ಶ್ರೀ ಚಿದಂಬರಯ್ಯನವರು ರಚಿಸಿದ್ದಾರೆ.

ಹೀಗೆ ಸುಮಾರು ೧೦೮ ಸದ್ಭಾವನಯುಕ್ತ ಗ್ರಂಥಗಳನ್ನು ಬರೆದು ಕನ್ನಡ ಸಾಹಿತ್ಯದ ಅನೇಕ ಪ್ರಾಕಾರಗಳಲ್ಲಿ ಶ್ರಮಿಸಿ ಭುವನೇಶ್ವರಿಯ ಸೇವೆಯನ್ನು ಮಾಡಿರುತ್ತಾರೆ. ಇಂದಿನ ವಿದ್ಯಾವಂತರು, ಹಿರಿಯರು, ಕಿರಿಯರು ಇವರ ಪುಸ್ತಕಗಳನ್ನು ಕೊಂಡು ಓದಿ ಅಲ್ಲಿನ ಉಪದೇಶ ಹಾಗೂ ಸಾರವನ್ನು ತಿಳಿಯಬೇಕಾಗಿದೆ. ಚಿದಂಬರಯ್ಯನವರ ಗ್ರಂಥಗಳು ಇಂದೂ ದೊರಕುತ್ತವೆ.

ಇಂತಹ ಸಾಹಿತಿಗಳನ್ನು ಕವಿಗಳನ್ನು ಸ್ಮರಿಸಿ ಅವರ ಕೃತಿಗಳ ಬಗ್ಗೆ ವಿಚಾರ ಮಾಡುವುದು ಕನ್ನಡಿಗರ ಕರ್ತವ್ಯ.

---

ಕನ್ನಡಮೆರಡುಜುನೂಱಱ
ಕನ್ನಡಮಾ ತಿರುಳ ಕನ್ನಡಂ ಮಧುರಮ್ಮೋ
ತ್ಪನ್ನಂ ಸಂಸ್ಕೃತಮೆನೆ ಸಂ
ಪನ್ನಂ ನೆಗಟ್ಟುಭಯ ಕವಿತೆಯೊಳ್ ಕವಿ ರನ್ನಂ

—ರನ್ನ




# ಹರಿಹರ ಕ್ಷೇತ್ರ ಮತ್ತು ಹರಿಹರ ಕವಿಯ ಕಾಲ

ಎಂ. ಚಿದಾನಂದಮೂರ್ತಿ

ಹರಿಹರ ಕವಿಯ ಕಾಲ ನಿರ್ಣಯದ ಬಗ್ಗೆ ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆಯಾಗಿಲ್ಲ. ಆ ಎಲ್ಲ ಚರ್ಚೆಗಳ ಸಾರಾಂಶವನ್ನು ಕೊಡುವುದು ಇಲ್ಲಿ ಅಪ್ರಸ್ತುತವಾಗಿದೆ ಮತ್ತು ಆ ಚರ್ಚೆಗಳು ಒಂದು ನಿರ್ಣಾಯಕ ಘಟ್ಟಕ್ಕೆ ಬಂದಿದ್ದರೂ ಸರ್ವಸಮ್ಮತವಾದ ಒಂದು ನಿರ್ಣಯವು ಇನ್ನೂ ಆಗಿಲ್ಲವೆಂದೇ ಹೇಳಬಹುದು. ಅವನ ಕಾಲ ಕ್ರಿ.ಶ. ೧೧೬೫ರಿಂದ ಕ್ರಿ.ಶ. ೧೩೦೦ರ ವರೆಗೆ ಓಲಾಡುತ್ತಿದ್ದರೂ ಅವನು ಹದಿಮೂರನೆಯ ಶತಮಾನದ ಪೂರ್ವಾರ್ಧದಲ್ಲಿ ಎಂದರೆ ಸುಮಾರು ೧೨೨೦-೩೦ರ ಸರಿ ಸುಮಾರಿನಲ್ಲಿ ಇದ್ದನೆಂದು ಬಹುಜನ ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಈ ಕಾಲವನ್ನು ಪೋಷಿಸುವ ಒಂದು ಹೊಸ ಅಂಶವನ್ನು ಪ್ರಸ್ತಾಪಿಸುವುದು ಈ ಪುಟ್ಟ ಲೇಖನದ ಉದ್ದೇಶ.

ಹರಿಹರನ ವೈಯಕ್ತಿಕ ಜೀವನದ ಸಂಗತಿಗಳು ನಮಗೆ ಅಲ್ಪಸ್ವಲ್ಪವಾದರೂ ತಿಳಿದಿದ್ದರೆ ಅದು ಸು. ೧೬೫೦ರಲ್ಲಿದ್ದ ಸಿದ್ಧನಂಜೇಶನ ಕೃಪೆಯಿಂದ. ಅವನು ರಾಘವಾಂಕ ಬರೆದಿರುವನೆಂದು ಹೇಳಲಾದ **ಹರಿಹರ ಮಹತ್ವ** ಎಂಬ ಕೃತಿಯ ಸಾರಾಂಶವನ್ನು ಕೊಟ್ಟಿದ್ದಾನೆ. ಆ ಕೃತಿ ಈಗ ಅನುಪಲಬ್ಧವಾಗಿದೆ. ಅದರ ಪ್ರಕಾರ ಹರಿಹರ ದೋರಸಮುದ್ರದಿಂದ ಹಂಪೆಗೆ ಹೊರಟವನು ದಾರಿಯಲ್ಲಿ ಬೇಲೂರು, ಹರಿಹರಕ್ಷೇತ್ರಗಳನ್ನು ಹಾದುಬರುತ್ತಾನೆ. ಅವನು 'ಪುಣ್ಯಕ್ಷೇತ್ರ'ಕ್ಕೆ ಬಂದಾಗ ಅಲ್ಲಿಯ ಶಿವಭಕ್ತರು ಗುಡಿ ತೋರಣಗಳನ್ನು ಕಟ್ಟಿ ಸ್ವಾಗತಿಸಿ "ನಮ್ಮ ಪಟ್ಟಣದ 'ಮಾರ ಮರ್ದನ ಹರಿಹರೇಶಲಿಂಗ'ದ ದೇವಸ್ಥಾನವನ್ನು ಒಂದು ಉಗ್ರಭೂತವು ಹೊಕ್ಕು ಅಲ್ಲಿ ಬಹುದಿನಗಳಿಂದ ಪೂಜೆಗಳು ನಡೆಯುತ್ತಿಲ್ಲ" ಎಂದು ಹೇಳುತ್ತಾರೆ. ಹರಿಹರನು ದೇವಸ್ಥಾನದ ಬಳಿಗೆ ಬಂದಾಗ, ಅಲ್ಲಿದ್ದ ಭೂತವು ವಿಶಾಪವನ್ನು ಹೊಂದಿ ಗಂಧರ್ವರೂಪವನ್ನು ಧರಿಸಿ ಹೊರಟುಹೋಗುತ್ತದೆ. ಅವನು ಶಿವನನ್ನು ಕೊಂಡಾಡಿ, ಹರಿಹರೇಶ್ವರ ಲಿಂಗದಿಂದ ಬೀಳ್ಕೊಂಡು ಹಂಪೆಗೆ ಬರುತ್ತಾನೆ.[1]

ಇಲ್ಲಿ ಬರುವ ಹರಿಹರ ಕ್ಷೇತ್ರವು ದಾವಣಗೆರೆಯ ಸಮೀಪದ, ತುಂಗಭದ್ರೆಯ ದಡದಮೇಲಿರುವ ಹರಿಹರನಗರವೆಂಬುದರಲ್ಲಿ ಸಂದೇಹವಿಲ್ಲ. ಸಿದ್ಧನಂಜೇಶನಿಗಿಂತ ಹಿಂದೆ, ಸು. ೧೪೦೦ರಲ್ಲಿದ್ದ ಪದ್ಮಣಾಂಕ ತನ್ನ **ಪದ್ಮಪುರಾಣ**ದಲ್ಲಿ ಮೇಲಿನ ಘಟನೆಯನ್ನು[2] ಉಲ್ಲೇಖಿಸುತ್ತಾನೆ. ಅವನು ಹರಿಹರವನ್ನು 'ಗುಹಾರಣ್ಯವೆಂದೂ, ಅದರ ಕ್ಷೇತ್ರಪತಿ 'ಹರಿಹರಲಿಂಗ'[3]ವೆಂದೂ ಕರೆಯುತ್ತಾನೆ. (ಹರಿಹರನ ಶಾಸನಗಳಲ್ಲಿ ಅದನ್ನು ಗುಹಾರಣ್ಯವೆಂದೇ ಕರೆದಿದೆ). ಹರಿಹರ ಕವಿ ಅಲ್ಲಿಯ ದೇವಸ್ಥಾನಕ್ಕೆ ಬಂದಾಗ ಅದನ್ನು ಹಗಲಲ್ಲಿಯೇ ಮುಚ್ಚಿದ್ದನ್ನು ಕಂಡು ಆಶ್ಚರ್ಯಪಟ್ಟು ಕೇಳುತ್ತಾನೆ. ಅಲ್ಲಿ ಒಂದು ಬೊಮ್ಮರಕ್ಕಸ ಇದ್ದ ಸಂಗತಿ ತಿಳಿದು ಅದನ್ನು ಕೋಪದಿಂದ ಕರೆಯುತ್ತಾನೆ. ಅದು ಪಾರ್ವನವೇಷದಿಂದ ಹೊರಬಂದು, ಅವನಿಗೆ ವಂದಿಸಿ ಸ್ವರ್ಗದತ್ತ ತೆರಳುತ್ತದೆ. ಹರಿಹರನು ದೇವಾಲಯವನ್ನು ಪ್ರವೇಶಿಸಿ, ಶಿವನನ್ನು ಭಜಿಸಿ, ನಂತರ ಹಂಪೆಯತ್ತ ನಡೆಯುತ್ತಾನೆ.[4]

ಈ ಘಟನೆಯ ಅದ್ಭುತಾಂಶಗಳನ್ನು ಬಿಟ್ಟರೆ ಇದನ್ನು ನಂಬುವುದರಲ್ಲಿ ಆಕ್ಷೇಪಣೆಗಳೇನೂ ಕಾಣುವುದಿಲ್ಲ. ಹರಿಹರಕವಿ ಹಂಪೆಗೆ ಹೋಗುವ ದಾರಿಯಲ್ಲಿ ಹರಿಹರಕ್ಷೇತ್ರಕ್ಕೆ ಬಂದ; ಆಗ ಅಲ್ಲಿನ ದೇವಸ್ಥಾನದ ಬಾಗಿಲನ್ನು ಹಾಕಿ

---

1. ರಾಘವಾಂಕ ಚರಿತ್ರೆ (ಸಂ. ಸ. ಸ. ಮಾಳವಾಡ, ಧಾರವಾಡ. ೧೯೫೪). ೧೪. ೭೫-೮.

2. ಹರಿಹರದ ಶಾಸನಗಳಲ್ಲಿ ಆ ಸ್ಥಳವನ್ನು 'ಗುಹಾರಣ್ಯ' ವೆಂದು ಕರೆದಿದೆ.

3. 'ಹರಿಹರ' ಎಂಬ ಹೆಸರೇ ಹೇಳುವಂತೆ ಆ ದೈವ ಹರಿ ಮತ್ತು ಹರರ ಸಾಮರಸ್ಯದ ಪ್ರತೀಕ. ಅವರಿಬ್ಬರಲ್ಲಿ ಯಾರು ಹೆಚ್ಚು ಯಾರು ಕಡಮೆ ಎಂಬ ವಾದವಿವಾದಗಳನ್ನು ಅಡಗಿಸಲು ಹರಿ ಮತ್ತು ಹರರು ಹರಿಹರ ರೂಪವನ್ನು ತಾಳಿದರು ಎಂದು ಹರಿಹರದ ಅನೇಕ ಶಾಸನಗಳಲ್ಲಿ ಹೇಳಿದೆ. (ಪುರಾಣದ ಪ್ರಕಾರ ಗುಹಾಸುರನನ್ನು ಕೊಲ್ಲಲು ಹರಿಹರದೇವರ ಅವತಾರವಾಯಿತು. (ಇವರಿಬ್ಬರಲ್ಲಿ ಯಾರು ಹೆಚ್ಚು ಎಂಬ ಪ್ರಶ್ನೆಯೇ ಉದ್ಭವಿಸದು. ಆದರೆ ವೀರಶೈವರಾದ ಪದ್ಮಣಾಂಕ ಮತ್ತು ಸಿದ್ಧನಂಜೇಶರು ಅದನ್ನು 'ಹರಿಹರೇಶ್ವರಲಿಂಗ'ವೆಂದು ಕರೆದು ಅದು ಶಿವನ ವಿಗ್ರಹವೆಂದು ಸ್ಥಾಪಿಸಲು ಪ್ರಯತ್ನಪಡುತ್ತಾರೆ.

4. ಪದ್ಮರಾಜ ಪುರಾಣ (ಸಂ. ಆರ್. ಸಿ. ಹಿರೇಮಠ, ಧಾರವಾಡ, ೧೯೫೮) ಪು. ೨೧-೩

ದ್ದರು. ಬಹಳ ದಿನಗಳಿಂದ ಪೂಜಾದಿಗಳು ನಡೆದಿರಲಿಲ್ಲ. ಅಲ್ಲಿ ಬ್ರಹ್ಮರಾಕ್ಷಸ ಸೇರಿಕೊಂಡಿದೆಯೆಂದು ಜನ ಹೆದರಿದ್ದರು. ಹರಿಹರ ಅವರ ಭೀತಿಯನ್ನು ಹೋಗಲಾಡಿಸಿ, ದೇವಸ್ಥಾನವನ್ನು ಹೊಕ್ಕು ಭಗವಂತನನ್ನು ಸ್ತೋತ್ರ ಮಾಡಿದ. ಇಷ್ಟು ನಡೆದಿರಬಹುದಾದ ಸಂಗತಿ. ಇದು ರಾಘವಾಂಕನಿಂದ ರಚಿತವಾದ **ಹರಿಹರ ಮಹತ್ವ**ದಲ್ಲಿ ಇದ್ದುದು ನಿ ಜ ವಾ ಗಿ ದ್ದ ರ ೦ ತೂ[5] ಈ ಸಂಗತಿಯ ವಾಸ್ತವಿಕತೆಯ ವಿಷಯದಲ್ಲಿ ಅನುಮಾನ ಬರುವುದಿಲ್ಲ.

ಈಗ ಹರಿಹರದಲ್ಲಿ ದೊರಕುವ ಶಾಸನಗಳತ್ತ ಹೊರಳೋಣ. ಅಲ್ಲಿ ದೊರಕುವ ಅತ್ಯಂತ ಪ್ರಾಚೀನ ಶಾಸನ ಸು. ಕ್ರಿ. ಶ. ೧೧೦೦ರದ್ದು.[6] ಆದರೆ ಖಚಿತ ತೇದಿಯೊಡನೆ ದೊರಕುವ ಮೊದಲ ಶಾಸನ ಕ್ರಿ. ಶ. ೧೧೪೮ರದ್ದು.[7] ಹರಿಹರನಗರಕ್ಕೆ ಹಿಂದೆ ಇದ್ದ ಹೆಸರು ಕೂಡಲೂರು[8]; ಆ ಹೆಸರು ಇಲ್ಲಿದೆ. ಈ ಕೂಡಲೂರು ಎಂಬ ಹೆಸರು ಹರಿಹರಕ್ಕೆ ಹದಿನೈದು ಹದಿನಾರನೇ ಶತಮಾನಗಳವರೆಗೆ ಇದ್ದು ಆಮೇಲೆ ಕ್ರಮೇಣ ಮಾಯವಾಯಿತು. ಹರಿಹರ ಎಂಬ ಊರಿನ ಹೆಸರು ಈಚಿನದು. ಆದರೆ ಹರಿಹರೇಶ್ವರದೇವರ ಹೆಸರು ಮೇಲೆ ಹೇಳಿದ ಕ್ರಿ. ಶ. ೧೧೪೮ರ ಶಾಸನದಲ್ಲಿದೆ. ಅದಕ್ಕಿಂತ ಹಿಂದೆ ಎಷ್ಟು ಪ್ರಾಚೀನವಾದುದು ಆ ದೇವರ ವಿಗ್ರಹ ಎಂಬುದನ್ನು ನಿರ್ಧರಿಸಲು ಶಾಸನಾಧಾರಗಳಿಲ್ಲ[9].

ಈ ದೇವರನ್ನು ಶಂಕರನಾರಾಯಣದೇವರು[10], ಹರಿಶಂಕರ[11] ಎಂದು ಮುಂತಾಗಿ ಶಾಸನಗಳಲ್ಲಿ ಕರೆದಿದೆ. ಹನ್ನೆರಡನೆಯ ಶತಮಾನದಲ್ಲಿ ಈ ದೇವಸ್ಥಾನವು ಸಾಕಷ್ಟು ಪ್ರಖ್ಯಾತವಾಗಿದ್ದಿತು. ಕಳಚೂರ್ಯ ಬಿಜ್ಜಳನ ಹಲವು ಶಾಸನಗಳು ಇಲ್ಲಿವೆ. ಇದು ಉಚ್ಚಂಗಿ ಪಾಂಡ್ಯರ ಮನೆದೈವವಾಗಿದ್ದಿತು. ಕೂಡಲೂರಿನಲ್ಲಿ ಎಂದರೆ ಈಗಿನ ಹರಿಹರದಲ್ಲಿ, ಇದ್ದ ಅಗ್ರಹಾರದಲ್ಲಿ ವಿದ್ವಾಂಸರಾದ ನೂರ ನಾಲ್ಕು ಬ್ರಾಹ್ಮಣರಿದ್ದರು. ಹರಿಹರದೇವಸ್ಥಾನವು ವೇದ, ಮೀಮಾಂಸೆ, ವ್ಯಾಕರಣ ಮುಂತಾದುವುಗಳ ಅಧ್ಯಯನಕ್ಕೆ ವಿದ್ಯಾಕೇಂದ್ರವೂ ಆಗಿದ್ದಿತು.[12]

ಸು. ಕ್ರಿ. ಶ. ೧೧೦೦ರಿಂದ ಕ್ರಿ. ಶ. ಸು. ೧೧೮೦ರ ವರೆಗೆ ಸಿಕ್ಕಿರುವ ಹಲವಾರು ಶಾಸನಗಳಲ್ಲಿ ಅನೇಕ ರಾಜರು, ಮಂತ್ರಿಗಳು ಆ ದೇವಾಲಯಕ್ಕೆ, ಅಲ್ಲಿನ ಬ್ರಾಹ್ಮಣರಿಗೆ ದತ್ತಿಗಳನ್ನು ಬಿಟ್ಟುಕೊಟ್ಟ ಸಂಗತಿಗಳು ಬಂದಿವೆ. ಈ ಅವಧಿಯಲ್ಲಿ ದೇವಸ್ಥಾನದಲ್ಲಿ ಬಹುವಾದ ಚಟುವಟಿಕೆಗಳು ನಡೆಯುತ್ತಿದ್ದು ಅನೇಕ ಸಂಖ್ಯೆಯ ಭಕ್ತರನ್ನು ಆಕರ್ಷಿಸುತ್ತಿದ್ದಿತು. ಸು. ೧೧೮೦ರ ಶಾಸನದಲ್ಲಿ ಹರಿಹರದೇವರಿಗೆ ಒಂದು ದೊಡ್ಡ ದೇವಾಲಯವೂ ಇದ್ದಿತು ಎಂದು ಸ್ಪಷ್ಟವಾಗಿ ಉಲ್ಲೇಖವಾಗಿದೆ.

ಇಲ್ಲಿಂದ ಮುಂದೆ ನಮಗೆ ಸಿಗುವ ಶಾಸನವೆಂದರೆ ಕ್ರಿ.ಶ. ೧೨೨೪ರ ಪೋಲಾಳ್ವದಂಡನಾಥನ ಶಾಸನ.[14] ಈ ಶಾಸನದಲ್ಲಿ ಊರನ್ನು ಕೂಡಲೂರು ಎಂದೂ, ಆ ಪ್ರದೇಶವನ್ನು ಗುಹಾರಣ್ಯವೆಂದೂ ಕರೆದಿದೆ. ಶಾಸನದ ಆರಂಭದಲ್ಲಿ ಹರಿ, ಹರರು ಒಂದೇ ಎಂಬರ್ಥ ಬರುವ ಪದ್ಯವಿದೆ.[15] ಪೋಲಾಳ್ವ

---

5. ಸಿದ್ಧನಂಜೇಶ ರಾಘವಾಂಕನ ಕೃತಿಗಳ ಸಾರಾಂಶವನ್ನು ಕೊಡುವಾಗ ಅಲ್ಲಿ ಇಲ್ಲಿ ಸಣ್ಣ ಪುಟ್ಟ ಮಾರ್ಪಾಟುಗಳನ್ನು ಮಾಡಿಕೊಳ್ಳುವನೇ ಹೊರತು, ಇಡೀ ಘಟನೆಯನ್ನೇ ವ್ಯತ್ಯಾಸ ಮಾಡುವುದಿಲ್ಲ. ರಾಘವಾಂಕನ ದೊರಕಿರುವ ಕೃತಿಗಳನ್ನೂ ಸಿದ್ಧನಂಜೇಶ ಕೊಟ್ಟಿರುವ ಆ ಕೃತಿಗಳ ಸಾರಾಂಶಗಳನ್ನೂ ಹೋಲಿಸಿ ನೋಡಿದರೆ ಇದು ಸ್ಪಷ್ಟವಾಗುತ್ತದೆ. ಈ ದೃಷ್ಟಿಯಿಂದ ಅವನು ಕೊಟ್ಟಿರುವ ಹರಿಹರನ ಮಹತ್ವದ ಸಾರಾಂಶವು ಬಹುಮಟ್ಟಿಗೆ ವಿಶ್ವಾಸಾರ್ಹವಾಗಿದೆ ಎಂದು ಹೇಳಬಹುದು.

6. Epigraphia Carnatica, xi. Dg. 45.

7. ಅದೇ, ನಂ. ೬೧.

8. ಹರಿಹರದ ಬಳಿ ತುಂಗಭದ್ರಾನದಿಯನ್ನು ಹರಿದ್ರಾ ಎಂಬ ಹೊಳೆ ಬಂದು ಕೂಡುತ್ತದೆ.

9. ಬ್ರಹ್ಮಶಿವ ತನ್ನ ಸಮಯ ಪರೀಕ್ಷೆಯಲ್ಲಿ (೯. ೧೧) ತುಂಗಭದ್ರೆಯ ತಡಿಯ ಶಂಕರನಾರಾಯಣನ ಕಾಲುಗಳು ಹೂತು ಹೋಗಿವೆ ಎನ್ನುತ್ತಾನೆ. (ಈ ಹೇಳಿಕೆ ಸತ್ಯ. ಏಕೆಂದರೆ ಹರಿಹರೇಶ್ವರನ ವಿಗ್ರಹವಿರುವುದು ತಲೆಯಿಂದ ಮೊಳಕಾಲಿನವರೆಗೆ ಮಾತ್ರ). ಆದರೆ ಬ್ರಹ್ಮಶಿವ ಹನ್ನೆರಡನೆಯ ಶತಮಾನ ಉತ್ತರಾರ್ಧಕ್ಕೆ ಸೇರುವುದರಿಂದ ಅವನ ಹೇಳಿಕೆಯಿಂದ ಯಾವ ಪ್ರಯೋಜನವೂ ಆಗುವುದಿಲ್ಲ, ವಿಗ್ರಹದ ಪ್ರಾಚೀನತೆಯ ನಿರ್ಣಯಕ್ಕೆ.

10. ನಂ. ೪೧, ಕ್ರಿ. ಶ. ೧೧೪೮

11. ನಂ. ೪೪, ಸು. ೧೧೮೦.

12. ನಂ. ೩೯, ಕ್ರಿ. ಶ. ೧೧೬೮.

13. ನಂ. ೪೪. ಈ ಶಾಸನದಲ್ಲಿ ತೇದಿಯಿಲ್ಲವಾದರೂ ಇದು ಕಳಚುರ್ಯರ ಸಂಕಮದೇವನ ಕಾಲದ್ದಾಗಿರುವುದರಿಂದ ಇದರ ಕಾಲ ಸು. ೧೧೮೦ ಎಂದು ಭಾವಿಸುವುದರಲ್ಲಿ ಯಾವ ತೊಂದರೆಯೂ ಇಲ್ಲ.

14. ನಂ. ೨೫.

15. ಹರಿಯಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು
ಪೇಳ್ವರ್ ಕೆಲಂಬರ್ |
ಹರನಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು
ಪೇಳ್ವರ್ ಕೆಲಂಬರ್ |
ನರರಾ ಸಂದೇಹಮಂ ಪಿಂಗಿಸಲತಿಶಯದಿಂ
ಕೂಡಲೂರಲ್ಲಿ ಶೋಭಾ |
ಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ
ಕೂರ್ತು ರಕ್ಷಿಕ್ಕೆ ನಮ್ಮಂ ||

ದಂಡನಾಥನು ಕ್ರಿ.ಶ. ೧೨೨೪ರಲ್ಲಿ ನೂರ ಹದಿನೈದು ಹೊನ್ನ ಕಳಶಗಳಿಂದ ಮೆರೆಯುವ ದೇವಾಲಯವನ್ನು ಕಟ್ಟಿಸಿದ ಸಂಗತಿಯನ್ನು ಶಾಸನವು ಬಹುವಾಗಿ ಹೊಗಳಿವೆ. ಅವನಿಗಿಂತ ಹಿಂದೆ ಯುಗಾಂತರಗಳಲ್ಲಿ ಯಾರೂ ತಮಗೆ ಎಷ್ಟೇ ಐಶ್ವರ್ಯವಿದ್ದರೂ ಹರಿಹರ ದೇವಸ್ಥಾನವನ್ನು ಮಾಡಿಸಲಾರದೆ ಹೋದರು; ಪುರು, ಸಗರ, ಭರತ, ದಿಲೀಪ ಮುಂತಾದವರೂ ಮಾಡಿಸಲಾರದೆ ಹೋದರು; ಆದರೆ ಪೋಲಾಳ್ವ ದಂಡನಾಥನಿಗಿಂತ ಹಿಂದಿದ್ದ ಹೆಮ್ಮಾಡಿರಾಯ ಎಂಬ ದೊರೆ ತಾನು ದೇವಾಲಯವನ್ನು ಕಟ್ಟಿಸಲು ಹೊರಟಾಗ ದೇವರೇ ಸ್ವಪ್ನದಲ್ಲಿ ಬಂದು ಮುಂದೆ ಒಬ್ಬ ಭಕ್ತ ತನಗೆ ದೇವಸ್ಥಾನವನ್ನು ಕಟ್ಟಿಸಲಿರುವುದರಿಂದ ನೀನು ಕಟ್ಟಿಸಬೇಡ ಎಂದು ಹೇಳಿ ನಿಲ್ಲಿಸಿದ; ಪೋಲಾಳ್ವ ದಂಡನಾಥ·ಅದನ್ನು 'ಸ್ಥಿರಮಪ್ಪಂತಿರೆ ತಾನೆ ಮಾಡಿಸಿದಂ'—ಇತ್ಯಾದಿ ಸಂಗತಿಗಳು ಆ ಶಾಸನದಲ್ಲಿವೆ. ಹೆಮ್ಮಾಡಿರಾಯ ಯಾರು? ಅವನು ನಿಜವಾಗಿಯೂ ದೇವಸ್ಥಾನ ನಿರ್ಮಾಣಕ್ಕೆ ಪ್ರಯತ್ನಿಸಿದನೇ ಎಂಬುದರ ಚರ್ಚೆ ಎಷ್ಟೇ ಸ್ವಾರಸ್ಯವಾಗಿದ್ದರೂ ಇಲ್ಲಿ ಅನಾವಶ್ಯಕ. ಒಟ್ಟಿನಲ್ಲಿ ಈ ಶಾಸನದ ಸಾರಾಂಶವಿಷ್ಟು. ತನಗಿಂತ ಹಿಂದೆ ಇದ್ದ ಹರಿಹರದೇವರಿಗೆ ಪೋಲಾಳ್ವದಂಡನಾಥ ಒಂದು ದೇವಸ್ಥಾನವನ್ನು ಕ್ರಿ.ಶ. ೧೨೨೪ರಲ್ಲಿ 'ಮಾಡಿಸಿದ'; ದೇವಸ್ಥಾನವನ್ನು ಬರಿಯ ಜೀರ್ಣೋದ್ಧಾರ ಮಾಡಿಸಲಿಲ್ಲ, ಅದನ್ನು ಕಟ್ಟಿಸಿದ. ಹಿಂದೆ ಆಗಿಹೋದ ಯಾವ ರಾಜರೂ ಈ ಕೆಲಸವನ್ನು ಮಾಡಲಾರದೆ ಹೋದರು.

ಕ್ರಿ.ಶ. ೧೧೬೦ರ ಶಾಸನದಲ್ಲಿ ಹರಿಹರ ದೇವರಿಗೆ ಒಂದು ದೊಡ್ಡ ದೇವಸ್ಥಾನವಿದ್ದಿತು ಎಂದು ಉಲ್ಲೇಖವಾಗಿರುವ ಸಂಗತಿಯನ್ನು ನೋಡಿದ್ದೇವೆ; ಕ್ರಿ.ಶ. ೧೨೨೪ರಲ್ಲಿ ಪೋಲಾಳ್ವ ದಂಡನಾಥ ಹರಿಹರ ದೇವರಿಗೆ ಒಂದು ಸುಂದರ ದೇವಸ್ಥಾನವನ್ನು ಕಟ್ಟಿಸಿದ ಎಂದು ಅವನ ಶಾಸನವು ಹೇಳುತ್ತದೆ. ಈ ಮಧ್ಯದ ಅವಧಿಯದಲ್ಲಿ (ಕ್ರಿ.ಶ. ೧೧೬೦–೧೨೨೪) ಹರಿಹರದಲ್ಲಿ ಯಾವ ಶಾಸನವೂ ಲಿಖಿತವಾಗಿಲ್ಲ. ಇಷ್ಟನ್ನೂ ಪರೀಕ್ಷಿಸಿ ನೋಡಿದರೆ ಒಂದು ಸಂಗತಿ ಸ್ಪಷ್ಟವಾಗುತ್ತದೆ. ಕ್ರಿ.ಶ. ೧೧೬೦–೧೨೨೪ ಈ ಅವಧಿಯಲ್ಲಿ ಮೊದಲಿದ್ದ ದೇವಸ್ಥಾನವು ಬಿದ್ದು ಹಾಳಾಗಿ ಹೋಗಿರಬೇಕು; ಹರಿಹರ ದೇವರ ವಿಗ್ರಹವನ್ನು ಅಲ್ಲೇ ಒಂದುಕಡೆ ರಕ್ಷಿಸಿಟ್ಟಿರಬೇಕು; ಈ ಅವಧಿಯಲ್ಲಿ ಪೂಜಾದಿಗಳು, ಭಕ್ತರು ಬಂದು ಹೋಗುವುದು, ದತ್ತಿಗಳನ್ನು ಕೊಡುವುದು ಇತ್ಯಾದಿ ಚಟುವಟಿಕೆಗಳು ಬಹುಮಟ್ಟಿಗೆ ನಿಂತುಹೋಗಿರಬೇಕು. ಇದನ್ನು ಕಂಡ ಆಂಧ್ರದ ನಾರಣಪುರದವನೂ ಹೊಯ್ಸಳ ವೀರನಾರಸಿಂಹ ದೇವನ ಪ್ರಧಾನಿಯೂ, 'ಹರಿಚಾರಿತ್ರ' ಎಂಬ ಷಟ್ಪದ ಕಾವ್ಯವನ್ನು ಬಹುಶಃ ಕನ್ನಡದಲ್ಲಿ ರಚಿಸಿದ ಕವಿಯೂ ಆದ 'ವೈಷ್ಣವ ಚಕ್ರವರ್ತಿ' ಪೋಲಾಳ್ವ ದಂಡನಾಥನು ಹರಿಹರ ದೇವಸ್ಥಾನವನ್ನು ಕಟ್ಟಿಸಿರಬೇಕು. ಕ್ರಿ.ಶ. ೧೨೨೪ರ ನಂತರ ಮತ್ತೆ ಹರಿಹರ ದೇವಸ್ಥಾನದಲ್ಲಿ ಎಂದಿನಂತೆ ಚಟುವಟಿಕೆಗಳು ಆರಂಭವಾದುವು, ಹೆಚ್ಚಿದುವು. ಮುಂದೆ ಕೂಡಲೂರು ಎಂಬ ಹೆಸರು ಕ್ರಮೇಣ ಬಳಕೆಯಲ್ಲಿ ಕಡಮೆಯಾಗಿ ಹರಿಹರ ಎಂಬ ದೇವರ ಹೆಸರೇ ಊರಿಗೂ ಪ್ರಾಪ್ತವಾಯಿತು.

ಪ್ರಬಂಧದ ಆರಂಭದಲ್ಲಿ ಉಲ್ಲೇಖವಾದ ಹರಿಹರ ಕವಿಗೆ ಸಂಬಂಧಿಸಿದ ಘಟನೆ ಕ್ರಿ.ಶ. ೧೧೬೦, ೧೨೨೪ರ ಅವಧಿಯಲ್ಲಿ ನಡೆದಿರಬೇಕು. ದೇವಸ್ಥಾನವು ಹಾಳಾಗಿ ಹೋದದ್ದರಿಂದ ಅಲ್ಲಿ ಬ್ರಹ್ಮರಾಕ್ಷಸ ಸೇರಿಕೊಂಡಿದೆ ಎಂಬ ಪ್ರತೀತಿ ಹಬ್ಬಿತ್ತೆಂದು ಕಾಣಿಸುತ್ತದೆ. ಹರಿಹರಕವಿ ಹರಿಹರ ಕ್ಷೇತ್ರಕ್ಕೆ ಕ್ರಿ.ಶ. ೧೨೦೦–೨೦ರ ಸರಿಸುಮಾರಿನಲ್ಲಿ ಹೋಗಿದ್ದನೆಂದು ಊಹಿಸಬಹುದು.

ಹರಿಹರಕ್ಕೆ ಸಮೀಪದಲ್ಲಿರುವ ನಂದಿ ತಾವರೆ ಗ್ರಾಮದ ಕ್ರಿ.ಶ. ೧೨೨೦ರ ಶಾಸನದ ಕೊನೆಯಲ್ಲಿ[16] "ಶ್ರೀಶಂಕರನಾರಾಯಣ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ" ಎಂದಿರುವುದನ್ನು ನೋಡಿದರೆ, ದೇವಸ್ಥಾನ ದುರ್ಗತಿಗೆ ಒಳಗಾಗಿದ್ದರೂ ಜನರು ಮಾತ್ರ ಆ ದೇವರನ್ನು ಮರೆತಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಇದೂ ಸಹಜವಾದುದೇ.

---

16. ನಂ. ೬೯.

---

ಸತ್ಯ–ಶೌಚವಿಲ್ಲದ ಆಚಾರವೇಕೆ?
ಚಿತ್ತಶುದ್ಧಿಯಿಲ್ಲದ ಜ್ಞಾನವಿನ್ನೇಕೆ?
ಭಕ್ತಿ–ಭಾವವಿಲ್ಲದ ದೇವಪೂಜೆ ಏಕೆ?

—ಪುರಂದರದಾಸರು

# ಕನ್ನಡ ನಾಡು, ಕನ್ನಡ ಭಾಷೆ ಮತ್ತು ಸಂಸ್ಕೃತಿ

ತಿ. ತಾ. ಶರ್ಮ

## ದ್ರಾವಿಡವೇ ಪುರಾತನ ಸಂಸ್ಕೃತಿಗಳ ಮೂಲಾಧಾರ

ದೇಶ, ಜನ, ಭಾಷೆ – ಈ ಮೂರಕ್ಕೂ "ದ್ರಾವಿಡ" ಎಂಬ ಮಾತನ್ನು ಉಪಯೋಗಿಸಲಾಗಿದೆ. ದಕ್ಷಿಣ ಭಾರತದ ಭಾಷೆಗಳನ್ನು "ಪಂಚ ದ್ರಾವಿಡ"ವೆಂದೂ, ಉತ್ತರ ಭಾರತದ ಭಾಷೆಗಳನ್ನು "ಪಂಚಗೌಡ"ವೆಂದೂ, ಹೆಸರಿಟ್ಟು ಕರೆಯುವುದುಂಟು. ಇದರ ವೈಜ್ಞಾನಿಕ ಔಚಿತ್ಯ ವಿಚಾರ ಮಾಡಬೇಕು.

ಪಂಚ ದ್ರಾವಿಡದಲ್ಲಿ ತುಳುಗೆ ಬದಲಾಗಿ ಮರಾಠಿ-ಗುಜರಾತಿಗಳನ್ನು, ಸೇರಿಸಿ, ಹಾಗೆ ಸೇರಿಸಲು ಕಾರಣಗಳನ್ನು ಹಲವರು ಕೊಡುತ್ತಾರೆ. "ಒಂದಾನೊಂದು ಕಾಲದಲ್ಲಿ ಇವು ದ್ರಾವಿಡ ಭಾಷೆಗಳಾಗಿದ್ದಿರಬಹುದೆಂಬ ಸಂದೇಹಕ್ಕವಕಾಶವಿದೆ" ಅನ್ನುತ್ತಾರೆ ಸ್ವರ್ಗವಾಸಿ ಅರಕೆರೆ ನರಸಿಂಹಾಚಾರ್ಯರು.

*" It may also be stated that in the opinion of some scholars the waves of Aryan immigration gradually submerged Dravidian blood and speech in Gujarat and the same influence obliterated the language in Maharashtra. The inference is that the Marathi and Gujarati languages were once Dravidian."

†ದ್ರಾವಿಡರು ಮೆಡಿಟರೇನಿಯನ್ನಿನ ಜನರಾಗಿರಬಹುದು; ಅವರು ಕ್ರೀಟನಿಂದ ಹೊರಟು ಆಸಿಯಮೈನರ್, ಮೆಸೊಪೊಟೇಮಿಯ ಮಾರ್ಗವಾಗಿ ಬಂದಿರಬೇಕು. ಈ ಸ್ಥಳಗಳಲ್ಲಿ ಅವರಿಗೂ ಸುಮೇರಿಯ, ಈಲಿಯಂ, ಜನರಿಗೂ ನಿಕಟ ಸಂಪರ್ಕ ಉಂಟಾಗಿರಬೇಕು. ಅನಂತರ ದ್ರಾವಿಡರು ಇರಾನಿನ ಸಮಸ್ಥಲದ ದಕ್ಷಿಣ ಭಾಗದ ಮಾರ್ಗವಾಗಿ ಸಿಂಧು ವಿಷಯಕ್ಕೆ ಬಂದು, ಅಲ್ಲಿಂದ ಹಿಂದುದೇಶವನ್ನು ವ್ಯಾಪಿಸಿರಬೇಕು – ಈ ವಿಧವಾಗಿ ಡಾ|| ಹಾಲರವರು ಅಭಿಪ್ರಾಯಪಟ್ಟರು.

ಸುಮೇರಿಯಾ ಜನರು ಹಿಂದೂ ದೇಶದಿಂದ ಹೋದ ದ್ರಾವಿಡರೇ ಎಂದು ತೋರಿಸಲೂ ಬಹುದು. ಆ ಪಕ್ಷದಲ್ಲಿ ನಾಗರಿಕತೆ ಮೊದಲು ಭಾರತದಲ್ಲಿ ಹುಟ್ಟಿತೆಂದೂ, ಬಹುಶಃ ಪ್ರಾಚೀನ ದ್ರಾವಿಡವೇ ಅದಕ್ಕೆ ಮೂಲವೆಂದೂ, ಸ್ಥಾಪಿತವಾಗಬಹುದು. ಬಳಿಕ ಅನಾಗರಿಕತೆ ಮೆಸೆಪೊಟೇಮಿಯಕ್ಕೆ ಹೋಗಿ ಈಗಿನ ನಾಗರಿಕತೆಗೆ ಆಧಾರಭೂತವಾದ ಬಾಬಿಲಾನಿನ ಸಂಸ್ಕೃತಿಗೂ, ಇತರ ಪುರಾತನ ಸಂಸ್ಕೃತಿಗಳಿಗೂ, ಜನ್ಮಸ್ಥಾನವಾಗಿರಬಹುದು. ಇದು ಡಾ|| ಸೇನರ ಅಭಿಪ್ರಾಯ.

## ಷಹಜಿ ವಿಜಯನಗರ ಸಾಮ್ರಾಜ್ಯವನ್ನು ಉಳಿಸಬಹುದಾಗಿತ್ತು

* " Shahji was responsible to a great extent in first conquering the different Karnataka states and in bringing about the reuine of Vijayanagar. He was no doubt the greatest Hindu General in those days whose help could have saved Vijayanagar for some more years. But through out his career we never find in him any higher ideas of nationality or rcligion. The only aim of his life seems to be to work for his master and aspire his favours . . . If Shahji had left the cause of Bijapur and had taken up that of Vijayanagar the history of Karnataka could have taken a different turn."

---

* Karnataka Kavi Charite III. Eng. Intro. pp. iii.

† I. R. A. S. 1925, p. 59. Modern Review, 1924, Dec.

* D. B. Diskalkar, M.A., Curator, Historical Museum, Satara.

ವಿಜಯನಗರದ ಸಾಮ್ರಾಜ್ಯದ ಆರನೆಯ ಶ ತ ಮಾ ನ ದ ಸ್ಮಾರಕ ಉತ್ಸವ ಸಂಚಿಕೆಯಲ್ಲಿ ಮ ಹಾ ರಾ ಷ್ಟ್ರ ದ ವಿದ್ವಾಂಸರೇ ಒಬ್ಬರು

"ಕರ್ನಾಟಕದ ನಾನಾ ಭಾಗಗಳನ್ನು ಗೆದ್ದು, ಕಡೆಗೆ ವಿಜಯ ಸಾಮ್ರಾಜ್ಯ ವಿನಾಶಕ್ಕೆ ಬಹಳ ಮಟ್ಟಿಗೆ ಕಾರಣಕರ್ತನಾದವ ಷಹಜಿ; ಇದರಲ್ಲಿ ಅವನ ಹೊಣೆಗಾರಿಕೆ ಹೆಚ್ಚು. ಆ ಕಾಲದಲ್ಲಿ ಅವನೇ ಹಿಂದೂ ದಂಡನಾಯಕರಲ್ಲಿ ಮ ಹಾ ನಾ ಯ ಕ; ಸಂದೇಹವಿಲ್ಲ. ಅವನು ಮನಸ್ಸು ಮಾಡಿ, ಸಹಾಯ ನೀಡಿದ್ದರೆ ಆ ಸಾಮ್ರಾಜ್ಯವನ್ನು ಇನ್ನೂ ಕೊಂಚ ಕಾಲ ಉಳಿಸಬಹುದಾಗಿತ್ತು. ಆದರೆ ಆತನ ಜೀವನ ಕಾಲಾವಧಿಯಲ್ಲೆಲ್ಲ ತನ್ನೊಡೆಯನ ಸೇವೆ, ಆತನ ಪೂರ್ಣಾನುಗ್ರಹ ಸಂಪಾದನೆ, ಇಷ್ಟನ್ನು ಬಿಟ್ಟರೆ ಇನ್ನೇನೂ ಇಲ್ಲ. ಉದಾತ್ತ ರಾ ಷ್ಟ್ರೀ ಯ ತ್ವ ದ ಅಥವಾ ಧರ್ಮದ ವಿಚಾರವೇ ಅವನಲ್ಲಿ ಕಂಡು ಬರುವುದಿಲ್ಲ. ಷಹಜಿಯು ಬಿಜಾಪುರದ ಸುಲ್ತಾನರ ಸೇವೆ ಬಿಟ್ಟು ವಿಜಯನಗರದ ಸೇವೆ ಸ್ವೀಕರಿಸಿದ್ದರೆ ಕರ್ನಾಟಕ ಇತಿಹಾಸದ ಸ್ವರೂಪವೇ ಬೇರೆಯಾಗಿರುತ್ತಿತ್ತು."

ಎಂಬದಾಗಿ (ಶ್ರೀ ಡಿ. ಬಿ. ಡಿಸ್ಕಲ್ಕರ್) ಹೇಳಿದರು. ಈ ಗುಣವನ್ನು ಕಂಡ ಬಾಳ ಠಕ್ರೆಯವರು "ಶಿವಸೇನೆ" ಕಟ್ಟಿ, ರಾಷ್ಟ್ರ ಭಾರತದ, ಸ್ವತಂತ್ರ ಭಾರತದ, ಕೀಲು ಮುರಿಯಲು ಹಂಚಿಕೆ ಹಾಕುವ ಸಾಹಸ ತೋರಿಸುತ್ತಿರುವುದರಲ್ಲಿ ಆಶ್ಚರ್ಯವೇನಿಲ್ಲ. ಶ್ರೀ ಡಿಸ್ಕಲ್ಕರಂತಹ ಒಬ್ಬ ಪ್ರಾಮಾಣಿಕ ಇತಿಹಾಸಕಾರರಾದರೂ ಮರಾಠರಲ್ಲಿದ್ದಾರಲ್ಲ!

### ದೇಶ ಭಾಷೆಯಿಂದಲೇ ಮೋಕ್ಷ

"History tells us that no nation has ever yet been civilised or educated save through its own vernacular and that the uprooting of a vernacular is the extermination of the race, or at least of all its peculiar characteristics Speech, thought and existance are so closely bound together that it is impossible to separate them. They are the great Trinity in the unity of the race."*

"ತನ್ನ ದೇಶ ಭಾಷೆಯ ಮೂಲಕವಾಗಿ ಅಲ್ಲದೆ ಯಾವ ಜನಾಂಗವೂ ಸಭ್ಯತಾ ಪದ ಪಡೆಯಲಿಲ್ಲ. ನಾಗರಿಕ ಸ್ಥಿತಿಗೆ ಬರಲಿಲ್ಲ; ಚರಿತ್ರೆ ಸಾರುತ್ತಿರುವ ಪಾಠವಿದು. ದೇಶ ಭಾಷೆಯೊಂದನ್ನು ನಿರ್ಮೂಲ ಮಾಡುವುದೆಂದರೆ ಆ ಕುಲದ ರೂಪನಾಮ ಕ್ರಿಯೆಗಳನ್ನೆಲ್ಲ ಧ್ವಂಸ ಮಾಡುವುದೆಂದರ್ಥ. ಕಡೆಗೆ ಆ ಕುಲದ ಕೀರ್ತಿಗೆ ಕಾರಣವೆನಿಸಿದ ವೈಶಿಷ್ಟ್ಯವನ್ನೆಲ್ಲ ಕೊನೆಗಾಣಿಸುವುದೆಂದರ್ಥ. ವಾಕ್, ವಿಚಾರ, ಜೀವನ – ಈ ಮೂರೂ ಒಂದು ಕುಲದ ಐಕ್ಯತಾ ಲಾಂಛನಗಳು – ತ್ರಿಮೂರ್ತಿ ಸ್ವರೂಪ–ಮೂರನ್ನು ಪ್ರತ್ಯೇಕಗೊಳಿಸಲಾಗದಂಥಹ ಬಾಂ ಧ ವ್ಯ ದಿಂ ದ ಅವು ಕೂಡಿವೆ."

ಅರ್ಧ ಶತಮಾನದ ಹಿಂದೆ ಮಹಾ ಮೇಧಾವಿಗಳೂ, ಶಾಸ್ತ್ರ ಕೋವಿದರೂ, ಆದವರು ಹೇಳಿದ ಮಾತಿದು. "ದೇಶಭಾಷೆ"ಯನ್ನು ಕಿರುಗಣ್ಣಿನಿಂದ ಕಂಡು,* ಕರ್ಚಿಹಾರ ಮರ್ಯಾದೆ ಮಾಡುವ, ಮನೋಧರ್ಮ ಬೆಳೆಸಿಕೊಂಡಿರುವವರು ಈ ಮಾತನ್ನು ಮೇಲಿಂದಮೇಲೆ ಓದಿ ಮೆಲುಕು ಹಾಕಬೇಕು. ದೇಶ ಭಾಷೆಗಳ ಸ್ಥಾನ ಕುರಿತ ಮಾತಿದು.

### "ಸಂಬಳಮೋ" ಈ ಮಾತಿಗೇನರ್ಥ?

"ಕಾವ್ಯಾವಲೋಕನ"ದ ೩೮ನೆಯ ಸೂತ್ರಕ್ಕೆ "ಅಪರಾರ್ಧಕ್ಕೆ"ಂದು ಈ ಉದಾಹರಣೆಯನ್ನು ಕೊಡಲಾಗಿದೆ.

"ಆವಳುಮನೊಲಿಸಿ ಕಂಟಿಸಿ
ಗೋವರ ಗುಗ್ಗುರಿಗೆ ಮಾಡಿಯುಂ ತಣಿಯಯ್ ಪೆ
ರ್ಮ್ಮಾವುಲಿಗನಯೋ ಪೇಟೀಂ
ಸ್ತ್ರೀವಧೆ ನಿನಗಶ್ವಮೇಧಮೋ ಸಂಬಳಮೋ"

ಈ ಕಂದ ಪದ್ಯವೇನು ನಾಗವರ್ಮನದೋ, ಮತ್ತೆ ಯಾರ ಕಾವ್ಯದಿಂದಲಾದರೂ ಎತ್ತಿ ಕೊ ಟ್ಟ ದೋ ೀ ಗೊತ್ತಿಲ್ಲ. "ಸಂಬಳಮೋ" ಎಂಬ ಪಾಠವು ನಿರ್ದುಷ್ಟವಾಗಿರುವ ಪಕ್ಷಕ್ಕೆ ಅದರ ಅರ್ಥವೇನು?

---

* Modern Review, May, 1915.

* ಮೈಸೂರು ಸರ್ಕಾರದವರು "ಗೆಜೆಟ್"ನ್ನು ಇಂಗ್ಲಿಷ್-ಕನ್ನಡ ಎರಡರಲ್ಲೂ ಪ್ರಕಟಿಸುವರಂತೆ ಇವೆರಡೂ "ಅಧಿಕೃತ ಗೆಜೆಟ್"ಗಳೆಂದು ಪರಿಗಣಿಸಿದರೂ ವ್ಯತ್ಯಾಸವಿರುವ ಸಂದರ್ಭಗಳಲ್ಲಿ ಇಂಗ್ಲಿಷ್ ಪ್ರಕಟನೆ ಮಾತ್ರ ಅಧಿಕೃತವಂತೆ! ಯಾಕೀ ತಾರತಮ್ಯ? ಇಂಗ್ಲಿಷ್ ಪಟ್ಟದರಸಿ! ಕನ್ನಡ "ಬಂಗಾರದರಸಿ"! ರೂಢಿಯ ಮಾತಿನಲ್ಲಿ ಹೇಳಬಹುದಾದರೆ ಇಂಗ್ಲಿಷ್ "ಧರ್ಮ ಪತ್ನಿ"! ಕನ್ನಡ "ಕೂಡಿಕೆ"ಯವಳು!

ಕಿಟೆಲನೇನೋ ತನ್ನ ನಿಘಂಟುವಿನಲ್ಲಿ (ಪು. ೧೫೧೭) 'ಸಮ್ಬಳ', 'ಸಮ್ಬಲ', ಎಂಬ ಮಾತನ್ನು ಕೊಟ್ಟು, ಅರ್ಥವನ್ನು ಸೂಚಿಸಲು ಕೆಲವು ಗಾದೆಗಳನ್ನು ಕೊಟ್ಟಿದ್ದಾನೆ. ಸಮಾನಾರ್ಥ ಸೂಚಕವಾಗಿ ಆಂಗ್ಲ Salary ಎಂಬ ಮಾತನ್ನು ಕೊಟ್ಟಿದ್ದಾನೆ.

ಕುಮಾರ ರಾಮನ ಸಾಂಗತ್ಯದಲ್ಲಿ (ಶಾರದಾ ಮಂದಿರ, ೭-೫೯) ಈ ಸಾಲುಗಳಿವೆ:

"ನಿನ್ನ ಕುಮಾರರಾಮನ ಕಳುಹುವುದೆಮ್ಮ
ಕನ್ನೆಯ ನವಗಿತ್ತಪೆವು
ನನ್ನಿ ಯಿಾ ಮಾತು ಶಿವನಾಣೆ ಕೇ
ಳ್ನಿನ್ನ ಸಂಬಳಕೆ ರಾಜ್ಯವನು"

ಇಲ್ಲಿ "ಸಂಬಳ" ಎಂಬ ಮಾತಿಗರ್ಥವೇನು?

"ಸಮ್ಬಳಕ್ಕಾದರೆ ಮುನ್ದೆ; ಚಾಕರಿಗಾದರೆ ಹಿನ್ದೆ"

"ನೋಡದ ಕೆಲಸಕ್ಕೆ ಆಡದ ಸಮ್ಬಳ"

"ಶಾನಭೋಗನ ಸಂಬಳ ಸನ್ತೋ ಎಂದು ಕೇಳಬೇಡ;
ಹೆಂಡತಿ ಕಡೆಯವರು ಉಂಡರೋ ಎಂದು ಕೇಳಬೇಡ"

ಈ ಗಾದೆಗಳಲ್ಲಿ ಬಳಸಿರುವ "ಸಮ್ಬಳ" ಎಂಬ ಮಾತಿನ ಅರ್ಥದಲ್ಲಿ ಮೇಲಿನ ಎರಡು ಪದ್ಯಗಳಲ್ಲೂ ಆ ಮಾತನ್ನು ಬಳಸಲಾಗಿದೆಯೆ?

"ಸಮ್ಬಲ", ಸಮ್ಬಳ"ಎಂಬುದು ಸಂಸ್ಕೃತದ "ಶಂಬಲಂ, ಶಂಬಲ;" ಎಂಬ ಮಾತಿನಿಂದ ಹುಟ್ಟಿದುದೋ? ಹಾಗಾದರೆ ಆ ಮಾತಿಗೆ "ಬುತ್ತಿ" ಎಂದರ್ಥ.

**ಸೂಟಿ, ಜೋಳಿ; ಕೋಟಿ**

ಕುಮಾರವ್ಯಾಸನ ಮಹಾಭಾರತದ ಆದಿಪರ್ವದ ಇಪ್ಪತ್ತೊಂದನೆಯ ಸಂಧಿಯ ಮೊದಲನೆಯ ಪದ್ಯವಿದು:

*"ಕೇಳು ಜನಮೇ ಜಯ ಧರಿತ್ರೀ
ಪಾಲ ಗಜನಗರಿಯಲಿ ಪಾಂಡವ
ರಾಳ ಕೌರವರಾಳ ಸೆಣಸಿನ ಕಾಲುಮೆಟ್ಟುಗಳ
ಸೂಟಿ ಮತ್ಸರ ಬಿರುದು ಪಾಡಿನ
ಜೋಳಿ ಕಲಹದ ಕದಡು ಜೂಜಿನ
ಕೋಟಿ ಚಲದೊಳತೋಟಿ ಮಸಗಿತು
ದಿವಸ ದಿವಸದಲಿ"

ಈ ಪದ್ಯದಲ್ಲಿ ಬಳಸಿರುವ "ಸೂಟಿ, ಜೋಳಿ, ಕೋಟಿ" ಎಂಬ ಮಾತುಗಳ ನಿಷ್ಕೃಷ್ಟಾರ್ಥವೇನು? ಒಂದೊಂದು ಮಾತಿನ ಹಿಂದೆಯೂ ಕ್ರಮವಾಗಿ "ಕಾಲುಮೆಟ್ಟುಗಳ", "ಬಿರುದು ಪಾಡಿನ", "ಜೂಜಿನ" ಎಂಬ ವಿಶೇಷಣಗಳಿವೆ. ಇವುಗಳ ಸಹಾಯದಿಂದ ಕೊಂಚಮಟ್ಟಿಗೆ ಅವುಗಳ ಮುಂದಿನ ಮಾತುಗಳಿಗೆ ಅರ್ಥ 'ಹೀಗಿರಬಹುದೆ' ಎಂದು ಅನುಮಾನ ಮಾಡಬಹುದು.

"ರಭಸದ ಶೈಲಿಯ ಕುಮಾರವ್ಯಾಸ ಒಮ್ಮೊಮ್ಮೆ ತನ್ನ ಭಾವಪ್ರವಾಹದಲ್ಲಿ ಕೊಚ್ಚಿಕೊಂಡು ಬಂದ ಮಾತುಗಳನ್ನು ಬಳಸಿಬಿಡುತ್ತಾನೆ. ಕೊಂಚ ವಿಚಾರ ಮಾಡಿದರೆ, ಬಹಳ ಮಾಡಿ ಅವನೇ ಆ ಮಾತುಗಳನ್ನು ತೂಗಿ ನೋಡಿ, ಪ್ರಯೋಗ ಮಾಡುತ್ತಿದ್ದನೆಂದು ಹೇಳಬಹುದು. ಆದರೆ ಅವನ ಪ್ರಯೋಗ ಪರಾಕ್ರಮ ಎಂತಹವರನ್ನಾದರೂ ಎದೆಗೆಡಿಸುವಂತಹುದು"

ಎಂಬದಾಗಿ ಟೀಕಾಕಾರರು ಹಲವರು ಹೇಳುವುದುಂಟು. ಹಲಗೆ ಬಳಪವನ್ನು ನಾರಣಪ್ಪ ಹಿಡಿದು ಬರೆಯದೆ ಇದ್ದರೂ, ತೂಗಿ ನೋಡದೆ, ಅವನು ಮಾತುಗಳನ್ನು ಬಳಸಿದ್ದಾನೆಂಬ ಮಾತು ಸರಿಯಲ್ಲ. ಮಾತೊಂದು ನಮಗೆ ಅರ್ಥವಾಗದೆ ಇದ್ದರೆ ಬರೆದವನಲ್ಲಿ ತಪ್ಪನ್ನೆಣಿಸುವುದು ಯಾವ ನ್ಯಾಯ?

*ಮೈಸೂರು 'ಓರಿಯಂಟಲ್ ಲೈಬ್ರರಿ'ಯ ಪಂಡಿತರಾಗಿದ್ದ ವಿ. ಶಾಮಾಚಾರ್ಯರು ಸಂಪಾದಿಸಿ, ೧೯೧೩ರಲ್ಲಿ ಪ್ರಕಟವಾದ 'ಕನ್ನಡ ವಿಭಾಗದ ಐದನೆಯ ಗ್ರಂಥ'.

---

ಶಾಸ್ತ್ರ ವಿಷಯಗಳು ಪ್ರಾಯಿಕವಾಗಿ ರಸವತ್ತಾದುವುಗಳಲ್ಲ; ಅವು ಪಾಠಕರಿಗೆ ಕಾವ್ಯಗಳಷ್ಟು ಮನೋರಂಜಕಗಳಾಗಲಾರವು. ಆದಕಾರಣ ಶಾಸ್ತ್ರ ಲೇಖಕರು ತಮ್ಮ ಶೈಲಿಯನ್ನು ಚಿತ್ತಾಕರ್ಷಕವನ್ನಾಗಿ ಮಾಡಲು ಕಾವ್ಯಲೇಖಕರಿಗಿಂತ ಹೆಚ್ಚಾಗಿಯೇ ಪ್ರಯಾಸಪಡಬೇಕು.

—ಡಿ.ವಿ.ಜಿ.

ಒಂದು ಟಿಪ್ಪಣಿ:

# ಸೋಲಿಗರ ಕನ್ನಡದಲ್ಲಿ ಶಕಟರೇಫ

**ಕೆ. ಎಸ್. ಗುರುಬಸವೇಗೌಡ**

"ಸುಮಾರು ೧೧ನೆಯ ಶತಮಾನದಲ್ಲಿ 'ೞ'ವೂ, ೧೬ನೆಯ ಶತಮಾನದಲ್ಲಿ 'ಱ'ವೂ ಬಿಟ್ಟುಹೋದುವು. ಈ ಅಕ್ಷರಗಳ ಉಚ್ಚಾರವು ನಿಂತ ಮೇಲೂ ಅವುಗಳನ್ನು ಗ್ರಂಥಗಳಲ್ಲಿ ಉಪಯೋಗಿಸುವುದು ಕೆಲಕಾಲದವರೆಗೂ ವಾಡಿಕೆಯಾಗಿತ್ತು. ಈಚೆಗೆ ಅದೂ ನಿಂತುಹೋಗಿದೆ. 'ೞ'ಕ್ಕೆ ಬದಲಾಗಿ 'ಳ'ವೂ, 'ಱ'ಕ್ಕೆ ಬದಲಾಗಿ 'ರ'ವೂ ಬಳಕೆಗೆ ಬಂದಿವೆ."[೧]

ಮೇಲಿನ ಮಾತು ಇಂದು ಬಳಕೆಯಲ್ಲಿರುವ ಕನ್ನಡದ ಹಲವಾರು ಉಪಭಾಷೆಗಳ ದೃಷ್ಟಿಯಿಂದ ಸರಿಯೇ. ಆದರೆ ಸೋಲಿಗರ ಕನ್ನಡದ ದೃಷ್ಟಿಯಿಂದ ಅಷ್ಟು ಸರಿಯಲ್ಲ. ಹಳಗನ್ನಡದ ೞಕಾರವು ವ್ಯಂಜನಗಳು ಮುಂದಿದ್ದಾಗ ರೇಫವಾಗಿಯೂ, ಇತರೆಡೆಗಳಲ್ಲಿ ಳಕಾರವಾಗಿಯೂ ಪರಿವರ್ತನೆಗೊಂಡಿರುವ ವಿಷಯ ಕನ್ನಡ ಭಾಷಾ ಚರಿತ್ರೆಯನ್ನು ಅಭ್ಯಾಸ ಮಾಡಿದವರಿಗೆಲ್ಲಾ ತಿಳಿದಿದೆ. ೞ ಕಾರವು ಧ್ವನಿಪ್ರಭೇದವಾಗಿಯೂ (allophone) ಉಳಿದುಬರಲಿಲ್ಲ. ಹಾಗೆಯೇ ಱ ಕಾರವೂ ಮಾಯವಾಗಿ ಅದರ ಸ್ಥಾನದಲ್ಲಿ ರೇಫವು ಕಾಣಿಸಿಕೊಂಡಿದೆ. ಸೋಲಿಗರ ಕನ್ನಡದಲ್ಲಾದರೆ ೞ ಱ ಎಂಬೆರಡೂ ಧ್ವನಿಗಳೂ ಉಂಟು; [ೞ್] |ಳ್| ಎಂಬುದರ ಧ್ವನಿ ಪ್ರಭೇದವಾಗಿಯೂ, |ಱ್| ಎಂಬುದು ಧ್ವನಿಮವಾಗಿಯೂ (phoneme) ಕಂಡುಬರುತ್ತದೆ. ಈ ವಿಷಯವು ಕನ್ನಡದ ವೈಯಾಕರಣಿಗಳಲ್ಲೂ ಸಂಶೋಧಕರಲ್ಲೂ ಕುತೂಹಲವನ್ನು ಕೆರಳಿಸುವುದರಲ್ಲಿ ಸಂದೇಹವಿಲ್ಲ.

ಮೊದಲು ೞಕಾರವನ್ನು ನೋಡೋಣ. ಡಕಾರವು ಹುಟ್ಟುವ ಸ್ಥಾನವನ್ನು ಒತ್ತಿ ಉಚ್ಚರಿಸಿದರೆ ೞಕಾರವು ಹುಟ್ಟುತ್ತದೆಯೆಂದು ಕೇಶಿರಾಜ ಹೇಳಿದ್ದಾನೆ. ಸೋಲಿಗರ ಉಚ್ಚಾರಣೆಯಲ್ಲಿ ೞ ಕಾರವು ಹುಟ್ಟುವ ಬಗೆ ಹೀಗೆ: ಪ್ರತಿವೇಷ್ಟಿತ ಜಿಹ್ವಾಗ್ರವು (retroflexed tongue-tip) ಅಂಗಳಿನ ಕಡೆಗೆ ಏರುತ್ತದೆ, ಆದರೆ ಅದನ್ನು ಸ್ಪರ್ಶಿಸುವುದಿಲ್ಲ. ಶ್ವಾಸಕೋಶದಿಂದ ಹೊರಬರುವ ಉಸಿರು ನಾಲಗೆಯ ಪಾರ್ಶ್ವಗಳಲ್ಲಿಯೂ, ನಾಲಗೆಯ ಮೇಲ್ಭಾಗದಲ್ಲಿಯೂ ಹಾಯುತ್ತದೆ, ಈ ಧ್ವನಿಘೋಷ.

ಸೋಲಿಗರ ಕನ್ನಡದಲ್ಲಿ, ಎರಡು ಸ್ವರಗಳ ನಡುವೆ [ೞ್] [ಳ್] ಎಂಬೆರಡು ಧ್ವನಿಗಳೂ ಪ್ರತಿವೇಷ್ಟಿತ ಯಕಾರವೂ ವಿಕಲ್ಪವಾಗಿ ಬರುತ್ತವೆ. ಈ ಮೂರು ಧ್ವನಿಗಳ ಪರಸ್ಪರ ವಿನಿಮಯದಿಂದ ಅರ್ಥವ್ಯತ್ಯಾಸವು ತಲೆದೋರುವುದಿಲ್ಲವಾದ್ದರಿಂದ, ಈ ಮೂರು ಧ್ವನಿಗಳೂ ಒಂದೇ ಧ್ವನಿಮಾಕ್ಕೆ ಸೇರಿದ ಧ್ವನಿಗಳು. ಉದಾ:

ಮಳೆ ~ ಮೞೆ ~ ಮಯೆ̣

ಬಾಳೆ ~ ಬಾೞೆ ~ ಬಾಯೆ̣

ಉಳಿ ~ ಉೞಿ ~ ಉಯಿ̣

ಕೋಳಿ ~ ಕೋೞಿ ~ ಕೋಯಿ̣

ಇತರೆಡೆಗಳಲ್ಲಿ [ಳ್] ಎಂಬುದೇ ಕಂಡುಬರುತ್ತದೆ.

[ಱ್] ಎಂಬುದನ್ನು, ಇನ್ನು ನೋಡಬಹುದು. ಈ ಧ್ವನಿಯೂ [ರ್] ಎಂಬುದೂ ಬೇರೆ ಬೇರೆ ಧ್ವನಿಮಾಗಳಿಗೆ ಸೇರಿದವುಗಳು ಎಂಬುದಕ್ಕೆ ಸೋಲಿಗರ ಕನ್ನಡದಿಂದ ಕೆಲವು ಉದಾಹರಣೆಗಳನ್ನು ನೋಡಬಹುದು. ಉದಾ:

ಅಱೆ 'ಬಂಡೆ'    ಅರೆ '(ಕಾರ) ಅರೆ'

ಮುಱಿ '(ಕಡ್ಡಿ)ಮುರಿ' ಮುರಿ 'ಕೈಗೆ ಹಾಕಿ ಕೊಳ್ಳುವ ಬೆಳ್ಳಿಯ ಸಲಿಗೆ'

ಕೆಱೆ 'ಜಲಾಶಯ' ಕೆರೆ '(ತಲೆ)ಕೆರೆ'

ಊಱು 'ಒತ್ತು' ಊರು 'ಹಳ್ಳಿ'

ಇಱು 'ಇರುವೆ' ಇರು 'ಉಳಿ' ಇತ್ಯಾದಿ.

ಹಳಗನ್ನಡದಲ್ಲಿ ಶಕಟರೇಫವು ವ್ಯಂಜನಗಳ ಹಿಂದೆ ಕಂಡುಬರುವುದಿಲ್ಲ. ಸೋಲಿಗರ ಕನ್ನಡದ ವಿಶೇಷವೆಂದರೆ,

---

೧. ನೋಡಿ: ಕನ್ನಡ ಕೈಪಿಡಿ, ಸಂಪುಟ ೧, ಪು. ೩ ೧೯೫೫.

ಱ್ ಎಂಬುದು ವ್ಯಂಜನಗಳ ಹಿಂದೆಯೂ ಕ್ವಚಿತ್ತಾಗಿ ಕಾಣಿಸಿಕೊಳ್ಳುವುದುಂಟು. ಉದಾ:- ಕಿಱ್ಬ 'ಕಿರುಬ' (ಕಿಱುಬ ಎಂಬ ರೂಪವೂ ಉಂಟು)

ಅಱ್ವತ್ತು 'ಅರುವತ್ತು'

ಹನ್ನೆಱ್ಡು 'ಹನ್ನೆರಡು'

ಇತ್ಯಾದಿ

ಹಾಗಾದರೆ, ಈ [ಱ್] ಎಂಬುದರ ಉಚ್ಚಾರಣೆ ಹೇಗಾಗುತ್ತದೆ? ಸ್ವನಶಾಸ್ತ್ರದ ಪ್ರಕಾರ ಅದನ್ನು ಘೋಷ ಪಶ್ಚವರ್ತ್ಯ ಕಂಪಿತ (Voiced Alveolar trill) ಎಂದು ಕರೆಯಬಹುದು.

ಶಕಟರೇಫದ ಪರಿವರ್ತನೆಯನ್ನು ಈ ರೀತಿ ಚಿತ್ರಿಸಬಹುದು:




ಈ ಱ ಕಾರವು ತಮಿಳಿನಲ್ಲಿಯೂ ಅಳಿಸಿಹೋಗುತ್ತಿರುವುದು ಕಂಡುಬರುತ್ತದೆ ಎಂದು ಕಮಿಲ್ ಜ್ವಲೆಬಿಲ್ ಹೇಳಿದ್ದಾರೆ. ಅಲ್ಲದೆ, ತೆಲುಗಿನಲ್ಲಿ ಮಾತು ಮತ್ತು ಬರವಣಿಗೆ ಎರಡರಲ್ಲೂ ಮಾಯವಾಗಿದೆ.೨

೨. ಸೋಲಿಗರ ಕನ್ನಡದ ವ್ಯಾಕರಣದಬಗ್ಗೆ ನನ್ನ "Descriptive Analysis of Soliga" ಎಂಬ ಅಪ್ರಕಟಿತ ಮಹಾಪ್ರಬಂಧದಲ್ಲಿ ಹೆಚ್ಚಿನ ವಿವರಗಳಿವೆ.

---

## ಮುದ್ದಣ

ಕವಾಯತು ಮುಗಿಸಿದ ದೋಣಿ
ನಡು ಪಯಣದಲೆಯ ಭೀಕರತೆಗೆ ಬೆಚ್ಚಿ
ತಲೆ ಕೆಳಗಾಗಿ ನೀರೊಳಗಿಳಿಯಿತು
ಅಯ್ಯೋ ಅಂತ ಕೂಗಿತು ಕನ್ನಡದೆದೆ!
ಅಕಾಲದೊಡಲಲ್ಲಿ ನೂರ್ಕಾಲ ಬಾಳುವೆಯ
ಪಡೆದ ಮಹಾತಪಸ್ವಿ.
ನಟ್ಟನಡು ಹಗಲಲ್ಲೆ ಮಾಯವಾದ ಮುಗಿಲಹಣ್ಣು
ಸಂಜೆಗೆಂಪಿನ ಹಾಗೆ ಚಣ ಬೆಳಗಿ
ಹೊರಟ ಮಹಾನುಭಾವ:
(ಸಂಜೆ ಸಂಜೆಗಳೆಲ್ಲ ಬರಿಬಂಜೆ ನೀನಿಲ್ಲದಾಗ)
ಕಳಸವದೊ ಮಿಂಚುತಿದೆ ಗುಡಿಯಗೋಪುರದಲ್ಲಿ
ಗರ್ಭದಲ್ಲಿ ಹೊಕ್ಕದೇವರು ಅಳಿಸಬಹುದೆ? ಆ ಮಿಂಚ!
ಈ ಮುದ್ದಣ – ಆ ಕಳಸದ ಪ್ರತಿರೂಪ
ಕನ್ನಡದ ಕಾಡಲ್ಲಿ ನರುಗಂಪ ಹಬ್ಬಿಸಿದ
ಸಾಹಿತ್ಯಧೀಮಂತ
ಅಷ್ಟೆ ಅಲ್ಲ – ಪಾವನ ತುಳಸಿ.

ಚಂದ್ರಶೇಖರತಾಳ್ಯ

ಒಂದು ವಿವೇಚನೆ:

# ರಕ್ಕಸಿಯರ(ರು ?) ಕಂಡ ಕುಂಬಳ

**'ಕುಶಲಾನುಜ'**

ಪಂಪನಿಗೆ ದೇಸಿಯಲ್ಲಿ ಬಹಳ ಆದರ. ಪಂಪನ ಕಾವ್ಯದಲ್ಲಿ ದೇಸಿ ಹದಗೊಂಡಿದೆ. ಅದರ ಬಳಕೆ ಹಿತಮಿತವಾಗಿ ಬಂದು 'ಕನ್ನಡದ ಜಾಣ್ಣುಡಿಯ ಗೊತ್ತೋ' ಎಂಬಂತೆ ಅವನ ಭವ್ಯರಮಣೀಯ ಕಾವ್ಯ 'ವಿಕ್ರಮಾರ್ಜುನ ವಿಜಯ' ಶೋಭಿಸಿದೆ. ಅವನೇ ಹೇಳಿಕೊಂಡಂತೆ 'ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದು; ಒಂದಿ ದೇಸಿಯೊಳ್ ಪುಗುವುದು; ಪೊಕ್ಕು ಮಾರ್ಗದೊಳ್ ತಳ್ವುದು; ತಳ್ತೊಡೆ ಕಾವ್ಯಬಂಧಂ ಒಪ್ಪುಗುಂ', ಇದು ಅವನ ಕಾವ್ಯಶೈಲಿ. ಆದರೆ ಅವನು ತನ್ನ ಕಾವ್ಯದಲ್ಲಿ ಬಳಸಿದ ಕೆಲವು ಆಡುನುಡಿಗಳು ಇಂದು ಬಳಕೆಯಲ್ಲಿಲ್ಲವಾದ್ದರಿಂದಲೋ ಅಥವಾ ಪಂಡಿತರಿಗೆ ದೇಸಿಭಾಷೆಯ ಸಂಪರ್ಕವಿಲ್ಲದ್ದರಿಂದಲೋ, ಅವುಗಳ ಅರ್ಥತಿಳಿಯದೆ ಕಾವ್ಯ ರಸಾಸ್ವಾದನೆಗೆ ತಡೆಯನ್ನುಂಟುಮಾಡಿವೆ. ಅಂತಹ ಆಡುನುಡಿಗಳಲ್ಲಿ ಪಂಪಭಾರತದ ನವಮಾಶ್ವಾಸ-ಪದ್ಯ ೪೮ರಲ್ಲಿ ಬರುವ 'ರಕ್ಕಸಿಯರ ಕಂಡಕುಂಬಳ' ಒಂದು. ಅದರ ವಿವೇಚನೆಯೇ ಪ್ರಸ್ತುತ ಲೇಖನದ ಗುರಿ.

ಪುಸಿಯೆನೆ ಸಾಮಮುಂ ನುಡಿದು ಭೇದಮನುಂಚೊಡ
ತಾಗೆಮಾಡಿ ಛಿ|
ದ್ರಿಸಲೊಳಪೊಕ್ಕು ಮಿಕ್ಕು ನೆಗಟ್ದುಗ್ರ ವಿರೋಧಿ
ಗಳೆತ್ತಮೆಯ್ದೆ ಬಂ|
ಚಿಸಿ ಪೊಱಗಣ್ಗೆ ಸಯ್ದರೆನೆ ತಾವೊಳಗಂ ತವೆತೋಡಿ
ತಿಂದುರ|
ಕ್ಕಸಿಯರ ಕಂಡ ಕುಂಬಳದ ಮಾಟಕ್ಕೆವೊಲಾಗಿರೆ
ಮಾಡದಿರ್ಪರೇ ||

ವ|| ನಾಮೆಲ್ಲಂ ಒಂದೆ ಗರುಡಿಯೊಳ್ ಓದಿದ ಮಾನಸರೆವ್, ಎಮ್ಮಂ ನಿಮ್ಮಡಿಕೆಮ್ಮನೆ ಬಟಲಿಸಲ್ವೇಡ, ಬಂದ ಬಟ್ಟೆಯಿನೆ ಬಿಜಯಂ ಗೆಯ್ಯಿಂ

* * *

ಪಂಪನು ಸೃಷ್ಟಿಸಿದ ಪಾತ್ರಗಳು ಸಂಯಮತೆಯನ್ನು ಪಡೆದವುಗಳು. ಮಾನವೀಯ ಜೀವಂತ ಲೌಕಿಕ ಮೂರ್ತಿಗಳು. ಸಿಟ್ಟುಗೊಂಡಾಗ ದುರ್ಯೋಧನ ಶ್ರೀಕೃಷ್ಣನನ್ನು 'ನೀನು' ಎಂದು ತೆಗಳಿ ಸಂಬೋಧಿಸಿದರೆ ಮುಂದೆ ಕೋಪದ ಆವೇಶ ತಗ್ಗಿ ಬುದ್ಧಿಸ್ಥಿಮಿತಕ್ಕೆ ಬಂದಾಗ ಶ್ರೀಕೃಷ್ಣನ ಗುರುತ್ವವನ್ನು ಸರಿಯಾಗಿಯೇ ಚಿಂತನೆಮಾಡಿ 'ನಿಮ್ಮಡಿ ಬಿಜಯಂಗೆಯ್ಯಿಂ' ಎಂದು ವಿನಮಿತಚಿತ್ತನಾಗಿ, ನಮ್ರನಾಗಿ ವಿನಂತಿಸಿಕೊಳ್ಳುತ್ತಾನೆ. ಸೂಕ್ಷ್ಮಮತಿಯಾದ ಫಣಿಕೇತನನು ಪಾಂಡವರನ್ನೂ ಅವರ ಮಂತ್ರಿಯಾದ ಶ್ರೀಕೃಷ್ಣನನ್ನು ಹೇಗೆ ಎಷ್ಟು ಆಳವಾಗಿ ಅರ್ಥವಿಸಿಕೊಂಡಿದ್ದಾನೆ ಎಂಬುದಕ್ಕೆ ಕೌರವನ ಈ ತೂಕದ ಮಾತೇ ನಿದರ್ಶನ. ಇಡೀ ಅವರ ಪಾತ್ರಗಳಿಗೇ ಕನ್ನಡಿ ಹಿಡಿದಂತಿದೆ ಕುರುಪತಿಯ ನುಡಿ. "ಲೋಕದ ಕಣ್ಣಿಗೆ ಸಾಮವನ್ನು ನುಡಿಯುವರೋ ಎಂಬ ಭ್ರಮೆಯನ್ನು ಹುಟ್ಟಿಸಿ, ಭೇದೋಪಾಯದಿಂದ ಒಳಗೆ ವೈರಿಗಳನ್ನು ಛಿದ್ರಿಸಿ, ಭೇದೋಪಾಯಕ್ಕೂ ಬಗ್ಗದ ಮಿಕ್ಕ ಉಗ್ರವಿರೋಧಿಗಳನ್ನು ವಂಚಿಸಿ, ಹೊರಗಣ್ಣಿಗೆ ಪ್ರಾಮಾಣಿಕರಂತೆ ವರ್ತಿಸಿ, ಒಳಗೆ ಅವರ (ವೈರಿಗಳ) ಅಂತಸ್ಸತ್ವವನ್ನು ಹೀರಿ, ಅವರನ್ನ 'ರಕ್ಕಸರು ಕಂಡ ಕುಂಬಳದ ಮಾಟಕ್ಕೆವೊಲ್ ಮಾಡದಿರ್ಪರೇ" ಎಂದು ಇದರ ಅರ್ಥ. ಎಷ್ಟು ಮಾರ್ಮಿಕವಾದ ಮಾತು. ದುರ್ಯೋಧನ ಶ್ರೀಕೃಷ್ಣನ ಹಾಗೂ ಪಾಂಡವರ ಚರ್ಯೆಯನ್ನು ಅದೆಷ್ಟು ಸೂಕ್ಷ್ಮವಾಗಿ ಅರ್ಥವಿಸಿಕೊಂಡಿದ್ದಾನೆ. ಭೂತ, ವರ್ತಮಾನದ ಇತಿವೃತ್ತದಿಂದ ಭವಿಷ್ಯವನ್ನು ದೂರದೃಷ್ಟಿಯಿಂದ ದರ್ಶಿಸಿದ ಕೌರವನು ಸಾಮಾನ್ಯ ಮುತ್ಸದ್ದಿಯಲ್ಲ. ಸಾಮಾನ್ಯ ರಾಜಕಾರಣಿಯಲ್ಲ. ಪಾಂಡವ ಕೌರವರೆಲ್ಲರೂ ಒಂದೇ ಗರುಡಿಯಲ್ಲಿ ಓದಿದವರು. ಒಬ್ಬೊಬ್ಬರ ಚರ್ಯೆ ಇನ್ನೊಬ್ಬರಿಗೆ ತಿಳಿದೇ ಇದೆ. 'ಒಂದೇ ಗರುಡಿ' ಎಂಬ ನುಡಿಮುತ್ತು ನಿಜವಾಗಿಯೂ ಮಾಣಿಕ್ಯದ ದೀಪ್ತಿಯೋ. ಪಾಂಡವರು ಯಾವ ರೀತಿಯಲ್ಲಿ ಚಿಂತನೆಗೆಯ್ಯುತ್ತಾರೋ, ಯಾವ ಭೇದೋಪಾಯವನ್ನು ಅಳವಡಿಸುತ್ತಾರೋ, ಹೇಗೆ ಹಗೆಗಳನ್ನು ಸಾಧಿಸುತ್ತಾರೋ ಹಾಗೆಯೇ ಕೌರವರೂ ಮಾಡುತ್ತಾರೆ ಎಂಬರ್ಥ ಧ್ವನಿಸುವುದಿಲ್ಲವೇ? ಒಂದೇ ಕಾರ್ಖಾನೆಯಿಂದ ಹೊರಬಂದ ಸಿದ್ಧವಸ್ತುಗಳಲ್ಲಿ ಒಂದೇ ತೆರನಾದ ಗುಣವಿರುವುದರಲ್ಲಿ ಆಶ್ಚರ್ಯವೇನಿದೆ?

ಕೌರವನು ನುಡಿದ ಭವಿಷ್ಯ ಸುಳ್ಳಾಗುವುದಿಲ್ಲ. ಪಾಂಡವರ ಸಾಮಾನ್ಯ ಭೇದೋಪಾಯಕ್ಕೆ ಬಗ್ಗದ ಭೀಷ್ಮನನ್ನು ಅವನಿಂದಲೇ ಅವನ ಸಾವನ್ನು ದಾನವಾಗಿ ಪಡೆದು, ಶಿಖಂಡಿಯ ನೆವದಿಂದ ಶರಶಯ್ಯಗತರನ್ನಾಗಿ ಮಾಡಿದರು; ವಂಚನೆಯಿಂದ ಜಯಿಸಿದರು.

ಬಿಲ್ಲೋಜನಾದ ದ್ರೋಣನನ್ನು ಪುಸಿದು ಕೊಂದರು. ಭೇದೋಪಾಯಕ್ಕೆ ಬಗ್ಗಲಿಲ್ಲ ಚಾಪವಿದ್ಯಾಚಾರ್ಯ, ವಂಚನೆಯಿಂದಲಾದರೂ ಹಗೆಯನ್ನು ತೀರಿಸಬೇಕಾಗಿದೆ, ಎಂದು ದ್ರೋಣನ ಮಗ ಅಶ್ವತ್ಥಾಮನು ಸತ್ತ ಎಂದು 'ಧರ್ಮಜನು' ಪುಸಿದನೊ ಅಂದೇ ದ್ರೋಣ ಅಂತಃ ಪ್ರಾಣವನ್ನು ಹೊರಗೆ ಹರಿಯಬಿಟ್ಟನು. ಧೃಷ್ಟದ್ಯುಮ್ನ ಕೊಂದುದು ದ್ರೋಣನನ್ನಲ್ಲ; ಅವನ ಕಳೇಬರವನ್ನು ಅರ್ಥಾತ್ ಪೆಣನನಿರಿದು ಪಗೆಯಂ ಸಾಧಿಸಿದನೆಂದಾಯಿತು! ಆದಕ್ಕಾಗಿಯೇ

ಕುರುಪತಿ : 'ಅಂತರ್ಭೇದದೊಳಂತು ಛಿದ್ರಿಸಿದರಾ ಗಾಂಗೇಯರಂ ಕೊಂದರಿಂ
ದಿಂತೀಗಳ್ ಪುಸಿದೀ ಘಟೋದ್ಭವನನಾ ಕಾಂತೇಯರಾಯಕ್ಕೆಗೆಂ
ಟೆಂತೆಂತಕ್ಕುಮದಂ ಮದುದ್ಯಮಮೇ?

ಎಂದು ಹಿಂದೆ ಶ್ರೀಕೃಷ್ಣನಿಗೆ ಹೇಳಿದ ಮಾತಿಗೆ ಉಪಷ್ಟಂಬಕವಾಗಿ ಉದ್ಗಾರವೆತ್ತುತ್ತಾನೆ.

ಇನ್ನು ಸಾಮಾನ್ಯ ಭೇದಕ್ಕೆ ಪಕ್ಕಾಗದ ಕರ್ಣ, ಇವನನ್ನು ಸಂಹರಿಸಲು ಪಾಂಡವರ ಕಡೆಯವರು ವಂಚನೆ, ಸುಲಿಗೆ, ಎಲ್ಲವನ್ನು ಉಪಯೋಗಿಸಿದ್ದಾರೆ. ಕರ್ಣನ ಜನ್ಮ ವೃತ್ತಾಂತವನ್ನು ಸಂಧಿಗ್ಧ ಪರಿಸ್ಥಿತಿಯಲ್ಲಿ ಅವನಿಗೆ ತಿಳಿಸಿ 'ಅತ್ತಪುಲಿ, ಇತ್ತದರಿ, ಏನುಮಾಡಲಿ?' ಎಂಬ ಸ್ಥಿತಿಯಲ್ಲಿ ಕರ್ಣನನ್ನು ಸಿಕ್ಕುಹಾಕಿ ಅವನಿಂದಲೇ 'ಕುರುಪತಿಗಿಲ್ಲ ದೈವಬಲಂ' ಎಂದೆನ್ನವಂತೆ ಮಾಡಿದ ಕೈತವದ ಶಿಕ್ಷಾಗುರುವಿಗೆ ಏನೆನ್ನಲಿ? ಆಜಿಯಲ್ಲಿ ತಮ್ಮಂದಿರನ್ನು ಕೊಲ್ಲುವಂತಿಲ್ಲ; ಕೊಲ್ಲದೊಡೆ ಸ್ವಾಮಿಗೆ ಜಯವಿಲ್ಲ; ಕೊನೆಗೆ ಕರ್ಣನು ತನ್ನನ್ನು ತಾನೆ ಆಜಿಮುಖದಲ್ಲಿ ಕೆಡೆವೆನೆಂದೆನ್ನುವಂತಾಯಿತು; ಮಾಡುವಂತಾಯಿತು. ಅತ್ತ ಹೆತ್ತತಾಯಿ ಬಂದು ತನ್ನ ಐವರು ಮಕ್ಕಳ ಪ್ರಾಣದಾನವನ್ನು ತನ್ನ ಚೊಚ್ಚಿಲಮಗನಿಂದ ಪಡೆದು; ಕರ್ಣನ ಅಂತಸ್ಸತ್ವವನ್ನು ದಾನವನ್ನಾಗಿ ಪಡೆದು; ನಿರ್ಜೀವನನ್ನಾಗಿ, ಬಜೀವನನ್ನಾಗಿಮಾಡಿ ಕೊಂದಳು. ಹೆತ್ತತಾಯಿಯೇ ಅರ್ಭಕನನ್ನು ಕೊಲ್ಲುವೆಡೆ ಮಾಣ್ಬರಾರು? ಹೆರಕೊಲ್ಲಲ್ ಪರಕಾವನೇ? ರಾಜ್ಯದ ಆಸೆ ಕುಂತಿ ಮಗನನ್ನೇ ಈಡಾಡುವಂತೆ ಮಾಡಿತು. ಹಿಂದೆ ಜನಾಪವಾದಕ್ಕೆ ಹೆದರಿ ಹೆತ್ತ ಮಾಂಸದ ಮುದ್ದೆಯಂತಿದ್ದ ಶಿಶುವನ್ನು ಗಂಗಾರ್ಪಣ ಮಾಡಿದ ಭೀರುಕುಂತಿ, ಪೆಣ್ತನವನ್ನೂ ಕರ್ಣನ ತಾಯಿತ್ವವನ್ನೂ ಅಂದೇ ಈಡಾಡಿದ್ದಾಳೆ. ಸ್ವಾರ್ಥಿ ಕುಂತಿ ಏನನ್ನು ಮಾಡಳು? ಏನ್ನನ್ನು ಮಾಡಲಾರಳು? ಈಗ ಅವಳು ಪುರಿಗಣೆಯನ್ನು ಬೇಡಿಲ್ಲ; ಕರ್ಣನ ಜೀವವನ್ನು ಹೀರಿದ್ದು; ಮಾನವಳಾಗಿ ಅಲ್ಲ; ರಾಕ್ಷಸಿಯಾಗಿ! ಇರಲಿ.

ಹೀಗೆ ಭೇದೋಪಾಯದಿಂದ, ವಂಚನೆಯಿಂದ ವೈರಿಗಳನ್ನು ಕೊಂದರೂ ಲೋಕದ ಕಣ್ಣಿಗೆ ಪಾಂಡವರೂ, ಕೃಷ್ಣನೂ ಪ್ರಾಮಾಣಿಕರೇ! ಕೌರವರು ಮಾತ್ರ ದ್ರೋಹಿಗಳು!! ಸಾಮುದದೀವ; ವಂಚನೆಯ ಬಲೆ! ಅಸಾಮಾನ್ಯರಾದ ಭೀಷ್ಮ, ದ್ರೋಣ, ಕರ್ಣರನ್ನೇ ಬೇಟೆಯಾಡಿದ ಈ ರಕ್ಕಸರಿಗೆ ಉಳಿದ ಸಾಮಾನ್ಯ 'ಪುಳು'ಗಳು ಗಣ್ಯವೇ? 'ತನೆತೋಡಿ ತಿಂದು' ಅನಂತರ ಜೀವಚ್ಛವವನ್ನಾಗಿ ಮಾಡಿದ ಇವರ ಕ್ಷುದ್ರಕಾರ್ಯ ಅದೆಷ್ಟು ಪುಣ್ಯಕಾರ್ಯ ಸಾಮಾನ್ಯರ ದೃಷ್ಟಿಯಲ್ಲಿ! ಅದೆಷ್ಟು ಪ್ರಾಮಾಣಿಕರು ಧರ್ಮಾನುಯಾಯಿಗಳಾದ ಪಾಂಡವರು! ಕೌರವೇಶ್ವರನು ಇವರಿಗೆ ಕೊಟ್ಟ ಅನ್ವರ್ಥನಾಮ 'ರಕ್ಕಸಿಯರು'. ಆಹುದು; ಅವರು ಮಾಡುವ ಕಾರ್ಯ ರಕ್ಕಸಿಯರದೇ, ರಕ್ಕಸಿಯರು ನೋಡಿದ ಕುಂಬಳವು ಒಳಗೆ ತನ್ನ ಮಾಂಸಲವನ್ನು ಕಳೆದುಕೊಂಡು ಬರೀ 'ಬುರುಡೆ'ಯಾಗುತ್ತದೆ (ತೊಂಡು) ಹಾಗೆಯೇ ಪಾಂಡವರ ಭೇದೋಪಾಯಕ್ಕೆ ಪಕ್ಕಾದ ವೀರರೂ ಜೀವಚ್ಛವವಾಗುತ್ತಾರೆ; ಕವಿ ಉಪಯೋಗಿಸಿದ ನಾಣ್ನುಡಿ ಸುಂದರವಾಗಿದೆ. ನಿರ್ದರ್ಶನಾಲಂಕಾರ ವಸ್ತುಸ್ಥಿತಿಯನ್ನು ರಸಿಕರಿಗೆ ಹೃದಯಂಗಮವಾಗಿ ತಿಳಿಸುವಲ್ಲಿ ಸಮರ್ಥವಾಗಿದೆ.[೧] ಭೂತ ತಿಂದ ತೆಂಗಿನಕಾಯಿಯಂತೆ, ರಕ್ಕಸಿಯರು ಕಂಡ ಕುಂಬಳದ ಸ್ಥಿತಿ. ಅಲ್ಲಿ

---

೧. ದಕ್ಷಿಣ ಕನ್ನಡ ಪ್ರದೇಶದಲ್ಲಿ 'ಭೂತ ತಿಂದ ತೆಂಗಿನಕಾಯಿ' ಎಂಬ ನುಡಿಗಟ್ಟು ಬಳಕೆಯಲ್ಲಿದೆ. ಭೂತ ತಿಂದ ತೆಂಗಿನಕಾಯಿಯ ಒಳಗಿನ ತಿರುಳು ನಾಶವಾಗಿ, ತೆಂಗಿನಕಾಯಿಯ ಒಳಗೆ ದುರ್ಗಂಧ ಬೀರುವ ಅಂಬುಪದಾರ್ಥ ಇಲ್ಲವೇ ಬರೀ ವಾಸನಾಯುಕ್ತ ನೀರಿರುತ್ತದೆ. ಒಳಗೆ ಏನೂ ಇಲ್ಲದೆ ಬರೀ ಗೆರಟೆಯಿಂದ ಕೂಡಿದ ತೆಂಗಿನಕಾಯಿಯೂ ಇರುತ್ತದೆ. ಇದಕ್ಕೆ ತುಳುವಿನಲ್ಲಿ 'ಬೋಡು' ತೆಂಗಿನಕಾಯಿಯೆನ್ನುತ್ತಾರೆ. ಇದಕ್ಕೆ ಭೂತದ ಗಾಳಿಸೋಡು ಅಥವಾ ಭೂತ ಅದರೊಳಗಿನ ತಿರುಳನ್ನು ತಿಂದುದೇ ಕಾರಣವೆಂದು ಹಳ್ಳಿಯವರು ಹೇಳುವುದುಂಟು.

ಗೆರಟೆ, ಇಲ್ಲಿ ಸಿಪ್ಪೆ; ಎರಡರಲ್ಲಿಯೂ ಒಳಗೆ ಟೊಳ್ಳು; ನಿರ್ಜೀವ. ರಕ್ಕಸಿಯರು ಕಂಡ (ತಿಂದ) ಕುಂಬಳ ಒಳಗೆ ಮಾಂಸಲವಿಲ್ಲದೆ ಕೆಟ್ಟುಹೋಗಿ, ಅನಂತರ ರಕ್ತ ಮೇಣ ಸಿಪ್ಪೆಯೂ ನಶಿಸಿ ನಾಶವಾಗುತ್ತದೆ. ಪ್ರಸ್ತುತ ಪಾಂಡವ ರಕ್ಕಸಿಯರ ಗರಬಡಿದ ಕೌರವ ಕುಂಬಳದ ಗತಿಯೂ ಅಷ್ಟೇ.

ನಾಣ್ನುಡಿಯ ಬೆಡಂಗು ಪಂಪನಲ್ಲಿ ಎಷ್ಟು ಸುಂದರವಾಗಿ ಚಿತ್ರಿತವಾಗಿದೆ. 'ಭಗವತಿಯ ಏಱು'; 'ರಕ್ಕಸಿಯರ ಕಂಡ ಕುಂಬಳ' ಎರಡೂ ರಕ್ಕಸಿಯರಿಗೆ ಸಂಬಂಧಪಟ್ಟ ಸುಂದರ ನಿದರ್ಶನಗಳು. 'ಸೂೞ್ಪಡೆಯಲಪ್ಪುದು ಕಾಣಾ ಮಹಾಜಿರಂಗದೊಳ್' ಎಂಬಂತೆ ಈ ಪದ್ಯವೂ ಎಷ್ಟು ಧ್ವನಿಪೂರಿತವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಕೌರವೇಶನಿಗೆ ಗೊತ್ತು "ಆಗದು ಪಾಂಡವರಂ ಗೆಲಲ್ ಪುರಾತನಪುರುಷಂ ಮುರಾರಿ ಕೆಲದೊಳ್ ನಿಲೆ"ಎಂಬುದು. ದುರ್ಯೋಧನನಿಗೆ ತನ್ನ ಆಯುವೂ ಗೊತ್ತು, ಆದರೂ ಕ್ಷತ್ರಿಯನಾಗಿ, ಮಾನವನಾಗಿ (ಮಾನಧನ) ಛಲಕ್ಕಾಗಿ ಮಾಡುವ ಕಾರ್ಯ ಮಾಡಬೇಕಾಗಿದೆ. "ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷುಕದಾಚನ" ಮಾಡಿದ್ದಾನೆ: ಕರ್ಮಫಲ ದೈವಾಯತ್ತ, ವಿಧಿ ಮುನಿದರೆ ಆರೇನ ಮಾಡುವರು? ಪ್ರತಿಕೂಲ ದೈವನಾದ ಕೌರವನು ವಿಧಿಯ ಕರಾಳ ಖಡ್ಗಕ್ಕೆ ತುತ್ತಾಗಬೇಕಾಯಿತು. ವಿಧಿಲಿಖಿತಂ ಜಲಲಿಖಿತಮೇ?

---

# ವಿಶ್ರಾಂತಿ ವಾಗ್ದೇವಿ

●

ಎಲ್ಲಿರುವೆ ನೀನು, ವಾಗ್ದೇವಿ, ನಿನ್ನ ಶಕ್ತಿಯ
ಉಗಮದ ಬಗೆಗೆ ಮಾತನಾಡಲು ಮರೆತೆಯಾ?
ಕೆಟ್ಟ ಹಾಡಿಗೆ ಕಳೆಯುವೆಯ ನಿನ್ನ ಕೋಪಾಗ್ನಿಯನು
ಕೀಳು ವಿಷಯವ ಬೆಳಗಿ, ನಿನ್ನ ಶಕ್ತಿಯನು ಕತ್ತಲಾಗಿಸುವೆಯಾ?
ಮರಳು, ಮರೆತಿರುವ ವಾಗ್ದೇವಿ ವ್ಯರ್ಥದಿಂದಲಿ
ಕಳೆದಿರುವ ಕಾಲವನು ಸರಿಪಡಿಸಿಕೊ.
ನಿನ್ನ ಮನ್ನಿಪನ ಕಿವಿಯಲ್ಲಿ ನಿನ್ನ ಲೇಕ್ಕಣಿಗೆ
ಕುಶಲತೆಯ ಕರುಣಿಸುವವಗೆ ಹಾಡು ನೀ.

ಏಳು, ವಿಶ್ರಾಂತಿ ವಾಗ್ದೇವಿಯೇ, ನಿನ್ನ ಇನಿಯನ ವದನದಲ್ಲಿ
ಕಾಲ ನಿರಿಗೆಯ ಕೊರದಿರುವನೇ ನೋಡು.
ಇರುವುದಾದರೆ ಅಂತಹುದು ನಿನ್ನ ಅಣಕವನು ಅದರೆಡೆಗೆ ಹಾಯಿಸು
ಕಡೆಗೆಣಿಸು ಕಾಲನಾ ಹಾವಳಿಯ ಎಲ್ಲ ಕಡೆಯಲ್ಲೂ
ವಿಸ್ತೃತವಾಗಿಸೆನ್ನಯ ಒಲವನು ಕಾಲಕಿಂತಲು ಬೇಗ
ತಡೆಯಬಹುದು ನೀನವನ ಕೊಯ್ಲುಗತ್ತಿಯನಾಗ.

[ಷೇಕ್ಸ್‌ಪಿಯರನ ನೂರನೇ ಸಾನೆಟ್ಟಿನ ಅನುವಾದ.]

●

ಎಂ. ಎಸ್. ವಿಜಯಕುಮಾರ್

# 'ಕುವೆಂಪು' ಅವರ ಸಣ್ಣಕಥೆಗಳು

ಹು. ಕಾ. ಜಯದೇವ್

ಆಡು ಮುಟ್ಟದ ಸೊಪ್ಪಿಲ್ಲ ಎಂಬ ಗಾದೆಯಂತೆ 'ಕುವೆಂಪು'ಅವರು ಕೈಯಾಡಿಸದ ಸಾಹಿತ್ಯ ಕ್ಷೇತ್ರವಿಲ್ಲ. 'ಕುವೆಂಪು'ಅವರು ಸಣ್ಣಕಥೆಗಳನ್ನು ಬರೆದೇ ಇಲ್ಲವೇನೊ ಅನ್ನುವಷ್ಟರಮಟ್ಟಿಗೆ ಸಾಹಿತ್ಯದ ಇತರ ಕ್ಷೇತ್ರಗಳಲ್ಲಿ ಹೆಸರುವಾಸಿಯಾಗಿದ್ದಾರೆ.

'ಕುವೆಂಪು' ಅವರು ವೃತ್ತಿಯಿಂದ ಕಥೆಗಾರರಲ್ಲ. ಆದರೂ ಕಥೆಗಳನ್ನು ಬರೆದಿದ್ದಾರೆ, ಏಕೆಂದರೆ ಒಂದು ಭಾಷೆಯಲ್ಲಿ ನವೋದಯ ಉಂಟಾದಾಗ, ಆ ಭಾಷೆಗೆ ಬಂದ ಸಾಹಿತ್ಯದ ಸರ್ವಪ್ರಕಾರಗಳಲ್ಲೂ ಮಹಾಕವಿಯಾದವನು ಅಥವಾ ಮಹಾಕವಿ ವ್ಯಕ್ತಿತ್ವವುಳ್ಳವನು ತನ್ನ ನಾಡು, ನುಡಿಯ ಸೇವೆಯನ್ನು ಮಾಡುತ್ತಾನೆ. ಹಾಗೆ ಮಾಡಿರುವವರಲ್ಲಿ 'ಕುವೆಂಪು' ಅವರೊಬ್ಬರು. ಅದಕ್ಕೆ ಸಾಕ್ಷಿಯಾಗಿ ಸಣ್ಣಕಥೆಗಳಿವೆ.

'ಕುವೆಂಪು' ಸಣ್ಣಕಥೆಗಳನ್ನು ಹೆಚ್ಚು ಹೆಚ್ಚಾಗಿ ಬರೆಯಲಿಲ್ಲ. ಅವರ ಕಥಾಸಂಕಲನ ಎರಡೇ ಎರಡು— 'ಸಂನ್ಯಾಸಿ ಮತ್ತು ಇತರ ಕಥೆಗಳು' ಮತ್ತು 'ನನ್ನ ದೇವರು ಮತ್ತು ಇತರ ಕಥೆಗಳು'. ಎರಡು ಕಥಾಸಂಕಲನಗಳಿಂದ ಒಟ್ಟು ಕಥೆಗಳ ಸಂಖ್ಯೆ ಹದಿನೇಳು. ಇವರು ಬರೆದ ಕಥೆಗಳು ಕೆಲವೇ ಆಗಿದ್ದರೂ ಶ್ರೇಷ್ಠ ತರಗತಿಯವಾಗಿರುವುದರಿಂದ, ಸಾಹಿತ್ಯದ ದೃಷ್ಟಿಯಿಂದ ಆ ಕೃತಿಗಳ ಬೆಲೆ ಮಹತ್ವದ್ದಾಗಿದೆ. 'ಕುವೆಂಪು' ಅವರು ಬರೆದಿರುವುದೆಲ್ಲಾ ಸರ್ವೋತ್ತಮ ತರಗತಿಯವೆಂಬ ಭ್ರಮೆ ನಮಗೇನೂ ಬೇಕಾಗಿಲ್ಲ. ಆದರೆ, ಅವರ ಕಥೆಗಳನ್ನು ಓದಿದ ಯಾರಿಗೇ ಆದರೂ ಸಾಮಾನ್ಯ ದರ್ಜೆಯ ಒಂದು ಕಥೆಯೂ ಅವರ ಕಥಾಸಂಕಲನಗಳಲ್ಲಿಲ್ಲ ಎಂದು ಅನ್ನಿಸಿದರೆ ಆಶ್ಚರ್ಯಪಡಬೇಕಾಗಿಲ್ಲ. ಇದಕ್ಕೆ ಸಮರ್ಥನೆಯಾಗಿ The Indian P. E. N. ನಲ್ಲಿ ಬಂದಿರುವ ವಿಮರ್ಶಾ ನುಡಿಯನ್ನು ನೋಡಬಹುದು:—"There are only a few authors-as for as story writers in Kannada are concerned –who can bring emotion and satire to their full bloom, even in their short stories, And amongst those who can, Mr. Puttappa occupies admittedly a prominent place."

'ಕುವೆಂಪು' ಅವರ ಸಣ್ಣಕಥೆಗಳು ಕೆಲವೇ ಆದರೂ ವೈವಿಧ್ಯಮಯವಾಗಿವೆ. ಅವರ ಕಥೆಗಳೆಲ್ಲವನ್ನೂ ಪರಿಪೂರ್ಣ ದೃಷ್ಟಿಯಿಂದ ವಿಮರ್ಶಿಸುವುದು ಪ್ರಕೃತ ನನ್ನ ಲೇಖನದ ಉದ್ದೇಶವಲ್ಲ—ಈ ಪರಿಚಯಾತ್ಮಕ ಲೇಖನದಲ್ಲಿ –ಅದು ಸಾಧ್ಯವೂ ಅಲ್ಲ. ಏಕೆಂದರೆ ಅವರ ಕಥೆಗಳಲ್ಲಿಯ ಭಾಷೆಯ ಸೊಗಸು, ಕಾವ್ಯಮಯತೆ, ಪ್ರಕೃತಿ ಚಿತ್ರಣ, ಸಾಮಾಜಿಕ ಪ್ರಜ್ಞೆ, ದರ್ಶನ ಇವುಗಳೊಂದೊಂದೂ ಸುದೀರ್ಘವಾದ ಪ್ರಬಂಧಕ್ಕೆ ವಸ್ತುಗಳು.

* * * *

೧. 'ಈಶ್ವರನೂ ನಕ್ಕಿರಬೇಕು' ಹಾಸ್ಯ ಪ್ರಧಾನವಾದ ಆದರೆ ನಾವು ಯಾರಿಗೆ ಮೋಸಮಾಡಿದರೂ ವಿಶ್ವವ್ಯಾಪಿಯಾದ ಭಗವಂತನನ್ನು ಮೋಸಪಡಿಸಲಾರೆವು ಎಂಬ ತತ್ವ ನಿರೂಪಿಸುವ ಕಥೆ.

ನಾಗರಾಜನಿಗೆ ಹಿಂದೂ ಪತ್ರಿಕೆಯಲ್ಲಿ "ಸತ್ಕುಲ ಪ್ರಸೂತೆಯಾದ ಒಬ್ಬ ಹನ್ನೆರೆಡು ವರುಷದ ಬ್ರಾಹ್ಮಣ ಕನ್ಯೆಗೆ ತಿಂಗಳಿಗೆ ೫೦ ರೂಪಾಯಿಗೆ ಕಡಿಮೆಯಿಲ್ಲದೆ ಸಂಪಾದನೆ ಮಾಡುವ ವರನು ಬೇಕಾಗಿದೆ" ಎಂಬ ಜಾಹೀರಾತನ್ನು ನೋಡಿ ಅತ್ಯಾನಂದವಾಯಿತು. ಅತ್ಯಾನಂದವಾಗದೇನು ಮಾಡೀತು ಪಾಪ! ಸಣ್ಣದರಿಂದಲೂ ವಾರಾನ್ನ ಮಾಡಿ ಹೇಗೋ ಕಷ್ಟಪಟ್ಟು ರೆವಿನ್ಯೂ ಇಲಾಖೆಯಲ್ಲಿ ೬೦ ರೂಪಾಯಿಗೆ ಸಂಬಳಕ್ಕೆ ಸೇರಿದನು. ಆದರೂ ಯಾರೂ ಹೆಣ್ಣು ಕೊಟ್ಟಿರಲಿಲ್ಲ. ಯಾರು ತಾನೇ ಕುರೂಪಿಯಾದ, ಹರುಕು ಕಿವಿಯ ನಾಗರಾಜನಿಗೆ ಕಂಡೂ ಕಂಡೂ ತಮ್ಮ ಮಕ್ಕಳನ್ನು ಕೊಟ್ಟಾರು? ಆದ್ದರಿಂದಲೇ ಆ ಜಾಹೀರಾತನ್ನು ನೋಡಿ ನಾಗರಾಜನಿಗೆ ಅತ್ಯಾನಂದವಾದದ್ದು. ಆಮೇಲೆ ಅತ್ಯಮೂಲ್ಯವಾದ ಒಂದೊಂದು ಕ್ಷಣವನ್ನೂ ವ್ಯರ್ಥ ಮಾಡದೆ,ಅವರಿವರಲ್ಲಿ ಸಾಲಮಾಡಿ, ಒಂದು ತಸ್ವೀರು ತೆಗೆಸಿ, ಕಿವಿಯ ಊನ ಕಾಣದ ಹಾಗೆ "Golden touch"

ಮಾಡಿಸಿ, ತನ್ನ ವಯಸ್ಸನ್ನು ೩೦ರಿಂದ ೨೫ಕ್ಕೆ ಇಳಿಸಿ, ತನ್ನ ಸಕಲ ಅರ್ಹತೆಗಳನ್ನೂ ನಮೂದಿಸಿ ಧಾರವಾಡದ ಶಾಂತ ರಾಯರಿಗೆ ಕಾಗದ ಬರೆದನು.

ಶಾಂತರಾಯರೇನೂ ಲಲಿತಮ್ಮನ ಮದುವೆಗೆ ಪ್ರಯತ್ನ ಮಾಡಬೇಕಾಗಿರಲಿಲ್ಲ. ಏಕೆಂದರೆ ಅವಳು ಅವರ ಹತ್ತಿರದ ಸಂಬಂಧವೇನೂ ಅಲ್ಲ. ಲಲಿತಮ್ಮನ ಮದುವೆಗೆ ಪ್ರಯತ್ನ ಮಾಡಿದ್ದು ಶಾಂತರಾಯರ ಔದಾರ್ಯ.

ಅಂತೂ ಮದುವೆಯಾಯಿತು. ನಾಗರಾಜನಿಗೆ ತನ್ನ ಮೋಸಕ್ಕೆ ಎಲ್ಲರೂ ಒಳಗಾದರಲ್ಲ ಎಂದು ಒಳಗೊಳಗೇ ನಗು. ಲಲಿತಮ್ಮನಿಗಾದರೋ ಒಳಗೊಳಗೇ ಯಾತನೆ! ಏಕೆ? ಏಕೆಂದರೆ, "ಆಕೆಯ ಎಡಗೈ ಬಹಳ ಮೋಟಾಗಿ ಡೊಂಕಾಗಿ ದೇಹಕ್ಕೊಂದು ಕೆಲಸಕ್ಕೆ ಬಾರದ ಕೊಂಬೆ ಯಾಗಿತ್ತು. ಹೆಸರು ಲಲಿತಮ್ಮನಾದರೂ ರೂಪ ಅಷ್ಟೇನೂ ಲಲಿತವಾಗಿರಲಿಲ್ಲ."

ನಿಜಾಂಶ ಇಬ್ಬರಿಗೂ ತಿಳಿಯಿತು. ತಿಳಿದಿದ್ದರಿಂದ ಅನಾಹುತವೇನೂ ಆಗಲಿಲ್ಲ. ಏಕೆ ಆದೀತು? "ಅನುರಾಗ ಅಂಕುರಿಸಿತೆಂದರೆ ಕೋಡಗ ಕೂಡ ಕಣ್ಣಿನ ಮುದ್ದಾಗುವುದೇನೂ ಆಶ್ಚರ್ಯವಲ್ಲ."

ನಾಗರಾಜನ ಒಳಸಂಚಿಗೆ ವಿಧಿ ಸರಿಯಾಗಿ ಮತ್ತೊಂದು ಒಳಸಂಚು ಹೂಡಿತು. ಮೋಟುಗೈ ಹೆಣ್ಣನ್ನು ಗಂಟು ಹಾಕಿತು. ಮೋಸಕ್ಕೆ ಪ್ರತಿಮೋಸ. ಇದೇ ಅಲ್ಲವೆ ವಿಧಿ ವಿಲಾಸ! ಕೊನೆಗೆ ತಮ್ಮ ತಮ್ಮ ಹಂಚಿಕೆಗೆ ತಮಗೇ ನಗು! ಈ ಕವಲ ಆಟ ಕಂಡು ಆಡಿದ ಇವರೇ ಹೀಗೆ ನಕ್ಕರೆ ಇವರ ಆದ್ಯಂತವೆಲ್ಲವನ್ನೂ ಬಲ್ಲ, ಇವರನ್ನು ಪಾತ್ರಧಾರಿಗಳನ್ನಾಗಿ ಆಡಿಸಿದ ಆ ಸೂತ್ರಧಾರ ಇನ್ನೆಷ್ಟು ನಗಬೇಡ! ಎಲ್ಲ ನಕ್ಕರು. ಆದರೆ ಈಶ್ವರನ ನಗೆಯ ಅರ್ಥವೇ ಬೇರೆ.

ಈ ಕಥೆ ಹಿಂದಿಗೆ ಭಾಷಾಂತರವಾಗಿದೆ. ಜಾನಪದ ಗೀತೆಗಳಂತೆಯೇ ಜನಮನದ ಹೃದಯದಲ್ಲಿ ಮನೆ ಮಾಡಿ ಇಂದಿನವರೆಗೂ ಹರಿದುಬಂದಿರುವ ಜಾನಪದ ಕಥೆಗಳಲ್ಲಿ ಇದೂ ಒಂದು. ಈ ಕಥೆಯನ್ನು ಅಲ್ಪಸ್ವಲ್ಪ ಬದಲಾವಣೆ ಮಾಡಿ ಆಧುನಿಕ ಸಣ್ಣಕಥೆಯ ತಂತ್ರದಿಂದ ಸೊಗಸಾಗಿ ಚಿತ್ರಿಸಿದ್ದಾರೆ.

೨. "ಹೋಳಿಗೆ ಪ್ರತಿಜ್ಞೆ"ಯಲ್ಲಿ ಕಥೆಗಾರರ ಗೆಳೆಯರು ಎಂಟುವರ್ಷದವರಿದ್ದಾಗ, ಪಾಠಶಾಲೆಯಲ್ಲಿ ಸಿದ್ದುವಿನ ಜೇಬಿಗೆ ಎಂಜಲು ಹೋಳಿಗೆಯನ್ನು ಹಾಕಿ, ಅದಕ್ಕಾಗಿ ಮೇಷ್ಟರು ಗುಂಡಪ್ಪನವರಿಂದ ದ್ವಾದಶಪೂಜೆಯನ್ನು ಹೊಂದಿ, ಇನ್ನು ಮುಂದೆ ಹೋಳಿಗೆಯನ್ನು ತಿನ್ನುವುದಿಲ್ಲವೆಂದು ಪ್ರತಿಜ್ಞೆ ಮಾಡಿದರಂತೆ. ಈ ವಿಷಯವನ್ನು ಅವರು ಕಥೆಗಾರರಿಗೆ ಹೇಳಿದಾಗ ಎಪ್ಪತ್ತೈದು ವರ್ಷ. ಈ ಅಂತರದಲ್ಲಿ ಅವರ ಪ್ರತಿಜ್ಞೆಗೆ ಭಂಗ ಬಂದಿಲ್ಲ. ಈ ವಿಷಯದಲ್ಲಿ ಕಥೆಗಾರರಿಗೆ ಯಾವ ಮಹತ್ವವೂ ಕಾಣಿಸುವುದಿಲ್ಲ.

ಆದರೆ ಈ ವಿಚಾರದಲ್ಲಿ ಗೆಳೆಯರು ಹೇಳಿದ ಮಾತುಗಳನ್ನು ಕೇಳಿದಮೇಲೆ ಅವರ ಅಭಿಪ್ರಾಯವೇ ಬದಲಾಯಿಸುತ್ತದೆ. "ಹೋಳಿಗೆ ತಿನ್ನುವುದು ಬಿಡುವುದರಲ್ಲಿ ಯಾವ ಮಹತ್ವವೂ ಇಲ್ಲ. ಆದರೆ ಇಂದಿನವರೆಗೆ ಪ್ರತಿಜ್ಞೆಯನ್ನು ಪರಿಪಾಲಿಸಿರುವೆನೆಂಬ ಮನೋಭಾವವು ನನ್ನ ಧರ್ಮಬುದ್ಧಿಗೆ ಬಲಕಾರಿಯಾಗಿರುತ್ತದೆ! ದೊಡ್ಡ ಮನಸ್ಸಿನಿಂದ ಮಾಡಿದ ಸಣ್ಣ ಕಾರ್ಯಗಳು ಸಣ್ಣ ಮನಸ್ಸಿನಿಂದ ಮಾಡಿದ ದೊಡ್ಡ ಕಾರ್ಯಗಳಿಗಿಂತಲೂ ಎಷ್ಟೋ ಶ್ರೇಷ್ಠವಾದವುಗಳೆಂದು ನನ್ನ ನಿಶ್ಚಲವಾದ ಅಭಿಪ್ರಾಯ. ಮಹಿಮೆ ಕಾರ್ಯಗಳಲ್ಲಿಲ್ಲ; ಕಾರ್ಯ ಮಾಡಿಸುವ ಚಿತ್ತವೃತ್ತಿಯಲ್ಲಿದೆ". ಎಂಬ ಗೆಳೆಯರ ಮಾತನ್ನು ಕೇಳಿದ ಕಥೆಗಾರರಿಗೆ ಅವರ ಗೆಳೆಯರ ಬಗ್ಗೆ ಗೌರವ ಭಾವನೆ ಮೂಡುತ್ತದೆ.

ಈಗ್ಗೆ ೪೦–೫೦ ವರ್ಷಗಳ ಕೆಳಗೆ ಬಹಳವಾಗಿದ್ದ ಬ್ರಾಹ್ಮಣ ಶೂದ್ರರ ಸಾಮಾಜಿಕ ಸಂಬಂಧವನ್ನು ಬಹಳ ಸೂಕ್ಷ್ಮವಾಗಿ 'ಕುವೆಂಪು'ರವರು ಚಿತ್ರಿಸಿದ್ದಾರೆ. ಈಗ ಅದು ಅಷ್ಟಾಗಿ ಕಾಣಿಸುತ್ತಿಲ್ಲವಾದರೂ ಅಲ್ಲಲ್ಲಿ ಅದರ ಅವಶೇಷಗಳನ್ನು ಕಾಣಬಹುದು.

ಕಥೆಯ ಪ್ರಾರಂಭದಲ್ಲಿ ಬರುವ "ಎಲ್ಲರೂ ಊಟ ಮಾಡಬಹುದು" ಎಂಬ ಸಂಪ್ರದಾಯದ ಅಪ್ಪಣೆಯ ವಿಚಾರದಲ್ಲಿ ಕಥೆಗಾರರ ಟೀಕೆ ಕಥಾ ದೃಷ್ಟಿಯಿಂದ ಅನಾವಶ್ಯಕ.

೩. "ಗಂಟು ಅಥವಾ ಗುಪ್ತಧನ"ದಲ್ಲಿ ಕಥೆಗಾರರು ಮೂಢನಂಬಿಕೆಗಳ ವಿಚಾರವಾಗಿ ಬರೆದಿದ್ದಾರೆ.

ಮೊಸರೂರ ಮಂಜಣ್ಣ ಒಬ್ಬ ಜಮೀನುದಾರರ ಒಕ್ಕಲು ಅವನಿಗೆ ಇದ್ದಕ್ಕಿದ್ದಂತೆ ಶ್ರೀಮಂತನಾಗುವ ಹುಚ್ಚು ಹಿಡಿಯಿತು. "ಕಾಸಿಗೆ ಕಾಸು ಗಂಟು ಹಾಕಿ, ಹೊಟ್ಟೆಗೆ ಬೆನ್ನು ಅಂಟುಹಾಕಿ" ಮಂಜಣ್ಣನು ಮೊಸರೂರು ಮಂಜಣ್ಣಗೌಡರಾದನು.

ಹೀಗಿರಲು ಒಂದು ದಿನ ಮಂಜಣ್ಣ ತನ್ನ ತೋಟದಲ್ಲಿ ಸಂಚರಿಸುತ್ತಿದ್ದಾಗ ಒಂದು ಹಲಸಿನ ಮರದಲ್ಲಿ ಕೈ ಮೂಡಿದ್ದನ್ನು ಕಂಡನು. ಗುಟ್ಟನ್ನು ಯಾರಿಗೂ ಹೇಳದೆ ತಾನೊಬ್ಬನೇ ಗಂಟು ಕೀಳಬೇಕೆಂದು ನಿಶ್ಚಯಿಸಿದನು. ಆದರೆ ಮಂಜಣ್ಣನಿಗೆ ಐಶ್ವರ್ಯದಲ್ಲಿ ಆಸೆಯಿದ್ದುದಕ್ಕಿಂತಲೂ ಹೆಚ್ಚಾಗಿ ಭೂತ ಪಿಶಾಚಿಗಳಲ್ಲಿ ನಂಬಿಕೆಯೂ ಭಯವೂ

ಇದ್ದುವು. ಆದ್ದರಿಂದ ಸರಿಯಾದ ಮಂತ್ರವಾದಿಯ ಆಗ ಮನಕ್ಕಾಗಿ ಕಾದಿದ್ದನು. ಕೊನೆಗೆ ಅಂತಹ ಮಂತ್ರವಾದಿಯೊಬ್ಬನು ಮುಂಜಣ್ಣನಿಗೆ ಸಿಕ್ಕಿದನು.

ಇಬ್ಬರೂ ಅಮಾವಾಸ್ಯೆಯ ರಾತ್ರಿ ಹಲಸಿನ ಮರದ ಹತ್ತಿರ ಹೋಗಿ ಗಂಟನ್ನು ಕೀಳುವುದಕ್ಕೆ ಮತ್ತೊಂದು ದಿನವನ್ನು ಗೊತ್ತುಮಾಡಿಕೊಂಡುಬಂದರು. ಈ ಮಧ್ಯೆ ಮಂತ್ರವಾದಿ ಕೊಪ್ಪಕ್ಕೆ ಹೋಗಿಬಂದ.

ಗಂಟನ್ನು ಅಗೆಯುವ ದಿವಸವೂ ಬಂದಿತು. ಮುಂಜಣ್ಣ ಸುರಾಪಾನದಿಂದ ಮತ್ತನಾಗಿ ನಿದ್ರಿಸುತ್ತಿದ್ದಾಗ ಮಂತ್ರವಾದಿ ಗಂಟನ್ನು ಕಿತ್ತು ಅದು ಮುಂಜಣ್ಣನಿಗೆ ದಕ್ಕಬೇಕಾದರೆ ಒಂದು ತಿಂಗಳು ಸಿಕ್ಕಿದ ಕೊಡಕ್ಕೆ ಪೂಜೆ ನಡೆಯಬೇಕೆಂದು ಹೇಳಿದನು. ಹಣಕ್ಕಾಗಿ ಹೆಣದಂತೆ ಬಾಯಿಬಿಡುತ್ತಿದ್ದ ಮುಂಜಣ್ಣ ಮನೆಯಲ್ಲಿ ಒಂದು ಪ್ರತ್ಯೇಕವಾದ ಕೊಠಡಿಯನ್ನು ಕೊಟ್ಟು ಪೂಜೆಗೆ ತನ್ನ ಮನೆಯಲ್ಲಿದ್ದ ಒಡವೆಗಳನ್ನೂ ಪರರ ಮನೆಯವನ್ನೂ ತಂದು ಮಂತ್ರವಾದಿಗೆ ಕೊಟ್ಟನು. ಇಷ್ಟಾದರೂ ಮುಂಜಣ್ಣ ಗಂಟು ಕಿತ್ತ ಗುಟ್ಟನ್ನು ಯಾರಿಗೂ ಹೇಳಲಿಲ್ಲ. ಹದಿನೈದು ಇಪ್ಪತ್ತು ದಿನಗಳಾದಮೇಲೆ ಒಂದು ಪ್ರಾತಃಕಾಲ ಇದ್ದಕ್ಕಿದ್ದ ಹಾಗೆ ಮುಂಜಣ್ಣನ ಮನೆಯಿಂದ ರೋದನದ ಬೊಬ್ಬೆ ಕೇಳಿಸಿತು. ನೆರೆಯವರು ಗಾಬರಿಗೊಂಡು ಓಡಿಹೋಗಿ ನೋಡಲು ಮುಂಜಣ್ಣನೂ ಅವನ ಹೆಂಡತಿಯೂ ಬಾಯಿ ಬಾಯಿ ಎದೆ ಎದೆ ಬಡಿದುಗೊಂಡು ಗಟ್ಟಿಯಾಗಿ ಗೋಳಿಡುತ್ತಿದ್ದರು. ನೆಲದಮೇಲೆ ಬಾಯಿ ತೆರೆದು ಕಲ್ಲು ಮಣ್ಣು ತುಂಬಿದ ಕೊಡವೊಂದು ಬಿದ್ದಿತ್ತು. ಬೈರಾಗಿ ಅಲ್ಲಿರಲಿಲ್ಲ. ಇಷ್ಟಕ್ಕೇ ಕಥೆಯನ್ನು ಮುಕ್ತಾಯ ಮಾಡಿದ್ದರೆ ಸೊಗಸಾಗಿರುತ್ತಿತ್ತು.

ಕಥೆಗೆ ಪೋಷಕವಲ್ಲದ ಹಲವಾರು ವಿಷಯಗಳು ಇಲ್ಲಿ ಬಂದಿವೆ. ಇದೊಂದು ಕುಂದನ್ನು ಬಿಟ್ಟರೆ ಈ ಕಥೆ ಮೂಢನಂಬಿಕೆಯ ಒಂದು ನೈಜ ಕಥೆಯಾಗಿದೆ.

೪. "ಕ್ರಿಸ್ತನಲ್ಲ ಪಾದ್ರಿಯ ಮಗಳು" ಕಥೆಗೆ ಕಥಾದೃಷ್ಟಿಯಿಂದಲೂ ಅಲ್ಲದೆ ಅದು ಬರೆದ ಕಾಲದ ದೃಷ್ಟಿಯಿಂದಲೂ ಬೆಲೆ ಕೊಡಬೇಕಾಗಿದೆ. ಮತಾಂತರಗೊಳಿಸುವುದಕ್ಕಾಗಿ ಕ್ರಿಸ್ತಮತ ಪ್ರಚಾರಕರು ಅನುಸರಿಸುತ್ತಿದ್ದ ಹೀನಮಾರ್ಗವನ್ನು ಇಲ್ಲಿ ಕಥೆಗಾರರು ಬಯಲಿಗೆಳೆದಿದ್ದಾರೆ. ಬ್ರಿಟಿಷರು ಆಳುತ್ತಿದ್ದ ಕಾಲದಲ್ಲಿ ಇಂತಹ ಕಥೆಗಳನ್ನು ಬರೆದಿರುವುದು ಸಾಹಸದ ಮಾತೇ ಸರಿ.

ಇಲ್ಲಿ ಯಾರು ಕ್ರೈಸ್ತ ಪಾದ್ರಿಗಳನ್ನು ನಿಂದಿಸಿ, ಎದುರಿಸಿ ಮಾತನಾಡುತ್ತಿದ್ದನೋ ಅವನೇ ಅವರ ಕುತಂತ್ರಕ್ಕೆ ಈಡಾದ ವಿಚಾರ ನಮ್ಮ ಕರುಳನ್ನು ಹಿಂಡುತ್ತದೆ.

ಎರಡು ಜನ್ಮಗಳದರಷ್ಟು ಅಜಗಜಾಂತರವಿರುವ ಯೋಗಿನ್ನನ ವಿದ್ಯಾರ್ಥಿ ದೆಸೆಯ ಊರ್ಧ್ವ ಮುಖದ ಚಿತ್ರವನ್ನೂ ಅದರ ಮುಂದಣ ದೆಸೆಯ ಅಧೋ ಮುಖದ ಚಿತ್ರವನ್ನೂ ಕಥೆಗಾರರು ಮಾರ್ಮಿಕವಾಗಿ ಕೊಟ್ಟಿದ್ದಾರೆ. ಒಂದು ಚಿತ್ರವನ್ನು ಇನ್ನೊಂದು ಚಿತ್ರದೊಡನೆ ಹೋಲಿಸಿದಾಗ ಕರುಳು ಹಿಂಡಿದಂತಾಗುತ್ತದೆ. ತನ್ನ ಕಾಗದವನ್ನು ಆತ್ಮಕಥೆಯ ರೀತಿಯಲ್ಲಿ, ತನ್ನ ಬೀಳು ಗತಿಯನ್ನು ತಾನೇ ವರ್ಣಿಸಿಕೊಳ್ಳುವಂತೆ ಕಥೆಯನ್ನು ವರ್ಣಿಸಿರುವುದು, ವಾಚಕರಿಂದ ನಿಟ್ಟುಸಿರಿನ ಕಾಣಿಕೆಯನ್ನು ಸೆಳೆಯುತ್ತದೆ. ಮುಳುಗುತ್ತಿರುವ ಸೂರ್ಯನನ್ನು ನೋಡಿ ಗೆಳೆಯನ ಆತ್ಮ ವಿನಾಶದ ನೆನಪು ಮರುಕಳಿಸಿತೆಂದು ಹೇಳುತ್ತಾ ಮುಂದೆ ಎರಡು ಮಾತಿನಲ್ಲಿ ಮುಗಿಯುವ ಮುಕ್ತಾಯ ತುಂಬ ಮಾರ್ಮಿಕ! ಈ ಕಥೆಗೆ ಇಟ್ಟಿರುವ ಹೆಸರು ಅನ್ವರ್ಥವಾಗಿದೆ.

೫. ಲಕ್ಷಾಧಿಕಾರಿ ಭಿಕ್ಷಾಧಿಕಾರಿಯಾಗಿ ಮರಳಿ ಲಕ್ಷಾಧಿಕಾರಿಯಾದ ಕಥಾವಸ್ತುವಿನ ಹೆಸರು "ಆರಾಣೆ ಮೂರು ಕಾಸು." ಕಥೆಯ ನಾಮಕರಣದ ನವ ವಿಧಾನವೇ ಓದುಗರ ಕುತೂಹಲವನ್ನು ಕೆರಳಿಸುತ್ತದೆ.

ಈ ಕಥೆ ನಡೆದದ್ದು ಸಿಪಾಯಿದಂಗೆ ಕಾಲದಲ್ಲಿ. ಈಸ್ಟ್ ಇಂಡಿಯಾ ಸರ್ಕಾರ ಹೋಗಿ ಬ್ರಿಟಿಷ್ ಸರ್ಕಾರ ಬಂದಾಗ. ಆ ಸರ್ಕಾರದವರು ಸರಕಾರಿ ಕಟ್ಟಡಕ್ಕೋಸ್ಕರ ಕರ್ನೂಲಿನ ನವಾಬನಿಂದ ಸ್ವಲ್ಪ ಜಮೀನನ್ನು ಹದಿನೈದು ಸಾವಿರ ರೂಪಾಯಿಗಳಿಗೆ ಖರೀದಿ ಮಾಡಿ ಅದರ ಪತ್ರವನ್ನು ಸಿದ್ಧ ಮಾಡಿಕೊಡುವಂತೆ ಕರ್ನೂಲಿನ ಲಾಯರೊಬ್ಬರಿಗೆ ಆ ಜವಾಬ್ದಾರಿಯನ್ನು ವಹಿಸಿದರು. "ರೋಗಿ ಬಯಸಿದ್ದೂ ಹಾಲು ಅನ್ನ ವೈದ್ಯ ಹೇಳಿದ್ದೂ ಹಾಲೂ ಅನ್ನ" ವೆಂಬಂತಾಯಿತು ಆ ಲಾಯರ ಪಾಲಿಗೆ! ಏಕೆಂದರೆ ಅದೇ ಸ್ಥಳವನ್ನು ನವಾಬನಿಂದ ಕೇವಲ ಎರಡು ಮೂರು ಸಾವಿರಕ್ಕೆ ಹೊಡೆಯಬೇಕೆಂದು ಯೋಚಿಸಿದ್ದ ಆ ಲಾಯರ್ ಮಹಾಶಯ. ಅದು ನೆರವೇರಿರಲಿಲ್ಲ. ಆ ಕೇಸಿಗೆ ಸಂಬಂಧಪಟ್ಟ ಕಾಗದ ಪತ್ರಗಳನ್ನು ನೋಡುವಾಗ ಆಗಿನ ನವಾಬನು ಹಿಂದಿನ ನವಾಬನ ಧರ್ಮಪತ್ನಿಯ ಮಗನಲ್ಲವೆಂದು ತಿಳಿದನು. ಆ ಲಾಯರೋ 'ತನ್ನ ಒಂದು ಕಣ್ಣು ಹೋದರೂ ಚಿಂತೆಯಿಲ್ಲ ತನ್ನ ಶತ್ರುವಿನ ಎರಡು ಕಣ್ಣುಗಳೂ ಹೋಗಲಿ' ಎಂಬ ಜಾತಿಗೆ ಸೇರಿದವನು. ಆದ್ದರಿಂದಲೇ ಆ ವಿಷಯವನ್ನು ಬ್ರಿಟಿಷ್ ಸರ್ಕಾರಕ್ಕೆ ತಿಳಿಸಿದನು. ಅವರಿಗೆ ಬೇಕಾಗಿದ್ದದ್ದೂ ಅದೇ. ತೋಳ ಕುರಿಮರಿಯ ನ್ಯಾಯದಂತೆ ನವಾಬನ ಆಸ್ತಿಯನ್ನೆಲ್ಲಾ ಬ್ರಿಟಿಷ್ ಸರ್ಕಾರ ಮುಟ್ಟುಗೋಲು

ಹಾಕಿಕೊಂಡಿತು. ಲಕ್ಷಾಧಿಕಾರಿ ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ಭಿಕ್ಷಾಧಿಕಾರಿಯಾದನು. ಅವನ ಸುತ್ತ ಮುತ್ತ ಇರುತ್ತಿದ್ದ ಪರಿವಾರವೂ ಬಿಸಿಲು ಸೋಕಿದ ಮಂಜಿನಂತೆ ಕರಗಿಹೋಯಿತು. ಕಬ್ಬಿಣದ ಅಂಗಡಿಯಲ್ಲಿ ನೊಣಗಳಿಗೇನು ಕೆಲಸ!

ಈ ಸಮಯದಲ್ಲೇ ಮಾಧವರಾಯರು ಕರ್ನೂಲಿಗೆ ಹೋದದ್ದು. ನವಾಬ ಕೇಳದಿದ್ದರೂ ಆತನು ಪ್ರೀವಿ ಕೌನ್ಸಿಲಿಗೆ ಹೋಗಲು ಎಂಟನೂರ ಐವತ್ತು ರೂಪಾಯಿಗಳನ್ನು ಕೊಟ್ಟರು.

ಪುನಃ ನವಾಬ ಮತ್ತು ಮಾಧವರಾಯರ ಭೇಟಿಯಾಗುವುದು ಗುಂತಕಲ್ಲಿನ ರೈಲ್ವೆ ಸ್ಟೇಷನ್ನಿನಲ್ಲಿ. ಅಲ್ಲಿ ಮಾಧವರಾಯರು ನವಾಬನಿಗೆ ಊಟಕ್ಕೆ ಆರು ಆಣೆಯನ್ನೂ ಅವನ ಮಕ್ಕಳ ತಿಂಡಿಗಾಗಿ ಮೂರುಕಾಸನ್ನೂ ಕೊಟ್ಟರು.

ಮಾಧವರಾಯರು ತಾವು ಧರ್ಮಿಷ್ಠರಲ್ಲ, ಮೃದುಸ್ವಭಾವದವರಲ್ಲ, ಪರಾರ್ಥಿಗಳಲ್ಲ, ತಾವು ನವಾಬನಿಗೆ ಊಟ ಹಾಕಿಸಿದ್ದು ಹೆಮ್ಮೆಗಾಗಿ, ಅವನಿಗೆ ಮೂರುಕಾಸು ಕೊಟ್ಟದ್ದು ಅವನು ತೊಲಗಲಿ ಎಂದು ಮುಂತಾಗಿ ಹೇಳಿಕೊಂಡಿದ್ದಾರೆ. ಅವರು ಯಾವ ಭಾವನೆಯಿಂದಲಾದರೂ ಸಹಾಯ ಮಾಡಿರಲಿ ಅಂತಹ ಸಹಾಯಗಳಿಗೂ ವಿಘ್ನ ತಂದೊಡ್ಡುವವರು ಇದ್ದಾರಲ್ಲಾ ಎಂಬುದೇ ಖೇದಪಡಬೇಕಾದ ಸಂಗತಿ. ಇಂತಹ ಹೆಮ್ಮೆ, ಇಂತಹ ಔದಾರ್ಯ ಎಷ್ಟಿದ್ದರೂ ಏನೂ ಕೆಡುಕಲ್ಲ.

ಕೊನೆಗೆ ಸತ್ಯಕ್ಕೆ ಜಯವೆಂಬಂತೆ ನವಾಬನಿಗೆ ಪ್ರೀವೀ ಕೌನ್ಸಿಲ್‌ನಲ್ಲಿ ಜಯವಾಗುತ್ತದೆ. ತಕ್ಷಣವೇ ಮಾಧವರಾಯರ ಹಿತೈಷಿಗಳು ನವಾಬನ ಮೇಲೆ ಕೇಸು ಮಾಡುವಂತೆ ಸಲಹೆ ಮಾಡುತ್ತಾರೆ. ಎಲ್ಲಿರುತ್ತಾರೋ ಈ ಹಿತೈಷಿಗಳು ಇಂತಹ ಸಂದರ್ಭಗಳು ಒದಗಿದರೆ ಸಾಕು 'ಉಬ್ಬೆ ಮಳೆಯಲ್ಲಿ ಹುಟ್ಟುವ ಅಣಬೆಗಳಂತೆ' ಹುಟ್ಟಿಕೊಳ್ಳುತ್ತಾರೆ. ಇಂತಹ ವ್ಯಕ್ತಿಗಳಿಲ್ಲದಿದ್ದರೆ ಜೀವನ ನೀರಸವಾಗಿ ಬಿಡುತ್ತಿತ್ತೋ ಏನೋ?

ನವಾಬ ಎಂಟನೂರ ಐವತ್ತು ರೂಪಾಯಿ, ಆರು ಆಣೆ ಮೂರುಕಾಸನ್ನು ಹಿಂತಿರುಗಿಸಿದ್ದಲ್ಲದೆ ಇವರ ತಾತನವರ ಹತ್ತಿರ ಮಾಡಿದ ಸಾಲಕ್ಕೆ ಸಿಕ್ಕ ಪತ್ರಗಳ ಆಧಾರದಿಂದ ತಾನೇ ಹನ್ನೆರಡು ಸಾವಿರ ಕೊಡಲು ಒಪ್ಪುತ್ತಾನೆ.

ಕಥೆ ಓದಿದ ಮೇಲೆ ಕಥೆಗಾರರೇ ಹೇಳುವಂತೆ "ನಮಗೆ ಮಾಧವರಾಯರನ್ನು ಹೊಗಳಬೇಕೋ ನವಾಬನನ್ನು ಹೊಗಳಬೇಕೋ ಗೊತ್ತಾಗಲಿಲ್ಲ" ಎನ್ನಿಸುತ್ತದೆ. ಮಾಧವರಾಯರ ದಾಕ್ಷಿಣ್ಯವೋ, ಪ್ರತಿಷ್ಠೆಯೋ, ಸ್ವಾರ್ಥವೋ ಹಣ ಕೊಟ್ಟರಲ್ಲ! ಇವರು ಆ ಕಾಲಕ್ಕೆ ಕೊಡದಿದ್ದರೆ ಅವನು ಗೆಲ್ಲುವುದುಂಟೆ? ಇವರ ಔದಾರ್ಯ ದೊಡ್ಡದು. ನವಾಬ ಅದನ್ನು ಆ ಆರಾಣೆಮೂರುಕಾಸಿನೊಡನೆ ಹಿಂತಿರುಗಿಸಿದನಲ್ಲ! ಜೊತೆಗೆ ಹಿಂದಣ ಹನ್ನೆರಡುಸಾವಿರವನ್ನೂ ಕೊಡುವನಲ್ಲ! ಇವನ ಪ್ರಾಮಾಣಿಕತನವೂ ದೊಡ್ಡದೇ. ಅದು ಎಂಟನೂರ ಐವತ್ತು ರೂಪಾಯಿ ಆದರೆ ಇದು ಆರಾಣೆ ಮೂರು ಕಾಸು. ಇದು ಆರಾಣೆ ಮೂರುಕಾಸಾದರೆ ಅದು ಎಂಟನೂರು ಐವತ್ತು ರೂಪಾಯಿ. ಎಂತಹ ಸೋಜಿಗ ಇದು!

೬. ಮತದ ಹೆಸರಿನಲ್ಲಿ, ಸಂಪ್ರದಾಯದ ಹೆಸರಿನಲ್ಲಿ ಸ್ವಾರ್ಥಸಾಧಕರು ಸೋಗುವೇಶವನ್ನು ಧರಿಸಿ ತಮ್ಮ ಸ್ವಾರ್ಥ ಸಾಧನೆಯನ್ನು ಸಾಧಿಸಿಯೂ ತಮಗಿನ್ನ ನೈತಿಕವಾಗಿ ನೂರುಪಾಲು ಉತ್ತಮರಾಗಿರುವ ಮುಗ್ಧ ಜನರಿಂದ ಮೇಲಿರುವಂತೆ ವರ್ತಿಸುವ ಜನಗಳನ್ನು ಕುರಿತು ಬರೆದ ವಿಡಂಬನಾತ್ಮಕ ಕಥೆಯೇ "ವೈರಾಗ್ಯದ ಮಹಾತ್ಮೆ" ಅಥವಾ "ಅಟ್ಟಿದರೆ ಓಡುತ್ತದೆ; ಬಿಟ್ಟರೆ ಹಿಂಬಾಲಿಸುತ್ತದೆ."

ವೈಷ್ಣವ ಬೈರಾಗಿ ಬೈರಾಗಿಣಿಯರು ಆಚರಿಸುವ ಮಧುರ ಭಾವ ಸಾಧನೆಯ ಆದರ್ಶ ಒಳ್ಳೆಯದೇ. ಆದರೆ ಅದರ ಫಲಿತಾಂಶ ಸೋಗಿನವೇಶದ ಜನರ ಸ್ವಾರ್ಥ ಸಾಧನೆ. ಅದಕ್ಕೆ ಉದಾಹರಣೆಯಾಗಿ ರಾಯಚರಣ ಮತ್ತು ಕೇನರಾಮ ಗೋಸ್ವಾಮಿಯ ನಾಲ್ಕನೆಯ ಚಿಕ್ಕ ವಯಸ್ಸಿನ ವಿಧವೆ ಹೆಂಡತಿಯರ ಪ್ರಸಂಗವನ್ನು ನೋಡಬಹುದು.

ಕಥೆಯ ಮುಕ್ತಾಯ ಸೊಗಸಾಗಿ ಬಂದಿದೆ. ಎಲ್ಲ ಕಥೆಗಳಲ್ಲಿಯ ಶೈಲಿಯಂತೆ ಈ ಕಥೆಯ ಶೈಲಿಯೂ ಕಾವ್ಯಮಯವಾಗಿದೆ.

೭. ತೀವ್ರ ವೈರಾಗಿಯಾಗಿದ್ದ ರಮೇಶ-ಚೈತನ್ಯ ಪುನಃ ಸಂಸಾರಿಯಾದದ್ದು ಸರಿಯೆ? ಸಂಸಾರದ ನಿತ್ಯಾನಿತ್ಯತೆಗಳನ್ನು ಚೆನ್ನಾಗಿ ಅರಿತುಕೊಂಡು ಅದರಿಂದ ದೂರವಾಗಲು ಬಯಸಿದ ರಮೇಶನನ್ನು ಮದುವೆಯ ಬಂಧನದಿಂದ ಬಂಧಿಸಲೆತ್ನಿಸಿದ ಅವನ ತಂದೆ ತಾಯಿಗಳ ಪ್ರಯತ್ನವನ್ನು ಮೆಚ್ಚಬಹುದೆ? ಸಂನ್ಯಾಸಿಯಾಗಲೇಬೇಕೆಂದು ನಿರ್ಧರಿಸಿದ್ದ ರಮೇಶ ಮದುವೆಗೆ ಮುಂಚೆ ಮನೆಯನ್ನು ಬಿಟ್ಟಿದ್ದರೆ ಆತನು ನಿಜವಾಗಿಯೂ ಸಂನ್ಯಾಸಿಯಾಗಬಹುದಿತ್ತಲ್ಲವೆ? ಸಂಸಾರವೆಂಬುದು ಒಂದು ಮಧುರ ಸ್ವಪ್ನವೆಂದು ತಿಳಿದೂ ಪ್ರೇಮಾನಂದರು ರಮೇಶನಿಗೆ ಸಂಸಾರಿಯಾಗಲು ಅನುಮತಿಯಿತ್ತರೇಕೆ? ಎಂಬ ಮುಂತಾದ ಪ್ರಶ್ನೆಗಳು "ಸಂನ್ಯಾಸಿ" ಕಥೆಯನ್ನೋದಿದ ಯಾರಿಗಾದರೂ ಬರುವುದು ಸಹಜ. ಕೆಲವಕ್ಕೆ ಉತ್ತರಿಸಬಹುದು ಕೆಲವಕ್ಕೆ ಉತ್ತರಿಸಲಾಗುವುದಿಲ್ಲ.

ರಮೇಶ ಪುನಃ ಸಂಸಾರಿಯಾದದ್ದು ಸರಿಯೋ ತಪ್ಪೋ, ಕಥೆಗಾರರ ದೃಷ್ಟಿಯಲ್ಲಿ ಅದು ಸರಿ! ಏಕೆಂದರೆ ಸಂಸಾರ ದಲ್ಲಿದ್ದುಕೊಂಡೇ ಭಗವಂತನನ್ನು ಕಾಣುವ ಹಂಬಲ ಕಥೆ ಗಾರರದ್ದು. ಯಾವ ತಂದೆ ತಾಯಿಯರೇ ಆಗಲಿ ತಮ್ಮ ಮಗ ಸಂನ್ಯಾಸಿಯಾಗಲಿ ಎಂದು ಬಯಸುವುದಿಲ್ಲ, ಅಂತೆಯೇ ರಮೇಶನ ತಂದೆತಾಯಿ. ಪ್ರೇಮಾನಂದರಿಗೆ ಸಂಸಾರವೆಂಬುದೊಂದು ಮಧುರ ಸ್ವಪ್ನವೆಂದು ಗೊತ್ತು. ಆದರೂ ಅವರು ರಮೇಶ ಸಂಸಾರಿಯಾಗಲು ತಮ್ಮ ಅನು ಮತಿಯನ್ನಿತ್ತರು. ಏಕೆಂದರೆ ಅಭಾವ ವೈರಾಗ್ಯ, ಸ್ಮಶಾನ ವೈರಾಗ್ಯಗಳಿಗಿಂತ ಸಹಜ ವೈರಾಗ್ಯ ಉತ್ತಮವಾದುದೆಂದೂ, ಜೀವನದಲ್ಲಿ ಎಲ್ಲ ಅನುಭವಿಸಿ ಜೀವನ ಇಷ್ಟೇಯೆ ಎಂಬ ಜುಗುಪ್ಸೆ ಬಂದಾಗ ಮುಕ್ತಿಮಾರ್ಗದಲ್ಲಿ ಮನಸ್ಸನ್ನು ತೊಡಗಿ ಸುವುದು ಇನ್ನೂ ಸುಲಭವೆಂದು ಅನುಮತಿಯಿತ್ತರು.

ಗುರು-ಮುಕುಂದ, ಮುಕುಂದ-ಚೈತ್ಯ ಇವರ ಸಂಭಾ ಷಣೆಯ ಮೂಲಕವಾಗಿಯೇ ಕಥೆಯ ವಸ್ತು ಸುರುಳಿ ಬಿಚ್ಚಿಕೊಳ್ಳುತ್ತದೆ. ಅರ್ಥಪೂರ್ಣವಾದ ಪುಟ್ಟ ಪುಟ್ಟ ಮಾತುಗಳ ಚಕಮಕಿ ಹಾರುವ ಈ ಸಂಭಾಷಣೆ ಬಿಕ್ಕಟ್ಟಾ ಗಿದೆ, ಸ್ವಾರಸ್ಯವಾಗಿದೆ.

ಸಂಭಾಷಣೆಯಲ್ಲಿ ಒಂದು ಸೊಗಸಿರುವಂತೆ ವಸ್ತು ಸಂವಿಧಾನದಲ್ಲಿಯೂ ಒಂದು ಸೊಗಸಿದೆ. ಈ ಕಥೆಯನ್ನು ಮೂರು ಭಾಗಗಳಲ್ಲಿ ಹೇಳಲಾಗಿದೆ. ಮೊದಲ ಭಾಗದಲ್ಲಿ ಚೈತನ್ಯ ಮುಕುಂದ ಇವರ ಸಂವಾದವಿದೆ. ಎರಡನೆಯ ಭಾಗದಲ್ಲಿ ಗುರು ಮುಕುಂದ ಇವರ ಸಂವಾದವಿದೆ. ಮೂರನೆಯ ಭಾಗದಲ್ಲಿ ಮತ್ತೆ ಚೈತನ್ಯ-ಗುರು ಇವರ ಸಂವಾದವಿದೆ. ಇನ್ನು ಯಾರಾದರೂ ಸಾಮಾನ್ಯ ದರ್ಜೆಯ ಕಥೆಗಾರರಾಗಿದ್ದರೆ ಎರಡನೆಯ ಭಾಗದ ವಿಷಯವನ್ನು ಮೊದಲು ಹೇಳಿ ಆ ಬಳಿಕ ಒಂದು ಮೂರರ ವಿಷಯವನ್ನು ಹೇಳುತ್ತಿದ್ದರು. ನ್ಯಾಯವಾಗಿ ಕಥೆ ಇರಬೇಕಾದದ್ದು. ಆದರೆ ಕಲೆಯ ದೃಷ್ಟಿಯಿಂದ ಈ ರೀತಿ ತುಂಬ ಸೊಗ ಸಾಗಿದೆ. ಹೀಗೆ ಸಂನ್ಯಾಸಿ ಸೋಗಿನ ಮುಕುಂದ ವೇಶ ತೆಗೆದು ಸ್ತ್ರೀಯಾಗಿ ನಿಲ್ಲುವ ರೀತಿ ತುಂಬ ನಾಟಕೀಯವಾಗಿದೆ.

ಕಥೆ ಚಂದ್ರನ ವರ್ಣನೆಯಿಂದ ಪ್ರಾರಂಭವಾಗಿ ಚಂದ್ರನ ವರ್ಣನೆಯಿಂದಲೇ ಮುಕ್ತಾಯವಾಗುತ್ತದೆ. ಕಥೆಯ ಆರಂಭದಲ್ಲಿ ಬರುವ ಚಂದ್ರನ ಬೆಳುದಿಂಗಳಲ್ಲಿ ರಮಣೀಯ ವಾಗಿ ತೋರುವ ಗಂಗಾ ಯಮುನ ಸಂಗಮದ ಪ್ರಕೃತಿ ಸೌಂದರ್ಯದ ವರ್ಣನೆ ತುಂಬ ಹಿತವಾಗಿದೆ. ಗಂಗೆ ಮತ್ತು ಯಮುನೆಯರ ಸಂಗಮ ಇಂದಿರೆ ರಮೇಶರ ಸಂಗಮಕ್ಕೆ ಎಂತಹ ಉಚಿತವಾದ ಹಿನ್ನೆಲೆ! ಗುರುದೇವನ ಗಾಂಭೀರ್ಯ, ಚೈತನ್ಯನ ದೃಢತೆ, ಮುಕುಂದನ ನಿರ್ಮಲಪ್ರೇಮ ಇವು ಗಳೆಲ್ಲವನ್ನೂ ಬೆಳಗುವ ಆ ಬೆಳುದಿಂಗಳು ಎಷ್ಟು ಅರ್ಥ ಪೂರ್ಣ.

ಸುಮಾರು ಆರು ತಿಂಗಳಕಾಲ ತನ್ನ ಜೊತೆಯಲ್ಲಿದ್ದ, ಆತ್ಮೀಯ ಗೆಳೆಯನಂತಿದ್ದ ಮುಕುಂದನನ್ನು ಸೋಗಿನ ವೇಶದ ಸ್ತ್ರೀ ಎಂದು ತಿಳಿಯಲಾರದಷ್ಟು ರಮೇಶ ವಿರಾಗಿ ಯಾಗಿದ್ದನೆ? ನಿರ್ಲಿಪ್ತನಾಗಿದ್ದನೆ? ತೀವ್ರ ವಿರಾಗಿಯಾ ದಾಕ್ಷಣ ಸ್ತ್ರೀ ಪುರುಷ ಭೇದವನ್ನು ತಿಳಿಯಲಾಗುವು ದಿಲ್ಲವೆ? ಹಾಗಿದ್ದರೆ ಅದು ಅಸಹಜವಲ್ಲವೆ? ಎಂಬ ಪ್ರಶ್ನೆ ಗಳು ಓದುಗರಲ್ಲಿ ಬರುತ್ತವೆ. ಆದರೆ ಅವು ಕಥೆಯ ಓಘದಲ್ಲಿ ಗೌಣವಾದುವು.

"'ಕುವೆಂಪು' ಅವರ ಮೊದಲಿನ ಕಥೆಗಳು ರವೀಂದ್ರರ ಕಥೆಗಳನ್ನು ಅನುಸರಿಸಿ ಬರೆದವುಗಳಾಗಿವೆ. ಆದ್ದರಿಂದ ವಸ್ತು ಶೈಲಿಗಳಲ್ಲಿ ಕೃತಿಮತೆಯಿದೆ. 'ಕ್ರಿಸ್ತನಲ್ಲ ಪಾದ್ರಿಯ ಮಗಳು', 'ಆರಾಣೆ ಮೂರುಕಾಸು', 'ಈಶ್ವರನೂ ನಕ್ಕಿರಬೇಕು' ಇವು ಇಂಥ ಕಥೆಗಳಾಗಿವೆ" ಎಂದು ಶ್ರೀಮಾನ್ ಕೆ. ಡಿ. ಕುರ್ತುಕೋಟಿಯವರು ಅಭಿಪ್ರಾಯ ಪಡುತ್ತಾರೆ. ಆದರೆ ಕುರ್ತುಕೋಟಿಯವರು ಹೆಸರಿಸಿರುವ ಮೇಲಿನ ಮೂರು ಕಥೆಗಳಲ್ಲಿ ರವೀಂದ್ರರ ಛಾಯೆಯಾಗಲೀ, ಕಥಾಸಂವಿಧಾನ, ವಸ್ತು ಶೈಲಿಗಳಲ್ಲಿ ಕೃತಿಮತೆಯಾಗಲೀ ಕಂಡು ಬರುವುದಿಲ್ಲ.

ಕುರ್ತುಕೋಟಿಯವರ ವಿಮರ್ಶಕ ದುರ್ಬೀನಿನಿಂದ 'ಕುವೆಂಪು'ರವರ ಕಥೆಗಳನ್ನು ನೋಡಿದರೆ, ನಿಜವಾಗಿಯೂ ರತ್ನಗಳಾದ ಅವು ಸಾಮಾನ್ಯ ಹರಳುಗಳಾಗಿ ಕಾಣಿಸುತ್ತವೆ. ಅನಿವಾರ್ಯವಾಗಿ ಮೆಚ್ಚಲೇಬೇಕಾದ ಕಥೆಗಳ ಬಗ್ಗೆ ಒಂದೊಂದು ವಾಕ್ಯದಲ್ಲಿ ತೇಲಿಸಿ ಹೇಳಿದ್ದಾರೆ.

ಇದುವರೆಗೆ ನಾವು ನೋಡಿದ ಕಥೆಗಳು ಒಂದು ರೀತಿ ಯಲ್ಲಿ ಬಿಡಿ ಕಥೆಗಳು. ಒಂದೊಕ್ಕೊಂದಕ್ಕೆ ಸಂಬಂಧವಿಲ್ಲ. ಇನ್ನುಳಿದ ಕಥೆಗಳು ವಸ್ತುವಿನ ದೆಸೆಯಿಂದಲೋ, ಮನ ಶ್ಶಾಸ್ತ್ರವನ್ನು ಕಥಾತಂತ್ರದಲ್ಲಿ ಅಳವಡಿಸಿಕೊಂಡಿರುವುದ ರಿಂದಲೋ, ಕಥೆ ನಡೆಯುವ ಪರಿಸರದಿಂದಲೋ ಒಂದ ಕ್ಕೊಂದು ಸಂಬಂಧಿಸಿದೆ.

(ಮುಂದುವರೆಯುವುದು)

# ವಿಮರ್ಶನರಂಗ

**ಗೀತೆಯ ಭೂಮಿಕೆ:** ಮೂಲ: ಶ್ರೀ ಅರವಿಂದರು; ಅನುವಾದಕರು: ಸಿಂಪಿಲಿಂಗಣ್ಣ; ಪ್ರ: ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ಪುಟಗಳು: ೯೬; ಬೆಲೆ: ೧–೫೦.

ಕನ್ನಡದಲ್ಲಿ ಭಗವದ್ಗೀತೆಯನ್ನು ಕುರಿತು ಬಂದಿರುವ ವಾಙ್ಮಯವು ಸಾಕಷ್ಟು ಸಮೃದ್ಧವಾಗಿದೆ. ಶಂಕರ ರಾಮಾನುಜ ಮತ್ತು ಮಧ್ವ ಮೊದಲಾದ ಪ್ರಾಚೀನ ಮತಾಚಾರ್ಯರು ಗೀತೆಯನ್ನು ಕುರಿತು ಮಾಡಿರುವ ವ್ಯಾಖ್ಯಾನಗಳು ಕನ್ನಡದಲ್ಲಿ ಹರಿದು ಬಂದಿರುವಂತೆ ಈಚಿನವರಾದ ತಿಲಕ್, ಗಾಂಧಿ ಮತ್ತು ಅರವಿಂದರು ಬರೆದಿರುವ ಗೀತಾ ವ್ಯಾಖ್ಯಾನಗಳೂ ಕನ್ನಡದಲ್ಲಿ ಪ್ರಕಟವಾಗಿವೆ. ಇವುಗಳ ಜೊತೆಗೆ ವಿನೋಬಾ, ಆ್ಯನಿಬೆಸಂಟ್ ಮತ್ತು ಸಾತವಾಳೇಕರ್ ಅವರ ಗ್ರಂಥಗಳ ಕನ್ನಡ ರೂಪವನ್ನು ಕಾಣಬಹುದಾಗಿದೆ. ಈ ಕೃತಿಗಳ ಜೊತೆಯಲ್ಲೇ ಆಲೂರರ ಗೀತಾ ವಾಙ್ಮಯವನ್ನೂ ಡಿ. ವಿ. ಜಿ. ಅವರ ಜೀವನಧರ್ಮಯೋಗವನ್ನೂ ಇಲ್ಲಿ ಸ್ಮರಿಸಬಹುದಾಗಿದೆ.

ಪ್ರಸ್ತುತ ಗೀತೆಯ ಭೂಮಿಕೆ ಗ್ರಂಥವನ್ನು ಶ್ರೀ ಅರವಿಂದರು ೧೯೦೯ರಲ್ಲಿ ಧರ್ಮ ಎಂಬ ವಾರಪತ್ರಿಕೆಯಲ್ಲಿ ಬರೆಯಲಾರಂಭಿಸಿದರು. ಆದರೆ ಅವರು ಕೆಲವು ತಿಂಗಳಲ್ಲೇ ಪಾಂಡಿಚೇರಿಗೆ ಹೋಗಿ ನೆಲೆಸಿದುದರಿಂದ ಈ ಬರಹವು ಅಪೂರ್ಣವಾಗಿ ಉಳಿಯಿತು. ಇಲ್ಲಿ ಅರವಿಂದರು ಗೀತೆಯ ಅಧ್ಯಾಯಗಳನ್ನು ಮಾತ್ರ ಅನುವಾದಿಸಿರುವರಲ್ಲದೆ ಅವುಗಳಿಗೆ ಪೂರಕವಾಗುವಂತೆ ವಿಸ್ತೃತ ಟಿಪ್ಪಣಿಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಕುರುಕ್ಷೇತ್ರಯುದ್ಧವನ್ನು ತನ್ನ ದಿವ್ಯ ದೃಷ್ಟಿಯಿಂದ ಕಂಡ ಸಂಜಯನ ಬಗ್ಗೆ ಬರೆಯುತ್ತಾ ಇಂತಹ ದೂರದೃಷ್ಟಿ ಹಾಗೂ ಶ್ರವಣ ವೈಜ್ಞಾನಿಕವಾಗಿ ಹೇಗೆ ಸಾಧ್ಯವಾಗಿದೆ ಎಂಬುದನ್ನು ಸಮರ್ಥಿಸಿದ್ದಾರೆ. ಅಂತೆಯೇ ಗೀತೆಯನ್ನು ಹೇಳುವುದರಲ್ಲಿ ಶ್ರೀ ಕೃಷ್ಣನ ಉದ್ದೇಶ ಅದನ್ನು ತಿಳಿಯಲು ಅರ್ಜುನನ ಪಾತ್ರದ ಮೊದಲಾದ ವಿಷಯಗಳನ್ನೂ ಕೂಲಂಕಷವಾಗಿ ಚರ್ಚಿಸಿದ್ದಾರೆ. ಒಟ್ಟಿನಲ್ಲಿ ಭಗವದ್ಗೀತೆಯು ಜಗತ್ತಿಗೆ ಸನಾತನವಾದ ಕರ್ಮಮಾರ್ಗವನ್ನು ಬೋಧಿಸುವುದೆಂದು ಹೇಳಿದ್ದಾರೆ.

ಈ ಗ್ರಂಥವನ್ನು ಹಿಂದಿಯಿಂದ ಅನುವಾದಿಸಿರುವ ಸಿಂಪಿ ಲಿಂಗಣ್ಣನವರು ಗೀತಾಭಕ್ತರಿಗೆ ಸ್ತುತ್ಯಕಾರ್ಯವನ್ನು ಮಾಡಿದ್ದಾರೆ. ಇಂಥ ಗ್ರಂಥಗಳನ್ನು ಮೂಲ ಬಂಗಾಳಿಯಿಂದಲೇ ಅನುವಾದಿಸಿದ್ದರೆ ಮತ್ತಷ್ಟು ಸಫಲವಾಗಬಹುದಿತ್ತು–ಎಂದು ಓದುಗರಿಗೆ ಅನ್ನಿಸದೆ ಇರದು. ಅಲ್ಲಲ್ಲಿ ಕಲೆ ಹಾಕಿರುವ ಮುದ್ರಣ ದೋಷಗಳನ್ನು ಮುಂದಿನ ಸಂಸ್ಕರಣದಲ್ಲಿ ಮಾರ್ಪಡಿಸಬಹುದಾಗಿದೆ. ಶ್ರೀ ಅರವಿಂದರ ಸಾಹಿತ್ಯ ಪ್ರಚಾರಕ್ಕಾಗಿಯೇ ತಮ್ಮ ಲೇಖನಿಯನ್ನು ಮೀಸಲಿಟ್ಟಿರುವ ಶ್ರೀ ಸಿಂಪಿ ಲಿಂಗಣ್ಣನವರಿಂದ ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಸಾಹಿತ್ಯ ಸೇವೆಯನ್ನು ನಿರೀಕ್ಷಿಸುತ್ತೇವೆ.

**ಕೊ. ಶ್ರೀ.**

**೧೯ನೆಯ ಅಖಿಲ ಕರ್ನಾಟಕ ಮಕ್ಕಳ ಸಮ್ಮೇಳನ ಮತ್ತು ಮಕ್ಕಳ ಕೂಟದ ರಜತ ಮಹೋತ್ಸವದ ಸಂಪುಟ;** ಪ್ರ: ಅಖಿಲ ಕರ್ನಾಟಕ ಮಕ್ಕಳ ಕೂಟ, ಬೆಂಗಳೂರು; ಪುಟ: ಅರವತ್ತೈದು.

'ಇಂದಿನ ಮಕ್ಕಳೇ ಭಾವಿ ಭಾರತದ ಪ್ರಜೆಗಳು' ಎಂಬ ತತ್ವದ ಆದರ್ಶವನ್ನು ಕಾರ್ಯರೂಪಕ್ಕಿಳಿಸುತ್ತಿರುವ ಮಕ್ಕಳ ಕೂಟದ ರಜತ ಮಹೋತ್ಸವದ ಸವಿ ನೆನಪಿಗಾಗಿ ಈ ಸಂಪುಟವನ್ನು ತಂದುದಾಗಿದೆ. ಇದರಲ್ಲಿ 'ಹಿರಿಯರ ವಿಭಾಗ', 'ಕಿರಿಯರ ವಿಭಾಗ' ಎಂದು ಎರಡು ವಿಭಾಗಗಳಿವೆ. ಹಿರಿಯರ ವಿಭಾಗದಲ್ಲಿ ಮಕ್ಕಳ ಕೂಟದ ಆರಂಭ, ಬೆಳವಣಿಗೆ, ಸಾಧನೆಯ ಪರಿಚಯವಿದೆ. ಮಕ್ಕಳ ಕೂಟದ ಸ್ಥಾಪಕಿ ದಿ|| ಆರ್. ಕಲ್ಯಾಣಮ್ಮನವರ ಸಾಧನೆ, ಮಕ್ಕಳ ಬಗೆಗೆ ಅವರು ತಳೆದಿದ್ದ ಭಾವನೆಯ ಪರಿಚಯವಿದೆ. ಅದೃಶ್ಯರಾಗಿರುವವರ ಬಗೆಗಿನ ಮೆಚ್ಚುಗೆ ಮಾತೂ ಇದಲ್ಲ–ಅವರ ಸಾಧನೆಯ ನೈಜ ಚಿತ್ರ. ಶ್ರೀ ಗೌರೀಶ ಕಾಯ್ಕಿಣಿಯವರ 'ಒಂದು ವಿವೇಚನೆ ಮತ್ತು ವಿವೇಕ' ಶ್ರೀ ಎಲ್. ಎಸ್. ಶೇಷಗಿರಿರಾವ್‌ರವರ 'ಒಂದು ಸೂಚನೆ' ಎಂಬ ಲೇಖನಗಳಲ್ಲಿ ಶಿಶುಸಾಹಿತ್ಯ ರಚನೆಯಲ್ಲಿ ವಹಿಸಬೇಕಾದ ಎಚ್ಚರಿಕೆ–ಶಿಶುಸಾಹಿತ್ಯದ ಸ್ವರೂಪಗಳನ್ನೂ, ಶಿಶುವಾಗಿ ಶಿಶು ಸಾಹಿತ್ಯ ರಚಿಸಬೇಕೆಂಬ ಸೂಚನೆಯನ್ನೂ ತರಲಾಗಿದೆ. ಶಿಶುಸಾಹಿತ್ಯ ರಚನೆಯಲ್ಲಿ ಬಹುಮುಖವಾಗಿ ದುಡಿದ ಪಂಜೆಯವರು, ಎಂ. ಎನ್. ಕಾಮತ್, ಟಿ. ಎಂ. ಆರ್. ಸ್ವಾಮಿ, ಹೊಯ್ಸಳರ ಪರಿಚಯ, ಸಾಧನೆಯನ್ನು ಕುರಿತಾದ ಲೇಖನಗಳು ಸಮಯೋಚಿತವಾಗಿವೆ. ಮಕ್ಕಳಿಗೆ ಮನೋಜ್ಞವಾದ ಕತೆಗಳನ್ನು ಶ್ರೀ ಭಾರತೀಸುತ, ಶ್ರೀ ಕೆ. ಜಿ. ಶೆಟ್ಟಿಯವರು ರಚಿಸಿಕೊಟ್ಟಿದ್ದಾರೆ. 'ಬಂಗಾರ

ದೊಂದು ಹಕ್ಕಿಯನೇರಿ' ಇದು ಉತ್ತಮ ಕವನ. ಬಾಲ್ಯ ಜೀವನದ ಸಹಜ ಸುಂದರ ಚಿತ್ರ ಮೂಡಿದೆ.

ಕಿರಿಯರ ವಿಭಾಗದಲ್ಲಿ ಸಾರಂಗನ 'ಕಿಟ್ಟಿಯ ಕಾರು' ಒಳ್ಳೆಯ ಪದ್ಯ. ಗೀತಾಳ 'ನಾನು ಮಾಡಿದ ಪ್ರವಾಸ' ಉತ್ತಮ ಹರಟೆ.

ಹೀಗೆ ಮಕ್ಕಳ ಬಹುಮುಖ ಪ್ರತಿಭೆಯ ವಿಕಾಸನಕ್ಕೆ ದುಡಿಯುತ್ತಿರುವ ಮಕ್ಕಳ ಕೂಟದ ರಜತ ಮಹೋತ್ಸವದ ನೆನಪಿಗೆ ತಂದಿರುವ ಈ ಹೊತ್ತಗೆಯಲ್ಲಿ ವಿಚಾರಪೂರ್ಣ ಲೇಖನಗಳು ಬಂದು, ಕೂಟದವರು ಕೃತಕೃತ್ಯರಾಗಿದ್ದಾರೆ.

* * *

**ಬೆಳೆದು ಬೆಳಗಲಿ**–ಲೇ.: ವಾಣೀಸುತ, ಪ್ರ.: ರಂ. ಗು. ವಾಶಿಷ್ಠ, ೨೩೧, ೬ನೇ ಅಡ್ಡರಸ್ತೆ, ಈಜುಕೊಳ ಬಡಾವಣೆ, ಬೆಂಗಳೂರು-೩, ಪುಟ: ೪೨, ಬೆಲೆ: ೧-೦೦.

ಶ್ರೀ 'ವಾಣೀಸುತ' ಅವರ ಪ್ರಥಮ ಕವನ ಸಂಕಲನ. ಇಲ್ಲಿ ೨೧ ಕವನಗಳಿವೆ. ಈ ಸಂಕಲನದಲ್ಲಿನ ಒಂದು ಕವನ ಬೆಳೆದು ಬೆಳಗಲಿ. ಈ ಕವನದಲ್ಲಿ ಭಾರತದ ಭವ್ಯ ಪರಂಪರೆ, ಧರ್ಮ ಗುರುಗಳು, ಕಾವ್ಯ ಗುರುಗಳು, ಋಷಿವರ್ಯರು, ವೀರರು, ಜನಹಿತ ನಾಯಕರುಗಳನ್ನು ಕುರಿತಾದ ಸ್ಮರಣೆ ಇದೆ. ಆ ದ್ರಷ್ಟಾರರ ಮಾರ್ಗದಲ್ಲಿ–ದರ್ಶನದಲ್ಲಿ–ನಮ್ಮ ನಾಡು–ನುಡಿ, ಸಂಸ್ಕೃತಿ, ಬೆಳೆದು ಬೆಳಗಲಿ ಎಂಬುದು ಕವಿಯ ಆಶಯ.

ಈ ಸಂಕಲನದಲ್ಲಿ ಮುಖ್ಯವಾಗಿ ರಾಷ್ಟ್ರಭಕ್ತಿಯನ್ನು ಕುರಿತಾದ ಕವನಗಳನ್ನು ಕಾಣುತ್ತೇವೆ. ಸ್ವತಂತ್ರ್ಯಕ್ಕೆ ಹಿಂದಿನ ಭಾರತ, ಕ್ರಾಂತಿಯ ಆಸಕ್ತಿ, ಸ್ವಾತಂತ್ರ್ಯಗಳಿಕೆ, ಅನಂತರದ ಭಾರತಗಳ ಬಗೆಗೆ ಸ್ಪಷ್ಟ ಚಿತ್ರವನ್ನು ಇಲ್ಲಿ ಕಾಣಬಹುದು. 'ಭಾರತೀಯನ ಬಾಳು' ಎಂಬ ಕವನದಲ್ಲಿ ಸ್ವತಂತ್ರ ಬಂದೂ ನಾವು ಹೇಗೆ ಅಸ್ವಂತ್ರರಾಗಿದ್ದೇವೆ ಎಂದು ಕಳಕಳಿಯಿಂದ ಹೇಳಿದ್ದಾರೆ.

"ಕರ್ತವ್ಯ ದೇವತೆಗೆ ಕಿವಿಗೊಡಲು ಮರೆದಿಹೆವು,
ಕೃತ್ರಿಮದ ಜೀವನವ ನಂಬಿ ನೆರೆಗೆಟ್ಟಿಹೆವು;
ಇದು ದಾಸ್ಯ, ಇದು ದಾಸ್ಯ, ಭಾರತದ ಅಪಹಾಸ್ಯ!
ಬದುಕಿನಲಿ ಶಾಂತಿ ನಮಗಿಲ್ಲ–ಅಸ್ವತಂತ್ರರು
ಭಾರತೀಯರು"
(ಪುಟ ೮)

ಎಂಬಲ್ಲಿ ಇಂದಿನ ಸಮಾಜದ ನೈಜ ಚಿತ್ರಣ ಮೂಡಿದೆ.

ಪ್ರಕೃತಿಯನ್ನು ಕುರಿತಾದ ಕವನಗಳಲ್ಲಿ ಚೈತನ್ಯವಿದೆ. ಮಿರುಗಿದೆ. ಹೆಣ್ಣಿನ ಬಗೆಗೆ ಇವರು ತಳೆದಿರುವ ನಿಲುವು ಮೂಗಿಗೆ ಬೆರಳೇರಿಸುವಂತಹುದು. 'ಕವಿಯ ಕನಸು' ಉತ್ತಮ ಕವನ. ವ್ಯಕ್ತಿಗಳನ್ನು ಕುರಿತಾದ ಕವನಗಳು ಭಾವಪೂರ್ಣವಾಗಿವೆ. ಭಾಷಾಂತರಗಳಲ್ಲಿ ಸ್ವತಂತ್ರತೆ ಇದೆ. ಜಾತಿಯ ಬಗೆಗೆ ಇವರು ತಳೆದಿರುವ ನಿಲುವು ಮೆಚ್ಚುವಂತಹುದು.

ಈ ಸಂಕಲನವನ್ನು ಒಟ್ಟಾಗಿ ಗಣಿಸಿದಾಗ ಭಾಷೆ, ಛಂದಸ್ಸಿನ ಮೇಲೆ ಸ್ವಾಮ್ಯ ಸಾಲದು ಎನಿಸುತ್ತದೆ. ಶಬ್ದ ರಚನೆ ಕೆಲವೊಂದು ಕಡೆ ಗ್ರಾಮ್ಯವಾಗುತ್ತದೆ. ಶೈಥಿಲ್ಯವಿದೆ. ಉದಾ: ಪುಟ ೩ರಲ್ಲಿ 'ಬರಿದು ಆಗಿಹುದು' ಎಂಬ ಶಬ್ದ 'ಬರಿದಾಗಿಹುದು' ಎಂದಿದ್ದರೆ ಚೆನ್ನಿತ್ತಲ್ಲವೆ? ನಿಮ್ಮತಕೆ (ನಿಮ್ಮ ಮತಕೆ), ಮತ್ತಿಮಗೆ (ಮತ್ತೆ ನಿಮಗೆ) ಇಂತಹ ಶಬ್ದಗಳಲ್ಲಿನ ಕೊರತೆಯನ್ನು ಓದುಗ ಗ್ರಹಿಸದಿರಲಾರ.

ಒಟ್ಟಿನಲ್ಲಿ ಸತತಾಭ್ಯಾಸಿಯೂ ಹಿರಿಯರ ಸಂಪರ್ಕವನ್ನು ಹೊಂದಿರುವ ವಾಣೀಸುತರು ಈ ಕೊರತೆಗಳನ್ನು ನೀಗಿ ಮುಂದೆ ಉತ್ತಮ ಕವಿಗಳಾಗಬಲ್ಲರೆಂಬ ಲಕ್ಷಣಗಳು ಇಲ್ಲಿ ವ್ಯಕ್ತವಾಗಿವೆ. ಆದ್ದರಿಂದ ವಾಣೀಸುತರು, ಸಾಹಿತ್ಯಸುತರು ಆಗಲೆಂದು ಹಾರೈಸೋಣವೆ?

**ಆರ್. ರಾಚಪ್ಪ**

**ಸುವರ್ಣ ಮಹಸ್ಮರಣಂ** (ಲೇಖನಗಳ ಸಂಗ್ರಹ); ಪ್ರಕಾಶಕರು: ಹೆಬ್ಬಾರ್ ಶ್ರೀವೈಷ್ಣವ ಸಭಾ, ಬೆಂಗಳೂರು-೯; ಆಕಾರ: ಕ್ರೌನ್ ಅಷ್ಟದಳ; ಪುಟ: ೬೨; ಬೆಲೆ: ರೂ. ೧-೦೦.

ಬೆಂಗಳೂರು ನಗರದ ಹೆಬ್ಬಾರ್ ಶ್ರೀವೈಷ್ಣವ ಸಭೆಯ ಸುವರ್ಣ ಮಹೋತ್ಸವದ ಕುರುಹಾಗಿ ಶ್ರೀವೈಷ್ಣವ ಮತ ಹಾಗು ವಿಶಿಷ್ಟಾದ್ವೈತ ವೇದಾನ್ತದ ಸ್ಥೂಲ ರೂಪರೇಷೆಗಳನ್ನೊಳಗೊಂಡ ಎಂಟು ಕನ್ನಡ ಲೇಖನಗಳನ್ನೂ ಮತ್ತು ಎರಡು ಇಂಗ್ಲಿಷ್ ಲೇಖನಗಳನ್ನೂ ಈ ಪುಸ್ತಕದಲ್ಲಿ ಕೊಡಲಾಗಿದೆ. ಭಾಗವತ ಸಂಪ್ರದಾಯಕ್ಕೆ ತಳಹದಿ ಹಾಕಿದ ಆಳ್ವಾರುಗಳೆಂಬ ಸಂತರ ಪರಿಚಯ, ವಿಶಿಷ್ಟಾದ್ವೈತ ದರ್ಶನದ ಸ್ಥಾಪನಾಚಾರ್ಯರಾದ ಶ್ರೀ ರಾಮಾನುಜಾಚಾರ್ಯರ ಪ್ರವಾಸ ಮತ್ತು ಪ್ರಚಾರ, ದರ್ಶನದ ಮುಖ್ಯಾಂಶಗಳು, ಇವುಗಳೊಂದಿಗೆ "ಹೆಬ್ಬಾರ್" ಪಂಗಡದ ಆವಿರ್ಭಾವಕ್ಕೆ ಚರಿತ್ರೆ ಮತ್ತು ಶಾಸನಗಳ ಆಧಾರ ಇವು

ಗಳಿಗೆ ಸಂಬಂಧಿಸಿದ ಎಂಟು ಕನ್ನಡ ಲೇಖನಗಳು ಸರಸವಾಗಿಯೂ ವಿದ್ವತ್ಪೂರ್ಣವಾಗಿಯೂ ಇವೆ.

ಶ್ರೀವೈಷ್ಣವ ಸಿದ್ಧಾಂತದ ಭೂತ, ವರ್ತಮಾನ ಹಾಗೂ ಭವಿಷ್ಯಗಳ ಮಾಹಿತಿಯನ್ನು ಕುರಿತು ಶ್ರೀವೈಷ್ಣವ ಭಿನ್ನ ಪಂಗಡಗಳ ಮನೋಧರ್ಮವನ್ನು ವಿಶ್ಲೇಷಿಸಿ ಶ್ರೀಮಾನ್ ಯಾಮುನಾಚಾರ್ಯರು ಬರೆದಿರುವ ಇಂಗ್ಲಿಷ್ ಲೇಖನ, ಧರ್ಮ ಮತ್ತು ದರ್ಶನಗಳ ಅನುಸರಣೆಗೆ ಕಾಲೋಚಿತವಾದ ಮಾರ್ಗವನ್ನು ಬೋಧಿಸುತ್ತವೆ. 'ಆಳ್ವಾರುಗಳು ಮತ್ತು ಅವರ ಪಾಶುರಗಳು' ಎಂಬ ಇಂಗ್ಲಿಷ್ ಲೇಖನದಲ್ಲಿ ಶ್ರೀಮಾನ್ ಭೂವರಾಹನ್‌ರವರು, ಶ್ರೀಮಾನ್ ಪಿ. ಜಿ. ಶ್ರೀನಿವಾಸನ್‌ರವರು ಕನ್ನಡದಲ್ಲಿ ಬರೆದಿರುವ ವಿಷಯವನ್ನು ಪ್ರತಿಪಾದಿಸಿದ್ದಾರೆ.

**ಎಸ್. ಆರ್. ಶಾಮಣ್ಣ**

**ವಿಕಾಸ** (ನಾಟಕ) ಲೇ.: ಶ್ರೀ ಕೆ. ಎನ್. ಭಟ್ ಶಿರಾಡಿಪಾಲ್, ಪ್ರ.: ವಿಚಾರ ಸಾಹಿತ್ಯ ಮಾಲೆ, ಕಡಿರುದ್ಯಾವರ, ದ.ಕ. ಪುಟ ೪೬, ಬೆಲೆ: ರೂ. ೧-೦೦.

ಇದು ಭಾರತ ಸರಕಾರದ ಸಮಾಜ ವಿಕಾಸ ಯೋಜನೆಯಮೇಲೆ ಬರೆದ ಪ್ರಪ್ರಥಮ ನಾಟಕವೆಂದು ಲೇಖಕರೇ ಹೇಳಿಕೊಂಡಿದ್ದಾರೆ. ಸರಕಾರದ ವಿವಿಧ ಅಭಿವೃದ್ಧಿ ಯೋಜನೆಗಳಿಗೆ ಆದ ಪಾಡೇ ಈ ನಾಟಕಕ್ಕೂ ಆಗಿದೆ.

ರಂಗಭೂಮಿಯ ಅನುಭವವೇ ಇಲ್ಲವೇನೋ ಎಂಬಂತೆ ನಾಟಕವನ್ನು ರಚಿಸಿದ್ದಾರೆ. ನಲವತ್ತೇಳು ಪುಟಗಳ ಈ ಚಿಕ್ಕ ನಾಟಕದಲ್ಲಿ ೧೬ ದೃಶ್ಯಗಳು, ಸುಮಾರು ೨೦ ಪಾತ್ರಗಳು! ಉದ್ದನೆಯ ಸಂಭಾಷಣೆ, ಹಳ್ಳಿಯ ಜನರಾಗಲೀ ಪೇಟೆಯವರೇ ಆಗಲಿ ತಾಳ್ಮೆಯಿಂದ ಕುಳಿತು ನಾಟಕ ನೋಡಿ, ಮಾತು ಕೇಳಿ ಕೊನೆಯವರೆವಿಗೂ ಸಹಕರಿಸುವುದೇ ಅನುಮಾನಾಸ್ಪದವಾದ ವಿಚಾರ. ಈ ನಾಟಕ ನೋಡಲಿಲ್ಲ, ತಮ್ಮ ಕಲ್ಯಾಣದ ಮಾರ್ಗವನ್ನು ಹುಡುಕಿಕೊಳ್ಳಲಿಲ್ಲ ಎಂದು ಹಳ್ಳಿಗರನ್ನು ದೂರಿ ಪ್ರಯೋಜನವಿಲ್ಲ. ನಾಟಕಗಳನ್ನು ನೋಡಿ ಕಲಿಯುವ ಕಾಲ ಇದಲ್ಲ. ಜನಸಾಮಾನ್ಯದಲ್ಲಿ ವಿಚಾರಗಳನ್ನು ಬಡಿದೆಬ್ಬಿಸುವ ಅಂಶಗಳಿದ್ದರೂ ರಂಜನೆಯ ದೃಷ್ಟಿಯಿಂದ, ನಾಟಕ ಕಲೆಯ ದೃಷ್ಟಿಯಿಂದ, ಅನುಕೂಲದ ದೃಷ್ಟಿಯಿಂದ, ರಂಗಭೂಮಿಯ ಮೇಲೆ ತರುವುದು ಕಷ್ಟವಾಗಬಹುದು.

ಮೂಲತಃ ಶ್ರೀ ಭಟ್ಟರ ಉದ್ದಿಶ್ಯಗಳಿಗೆ ಅವರ ಪ್ರಯತ್ನಕ್ಕೆ ನಮ್ಮ ಸ್ವಾಗತವಿದೆ. ಅವರು ಸ್ವಲ್ಪ ಮನರಂಜನೆಯನ್ನೂ ಸೇರಿಸಿ, ನಾಟಕ ತಂತ್ರಗಳನ್ನು ಅಳವಡಿಸಿ ಇದೇ ಪ್ರಕಾರ ನಾಟಕಗಳನ್ನೇ ಜನಗಳ ಮುಂದಿಟ್ಟರೆ ಜನಕ್ಕೆ ಅದು ರುಚಿಸುವುದರಲ್ಲಿ ಸಂದೇಹವೇ ಇಲ್ಲ. ಇಂತಹ ನಾಟಕಗಳನ್ನು ಭಟ್ಟರು ಬರೆಯ ಬಲ್ಲರೆಂಬ ಭರವಸೆ ನಮಗಿದೆ.

* * *

**ಮುದ್ಮಲ್ಲಿ** (ನಾಟಕ) ಲೇ.: ಶ್ರೀ ರಾ. ಸು. ಮಣಿ, ಪ್ರ.: ಮಣಿ ಪ್ರಕಾಶನ, ಪದ್ಮಾಲಯ, ೨೪೪೭/೯, ಬಿ. ಜಯನಗರ, ಮೈಸೂರು-೪ ಪುಟ: ೩೭, ಬೆಲೆ ೭೫ ಪೈಸೆ.

ಈ ಕಿರುನಾಟಕದಲ್ಲಿ ಸದ್ಯದ ಸಮಾಜದ ಒಂದು ಮುಖ್ಯವಾದ ಸಮಸ್ಯೆ-ವಿವಾಹ ಪೂರ್ವ ಸ್ತ್ರೀ ಪುರುಷ ಸಂಪರ್ಕ-ಅದರಿಂದ ಉದ್ಭವಿಸುವ ನಾನಾ ತೊಡಕುಗಳು-ಈ ವಿಚಾರದ ಮೇಲೆ ಲೇಖಕರು 'ಕ್ಷ' ಕಿರಣವನ್ನು ಬೀರಿದ್ದಾರೆ.

ಆದರೆ ನಾಟಕ ಕೊನೆ ಮುಟ್ಟಿದಾಗ ಸಮಸ್ಯೆಗೆ ಪರಿಹಾರ ದೊರಕದೆ ಪ್ರಶ್ನಾರ್ಥಕ ಚಿಹ್ನೆ ಮತ್ತೂ ಅದ್ಭುತವಾಗಿ ಬೆಳೆದು ಶ್ರೋತೃವರ್ಗವನ್ನು ಸಂದಿಗ್ಧದಲ್ಲಿ ಕೆಡವುತ್ತದೆ.

ಕೆಲವು ಪಾತ್ರಗಳು ಕೇವಲ ಕಾಣಿಸಿಕೊಳ್ಳುವುದಕ್ಕಾಗಿ ಸೃಷ್ಟಿಸಲ್ಪಟ್ಟದೆಯೇ ಎಂಬಂತಾಗಿ ಆ ಪಾತ್ರಗಳ ಉಪಯೋಗ ನಮಗೆ ಸರಿಯಾಗಿ ಮನದಟ್ಟಾಗುವುದಿಲ್ಲ. ಉದಾ. ಭಟ್ಟ, ನರಸಿಂಹ ಇತ್ಯಾದಿ. ನರಸಿಂಹ ಬಂದಾಗ ಸುಬ್ಬುವಿನ ಹೆಂಡತಿ ಭ್ರಮರ ಬೇಜಾರುಪಟ್ಟುಕೊಳ್ಳುವ ಕಾರಣ ಶ್ರೋತೃವರ್ಗದ ಬುದ್ಧಿಶಕ್ತಿಗೆ ಮೀರಿದ್ದು. ಭ್ರಮರಳ ಪಾತ್ರ ಬಹಳ ಸುಂದರವಾಗಿ ಮೂಡಿಸಲ್ಪಟ್ಟಿದೆ. ತಾಯಿಯ ವಾತ್ಸಲ್ಯದ ಒಂದು ಸಜೀವ ಉದಾಹರಣೆ ಭ್ರಮರ. ಮಿಕ್ಕೆಲ್ಲಾ ಪಾತ್ರಗಳು ಅಷ್ಟಕ್ಕಷ್ಟೇ. ಕೆಲವುಗಳಲ್ಲಿ ಸ್ಪಷ್ಟತೆ ಮೂಡಬೇಕಾಗಿದೆ.

ಮುದ್ರಣ ಅಂದವಾಗಿದ್ದರೂ ಅಚ್ಚುದೋಷಗಳಿವೆ. ವಿಲಾಸೀ ನಾಟಕ ತಂಡಗಳು ಗಂಭೀರ ನಾಟಕಗಳನ್ನು ಆರಿಸುವಾಗ ಇಂಥಾ ನಾಟಕಗಳು ಅವರಿಗೆ ಬಹಳ ಸಹಾಯಕವಾದಾವು.

**ಕೆ. ಎಸ್. ಸೂಲಿಬೆಲೆ**

**ಜೀವನರಥ** (ಕವನ ಸಂಕಲನ– ಕವಯಿತ್ರಿ : ಸೌ. ಇಂದುಮತಿ ವಿಭೂತಿ, ಔರಂಗಬಾದ, ಬೆಲೆ: ೧–೫೦, ಪುಟ :೫೪.

ಔರಂಗಬಾದದ ಉದಯೋನ್ಮುಖ ಕವಯಿತ್ರಿ ಸೌ. ಇಂದುಮತಿ ವಿಭೂತಿಯವರು ಇದೀಗ 'ಜೀವನ ರಥ' ಪ್ರಥಮ ಕವನ ಸಂಕಲನವನ್ನು ಬೆಳಕಿಗೆ ತಂದಿದ್ದಾರೆ. ಇದರಲ್ಲಿ ವಿವಿಧ ವಿಷಯುಗಳ ಮೇಲೆ ಬರೆದ ೫೬ ಕವನಗಳಿವೆ. ಗ್ರಂಥದ ಪ್ರಥಮ ಕವನದಲ್ಲಿ ಬಾಳುವ ಹದವನ್ನು ಹಿತ-ಮಿತವಾಗಿ ಹೇಳಿದ್ದಾರೆ. ಭಕ್ತಿಯಿಂದಲೇ ಮುಕ್ತಿಯೆಂಬುದನ್ನು ಕಾಣಲು ಸಾಧ್ಯವೆಂಬುದನ್ನು ತೋರಿಸಿದ್ದಾರೆ. ಆಧ್ಯಾತ್ಮದ ಸಿಹಿ ರಸವನ್ನು ಉಣಿಸಿದ್ದಾರೆ. ಅಣ್ಣ ಬಸವಣ್ಣನವರು ಸಾರಿದಂತ 'ಸತಿ-ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂಬುದನ್ನು 'ಹೆಣ್ಣು-ಗಂಡುಗಳೆರಡು ತೂಕದ ಗಾಲ್ಯಾಣಿ' ಎಂಬ ಮಾತಿನಲ್ಲಿ ವ್ಯಕ್ತಗೊಳಿಸಿದ್ದಾರೆ. ಭಾವವು ಭಾಷೆಯಲ್ಲಿ ತುಂಬಿ ತುಂಬಿ ಬರಬೇಕೆಂಬುದು ಸತ್ಯವಾದರೂ ವಿಭೂತಿಯವರ ಪ್ರಯತ್ನ ಸಾಧನ ಮಾರ್ಗದಲ್ಲಿದೆ ಎಂಬದನ್ನು ಮರೆಯಲಾಗದು. 'ನಮ್ಮ ದೇಶ, ನಮ್ಮ ಈಶ ಸ್ವಾತಂತ್ರ್ಯವೇ ಅದಕೆ ಕಲಶ' ಅವರ ರಾಷ್ಟ್ರಾಭಿಮಾನದ ಪ್ರತೀಕ. 'ಭಾವದೇವಿ ವಾಣಿ ತಾಯಿ, ನನಗೆ ಕರುಣೆ ತೋರುನೀ' ಎಂದು ಶಾರದಾ ಮಾತೆಯಲ್ಲಿ 'ಮೊರೆ' ಇಟ್ಟಿದ್ದಾರೆ. ಅವರು ಸೋಲಿಗೆ ಹೆದರಿಲ್ಲ. 'ಬಾಳಿನಲಿ ನಾವ್ ಗೆಲುವSS' ಎಂಬ ಆಶಾವಾದಿ ಅವರು. 'ಬಾಳಿನ ಸುಂದರ ಹಂದರ' ಕೆಟ್ಟು ಬಯಕೆಯನ್ನು 'ಜೀವದೇವಗೆ' ಎಂಬ ಕವನದಲ್ಲಿ ಮೂಡಿದೆ.

ಒಲುಮೆಯಿಂದಲೇ ಸಾಧಿಸುವ ಗುರಿ ಅವರದು. 'ಎದ್ದೇಳು ಎದ್ದೇಳು ಎಲೆ ಜೀವ, ಸಿಹಿಯಿರಲಿ ಕಹಿಯಿರಲಿ ಎಂದು ಆಲಸಿಗಳಿಗೆ ಕರೆನೀಡಿದ್ದಾರೆ. ಹಲವೆಡೆಯಲ್ಲಿ ಅವರಿಗೆ ಪ್ರಾಸದ ಹುಚ್ಚು ಇದೆ. 'ಪಾಪಹರ ಪುಣ್ಯದಾಗರ ನೀ ಜಗದಿ ಅಮರ' ಇದೊಂದು ಉದಾಹರಣೆಗಾಗಿ ಹೇಳಿದೆ ಹಲವು ಕವನಗಳಲ್ಲಿ ಉನ್ನತ ಭಾವಕ್ಕಿಂತಲೂ ಭಾಷೆಯ ಬೆಡಗು ಕಂಡುಬರುತ್ತದೆ. 'ಹನ್ನೆರಡು ಅಂದರೂ ಇನ್ನೆರಡು ಅನ್ನಿ' ಯೆಂದು ತಾಳ್ಮೆ, ಸಹನೆಯ ಮಹತಿಯನ್ನು ಕವನಗಳ ಮುಖಾಂತರ ಬೋಧೆ ಮಾಡಿರುವದು ಗಮನಾರ್ಹ. ಸರಳವಾದ ಮುಖಪತ್ರ, ಸುಂದರವಾದ ಮುದ್ರಣದಿಂದ ಹೊರಬಂದ ಸೌ. ಇಂದುಮತಿ-ವಿಭೂತಿಯ 'ಜೀವನ-ರಥ' ಕನ್ನಡಿಗರು ಎತ್ತಿ ಹಿಡಿದು ಪ್ರೋತ್ಸಾಹ ನೀಡಬೇಕು. ದೂರದ ಕನ್ನಡತಿಗೆ ಧೈರ್ಯ ತುಂಬಬೇಕು. ಆ ದೃಷ್ಟಿಯಿಂದ ಅವರ ಕಾವ್ಯಸೃಷ್ಟಿ ಹೆಚ್ಚಲಿ.

**ಎಸ್. ಭೂಸರಡ್ಡಿ**

**ಜ್ಯೋತಿಶಾಸ್ತ್ರ ಪರಿಚಯ** "ಗ್ರಹಶೀಲಗಳು"–ಲೇ. : ಭಾನುಪ್ರಿಯ, ಪ್ರ. ; ಶ್ರೀ ಕೃಷ್ಣ ಅಸ್ಟ್ರೋಬ್ಯೂರೊ, ೫೯೩, ಸಜ್ಜನರಾವ್ ರೋಡ್, ಬೆಂಗಳೂರು–೪, ಬೆಲೆ: ರೂ. ೩-೫೦.

ಜ್ಯೋತಿಷ್ಯವು ವೇದಾಂಗಗಳಲ್ಲಿ ಒಂದು. ಮನುಷ್ಯನ ದೈನಂದಿಕ ಜೀವನದಲ್ಲಿ ಅತ್ಯವಶ್ಯಕವಾದ ಒಂದು ವಿದ್ಯೆ. ಜನ್ಮವೆತ್ತಿ ತಾನು ನಡೆಸುತ್ತಿರುವ ಕರ್ಮದ ಗುರಿ ಏನು ? ತನ್ನ ಜೀವನ ಎತ್ತಕಡೆ ಸಾಗುತ್ತಿರುವುದು ? ಭಗವಂತನನ್ನು ಅರಿಯಲು ತಾನು ಸರಿಯಾದ ಮಾರ್ಗದಲ್ಲಿ ನಡೆಯುತ್ತಿರುವೆನೇ, ಎಂಬ ಈ ಪ್ರಶ್ನೆಗಳಿಗೆ ಸರಿಯಾದ ಉತ್ತರ ದೊರಕಲು ಜ್ಯೋತಿಷ್ಯ ಶಾಸ್ತ್ರವು ಅತ್ಯಂತ ಉಪಯುಕ್ತವಾದ ದಾರಿ. ಆದುದರಿಂದ ಅದನ್ನು ಮನುಷ್ಯನು ಅವಶ್ಯಕವಾಗಿ ಕಲಿಯಲೇಬೇಕು.

ಈ ಗುರಿಯನ್ನು ಸಾಧಿಸಲು ಶ್ರೀ ಭಾನುಪ್ರಿಯರು ತಮ್ಮದೇ ಆದ ಉತ್ತಮ ಶೈಲಿಯಲ್ಲಿ ಈ ಪುಸ್ತಕವನ್ನು ಬರೆದು ಸಾಮಾನ್ಯ ಜನರಿಗೆ ಮಹದುಪಕಾರ ಮಾಡಿದ್ದಾರೆ. ಶಾಸ್ತ್ರದ ಪರಿಚಯವನ್ನು ಸುಲಭ ರೀತಿಯಲ್ಲಿ ತೋರ್ಪಡಿಸಿ ಜ್ಯೋತಿಷ್ಯ ಪ್ರಥಮ ವಿದ್ಯಾರ್ಥಿಗೆ ಒಂದು ಮಾರ್ಗ ದೀಪಿಕೆಯಂತೆ ಬರೆದಿದ್ದಾರೆ. ಇದು ಬಹಳ ಅಭಿನಂದನೀಯವಾದದ್ದು. ನಮ್ಮ ಪುರಾಣ, ಇತಿಹಾಸ, ಧರ್ಮ ಮತ್ತು ಆಚರಣೆಗಳಿಗೆ ಅನುಸಾರವಾಗಿ ವೇದಮಾರ್ಗಕ್ಕೆ ವ್ಯತ್ಯಾಸವಿಲ್ಲದಂತೆ ಪುಸ್ತಕದ ವಚನವನ್ನು ಬಳಸಿಕೊಂಡು ಬಂದಿದ್ದಾರೆ.

ನಮ್ಮ ಕನ್ನಡ ಭಾಷೆಯಲ್ಲಿ ಇಂತಹ ಪುಸ್ತಕಗಳು ಬರೆದಿದ್ದು ಸ್ವಾಗತಾರ್ಹ. ಜ್ಯೋತಿಷ್ಯಶಾಸ್ತ್ರರ ಅಂತರ ರಹಸ್ಯವೇನೆಂದು ತಿಳಿಯಬೇಕಾದ ವಿದ್ಯಾರ್ಥಿಗೆ ಈ ಪುಸ್ತಕವು ಬಹಳ ಉಪಯುಕ್ತವಾದುದು.

ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು, ಶ್ರೀ ಪ್ರಹ್ಲಾದರ ಅವತಾರವಾದ ಮುನಿಶ್ರೇಷ್ಠ ಪರಮ ಪೂಜ್ಯರಾದ ಶ್ರೀ ರಾಘವೇಂದ್ರ ಮುನಿಗಳಿಗೆ ಸಮರ್ಪಿಸಿರುವುದು ಈ ಪುಸ್ತಕಕ್ಕೆ ವಿಶೇಷವಾದ ಭೂಷಣ.

**ಕೆ. ಎಸ್. ಕೃಷ್ಣಮೂರ್ತಿ**

# ಸುದ್ದಿ ಸಂಗ್ರಹ

## ಮೈಸೂರು ವಿಶ್ವವಿದ್ಯಾನಿಲಯದ ದಿಟ್ಟತನದ ಹೆಜ್ಜೆ

ಮೈಸೂರು ವಿಶ್ವವಿದ್ಯಾನಿಲಯವು ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿ ಅಧಿಕೃತವಾಗಿ ಅಂಗೀಕರಿಸಿ ಮತ್ತೊಮ್ಮೆ ಇತರ ವಿಶ್ವವಿದ್ಯಾನಿಲಯಗಳಿಗೆ ಮೇಲ್ಪಂಕ್ತಿ ಹಾಕಿಕೊಟ್ಟಿದೆ. ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಇಂಗ್ಲಿಷನ್ನು ಕಡ್ಡಾಯದ ಭಾಷೆಯಾಗಿ ಕಲಿಯಬೇಕಾಗಿಲ್ಲ. ಇಂಗ್ಲಿಷು ಇನ್ನಿತರ ವಿದೇಶಿ ಭಾಷೆಗಳಲ್ಲಿ ಒಂದಾಗಿ, ಇತರ ಭಾರತೀಯ ಭಾಷೆಗಳ ಜೊತೆಯಲ್ಲಿ ಕೇವಲ ಐಚ್ಛಿಕ ಭಾಷೆಯಾಗಿ ಇರುತ್ತದೆ. ಇಚ್ಛೆ ಇರುವವರು ಮಾತ್ರ ಅದನ್ನು ಕಲಿಯಬಹುದು. ಈ ನಿರ್ಧಾರದಿಂದ ಮಾತೃ ಭಾಷೆಯಾದ ಕನ್ನಡಕ್ಕೆ ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಸಿಕ್ಕಬೇಕಾಗಿದ್ದ ಪ್ರಥಮ ಸ್ಥಾನವು ದೊರತಂತಾಗಿದೆ. ಪ್ರಬುದ್ಧ ಕರ್ಣಾಟಕದ ಚಿನ್ನದ ಹಬ್ಬದ ಸಂದರ್ಭದಲ್ಲಿ ವಿಶ್ವವಿದ್ಯಾನಿಲಯ ತಳೆದ ಈ ನಿರ್ಧಾರದಿಂದ ರಾಜ್ಯದ ಎಲ್ಲ ಕನ್ನಡಿಗರಿಗೆ ಅಮಿತವಾದ ಸಂತೋಷ ಉಂಟಾಗಿದೆ.

## 'ಶ್ರೀನಿವಾಸ'ರಿಗೆ ಸಾಹಿತ್ಯ ಅಕಾಡಮಿ ಪುರಸ್ಕಾರ

ಕನ್ನಡ ಸಾಹಿತ್ಯಕ್ಕೆ ಕಳೆದ ಐದು ದಶಕಗಳಿಗಿಂತ ಹೆಚ್ಚಾಗಿ ಬಹುಮುಖವಾಗಿ ಸೇವೆ ಸಲ್ಲಿಸುತ್ತಾ ಬಂದಿರುವ ಪೂಜ್ಯ ಮಾಸ್ತಿ ವೆಂಕಟೇಶ ಐಯ್ಯಂಗಾರ್ ಅವರಿಗೆ ೧೯೬೮ರ ಸಾಲಿನ ಸಾಹಿತ್ಯ ಅಕಾಡಮಿ ಬಹುಮಾನ ದೊರತಿರುವುದು ಬಹುದಿನಗಳ ಕನ್ನಡಿಗರ ಹಾರೈಕೆ ಫಲಿಸಿದಂತೆ ಆಗಿದೆ. ಕನ್ನಡ ಸಾಹಿತ್ಯವನ್ನು ತಮ್ಮ ಸಣ್ಣ ಕಥೆಗಳಿಂದ ಸಮೃದ್ಧಗೊಳಿಸಿದ ಮಾಸ್ತಿ ಅವರಿಗೆ 'ಸಣ್ಣ ಕಥೆಗಳು' ಗ್ರಂಥಕ್ಕೆ ಬಹುಮಾನ ದೊರತಿರುವುದು ಒಂದು ಯೋಗಾಯೋಗ.

ಇತ್ತೀಚೆಗೆ ಮಾಸ್ತಿ ಅವರು **ಭಾವ** ಎಂಬ ಹೆಸರಿನಲ್ಲಿ ೧೨೦೦ ಪುಟಗಳ ತಮ್ಮ ಆತ್ಮಕಥೆಯನ್ನು ಬರೆದು ಮುಗಿಸಿದ್ದಾರೆ. ಇದು ಮೂರು ಸಂಪುಟಗಳಲ್ಲಿ ಪ್ರಕಟವಾಗಲಿದ್ದು ಸುಮಾರು ೪೦೦ ಪುಟಗಳ ಪ್ರಥಮ ಸಂಪುಟವು ಸದ್ಯದಲ್ಲೇ ಪ್ರಕಟವಾಗಲಿದೆ. 'ಭಾವ' ಗ್ರಂಥವು ಬಿಡುಗಡೆಯಾದರೆ ಕನ್ನಡ ಸಾಹಿತ್ಯಕ್ಕೆ ಅದೊಂದು ಅಪೂರ್ವ ಕಾಣಿಕೆಯಾಗುವುದರಲ್ಲಿ ಸಂದೇಹವಿಲ್ಲ.

## ಸಾಹಿತ್ಯ ಅಕಾಡಮಿ ಫೆಲೋ ಆಗಿ ದ. ರಾ. ಬೇಂದ್ರೆ

ಭಾರತದ ಸಾಹಿತ್ಯ ಅಕಾಡಮಿಯು ಕನ್ನಡದ ಶ್ರೇಷ್ಠ ಕವಿಗಳಲ್ಲಿ ಒಬ್ಬರೂ, ವಿಚಾರವೇತ್ತರೂ ಆಗಿರುವ ಕವಿ ಅಂಬಿಕಾತನಯದತ್ತರಿಗೆ ಸನ್ಮಾನಿಸುವುದರ ಮೂಲಕ ಮತ್ತೊಮ್ಮೆ ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರವಾಗಿದೆ. ಅಕಾಡಮಿಯು ದ. ರಾ. ಬೇಂದ್ರೆ ಅವರನ್ನು ಫೆಲೋ ಆಗಿ ಆಯ್ಕೆಮಾಡಿದೆ. ಈ ಮೊದಲು ಡಾ. ಎಸ್. ರಾಧಾಕೃಷ್ಣನ್ ಅವರನ್ನು ಹೀಗೆ ಗೌರವಿಸಲಾಗಿತ್ತು. ಈ ಬಾರಿ ಸಿ. ರಾಜಗೋಪಾಲಾಚಾರಿ, ತಾರಾಶಂಕರ ಬಂದೋಪಾಧ್ಯಾಯ, ಸುಮಿತ್ರಾನಂದ ಪಂತ ಇವರ ಜೊತೆಯಲ್ಲೇ ಕವಿ ಬೇಂದ್ರೆ ಅವರಿಗೆ ಅಗ್ರಪೂಜೆ ಸಲ್ಲಿಸಿದ್ದಾರೆ.

## ರಾಜ್ಯದ ಅಕಾಡಮಿ ಪ್ರಶಸ್ತಿಗಳು

೧೯೬೮-೬೯ನೇ ಸಾಲಿಗೆ ರಾಜ್ಯದ ಸಾಹಿತ್ಯ ಅಕಾಡಮಿಯು ಸರ್ವಶ್ರೀ ಸಾಲಿ ರಾಮಚಂದ್ರರಾವ್, ಅ. ನ. ಕೃ. ಜಿ. ಪಿ. ರಾಜರತ್ನಂ, ಬಸವರಾಜ ಕಟ್ಟೀಮನಿ, ಡಿ. ಕೆ. ಭೀಮಸೇನರಾವ್ ಮತ್ತು ಶ್ರೀಮತಿ ಜಯದೇವಿತಾಯಿ ಲಿಗಾಡೆ ಅವರಿಗೆ ಪ್ರಶಸ್ತಿಗಳನ್ನು ಇತ್ತು ಗೌರವಿಸಲು ನಿರ್ಧರಿಸಿದ್ದಾರೆ. ಇದು ಸಂತೋಷದ ಸಂಗತಿ.

## ಸಂಗೀತ ನಾಟಕ ಅಕಾಡಮಿ ಪ್ರಶಸ್ತಿಗಳು

ರಾಜ್ಯದ ಸಂಗೀತ ನಾಟಕ ಅಕಾಡಮಿಯು ಈ ವರ್ಷ ಶ್ರೀಮತಿ ಶಾಂತಾರಾವ್, ಸರ್ವಶ್ರೀ ಪಿ. ಕಾಳಿಂಗರಾವ್; ಶಿವರುದ್ರಪ್ಪ, ವೆಂಕಟರಾವ್ ರಾಮದುರ್ಗ, ಲಕ್ಷ್ಮಣರಾವ್ ಆಸೂರಿ, ಹೆಚ್. ರಾಮಚಂದ್ರಶಾಸ್ತ್ರಿ, ಹಾರ್‍ವಾಡಿ ಕೃಷ್ಣ, ಪಾರಮಯ್ಯ ಹಾಸ್ಯಗಾರ, ಚನ್ನಕೇಶವಯ್ಯ ಮತ್ತು ರಾಳ್ಳಪಳ್ಳಿ ಅನಂತಕೃಷ್ಣಶರ್ಮ ಇವರುಗಳಿಗೆ ಪ್ರಶಸ್ತಿಗಳನ್ನು ಇತ್ತು ಗೌರವಿಸಲು ನಿರ್ಧರಿಸಿದೆ ಎಂದು ತಿಳಿದುಬಂದಿದೆ.

ಹೀಗೆ ಪುರಸ್ಕಾರ ಪ್ರಶಸ್ತಿಗಳನ್ನು ಪಡೆದಿರುವ ಕನ್ನಡಿಗರೆಲ್ಲರಿಗೂ ಪರಿಷತ್ತು ತನ್ನ ಶುಭಾಶಯಗಳನ್ನು ಸಲ್ಲಿಸುತ್ತದೆ.

---

# ಸ್ವೀಕಾರ

**ಕಾದಂಬರಿ**

ಶರಚ್ಚಂದ್ರರ ಗೃಹದಾಹ ; ಲೇ: ಕುಂದಾನಿ ಸತ್ಯನ್ ; ಪ್ರ : ಶ್ರೀ ಸುರಭಿ ಪ್ರಕಾಶನ, ಕೃಷ್ಣ ಬಿಲ್ಡಿಂಗ್ಸ್, ತ್ಯಾಗರಾಜ ರಸ್ತೆ, ಮೈಸೂರು-೪ ; ಪುಟ : ೪೧೧ ; ಆಕಾರ : ಕ್ರೌನ್ ಅಷ್ಟದಳ ; ಬೆಲೆ : ರೂ. ೫-೦೦, ೧೯೬೯.

**ಕವನ**

ಕರ್ನಾಟಕದ ಕಥೆ, (ಭಾಗ-೧) ; ಲೇ: ಅನ್ನದಾನಿ, ಜಿ. ಎಸ್ ; ಪ್ರ : ಗ್ರಾಮಸೇವಕ ಗ್ರಂಥಮಾಲೆ, ತಾಲ್ಲೂಕು ಹುನಗುಂದ, ಬಿಜಾಪುರ ಜಿಲ್ಲೆ ; ಪುಟ: ೩+೩+೭೧+೮ : ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೦೦, ೧೯೬೮.

ಸಿರಿಗಂಧ ಸೂಸ್ಯಾವೆ; ಲೇ : ಜಿ. ಎಸ್. ಭಟ್ಟ ; ಪ್ರ : ವಸಂತ ಸಾಹಿತ್ಯ, ಚೊಕ್ಕಾಡಿ (ದ.ಕ.) ; ಪುಟ : ೭೬ ; ಆಕಾರ : ಕ್ರೌನ್ ಅಷ್ಟದಳ ; ಬೆಲೆ : ರೂ. ೨-೦೦, ೧೯೬೮.

ಕಾವ್ಯತೀರ್ಥ ; ಲೇ : ಪದ್ಮನಾಭನಾಯಕ್ ; ಪ್ರ : ವಿಶ್ವಾಮಿತ್ರ ಪ್ರಕಟನಾಲಯ, ತೆಂಕಪೇಟೆ, ಉಡುಪಿ. (ದ.ಕ.) ; ಪುಟ : ೪೮ ; ಆಕಾರ: ಕ್ರೌನ್ ಅಷ್ಟದಳ ; ಬೆಲೆ : ರೂ. ೨-೦೦, ೧೯೬೮.

**ಕಥಾಸಂಕಲನ**

ಸನ್ಮಾನ ; ಸಂಪಾ : ಸನದಿ, ಬಿ.ಎ. ಮತ್ತು ರಾಘವೇಂದ್ರ ಇಟಗಿ ; ಪ್ರ : ನೃಪತುಂಗ ಪ್ರಕಾಶನ, ಕಲಬುರ್ಗಿ ; ಪುಟ : ೧೨೮ ; ಆಕಾರ : ಕ್ರೌನ್ ಅಷ್ಟದಳ ; ಬೆಲೆ : ರೂ. ೨-೨೫, ೧೯೬೮.

ಚಿನ್ನದ ಗೊಂಬೆ ; ಲೇ : ಸದಾನಂದ ಸುವರ್ಣ ; ಪ್ರ : ರಂಗರಶ್ಮಿ ಪ್ರಕಾಶನ, ಮುಂಬಯಿ ; ಪುಟ : ೪+೭೯ ; ಆಕಾರ : ಕ್ರೌನ್ ಅಷ್ಟದಳ ; ಬೆಲೆ : ರೂ. ೧-೭೫, ೧೯೬೮.

**ಪ್ರಬಂಧ**

ಭಾವಾರ್ಥ ವಿಸ್ತರಣ ; ಕೇಶವಭಟ್ಟ, ಟಿ ; ಮತ್ತು ಸುಂದರೇಶನ್, ಚ ; ಪ್ರ : ಭವತಾರಿಣಿ, ೫೨, ಚೌಳುಬೀದಿ, ಬೆಂಗಳೂರು-೨ ; ಪುಟ : ೮೯ ; ಆಕಾರ: ಕ್ರೌನ್ ಅಷ್ಟದಳ ; ಬೆಲೆ : ರೂ. ೧-೫, ೧೯೬೮.

**ನಾಟಕ**

ಲಕ್ಷ್ಪತಿ ಲಕ್ಕಪ್ಪ ; ಲೇ : ರಾಜೀವಲೋಚನ, ಪಿ ; ಪ್ರ : ಗೀತಾ ಏಜನ್ಸೀ, ಬಳೇಪೇಟೆ, ಬೆಂಗಳೂರು-೨ ; ಪುಟ : ೫೬ ; ಆಕಾರ: ಕ್ರೌನ್ ಅಷ್ಟದಳ ; ಬೆಲೆ : ರೂ. ೧-೭೫, ೧೯೬೮.

ಕವಿಭಿಕ್ಷೆ ; ಲೇ : ಪರ್ವತವಾಣಿ ; ಪ್ರ : ಭಾರತೀ ಪ್ರಕಾಶನ, ಸರಸ್ವತೀಪುರಂ, ಮೈಸೂರು-೫ ; ಪುಟ : ೯+೧೦೧ ; ಆಕಾರ : ಕ್ರೌನ್ ಅಷ್ಟದಳ ; ಬೆಲೆ : ರೂ. ೩-೦೦, ೧೯೬೮.

**ಪುರಾಣ**

ಕನ್ನಡ ವಚನ ಶನಿಮಹಾತ್ಮೆ ; ಲೇ : ಮತ್ತು ಪ್ರ : ಗಂಗಾಧರಶಾಸ್ತ್ರಿ, ಬಿ ; ಶ್ರೀ ಗೌರೀಶಂಕರ ನಿಲಯ, ನಂ. ೧೮೦, ಹೊಸಬಡಾವಣೆ, ವಿದ್ಯಾರಣ್ಯಪುರ, ಮೈಸೂರು-೪ ; ಪುಟ : ೪+೪೮ ; ಆಕಾರ : ಕ್ರೌನ್ ಅಷ್ಟದಳ ; ಬೆಲೆ : ರೂ. ೧-೦೦, ೧೯೬೯.

**ಕ್ಷೇತ್ರ ಮಹಾತ್ಮೆ**

ಶ್ರೀ ಗಯಾಕ್ಷೇತ್ರ ಮಹಿಮೆ ಮತ್ತು ಸಂಕ್ಷಿಪ್ತ ಪರಿಚಯ ; ಲೇ : ಕಾಶೀಭೀಮಾಚಾರ್ಯ, ನಾ ; ಚಿತ್ರಾ ಪ್ರಿಂಟರಿ, ೨೬, ಸೌರಾಷ್ಟ್ರಪೇಟೆ ಕ್ರಾಸ್, ಬೆಂಗಳೂರು-೨ ; ಪುಟ : ೭-+೩+೩೬ ; ೧೯೬೮.

**ಮಕ್ಕಳ ಸಾಹಿತ್ಯ**

ಜಾಣ ಗೆಲ್ಲುತ್ತಾನೆ ; ಲೇ : ಕುಮಾರ ವೆಂಕಣ್ಣ ; ಪ್ರ : ಕರ್ನಾಟಕ ಸಹಕಾರಿ ಪ್ರಕಾಶನ, ನಿಯಮಿತ, ಚಾಮರಾಜಪೇಟೆ, ಬೆಂಗಳೂರು-೧೮ ; ಬೆಲೆ : ರೂ. ೧-೦೦, ೧೯೬೮.

ಮೂರ್ಖಕುಳ್ಳ ; ಲೇ : ಕುಂದಾನಿಸತ್ಯನ್ ; ಪ್ರ : ಗುರುಪ್ರಸಾದ ಪ್ರಕಾಶನ, ೧೬೦೫, ೧ನೇ ಕ್ರಾಸ್, ಎಕ್ಸ್‌ಟೆನ್‌ಷನ್, ನಂಜನಗೂಡು ; ಪುಟ : ೨೭ ; ಆಕಾರ : ಕ್ರೌನ್ ಅಷ್ಟದಳ ; ಬೆಲೆ : ರೂ. ೦-೫೦, ೧೯೬೭.

**ತತ್ವ**

ಸಾಧನಪಥ ; ಲೇ : ನಾರಾಯಣಮೂರ್ತಿ, ಜಿ. ಸಿ ; ಪ್ರ : ಕೆ. ಪಿ. ಶಿವಲಿಂಗಯ್ಯ, ವಾಗ್ವಿಲಾಸ ಪ್ರಕಾಶನ, ೨೩೧೨-ಎ, II ಸ್ಟೇಜ್, ರಾಜಾಜಿನಗರ, ಬೆಂಗಳೂರು-೧೦ ; ಪುಟ : ೭೦ ; ಆಕಾರ ; ಕ್ರೌನ್ ಅಷ್ಟದಳ ; ಬೆಲೆ : ರೂ. ೧-೦೦, ೧೯೬೮.

**ವಚನ ಸಾಹಿತ್ಯ**

ಜೀವನಸಿದ್ಧಾಂತ ; ಲೇ : ಶ್ರೀ ಜ. ಚ. ನಿ ; ಪ್ರ : ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ೪೯, ಹ. ಬ. ಸಮಾಜ ರಸ್ತೆ, ಬೆಂಗಳೂರು-೪ ; ಪುಟ : ೧೩+೭೫೨ ; ಬೆಲೆ : ರೂ. ೧೦-೦೦, ೧೯೬೮.

ಮಾಯಿದೇವನ ಮೂರು ಶತಕ; ಲೇ: ಶ್ರೀ ಜ. ಚ. ನಿ; ಪ್ರ: ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ೪೯, ಹ. ಬ. ಸಮಾಜ ರಸ್ತೆ, ಬೆಂಗಳೂರು-೪; ಪುಟ: ೧೨೭; ಬೆಲೆ: ರೂ. ೧-೫೦, ೧೯೬೮.

ವೈರಾಗ್ಯಸಿದ್ಧಿ ವಿರೂಪಾಕ್ಷ ದೇಶಿಕೇಂದ್ರ; ಲೇ: ನಂಜುಂಡಾರಾಧ್ಯರು; ಪ್ರ: ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ೪೯, ಹ. ಬ. ಸಮಾಜ ರಸ್ತೆ, ಬೆಂಗಳೂರು-೪; ಪುಟ: ೯+೩೬+೮೮; ಬೆಲೆ: ರೂ. ೨-೦೦, ೧೯೬೮.

ಶಿವೋಪಾಸನಾವಿವೇಕ; ಲೇ: ಸ್ವಾಮಿ ವೀರಭದ್ರ ಶಿವಾಚಾರ್ಯರು; ಪ್ರ: ಪರಮಾರ್ಥಧಾಮ ಬೃಹನ್ಮಠ ಹಲಗೂರು, ಮಂಡ್ಯ ಜಿಲ್ಲೆ; ಪುಟ: ೨೧+೧೮೨+೧೯; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೫೦, ೧೯೬೭.

## ಪತ್ರಿಕೆಗಳು

ಸುಮತಾ; ಸಂಪಾ: ಶ್ರೀನಿವಾಸನ್, ಕೆ. ಬಿ; ಪ್ರ: ಕೆ. ಟಿ. ಶ್ರೀನಿವಾಸನ್, ೪, ೧ನೇ ಕ್ರಾಸ್, ಜರ್ನಲಿಸ್ಟ್ ಕಾಲೋನಿ, ಬೆಂಗಳೂರು-೨; ಪುಟ: ೨೭; ಬೆಲೆ: ಪ್ರತಿ ೧ಕ್ಕೆ ೦-೪೦, ೧೯೬೮.

ನಾಟ್ಯಭಾರತೀ; (ದ್ವೈಮಾಸಿಕ ಪತ್ರಿಕೆ); ಪ್ರ: ಅಸೋಸಿಯೇಟೆಡ್ ಅಮೆಚೂರ್ ಆರ್ಟಿಸ್ಟ್ಸ್, ಬೆಂಗಳೂರು-೪; ಪುಟ: ೩೮; ಬಿಡಿಪ್ರತಿ ೧ಕ್ಕೆ ರೂ. ೧-೦೦, ೧೯೬೮.

## ಮಾಸಪತ್ರಿಕೆ

ಜ್ಞಾನಸುಧಾ; ಸಂಪಾ: ಬಸವರಾಜನ್, ಕೆ. ಬಿ; ಪ್ರ: ಜ್ಞಾನಜ್ಯೋತಿ ಕಲಾಮಂದಿರ, ೭೨, ಬಳೇಪೇಟೆ, ಬೆಂಗಳೂರು-೨೨; ಪುಟ: ೩೬; ಬೆಲೆ: ಬಿಡಿಸಂಚಿಕೆ ೧ಕ್ಕೆ ರೂ. ೦-೫೦, ೧೯೬೮.

## ಸ್ಮರಣ ಸಂಪುಟ

ಉಡುಪಿ ತಾಲ್ಲೂಕ್ ಅಭಿವೃದ್ಧಿ ಮಂಡಲಿ ಉಡುಪಿ; ಸ್ಮರಣ ಸಂಪುಟ ೧೯೬೮; ಪುಟ: ೪೪+೩೦+೨೮.

## ವೇದ

ಯಾಜುಷೀ ಗೃಹ್ಯಬೋಧಿನೀ; ಲೇ: ಗಂಗಾಧರ ಮೂರ್ತಿ, ಮ; ಪ್ರ: ಶ್ರೀ ವೇದಶಾಸ್ತ್ರೋಜ್ಜೀವಿನೀ ಸಭಾಯಾಃ ಪ್ರಕಟನಾಲಯ, ಮೈಸೂರು-೬; ಪುಟ: ೨೧+೧೮೭+೧೯; ಬೆಲೆ: ರೂ. ೧೦-೦೦, ೧೯೫೨.

## ಷಟ್ಪದಿ

ಶ್ರಿಮದಾಂಡಾಳ್ ವೈಭವಂ; ಲೇ: ಕೌಶಿಕ್, ಬಿ. ಎಸ್. ಎಸ್; ಪ್ರ: ಶ್ರೀ ವಾಲ್ಮೀಕಿ ಗಮಕ ಪಾಠಶಾಲೆ, ಮೈಸೂರು; ಪುಟ: ೧೦+೩೮; ಬೆಲೆ: — ೧೯೬೮.

## ಜೀವನ ಚಿತ್ರಗಳು

ಮಹಾನಾಯಕರು; ಲೇ: ನರಸಿಂಹಮೂರ್ತಿ, ಎನ್. ಕೆ; ಪ್ರ: ಶ್ರೀ ಬುರ್ಲಿಬಿಂದುಮಾಧವ, ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ; ಪುಟ: ೫೯೦, ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೪-೫೦, ೧೯೬೮.

## ಜೀವನ ಪರಿಚಯ

ಮಕ್ಕಳ ಭಾರತರತ್ನ ಲಾಲ್‌ಬಹದ್ದೂರ್ ಶಾಸ್ತ್ರಿ; ಲೇ: ವಿಜಯಕುಮಾರ್; ಪ್ರ: ಎಸ್. ಎಲ್. ವಿ. ಬುಕ್ ಡಿಪೊ, ಅವೆನ್ಯೂ ರೋಡು, ಬೆಂಗಳೂರು-೨; ಪುಟ: ೨೩; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೦-೬೦, ೧೯೬೮.

### ವಿನಂತಿ

ಕನ್ನಡ ಸಾಹಿತ್ಯ ಪರಿಷತ್ತಿನ ೧೯೬೮ರ ಸಾಮಾನ್ಯ ಸದಸ್ಯತ್ವದ ಚಂದಾ ಡಿಸೆಂಬರ್ ತಿಂಗಳ ಕೊನೆಗೆ ಮುಗಿದಿರುವುದರಿಂದ, ೧೯೬೯ನೆಯ ವರ್ಷದ ಸದಸ್ಯತ್ವದ ಚಂದಾ ಹಣ ಆರು ರೂಪಾಯಿಗಳನ್ನು ಪರಿಷತ್ತಿನ ಕಛೇರಿಗೆ ಪಾವತಿ ಮಾಡಬೇಕಾಗಿ ಕೋರಿಕೆ.

ಪಂಪಮಹಾಕವಿ ರಸ್ತೆ
ಬೆಂಗಳೂರು - ೧೮

ಗೌರವ ಕಾರ್ಯದರ್ಶಿ
ಕನ್ನಡ ಸಾಹಿತ್ಯ ಪರಿಷತ್ತು

# ಸಂಪಾದಕೀಯ

## ಕೇಂದ್ರ ಸಾಹಿತ್ಯ ಅಕಾದಮಿಯ ಪ್ರಶಸ್ತಿ –
## ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್

ಈ ಸಲದ ಸಾಹಿತ್ಯ ಅಕಾದಮಿಯ ಪ್ರಶಸ್ತಿಯು ಕನ್ನಡದ ಹಿರಿಯ ಲೇಖಕರಾದ 'ಶ್ರೀನಿವಾಸ'ರಿಗೆ ದೊರೆತಿರುವುದು ಕನ್ನಡದ ಜನಕ್ಕೆಲ್ಲ ತುಂಬ ಸಂತೋಷವನ್ನುಂಟುಮಾಡಿದೆ. ಅಕಾದಮಿಯ ಪ್ರಶಸ್ತಿ ದೊರೆತುದರಿಂದ ಅದು 'ಮಾಸ್ತಿ'ಯವರ ಸಾಹಿತ್ಯಸತ್ವಕ್ಕೆ ಹೊಸ ಮೆರುಗೇನನ್ನೂ ತಂದುಕೊಡುವುದಿಲ್ಲ. ಅರ್ಧಶತಮಾನಕ್ಕೂ ಮಿಕ್ಕು ದೇಶದಲ್ಲಿ ಬಹುಮುಖವಾದ ಸಾಹಿತ್ಯ ಸೇವೆಯನ್ನು ಸಲ್ಲಿಸಿ, ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಶಾಶ್ವತ ಗುಣಗಳುಳ್ಳ ಕೃತಿಗಳನ್ನು ರಚಿಸಿ ಕನ್ನಡ ನಾಡಿನಲ್ಲೆಲ್ಲ ಸುತ್ತಾಡಿ ತಮ್ಮ ವಾಙ್ಮಂತ್ರದಿಂದ ಕನ್ನಡದ ಕೈಂಕರ್ಯಕ್ಕೆ ಯುವಕ ಚೈತನ್ಯವನ್ನು ಪ್ರೋತ್ಸಾಹಿಸಿ, 'ಜೀವನ' ಮಾಸಪತ್ರಿಕೆಯಂತಹ ಉತ್ತಮ ಸಾಹಿತ್ಯ ಪತ್ರಿಕೆಯನ್ನು ಕಾಲುಶತಮಾನ ಸಮರ್ಥವಾಗಿ ನಡಸಿ, ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯವನ್ನು ವಿಸ್ತಾರಗೊಳಿಸಿ, ಅದಕ್ಕೆ ಸಾರ್ವಜನಿಕ ಸಹಾಯವನ್ನು ಹೆಚ್ಚಿಸಿ, ಕನ್ನಡಿಗರ ಹೃದಯಮಂದಿರದಲ್ಲಿ ಸಿಂಹಾಸನಸ್ಥರಾಗಿ ವಿರಾಜಮಾನರಾಗಿರುವ 'ಶ್ರೀನಿವಾಸ'ರಿಗೆ ಜನತೆಯ ಗೌರವಕ್ಕಿಂತ ಹಿರಿದಾದ ಗೌರವ ಬೇರೆಯಿಲ್ಲ. ಆದರೆ ಹಿರಿಯ ಲೇಖಕರೆಲ್ಲರಿಗೂ ಸಂದಗೌರವ ಮಾಸ್ತಿಯವರಿಗೂ ಸಂದಿಲ್ಲವಲ್ಲ ಎಂಬ ಕೊರಗು ಜನತೆಯಲ್ಲಿದ್ದಿತು. ಇಂದು ಆ ಕೊರಗು ಮಾಯವಾಗಿ ಕನ್ನಡಿಗರೆಲ್ಲ ಸಂತೋಷಗೊಂಡಿದ್ದಾರೆ. ಮಾಸ್ತಿಯವರನ್ನು ಪರಿಷತ್ತು ಕೃತಜ್ಞತೆಯಿಂದ ಅಭಿನಂದಿಸುತ್ತದೆ.

ಸಣ್ಣಕತೆ, ಕಾದಂಬರಿ, ಕಥನಕವನ, ನಾಟಕ, ವಿಮರ್ಶೆ, ಸಂಪಾದಕೀಯ ಲೇಖನಗಳೇ ಮುಂತಾದ ಹಲವು ಬಗೆಯ ಉದ್ಗ್ರಂಥಗಳನ್ನು ರಚಿಸಿ ನಾಡಿನ ಸಾರಸ್ವತಕೋಶವನ್ನು ತುಂಬಿರುವ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ನೂರುಕಾಲ ಬಾಳಿ ಕನ್ನಡದ ಯುವಕ ಚೈತನ್ಯಕ್ಕೆ ಮಾರ್ಗದರ್ಶನವಾಗಿರುವಂತೆ ಭುವನೇಶ್ವರಿಯ ಕೃಪೆ ದೊರಕಲೆಂದು ಕನ್ನಡ ನುಡಿಯು ಹಾರೈಸುತ್ತದೆ.

## ರಾಜ್ಯ ಸಾಹಿತ್ಯ ಅಕಾದಮಿಯ ಪ್ರಶಸ್ತಿ

ಮೈಸೂರು ರಾಜ್ಯದ ಸಾಹಿತ್ಯ ಅಕಾದಮಿಯು ಈ ಸಲ ಕೆಲವು ಕನ್ನಡ ವಿದ್ವಾಂಸರನ್ನೂ ಲೇಖಕರನ್ನೂ ಆರಿಸಿ ತನ್ನ ಪ್ರಶಸ್ತಿಯನ್ನು ಕೊಟ್ಟಿದೆ.

ಶ್ರೀಯುತರಾದ ಸಾಲಿ ರಾಮಚಂದ್ರರಾವ್, ಡಿ. ಕೆ. ಭೀಮಸೇನರಾವ್, ಅ. ನ. ಕೃಷ್ಣರಾವ್, ಜಿ. ಪಿ. ರಾಜರತ್ನಂ, ಬಸವರಾಜ ಕಟ್ಟೀಮನಿ, ಶ್ರೀಮತಿ ಜಯದೇವಿ ತಾಯಿ ಲಿಗಾಡೆ

ಈ ಮಹನೀಯರೂ ಮತ್ತು ಶ್ರೀಮತಿ ಲಿಗಾಡೆಯವರೂ ಕನ್ನಡದ ಕೀರ್ತಿಕಲಶಗಳಾಗಿ ಬೆಳಗುತ್ತಿದ್ದಾರೆ. ಇಂಥವರನ್ನು ಆರಿಸಿ ಗೌರವಿಸುವುದು ನಾಡಿನ ಹಿತಕ್ಕೆ ಅಗತ್ಯ.

ಈ ಎಲ್ಲ ಲೇಖಕರೂ ಬಹುಕಾಲ ನಮ್ಮ ನಡುವೆ ಬೆಳಗುತ್ತಿದ್ದು ಕನ್ನಡದ ಸೇವೆಯನ್ನು ಮುಂದುವರಿಸಲೆಂದು 'ನುಡಿ' ಹಾರೈಸಿ ಅಭಿನಂದಿಸುತ್ತದೆ.

# ಪರಿಷತ್ತಿನ ಸುದ್ದಿಗಳು

## ಪರಿಷತ್ತಿನ ಚುನಾವಣೆಗಳು

ದಿನಾಂಕ ೧೨-೧-೧೯೬೯ರಂದು ಸೇರಿದ್ದ ಕಾರ್ಯಸಮಿತಿ ನಡವಳಿಕೆಯ ೭ನೆಯ ನಿರ್ಣಯದಿಂದ ಉದ್ಧರಿಸಿದ್ದು :

"(೧) ದಿನಾಂಕ ೮-೨-೧೯೬೯ನೆಯ ದಿನ ರಾತ್ರಿ ಏಳು ಗಂಟೆಯವರೆಗೆ ಸದಸ್ಯಚಂದಾವನ್ನು ಸಲ್ಲಿಸುವ ಹೊಸ ಸದಸ್ಯರಿಗೆ ಮುಂದಿನ ಚುನಾವಣೆಗಳಲ್ಲಿ ಭಾಗವಹಿಸುವ ಅವಕಾಶವಿರತಕ್ಕದ್ದೆಂದು ತೀರ್ಮಾನಿಸಲಾಯಿತು.

(೨) ಪರಿಷತ್ತಿನ ನಿಬಂಧನೆ ೭(೩)ರ ಪ್ರಕಾರ ಹಳೆಯ ವಾರ್ಷಿಕ ಸಾಮಾನ್ಯ ಸದಸ್ಯರಿಗೆ ೩೧-೩-೧೯೬೯ರ ವರೆಗೆ ವಾರ್ಷಿಕ ಚಂದಾವನ್ನು ಕೊಟ್ಟು ಸದಸ್ಯತ್ವವನ್ನು ಮುಂದು ವರೆಸಿಕೊಳ್ಳಲು ಅವಕಾಶವಿರುವುದರಿಂದ ಚುನಾವಣಾರ್ಹ ರಾದ ಸದಸ್ಯರ ಪಟ್ಟಿಯನ್ನು ಆ ವರೆಗೆ ತಯಾರುಮಾಡಲು ಸಾಧ್ಯವಾಗುವುದಿಲ್ಲವೆಂಬುದನ್ನೂ ಅಲ್ಲಿಂದ ಮುಂದೆ ಚುನಾವಣೆಗೆ ಸಂಬಂಧವಾದ ಕಾರ್ಯಕ್ರಮುಗಳಿಗೆ ಉಪ ನಿಬಂಧನೆಗಳಲ್ಲಿ ಗೊತ್ತಾಗಿರುವಂತೆ ಸುಮಾರು ೭೫ ದಿವಸ ಗಳು ಬೇಕಾಗಿರುವುದೆಂಬುದನ್ನೂ, ಉಪನಿಬಂಧನೆಗಳಂತೆ ಚುನಾವಣೆಯ ಕಾರ್ಯಕ್ರಮುಗಳಿಗೆ ಅವಕಾಶ ಕೊಟ್ಟರೆ ಚುನಾವಣೆ ಬಹಳ ಮುಂದೆ ಹೋಗಬೇಕಾಗುವುದೆಂಬು ದನ್ನೂ ಚರ್ಚಿಮಾಡಿ, ಸಕಲ ಸದಸ್ಯರ ಸಭೆಯ ಆದೇಶದಂತೆ ಏಪ್ರಿಲ್ ತಿಂಗಳಿನೊಳಗಾಗಿ ಚುನಾವಣೆ ನಡೆಯುವುದು ನಿಬಂಧನೆಗಳ ಅಡಚಣೆಯಿಂದ ಸಾಧ್ಯವಾಗದೆ ಇದ್ದರೆ ಆ ದಿನಕ್ಕೆ ಅತ್ಯಂತ ಸಮೀಪವಾದ ತಾರೀಖಿನಲ್ಲಿ ಚುನಾವಣೆ ಗಳನ್ನು ನಡೆಸಬೇಕೆಂದು ಒಪ್ಪಲಾಯಿತು. ಇದು ಸಾಧ್ಯ ವಾಗಬೇಕಾದರೆ ಉಪನಿಬಂಧನೆ ೨ನ್ನು ಬದಲಾಯಿಸಿ ಕೊಳ್ಳಬೇಕಾದುದು ಆವಶ್ಯಕವಾದ್ದರಿಂದ ಕಾರ್ಯ ಸಮಿತಿಗೆ ನಿಬಂಧನೆ ೧೯(೧)ರ ಪ್ರಕಾರ ದೊರೆಯುವ ಅಧಿಕಾರದಂತೆ ಈ ಉಪನಿಬಂಧನೆ ೨ ಪೂರ್ತ ಉಪನಿಬಂಧನೆ ಗಳ ಪಟ್ಟಿಯಿಂದ ತೆಗೆದುಹಾಕಿ ಚುನಾವಣೆಯನ್ನು ದಿನಾಂಕ ೧೧-೫-೧೯೬೯ರಲ್ಲಿ ನಡಸಲು ಅನುಕೂಲಿಸುವಂತೆ ಚುನಾ ವಣೆಯ ವೇಳಾಪಟ್ಟಿಯನ್ನು ರಚಿಸುವಂತೆ ಚುನಾವಣಾಧಿ ಕಾರಿಗಳನ್ನು ಪ್ರಾರ್ಥಿಸತಕ್ಕದ್ದೆಂದು ಗೊತ್ತುಮಾಡ ಲಾಯಿತು. ಅಲ್ಲದೆ ಈ ನಿಬಂಧನೆಯನ್ನು ತೆಗೆದುಹಾಕಿರುವ ವಿಚಾರವನ್ನು ಮುಂದಿನ ಕನ್ನಡ ನುಡಿಯಲ್ಲಿ ಪ್ರಕಟಿಸ ಬೇಕೆಂದೂ ತೀರ್ಮಾನಿಸಲಾಯಿತು."

## ಚುನಾವಣಾಧಿಕಾರಿ

ಶ್ರೀ ಜಿ. ವಿದ್ಯಾರಾಜ್, ಬಿ.ಎ.,ಬಿ.ಎಲ್., ಅಡ್ವೋ ಕೇಟರು, ೫೯೧, ವಿಶ್ವೇಶ್ವರಪುರ, ಬೆಂಗಳೂರು-೪ - ಇವರು ಈ ಸಲದ ಪರಿಷತ್ತಿನ ಚುನಾವಣೆಗಳಿಗೆ ಚುನಾವಣಾಧಿಕಾರಿ ಗಳಾಗಿದ್ದಾರೆ ಮತ್ತು ಅವರು ಈ ಕೆಳಗಿನ ಚುನಾವಣಾ ವೇಳಾಪಟ್ಟಿಯನ್ನು ಗೊತ್ತುಮಾಡಿರುತ್ತಾರೆ. ಇದನ್ನು ಸದಸ್ಯರ ಮತ್ತು ಸದಸ್ಯಸಂಸ್ಥೆಗಳ ಅವಗಾಹನೆಗೆ ತರಲಾಗಿದೆ :

### ಅಧ್ಯಕ್ಷರ ಚುನಾವಣಾ ಕಾರ್ಯಕ್ರಮು

| | | ದಿನಾಂಕ |
|---|---|---|
| ೧. | ಸದಸ್ಯರಾಗಲು ಕಡೆಯ ದಿನ .... | ೮-೨-೧೯೬೯ (ರಾತ್ರಿ ೭ ಗಂಟೆಯ ವರೆಗೆ) |
| ೨. | ಸದಸ್ಯರ ಪಟ್ಟಿ ಪ್ರಕಟನೆ ಪರಿಷತ್ತಿನ ಕಚೇರಿಯಲ್ಲಿ .... | ೧-೪-೧೯೬೯ |
| ೩. | ಸದಸ್ಯರ ಪಟ್ಟಿಯ ಬಗ್ಗೆ ಆಕ್ಷೇಪಣೆ ಗಳಿಗೆ ಕಡೆಯದಿನ .... | ೪-೪-೧೯೬೯ |
| ೪. | ಚುನಾವಣೆ ಮಾಡಲು ಅರ್ಹರಾದ ಸದಸ್ಯರ ಪಟ್ಟಿಯ ಪ್ರಕಟನೆ— ಪರಿಷತ್ತಿನ ಕಚೇರಿಯಲ್ಲಿ .... | ೫-೪-೧೯೬೯ |
| ೫. | ನಾಮಪತ್ರದ ಸ್ವೀಕಾರದ ಕಡೆಯ ದಿನ .... .... | ೧೨-೪-೧೯೬೯ |
| ೬. | ನಾಮಪತ್ರಗಳ ಪರಿಶೀಲನೆ— ಪರಿಷತ್ತಿನ ಕಚೇರಿಯಲ್ಲಿ .... | ೧೫-೪-೧೯೬೯ (ಬೆಳಗ್ಗೆ ೧೧ ಗಂಟೆ) |
| ೭. | ನಾಮಪತ್ರಗಳನ್ನು ಹಿಂತೆಗೆದು ಕೊಳ್ಳಲು ಕಡೆಯದಿನ .... | ೧೮-೪-೧೯೬೯ (ಸಂಜೆ ೬ ಗಂಟೆಯ ವರೆಗೆ) |
| ೮. | ಉಳಿದ ಸ್ಪರ್ಧಿಗಳ ಹೆಸರುಗಳ ಪ್ರಕಟನೆ—ಪರಿಷತ್ತಿನ ಕಚೇರಿ ಯಲ್ಲಿ .... .... | ೧೮-೪-೧೯೬೯ (ರಾತ್ರಿ ೭-೩೦ ಗಂಟೆಗೆ) |
| ೯. | ಮತಪತ್ರಗಳು ಅಂಚೆಯ ಮೂಲಕ ಪರಿಷತ್ತಿನ ಕಚೇರಿಗೆ ತಲಪಬೇಕಾದ ಕಡೆಯದಿನ .... .... | ೧೦-೫-೧೯೬೯ |
| ೧೦. | ಚುನಾವಣಾ ಫಲಿತಾಂಶ ಪ್ರಕಟನೆ | ೧೧-೫-೧೯೬೯ |

(ರುಜು) **ಜಿ. ವಿದ್ಯಾರಾಜ್**
ಚುನಾವಣಾಧಿಕಾರಿ

*Statement about ownership and other particulars about*

**KANNADA NUDI (Kannada)**

FORM IV

| | | | |
|---|---|---|---|
| 1. | *Place of Publication* | ... | BANGALORE |
| 2. | *Periodicity of its Publication* | ... | MONTHLY |
| 3. | *Printer's Name* | ... | B. M. SRIKANTIA PRESS (Kannada Sahitya Parishat) |
| | *Nationality* | ... | INSTITUTION |
| | *Address* | ... | Kannada Sahitya Parishat, Pampa Mahakavi Road, Chamarajpet, Bangalore-18 |
| 4. | *Publisher's Name* | ... | KANNADA SAHITYA PARISHAT |
| | *Nationality* | ... | REGISTERED PUBLIC CULTURAL INSTITUTION |
| | *Address* | ... | Pampa Mahakavi Road, Chamarajpet, Bangalore-18 |
| 5. | *Editors' Name* | ... | (1) G. VENKATASUBBIAH<br>(2) SRINIVASA RAO KORATI<br>(3) R. RACHAPPA |
| | *Nationality* | ... | INDIAN |
| | *Address* | ... | (1) 58, 31st Cross, VII Block, Jayanagar, Bangalore-11<br>(2) 22/12, 'Anandanilaya', Chamarajpet West, Bangalore-18<br>(3) Hosalli Extension, Magadi Road, Bangalore-23 |
| 6. | *Registration No.* | ... | R.N. 13252/57 |
| 7. | *Name and Address of individuals who own the newspapers and partners or shareholders holding more than one per-cent of the total capital.* | | KANNADA SAHITYA PARISHAT, BANGALORE |

I, G. Venkatasubbiah, hereby declare that the particulars given above are true to the best of my knowledge and belief.

1st March 1969
Bangalore

G. VENKATASUBBIAH
*President, Kannada Sahitya Parishat*

Reg. No. B. G. 4—March 1969

Licensed to Post without pre-payment, Licence No. 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಬೆಂಗಳೂರು-೧೮

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ. ಪೈ. |
|---|---|---|
| ೧. | ಕನ್ನಡದ ಬಾವುಟ | ೩—೦೦ |
| ೨. | ಜೇಮ್ಸ್ ಏಬ್ರಹಾಮ್ ಗಾರ್‌ಫೀಲ್ಡನ ಚರಿತ್ರೆ: ಕ್ಯಾಲಿಕೊ ಪ್ರತಿ | ೧—೫೦ |
| | ನಾಲ್ಕನೆಯ ಮುದ್ರಣ: ಸಾದಾ ಪ್ರತಿ | ೧—೨೦ |
| ೩. | ಜ್ಯೋತಿರ್ವಿನೋದಿನಿ | ೨—೦೦ |
| ೪. | ಕನ್ನಡ ನಾಡಿನ ಚರಿತ್ರೆ: ಭಾಗ ೧ | ೨—೦೦ |
| | ಭಾಗ ೨ | ೨—೭೫ |
| | ಭಾಗ ೩ | ೧—೫೦ |
| ೫. | ಹರಿದಾಸ ಸಾಹಿತ್ಯ: ಇಂಗ್ಲಿಷ್ ಉಪೋದ್ಘಾತದೊಡನೆ | ೧೦—೦೦ |
| | ,, ಉಪೋದ್ಘಾತವಿಲ್ಲದ ಪ್ರತಿ | ೮—೦೦ |
| ೬. | ಗಾಳಿಯಲ್ಲಿನ ಅಗೋಚರ ಶತ್ರುಗಳು | ೧—೨೫ |
| ೭. | ನಕ್ಷತ್ರ ದರ್ಶನ | ೧—೫೦ |
| ೮. | ಹರಿದಾಸ ಕೃತಿಮಂಜರಿ | ೧—೨೫ |
| ೯. | ಪ್ಲೇಟೋವಿನ ಆದರ್ಶ ರಾಜ್ಯ | ೧—೩೮ |
| ೧೦. | ಚೇರಮ ಕಾವ್ಯಂ | ೨—೦೦ |
| ೧೧. | ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು: ಮೂರನೆಯ ಸಂಪುಟ | ೪—೦೦ |
| ೧೨. | ಕಾದಂಬರಿ ಸಾಮಾನ್ಯ ಮನುಷ್ಯ | ೧—೦೦ |
| ೧೩. | ಉದ್ಭಟದೇವ ಚರಿತೆ | ೧—೫೦ |
| ೧೪. | ತ್ರಿಪುರದಹನ ಸಾಂಗತ್ಯ | ೦—೭೫ |
| ೧೫. | ಗಮಕ ಪ್ರವೇಶದಾಯಿನಿ | ೧—೫೦ |
| ೧೬. | ಗಮಕ ಪ್ರಚಾರ ಬೋಧಿನಿ | ೦—೭೫ |
| ೧೭. | ಕಾಳಿದಾಸನ ದೃಷ್ಟಿ-ಸೃಷ್ಟಿ | ೨—೦೦ |
| ೧೮. | ಹೂಮಾಲೆ | ೦—೬೩ |
| ೧೯. | ಆಧುನಿಕ ಗದ್ಯ ಸಾಹಿತ್ಯ: ಭಾಗ ೧ | ೩—೦೦ |
| | ಭಾಗ ೨ | ೩—೦೦ |
| ೨೦. | ಸರ್ವೋದಯ | ೦—೩೨ |
| ೨೧. | ಅರುಂಧತಿ | ೦—೨೫ |
| ೨೨. | ಕಾವ್ಯಸೌರಭ | ೨—೦೦ |
| ೨೩. | ವಿಕ್ರಮಾರ್ಜುನ ವಿಜಯ | ೧—೦೦ |
| ೨೪. | ವಾಚನ ಕಾವ್ಯಮಂಜರಿ | ೦—೧೯ |
| ೨೫. | ಕರ್ಣ ಕರ್ಣಾಮೃತ | ೨—೫೦ |

೫ ರೂ.ಗಳಿಗೆ ಕಡಿಮೆಯಿಲ್ಲದೆ ಕೊಳ್ಳುವ ಪುಸ್ತಕ ವ್ಯಾಪಾರಿಗಳಿಗೆ ಶೇ. ೨೫ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು. ಪಠ್ಯಪುಸ್ತಕಗಳಿಗೆ ಶೇ. ೧೫ ಮಾತ್ರ

# ಕನ್ನಡ ನುಡಿ

'ಕನ್ನಡ ನುಡಿ' ಕರ್ನಾಟಕದ ಗೆಜೆಟಿಯರ್ ಆಗಬೇಕು

—ಬಿ.ಎಂ.ಶ್ರೀ



ಸಂಚಿಕೆ : ೪–೫ ಸಂಪುಟ : ೩೨

ಏಪ್ರಿಲ್-ಮೇ ೧೯೬೯

•

ಈ ಸಂಚಿಕೆಯಲ್ಲಿ . . .



## ಶೋಧನೆ

•

ಓ ! ನನ್ನ ದೇವಾ !
ನಾನೆಲ್ಲೊ ಹುಡುಕಿರಲು ನೀನೆಲ್ಲೊ ಅಡಗಿದ್ದೆ
ನಾ ನಿನ್ನ ಕರೆದಿರಲು ನೀ ಸುಮ್ಮನಾಗಿದ್ದೆ
ಮೆರೆವ ದೇಗುಲದಲ್ಲಿ ನಾ ನಿನ್ನ ಪೂಜಿಸಿದೆ
ಮುರುಕು ಗುಡಿಸಿಲಿನಲ್ಲಿ ನೀ ಹೋಗಿ ನಿಂತಿದ್ದೆ
ಲಕ್ಷ ದೀಪವ ಬೆಳಗಿ ನಿನ್ನ ನಾನರಸುತಿರೆ
ಭಿಕ್ಷುಕರ ಭುಜವಿಡಿದು ನೀ ಸಾಗಿ ಹೋಗಿದ್ದೆ
ಬಣ್ಣ ಬಣ್ಣದ ಹೂವ ಹೆಣೆದು ನಾ ತಂದಿರಲು
ಸಣ್ಣವರ ತುಟಿಯಲ್ಲಿ ಅರಳಿ ನೀ ನಗುತಿದ್ದೆ
ಸಂಗೀತ ನರ್ತನದಿ ರಮಿಸಲಾನಾಶಿಸಲು
ಅಂಗವಿಕಲರ ಸಂಗ ಲೇಸೆಂದು ನೀ ಬಗೆದೆ
ಯೋಗ ತಪದಿಂ ನಿನ್ನ ಪಡೆದೆ ತೀರುವೆನೆಂದೆ
ರೋಗಿ ಮಂಚದ ಮೇಲೆ ಕದಲದೇ ನೀ ನಿಂದೆ
ದೆಸೆದೆಸೆಗೆ ದಿಕ್ಕಿಟ್ಟು ಧಾವಿಸಿದೆ ನಿನಗಾಗಿ
ಬಿಸಿಲು ಕುದುರೆಯು ಕಂಡ ಪಯಣಿಗನು ನಾನಾಗಿ
ಅಂತರಾತ್ಮಾ !
ಎಳನೀರು ನೀರಡಿಸಿ ಹೊಳೆಗುರುಳುವಾ ತೆರದಿ
ಒಳಗಿರುವ ನಿನ್ನಿರುವ ತಿಳಿಯದಲೆ ಮರುಳಾದೆ

•

ಶಾರದಾ

# ಸೂರ್ಯೋದಯದ ಕವಿತೆ

(ಯೆಂಜೆಲಿನೋ ಸಿಕಿಲಿಯಾನೋಸರ ಕವಿತೆಯ ಭಾವಾನುವಾದ)

●

೧

ನಡೆ ಮುಂದೆ ನಡೆ ಮುಂದೆ ನುಗ್ಗಿ ನಡೆ ಮುಂದೆ
ಸೂರ್ಯನನ್ನರಳಿಸಲು ಗ್ರೀಸದೇಶದಂತರಿಕ್ಷದಲ್ಲಿ
ನಡೆ ಮುಂದೆ ನಡೆ ಮುಂದೆ ನುಗ್ಗಿ ನಡೆ ಮುಂದೆ
ಸೂರ್ಯನನ್ನರಳಿಸಲು ಈ ಸಂಸಾರದ ಭವ್ಯಕ್ಷಿತಿಜದಲ್ಲಿ
ನೋಡಿ ನಡೆ ನೋಡಿ ನಡೆ ನುಗ್ಗುತ್ತ ನಡೆದು
ಅವನ ಗಾಲಿಯ ಹಲ್ಲು—
ಕುಸಿದು ಸಿಕ್ಕಿಹವು ಕಳ್ಳುಸುಕಿನಲ್ಲೆ
ನೋಡಿ ನಡೆ ನೋಡಿ ನಡೆ ನುಗ್ಗುತ್ತ ನಡೆದು
ಅವನ ತೇರಿನ ಈಸು—
ಕುಸಿದು ನೆಲದ ತಕ ಕಂಡಿಹುದು ರಕ್ತದ ಕೆಸರಿನಲ್ಲೆ

೨

ಅಲ್ಲಲ್ಲಿ ಸುತ್ತುತ್ತಿರುವ ಗೆಳೆಯರೆಲ್ಲ ಓಡುತ್ತ ಬನ್ನಿ
ಕೂಡಿ ಕಾಡೊಳು ಸಿಕ್ಕ ರವಿಯನ್ನೆತ್ತಲು
ತೇರನೆಬ್ಬಿಸಿ ನಡೆಸಲು,
ಬನ್ನಿ! ಚಿಣ್ಣರೆಲ್ಲ ಬನ್ನಿ!!
ಕುಸಿದ ಸೂರ್ಯನು ಎದ್ದು ಅರಳಲು ತನ್ನೊಬ್ಬನಿಂದಲೆ ಸಾಧ್ಯವೆ?
ಜಗದ ಕಣ್ಣಿಗೆ, ಕಣ್ಣ ಬೆಳಕಿಗೆ,
ಅಖಿಲ ಸೇವೆಯು ಸಲ್ಲದಿರುವುದು ಉಚಿತವೆ?
ಅಂತೆಯೆ—
ಎಲ್ಲರೊಂದೇ ಶಕ್ತಿಯಾಗುತ
ಮೊಣಕಾಲೂರಿ ಬೆನ್ನನು ಚಾಚಿ
ರಕ್ತದ ಕೆಸರಲಿ ಸಿಕ್ಕಿಹ ಸೂರ್ಯನ ಹರುಷದಿ ಎತ್ತುತ
ಹೊತ್ತನರಳಿಸಲು ಬನ್ನಿ!
ನಸುನಗುತ ತಲೆಯೆತ್ತಿ ಮತ್ತೆ ತಾನು—
ಆತ್ಮನಂತೆ ಹೊತ್ತರಳಿ ಹೂವಾಗಬೇಕಲ್ಲ
ಕಲ್ಲರಳಿ ಹೂವಾದಂತೆ
ಈ ಜಗದ ಸಂತೆಗೆ;
ಅದಕ್ಕಾಗಿ,
ನಾವೆಲ್ಲ ಸೇರಿ ಹತ್ತು ಕೈಗಳ ಚಾಚಿ
ಒಂದೊಂದೇ ಅಡಿ
ಕುಸಿದವನನ್ನು ಬಾಚಿ ಮೇಲಕ್ಕೆತ್ತೋಣ ಬನ್ನಿ!

●

ವಸಂತ ಕುಷ್ಟಗಿ

# ಸಾಹಿತ್ಯಸ್ಮೃತಿಚಿತ್ರಗಳು

(' ಭಾವ ' ಗ್ರಂಥದಿಂದ)

## ಮಾಸ್ತಿ ವೆಂಕಟೇಶ ಐಯ್ಯಂಗಾರ್

### ನನ್ನ ಮೊದಲ ಪುಸ್ತಕ

ನಾನು ಚಿಕ್ಕಮಗಳೂರಿನಲ್ಲಿದ್ದಾಗ ನನ್ನ ಮೊದಲ ಪುಸ್ತಕ "ಕೆಲವು ಸಣ್ಣ ಕತೆಗಳು" ಪ್ರಕಟವಾಯಿತು. ಅದನ್ನು ಪ್ರಕಟಿಸಿದ ಶ್ರೀ ಎಂ. ಸುಬ್ಬರಾವ್ ಅದರ ಕೆಲವು ಪ್ರತಿಗಳನ್ನು ನನಗೆ ಕಳುಹಿಸಿದರು. ಪತ್ರಿಕೆಗಳಲ್ಲಿ ಅವಲೋಕನಕ್ಕೆ ಪ್ರತಿಗಳು ಹೋದವು. ಈ ಪುಸ್ತಕವನ್ನು ಕುರಿತು ತುಂಬ ಮೆಚ್ಚಿಗೆಯ ಒಂದು ಅವಲೋಕನವನ್ನು ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರು ತಾವೇ ಬರೆದು ತಾವು ಸಂಪಾದಿಸುತ್ತಿದ್ದ ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಿಸಿದರು. ಆ ಸುಮಾರಿನಲ್ಲಿ ಶ್ರೀ ನವರತ್ನ ರಾಮ್‌ರಾವ್ ರೇಷ್ಮೆ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದವರು ನಮ್ಮ ಜಿಲ್ಲೆಯಲ್ಲಿ ಇನ್‌ಸ್ಪೆಕ್ಷನ್‌ಗಾಗಿ ಬಂದರು. ನಾನೂ ಅವರೂ ಕಡೂರಿನಲ್ಲಿ ಸಂಧಿಸಿದೆವು. ಚಿಕ್ಕಮಗಳೂರಿಗೆ ಜೊತೆಯಾಗಿ ಪ್ರಯಾಣ ಮಾಡಿದೆವು. ದಾರಿಯಲ್ಲಿ ಸಕ್ಕರೆ ಪಟ್ಟಣದ ಟ್ರ್ಯಾವಲರ್ಸ್ ಬಂಗಲೆಯಲ್ಲಿ ಊಟಕ್ಕೆ ಏರ್ಪಾಡಾಗಿತ್ತು. ಊಟ ಆದ ಮೇಲೆ ಈ ಮಾತು ಆ ಮಾತು ಆಡುತ್ತಾ ನಾವು ನಮ್ಮ ಸಾಹಿತ್ಯದ ಸದ್ಯದ ಸ್ಥಿತಿಯನ್ನು ಕುರಿತು ವ್ಯಥೆಪಟ್ಟೆವು. ಈ ಸಂದರ್ಭದಲ್ಲಿ ನಾನು ನನ್ನ ಪರಿಚಯದ ಒಬ್ಬ ಲೇಖಕರು ಬರೆದ ಕತೆಗಳ ಪುಸ್ತಕ ಎಂದು ನನ್ನ ಪುಸ್ತಕದ ಒಂದು ಪ್ರತಿಯನ್ನು ಅವರಿಗೆ ಕೊಟ್ಟೆನು. (ರಾಯರು ' ಇಂದಿರೆಯೋ ಅಲ್ಲವೋ ' ಎಂಬ ಕತೆಯನ್ನು ಓದಿ ಉದ್ವಿಗ್ನರಾದ ವಿಷಯವನ್ನು ನಾನು ವರ್ಣಿಸಿದ್ದೇನೆ.) ಆ ದಿನ, ಮಾರನೆಯ ದಿನ, ಆ ಪುಸ್ತಕವನ್ನು ಓದಿ ಅವರು ಅದರ ಲೇಖಕ ನಾನೇ ಇರಬೇಕೆಂದು ನಿಶ್ಚಯಿಸಿಕೊಂಡರು. ಹೀಗೆ ನನಗೆ ತಿಳಿಸಿದರು. ನಾನು ಹೌದು ಎಂದೆನು. ಅವರು ಪುಸ್ತಕವನ್ನು ತುಂಬಾ ಮೆಚ್ಚಿಕೊಂಡರು.

### ಬಿನ್ನಹ

ಚಿಕ್ಕಮಗಳೂರಿನಿಂದ ಬಂದ ಮೇಲೆ ಕೆಲವು ದಿನದಲ್ಲಿ ನನಗೆ ನಾನು ಯೋಚಿಸದೇ ತಾನೇ ತಾನಾಗಿ ನಮ್ಮ ದೇವರ ನಾಮಗಳ ರೀತಿಯ ಹಾಡುಗಳನ್ನು ಬರೆಯಬೇಕೆಂದು ತೋರಿತು. ಹೀಗೆ ಬರೆಯುವ ಹಾಡುಗಳಲ್ಲಿ ಭಕ್ತಿಯನ್ನು ಪ್ರಕಟಿಸಬೇಕು ಎನ್ನುವುದಲ್ಲ, ನನ್ನ ಅನುಭವದ ಭಾವಗಳನ್ನು ಪ್ರಕಟಿಸುವುದು ಉದ್ದೇಶ. ಆಗ ನನ್ನ ಮನಸ್ಸಿನಲ್ಲಿ ಪ್ರಬಲವಾಗಿದ್ದ ಭಾವ ನನಗೆ ಚೆನ್ನಕೇಶವನ ಮೂರ್ತಿಯನ್ನು ಕಂಡ ಹೊತ್ತಿನ ಅನುಭವದಿಂದ ಹುಟ್ಟಿದ್ದು. ಅದಕ್ಕೆ ರೂಪುಗೊಟ್ಟು ನಾನು ನನ್ನ ಮೊದಲ ಹಾಡು "ಅರಸುವುದು ಜಗವು ನಿನ್ನನು ಶ್ರೀನಿವಾಸ" ಎಂಬುದನ್ನು ರಚಿಸಿದೆನು.

ರಚನೆ ಚೆನ್ನಾಗಿದೆ ಎಂದು ನನಗೆ ತೋರಿತು. ಮಾರನೆಯ ದಿನ ಇನ್ನೊಂದು ಹಾಡು ರೂಪುಗೊಂಡಿತು. ನಾನು ಇವನ್ನು ವೆಂಕಟರಂಗನ್, ಕೃಷ್ಣರಾವ್ ಇವರಿಗೆ ಕಳುಹಿಸಿದೆನು. "ಹೇಗಿವೆ ಹೇಳಿ?" ಎಂದು ಕೇಳಿದೆನು. ರಚನೆ ಚೆನ್ನಾಗಿದೆ ಎಂದು ಅವರು ತಿಳಿಸಿದರು. ಆ ವೇಳೆಗೆ ಅನುಭವದ ಇತರ ವಿಷಯಗಳನ್ನು ರೂಪಿಸಿ ನಾನು ಇನ್ನು ಕೆಲವು ಗೀತೆಗಳನ್ನು ರಚಿಸಿದ್ದೆನು. ಅದನ್ನು ನನಗೆ ನಾನೇ ಹಾಡಿಕೊಂಡಿದ್ದೆನು. ರಚನೆಯಿಂದ, ಗಾಯನದಿಂದ, ಮನಸ್ಸಿಗೆ ಸಮಾಧಾನ ಬಂದಿತು, ಚೇತನ ಸುಖಗೊಂಡಿತು, ಎನ್ನುವುದನ್ನು ಕಂಡುಕೊಂಡೆನು.

ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಕೆಲಸಕ್ಕಾಗಿ ಹಾಗೆಯೇ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳ ಸಂದರ್ಭದಲ್ಲಿ, ನಾನು, ಶ್ರೀ ವೆಂಕಣ್ಣಯ್ಯ, ಆ ದಿವಸಗಳಲ್ಲಿ ಸಂಧಿಸುತ್ತಿದ್ದೆವು. ಹತ್ತು ಗೀತೆ ರಚನೆ ಆದಮೇಲೆ ನಾನು ಈ ಸಂಗತಿಯನ್ನು ವೆಂಕಣ್ಣಯ್ಯನವರಲ್ಲಿ ತಿಳಿಸಿದೆನು. ಅವರು ಒಂದು ದಿನ ಮನೆಗೆ ಬಂದು ನಾನು ಅವನ್ನು ಹಾಡಿದ್ದನ್ನು ಕೇಳಿದರು. ವೆಂಕಣ್ಣಯ್ಯನವರ ರುಚಿ ತುಂಬ ಹದವಾದದ್ದು. ಅವರ ವಿಮರ್ಶೆ ತೀರ ಉದಾತ್ತ, ಅಷ್ಟೇ ನಿಷ್ಕೃಷ್ಟ. ಮೇಲಾಗಿ ಅವರು ಸ್ವಭಾವತಃ ಸಹೃದಯರು. ಹತ್ತು ತೆರನ ಸ್ವಭಾವದ ಜನರೊಂದಿಗೆ ಸುಲಭವಾಗಿ ಸಮರಸದಿಂದ ವರ್ತಿಸಬಲ್ಲ ಸರಳ ಚೇತನ ಅವರದು. ಅವರು ಈ ಹಾಡುಗಳನ್ನು ತುಂಬಾ [illegible] ನಾನು ಹಾಡುವ ರೀತಿಯನ್ನು ಒಪ್ಪಿಕೊಂಡರು.

"ದೇವರ ಕೃಪೆ, ನಿಮ್ಮ ಕತೆಗಳು ಹೇಗೋ ಹಾಗೆ ಈ ರಚನೆಗಳು ಶ್ರೇಷ್ಠವಾಗಿದೆ. ಕೆಲಸ ನಡೆಯಲಿ" ಎಂದು ಅಕ್ಕರೆಯ ಮಾತನ್ನು ಆಡಿದರು.

ದಿನವೂ ಒಂದೊಂದು ಭಾವ ಆರಂಭವಾಗುವುದು, ತಾನೇ ಮೆಲ್ಲನೆ ಬೆಳೆಯುವುದು. ಹನುಮುಗಿರಿ, ರಾಯರಗಿರಿ, ಇವುಗಳ ಬಳಿಯ ಹೊಲ, ಬಯಲಿನ ಮೇಲೆ ನಡೆಯುತ್ತಿದ್ದಂತೆ ಮಾತು ಸೇರುವುವು, ಹಾಡಾಗುವುವು. ಕೆಲವು ದಿನ ತಕ್ಕಷ್ಟು ದೂರ ನಡೆದಾಗ ಎರಡು ಹಾಡು ಹೀಗೆ ರೂಪುಗೊಂಡದ್ದೂ ಉಂಟು. ಸುತ್ತಾಟ ಮುಗಿಸಿ ಮನೆಗೆ ಬಂದು ನಾನು ಬರೆದಿಡುತ್ತಿದ್ದೆನು. ದಿನ, ಎರಡು ದಿನಕ್ಕೆ ಒಮ್ಮೆ ಮನೆಗೆ ಬಂದು ವೆಂಕಣ್ಣಯ್ಯನವರು, "ಈಚೆಗೆ ಏನು ಬರೆದಿರಿ?" ಎನ್ನುವರು, ಹೊಸ ಹಾಡನ್ನು ಕೇಳುವರು, ತೃಪ್ತಿ ಸೂಚಿಸಿ ಹೊರಡುವರು. ಹೀಗೆ ಎರಡು ತಿಂಗಳ ಸುಮಾರಿನಲ್ಲಿ ಐವತ್ತು ಹಾಡು ರೂಪುಗೊಂಡವು.

ವೆಂಕಣ್ಣಯ್ಯನವರು ಇವುಗಳ ಸಂಗತಿಯನ್ನು ಗುಂಡಪ್ಪನವರಿಗೆ ಹೇಳಿದರು. ನಾನೂ ಅವರ ಬಳಿ ಹೋಗಿ ಇವುಗಳಲ್ಲಿ ಹಲವನ್ನು ಹಾಡಿದೆನು. ಅವರೂ ರಚನೆಯನ್ನು ಹಾಡುವ ಕ್ರಮವನ್ನು ಒಪ್ಪಿಕೊಂಡರು. ಸ್ವತಃ ಕವಿಯಾದ ಅವರಿಗೆ ತಾವೂ ಈ ರೀತಿಯಲ್ಲಿ ತಮ್ಮ ಭಾವಗಳಿಗೆ ರೂಪು ಕೊಡಬಹುದೆಂದು ಕಂಡಿತು. ಅವರು, "ವನಸುಮದೊಲೆನ್ನ ಜೀವನವು ವಿಕಸಿಸುವಂತೆ ಮನವನನುಗೊಳಿಸು ಗುರುವೆ" ಎಂಬ ತಮ್ಮ ಮೊದಲ ಹಾಡನ್ನು ಆಗ ರಚಿಸಿದರು. ವೆಂಕಣ್ಣಯ್ಯನವರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಆ ಸಲದ ವಾರ್ಷಿಕೋತ್ಸವದ ಕಾರ್ಯಕ್ರಮದಲ್ಲಿ ಅದನ್ನು ಪ್ರಾರ್ಥನೆಯ ಪದ್ಯವನ್ನಾಗಿ ಹಾಕಿಸಿ ಆಮೇಲೆ ನನ್ನ ಹಾಡು ಕೆಲವನ್ನು ಹಾಡಿಸಿದರು.

ಈ ಹಾಡುಗಳನ್ನು ಒಂದು ಪುಸ್ತಕವಾಗಿ ಪ್ರಕಟಿಸೋಣ ಎಂದು ನಾನು ಯೋಚಿಸಿದೆನು. ಕೆಲವು ಸಣ್ಣಕತೆಗಳ ಪುಸ್ತಕವನ್ನು ಪ್ರಕಟಿಸಿದ್ದ ನನ್ನ ಮಿತ್ರರು ಆ ವೇಳೆಗೆ ತೀರಿಕೊಂಡಿದ್ದರು. ಪ್ರಕಟಣೆಗೆ ಯಾರನ್ನು ಇದಕ್ಕೆ ಹುಡುಕುವುದು ಎಂದು ನನ್ನ ಪುಸ್ತಕವನ್ನು ನಾನೇ ಅಚ್ಚುಹಾಕಿಸಲು ನಿಶ್ಚಯಿಸಿದೆನು. "ಹಾಡುಗಳನ್ನು ಅಚ್ಚುಹಾಕಿಸುತ್ತೇನೆ. ನಿಮಗೆ ಅವು ಹೇಗೆ ಕಾಣುತ್ತಿವೆ ಎಂಬುದನ್ನು ಸೂಚಿಸಿ ನಾಲ್ಕು ಮಾತು ಬರೆದುಕೊಡಿ. ಅವನ್ನು ಪುಸ್ತಕದೊಂದಿಗೆ ಪ್ರಕಟಿಸುತ್ತೇನೆ" ಎಂದು ನಾನು (ವೆಂಕಣ್ಣಯ್ಯ) ಅವರನ್ನು ಬೇಡಿದೆನು. ಅವರು ಕೆಲವು ವಾಕ್ಯಗಳನ್ನು ಬರೆದುಕೊಟ್ಟರು. ಅವನ್ನು ಸೇರಿಸಿ ಪುಸ್ತಕವನ್ನು "ಬಿನ್ನಹ" ಎಂಬ ಹೆಸರಿನಿಂದ ಅಚ್ಚುಮಾಡಿಸಿದೆನು.

ಆ ದಿನಗಳಲ್ಲಿ ನನಗೆ ರಾಮಾಯಣದ ಋಷ್ಯಶೃಂಗದ ಪ್ರಸಂಗವನ್ನು, ಭಾರತದ ಸಾವಿತ್ರಿ ಉಪಾಖ್ಯಾನವನ್ನು ಕುರಿತು ಸಣ್ಣ ದೃಶ್ಯಗಳನ್ನು ಬರೆಯೋಣವೆನ್ನಿಸಿತು. ಪದ್ಯಗಳನ್ನು ಬೆಳಗಿನ ಸುತ್ತಾಟದ ಹೊತ್ತಿನಲ್ಲಿ ರಚಿಸಿ ಮನೆಗೆ ಬಂದು ಬರೆದಿಟ್ಟು, ಎಲ್ಲಾ ಪದ್ಯಗಳೂ ಸಿದ್ಧವಾದ ಮೇಲೆ ಆ ಸಲದ ಆ ಉಪಾಕರ್ಮದ ಜಪದ ಎರಡು ದಿನದ ರಜೆಯಲ್ಲಿ 'ಶಾಂತಾ' ನಾಟಕವನ್ನೂ, ಗೌರಿಗಣೇಶನ ಎರಡು ದಿನದ ರಜೆಯಲ್ಲಿ 'ಸಾವಿತ್ರಿ' ನಾಟಕವನ್ನೂ ಬರೆದೆನು.

## ಸುಬ್ಬಣ್ಣ

ಮಧುಗಿರಿಯಲ್ಲಿದ್ದ ದಿನಗಳಲ್ಲಿ ನಾನು ಒಮ್ಮೆ ಸರ್ಕಾರದ ಕೆಲಸಕ್ಕಾಗಿ ತುಮಕೂರಿಗೆ ಬಂದಿದ್ದಾಗ ಶ್ರೀ ನವರತ್ನ ರಾಮರಾವ್ ಅಲ್ಲಿಗೆ ತಮ್ಮ ಕೆಲಸಕ್ಕಾಗಿ ಬಂದಿದ್ದರು. ಅವರು ಕುಣಿಗಲಿಗೆ ಹೋಗುವವರಿದ್ದರು. ತುಮಕೂರಿನಲ್ಲಿ ಜೊತೆಗಿದ್ದ ಸ್ವಲ್ಪ ಹೊತ್ತು ಆ ಮಾತು, ಈ ಮಾತು ಆಡುತ್ತಾ ಅಲ್ಲಿಗೆ ತೃಪ್ತಿಯಾಗದೆ, ನಾನು ಒಂದು ದಿನ ರಜ ತೆಗೆದುಕೊಂಡು ಅವರೊಂದಿಗೆ ಕುಣಿಗಲಿಗೆ ಹೋಗಿ ಅವರು ಮುಂದಕ್ಕೆ ಹೋದ ಮೇಲೆ ಹಿಂದಿರುಗಲು ನಿಶ್ಚಯಿಸಿದೆನು. ರಾಮರಾಯರೊಂದಿಗೆ ಹತ್ತು ವರ್ಷದ ಹಿಂದೆ ಆರಂಭಿಸಿದ್ದ ಪರಿಚಯ ಈ ವೇಳೆಗೆ ತಕ್ಕಷ್ಟು ಗಾಢವಾದ ಸ್ನೇಹ ಆಗಿತ್ತು. ದಿನ ಬಂದಂತೆ ಈ ಸ್ನೇಹ ನನ್ನ ಜೀವನದ ಒಂದು ಮಹಾಭಾಗ್ಯ ಎನ್ನುವುದು ನನ್ನ ಮನಸ್ಸಿಗೆ ಮುಟ್ಟಿತು. ಈ ಭಾವ ಬೆಳೆಯುವುದಕ್ಕೆ ನಾನೂ ಅವರೂ ಜೊತೆಗಿದ್ದದ್ದು ಮುಖ್ಯ ಕಾರಣ ಆಯಿತು. ರಾಮರಾಯರ ಜೀವನ ಒಂದು ರೀತಿಯಲ್ಲಿ ಬೆಳೆದದ್ದು. ಅವರು ಅದರ ಕಹಿಸಿಹಿಯ ಅನೇಕ ವಿವರಗಳನ್ನು ಆ ದಿನ ತಮ್ಮದೇ ರೀತಿಯಲ್ಲಿ ನನಗೆ ಹೇಳಿದರು. ಅದಕ್ಕೆ ಮೊದಲೂ ಇಂಥ ಮಾತನ್ನು ನಾನು ಅವರಿಂದ ಕೇಳಿದ್ದೆನು. "ನನಗೆ ಹೇಳುವ ಇಂಥ ಮಾತನ್ನು ನೀವು ಬರೆಯುವುದಿಲ್ಲ ಏಕೆ?" ಎಂದು ನಾನು ಅವರನ್ನು ಆ ಹಿಂದೆ ಕೇಳಿದ್ದುಂಟು. ಅವರು ಸ್ವಂತ ಅನುಭವಗಳು, ಅವರು ಕಂಡಿದ್ದ ವಿಶಿಷ್ಟ ರೀತಿಯ ಜನರ ನಡೆನುಡಿಯ ಮಾತು, ಇವೆಲ್ಲ ಜನರಿಗೆ ತಿಳಿಯಬೇಕೆಂದು ನನ್ನ ಮನಸ್ಸಿಗೆ ನಿಶ್ಚಿತ. ಜೊತೆಗೆ ಇಂತಹ ಸಂಗತಿ ಇವರು ಹೇಳುವ ರೀತಿಯಲ್ಲಿ ಕಂಡಾಗ ಜನಕ್ಕೆ ರುಚಿಸುತ್ತದೆ ಎನ್ನುವುದು ನನಗೆ ನಿಶ್ಚಯ. ರುಚಿಸಿತೆಂದು ಓದಿದ ಇಂಥ ಸಂಗತಿ ಓದುವವರಿಗೆ ತಿಳಿಯದ ರೀತಿಯಲ್ಲಿ ಅವರ ಮೇಲೆ ಪರಿಣಾಮವನ್ನುಂಟುಮಾಡಿ ಅವರ ಜೀವನದ ನಿಲುವನ್ನು ಚೆನ್ನ ಮಾಡಲು ಸಹಾಯವಾಗುತ್ತದೆ ಎಂದು ನನ್ನ ನಂಬಿಕೆ. ಎಂದರೆ ಇವರ

ಬರಹ, ಇವರ ಮಾತು ಸಾಹಿತ್ಯ ಎಂದು ಹೇಳಿದಂತಾಯಿತಷ್ಟೆ. ಆ ಮುನ್ನ ನಾನು ಹೀಗೆಂದು ಅವರಿಗೆ ಅರಿಕೆ ಮಾಡಿದ ಮೇಲೆ ಅವರು ತಮ್ಮ ಪರಿಚಯದ ಒಬ್ಬ ಗಾಯಕ ಶಾಮಣ್ಣ ಎಂಬುವರ ವಿಚಾರವನ್ನು ಬರೆಯಲು ಆರಂಭಿಸಿದ್ದರು. ಆ ಕೆಲಸ ಮುಂದುವರಿಯಿತೆ ?" ಎಂದು ನಾನು ಅವರನ್ನು ಕೇಳಿದೆನು. "ಆರೇಳು ಪುಟ ಬರೆದಿದ್ದದ್ದು ಕಳೆದುಹೋಯಿತು. ನಾನು ಮತ್ತೆ ಅದನ್ನು ಬರೆಯಲಾರೆ" ಎಂದು ಅವರು ತಿಳಿಸಿದರು. "ಬಹು ಒಳ್ಳೆಯ ವಿಷಯ; ಅದು ಸಾಹಿತ್ಯ ಆಗಿರಬೇಕು; ನೀವು ಬರೆಯುವುದಿಲ್ಲ ಎಂದರೆ ಅದು ಕಳೆದೇ ಹೋಗುತ್ತದಲ್ಲಾ, ರಾಯರೇ," ಎಂದು ನಾನು ಹೇಳಿದೆನು. ಅವರು, "ನನ್ನಿಂದ ಆಗುವುದಿಲ್ಲ. ವಿಷಯ ವ್ಯರ್ಥವಾಗ ಬಾರದು ಎನ್ನುವುದಾದರೆ ನೀವು ಬರೆಯಿರಿ" ಎಂದರು. ಮುಂದಿನ ಕೆಲವು ಮಾತಿನಲ್ಲಿ ಇದು ದಿಟವಾಗಿಯೂ ಇವರ ಮನಸ್ಸು ಎನ್ನುವುದು ಸ್ಪಷ್ಟವಾಗಿ ನಾನು, "ಆ ವಸ್ತುವನ್ನು ನಾನು ಬಳಸುತ್ತೇನೆ" ಎಂದು ಹೇಳಿದೆನು. ಅವರು ಒಪ್ಪಿದರು.

ಅಂದಿನಿಂದ ನಾನು ಆ ಕಥೆಯನ್ನು ಮನಸ್ಸಿನಲ್ಲಿ ರೂಪಿಸಿಕೊಳ್ಳುತ್ತಾ ಬಂದಿದ್ದೆನು. ಬೆಂಗಳೂರಿಗೆ ಬಂದ ನಾಲ್ಕು ತಿಂಗಳಲ್ಲಿ ಒಂದು ದಿನ ಅದನ್ನು ಬರೆಯಲು ಮೊದಲು ಮಾಡಿದೆನು. ಆಗ ನನಗೆ ಮೈಯಲ್ಲಿ ಸ್ವಲ್ಪ ಅಸ್ವಸ್ಥ ಆಗಿತ್ತು. ಮನಸ್ಸಿಗೂ ಸ್ವಲ್ಪ ಬೇಸರ. ಇದನ್ನು ಕಳೆದುಕೊಳ್ಳಬೇಕು. ಈ ಕಥೆಯನ್ನು ಬರೆಯುವುದರಿಂದ ಮನಸ್ಸಿಗೆ ಸಮಾಧಾನ ಬಂದೀತು ಎಂದು ತೋರಿತು. ಆದರೆ ಮೈಯಲ್ಲಿ ಚೆನ್ನಾಗಿಲ್ಲದ್ದರಿಂದ ದಿನಕ್ಕೆ ಆರು ಪುಟ ಅಥವಾ ಎಂಟುಪುಟ ಮಾತ್ರ ಬರೆಯಬೇಕೆಂದುಕೊಂಡೆನು. ಬರೆಯಬೇಕು, ಇಲ್ಲ ಯಾರನ್ನಾದರೂ ಕೂರಿಸಿಕೊಂಡು ಹೇಳಿ ಬರೆಯಿಸಬೇಕು. ದಿನದಿನ ಕೊಂಚವೇ ಬರೆಯುವುದು ಸಾಧ್ಯವಾಗಲಿಲ್ಲ. ನಾಲ್ಕೈದು ದಿನದಲ್ಲಿ ಕಥೆ ಮೂರರಲ್ಲಿ ಒಂದು ಭಾಗದಷ್ಟು ಸಿದ್ಧವಾಯಿತು. ಕಥೆ ಆ ಘಟ್ಟಕ್ಕೆ ಬರುವ ವೇಳೆಗೆ ಬರೆಯುವುದರಲ್ಲಿ ಸಾವಧಾನ ಅಸಾಧ್ಯವಾಯಿತು. ದೇಹಕ್ಕೆ ಶ್ರಮವಾದರೂ ಕೆಲಸವನ್ನು ಮುಗಿಸದೆ ಮನಸ್ಸು ನಿಲ್ಲುವಂತಿರಲಿಲ್ಲ. ಆದ್ದರಿಂದ ಅಲ್ಲಿಂದ ಮುಂದೆ, ನಾನು ಕೆಲವು ಪುಟ ಬರೆಯುವುದು, ಮನೆ ಮಕ್ಕಳಿಂದ ಕೆಲವು ಪುಟ ಬರೆಸುವುದು, ಹೀಗೆ ಮಾಡಿ ಇನ್ನು ನಾಲ್ಕು ದಿನಗಳಲ್ಲಿ ಕಥೆಯನ್ನು ಮುಕ್ತಾಯಕ್ಕೆ ತಂದದ್ದಾಯಿತು.

ಸುಬ್ಬಣ್ಣನ ಕೊನೆಯ ದಿನಗಳ ಮನೋಧರ್ಮ ಒಂದು ಆದರ್ಶ ಮನೋಧರ್ಮ ಎಂದು ಆಗ ನನ್ನ ತಿಳಿವಳಿಕೆ. ರಾಮರಾಯರು ಗಾಯಕನ ಇಳಿ ವಯಸ್ಸಿನ ಸಂಗತಿ ಕೆಲವನ್ನು ಹೇಳಿದ್ದರು. ಆತ ಮನೆಯಲ್ಲಿ ಸರಿಹೋಗದೆ ದೇಶ ಬಿಟ್ಟುಹೋಗಿ ಮೂವತ್ತೈದು ವರ್ಷ ಕಲ್ಕತ್ತೆಯಲ್ಲಿ ಇದ್ದು ಹಿಂತಿರುಗಿದ್ದವನು ಎಂದಿದ್ದರು. ಈ ಭಾಗವನ್ನು ಸಾಧಿಸುವುದಕ್ಕೆ ನಾನು ನಾರಾಯಣ ಶಾಸ್ತ್ರಿಗಳ ಸಂಸಾರದ ಚಿತ್ರವನ್ನು ನಿರ್ಮಿಸಬೇಕಾಯಿತು. ಈ ಚಿತ್ರದಲ್ಲಿ ಬರುವ ಎಲ್ಲ ಜನ ಎಲ್ಲ ಸಂಗತಿ ಕಲ್ಪಿತ. ಊರಿಂದ ಹೊರಡುವಾಗ ಒಬ್ಬ ವೇಶ್ಯೆ ಒಂದು ನೂರು ರೂಪಾಯಿ ನೋಟನ್ನು ಕೊಟ್ಟಳು ಎಂಬ ವಿವರ ಹೊರತಾಗಿ ನೀಲಾಸಾನಿಯ ಚಿತ್ರವೂ ಕಲ್ಪಿತವೇ. ಅರಮನೆಯ ಮಾತೂ ಅಷ್ಟೆ. ಕಲ್ಕತ್ತೆಯ ಮೂವತ್ತೈದು ವರ್ಷಗಳ ಚರಿತ್ರೆಯೂ ಅಷ್ಟೆ. ಆದರೆ ಬರೆಯುವ ಮೊದಲೇ ಶ್ರುತ, ಕಲ್ಪಿತ, ಎರಡೂ ಒಂದನ್ನೊಂದು ತಿದ್ದಿ, ಸರಿಮಾಡಿ, ಹೊಂದಿಕೊಂಡು, ಸುಸಂಬದ್ಧವಾದ ಒಂದು ಇತಿಹಾಸ ಆಗಿದ್ದವು. ಮಣಿ ಮಣಿಯನ್ನು ಪೋಣಿಸಿ ಹಾರಮಾಡುವಂತೆ ಸಂಗತಿ-ಸಂಗತಿಯನ್ನು ಪೋಣಿಸಿ ಒಂದು ಕಥೆಯಾಗಿ ಸುಬ್ಬಣ್ಣನ ಚರಿತ್ರೆಯನ್ನು ಮುಗಿಸುವ ವೇಳೆಗೆ ನನ್ನ ಮನಸ್ಸಿಗೆ ತುಂಬ ಸಮಾಧಾನ ಬಂದಿತ್ತು. ಮೈ ಮತ್ತಷ್ಟು ದಣಿದಿತ್ತು. ಆದರೆ ಒಂದು ಕೆಲಸ ಮುಗಿದಿತ್ತು ಎಂಬ ಸಂತೋಷದಲ್ಲಿ ಅದರಿಂದ ತೊಂದರೆ ಆಗಲಿಲ್ಲ.

ಕಥೆ ಮುಗಿದಮೇಲೆ ಅದನ್ನು ಒಂದು ದಿನ ವೆಂಕಣ್ಣಯ್ಯನವರಿಗೆ ಓದಿ ಕೇಳಿಸಿದೆನು. ಅವರು ಅದನ್ನು ತುಂಬ ಮೆಚ್ಚಿಕೊಂಡರು. ಅದನ್ನು ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಿಸೋಣ ಎಂದರು. ನಾನು ಒಪ್ಪಿದೆನು.

ಕಥೆ ಬರೆದು ಮುಗಿದ ಎರಡು ತಿಂಗಳಲ್ಲಿ ಪ್ರತಿನಿಧಿ ಸಭೆಯ ಅಧಿವೇಶನಕ್ಕೆ ನಾವು ಮೈಸೂರಿಗೆ ಹೋಗಬೇಕಾಯಿತು. ನಮಗೆ ಹೈಸ್ಕೂಲು ಕಟ್ಟಡದಲ್ಲಿ ಬಿಡಾರ ಏರ್ಪಾಡಾಗಿತ್ತು. ಅಲ್ಲಿ ಒಂದು ಬೆಳಿಗ್ಗೆ ನನ್ನ ಕೋಣೆಯಲ್ಲಿ, "ಸುಬ್ಬಣ್ಣ"ದ ಕೈಬರಹದ ಪ್ರತಿಯನ್ನು ಮೇಜಿನ ಮೇಲೆ ಇಟ್ಟು ನಾನು ಕಛೇರಿ ಕೆಲಸವನ್ನು ಮಾಡುತ್ತಿದ್ದೇನೆ. ಚಿಕ್ಕಮಗಳೂರಿನ ನಮ್ಮ ಹಿರಿಯರು ಸಿ. ಶ್ರೀನಿವಾಸರಾವ್ ಪ್ರತಿನಿಧಿಯಾಗಿ ಸಭೆಗೆ ಬಂದಿದ್ದವರು ನನ್ನನ್ನು ನೋಡಲೆಂದು ದಯಮಾಡಿಸಿದರು. ನಾನು ಅವರನ್ನು ಬರಮಾಡಿಕೊಂಡು, ಮರ್ಯಾದೆ ತೋರಿ, ಕ್ಷೇಮಸಮಾಚಾರ ವಿಚಾರಿಸಿದೆನು. ಅವರು ಕುಶಲಪ್ರಶ್ನೆ ಮಾಡುತ್ತ, ಎದುರಿಗಿದ್ದ ಹಸ್ತಪ್ರತಿಯತ್ತ ನೋಡಿ, "ಏನು ವೆಂಕಟೇಶ ಐಯ್ಯಂಗಾರ್‍ರೆ, ಯಾವುದೋ ಕನ್ನಡ ಪುಸ್ತಕದ ಪ್ರತಿಯಂತೆ ಕಾಣುತ್ತದಲ್ಲಾ" ಎಂದರು. ನಾನು "ಹೌದು, ಅದು

ನಾನು ಈಚೆಗೆ ಬರೆದ ಒಂದು ಕಥೆ" ಎಂದೆನು. "ನಾನು ನೋಡಲೇ?" "ಅವಶ್ಯಕವಾಗಿ ನಿಮ್ಮಂಥವರು ನೋಡಿ ಒಪ್ಪಿಕೊಂಡರೆ ಬರೆದವನಿಗೆ ಸಂತೋಷ" ಹೀಗೆಂದಮೇಲೆ ಹಿರಿಯರು ಪ್ರತಿಯನ್ನು ಎತ್ತಿಕೊಂಡು ಓದಲಾರಂಭಿಸಿದರು.

ಸ್ವಲ್ಪ ಹೊತ್ತು ನಾನು ನನ್ನ ಕೆಲಸ ಮಾಡುತ್ತಿದ್ದೆನು. ಅವರು ಪುಸ್ತಕವನ್ನು ಓದುತ್ತಿದ್ದರು. ಕೆಲವು ಪುಟಗಳನ್ನು ಓದಿ ಅವರು, "ಕಥೆ ಬಹಳ ಚೆನ್ನಾಗಿದೆ, ವೆಂಕಟೇಶ ಅಯ್ಯಂಗಾರ್‍ರೇ", ಎಂದರು. ನಾನು, "ಸಂತೋಷ ಸ್ವಾಮಿ",ಎಂದೆನು. ಅವರು ಹಾಗೆಯೇ ಓದನ್ನು ಮುಂದು ವರಿಸಿದರು. ಇದ್ದಕ್ಕಿದ್ದಂತೆ ಗೋಳೋ ಎಂದು ಅಳುವುದಕ್ಕೆ ಆರಂಭಿಸಿದರು. ನಾನು "ಏಕೆ ರಾಯರೇ? ತಡಕೊಳ್ಳಿ, ತಡಕೊಳ್ಳಿ, ಯಾವ ಭಾಗ ಓದುತ್ತಿದ್ದೀರಿ?" ಎಂದೆನು. ಮುದುಕ, ಕಣ್ಣೀರು ಸುರಿಸುತ್ತಾ, "ಅಯ್ಯೋ ವೆಂಕಟೇಶ ಅಯ್ಯಂಗಾರ್, ಹೊಡೆದುಬಿಟ್ಟನಲ್ಲ ಹುಡುಗೀನ, ಪಾಪಿ!" ಎಂದರು. "ನಾನು, ಕಥೆಯಲ್ಲವೆ? ಇಷ್ಟು ಅತ್ತರೆ ಹೇಗೆ?" ಎಂದೆನು. "ಕಥೇನೇ, ಹೊಡೆದುಬಿಟ್ಟನಲ್ಲ," ಎಂದು ಅವರು ಕಣ್ಣು ಒರೆಸಿಕೊಂಡರು. ಸ್ವಲ್ಪ ಹೊತ್ತಿನ ಮೇಲೆ ತಮ್ಮ ಬಿಡಾರಕ್ಕೆ ಹೋಗಲು ಎದ್ದು, "ಇದನ್ನ ನಾನು ತಕೊಂಡು ಹೋಗಿ ಸಂಜೆಗೆ ತಂದುಕೊಡಲೇ?" ಎಂದು ಕೇಳಿದರು. ನಾನು, "ಬೇಡಿ ರಾಯರೇ; ಅದು ಒಂದೇ ಪ್ರತಿ. ಇದು ಕಳೆದುಹೋದರೆ ಮತ್ತೆ ಪ್ರತಿ ಮಾಡಿಸಬೇಕು. ಇದರಲ್ಲಿ ಅಲ್ಲಲ್ಲಿ ತಿದ್ದಿದ್ದೇನೆ. ಅದೆಲ್ಲಾ ಜ್ಞಾಪಕ ಇರುವು ದಿಲ್ಲ. ನಿಮಗೆ ಇಲ್ಲಿಯೇ ಊಟ ತರಿಸುತ್ತೇನೆ. ಊಟ ಮಾಡಿ ಮಲಗಿಕೊಂಡು ಓದಿ ಬಿಡಾರಕ್ಕೆ ಹೋಗುವಿರಂತೆ" ಎಂದೆನು. ಅವರು, "ಬೇಡ, ಬೇಡ. ನಾನು ಬಿಡಾರಕ್ಕೆ ಹೋಗಬೇಕು. ಸಂಜೆ ಬಂದು ಕತೆಯನ್ನು ಓದಿ ಮುಗಿಸು ತ್ತೇನೆ" ಎಂದರು. ಹಾಗೆಯೇ ಸಂಜೆ ಬಂದು ಕತೆಯನ್ನು ಓದಿ ಮುಗಿಸಿದರು.

ಕತೆಯನ್ನು ಅವರು ಬಹಳ ಮೆಚ್ಚಿಕೊಂಡರು ಎಂದು ಬೇರೆಯಾಗಿ ಹೇಳಬೇಕಾಗಿಲ್ಲ.

### 'ಮಸುಮತ್ತಿ' ಕಥೆಯ ಭಾಷಾಂತರ

ನನ್ನ ಕತೆಗಳನ್ನು ಮೆಚ್ಚಿ ರಾಮರಾಯರು ನನ್ನ ಇಬ್ಬರು ಉಪಾಧ್ಯಾಯರಾದ ಟೇಟ್ ಸಾಹೇಬರಿಗೆ ನನ್ನ ಕೆಲಸದ ರೀತಿಯನ್ನು ತಿಳಿಸಿರುವುದಕ್ಕಾಗಿ ಮಸುಮತ್ತಿ ಎಂಬ ನನ್ನ ಕತೆಯನ್ನು ಇಂಗ್ಲಿಷಿಗೆ ಭಾಷಾಂತರಿಸಿದರು. ಕೆಲವು ವರ್ಷಗಳ ನಂತರ ತ್ರಿವೇಣಿ ಪತ್ರಿಕೆಯಲ್ಲಿ ಅದು ಪ್ರಕಟವಾಯಿತು. ಆ ಸಂಚಿಕೆಯನ್ನು ಅಕಸ್ಮಾತ್ ಎಲ್ಲಿಯೋ ಕಂಡು ಆ ಕಥೆ ಇದ್ದ ಪುಟ ಒಂದನ್ನು ತೆರೆದು ರಾಜಾಜಿ ಅದನ್ನು ಓದಿದರಂತೆ. ಅವರಿಗೆ ಕತೆ ತುಂಬ ಚೆನ್ನಾಗಿದೆ ಎಂದು ಕಂಡಿತು. "ಇದು ಯಾರು ಈ ಕತೆಗಾರರು? ಈ ಭಾಷಾಂತರಕಾರರು?" ಎಂದು ಅವರು ಕತೆಯ ಶೀರ್ಷಿಕೆಯನ್ನು ನೋಡಿದರು. ಬರೆದವನು ನಾನು, ಭಾಷಾಂತರಕಾರರು ಸಹಪಾಠಿ ಸಖ ರಾಮರಾಯರು. ತುಂಬಾ ಸಂತೋಷವಾಗಿ ಅವರು ರಾಮರಾಯರಿಗೆ, "ಕತೆ ಭಾಷಾಂತರ ಎರಡೂ ನನಗೆ ಬಹಳ ರುಚಿಸಿತು. ಕತೆಯನ್ನು ತಮಿಳಿನಲ್ಲಿ ನಮ್ಮ ಜನರಿಗೆ ಕೊಡೋಣ ಎಂದಿದ್ದೇನೆ. ಮಾಸ್ತಿಯವರ ಅನುಮತಿ ಪಡೆದು ತಿಳಿಸಿ," ಎಂದು ಪತ್ರ ಬರೆದರು. ಅನುಮತಿಯ ಮಾತೇನು? ನನಗೆ ಇದು ಗೌರವ ಎಂದು ಅರಿಕೆ ಮಾಡಿದೆನು. ಅವರು ಆ ಕತೆಯನ್ನು ತಮಿಳಿಗೆ ಭಾಷಾಂತರಿಸಿದರು. ಆಮೇಲೆ ಕತೆ ಮತ್ತು ಕೆಲ ವನ್ನು ಭಾಷಾಂತರಮಾಡಿ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಮತ್ತು ತಮ್ಮ ಕತೆಗಳ ಸಂಗ್ರಹದಲ್ಲಿ ಸೇರಿಸಿದರು.

### ಭಾರತದ ಬಿಂದೂರಾಯರು

ಬೆಂಗಳೂರಿನಲ್ಲಿ ಮುದ್ದಣನ ಉತ್ಸವ ನಡೆದಾಗ ನಾನು ಮೊದಲಬಾರಿ ಸಂತೇಬೆನ್ನೂರು ಬಿಂದೂರಾಯರನ್ನು ಕಂಡು ಅವರ ಭಾರತದ ಓದನ್ನು ಕೇಳಿದೆ. ನಾನು ಮೈಸೂರಿಗೆ ಹೋದಾಗ ಬಿಂದೂರಾಯರು ಅಲ್ಲಿಯೇ ಇದ್ದರು. ಸುಬ್ಬ ರಾಯನ ಕೆರೆಯ ಪಶ್ಚಿಮದ ಬದಿಯ ಬೀದಿಯಲ್ಲಿ ಒಂದು ಮನೆಯಲ್ಲಿ ವಾಸಮಾಡುತ್ತಿದ್ದರು. ನನ್ನ ವಾಸದ ಮನೆ ಲಕ್ಷ್ಮೀಪುರದಲ್ಲಿತ್ತು. ಅಲ್ಲಿಂದಿಲ್ಲಿಗೆ ಅರ್ಧಮೈಲಿ ಇಲ್ಲ. ಒಂದು ದಿನ ನಾನು ರಾಯರ ಮನೆಗೆ ಹೋಗಿ ಅವರ ಕ್ಷೇಮ ಸಮಾಚಾರ ವಿಚಾರಿಸಿ, "ಹೇಗೂ ನೀವು ಇರುವ ಊರಿ ನಲ್ಲಿಯೇ ಇದ್ದೇನೆ. ಭಾರತ ಇನ್ನೊಂದಷ್ಟನ್ನು ನನಗೆ ಕೇಳಿಸಿ" ಎಂದೆನು. ಅವರು, "ಇದು ನನಗೆ ಉಪಕಾರ, ನಾನು ಒಬ್ಬನೇ ಕುಳಿತುಕೊಂಡು ಪದ್ಯಗಳನ್ನು ಓದುತ್ತಿ ದ್ದೇನೆ, ತಾವು ಕುಳಿತು ಕೇಳುತ್ತೇನೆ ಎಂದರೆ ಅದು ನನ್ನ ಭಾಗ್ಯ" ಎಂದರು. ನಾನು ಅಂದೇ ಅವರ ಭಾರತ ವಾಚನವನ್ನು ಕೇಳಿದೆನು. ಆಮೇಲೆ ಪ್ರವಾಸವಿಲ್ಲದೆ ಊರಿ ನಲ್ಲಿ ಇದ್ದ ದಿನಗಳಲ್ಲಿ, ಸಂಜೆ ಭಾರತ ಕೇಳೋಣ ಎಂದು ತೋರಿದಾಗ ಅವರ ಮನೆಗೆ ಹೋಗಿ ಕುಳಿತು ಕೇಳುವುದು ಒಂದು ಕ್ರಮವೇ ಆಯಿತು. ಹೀಗೆ ಅವರು ನನಗೆ ಕುಮಾರ ವ್ಯಾಸ ಭಾರತದ ಸುಮಾರು ಹದಿನೈದು ಸನ್ನಿವೇಶಗಳ ಪದ್ಯ ಗಳನ್ನು ಸಂಪೂರ್ಣವಾಗಿ ಓದಿ ಹೇಳಿದರು. ಕುಮಾರ ವ್ಯಾಸನ ಕಾವ್ಯಶಕ್ತಿ ದೈವದತ್ತ. ಅವನು ವರಕವಿ. ನಮ್ಮ

ನಾಡು ಎಂದಿನಿಂದಲೂ ಇದನ್ನು ತಿಳಿದುಕೊಂಡಿದೆ. ನಾನೂ ಇದನ್ನು ತಿಳಿದಿದ್ದೆ. ಆದರೆ ಈ ಎರಡು ಮಾತು ಎಷ್ಟು ದಿಟ ಎನ್ನುವುದು ನನಗೆ ಮನಮುಟ್ಟಿತು. ಓದುತ್ತಾ ಓದುತ್ತಾ ರಾಯರು ಇಲ್ಲೋ ಅಲ್ಲೋ ಒಂದು ಅಕ್ಷರವನ್ನೋ ಪದ ವನ್ನೋ ಬಿಟ್ಟರೆ ನಾನು ತಡೆದು, "ಅಕ್ಷರ ಬಿಟ್ಟರಬೇಕು, ಪದ ಬಿಟ್ಟರಬೇಕು, ಮತ್ತೆ ಓದಿ," ಎನ್ನುವೆನು. ಅವರು ಮತ್ತೆ ಓದಿ, "ಹೌದಲ್ಲಾ, ಇದು ತಮಗೆ ಹೇಗೆ ತಿಳಿ ಯುತ್ತೆ?" ಎಂದು ಕೇಳುವರು. ನಾನು ಭಾಮಿನೀ ಷಟ್ಪದಿಯ ಗತಿಯನ್ನು ಅವರಿಗೆ ವಿವರಿಸಿ ಹೇಳಿ, "ಓದಿನಲ್ಲಿ ಒಂದಕ್ಷರ ಬಿಟ್ಟರೂ ಈ ಗತಿ ತಪ್ಪುತ್ತದೆ, ಈ ಕಡೆಗೆ ಗಮನ ಕೊಟ್ಟರೆ ತಮಗೂ ಇದು ಗೊತ್ತಾಗುತ್ತದೆ," ಎಂದು ತಿಳಿಸಿ ದೆನು. ಇದು ತಮಗೆ ಬಹಳ ಉಪಕಾರ ಆಯಿತೆಂದು ಅವರು ತಾವು ಆಮೇಲೆ ಭಾರತವನ್ನು ಓದುವಾಗಲೆಲ್ಲ ನನ್ನ ಹೆಸರನ್ನೆತ್ತಿ ಸಭೆಗೆ ತಿಳಿಸುತ್ತಾ ಬಂದರು. ಬಿಂದೂರಾಯರು ಇಂಥ ಸರಳ, ಇಂಥ ಅನಸೂಯ, ಉದಾರ ಚೇತನ.

"ಶ್ರೇಷ್ಠ ಗಮಕಿ ಒಬ್ಬರು ಹೇಗೂ ದೊರಕಿದ್ದಾರೆ. ಸಬ್ ಡಿವಿಷನ್ನಿನ ಹತ್ತು ಊರಿಗೆ ಇವರನ್ನು ಕರೆದುಕೊಂಡು ಹೋಗಿ ಭಾರತ ಓದಿಸಿ ಜನರಿಗೆ ಕೇಳಿಸೋಣ" ಎಂದು ನನಗೆ ಆಸೆಯಾಯಿತು. ನಾನು ರಾಯರನ್ನು ಕೇಳಿದೆನು. ಅವರು ತಮ್ಮೊಂದಿಗೆ ಎಲ್ಲಿಗೂ ಬರುತ್ತೇನೆ. ಹೇಳಿದ ಕೆಲಸ ವನ್ನು ಮಾಡುತ್ತೇನೆ" ಎಂದರು. "ಇದರಲ್ಲಿ ವರಮಾನದ ಮಾತಿಲ್ಲ" ಎಂದು ನಾನು ತುಂಬಾ ಸಂಕೋಚದಿಂದ ಬಿನ್ನವಿಸಿದೆನು. ಅವರು, "ನನಗೆ ದೇವರು ಕೊಟ್ಟಿರುವ ಅನ್ನ ಇದೆ. ಮನೆಯಲ್ಲಿರುವುದನ್ನು ನಿಮ್ಮೊಂದಿಗೆ ಇರುತ್ತೇನೆ. ಮನೆಯಲ್ಲಿ ಓದುವುದನ್ನು ನಿಮ್ಮೆದುರಿಗೆ ಓದುತ್ತೇನೆ" ಎಂದರು. ಹಲವು ಸ್ಥಳಗಳಿಗೆ ನನ್ನೊಂದಿಗೆ ಬಂದರು. ಅನೇಕ ಸಭೆಗಳಿಗೆ ಭಾರತವನ್ನು ಓದಿ ಹೇಳಿದರು.

ತಮ್ಮ ಮನೆಗಳಲ್ಲಿ ಓದಬೇಕು ಎಂದು ಒಂದೆರಡು ಕಡೆ ಪುಣ್ಯವಂತ ಜನ ಬಯಸಿ ಅಂಥ ವೇಳೆ ಅವರಿಗೆ ಅಲ್ಪ ಸ್ವಲ್ಪ ಕಾಣಿಕೆಯನ್ನು ಸಲ್ಲಿಸಿದ್ದೂ ಉಂಟು.

---

## ಬೆಳದಿಂಗಳು

ನೆಲಕ್ಕೆ ಬೀಳುವ ಬೆಳಕು
ಬೆರಳು ಸಂದಿಯಲಿ ಜಾರುವಷ್ಟು ಹಗುರ
ಹಸು-ಮಗುವು ಮೂಡಿಸಿದ ಹೆಜ್ಜೆ
ಸಪ್ಪಳದ ಗಪ್ಪು-ಚಿಪ್ಪು
ಆಚೆ ಬಂದರೆ ಬೆಳಕು
ನಮ್ಮ ಮಗು ಗಹಿಗಹಿಸಿ ನಕ್ಕಂತೆ
ಬಂದು ಓಡುವ ವೇಳೆ
ಮುಂಜಾನೆ
ಬೆರಳು ಸಂಧಿಯಲ್ಲಿ ಜಾರುವ ಬೆಳಕಿಗೆ
ನಮ್ಮ ಮಗುವಿಗೆ,
ನಾನು ಮುತ್ತಿಟ್ಟ ಹಾಗೆ.
ಹೂವಿನಲಿ ಮಂಜು ಹನಿ ಉರುಳಿ ಬಿದ್ದ ಹಾಗೆ.

ಹ. ವಾಸುದೇವಮೂರ್ತಿ




# ಕೆಟಲಸನ ಐದು ಕವನಗಳು

೧

ಹಗಲಿರುಳು ಶಾಪಗಳ ಹೊರಿಸುವಳು
ನನ್ನ ಮೇಲವಳು,
ಹೆಸರಿಸುತಲೆನ್ನನೇ ತುಟಿಗಳಲ್ಲಿ ;
ಆದರೂ—
ನನ್ನ ಪ್ರೀತಿಸುವಳೆಂಬುದನು
ತಿಳಿದಿಹೆನು.
ಎಂತು ?
ಕೆಟ್ಟ ಬಯ್ಗುಳಲಿ ಗಮನವಿಟ್ಟು
ಕಳೆಯುವೆನು ನಾನೂ ಹಗಲಿರುಳನು—
ದಿಕ್ಕೆಟ್ಟ ನನ್ನೊಲುಮೆಯನು ಚೆನ್ನಾಗಿ ಅರಿತು.

೨

ಬಾಳಸಂತಸವೆ ! ತಿಳಿಸು ನನಗಿದನು—
ನಮ್ಮೊಲುಮೆಯನು ಏನೂ ಮುರಿಯದೆಂದು.
ಕಟಪವಿಲ್ಲದ ಹೃದಯದಲಿ ತಾನು
ಏನೊರೆವೆನು ಎಂಬುದನು,
ಓ ದೇವ, ಅವಳರಿತುಕೊಳಲಿ ;
ನಿಡಿದಾದ ಅಂತರವು ಅನುದಿನವು ಸರಿದು
ನಮ್ಮೆರಡು ಬದುಕುಗಳು ಒಂದಾಗಿ ಬೆಸೆಯಲಿ,
ನಿಷ್ಠೆಯಾ ಪವಿತ್ರ ಬಂಧನದಲಿ.

೩

ದ್ವೇಷಿಸುವೆನು, ನಾನು, ಪ್ರೀತಿಸುವೆನು,
ಎಂತೆನ್ನಲು ನೀನು, ಅರಿಯದಿಹೆನು :
ಬರಿದೆ ಅನುಭವಿಸುತಲಿದನು,
ನಡುವೆ ಎರಡರಲಿ ಛಿದ್ರವಾಗಿಹೆನು . . . .

೪

ಇಲ್ಲ—
ಹೆಣ್ಣಾವಳೂ, ನಿಜಕು ಪ್ರೀತಿಸಲಿಲ್ಲ,
ಲಲಿತೆ
ನಿನ್ನಂತೆ
ನನ್ನ
ಪ್ರೇಮನಿಷ್ಠೆ ಅದಾವುದೂ ನಿಜವೆನಿಸಲಿಲ್ಲ,
ಇಟ್ಟಂತೆ
ನಾನು
ನಿನ್ನಲಿ.

೫

ವಿವೇಕ ಕುರುಡಾಗಿ ದುರಿತಕೆಳಸಿದ
ಮನವೊಂದು ತನ್ನನೇ ಅರ್ಪಿಸಿಕೊಂಡಳಿಯಿತು :
ನಿನ್ನ ಹಿರಿಮೆಯ ವಸ್ತ್ರಗಳನೆಲ್ಲ ಧರಿಸಿ ಬಂದರೂ—
ಮಮತೆಯಲಿ ನಾನಿನ್ನ ಯೋಚಿಸಲಾರೆ,
ಧೈರ್ಯವಿಹ ಯಾವ ಕಾರ್ಯದಲೆ ನೀ ಮುಳುಗಿದರೂ—
ನನ್ನೊಲುಮೆಯನೆಂದಿಗೂ ಕಡಿಯಲಾರೆ !

From 'Catallus'

ಸುಮನಾ

# ಕಣ್ಮರೆಯಾದ ಶ್ರೀ ಬಿಂದೂರಾಯರು



## ಎಂ. ರಾಘವೇಂದ್ರರಾವ್

'ಭಾರತ ವಾಚನ ಪ್ರವೀಣ' ಶ್ರೀ ಸಂತೇಬೆನ್ನೂರು ಗೋವಿಂದರಾಯರ ಸತ್ಪುತ್ರರಾದ ಬಿಂದೂರಾಯರು ತಾ|| ೧೨-೩-೬೯ರಂದು ಚಿತ್ರದುರ್ಗದಲ್ಲಿ ತಮ್ಮ ನಿವಾಸದಲ್ಲಿ ದೈವಾಧೀನರಾದರೆಂಬ ಈ ಶೋಕವಾರ್ತೆಯನ್ನು ಕೇಳಿ ಸಂತಪ್ತ ಹೃದಯನಾಗಿ ನನಗೆ ಗುರುಸ್ಥಾನೀಯರಾಗಿದ್ದ ಆ ಹಿರಿಯರನ್ನು ಸ್ಮರಿಸಿ ಅವರ ಪವಿತ್ರಾತ್ಮಕ್ಕೆ ಈ ನನ್ನ ಬಾಷ್ಪಾಂಜಲಿಯನ್ನು ಸಮರ್ಪಿಸುತ್ತಿದ್ದೇನೆ.

### ಶ್ರೇಷ್ಠ ಗಮಕಿಗಳು

"ಎಡರದೆ, ತೊಡರದೆ, ತಲೆಯಂ | ಕೊಡಹದೆ, ಕಡುವಹಿಲ ಜಾಡ್ಯಮೆನಿಸದೆ, ರಸಮಂ || ಕೆಡಿಸದೆ, ಸರ್ವರ ಚಿತ್ತ | ಕ್ಕೊಡಬಡಲೋದುವನೆ 'ಗಮಕಿ' ಚೂಡಾರತ್ನಾ ||" ಶ್ರೀ ರಾಯರ ವಾಚನದಲ್ಲಿ ಗಮಕಿಗೆ ಬೇಕಾದ ಲಕ್ಷಣಗಳೆಲ್ಲವೂ ಇದ್ದುವು. ಈ ಅಂಶವನ್ನು ಸಮರ್ಥಿಸಲೆಂದೇ ಇಲ್ಲಿ ಈ ಪದ್ಯವನ್ನು ಉದಹರಿಸಿರುತ್ತೇನೆ.

### ಶ್ರೇಷ್ಠ ಪ್ರಚಾರಕರು

ಗದುಗಿನ ಭಾರತವನ್ನು ಓದುವ ಸೊಗಸನ್ನು ಗದುಗಿನ ಪ್ರಾಂತ್ಯದವರೇ (ಎಂದರೆ ವಿಶೇಷವಾಗಿ ಉತ್ತರ ಕರ್ನಾಟಕದವರು) ಹಲವರು ಹಿಂದೆ ಕಂಡಿರಲಿಲ್ಲವೆಂದು ಹೇಳಿದರೆ ತಪ್ಪಾಗಲಾರದು! ಶ್ರೀ ರಾಯರು ಅಖಂಡಕರ್ನಾಟಕವನ್ನು ಅದರಲ್ಲಿಯೂ ಹೆಚ್ಚಾಗಿ ಉತ್ತರ ಕರ್ನಾಟಕವನ್ನು ತಮ್ಮ ಕಲೆಯ ಪ್ರಚಾರಕ್ಕಾಗಿ ಮೀಸಲಿಟ್ಟು ಸಂಚರಿಸಿ ಅಲ್ಲಿನ ಸಹೃದಯ ವರ್ಗದವರ-ಸಾರ್ವಜನಿಕರ-ವಿಶ್ವಾಸ, ಗೌರವಗಳಿಗೆ ಪಾತ್ರರಾದರು.

### ಪ್ರಥಮ ಅಧ್ಯಾಪಕರು

ಗಮಕ ಕಲೆಯ ಶಿಕ್ಷಣಕ್ಕೆ ಒಂದು ಸಾರ್ವಜನಿಕ ಸಾಹಿತ್ಯಕ್ಷೇತ್ರವಿಲ್ಲದಿದ್ದ ವೇಳೆಯಲ್ಲಿ ಪೂಜ್ಯ ಶ್ರೀ ಡಿ. ವಿ. ಜಿ. ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷ ಪದವಿಯಲ್ಲಿದ್ದಾಗ ಪ್ರಪ್ರಥಮವಾಗಿ ಈ ಕಲೆಯ ಶಿಕ್ಷಣಕ್ಕೆ ಪರಿಷತ್ತಿನಲ್ಲಿ ತರಗತಿಗಳನ್ನು ನಡೆಸಲು ಶ್ರೀ ರಾಯರಿಗೆ ತಿಳಿಸಿ ಅವರನ್ನು ಒಪ್ಪಿಸಿದ ಪರಿಣಾಮವಾಗಿ ಶ್ರೀ ರಾಯರು ಮೊದಲ ಆಚಾರ್ಯರಾಗಿ ಈ ಕಲೆಯಲ್ಲಿ ಅನೇಕ ಕಲಾಸಕ್ತ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಮಾರ್ಗದರ್ಶನ ಮಾಡಿ ಗಮಕ ಕಲೆಯ ಸೇವೆಯನ್ನು ಸಲ್ಲಿಸಿದರು.

### ಕುಮಾರವ್ಯಾಸನ ಪರಮಭಕ್ತರು

ಶ್ರೀ ರಾಯರು ತಮ್ಮ ಜೀವಮಾನವನ್ನೆಲ್ಲಾ - ಅವರು ತಮ್ಮ ಮಧ್ಯವಯಸ್ಸಿನಲ್ಲಿ ಭಾರತ ವಾಚನವನ್ನು ಪ್ರಾರಂಭಿಸಿದನಂತರ, ಕುಮಾರವ್ಯಾಸ ಭಾರತದ ಅಧ್ಯಯನಕ್ಕೇ ಮುಡಿಪಾಗಿಟ್ಟು ಅಂತೆಯೇ ಮೊನ್ನೆ ಮೊನ್ನೆಯವರೆಗೂ ಆ ಮಹಾಕಾವ್ಯದ ಗಾಯನ-ಪ್ರವಚನಗಳನ್ನು ಮಾಡುವ ಮೂಲಕ ಇತರರ ಜನ್ಮ ಸಾರ್ಥಕಗೊಳಿಸುವುದರ ಜೊತೆಗೆ ತಮ್ಮ ಜನ್ಮವನ್ನೂ ಸಾರ್ಥಕಪಡಿಸಿಕೊಂಡರು.

ಶ್ರೀ ರಾಯರಿಗೆ ಕುಮಾರವ್ಯಾಸ ಭಾರತವು ಕರತಲಾಮಲಕವಾಗಿದ್ದಿತು. ಪುಸ್ತಕವನ್ನು ನೆಪಮಾತ್ರಕ್ಕೆ ಇಟ್ಟುಕೊಳ್ಳುತ್ತಿದ್ದರು. ಪದ್ಯವಾಚನದಲ್ಲಿ ಭಾವಪುಷ್ಟಿಗಾಗಿ ಹೆಚ್ಚಾಗಿ ರಾಗವಿನ್ಯಾಸವನ್ನು ಮಾಡದಿದ್ದರೂ ಹಿತದ ಮಿತಿಯರಿತು ರಸ ಕಾಲೋಚಿತವಾದ ಸುಲಭವಾದ ರಾಗಗಳನ್ನು ಮೇಳೈಸಿ ರಸಪೋಷಣೆಯಾಗುವಂತೆ ಗಂಭೀರವಾಗಿ, ಅವರಿಗೆ ದೈವದತ್ತವಾಗಿದ್ದ ಗೌಳ ಶಾರೀರದಿಂದ ರಸಿಕರ ಹೃದಯಕ್ಕೆ ಆನಂದವಾಗುವಂತೆ ಒಂದು ಖಚಿತವಾದ ಮಾರ್ಗದಲ್ಲಿ ಕಲಾ ಪ್ರದರ್ಶನವನ್ನು ಮಾಡುತ್ತಿದ್ದರು.

### ಶ್ರೀ ರಾಯರ ಚಿತ್ರ

ಸಭಿಕರೆದುರಿನಲ್ಲಿ ಉನ್ನತ ವೇದಿಕೆಯ ಮೇಲೆ ಅವರು ಪದ್ಮಾಸನದಲ್ಲಿ ಕುಳಿತು ಬಲಭಾಗಕ್ಕೆ ತಂಬೂರಿಯನ್ನು ನಿಲ್ಲಿಸಿಕೊಂಡು ತಾವೇ ಶ್ರುತಿ ಹಾಕುತ್ತಾ, ತಲೆಯೆತ್ತಿ ಗಂಭೀರವಾಗಿ ಅಚಲವಾಗಿ ಸುಸ್ಥಿರ ಮನಸ್ಸಿನಿಂದ ಏಕ

ಪ್ರಕಾರವಾಗಿ ಗಂಟೆಗಳಗಟ್ಟಲೆ ಕಾವ್ಯ ವಾಚನ ಮಾಡು ತ್ತಿದ್ದ ಶ್ರೀ ರಾಯರ ಈ ಚಿತ್ರವು ಅವರನ್ನು ಕಂಡವರ ಕಣ್ಮನಗಳಿಂದ ಎಂದೂ ದೂರವಾಗುವಂತಿಲ್ಲ.

**ಸುವ್ಯವಸ್ಥಿತ ದಿನಚರಿ**

ನಿಯಮಿತ ವೇಳೆಗಳಲ್ಲಿ ಕಾಲ ಮೀರದೆ ತಮ್ಮ ಪ್ರತಿ ನಿತ್ಯದ ಕೆಲಸಗಳನ್ನು ಶ್ರೀ ರಾಯರು (ಹಲವು ಸಮಯ ಗಳಲ್ಲಿ ತಾವೇ) ಮಾಡಿಕೊಳ್ಳುತ್ತಿದ್ದರು. ಮಾಡುವ ಪ್ರತಿ ಕೆಲಸದಲ್ಲಿಯೂ ಒಂದು ಅಚ್ಚುಕಟ್ಟು-ಸೊಗಸು ಇರುತ್ತಿದ್ದಿತು. ಊಟ-ಉಪಾಹಾರ ಅಥವಾ ತಮ್ಮ ಯಾವುದೇ ಇತರ ಕಾರ್ಯಕ್ರಮಗಳ ವಿಚಾರದಲ್ಲಿ ಕಾಲ ಮೀರಲು ಅವಕಾಶವೇ ಇರಲಿಲ್ಲ. ತಮ್ಮ ದೇಹಾರೋಗ್ಯವನ್ನು ಬಹಳ ಎಚ್ಚರಿಕೆಯಿಂದ ಕಾಪಾಡಿಕೊಳ್ಳಲು ಹಲವು ಒಳ್ಳೆಯ ಅಭ್ಯಾಸಗಳನ್ನು ಅವರು ಪರಿಪಾಲಿಸುತ್ತಿದ್ದರು.

**ಶಿಷ್ಯ ವಾತ್ಸಲ್ಯ-ಕಲಾಭ್ಯಾಸಿಗಳಿಗೆ ಪ್ರೋತ್ಸಾಹ**

ಹಲವು ಕಾರ್ಯಕ್ರಮಗಳಲ್ಲಿ ಭಾಗವಹಿಸುವ ತಮ್ಮ ಶಿಷ್ಯ ವರ್ಗವನ್ನೂ ಇತರ ಕಲಾಭ್ಯಾಸಿಗಳನ್ನೂ ಹೃತ್ಪೂರ್ವಕವಾಗಿ ಹರಸಿ, ಈ ಕಲೆಯ ಸಾಧನೆಗೆ ನಾನಿನ್ನೂ ವಿದ್ಯಾರ್ಥಿ ದೆಶೆಯಲ್ಲಿಯೇ ಇದ್ದೇನೆಂದು ಹೇಳುವ ಮೂಲಕ ಕಲೆಯಲ್ಲಿ ತರುಣರಿಗೆ ಭಕ್ತಿ ಗೌರವಗಳು ಹುಟ್ಟುವಂತೆ ಅಥವಾ ಇನ್ನೂ ಹೆಚ್ಚುವಂತೆ ಮಾಡುತ್ತಿದ್ದರು.

**ಸನ್ಮಾನ ಗೌರವ**

ಬೊಂಬಾಯಿಯಲ್ಲಿನ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸುವ ಮೊದಲು ಪರಿಷತ್ತಿನಿಂದ ಸನ್ಮಾನಿಸಲ್ಪಟ್ಟು ಸಮ್ಮೇಳನದ ಗಮಕ ಗೋಷ್ಠಿಯ ಅಧ್ಯಕ್ಷರಾಗಿ ಈ ಕಲೆಗೆ ನಾಡಿನಲ್ಲಿ ಆಗಬೇಕಾಗಿರುವ ಪ್ರೋತ್ಸಾಹ ಎಷ್ಟೆಂಬುದನ್ನೂ ತಿಳಿಸಿ, ನಿಂತಿರುವ ಕೆಲಸ ಕಾರ್ಯಗಳಾವುವೆಂಬುದನ್ನೂ ಒತ್ತಿ ಹೇಳಿ, ಕಲೆಯ ಮುನ್ನಡೆಗೆ ಶ್ರೀ ರಾಯರು ಮಾರ್ಗ ದರ್ಶಕರಾದರು.

ಹುಬ್ಬಳ್ಳಿ-ಗದಗು ಈ ಸ್ಥಳಗಳಲ್ಲಿ ಕುಮಾರವ್ಯಾಸ ಭಾರತ ವನ್ನು ತಮ್ಮ ಪ್ರವಚನದೊಂದಿಗೆ ವಾಚನ ಮಾಡಿ, ಶ್ರೀ ಕುಮಾರವ್ಯಾಸನ ಹಾಗೂ ಗದುಗಿನ ವೀರನಾರಾಯಣನ ಸೇವೆಯನ್ನು ಮಾಡಿ, ಸಮಸ್ತ ಕರ್ನಾಟಕದ ಜನತೆಯಿಂದಲೂ ಸನ್ಮಾನಿಸಲ್ಪಟ್ಟು ಎಲ್ಲ ವಿದ್ವಜ್ಜನರ ಮನ್ನಣೆಗೂ ಪಾತ್ರರಾದರು-ಇತ್ತೀಚೆಗೆ ರಾಜ್ಯ ಸರ್ಕಾರದವರು ಇವರ ಕಲಾಸೇವೆಯನ್ನೂ ಪರಿಗಣಿಸಿ ಗೌರವ ಪ್ರಶಸ್ತಿಯನ್ನು ನೀಡಿದ್ದರು.

**ಭಾರತವಾಚನ ಮೂಲಾಚಾರ್ಯರು**

ಪುಸ್ತಕ ವಾಚನ ಕಲೆಯೂ ಹಿಂದೆ ವ್ಯಾಖ್ಯಾನ ಪದ್ಧತಿಯೂ (ಕನ್ನಡ) ಪುರಾಣ ಶ್ರವಣ ರೂಪದಲ್ಲಿ ಗೋಚರ ವಾಗಿದ್ದು ಅಲ್ಲಲ್ಲಿ ಕೆಲವು ಹಿಂದಿನ ಗಮಕ ವಿದ್ವಾಂಸರು ಪ್ರಸಿದ್ಧರಾಗಿ ಆಗಿ ಹೋಗಿದ್ದರು. ಆದರೆ ಶ್ರೀ ರಾಯರ ಕಾಲಕ್ಕೆ ಕನ್ನಡ ನಾಡಿನಲ್ಲಿ ಕನ್ನಡಮ್ಮನ ಸೇವೆಗೆ ಕಂಕಣ ತೊಟ್ಟು ನಿಂತು ಜನರ ಮನದಲ್ಲಿ ಕನ್ನಡ ಭಾಷೆಯ ಬಗ್ಗೆ ಅಭಿಮಾನವನ್ನು ಬೆಳೆಸಿ ಪ್ರಖ್ಯಾತರಾದ ಪ್ರಾತಃಸ್ಮರಣೀಯ ರಾದ ಅನೇಕ ಕನ್ನಡ ವಿದ್ವಾಂಸರ ಪರಿಶ್ರಮದ ಫಲ ವಾಗಿಯೋ ಎಂಬಂತೆ, ಈ ಕಲೆಯ ಕ್ಷೇತ್ರದಲ್ಲಿಯೂ ಒಂದು ಕ್ರಾಂತಿಯಾಗಿ ಒಂದು ಹೊಸಯುಗವೇ ಪ್ರಾರಂಭವಾಯಿತು. ಅದೇ ಇಂದು ನಾವು ಎಲ್ಲೆಲ್ಲೂ ಕಾಣುವ ವ್ಯಾಖ್ಯಾನಕಾರರ ಸಹಾಯವನ್ನು ಅಪೇಕ್ಷಿಸದ-ಕೇವಲ ಗಮಕಿಗಳ ಕಾವ್ಯವಾಚನ ದೃಶ್ಯ. ಈ ಒಂದು ಹೊಸಯುಗದ ಪ್ರವರ್ತಕರು ಶ್ರೀ ರಾಯರೆಂದು ಹೇಳಬಹುದು.

**ಕಡೆಯ ಮಾತು**

ಶ್ರೀ ರಾಯರ ವಿಷಯವಾಗಿ ಎಷ್ಟು ಹೇಳಿದರೂ ಸಾಲದು. ಅವರ ಮಾರ್ಗದರ್ಶನದಲ್ಲಿ ಇಂದು ನಮ್ಮ ನಾಡಿನಲ್ಲಿ ಕಲೆಯ ಸೇವೆಯನ್ನು ಸಲ್ಲಿಸುತ್ತಿರುವ ಕಲಾವಿದರು ತಮ್ಮ ಪರಂಪರೆಯನ್ನು ಉಳಿಸಿ – ಬೆಳೆಸಿ ತರುಣವರ್ಗದವರಿಗೆ ಪ್ರೋತ್ಸಾಹ ನೀಡುತ್ತಾ ಬಂದಲ್ಲಿ ಅದು ಶ್ರೀ ರಾಯರ ಪವಿತ್ರಾತ್ಮಕ್ಕೆ ಅತ್ಯಂತ ತೃಪ್ತಿಯನ್ನುಂಟುಮಾಡುವುದು. “ಇದ ವಿಚಾರಿಸೆ ಬರಿಯ ತುಳಸಿಯ| ಉದಕದಂತಿರೆ ಇಲ್ಲಿ ನೋಳ್ಪುದು| ಪದುಮನಾಭನ ಮಹಿಮೆ” ಎಂದು ಶ್ರೀ ರಾಯರು ಹಾಡುತ್ತಿದ್ದಾಗ ಮತ್ತು “ಶ್ರೀ ವನಿತೆಯರಸನೆ” ಎಂಬ ಪದ್ಯವನ್ನು ಹಾಡುತ್ತಿದ್ದಾಗ ಅವರಿಗಿರುತ್ತಿದ್ದ ಶ್ರೀ ಕೃಷ್ಣಭಕ್ತಿಯ ಅನುಸಂಧಾನ ಅನುಪಮವಾದದ್ದು. ಗಮಕಲೋಕದಲ್ಲಿ ಶ್ರೀ ರಾಯರು ಸೂರ್ಯನಂತೆ ಎಂದೆಂದಿಗೂ ಪ್ರಕಾಶಮಾನರಾಗಿರುತ್ತಾರೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

## ವಾದಕ್ಕೆ ಕೊನೆ

# ಗಂಗಾಧರಂ ಶಾಸನ–ಕೈಗೆ ಕನ್ನಡಿ

**ಡಾ. ಪಾಂಡುರಂಗರಾವ ದೇಸಾಯಿ**

‘ ಕನ್ನಡ ನುಡಿ ’ಯ ಕಳೆದ ಫೆಬ್ರುವರಿ ತಿಂಗಳ ಸಂಚಿಕೆಯಲ್ಲಿ ಶ್ರೀ ಕಲಬುರ್ಗಿ ಅವರು ಗಂಗಾಧರಂ ಶಾಸನವನ್ನು ಕುರಿತು ಲೇಖನವನ್ನು ಬರೆದು, ಅದೇ ವಿಷಯದ ಮೇಲಿನ ನನ್ನ ಹಿಂದಿನ ಲೇಖನವನ್ನು (ಕನ್ನಡ ನುಡಿ, ಆಗಸ್ಟ ೧೯೬೮) ಟೀಕಿಸಿದ್ದಾರೆ. ಶ್ರೀಯುತರು ತಮ್ಮ ಲೇಖನದಲ್ಲಿ ಬಳಸಿದ ಭಾಷೆಯ ಬಗೆಗೆ ಏನನ್ನೂ ಹೇಳದೆ ಮುಖ್ಯ ವಿಷಯವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುತ್ತೇನೆ.

ಪ್ರಸ್ತುತ ವಾದದ ಸಂಕ್ಷಿಪ್ತ ಸ್ವರೂಪವು ಇಂತಿದೆ. ಹೈದರಾಬಾದದಲ್ಲಿ ಈಗ ಪುರಾತತ್ವವಿಭಾಗದಲ್ಲಿ ಅಧಿಕಾರಿಗಳಾಗಿದ್ದ ಡಾ|| ಎನ್. ವೆಂಕಟರಮಣಯ್ಯ ಅವರು ಕರೀಮನಗರ ಜಿಲ್ಲೆಯ ಗಂಗಾಧರಂ ಗ್ರಾಮದಲ್ಲಿ ದೊರೆತ ಒಂದು ಶಾಸನವನ್ನು ತೆಲುಗು ಭಾರತೀ ಪತ್ರಿಕೆಯ ಮಾರ್ಚ್ ೧೯೬೬ರ ಸಂಚಿಕೆಯಲ್ಲಿ ಪ್ರಕಟಿಸಿದರು. ಪಂಪನನ್ನು ಕುರಿತ ಈ ಮಹತ್ವದ ಶಾಸನದ ಪಾಠವೊಂದು ಕರ್ನಾಟಕ ವಿಶ್ವವಿದ್ಯಾಲಯ ಪತ್ರಿಕೆಯಲ್ಲಿ (Humanities, vol. xi) ಪ್ರಕಟವಾಯಿತು. ಆ ಕಾಲದ ಶಾಸನ ಭಾಷೆಯ ಪರಿಚಯವುಳ್ಳವರು ಈ ಶಾಸನವನ್ನು ಸಹಜವಾಗಿ ಓದಿ, ಪಂಪಭಾರತದ ಹಿನ್ನೆಲೆಯಲ್ಲಿ, ಪಂಪನ ಮತ್ತು ಆತನ ತಮ್ಮ ಜಿನವಲ್ಲಭನ ವಂಶಾನುಕ್ರಮವನ್ನು ಹೀಗೆ ತಿಳಿದುಕೊಳ್ಳಬಹುದು :




ಪಂಪನ ತಂದೆ ಅಭಿಮಾನ ದೇವರಾಯನು ಅಭಿಮಾನ ಚಂದ್ರನ ಮೊಮ್ಮಗನೆಂದು ಪಂಪಭಾರತದಲ್ಲಿ ಉಕ್ತವಾಗಿರುವುದರಿಂದ ಶಾಸನದ ಭೀಮಪಯ್ಯ ಮತ್ತು ಅಭಿಮಾನದೇವರಾಯ, ಇವು ಒಂದೇ ವ್ಯಕ್ತಿಯ ಎರಡು ವಿಧದ ಹೆಸರುಗಳು ಎಂದು ಊಹಿಸಬೇಕಾಗುತ್ತದೆ. ಈ ಊಹೆಗೆ ಪಂಪಭಾರತದ ಪಾಠಾಂತರದಿಂದ ಪುಷ್ಟಿದೊರೆಯುತ್ತದೆ.

ಶಾಸನದಲ್ಲಿ ಪಂಪ–ಜಿನವಲ್ಲಭರ ತಾಯಿ ಮತ್ತು ತಾಯಿಯ ತಂದೆಯ ಹೆಸರುಗಳು ಮೊದಲಬಾರಿ ಉಕ್ತವಾಗಿವೆ. ಅವು ಅಬ್ಬಣಬ್ಬೆ ಮತ್ತು ಜೋಯಿಸ ಸಿಂಘ. ಶಾಸನ ಪದಗಳಲ್ಲಿ ಸಂಧಿಯನ್ನು ಗುರುತಿಸದೆ ಡಾ|| ವೆಂಕಟರಮಣಯ್ಯ ಅವರು ತಾಯಿಯ ಹೆಸರನ್ನು ‘ ವಬ್ಬಣಬ್ಬೆ ’ ಎಂದು ಹೇಳಿದರು. ತೆಲುಗು ಮುದ್ರಿತ ಲಿಪಿಯಲ್ಲಿ ‘ ವ ’ ಕಾರ, ‘ ಪ ’ಕಾರಗಳ ಸೂಕ್ಷ್ಮಭೇದವನ್ನು ಲಕ್ಷಿಸದೆ ಡಾ|| ಆರ್. ಸಿ. ಹಿರೇಮಠ ಅವರು ಅದನ್ನು ‘ ಪಬ್ಬಣಬ್ಬೆ ’ ಎಂದು ನಿರ್ದೇಶಿಸಿದರು (ಕ. ವಿ. ವಿ. ಪತ್ರಿಕೆ, ಮೇಲೆ ಹೇಳಿದ ಸಂಪುಟ).

ಜೋಯಿಸ ಸಿಂಘ, ಅಬ್ಬಣಬ್ಬೆ ಮತ್ತು ಜಿನವಲ್ಲಭರ ಸಂಬಂಧವನ್ನು ಸೂಚಿಸುವ ಶಾಸನ ಭಾಗವನ್ನು ಪುನರುಕ್ತವಾದರೂ ಇಲ್ಲಿ ಉದಾಹರಿಸುವೆ :

> “ ಅಭಿಮಾನ ಚಂನ್ದ್ರನ ಮರ್ಮಂ ಭೀಮಪಯ್ಯನ
> ಬೆಳ್ವೊಲದಣ್ಣಿಗೆಱೆಯ ಜೋಯಿಸ ಸಿಂಘನ
> ಮರ್ಮವಬ್ಬಣಬ್ಬೆಯ ಮಗಂ ಜಿನವಲ್ಲಭಂ.”

ಇಲ್ಲಿ ನನ್ನ ತಿಳಿವಳಿಕೆಯಂತೆ ‘ ಭೀಮಪಯ್ಯನ ಅಬ್ಬಣಬ್ಬೆಯ ಮಗಂ ಜಿನವಲ್ಲಭಂ ’ ಎಂದು ಮುಖ್ಯ ಪದಗಳ ಅನ್ವಯಮಾಡಿ, ಈ ಜಿನವಲ್ಲಭನು ‘ ಜೋಯಿಸ ಸಿಂಘನ ಮರ್ಮ ’ ಎಂದರೆ ಮೊಮ್ಮಗ ಎಂಬ ವಿಶೇಷ ಸಂಗತಿಯನ್ನು, ಅಧಿಕ ಪದಗಳ ಸೇರ್ಪಡೆಯಿಂದ ಸ್ಪಷ್ಟೀಕರಿಸಿದೆ, ಎಂದು ಇಟ್ಟುಕೊಳ್ಳುವದು ಯುಕ್ತವಾಗಿ ತೋರುತ್ತದೆ. ಇಂಥ ಪ್ರಯೋಗವು ಅಂದಿನ ನಿರೂಪಣ ಶೈಲಿಗೆ ಸ್ವಾಭಾವಿಕವಾದುದು. ಈಗಿನ ಉದಾಹರಣೆಯಿಂದ ಹೇಳುವುದಾದರೆ ಇದು ‘ ರಾಮನ, ಜನಕನ ಮೊಮ್ಮಗ, ಸೀತೆಯ ಮಗಲವ ’ ಎಂಬ ವಾಕ್ಯದಂತಿದೆ. ಇದನ್ನು ರಾಮನ, ಸೀತೆಯ

ಮಗ, ಜನಕನ ಮೊಮ್ಮಗ ಲವ, ಎಂದು ಅನ್ವಯಿಸಿಕೊಳ್ಳಬಹುದು. ಅನಾವಶ್ಯಕ ಪದಗಳನ್ನು ಬಳಸದೆ ಇರುವದು ಪ್ರೌಢ ಸಾಹಿತ್ಯ ಶೈಲಿಯ ಒಂದು ಗುಣ. ಈ ಸಮನ್ವಯದಂತೆ ಜೋಯಿಸ ಸಿಂಘನ ಮಗಳು ಅಬ್ಬಣಬ್ಬೆ, ಆಕೆಯ ಮಗ ಜಿನವಲ್ಲಭ ಎಂಬ ಅಂಶವು ನಿಷ್ಪನ್ನವಾಗುತ್ತದೆ. ಡಾ|| ವೆಂಕಟರಮಣಯ್ಯ, ಡಾ|| ಹಿರೇಮಠ, ಪ್ರೊ|| ಕುಲಕರ್ಣಿ ಅವರು ಇದೇ ಅಭಿಪ್ರಾಯವನ್ನು ಗ್ರಹಿಸಿದ್ದಾರೆ.

ಶ್ರೀ ಕಲಬುರ್ಗಿ ಅವರು ತಮ್ಮದೇ ಮಾರ್ಗವನ್ನು ಹೂಡಿದರು. ಶಾಸನ ಪಾಠವು ಅಸಮರ್ಪಕವಾಗಿದೆ ಎಂದು ಹೇಳಿ ಅದರಲ್ಲಿ ತಮ್ಮ ಕಲ್ಪನೆಯ ಎರಡು ಪದಗಳನ್ನು ಸೇರಿಸಿದರು. ' ಭೀಮಪಯ್ಯನ ' ಪದದ ಮುಂದೆ ' ಮಗಂ ' ಎಂಬ ಪದವನ್ನು ಇಟ್ಟರು. 'ಜೋಯಿಸ ಸಿಂಘನ' ಪದದ ಮುಂದಿನ 'ಮರ್ಮಂ' ಎಂಬ ಪದವನ್ನು 'ಮರ್ಮಳ್' ಎಂದು ತಿದ್ದಿದರು. ಹೀಗೆ ಮಾಡಿದ ಬಳಿಕ ಅಬ್ಬಣಬ್ಬೆ ಜೋಯಿಸ ಸಿಂಘನ ಮೊಮ್ಮಗಳಾಗುತ್ತಾಳೆ, ಮಗಳಲ್ಲ ಎಂದು ವಾದಿಸಿದರು (ಕನ್ನಡ ನುಡಿ, ಮೇ ೧೯೭೮). ಹೀಗೆ ವಾದಿಸುವ ಕಾಲಕ್ಕೆ ಅವರಿಗೆ ಶಾಸನಾಧಾರವಿರಲಿಲ್ಲ ಎಂಬ ಮಾತು ಲಕ್ಷಿಸಬೇಕಾದುದು, ಅದು ಈಗಲೂ ಇಲ್ಲ ಎಂಬ ವಿಷಯ ಬೇರೆ. ಆದರೆ, ಇಂಥ ತಿದ್ದುಪಡಿ ವಿಚಾರಯುಕ್ತ ಅಲ್ಲವೆಂದು, ಆಧಾರವಿಲ್ಲದೆ ಸ್ವಕಲ್ಪನೆಯಿಂದ ಶಾಸನಪಾಠವನ್ನು ತಿದ್ದುವುದು ಸಾಹಸವೆಂದು ನಾನು ಸೂಚಿಸಿದೆನು (ಕನ್ನಡ ನುಡಿ, ಆಗಸ್ಟ ೧೯೭೮).

ನನ್ನ ಅಭಿಪ್ರಾಯವನ್ನು ಆಹ್ವಾನಿಸಿ, ಶ್ರೀ ಕಲಬುರ್ಗಿ ಅವರು ಅಲ್ಲಲ್ಲಿ ಅಲೆದಾಡಿ, ನಾಲ್ಕಾರು 'ಶಾಸನತಜ್ಞ' ರೊಂದಿಗೆ ಚರ್ಚಿಸಿ, ಮೂಲಶಾಸನದಲ್ಲಿ ಸ್ವಪ್ರತಿಭೆಯಿಂದ ಸೂಚಿಸಿದ 'ಜೋಯಿಸ ಸಿಂಘನ ಮರ್ಮಳ್' ಎಂಬ ಪಾಠವಿದೆ, ಎಂದು ಪ್ರತಿಪಾದಿಸಿದರು (ಕನ್ನಡ ನುಡಿ, ಫೆಬ್ರವರಿ ೧೯೭೯).

ಈ ವಾದವು ಹೀಗೆ ಒಂದು ಕೊನೆಯ ಘಟ್ಟಕ್ಕೆ ಬಂದು ನಿಂತಂತಾಯಿತು. ಆ ಘಟ್ಟದಲ್ಲಿರುವ ಕೇಂದ್ರ ಸ್ಥಾನವು 'ಮರ್ಮವಬ್ಬಣಬ್ಬೆ ಎಂಬ ಶಾಸನಪಾಠವು ಈ ಆರು ಅಕ್ಷರಗಳಲ್ಲಿ ಮೂರು ಅಕ್ಷರವು 'ವ'ಕಾರವೊ 'ಳ'ಕಾರವೋ ಎಂಬುದೇ ಸಮಸ್ಯೆಯ ವಿಷಯ. ಮೂಲ ಅಕ್ಷರವು 'ಳ'ಕಾರವೆಂಬುದೇ ಶ್ರೀ ಕಲಬುರ್ಗಿ ಅವರ ಅಟ್ಟಹಾಸ (ಕನ್ನಡ ನುಡಿ, ಫೆಬ್ರವರಿ ೧೯೭೯). ಇನ್ನು ಈ ವಿಷಯ ತೀರ್ಮಾನವಾಗಬೇಕಾದರೆ ಅಭಿಮಾನ-ಅಟ್ಟಹಾಸಗಳು ಅಪ್ರಯೋಜಕ. ಶಾಸನಗಳ ವಾಚನ-ಸಂಶೋಧನದಲ್ಲಿ ಆಳವಾದ ಅಭ್ಯಾಸ, ದೀರ್ಘಕಾಲದ ಅನುಭವ ಪಡೆದ ಅಲ್ಪಜ್ಞನ ಒಂದು ಸ್ಪಷ್ಟೀಕರಣವೇ ಸಾಕು.

ಈ ವಾದವು ಕೊನೆಯ ಘಟ್ಟಕ್ಕೆ ಬಂದಿರುವಾಗ ಸುದೈವದಿಂದ ಆಂಧ್ರಪ್ರದೇಶ ಸರ್ಕಾರದ ಪುರಾತತ್ವ ವಿಭಾಗದ ಮುಖ್ಯಾಧಿಕಾರಿಗಳು ಔದಾರ್ಯದಿಂದ ಕಳಿಸಿಕೊಟ್ಟ ಮೂಲ ಶಾಸನದ ಪರಿಶುದ್ಧವಾದ ಮುದ್ರಾಪ್ರತಿ ನನ್ನ ಕೈಸೇರಿತು. ಅದರ ಸಹಾಯದಿಂದ ಶಾಸನ ಪಾಠವನ್ನು ವಿಮರ್ಶಾಪೂರ್ವಕ ಓದಿದಾಗ ಆ ಆರು ಅಕ್ಷರಗಳು 'ಮರ್ಮವಬ್ಬಣಬ್ಬೆ' ಎಂದು ಮಾತ್ರ ಇವೆ. ಅಲ್ಲದೆ 'ಮರ್ಮಳಬ್ಬಣಬ್ಬೆ' ಎಂದು ಸರ್ವತಃ ಇಲ್ಲ, ಎಂಬ ಸಂಗತಿ ಸ್ಫುಟವಾಯಿತು.

ನಮ್ಮ ದೇಶದಲ್ಲಿ ವಿಶ್ವವಿದ್ಯಾಲಯಗಳ ಬೆಳೆ ಹುಲುಸಾಗಿ ಬಂದಂತೆ, ಪಾಂಡಿತ್ಯ ಪ್ರತಿಷ್ಠೆಯ ವನಮಹೋತ್ಸವವು ವಿಜೃಂಭಿಸುತ್ತಲಿದೆ. ಇದರಿಂದಾಗಿ ನಿಮಿಷ ಪಂಡಿತರ, ಕ್ಷಿಪ್ರ ಪ್ರಾಧ್ಯಾಪಕರ, ಶೀಘ್ರ ಸಂಶೋಧಕರ, ತತ್‌ಕ್ಷಣ ತಜ್ಞರು ಹೆಚ್ಚುತ್ತಲಿದ್ದಾರೆ.

ಸಾವಿರಾರು ಶಾಸನಗಳ ವಾಚನ ಮಾಡಿ, ಹಲವು ದಶಕಗಳವರೆಗೆ ಶಾಸನ ವಿದ್ಯೆಯಲ್ಲಿ ಪರಿಶ್ರಮಪಟ್ಟು, ಜೀವನವನ್ನು ಸವೆಯಿಸಿದ್ದರೂ ಇನ್ನೂ ಅಲ್ಪಜ್ಞರೆಂದು ಪ್ರಾಮಾಣಿಕವಾಗಿ ಭಾವಿಸುವ ಅನರ್ಹರು ಎಲ್ಲಿಯೋ ಹಿಂದೆ ಉಳಿದಿದ್ದಾರೆ. ಸ್ವಯಂ ಬುದ್ಧಿಯಿಂದ ಒಂದಾದರೂ ಮೂಲ ಶಾಸನವನ್ನು ಸಂಶೋಧಿಸಿ, ಅದರ ವಾಚನ ಪಾಠವನ್ನು ಪ್ರಕಟಿಸದ ಮಹಾನುಭಾವರು ಶಾಸನಕೋವಿದ ಪ್ರಾಧ್ಯಾಪಕರಾಗಿ ವಿಹರಿಸುತ್ತಿರುವರು. ಶ್ರೀ ಕುಲಬರ್ಗಿ ಅವರು ಸ್ವತಃ ಶಾಸನ ಪಂಡಿತರು. ಅವರಿಗೆ, ಅವರು ಕಲ್ಪಿಸಿದ 'ಳ' ಅಕ್ಷರದ ಬಗೆಗೆ ಘನವಾದ ಸಲಹೆಗಳನ್ನು ಕೊಟ್ಟ ಮಹಾಪಂಡಿತರೆಲ್ಲರಿಗೆ ನನ್ನ ದಂಡಪ್ರಣಾಮಗಳು. ನನ್ನ ಅಲ್ಪಮತಿಯಂತೆ ಆ 'ಳ' ಅಕ್ಷರದ ಜಿಜ್ಞಾಸೆ ಇಂತಿದೆ.

ಶಾಸನ ವಾಚನದಲ್ಲಿ ಪರಿಶ್ರಮವುಳ್ಳವರು ಶಾಸನದಲ್ಲಿ ಯಾವುದೇ ಒಂದು ಅಕ್ಷರ ಕುರಿತು ಎಲ್ಲಿಯಾದರೂ ಸಂದೇಹ ಉಂಟಾದರೆ ಅದರ ಪರಿಹಾರಕ್ಕೆ ಶಾಸ್ತ್ರಪೂತವಾದ ಈ ಮಾರ್ಗವನ್ನು ಅನುಸರಿಸುವರು: ಆ ಅಕ್ಷರವು ಅದೇ ಶಾಸನದಲ್ಲಿ ಬಂದಿರುವ ಪದಗಳಲ್ಲಿನ ಸ್ಥಳಗಳನ್ನು ತುಲನಾತ್ಮಕವಾಗಿ ಪರೀಕ್ಷಿಸುವರು; ಬಳಿಕ ಅದರ ಯಥಾರ್ಥ ಸ್ವರೂಪವನ್ನು ನಿರ್ಧರಿಸುವರು. ಈ ಕ್ರಮವನ್ನು ಅನುಸರಿಸಿ ಗಂಗಾಧರಂ ಶಾಸನದಲ್ಲಿ ಬೇರೆ ಬೇರೆ ಪಂಕ್ತಿಗಳಲ್ಲಿ, ಬೇರೆ ಬೇರೆ ಪದಗಳಲ್ಲಿ ಬರುವ 'ವ' ಮತ್ತು 'ಳ' ಈ ಅಕ್ಷರ

ಗಳನ್ನು ಕೂಲಂಕಷವಾಗಿ ಪರೀಕ್ಷಿಸಿದೆನು. ಪರೀಕ್ಷೆಯ ಫಲಿತಾಂಶವು ಹೀಗೆ:

'ವ' ಮತ್ತು 'ಳ' ಈ ಅಕ್ಷರಗಳ ರೀತಿ, ರಚನೆ ಬೇರೆ ಬೇರೆಯಾಗಿವೆ. 'ವ' ಅಕ್ಷರದ ಬಲರೇಖೆ ಮುಖ್ಯವಾಗಿ ತಲೆಕಟ್ಟಿಗೆ ಹೊಂದಿಕೊಂಡು ಬಲಗಡೆ ಒಲಿದು, ಕೆಳಗೆ ಬಂದು ಎಡಗಡೆ ಅರ್ಧರೇಖೆಯಾಗಿ ಹೊರಳುತ್ತದೆ. ಬಳಿಕ ಮೇಲುಗಡೆ ತಿರುಗಿ, ಬಲಮುರಿಯಾಗಿ ಆ ಬಲರೇಖೆಗೆ ಬಂದು ಕೂಡಿಕೊಳ್ಳುತ್ತದೆ. ಈ ಎಡಭಾಗವು ತಲೆಕಟ್ಟಿಗೆ ಸೇರದೆ ಸ್ಪಷ್ಟವಾಗಿ ಕೆಳಗಿನ ಅಂತರದಲ್ಲಿ ಉಳಿಯುತ್ತದೆ. ಇದು ಇದರ ಪ್ರತ್ಯೇಕತೆ.

'ಳ' ಅಕ್ಷರದ ಒಲವು ಎಡಗಡೆ ಮಾತ್ರ. 'ವ' ಅಕ್ಷರದಂತೆ ತಲೆಕಟ್ಟಿನಿಂದ ಕೆಳಗೆ ಇಳಿಯುವ ಬಲರೇಖೆ ಅದಕ್ಕೆ ಇರುವದೇ ಇಲ್ಲ. 'ಳ' ಅಕ್ಷರದ ತಲೆಕಟ್ಟಿನಿಂದ ಹೊರಡುವ ರೇಖೆ ಎಡಗಡೆ ಒಲಿದು ಕೆಳಗೆ ಬಂದು ವಕ್ರವಾಗಿ ಪುನಃ ಬಲಕ್ಕೆ ತಿರುಗಿ, ಕೊನೆಗೆ ಮತ್ತೆ ಕೊಂಕಾಗಿ ಕೆಳಗಡೆ ಸ್ವಲ್ಪ ಎಡಕ್ಕೆ ಬಂದು ನಿಲ್ಲುವದು. ಇದು ಇದರ ಪ್ರತ್ಯೇಕತೆ. ಶಾಸನ ಶಾಸ್ತ್ರದಲ್ಲಿ ಪರಿಶ್ರಮ ಉಳ್ಳವರು ಈ ಎರಡು ಅಕ್ಷರಗಳನ್ನು ಸ್ಪಷ್ಟವಾಗಿ ಬೇರೆ ಬೇರೆಯಾಗಿ ಗುರುತಿಸುವರು, ಅವುಗಳಲ್ಲಿ ತೊಡಕು ಗೊಂದಲವಿಲ್ಲ. ಆಸಕ್ತಿ, ಅರ್ಹತೆ ಉಳ್ಳವರು ಈ ಗಂಗಾಧರಂ ಶಾಸನದಲ್ಲಿ ಬರುವ ಎಲ್ಲ 'ವ' ಕಾರಗಳ ಮತ್ತು 'ಳ'ಕಾರಗಳ ಪಟ್ಟಿಯನ್ನು ಮಾಡಿ ಅವುಗಳನ್ನು ಸೂಕ್ಷ್ಮವಾಗಿ ಪರಾಮರ್ಶಿಸಬಹುದು.

ಇಲ್ಲಿ ಕ್ಷಿಪ್ರಾವಲೋಕನಕ್ಕಾಗಿ ಶಾಸನದ ಎರಡನೆಯ ಪಂಕ್ತಿಯಲ್ಲಿ ಬರುವ 'ವಬ್ಬಣಬ್ಬೆ' ಪದವನ್ನು ಇದ್ದಕ್ಕಿದ್ದ ಆಕಾರದಲ್ಲಿ ಈ ಕೆಳಗೆ ಕೊಡುತ್ತೇನೆ. ಜೊತೆಗೆ ಶಾಸನದ ಒಂದನೆಯ ಪಂಕ್ತಿಯಲ್ಲಿ ಬರುವ 'ಕಳಾಳಾಪ' ಎಂಬ ಪದದ ಮೂಲ ಪ್ರತಿಯನ್ನು ಅದೇ ಆಕಾರದಲ್ಲಿ ಉದಾಹರಿಸುತ್ತೇನೆ.



ವಬ್ಬಣಬ್ಬೆ



ಕಳಾಳಾಪ

ಈ ಅಕ್ಷರಾಕೃತಿಗಳನ್ನು ಪರಿಕ್ಷಿಸಿದರೆ 'ವ'ಕಾರ 'ಳ' ಕಾರಗಳ ಭೇದವು ಸ್ಪಷ್ಟವಾಗುವುದು. ಮೊದಲ ಪದದ 'ವ' ಅಕ್ಷರದ ಕೆಳಗೆ ಒಂದು ಚಿಕ್ಕಗೆರೆ ಮೂಡಿದಂತಿದೆ. ಇದು ಕಲ್ಲಿನ ದೋಷವೆಂಬುದನ್ನು ಶಾಸನತಜ್ಞರು ಸುಲಭವಾಗಿ ತಿಳಿಯುವರು. ಈ ಶಾಸನದ ಗುಡ್ಡದಕಲ್ಲು ಒರಟಾಗಿರುವುದರಿಂದ ಇಂಥ ಅಸ್ವಾಭಾವಿಕ ಸರಳ–ವಕ್ರ ಗೆರೆಗಳು, ಚುಕ್ಕೆಗಳು ಮುಂತಾದವು ಶಾಸನದ ತುಂಬ ಹಬ್ಬಿಕೊಂಡಿವೆ. ಬಲ್ಲವರು ಅವುಗಳನ್ನು ವರ್ಜಿಸುವರೇ ಹೊರತು, ಬರವಣಿಗೆಯ ಅಂಗವೆಂದು ಸರ್ವತಃ ಭ್ರಮಿಸರು.

ಇದಿಷ್ಟು ಶಾಸ್ತ್ರಸಂಮತ, ಶಾಸ್ತ್ರೀಯ ವಿವೇಚನೆ, ತಿಳಿದವರಿಗೆ ಒಂದೇ ದಾರಿ; ಅದು ತಿಳಿವಳಿಕೆಯ ಶಾಸ್ತ್ರದ ದಾರಿ. ಸ್ವಯಂ ಪ್ರತಿಭೆಯ ಶಾಸನ ಪಂಡಿತರಿಗೆ ನೂರು ದಾರಿ. ಏಕೆಂದರೆ ಅವರಿಗೆ ಕಡಿವಾಣವಿಲ್ಲದ ಕಲ್ಪನಾ ಕುದುರೆಯ ಬಲವಿದೆಯಲ್ಲವೆ? ಒಂದು ಸಂಸ್ಕೃತ ಸುಭಾಷಿತದ ವಾಕ್ಯದಿಂದ ಈ ನನ್ನ ಲೇಖನವನ್ನು ಮುಗಿಸುವೆ; ಈ ವಾದಕ್ಕೂ ವಿರಾಮ ಸೂಚಿಸುವೆ.

'ಬ್ರೂಹಿ ಸಿಂಹೋ ಮಯಾ ಜಿತಃ'

---

# ಜಿನವಲ್ಲಭನ ಗಂಗಾಧರಂ ಶಾಸನವನ್ನು ಕುರಿತು ಓದುಗನೊಬ್ಬನ ಪ್ರಶ್ನೆಗಳು

ಸೀತಾರಾಮ ಜಾಗೀರದಾರ್

ಆಂಧ್ರ ಪ್ರದೇಶದ ಕರೀಮ್‌ನಗರ ಜಿಲ್ಲೆಗೆ ಸೇರಿದ 'ಗಂಗಾಧರಂ' ಎಂಬಲ್ಲಿ ಪಂಪನ ತಮ್ಮನೆಂದು ಹೇಳಿಕೊಂಡಿರುವ ಜಿನವಲ್ಲಭನ ಶಿಲಾಶಾಸನವು ದೊರೆತ ಮೇಲೆ ಪಂಪನ ತಂದೆ, ತಾಯಿ, ತಮ್ಮ, ಅಜ್ಜ, ದೇಶ, ಕಾಲ ಇತ್ಯಾದಿಗಳ ಬಗೆಗೆ ಕೆಲ ಹೊಸ ವಿಷಯಗಳು ಹೊರಬಿದ್ದಂತಾಗಿದೆ. ವಿದ್ವಾಂಸರಲ್ಲಿ ಉತ್ತರ ಮಾರುತ್ತರಗಳು ನಡೆದಿವೆ. ಸಾಮಾನ್ಯ ಮನುಷ್ಯರಿಗೂ ಒಮ್ಮೊಮ್ಮೆ ಇಂತಹ ಉತ್ತರ ಮಾರುತ್ತರಗಳನ್ನು ಕಂಡು ಅದನ್ನು ಖಚಿತವಾಗಿ ತಿಳಿದುಕೊಳ್ಳುವ ಹಂಬಲ ಉಂಟಾಗುತ್ತದೆ. ಅಂತಹ ಒಂದು ಪ್ರಯತ್ನ ಇದು. ಕಾರಣ ಈ ವಿದ್ವಾಂಸರುಗಳು ನನ್ನ ಸಂದೇಹಗಳಿಗೆ, ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಟ್ಟರೆ ಅವರಿಗೆ ಓದುಗರೆಲ್ಲರ ಪರವಾಗಿ ಎಂದು ಹೇಳದಿದ್ದರೂ ನಾಂನತೂ ಋಣಿ ಎಂದು ನಮ್ರನಾಗಿ ಹೇಳುವೆ.

ಗಂಗಾಧರದ ಶಾಸನವು ಪಂಪನನ್ನು ಕುರಿತದ್ದಾಗಿದೆಯೆ?[1]

ಈ ಶಾಸನದ ಪಡಿಯಚ್ಚನ್ನು ನೋಡಲು ಹೈದರಾಬಾದಿಗೆ ಪ್ರಯಾಣ ಮಾಡಿದವರು ಇನ್ನೊಂದು ನೂರು ಮೈಲು ಮುಂದಕ್ಕೆ ಹೋಗಿ "ಗಂಗಾಧರಂ"ದಲ್ಲಿರುವ ಶಾಸನವನ್ನು ಟಂಕೋತ್ಕೀರ್ಣ ಮಾಡಿದ ಗಂಡ ಶಿಲೆಯನ್ನು ಕಂಡಿರುವರೆ? ಅಲ್ಲಿ 'ವ' ಕಾರದ ಮೇಲೆ ಕಚ್ಚು ಬಿದ್ದಿರುವುದೇ?[2]

ಮೊದಲ ಬಾರಿಗೆ ತಂದ ಪಡಿಯಚ್ಚುಗಳಲ್ಲಿ (ಶಾಸನ ಪ್ರತಿಗಳಲ್ಲಿ) ಬಿಂದುವು ಇಲ್ಲವೆಂಬುದು ನಿರಾಧಾರ. ಆದರೆ ಅದು ಸ್ಪಷ್ಟ ಬಂದಿಲ್ಲವೆಂಬುದು ಸತ್ಯ. ಸ್ಪಷ್ಟ ಬಾರದಿದ್ದುದರಿಂದ ಊಹೆಯ ಚಿನ್ನೆಯಲ್ಲಿ ಬಿಂದುವನ್ನು ಸೇರಿಸಿದ ಮಾನ್ಯ ಡಾ|| ಎನ್. ವೆಂಕಟರಮಣಯ್ಯನವರು ಡಾ|| ಪಿ. ಬಿ. ದೇಸಾಯಿ ಅವರ ಕೇಳಿಕೆಯ ಪ್ರಕಾರ ಹೊಸ ಪ್ರತಿಗಳನ್ನು ತರಿಸಿ ಅವರ ಅವಗಾಹನೆಗೆ ಕಳಿಸಿರುವರು. ಹೀಗೆ ತರಿಸಿದ ಪ್ರತಿಯೊಂದರಲ್ಲಿ ಬಿಂದು ಸ್ಪಷ್ಟವಾಗಿ ಮೂಡಿದೆ. ಕಾರಣ ಮೂಲದಲ್ಲಿ ಬಿಂದು ಇದೆಯೆಂದು ಡಾ|| ವೆಂಕಟರಮಣಯ್ಯನವರು ಖಚಿತಗೊಳಿಸಿದ್ದಾರಲ್ಲ. ಇದರತ್ತ ಅವರ ಲಕ್ಷ್ಯ ಹರಿದಿದೆಯೆ? ಇನ್ನು ಡಾ|| ಜಿ. ಎಸ್. ಗೈ ಅವರೂ ಈ ಶಾಸನದ ಪ್ರತಿ ಮಾಡಿಸಿ ತರಿಸಿರುವರಂತೆ. ಆ ಪ್ರತಿಗಳನ್ನು ನೋಡಿ ಲಿಪಿತಜ್ಞರು ಇನ್ನು ಯಾವ ನಿರ್ಧಾರ ಇತ್ತಂತಿಲ್ಲ. ಇವುಗಳ ಗತಿಯೇನು?

ಈ ಶಾಸನದಲ್ಲಿ 'ಳ'ಕಾರಗಳು ಮತ್ತು 'ವ' ಕಾರಗಳು ಎಷ್ಟು ಸಲ ಬಂದಿವೆ ಮತ್ತು ಅವುಗಳಲ್ಲಿರುವ ಸಾಮ್ಯಾಸಾಮ್ಯಾತೆಗಳೆಷ್ಟು? ಒಂದೆಡೆ ಇರುವ 'ಳ'ಕಾರಕ್ಕೆ ಇನ್ನೊಂದೆಡೆಯ 'ಳ'ಕಾರ, ಒಂದೆಡೆಯ 'ವ' ಕಾರಕ್ಕೆ ಇನ್ನೊಂದೆಡೆಯ 'ವ'ಕಾರ ಆದೇ ಕಾಲದಲ್ಲಿ ಬರೆಯಲಾಗಿದ್ದರೆ ಅವು ರೂಪ ದೃಷ್ಟಿಯಿಂದ ಭಿನ್ನವಾಗಿರುತ್ತವೆಯೆ ಹೇಗೆ? 'ವ'ಕಾರ ಇಲ್ಲವೆ 'ಳ'ಕಾರ (?) ಇದಕ್ಕೆ 'ನಬ್ಬಣಬ್ಬೆ' ಎಂಬಲ್ಲಿನ 'ಬ್ಬ'ದ ಒತ್ತು ಹಿಂದಿನ ಅಕ್ಷರದ ಜೊತೆಗೆ ಬೆರೆತಿಲ್ಲವೆ ಹೇಗೆ? ಶಾಸನಾಕ್ಷರಗಳು ಭಿನ್ನ ರೂಪಗಳನ್ನು ತಳೆದರೆ ಕಾಲ ದೃಷ್ಟಿಯಿಂದ ಅದನ್ನು ಯಾವ ಶತಮಾನದ್ದೆಂದು ನಂಬಬಹುದು? 'ಭಾರತಿ'ಯಲ್ಲಿ ಶಾಸನದಷ್ಟು ಸ್ಫುಟವಾಗಿ ಬಂದಿದೆಯೆ? ಬಂದಿಲ್ಲನೆಂದರೆ ಅದನ್ನು ನೋಡಿ ಇತ್ತ ಅಭಿಪ್ರಾಯವನ್ನು ನಂಬುವುದೆಂತು?

'ಮರ್ಮ' ಇದು ಕನ್ನಡ ಶಬ್ದವೆ ಅಥವಾ ತೆಲುಗು ಶಬ್ದವೆ? ಪಂಪನು ಈ ಶಬ್ದವನ್ನು ಎಲ್ಲಾದರೂ ಈ ರೂಪದಲ್ಲಿ ಬಳಸಿರುವನೆ ಹೇಗೆ? ಮರ್ಮಂ + ಅಬ್ಬಣಬ್ಬೆ= 'ಮರ್ಮವಬ್ಬಣಬ್ಬೆ'[3] ಆಗಿದೆ ಎಂದು ಹೇಳುವಲ್ಲಿ ಆದ

---

1 ಎಂ. ಎಂ. ಕಲ್ಬುರ್ಗಿ ಇವರ ಲೇಖನ 'ಪಂಪನನ್ನು ಕುರಿತ ಗಂಗಾಧರಂ ಶಾಸನ–ಒಂದು ತಿದ್ದುಪಡಿ', 'ಕನ್ನಡ ನುಡಿ' ಏಪ್ರಿಲ್–ಮೇ ೧೯೬೮ ಸಂಪುಟ ೩೧–ಸಂ. ೪-೫ ಪುಟ ೨೩

2 ಅವರೇ–'ಅಬ್ಬಣಬ್ಬೆ ಮಗಳಲ್ಲ; ಮೊಮ್ಮಗಳು'–'ಕನ್ನಡ ನುಡಿ' ಸಂಪುಟ ೩೨–ಸಂಚಿಕೆ ೨–ಫೆಬ್ರವರಿ ೧೯೬೯.

3 ಡಾ|| ಪಾಂಡುರಂಗರಾವ್ ದೇಸಾಯಿ, 'ಕನ್ನಡ ನುಡಿ'– ಏಪ್ರಿಲ್–ಮೇ ೧೯೬೮.

ಸಂಧಿ ಯಾವುದು ? 'ಮರ್ಮಂ+ಅಬ್ಬಣಬ್ಬೆ' ಇದುವೆ ಸಂಧಿಯಿಂದ ರೂಪತಾಳಿ ಆಗುವ ಶಬ್ದವೆಂದರೆ 'ಮರ್ಮ-ವಬ್ಬಣಬ್ಬೆ' ಅಲ್ಲವೆ ಹೇಗೆ ?

'ಅಬ್ಬಣಬ್ಬೆ' ಎಂಬ ರೂಪ ಬೇರೆ ಇನ್ನಾವ ಶಾಸನ ಅಥವಾ ಶಾಸನಗಳಲ್ಲಿ ಬಳಸಲಾಗಿದೆಯೆ ? ಹೇಗೆ? 'ಅಬ್ಬಲಬ್ಬೆ' ಇದು 'ಅಬ್ಬಲೆ', 'ಅಬ್ಬಲು', 'ಅಬ್ಬಲನ್ಮ' 'ಅಬ್ಬಲೂರು' ಈ ರೀತಿಯಲ್ಲಿ ಬಳಸಲಾದುದು ಕಂಡು ಬರುತ್ತದೆ ವಿನಾ 'ಅಬ್ಬಣಬ್ಬೆ' ಎಂಬ ರೂಪದಲ್ಲಿ ಬಳಸಿದಂತೆ ತೋರುವದಿಲ್ಲ. ಇನ್ನೆಲ್ಲಿಯೂ ಇದನ್ನು ಬಳಸಿದುದು ಕಂಡು ಬರದಿದ್ದರೆ ಇದೊಂದೆಡೆಯಲ್ಲಿ 'ಅಬ್ಬಣಬ್ಬೆ' ಆಗಿದೆಯೆಂದು ಹೇಳುವುದು ಸರಿಯಾದುದೇ ?

ಪಂಪನು ಜಿನವಲ್ಲಭನ ಏಕೋದರ ಭ್ರಾತೃವೆ ಹೇಗೆ ? ಅವನು ಈ ಶಾಸನದ ರಚನೆಯ ಕಾಲದಲ್ಲಿ ಬದುಕಿದ್ದನೆನ್ನುವದಕ್ಕೆ ಏನು ಆಧಾರ ? ಅವನು ಬದುಕಿದ್ದರೆ ಜಿನವಲ್ಲಭನು ತನ್ನನ್ನು 'ವಾಗ್ವಧೂವರ ವಲ್ಲಭಂ' ಎಂದು ಹೇಳಿಕೊಳ್ಳುವುದಕ್ಕೆ ಸಾಹಸ ಮಾಡಬಹುದೆ ಹೇಗೆ? 'ವಾಗ್ವಧೂವರ ವಲ್ಲಭಂ' ಎನ್ನುವ ಮಾತು ಪಂಪನು ಹೇಳುವ ಆತನ ಬಿರುದಾದ "ಸರಸ್ವತೀ ಮಣಿಹಾರಂ" ಎಂಬುದಕ್ಕಿಂತಲೂ ಹೆಚ್ಚು ಬೆಲೆಯುಳ್ಳದಾಗಿ ತೋರುವುದಿಲ್ಲವೆ? ಅಣ್ಣನು ಬದುಕಿದ್ದಾಗ ತಮ್ಮನೊಬ್ಬನು ಇಷ್ಟು ಆತ್ಮಪ್ರತ್ಯಯ ಮೆರೆಯಬಹುದೆ ?

---

## ಸರಸತಿಯು ಸದನದಲಿ ಸೆಣಸಾಟವೇಕೆ?

•

ಗೆಯ್ವುದೆಲ್ಲರು ಒಂದೆ ತಾಯಿಯ ಸೇವೆ
ಎಂದರಿತು ಬರಿದೆ ಸೆಣಸಾಡಲೇಕೆ ?
ಯಾರು ಮೊದಲಾದರೇನಂತೆ ಸೇವೆಯಲಿ
ಒಂದೆ ಮನೆಯಲಿ ನೂರು ಬಿರುಕು ಬೇಕೆ ?

ನಾ ಮೊದಲು ನೀ ಕಡೆಗೆ ಎಂಬ ಗೊಂದಲವೇಕೆ ?
ನಿನ್ನ ತಮ್ಮನ ತುಳಿದು ಜಿಗಿಯಬೇಕೆ ?
ಸುತ್ತ ಕಾಣುವ ಗಗನಕೇಕಿಂತು ಈ ಕುತುಕ
ಮೈಮರೆದು ಮರೆತೆಯಲಾ ತಾಯ ತವಕ

ನಿನಗಿಂತ ಮೊದಲೆನಿತೊ ಜನ ಬಂದು ಹೋಗಿಹರು
ಛಲದಲ್ಲಿ ಬಲದಲ್ಲಿ ನಿನ್ನ ಮೀರಿಹರು !
ಮೌನದಲಿ ಮಮತೆಯಲಿ ನುಡಿನಾಡ ಸೇವೆಯಲಿ
ಜೀವ-ತೈಲವನೆರೆದು ಜ್ಯೋತಿ ಬೆಳಗಿಹರು

ಕೈಮುಗಿದು ಬಾ ಬಂಧು ಭಾರತಿಯ ಮಂದಿರಕೆ
ದ್ವೇಷ-ಕಲಹವ ತೊಱೆದು ತಾಯ ಅಡಿಗೆ
ಒಂದೆ ನುಡಿ ; ಒಂದೆ ಗುಡಿ ; ಒಂದಾಗದಿರಲೇಕೆ ?
ಸರಸತಿಯ ಸದನದಲಿ ಸೆಣಸಾಟವೇಕೆ ?

•

**ಕೆ. ಆರ್. ಗಣೇಶರಾವ್**

# ಕನ್ನಡದ ಮೊತ್ತಮೊದಲ ಸಾಮಾಜಿಕ ಕಾದಂಬರಿ

**ವಿದ್ಯಾಶಂಕರ**

ಕನ್ನಡ ಕಾದಂಬರೀ ಕ್ಷೇತ್ರದ ಪ್ರಾರಂಭದ ದಿನಗಳನ್ನು ನೆನೆಸಿಕೊಂಡಾಗ ಎರಡು ಹೆಸರುಗಳು ನಮ್ಮ ಮನಃಪಟಲದಲ್ಲಿ ಮೂಡುತ್ತವೆ. ಒಂದು ಬಿ. ವೆಂಕಟಾಚಾರ್ಯರದು; ಮತ್ತೊಂದು ಗಳಗನಾಥರದು. ಕನ್ನಡದ ಕ್ಷೇತ್ರ ತೀರ ಅವಜ್ಞೆಗೆ ಒಳಗಾಗಿದ್ದ ಒಂದು ಕಾಲದಲ್ಲಿ ಪರಭಾಷೆಯ ಕೃತಿಗಳಿಂದ ಸ್ಫೂರ್ತಿಪಡೆದು ಕನ್ನಡದಲ್ಲಿ ಇವರು ಬರೆಯ ಹೊರಟುದು ಸಾಹಸದ ಮಾತು. ತಮ್ಮ ಮಡಿವಂತಿಕೆಯ ಪಾಂಡಿತ್ಯದ ಸೀಮೆಯಿಂದ ಹೊರಬರದ ಪಂಡಿತವರ್ಗ, ಆಂಗ್ಲ ಸಾಹಿತ್ಯವನ್ನು ಓದಿ ಬಹಳವಾಗಿ ಮೆಚ್ಚಿಕೊಂಡು 'ಕನ್ನಡದಲ್ಲೇನಿದೆ?' ಎಂದು ಮೂಗು ಮುರಿಯುತ್ತಿದ್ದ ಪರಭಾಷಾ 'ಪರಪುಟ್ಟ'ಗಳ ವರ್ಗ-ಬಹುಸಂಖ್ಯಾಬಲವುಳ್ಳ ಈ ಎರಡು ವರ್ಗಗಳ ತಾತ್ಸಾರದಿಂದ ಕನ್ನಡ ನರಳಿತು. ಇಂತಹ ಕಾಲದಲ್ಲಿ ಕನ್ನಡದ ಮೇಲಿನ ಅಭಿಮಾನದಿಂದಲೋ ತಾಯಿ ಭಾಷೆಯ ಮೇಲಿನ ಮಮತೆಯಿಂದಲೋ ಮೇಲೆ ತಿಳಿಸಿದ ಮಹನೀಯರು ಕನ್ನಡ ಕಾದಂಬರೀ ಕ್ಷೇತ್ರದ ಬೆಳವಣಿಗೆಗೆ ಅಪಾರ ಶ್ರಮವಹಿಸಿದರು. ಬಿ. ವೆಂಕಟಾಚಾರ್ಯರು ಬಂಗಾಳದ ಸುಪ್ರಸಿದ್ಧ ಕಾದಂಬರೀಕಾರರಾದ ಬಂಕಿಮಚಂದ್ರರಿಂದ ಸ್ಫೂರ್ತಿ ಪಡೆದರೆ, ಗಳಗನಾಥರು ಮಹಾರಾಷ್ಟ್ರದ ಪ್ರಖ್ಯಾತ ಕಾದಂಬರೀಕಾರ ಹರಿನಾರಾಯಣ ಆಪ್ಟೆಯವರಿಂದ ಪಡೆದರು. ಇವರಿಬ್ಬರ ಕೃತಿಗಳು ಜನಮನವನ್ನು ಸೂರೆಗೊಂಡದ್ದಷ್ಟೇ ಅಲ್ಲದೆ ಇಂದಿನ ಸುಪ್ರಸಿದ್ಧ ಬರಹಗಾರರಿಗೆ ಪ್ರಚೋದಕ ಶಕ್ತಿಯಾಗಿ ನಿಂತುವು. ಇವರ ಪ್ರಭಾವಕ್ಕೆ ಒಳಗಾಗದ ಕನ್ನಡದ ಕಾದಂಬರೀಕಾರರೇ ಇಲ್ಲವೆನ್ನಬಹುದು.

'ಗೋದಾವರಿ' ನಂದಳಿಕೆ ನಾರಣಪ್ಪನ ಅಪೂರ್ಣ ಸಾಮಾಜಿಕ ಕಾದಂಬರಿ. ಅದು ಪೂರ್ಣಗೊಂಡಿದ್ದರೆ ಕನ್ನಡ ಕಾದಂಬರಿಯ ಆಚಾರ್ಯ ಸ್ಥಾನ-ಮಾನ ಪಡೆಯುತ್ತಿತ್ತು. ಅದರ ಅಪೂರ್ಣತೆಯಿಂದಾಗಿ ಕನ್ನಡದಲ್ಲಿ ಮೊದಲು ಕಾದಂಬರಿಯನ್ನು ತಂದ ಶ್ರೇಯಸ್ಸು ಬಿ. ವೆಂಕಟಾಚಾರ್ಯರದಾಯಿತು. ೧೮೮೫ರಲ್ಲಿ ಬಂಕಿಮಚಂದ್ರರ ಪ್ರಖ್ಯಾತ ಕಾದಂಬರಿ 'ದುರ್ಗೇಶನಂದಿನಿ'ಯನ್ನು ಅವರು ಕನ್ನಡಕ್ಕೆ ತಂದರು. ಗಳಗನಾಥರು ಕಾದಂಬರಿ ಬರೆಯ ಹೊರಟದ್ದು ೧೯೦೧ರಲ್ಲಿ. ಅವರು ರಾ. ರಾ. ಹರಿನಾರಾಯಣ ಆಪ್ಟೆಯವರು ಬರೆದ "ಗಡಾ ಆಲಾ, ಪಣ ಸಿಂಹ ಗೇಲಾ!" ಎಂಬ ಹೆಸರಿನ ಮರಾಠೀ ಐತಿಹಾಸಿಕ ಕಾದಂಬರಿಯಿಂದ ಸ್ಫೂರ್ತಿ ಪಡೆದು, ಆ ಕಾದಂಬರಿಯ ಉತ್ಪತ್ತಿಯ ಮೂಲ ಕಾರಣವಾದ ಸಿಂಹಗಡವನ್ನು ಪ್ರತ್ಯಕ್ಷವಾಗಿ ನೋಡಿ, ಕನ್ನಡಕ್ಕೆ ಆಪ್ಟೆಯವರ ಕಾದಂಬರಿಯನ್ನು ತರಬೇಕೆಂಬ ಪ್ರಬಲೇಚ್ಛೆಯಾಗಿ "ಕಮಲಕುಮಾರಿ" ಎಂಬ ಹೆಸರಿನಿಂದ ಭಾಷಾಂತರ ಮಾಡಿ "ಸದ್ಬೋಧ ಚಂದ್ರಿಕೆ" ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಮಾಡಿದರು.

ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಕನ್ನಡಿಗರು ಅನುವಾದಿತ ಕಾದಂಬರಿಗಳ ಮೂಲಕವೇ ತೃಪ್ತಿಪಟ್ಟಂತೆ ಕಾಣಬರುತ್ತದೆ. ಸ್ವಾತಂತ್ರ್ಯ ಪೂರ್ವದ ನಾಡಿನ ಜನತೆಯು ಉತ್ಸಾಹ ಸಾಹಸ ಭರಿತವಾದ ಕಥೆಗಳನ್ನೋದಿ ತಣಿಯುವುದರಲ್ಲಿತ್ತು. ಮೈನವಿರೇಳಿಸುವ ಸಾಹಸ ಪ್ರಣಯಭರಿತ ಕಥೆಗಳು, ಅವುಗಳ ನಾಯಕ ನಾಯಕಿಯರು, ಅಂದಿನವರ ಮನೋಭೂಮಿಕೆಯಲ್ಲಿ ಆದರ್ಶದ, ಮೆಚ್ಚುಗೆಯ ಮೂರ್ತಿಗಳಾಗಿದ್ದರು. ಲೇಖಕರು ಜನತೆಯ ಅಭಿರುಚಿಯನ್ನು ಅರಿತು ಆ ಮಾರ್ಗದಲ್ಲಿಯೇ ನಡೆದು ಜನತೆಯ ಆದರ, ಅಭಿಮಾನ, ಗೌರವಗಳನ್ನು ಗಳಿಸುವಲ್ಲಿ ನಿರತರಾದರು. ಆ ಕಾಲಕ್ಕಾಗಲೇ ಪ್ರಸಿದ್ಧಿಯಾಗಿದ್ದ ಆಂಗ್ಲ ಭಾಷೆಯ ಕಾದಂಬರಿಗಳನ್ನು ಬಿ. ವೆಂಕಟಾಚಾರ್ಯರು ಓದಿದ್ದರೂ ಅವರು ಸ್ವತಂತ್ರ ಸಾಮಾಜಿಕ ಕೃತಿರಚನೆಯಿಂದಾಗಲಿ ಇಲ್ಲವೇ ಆಂಗ್ಲ ಕಾದಂಬರಿಗಳ ಮಾದರಿಯನ್ನು ಅನುಸರಿಸುವುದರ ಮೂಲಕವಾಗಲೀ 'ಹೊಸತನ' ತೋರಿಸಲಿಲ್ಲ.

'ನಾವೆಲ್' ಎಂದರೆ ಉಪನ್ಯಾಸ. ನಾವೆಲ್ ಎಂಬುದು ಇಂಗ್ಲಿಷಿನಲ್ಲೊಂದು ಸಾಹಿತ್ಯ ವಿಶೇಷವು... ಪೂರ್ವ ಕಾಲದಲ್ಲಿ ಹುಡುಗರು ತಮ್ಮ ಪಿತಾಮಹೀಯರ ಬಳಿ ಕುಳಿತು ಅವರು ಹೇಳುತ್ತಿದ್ದ ಆಶ್ಚರ್ಯಕರವಾದ ಅದ್ಭುತ ಕಟ್ಟುಕತೆಗಳನ್ನು ಹೇಗೆ ಆತುರಾತುರವಾಗಿ ಅವರಿಂದ ಕೇಳುತ್ತಿದ್ದರೋ, ಹಾಗೆ ಅಲೌಕಿಕ ಅದ್ಭುತ ಘಟನಾವಳಿ

ಗಳನ್ನುಳ್ಳ ಸಾಮಾನ್ಯ ಉಪನ್ಯಾಸಗಳನ್ನೋದಿ ಅನೇಕರು ಈಚೀಚಿನವರೆಗೆ ತೃಪ್ತರಾಗುತ್ತಿದ್ದರು. ಚಾತುರ್ಯ ರಚನಾ ಪಾರಿಪಾಟ್ಯ ವಿಹೀನವಾಗಿ ಭಾವಹೀನವಾದ ಉಪನ್ಯಾಸ ಗಳಲ್ಲಿ ಅದ್ಭುತ ಘಟನಾವಳಿಗಳು, ಅದ್ಭುತ ಜನರು, ದೇವತೆ ಯರು, ದೈತ್ಯರು ಮುಂತಾಗಿ ವರ್ಣಿತರಾಗುತ್ತಿದ್ದರು. ಕಥೆಯು ಕೇವಲ ಅಸಾಧಾರಣವಾದ ಮಾನುಷಾತೀತ ವ್ಯಾಪಾರಗಳನ್ನುಳ್ಳದುದಾಗಿದ್ದರೆ ಜನರಿಗದು ಚಿತ್ತಾಕರ್ಷಣ ವಾಗಿ ಉಪನ್ಯಾಸವು ಪ್ರಶಂಸಾಸ್ಪದವಾಗುತ್ತಿದ್ದಿತು. ಉಪ ನ್ಯಾಸಗಳು ನಾಯಕ ನಾಯಕಿಯರ ಪ್ರಣಯ ಕಥೆಗಳನ್ನುಳ್ಳ ವಾಗಿದ್ದರೆ ಅವುಗಳಿಂದಲೇ ಪಾಠಕರು ಪರಿತೃಪ್ತರಾಗುತ್ತಿ ದ್ದರು. ಆದುದರಿಂದ ಅಂತಹ ಉಪನ್ಯಾಸಗಳೇ ಬಹು ಕಾಲದ ವರೆವಿಗೆ ಆದರಿಸಲ್ಪಡುತ್ತಿದ್ದುವು . . .

ಈ ಮಾತನ್ನು ಹೇಳಿದ್ದು ೧೮೮೫ರಲ್ಲಿ. ಹೇಳಿದವರು ಬಿ. ವೆಂಕಟಾಚಾರ್ಯರು–'ದುರ್ಗೇಶನಂದಿನಿ'ಯ ವಿಜ್ಞಾ ಪನೆಯಲ್ಲಿ. ಇದು ಆ ಕಾಲದ ಜನತೆಯ ಅಭಿರುಚಿಯ ಮಟ್ಟವನ್ನಳೆಯಲು ಅಳತೆಗೋಲು. ಕಾದಂಬರಿ 'ಉಪ ನ್ಯಾಸ'ದ ಮಾರ್ಗ ಹಿಡಿದು ಹೊರಟಿರುವುದನ್ನು ಅನು ವಾದಿತ ಕಾದಂಬರಿಗಳಲ್ಲಿ ನಾವು ಸ್ಪಷ್ಟವಾಗಿ ಕಾಣ ಬಹುದು.

ಸ್ವತಂತ್ರ ಸಾಮಾಜಿಕ ಕಾದಂಬರಿ ಒಂದೂ ೧೮೯೯ರ ವರೆವಿಗೆ ಬರದಿದ್ದುದು ಆಶ್ಚರ್ಯದ ಸಂಗತಿ. ೧೮೯೯ರಲ್ಲಿ ಬಂದ ಗುಲವಾಡಿ ವೆಂಕಟರಾಯರ 'ಇಂದಿರಾಬಾಯಿ' ಅಥವಾ 'ಸದ್ಧರ್ಮ ವಿಜಯ'ವು ಕನ್ನಡದ ಕನ್ನೆನೆಲದ ಮೊದಲ ಫಲ. ಎರಡನೆಯ ಗಮನಾರ್ಹ ಹಾಗೂ ಬಹು ಕಾಲ ನಿಲ್ಲಬಹುದಾದ ಕಾದಂಬರಿ ಎಂ. ಎಸ್. ಪುಟ್ಟಣ್ಣ ನವರ 'ಮಾಡಿದ್ದುಣ್ಣೊ ಮಹಾರಾಯ' ಮೂರನೆಯದು ಬೋಳಾರ ಬಾಬುರಾಯರ 'ವಾಗ್ದೇವಿ' (೧೯೦೫). ನಾಲ್ಕಾರು ವರ್ಷಗಳ ಅಂತರದಲ್ಲಿ ಬಂದ ಈ ಮೂರು ಕಾದಂಬರಿಗಳನ್ನು ನೋಡಿದಾಗ 'ಹೊಸ ಪ್ರಯತ್ನ' ವೊಂದರ ಕುರುಹನ್ನಲ್ಲಿ ನಾವು ಕಾಣುತ್ತೇವೆ. ಮೂವರೂ ಹೊಸ ಪೀಳಿಗೆಗೆ ಸೇರಿದವರು. ಯೋಗ್ಯ ಶಿಕ್ಷಣಹೊಂದಿ ನಿರ್ದಿಷ್ಟ ವಿಚಾರಗಳನ್ನು ತಮ್ಮ ಮುಂದಿಟ್ಟುಕೊಂಡು, ಆದರ್ಶದ ಹಿಂಬಾಲಕರಾಗಿ, ಅವುಗಳ ಸಾಧನೆ ಸಿದ್ಧಿಗಾಗಿ ಪ್ರಯತ್ನಶೀಲರಾದವರು. ಮೂರು ಕಾದಂಬರಿಗಳಲ್ಲಿನ ಕಥಾವಸ್ತು ಒಂದು ರೀತಿಯಲ್ಲಿ ಒಂದೇ ಬಗೆಯ ವಿಚಾರ ಗಳತ್ತ ಕೇಂದ್ರೀಕರಿಸಿದಂತಿದೆ. ಸ್ಥೂಲವಾಗಿ ಹೇಳುವು ದಾದರೆ ಸಮಾಜದಲ್ಲಿನ ಜಾತೀಯತೆ; ಹಣವಂತರ ನೀತಿ ಗೆಟ್ಟ ನಡತೆ; ವ್ಯಕ್ತಿಯಲ್ಲಿ ಅಡಗಿರುವ ಲೋಭ, ಮಾತ್ಸರ್ಯ, ಕಪಟತನ, ವಂಚನೆಗಳು; ಮಠಾಧಿಪತಿಗಳ ಸಂಯಮರಹಿತ ಜೀವನ; ಡಾಂಭಿಕ ಸನ್ಯಾಸಿಗಳ ಶೀಲ ಗೆಟ್ಟ ನಡತೆ ಇವುಗಳೇ ಪ್ರಧಾನಾಂಶವಾಗಿ ಕಾಣಿಸಿಕೊಳ್ಳು ತ್ತವೆ. ಅಂದಿನ ಸಮಾಜದ ಅಸ್ವಸ್ಥತೆಗೆ ಇವೇ ಮೂಲ ಭೂತ ಕಾರಣವಾಗಿರಬೇಕು. ಬಹುಶಃ ಅಂದಿನ ಕಾದಂಬರೀ ಕಾರರು ಸಮಾಜ ಶುದ್ಧೀಕರಣಕ್ಕೆ ತಮ್ಮ ಕೃತಿಗಳನ್ನು ಸಾಧನವನ್ನಾಗಿ ಮಾಡಿಕೊಂಡಿರಬೇಕು.

'ಇಂದಿರಾಬಾಯಿ' ಕಾದಂಬರಿಯ ಅಪಾರ ಜನಪ್ರಿಯ ತೆಗೆ ಸಾಕ್ಷಿ. ಅದರ ಇಂಗ್ಲಿಷ್ ಅನುವಾದವನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಲೆಕ್ಟರಾಗಿದ್ದ ಕೌಚ್‌ಮನ್‌ರವರು ಮಾಡಿದ್ದು. ಅಂದಿನ ನಿರುತ್ಸಾಹೀ ದಿನಗಳಲ್ಲಿ ಒಬ್ಬ ವ್ಯಕ್ತಿ ಮೂರು ಕಾದಂಬರಿಗಳನ್ನು (ಇಂದಿರಾಬಾಯಿ, ಸೀಮಂತಿನಿ, ಭಾಗೀರಥಿ) ಬರೆದು ತಮ್ಮ ಉತ್ಸಾಹ ಹಾಗೂ ಕನ್ನಡದ ಮೇಲಿನ ಶ್ರದ್ಧೆ ವಿಶ್ವಾಸಗಳನ್ನು ವ್ಯಕ್ತಪಡಿಸಿದ್ದು ಗಮನಾರ್ಹ ಅಂಶ. ನಮ್ಮ ಕನ್ನಡ ಸಾಮಾಜಿಕ ಕಾದಂಬರಿಯ ಈ ಪಿತಾಮಹನನ್ನು ನಾವಿಂದು ಮರೆತಿದ್ದೇವೆ. ಅಷ್ಟೇ ಅಲ್ಲ ಬಹಳ ಮಂದಿ ವಿಮರ್ಶಕರೂ ಕಡೆಗಣಿಸಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನು ಹೇಳುವಾಗ ಮರೆಯ ಲಾಗದ ಹೆಸರು ಗುಲ್ವಾಡಿ ವೆಂಕಟರಾಯರದು. ಪೋಲೀಸ್ ಇಲಾಖೆಯಲ್ಲಿ ಅಧಿಕಾರಿಗಳಾಗಿ (ಸಬ್‌ಇನ್ಸ್‌ಪೆಕ್ಟರ್) ಹಲ ವಾರು ವರ್ಷ ಸೇವೆ ಸಲ್ಲಿಸಿ ತಮ್ಮ ಅಧಿಕಾರದ ದಿನಗಳಲ್ಲಿ ಸಮಾಜದ ಓರೆಕೋರೆಗಳನ್ನು, ಸಾಮಾಜಿಕರ ನೀತಿ ನಡೆ ನಳಿಕೆಗಳನ್ನು ತೀರ ಹತ್ತಿರದಲ್ಲಿ ನಿಂತು ಗಮನಿಸಿದ್ದರು. ಹೀಗೆ ತಮ್ಮ ಅಪಾರ ಅನುಭವಗಳೇ ಮೂಲದ್ರವ್ಯ ವನ್ನಾಗಿಟ್ಟುಕೊಂಡು ಕೃತಿರಚನೆಗೆ ತೊಡಗಿದರು. ಬದು ಕನ್ನು ಆಳವಾಗಿ ನೋಡುವ, ಹಾಗೆ ನೋಡುವಾಗ 'ಸಮ ಪ್ರಜ್ಞೆ'ಯನ್ನು ಬೆಳಸಿಕೊಳ್ಳುವ ಶ್ರದ್ಧೆಯಲ್ಲಿ ಜೀವ ಹಣ್ಣಾ ದದ್ದು – ಆಗ 'ಇಂದಿರಾಬಾಯಿ' ಕಾದಂಬರಿ ಹೊರ ಬಂದದ್ದು ಅದರ ಅದ್ಭುತ ಯಶಸ್ಸಿಗೆ ಮೂಲಕಾರಣ.

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗ ಚಾರಿತ್ರಿಕ ದೃಷ್ಟಿಯಿಂದ ಗಮನಾರ್ಹವಾದುದು. ಹೊಸ ಪೀಳಿಗೆಯ ಒಳಗುದಿತ ಒಂದಲ್ಲ ಒಂದು ರೀತಿಯಲ್ಲಿ ಪ್ರಕಟಗೊಳ್ಳಲು ಚಡಪಡಿಸುತ್ತಿದ್ದ ಕಾಲವದು. ಭಾರತದ ಸರ್ವಚೇತನ ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ಸಿಡಿದು ನಿಂತು ಸತ್ಯ ಅಹಿಂಸೆ ಧರ್ಮಗಳೇ ಮೂಲ ಮಂತ್ರವನ್ನಾಗಿಸಿಕೊಂಡು ಹೋರಾಡಿದ ಕಾಲವದು. ಕ್ರೈಸ್ತ ಧರ್ಮದ ಬಿರುಹೊಡೆತ ದಿಂದ ಮೇಲೇಳಲಾರದಷ್ಟು ಶಕ್ತಿಗುಂದಿದ್ದ ಹಿಂದೂ ಧರ್ಮ ವನ್ನು ಪುನಃ ಚೇತನಗೊಳಿಸ ಹೊರಟ ಕಾಲವದು.

ಹಿಂದೂ ಧರ್ಮಕ್ಕೆ ತುಕ್ಕು ಹಿಡಿದಿದ್ದಾಗ, ಅದು ತನ್ನ ಬಂಧನದಲ್ಲಿ ತಾನೇ ಸಿಕ್ಕಿಕೊಂಡು ನರಳಾಡುತ್ತಿದ್ದಾಗ ಧರ್ಮಸೂತ್ರದ ಕುಣಿಕೆಯನ್ನು ಸಡಿಲಗೊಳಿಸ ಹೊರಟ ಹಲವು ಸಂಸ್ಥೆಗಳು (ಬ್ರಹ್ಮ ಸಮಾಜ, ಆರ್ಯ ಸಮಾಜ) ಸಾಮಾಜಿಕ ಕ್ರಾಂತಿಗೆ ವೈಚಾರಿಕ ಕ್ರಾಂತಿಗೆ ಎಡೆಮಾಡಿ ಕೊಟ್ಟ ಕಾಲವದು. ಬಂಗಾಳದಲ್ಲೆದ್ದ ಸಮಾಜದ ಸುಧಾರಣೆಯ ಬಿರುಗಾಳಿ ದಕ್ಷಿಣ ಕನ್ನಡದ ಸಾರಸ್ವತ ಸಮಾಜದಲ್ಲೂ ಬೀಸಿದಾಗ ಸಂಪ್ರದಾಯಸ್ಥ ಮನೆ-ಮನ ಗಳಲ್ಲಿ ಕೋಲಾಹಲವೆದ್ದಿತು. ಸಮಾಜ ಸುಧಾರಣೆ ಮಾಡಹೊರಟವರಿಗೆ ಮಡಿವಂತ ಸಂಪ್ರದಾಯಸ್ಥರಿಂದ ಬಲವಾದ ಪ್ರತಿಭಟನೆ ವ್ಯಕ್ತಗೊಂಡಿತು. ಗುರುಮಠದಿಂದ ಸುಧಾರಕರಿಗೆ ಬಹಿಷ್ಕಾರವಾಯ್ತು; ಬಂಧು ಬಳಗ ಮಿತ್ರ ರೊಡನೆ ವ್ಯವಹರಿಸುವುದು, ಸಹಭೋಜನ ಮಾಡುವುದು ನಿಷೇಧಿಸಲ್ಪಟ್ಟಿತು; ಸಮಾಜದ ಪ್ರತಿಷ್ಠಿತ 'ಪಂಚ'ರು ಸಂಪ್ರದಾಯದ ಹೆಸರಿನಲ್ಲಿ ಹಿಂಸಿಸಿದರು. ಸಮಾಜದ ಈ ದುಷ್ಟಕೀಟಗಳ ಹಾವಳಿ ಸಮಾಜದ ಅಸ್ವಸ್ಥತೆಗೆ ಕಾರಣ ವೆಂಬುದನ್ನು ಅರಿತು ಕಾದಂಬರೀಕಾರರು ಸಮಾಜ ಘಾತು ಕರ ಮೇಲಿರುವ ಅಸಹನೆಯನ್ನು ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯದಲ್ಲಿ ತೋಡಿಕೊಂಡರು. ಕಾದಂಬರಿ ರಚನೆಯ ಮುಖ್ಯ ಉದ್ದೇಶ ಕಾದಂಬರಿಕಾರರೇ ಹೇಳು ವಂತೆ "... ಸತ್ಯತೆ, ಹೃದಯ ನಿರ್ಮಲತೆ ಇವೆರಡು ಸಾಧನಗಳೇ ನಮಗೆ ಇಹಪರದಲ್ಲಿಯೂ ಸಾರ್ಥಕಗಳಾಗಿವೆ. ಇವುಗಳನ್ನು ಬಿಟ್ಟು ಸರ್ವಪ್ರಯತ್ನಗಳೂ ನಿರರ್ಥಕವೇ ಇದನ್ನು ಸಾದೃಶ್ಯಗೊಳಿಸುವುದೇ ಈ ಪುಸ್ತಕದ ಉದ್ದೇಶ." ಕಾದಂಬರಿಯ ಹೆಸರೇ ಹೇಳುವಂತೆ ಸಾತ್ವಿಕ ತಾಮಸ ಗಳಿಗೆ ನಡೆದ ಘರ್ಷಣೆಯಲ್ಲಿ ಸದ್ಧರ್ಮಕ್ಕೇ ಜಯಮಾಲೆ. ಇಲ್ಲಿ ಕಾದಂಬರೀಕಾರರ ಉದ್ದೇಶ ಸ್ಪಷ್ಟವಾಗಿದೆ.

ಅರವತ್ತೆರಡು ಅಧ್ಯಾಯ (?)ಗಳು ಇರುವ ಈ ಕಾದಂ ಬರಿಯ ಮುಖ್ಯ ನಾಯಕಿ ಇಂದಿರಾಬಾಯಿ. ಕಾದಂಬರಿ ಕಾರರೇ ಹೇಳುವಂತೆ ಇದು "ಇಂದಿರಾಬಾಯಿ ಎಂಬವಳ ಜನ್ಮಚರಿತ್ರೆ". ಒಂದೇ ಕಥೆಯಲ್ಲಿ ಮೂರು ನಾಲ್ಕು ಕಥೆ ಗಳು ಅವಿಭಾಜ್ಯ ಘಟಕಗಳಾಗಿ ಹೆಣೆದುಕೊಂಡಿವೆ. ಕಥೆ ಯನ್ನು ಸಂಕ್ಷಿಪ್ತವಾಗಿ ಹೀಗೆ ಹೇಳಬಹುದು :

ವಿಂಧ್ಯಾಚಲದ ದಕ್ಷಿಣ ಪ್ರಾಂತದಲ್ಲಿ ರೋಹಿಣೀ ನದೀ ತೀರದಲ್ಲಿ ಕಮಲಪುರವೆಂಬ ನಗರ. ಹಂಪೀ ಭೀಮರಾಯ ನೆಂಬವನು ಬಡತನದ ಕಾರಣದಿಂದ ನರಸಿಂಹಶಾಸ್ತ್ರಿ ಎಂಬ ವರ್ತಕನಲ್ಲಿ ಶ್ಯಾನುಭೋಗತನವನ್ನು ನೋಡಿಕೊಂಡು ದಿನ ದೂಡುತ್ತಿದ್ದ. ಅಂಬಾಬಾಯಿ ಈತನ ಹೆಂಡತಿ. ಅಂಬಾ ಬಾಯಿಯ ಕೈಹಿಡಿದದ್ದರಿಂದಲೇ ತಾನು ಬಲ್ಲಿದನಾದೆನೆಂಬ ಭ್ರಮೆ ಭೀಮರಾಯನದು. ಹೀಗಾಗಿ ಹೆಂಡತಿ ಹಾಕಿದ ಗೆರೆಯನ್ನು ದಾಟದಷ್ಟು ಪತ್ನೀದಾಸನಾಗಿದ್ದ. ತನ್ನ ಹಣದಿಂದ ಅಂತಸ್ತು ಗೌರವಗಳನ್ನು ಪಡೆದು ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಯಾದ ಭೀಮರಾಯ ಪತ್ನಿಯ ಇಷ್ಟ ಪ್ರಕಾರ ಹಿಂದುಮುಂದು ಯೋಚಿಸದೆ ಸುಂದರರಾಯನೆಂಬ ದೀನನೊಬ್ಬನನ್ನು ದೇವಕಿಯ ಮೂಲಕ ವಿಷವಿಟ್ಟು ಕೊಲೆ ಮಾಡಿಸಿದ. ತನ್ನ ಹಣದ ಮೂಲಕ ಕೊಲೆಯ ಆರೋಪದಿಂದ ವಿಮುಕ್ತನಾದ. ಕಮಲಪುರದ ಮಡಿವಂತ ಸಮಾಜದಲ್ಲಿ ಪ್ರಗತಿಗಾಮಿಗಳ ಸುಧಾರಣೆಯ ಗಾಳಿ ಬೀಸಿ ದಾಗ, ಗುರುಮಠಗಳಿಗೆ ಸಲ್ಲಬೇಕಾದ ಗೌರವ ಕಾಣಿಕೆ ಗಳನ್ನು ಸಲ್ಲಿಸದಿದ್ದಾಗ ಶ್ರೀ ಗುರುಗಳು ಅಲ್ಲಿಗೆ ಪಾದ ಬೆಳೆಸಿದರು. ಶ್ರೀಗುರುಗಳ ಕೃಪಾಕಟಾಕ್ಷಕ್ಕೆ ಪಾತ್ರನಾದ ಭೀಮರಾಯ "ಧರ್ಮವಿಚಾರಕ" ಸ್ಥಾನವನ್ನು ಪಡೆದ.

ತಾನು ವಿಷವಿಕ್ಕಿ ಕೊಲ್ಲಿಸಿದ ಸುಂದರರಾಯನ ಮಗ ಭಾಸ್ಕರ ಕಮಲಪುರದ ಸಜ್ಜನ ದಂಪತಿಗಳಾದ ಅಮೃತ ರಾಯ-ಜಲಜಾಕ್ಷಿ ಇವರ ಪಾಲನೆ ಪೋಷಣೆಯಲ್ಲಿ ಹೆಚ್ಚಿನ ವಿದ್ಯಾಭ್ಯಾಸ ಪಡೆದು ವಿಲಾಯತಿಗೂ ಹೊರಟಾಗ ಅದನ್ನು ಸಹಿಸದ ಭೀಮರಾಯ ದಂಪತಿಗಳು ಶ್ರೀಗುರುಗಳಿಗೆ ಮೂಕರ್ಜಿ ಬರೆಯ ಹೊರಡುವರು. ಇಂದಿರೆ ಭೀಮ ರಾಯನ ಏಕಮಾತ್ರ ಪುತ್ರಿ. ಆಕೆಗೆ ಎಂಟು ವರ್ಷ ಗಳಾಗಲು ವಿಠಲರಾಯನೆಂಬ ಹಣವಂತ ಯುವಕನಿಗೆ ಆಕೆಯನ್ನು ಕೊಟ್ಟು ಮದುವೆ ಮಾಡಲಾಯಿತು. ವಿಠಲ ರಾಯನಿಗೆ ವಯಸ್ಸಿನ ಜೊತೆಗೆ ದುಶ್ಚಟಗಳೂ ಬೆಳೆದು ಬಂದಿದ್ದುವು. ವಿಷಯಲೋಲುಪನಾದ ವಿಠಲರಾಯ ಗುಲಾಬಿ, ಗೋಕುಳಿ ಎಂಬ ವಿಲಾಸವತಿಯರನ್ನು ಉಪ ಪತ್ನಿಯರನ್ನಾಗಿಟ್ಟುಕೊಂಡು ಸದಾ ಭೋಗವಿಲಾಸಗಳಲ್ಲಿ ಮಗ್ನನಾಗಿ ರೋಗಹತ್ತಿ ಹಾಸಿಗೆ ಹಿಡಿದು ಪ್ರಾಣಬಿಟ್ಟ. ಸಮಾಜಕ್ಕೆ ಹೆದರಿದ, ಸಂಪ್ರದಾಯಕ್ಕೆ ಬಾಗಿದ ಇಂದಿರೆಯ ತಂದೆತಾಯಿಗಳು ಮಗಳಿಗೆ ಬಲವಂತವಾಗಿ ವೈರಾಗ್ಯದ ದೀಕ್ಷೆಕೊಡ ಹೊರಟರು. ಅದಕ್ಕಾಗಿಯೇ ಧರ್ಮಬೋಧನೆ ಗೆಂದು ರಂಗಪ್ಪಯ್ಯನ ಸಂತಮುಂಡಳಿಯನ್ನು ಕರೆಸ ಲಾಯಿತು. ಪಾರಾಯಣ ನಿರೂಪಣಗಳಾದುವು. ಇಂದಿರೆಯ ರೂಪಕ್ಕೆ ಮಾರುಹೋದ ಕಾಮಿ ರಂಗಪ್ಪಯ್ಯ ವಿವೇಕಹೀನನಾಗಿ ಆಕೆಯ ಅತ್ಯಾಚಾರ ಮಾಡ ಹೊರಟ. ಇಂದಿರೆ ಬುದ್ಧಿ ಉಪಯೋಗಿಸಿ ಆತನ ಕಾಮದ ಕಣ್ಣಿಂದ ತಪ್ಪಿಸಿಕೊಂಡು ಅಮೃತರಾಯನ ಮನೆಯಲ್ಲಿ ಆಶ್ರಯ

ಪಡೆದಳು. ಇಂದಿರೆಯನ್ನು ಮಕ್ಕಳಿಲ್ಲದ ಆ ದಂಪತಿಗಳು ತಮ್ಮ ಸ್ವಂತ ಮಗಳೆಂದೇ ಬಗೆದು ಆಕೆಗೆ ಯೋಗ್ಯ ವಿದ್ಯಾಭ್ಯಾಸ ಕೊಡಿಸಲು ಸತಾರೆಯ ಸರಸ್ವತೀ ಮಂದಿರಕ್ಕೆ ಕಳುಹಿದರು. ಇಂದಿರೆ ಮೆಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಮೊದಲನೇ ದರ್ಜೆಯಲ್ಲಿ ಪಾಸಾಗಿ ಮನೆಗೆ ಹಿಂತಿರುಗಿ ಬಂದಳು. ಅಮೃತರಾಯ ದಂಪತಿಗಳು ಕರುಣೆಯ ಕಂದನಾದ ಭಾಸ್ಕರ ವಿಲಾಯತಿಯಿಂದ ಹೆಚ್ಚಿನ ವಿದ್ಯಾಭ್ಯಾಸ ಪಡೆದು ಆ ಜಿಲ್ಲೆಗೆ ಕಲೆಕ್ಟರನಾಗಿ ಬಂದ. ಗುಣ, ರೂಪ, ವಿದ್ಯೆಗಳಲ್ಲಿ ತನಗನುಕೂಲಳಾದ ಬಾಲವಿಧವೆ ಇಂದಿರೆಯನ್ನು ಮೆಚ್ಚಿ ಮದುವೆಯಾದಾಗ "ಧರ್ಮವಿಚಾರಕ" ಭೀಮರಾಯ ತನ್ನ ಮಗಳ ಧರ್ಮಘಾತಕ ವರ್ತನೆಯಿಂದ ಕ್ರುದ್ಧನಾಗಿ ಶ್ರೀಗುರುಗಳಿಗೆ ಮೂಕರ್ಜಿ ಬರೆಯಿಸಿ ವಿಚಾರಣೆ ಏರ್ಪಡಿಸಿ ಬಹಿಷ್ಕಾರ, ವ್ಯವಹಾರ ಸಹಭೋಜನ ನಿಷೇಧಗಳನ್ನು ಅಮೃತರಾಯ ದಂಪತಿಗಳು ಹಾಗೂ ಭಾಸ್ಕರ ದಂಪತಿಗಳ ಮೇಲೆ ಜಾರಿ ಮಾಡಿಸಿದ. ಮಠದ ಬಹಿಷ್ಕಾರಕ್ಕೆ ಯಾರೂ ಜಗ್ಗಲಿಲ್ಲ. ಶ್ರೀಗುರುಗಳು ಈ ಬಗ್ಗೆ ಯೋಚಿಸಿ ಒಂದು ನಿರ್ಧಾರಕ್ಕೆ ಬಂದರೂ ಅದನ್ನು ಕಾರ್ಯಗತ ಮಾಡ ಹೊರಡಲಿಲ್ಲ. ಭೀಮರಾಯನನ್ನು 'ಧರ್ಮವಿಚಾರಕ' ಸ್ಥಾನದಿಂದ ತೆಗೆದು ಹಾಕಲು ಊರಲ್ಲಿ ಸಂಚು ನಡೆದಾಗ ಹೆಂಡತಿಯ ಸಲಹೆಯಂತೆ ಭೀಮರಾಯ ರಾಜಿನಾಮೆ ಬರೆದು ಅಮೃತರಾಯ-ಜಲಜಾಕ್ಷಿ; ಭಾಸ್ಕರ-ಇಂದಿರೆ ಸುಶೀಲೆ ಇವರ ಕ್ಷಮೆಯಾಚಿಸಿ ಅವರೆಲ್ಲರನ್ನೂ ತನ್ನ ಮನೆಗೆ ಕರೆದು ತಂದು ಊಟೋಪಚಾರಗಳಿಂದ ಸತ್ಕರಿಸಿದ.

ಹತ್ತೊಂಬತ್ತನೆಯ ಶತಮಾನದ ಆದಿ ಭಾಗದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆದ ವೈಚಾರಿಕ ಕ್ರಾಂತಿಯ ಸ್ವರೂಪ ದರ್ಶನಮಾಡಿಸುವ ಪ್ರಾತಿನಿಧಿಕ ಕೃತಿಯಿದು. ಬಾಲ್ಯ ವಿವಾಹ, ವಿಧವಾ ವಿವಾಹ ಪದ್ಧತಿಗಳಿಗೆ ಪುರಸ್ಕಾರ; ಆಂಗ್ಲ ವಿದ್ಯಾಭ್ಯಾಸ, ವಿದೇಶಗಳಿಗೆ ಹೋಗುವವರಿಗೆ ಧಿಕ್ಕಾರ – ಇವು ಅಂದಿನ ಕಾಲದವರಿಗೆ ಕ್ರಾಂತಿಯ ಬೀಜಗಳು. ಅಂದಿನ ಸಮಾಜದ ಅವಸ್ಥೆ ; ಸಮಾಜದ ಹಳೆಯ ಮೌಲ್ಯಗಳಿಗೆ ಹೊಸರೂಪ ಕೊಡಹೊರಟ ಯುವಜನ ವರ್ಗದ ಧ್ಯೇಯ ಧೋರಣೆ – ಇವೇ ಕಾದಂಬರಿಯಲ್ಲಿ ಹಾಸುಹೊಕ್ಕಾಗಿ ಬಂದಿವೆ. ಎಲ್ಲಕ್ಕಿಂತ ಮಿಗಿಲಾಗಿ ಕಾದಂಬರಿ ತನ್ನ ನೆಲದ ವೈಗುಣ್ಯವನ್ನರಿತು, ಜಾನಪದ ಸತ್ವವನ್ನು ತನ್ನಲ್ಲಿ ಅಳವಡಿಸಿಕೊಂಡು ಪರಿಪುಷ್ಟವಾಗಿ ಬಂದಿರುವುದು ಹೆಚ್ಚಿನದು.

ಈ ಕಾದಂಬರಿಯ ಯಶಸ್ಸಿಗೆ ಬಹುವಾಗಿ ಪಾತ್ರಗಳೂ ಕಾರಣ. ಸ್ವಭಾವ ಸಹಜವೂ ಸತ್ವಪೂರ್ಣವೂ ಆದ ಪಾತ್ರಗಳು ಕಾದಂಬರಿಯ ತುಂಬ ಹರಡಿ ಹಬ್ಬಿಕೊಂಡಿವೆ. ಅವುಗಳ ನಾಟಕೀಯ ಮಾತು, ನಡೆ, ಓದುಗನ ಮನವನ್ನು ಸೆರೆಹಿಡಿಯುವಷ್ಟು ಆಕರ್ಷಕ. ಪಾತ್ರಗಳ ಸಂಖ್ಯೆ ಬೆರಳೆಣಿಸುವಷ್ಟಾದರೂ ಅವು ಓದುಗರ ಮೇಲೆ ಬೀರುವ ಪ್ರಭಾವ ಅತ್ಯದ್ಭುತ. ಮೋಹದ ಸೂತ್ರ ಈರ್ವರ ಹೃದಯವನ್ನು ಒಂದುಗೂಡಿಸುವ ಕುಣಿಕೆಯಾಗದೆ ಕುತ್ತಿಗೆ ಬಿಗಿಯುವ ಹಗ್ಗವಾದರೆ ಹೇಗೆ? 'ಅಮ್ಮಾವ್ರ ಗಂಡ' ನಾದ ಭೀಮರಾಯನ ಪ್ರೀತಿ ಇಂತಹದು. 'ಸತಿಭಕ್ತ' ನಾದ ಭೀಮರಾಯನ ಪಾತ್ರ ಓದುಗರ ಮನಸ್ಸಿನಲ್ಲಿ ನಗೆ ಬುಗ್ಗೆಯೆಬ್ಬಿಸುತ್ತದೆ. ಉದಾಹರಣೆಗೆ "ಪುಣ್ಯವಂತೆಯಾದ ಹುಡುಗಿಯ ಯೋಗ್ಯತೆಯ ಬಲದಿಂದಲೇ ನಾನಿಷ್ಟು ಒಳ್ಳೆಯ ಸ್ಥಿತಿಗೆ ಬಂದೆನು. ಇವಳು ಬುದ್ಧಿಶಾಲಿಯಾಗಿರುತ್ತಾಳೆ. ಇವಳ ಮನಸ್ಸಿಗೆ ವಿರುದ್ಧವಾಗಿ ನಡೆದುಕೊಂಡು ಇವಳ ಸಿಟ್ಟಿಗೆ ಗುರಿಯಾಗುವುದರಲ್ಲಿ ನಿಶ್ಚಯವಾಗಿಯೂ ಅಪಾಯವಿರುವುದು . . .". ನಿಷ್ಪಾಪ ಜೀವಿಯಾದ ಸುಂದರರಾಯನನ್ನು ನಿಷ್ಕಾರಣವಾಗಿ ಕೊಲೆಮಾಡಿಸಿದ ಮೇಲೆ ತನ್ನ ಹಣದ ಬೆಂಬಲದ ಮೂಲಕ ಕೊಲೆಯ ಆರೋಪದಿಂದ ಋಣಮುಕ್ತನಾಗುವಲ್ಲಿ; ಕಮಲಪುರಕ್ಕೆ ಶ್ರೀ ಗುರುಗಳು ಬಂದಾಗ ನಡೆಸುವ ಸೇವೆ, ತೋರಿಸುವ ಗುರುಭಕ್ತಿ, ದಾನಸನ್ಮಾನ ಸಂತರ್ಪಣಾದಿಗಳನ್ನು ಮಾಡುವಲ್ಲಿ ಭೀಮರಾಯನ ಪಾತ್ರ ನಿರೀಕ್ಷೆ ಮೀರಿದ ಸಫಲತೆಯನ್ನು ಪಡೆದಿದೆ. ಸಮಾಜದಲ್ಲಿ ಗಣ್ಯಸ್ಥಾನ ಮಾನ ಪಡೆಯಬೇಕಾದರೆ ಏನುಮಾಡಬೇಕೆನ್ನುವುದರ ಗುಟ್ಟನ್ನರಿತು ಅಂಬಾಬಾಯಿ ವಿಧೇಯ ಗಂಡನಿಂದ ಅವೆಲ್ಲವನ್ನೂ ಮಾಡಿಸಿ ಅವನನ್ನು ಪ್ರತಿಷ್ಠಿತ ವ್ಯಕ್ತಿಯನ್ನಾಗಿ ಮಾಡಿದ್ದು ಅಂಬಾಬಾಯಿಯ ವ್ಯಕ್ತಿತ್ವದ ಒಂದು ಮುಖವನ್ನು ತೋರಿಸಿದರೆ ಗಂಡನ ಜುಟ್ಟನ್ನು ತನ್ನ ಕಿರುಬೆರಳಿಗೆ ಸಿಕ್ಕಿಸಿಕೊಂಡು ಆತನನ್ನು ಆಡಿಸುವ; ಅವನ ದೌರ್ಬಲ್ಯಗಳನ್ನರಿತು ಅವನನ್ನು ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುವ ಜಾಣ್ಮೆ; ಸುಂದರರಾಯನನ್ನು ಕೊಲ್ಲಿಸುವ ಪೂರ್ವದಲ್ಲಿ ದೇವಕಿಯೊಡನೆ ನಡೆಸುವ ಸಂಭಾಷಣೆ, ಅಲ್ಲಿ ಕಂಡುಬರುವ ಆಕೆಯ ಬುದ್ಧಿವಂತಿಕೆ; ಮಗಳು ಚಿಕ್ಕವಯಸ್ಸಿನಲ್ಲೇ ವಿಧವೆಯಾದಾಗ ಮಗಳನ್ನು ದುಃಖದ ಆವೇಗದಲ್ಲಿ ತಬ್ಬಿಕೊಳ್ಳುವಂತೆ ಅಪ್ಪಿಹಿಡಿದು ಮುಖದ ಬೆವರೊರಸುವಂತೆ ನಟಿಸಿ ತನ್ನ ಸೆರಗಿನಿಂದ ಮಗಳ ಹಣೆಯ ಕುಂಕುಮವನ್ನೊರಸುವಾಗಿನ ಆಕೆಯ ಸಮಯಪ್ರಜ್ಞೆ, ಸಮಯೋಚಿತವಾಗಿ ಮಾತನಾಡುವ, ನಟಿಸುವ ಕಲೆ – ಇವೆಲ್ಲಾ ಆಕೆಯ ಬಹುಮುಖ ವ್ಯಕ್ತಿತ್ವದ ಪರಿಚಯಕ್ಕೆ ಸಹಾಯಕಾರಿಗಳು.

ಇಂದಿರೆ ಕಾದಂಬರಿಯ ಮುಖ್ಯ ನಾಯಕಿ. ಕಾದಂಬರಿಕಾರರಿಗೆ ಏಕೋ ಈ ಪಾತ್ರದ ಬಗ್ಗೆ ಹೆಚ್ಚಿನ ಒಲವು, ಕನಿಕರ, ಕಳಕಳಿ. "ಅವಳ ಕಾಲು ತೊಳೆದು ಒಂದಿಷ್ಟು ನೀರನ್ನು ಕುಡಿದರೆ . . . ಜನ್ಮ ಸಾರ್ಥಕವಾಗ್ತುವುದು"; "ಇಂದಿರೆಯಂಥ ಮಗು ಜನ್ಮಾಂತರದಲ್ಲಿ ತಪಸ್ಸುಮಾಡಿದರೂ ಸಿಗುವುದೆ ?"—ಇಂಥದೇ ರೀತಿಯ ಮಾತುಗಳನ್ನು ಕಾದಂಬರೀಕಾರರು ಆಗಾಗ್ಗೆ ಪಾತ್ರಗಳ ಬಾಯಲ್ಲಿ ಆಡಿಸಿ ತಮ್ಮ ಅಪಾರ ಪ್ರೀತಿ, ವಿಶ್ವಾಸಗಳನ್ನು ತೋರ್ಪಡಿಸಿಕೊಂಡಿದ್ದಾರೆ. ಗಂಡ ಹಾದಿತಪ್ಪಿ ವೇಶ್ಯೆಯರಿಬ್ಬರನ್ನು ಉಪಪತ್ನಿಯರನ್ನಾಗಿ ಸ್ವೀಕರಿಸಿ ಸ್ವಚ್ಛಂದ ವಿಲಾಸ ಜೀವನ ನಡೆಸಿ ತಾನು ಹಾಳಾದದ್ದಲ್ಲದೆ ಕೈ ಹಿಡಿದವಳನ್ನೂ ಹಾಳು ಮಾಡಿದ್ದರ ಬಗ್ಗೆ ಕಾದಂಬರಿಕಾರರ ಅನುತಾಪವಿದೆ. ದೈವ ಇಂದಿರೆಯ ಮಾಂಗಲ್ಯಭಾಗ್ಯವನ್ನು ಕಸಿದುಕೊಂಡಾಗ, ಹುಟ್ಟಿಸಿದ ತಂದೆ ತಾಯಿಗಳೇ ಮಗಳಿಗೆ ವೈರಾಗ್ಯದ ದೀಕ್ಷೆಯನ್ನು ಬಲವಂತವಾಗಿ ಕೊಡ ಹೊರಟು, ಆಕೆಯ ವಯಸ್ಸಿಗನುಗುಣವಾದ ಸಹಜ ಬಯಕೆಗಳಿಗೆ ಗೋರಿ ಕಟ್ಟ ಹೊರಟಾಗ ಕಾದಂಬರೀಕಾರರ ಸಮಾಜ ಸುಧಾರಣಾ ಪ್ರಜ್ಞೆ ಜಾಗೃತಗೊಂಡು ಆಕೆ ಸುಖದಿಂದ ವಂಚಿತಳಾಗದಂತೆ ಮಾಡುತ್ತಾರೆ. ಮಾನವೀಯತೆಗೆ ಪ್ರಾಶಸ್ತ್ಯತೆತ್ತು ಕಥಾನಾಯಕಿಗೆ ಯೋಗ್ಯ ವಿದ್ಯಾಭ್ಯಾಸ, ವಿಧವಾ ವಿವಾಹಗಳನ್ನು ಮಾಡಿಸಿ ತಮ್ಮ ಆದರ್ಶದ ಕನಸನ್ನು ಆ ಮೂಲಕ ತೋರ್ಪಡಿಸಿಕೊಂಡಿರುವರು.

ಕಳ್ಳಬಸಿರು ಇಳಿಸುವುದು, ಆಗದವರಿಗೆ ಹಣದಾಸೆಯಿಂದ ನಂಜೂಡುವುದು, ದೇವಕಿಯ ಕೆಲಸ. ಸಮಾಜದ ನೀತಿ ಬಾಹಿರ ವ್ಯವಹಾರಗಳಿಗೆ ಇವಳಲ್ಲಿ ಮದ್ದು. "ನಮ್ಮ ಬಾಳು ಎತ್ತಿದವರ ಕೈ ಕೂಸು"—ಇದು ದೇವಕಿಯ ಜೀವನ ವ್ಯಾಖ್ಯೆ. ಮಾನವೀಯ ದೌರ್ಬಲ್ಯಗಳ ಸುಳಹು–ಹೊಳಹುಗಳನ್ನು; ಉದ್ದ–ಅಗಲಗಳನ್ನು ದೃಷ್ಟಿ ಮಾತ್ರದಿಂದಲೇ ಅರಿಯಬಲ್ಲ, ಅರಿತು ಮನಸ್ಸಿಗೆ ಬರುವಂತೆ ಮಾತನಾಡಬಲ್ಲ ಹೆಣ್ಣು ದೇವಕಿ.

ಪೊಕ್ಕುಸೆಟ್ಟಿ ಹಾಗೂ ಅತ್ತೂರು ಸೂರಪ್ಪಯ್ಯ ಇವರ ಪಾತ್ರಸೃಷ್ಟಿ ಅಪೂರ್ವವಾದುದು. ಹಣ ಎಲ್ಲಿಂದ ಬಂದರೂ ಕೈಚಾಚುವ, ಪ್ರಸಂಗವನ್ನು ಗಮನಿಸಿ ಪರರ ಆಸೆಗಳನ್ನು ಪೂರೈಸುವಲ್ಲಿ ಶಾಖಾಯ ಲವಣಾಯ ಗಿಟ್ಟಿಸುವ, ಹಣವಿಲ್ಲದೆ ಯಾವ ಕೆಲಸವನ್ನೂ ಮಾಡದ ಪೊಕ್ಕುಸೆಟ್ಟಿಯ ಪಾತ್ರ ಒಂದು ಬಗೆಯದಾದರೆ ಕೋರ್ಟಿನ ವ್ಯವಹಾರಗಳಲ್ಲಿ ಕದೀಮನೂ ನೋರ್ಟನ್ಸ್ ಲಾ ಆಫ್ ಎವಿಡೆನ್ಸ್ ವೈನ್ಸ್ ಕಮೆಂಟ್‌ರಿಸ್‌ಗಳನ್ನು ಕಂಠಪಾಠ ಮಾಡಿದವನೂ ಕ್ರಿಮಿನಲ್ ಮೊಕದ್ದಮೆಗಳಿಗೆ ಸಂಬಂಧಿಸಿದ ನ್ಯಾಯಶಾಸ್ತ್ರವನ್ನೆಲ್ಲಾ ಕರತಲಾಮಲಕ ಮಾಡಿಕೊಂಡಿದ್ದವನೂ ಆದ ಅತ್ತೂರು ಸೂರಪ್ಪಯ್ಯನ ಪಾತ್ರ ಮತ್ತೊಂದು ಬಗೆಯದು. ಇವರಿಬ್ಬರ 'ವ್ಯಕ್ತಿಚಿತ್ರ' ಕಾದಂಬರಿಯಲ್ಲಿ ಮೆಚ್ಚುವ ಅಂಶ.

ಮದುವೆ ಒಂದು ರೀತಿಯಲ್ಲಿ ಕೊಟ್ಟು ತೆಗೆದುಕೊಳ್ಳುವ ವ್ಯವಹಾರ. ತ್ರಿಯಂಬಕರಾಯ ಹಾಗೂ ಭೀಮರಾಯ ಸಮಾನ ಮನಸ್ಸಿಗಳು. ಮದುವೆಯ ವ್ಯವಹಾರದಲ್ಲಿ ವರದಕ್ಷಿಣೆಯ ಪ್ರಸ್ತಾಪ ಬಂದಾಗ ಭೀಮರಾಯನಿಗೆ ಸ್ವಲ್ಪ ಕೆಮ್ಮು ಬರುತ್ತದೆ. ಎರಡು ಸಾವಿರ ಕೊಡುತ್ತೇನೆನ್ನುವಾಗಲೂ ಭೀಮರಾಯನಿಗೆ ಕೆಮ್ಮು. ನಿಶ್ಚಯ ತಾಂಬೂಲಕ್ಕೆ ಒಳ್ಳೆ ದಿವಸ ಯಾವುದೆಂದು ಭಾವೀ ಬೀಗರನ್ನು ಕೇಳುವಾಗಲೂ ಭೀಮರಾಯನಿಗೆ ಕೆಮ್ಮು. ಈ ಸನ್ನಿವೇಶದಲ್ಲಿ ಕಾದಂಬರೀಕಾರರ ಹಾಸ್ಯಪ್ರಜ್ಞೆ (?) ಕೃತಕವಾಗಿ ಕಾಣಿಸಿಕೊಳ್ಳುತ್ತದೆ. ಭೀಮರಾಯ ಪದೇ ಪದೇ ಕೆಮ್ಮುತ್ತಿರುವುದನ್ನು ಕಂಡು ತಮಗೇನು ಸ್ವಲ್ಪ ಕೆಮ್ಮಿನ ಪೀಡೆ ಇದ್ದ ಹಾಗಿದೆಯಲ್ಲ' ಎಂದು ತ್ರಿಯಂಬಕರಾಯ ಕೇಳುವುದು ಓದುಗನಲ್ಲಿ ಬಲವಂತದ ನಗು ತರಿಸುತ್ತದೆ. ಮದುವೆ ಎರಡು ಕಡೆಯವರ ಹೃದಯವನ್ನು ಬೆಸೆಯುವ ಸಂಭ್ರಮದ ಸಮಾರಂಭವಾಗದೆ ಕೇವಲ 'ವ್ಯಾವಹಾರಿಕ'ವಾದರೆ ಎಷ್ಟು ವಿಕೃತವಾಗಿ ಕಾಣಿಸುತ್ತದೆನ್ನುವುದಕ್ಕೆ ತ್ರಿಯಂಬಕರಾಯ ಹಾಗೂ ಭೀಮರಾಯರ ಮಾತುಕತೆಗಳು ನಿದರ್ಶನ.

ತಮ್ಮ ಸಮಕಾಲೀನ ಜನತೆಯ ಮೂಢನಂಬಿಕೆ ಅಂಧ ವಿಶ್ವಾಸಗಳನ್ನು ಬಹು ಮಾರ್ಮಿಕವಾಗಿ ಹೇಳಿದ್ದಾರೆ. ಇಂಗ್ರೇಜಿ ಔಷಧಿಯನ್ನು ಸೇವಿಸಿದರೆ ಜಾತಿ ಹೋಗುತ್ತದೆ, ಎಂದು ನಂಬಿ ಅಳಿಯ ಸಾಯುತ್ತಿರುವ ಸಮಯದಲ್ಲಿ ಯೋಗ್ಯ ಚಿಕಿತ್ಸೆಯನ್ನು ನುರಿತ ಆಂಗ್ಲ ವೈದ್ಯರಿಂದ ಮಾಡಿಸದೆ ನಾಟಿ ವೈದ್ಯರಿಂದ ಅಪಾಯಕಾರಿ ಚಿಕಿತ್ಸೆ ನಡೆಸಿ ತನ್ನ ಮಗಳ ಮಾಂಗಲ್ಯವನ್ನು ತಾನೇ ಹರಿದ ಭೀಮರಾಯನ 'ಮಡಿವಂತಿಕೆ'ಯ ವಿಡಂಬನೆ ಮಾರ್ಮಿಕವಾಗಿದೆ. ವಿಧವೆಯರ ಬಗ್ಗೆ ಅಂದಿನ ಸಮಾಜ ತಳೆದಿದ್ದ ಧೋರಣೆ ತೀರ ಕಟುತರವಾಗಿದ್ದಿತು. ವಿಧವೆಯಾದವಳು ಕೇಶಛೇದನ ಮಾಡಿಸಿಕೊಳ್ಳಬೇಕು, ರವಿಕೆ ತೊಡಬಾರದು, ಕಪ್ಪುಸೀರೆ ಉಡಬಾರದು, ಯಾವುದೇ ಬಗೆಯ ಪುಸ್ತಕಗಳನ್ನು ಓದಬಾರದು – ಈ ಬಗೆಯ ಕಟ್ಟಳೆಗಳು; ವಿಧವೆ ಸಕೇಶಿಯಾಗಿ ಸ್ನಾನಮಾಡಿದರೆ ಆಕೆಯ ತಲೆಗೂದಲಿನಿಂದ ಎಷ್ಟು ಹನಿ ನೀರು ಭೂಮಿಯ ಮೇಲೆ ಬೀಳುವುದೋ ಅಷ್ಟು ವರುಷ ಪರ್ಯಂತರ ಆಕೆ ತನ್ನ ಪತಿಯನ್ನು ನರಕದಲ್ಲಿ ಯಾತನೆಯನ್ನನುಭವಿಸುವಂತೆ ಮಾಡುವಳು – ಈ ತೆರನ ಬೆದರಿಕೆಗಳು

ಅಂದಿನ ಅನಾಗರಿಕವೂ ವಿವೇಚನಾಶೂನ್ಯವೂ ಮೃಗೀಯವೂ ಆದ ಸಮಾಜದ ಲಕ್ಷಣದತ್ತ ಬೆರಳುತೋರಿಸುತ್ತವೆ. ಇವೆಲ್ಲಾ ಕಾದಂಬರಿಕಾರರು ನವಿರಾದ ಹಾಸ್ಯದ ಹಿನ್ನೆಲೆಯಲ್ಲಿ ನಮ್ಮ ಪೂರ್ವಿಕರ ವಿಚಾರಗಳ ವಿಡಂಬನೆ ನಡೆಸಿದ್ದಾರೆ. ವೈರಾಗ್ಯದ ಸೋಗುವೆತ್ತ ವಿಧವೆ ಯುವತಿಯರು ರಂಗಪ್ಪಯ್ಯ ಪ್ರಚವನ ನಡೆಸುವಾಗ ಮಾಡುವ ಸೇವೆ, ವೈರಾಗ್ಯದ ಬೋಧನೆಗೆ ಹೊರಟು ಕೃಷ್ಣಲೀಲಾ ಪ್ರಸಂಗ ಮಾಡ ಹೊರಡುವ ರಂಗಪ್ಪಯ್ಯ - ಇಲ್ಲೆಲ್ಲಾ ವಿಡಂಬನೆಯ ಬಿಸಿ ಹೆಚ್ಚಾಗಿದೆ. ಯುವಜನ ಪೀಳಿಗೆ ತನ್ನ ನೆಲದ ಅಂತಸ್ಸತ್ವವನ್ನರಿತು ನಡೆಯದೆ, ಮರೆತು, ನಡೆ, ನುಡಿ ಪಾಶ್ಚಾತ್ಯರ ಅನುಕರಣೆಗಿಳಿದಿರವುದರ ಬಗ್ಗೆ ಕಾದಂಬರಿಕಾರರಿಗಿರುವ ಬೇಸರ ಟೀಕೆಯ ರೂಪದಲ್ಲಿ ಎರಡು ಅಧ್ಯಾಯಗಳನ್ನೇ ಆವರಿಸಿದೆ. (ಆ. ೨೭, ೫೭).

ಕಾದಂಬರಿಯಲ್ಲಿ ಪಾತ್ರಗಳು ದೇಸಿಯ ಸೊಗಸನ್ನು ಮೈಗೂಡಿಸಿಕೊಂಡು ತಮ್ಮ ಮಾತುಕತೆಗಳಲ್ಲಿ ವ್ಯಕ್ತಪಡಿಸಿರುವುದು ಇಲ್ಲಿ ಗಮನೀಯ ಅಂಶ. ಜನತೆಯಲ್ಲಿ ಪ್ರಸಿದ್ಧಿಯಾಗಿರುವ ಜಾಣ್ಣುಡಿ ಗಾದೆ ಮಾತುಗಳನ್ನು ಇದ್ದಕ್ಕಿದ್ದ ಹಾಗೆ ತಂದಿಕ್ಕಿರುವುದು ಸಹಜತೆಗೆ ಕಳೆಕಟ್ಟಿದೆ. ಭೀಮರಾಯ ಕೊಲೆಯ ಆರೋಪದಿಂದ ಮುಕ್ತನಾದಾಗ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ನಡೆಸಿದ ಮಹಾರುದ್ರ ಅಭಿಷೇಕ, ವೇದಪಾರಾಯಣ, ಸಹಸ್ರ ಭೋಜನ, ರಾತ್ರಿ ಮಹೋತ್ಸವ ಹಾಗೂ ಇಂದಿರೆಯ ವಿವಾಹ ಈ ಸಂದರ್ಭಗಳಲ್ಲಿ ಅನವಶ್ಯಕವಾಗಿ ವರ್ಣನೆ ದೀರ್ಘ ರೂಪ ತಾಳಿ ಬೇಸರ ತರಿಸುತ್ತದೆ. ಇವೆಲ್ಲವನ್ನೂ ಕೈ ಬಿಟ್ಟಿದ್ದರೆ ಕಾದಂಬರಿಗೆ ಯಾವ ಬಗೆಯ ನಷ್ಟವೂ ಆಗುತ್ತಿರಲಿಲ್ಲ. ವಿಠಲರಾಯನ ಮರಣದ ಸಂದರ್ಭದಲ್ಲಿ ಮನೆಯವರೆಲ್ಲರ ಗೋಳು ಒಂದು ಅಧ್ಯಾಯ ಆವರಿಸಿದೆ. ಹೈಕೋರ್ಟಿನ ಬಗ್ಗೆ ಅರ್ಥವಿವರಣೆ ನೀಡುವ ಅಣ್ಣಯ್ಯಪ್ಪನ ಮಾತುಕತೆ ತೀರ ಅಸಹಜ ಬಲವಂತದ ನಗುತರಿಸುವ ಜಾಡು ಹಿಡಿದಿದೆ. ಬಿ. ಎ. ಗಳ ವಿಡಂಬನೆ 'ಸ್ವಲ್ಪ' ಅತಿ ಅತಿಯಾಯಿತು. ನೆಲ್ಲೂರು ಎತ್ತುಗಳ ಸಾರೋಟಿನ ಓಡಾಟ ; ಕಡಲೆ ತೊಗರಿ ಹುರಳಿಯ ತಾಳದಗಳಿಂದ ಕೂಡಿದ ಫಲಹಾರ ಕೂಟಗಳ ವರ್ಣನೆ ಮೇಲಿಂದಮೇಲೆ ಬಂದು ಬೇಸರ ತರಿಸುತ್ತದೆ. ಕಾದಂಬರಿಕಾರರೇ ಕಥೆ ಹೇಳ ಹೊರಡುವುದರಿಂದ ವಾಚಕರೇ, ಓದುಗರೇ ಇತ್ಯಾದಿ ಸಂಬೋಧನೆಗಳಿಂದ ತಮಗೂ ಓದುಗರಿಗೂ ಮಧುರವಾದ ಬಾಂಧವ್ಯವನ್ನು ಕಟ್ಟಿಕೊಳ್ಳುತ್ತಾರೆ. ಕೊಂಕಣಿ (?) ಭಾಷೆಯಲ್ಲಿ ಕಾದಂಬರಿಯಲ್ಲಿನ ಕೀಳು ಪಾತ್ರಗಳು ಮಾತ್ರ ವ್ಯವಹರಿಸುತ್ತವೆ. ಕಾದಂಬರಿಕಾರರ ದೃಷ್ಟಿಯಲ್ಲಿ ಮೇಲುವರ್ಗದ (Main Roles) ಪಾತ್ರಗಳ ಬಾಯಲ್ಲಿ ಕೊಂಕಣಿ ಬರಬಾರದೇ? ತಿಳಿದೋ ತಿಳಿಯದೆಯೋ ಪುನರುಕ್ತಿ ದೋಷಗಳು ಅಲ್ಲಲ್ಲಿ ಕಾಣಬರುತ್ತವೆ. ಉದಾಗೆ ಟೈಮ್‌ಪೀಸ್ ಎಂಬ ಗಡಿಯಾರ (ಪು. ೧೯) ಸಿಗರೇಟ್ ಎಂಬ ಬೀಡಿಗಳು, ಹವಾನ್ನ ಚುಟ್ಟಗಳು ; ಕೆಮಿಕಲ್ ಎಗ್ಝಾಮಿನರ್ ಎಂಬ ರಸಾಯನ ಪರೀಕ್ಷಕ (ಪು. ೨೮) ರಿಮಾಂಡ್ ಎಂಬ ತಾತ್ಕಾಲಿಕ ಬಂಧನ (ಪು. ೫೧).

ಒಟ್ಟಿನಲ್ಲಿ ಹೇಳುವುದಾದರೆ ಸಮಕಾಲೀನ ಸಮಾಜದ, ಜನತೆಯ ಅಭಿರುಚಿ ಧ್ಯೇಯ, ಧೋರಣೆ ಇವುಗಳ ಪ್ರಾಮಾಣಿಕ ವಿವೇಚನೆ; ಗಾಂಭೀರ್ಯದ ಜೊತೆಗೆ ತಿಳಿ ಹಾಗೂ ವಿಕಟ ಹಾಸ್ಯಗಳ ಮೇಳೈಕೆಯ ಸೊಗಸು, ನಿರಾಭರಣವೂ ಸರಳವೂ ಲಲಿತವೂ ಆದ ಹೃದ್ಯ ಗದ್ಯ; ತನ್ನ ನೆಲದ ಮಣ್ಣಿನ ಗುಣವನ್ನೆಲಾ ಮೈಗೂಡಿಸಿಕೊಂಡು ಮನೋಹರವಾಗಿರುವ ಕಾದಂಬರಿಯ ಮೈತುಂಬ ಘಮ್ಮೆಂದು ಸೂಸುವ ದೇಸೀಯ ವಾಸನೆ; ಪಾತ್ರಗಳ ನಡೆ, ನುಡಿಗಳಲ್ಲಿ ನಾಟಕೀಯತೆ ಸಂಭಾಷಣೆಯಲ್ಲಿನ ಜೀವಂತಿಕೆ, ಕಾದಂಬರೀಕಾರರ ಆದರ್ಶದ ಆರಾಧನೆ–ಇವೆಲ್ಲಾ ಕನ್ನಡದ ಈ ಮೊತ್ತಮೊದಲ ಸಾಮಾಜಿಕ ಕಾದಂಬರಿಯ ಸಂಪನ್ನ ಗುಣಗಳು, ಹಿರಿಮೆಯ ಕೋಡುಗಳು.

---

# ಎರಡು ವಾದ್ಯಗಳು – ರಾವಣಹಸ್ತ ಮತ್ತು ಪಂಚಮುಖ[1]

**ಎಂ. ಚಿದಾನಂದಮೂರ್ತಿ**

**ಚಂದ್ರಪ್ರಭಾಪುರಾಣ, ಪದ್ಮರಾಜಪುರಾಣ** ಮುಂತಾದ ಕನ್ನಡ ಕಾವ್ಯಗಳಲ್ಲಿ ಸಂಗೀತಕ್ಕೆ ಸಂಬಂಧಿಸಿದ ನೂರಾರು ಪಾರಿಭಾಷಿಕ ಪದಗಳೂ ವಾದ್ಯಗಳ ಹೆಸರುಗಳೂ ದೊರಕುತ್ತವೆ. ಶಿಲ್ಪದಲ್ಲಿ ಅನೇಕ ವಾದ್ಯಗಳನ್ನು ಶಿಲ್ಪಿಗಳು ಮೂಡಿಸಿದ್ದಾರೆ. ಇವುಗಳಲ್ಲಿ ಅನೇಕವನ್ನು ಸಂಗೀತ ಶಾಸ್ತ್ರಜ್ಞರು ಗುರುತಿಸಬಲ್ಲರು ಮತ್ತು ಗುರುತಿಸಿಯೂ ಇದ್ದಾರೆ. ಆದರೆ ಎಲ್ಲ ಪಾರಿಭಾಷಿಕ ಶಬ್ದಗಳನ್ನು ವಿವರಿಸುವುದು ಮತ್ತು ಎಲ್ಲ ವಾದ್ಯಗಳನ್ನು ಗುರುತಿಸುವುದು ಕಷ್ಟವಾದರೂ ಆಶ್ಚರ್ಯವಿಲ್ಲ. ಈ ಬಗ್ಗೆ ಇನ್ನೂ ಹೆಚ್ಚಿನ ಕೆಲಸ ನಡೆಯಬೇಕಾಗಿದೆ. ಕನ್ನಡ ಕಾವ್ಯಗಳಲ್ಲಿ ಕಂಡುಬರುವ ಮತ್ತು ವಿದ್ವಾಂಸರಿಗೆ ಆಗಲೇ ತಿಳಿದಿರುವ ಎರಡು ವಾದ್ಯಗಳಿಗೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ನಿರೂಪಿಸುವುದು ಈ ಟಿಪ್ಪಣಿಯ ಉದ್ದೇಶವಾಗಿದೆ.

ರಾವಣಹಸ್ತ ಎನ್ನುವುದು ಸಂಸ್ಕೃತ ಮತ್ತು ದೇಶಿಯ ಭಾಷೆಗಳಲ್ಲಿ ಅನೇಕ ಕಡೆ ಉಲ್ಲೇಖವಾಗಿರುವ ಒಂದು ವಾದ್ಯ. ಕನ್ನಡದಲ್ಲಿ ಇದರ ಉಲ್ಲೇಖ ಅನೇಕ ಕಡೆ ಬಂದಿದೆ. ಅವುಗಳಲ್ಲಿ ಒಂದೆರಡನ್ನು ಮಾತ್ರ ಕೊಡಬಹುದು. **ಪಂಪರಾಮಾಯಣ**[2]ದಲ್ಲಿ ರಾವಣನು ರಾವಣ ಹಸ್ತವನ್ನು ಬಾರಿಸಿದನೆಂದಿದೆ– " . . . ಬಾಜಿಸಿದಂ ಲಯತ್ರಯಂ ಸುಲಲಿತಮಾಗೆ ವಸ್ತು ಗುಣ ರೂಪ ಜಿನಸ್ತವನಾಂಕಮಾಲೆಯಂ ಪಲತೆಱದಿಂ ರಸಂಬಡೆಯೆ ರಾವಣ ಹಸ್ತದಿನಂದು ರಾವಣಂ" ಅದೇ ಕಾವ್ಯದ ಸಂಗ್ರಹದ ಶಬ್ದಕೋಶದಲ್ಲಿ ಪ್ರೊ. ಡಿ. ಎಲ್. ನರಸಿಂಹಾಚಾರ್ಯರು "ತೆಂಗಿನ ಚಿಪ್ಪನ್ನುಳ್ಳ ಒಂದು ಬಗೆಯ ಚಿಕ್ಕ ವೀಣೆ" ಎಂಬ ಅರ್ಥ ಹೇಳಿ, ತಮಿಳಿನ 'ಇರಾವಣಾತ್ತಂ' ಎಂಬ ಪದವನ್ನು ಉದಾಹರಿಸಿದ್ದಾರೆ. ಅವರ ಅರ್ಥಕ್ಕೆ ಮೂಲ ಬಹುಶಃ Tamil Lexicon ಎಂಬ ಕೋಶ. ಪದ್ಮಣಾಂಕನ **ಪದ್ಮರಾಜ ಪುರಾಣ**ದಲ್ಲಿಯೂ[3] ಈ ವಾದ್ಯದ ಉಲ್ಲೇಖವಿದೆ. ಕನ್ನಡ **ಬಸವಪುರಾಣ**[4]ದಲ್ಲಿ ರಾವಣವೀಣೆ, ರಾವಣಹಸ್ತ, ಗೌರೀವೀಣೆ ಮುಂತಾದ 'ವೀಣೆ'ಗಳ ಪಟ್ಟಿಯಲ್ಲಿ ಅದರ ಹೆಸರನ್ನು ಕಾಣಬಹುದು. ಕನ್ನಡ ಕಾವ್ಯಗಳಲ್ಲಿ ಅದರ ಉಲ್ಲೇಖಗಳ ಬಾಹುಳ್ಯವನ್ನು ನೋಡಿದರೆ ಅದು ಕರ್ನಾಟಕದಲ್ಲಿ ವಾಸ್ತವವಾಗಿ ಬಳಕೆಯಲ್ಲಿದ್ದ ಒಂದು ತಂತೀವಾದ್ಯವಾಗಿದ್ದಿತೆಂದು ಹೇಳಬಹುದು.

ತೆಲುಗಿನಲ್ಲಿ ಇದು ರಾವಣಹಸ್ತಮು ಎಂಬ ರೂಪದಲ್ಲಿ ದೊರಕುತ್ತದೆ.[5] ತಮಿಳಿನ 'ಇರಾವಣಾತ್ತಮ್' ಎಂಬುದು ರಾವಣಹಸ್ತದಿಂದ ಬಂದಿರಬಹುದೆಂದು Tamil Lexcion ಗ್ರಂಥದ ಸಂಪಾದಕರು ಊಹಿಸಿದ್ದಾರೆ.[6] ಆದ್ದರಿಂದ ದಕ್ಷಿಣದಲ್ಲಿ ಆ ವಾದ್ಯಕ್ಕಿದ್ದ ಹೆಸರು 'ರಾವಣಹಸ್ತ' ಎಂಬುದೇ ಆಗಿದೆ. ಆದರೆ ಸಂಸ್ಕೃತದಲ್ಲಿ ದೊರಕುವ ರೂಪ 'ರಾವಣಹಸ್ತ' ಅಲ್ಲ, 'ರಾವಣಹಸ್ರ'.[7]

ಕೆಲವರು ಇದನ್ನು 'ರಾವಣಾಸ್ತ್ರ' ಎಂದು ಭಾವಿಸಿರುವುದೂ ಉಂಟು.[8] ಇವುಗಳಲ್ಲಿ ಮೂಲರೂಪವಾವುದು ಎಂಬುದನ್ನು ಬಲ್ಲವರು ನಿರ್ಧರಿಸಬೇಕು.

ರಾವಣಹಸ್ತದ ಬಗ್ಗೆ ನಮ್ಮ ಕುತೂಹಲ ಇಷ್ಟಕ್ಕೇ ನಿಲ್ಲುವುದಿಲ್ಲ. 'ರಾವಣಹಾತೊ' ಎಂಬ ಹೆಸರಿನ ಒಂದು

---

1 ಈ ಟಿಪ್ಪಣಿ ಬರೆಯುವುದಕ್ಕೆ ಉಪಯುಕ್ತವಾದ ಕೆಲವು ಸಾಮಗ್ರಿಗಳನ್ನು ಒದಗಿಸಿದ ಶ್ರೀ ಸಿ. ಶ್ರೀನಿವಾಸರಾಜು ಮತ್ತು ಎಚ್. ಎಸ್. ರಾಘವೇಂದ್ರರಾವ್ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

2 ಪಂಪರಾಮಾಯಣ (ಕನ್ನಡ ಸಾಹಿತ್ಯ ಪರಿಷತ್ ಪ್ರಕಟಣೆ), 10–177.

3 ಪದ್ಮರಾಜ ಪುರಾಣ (ಸಂ. ಆರ್. ಸಿ. ಹಿರೇಮಠ, ಧಾರವಾಡ, 1958) 3–51.

4 ಬಸವಪುರಾಣ (ಪೇಟೆ ಪ್ರತಿ). 19–7.

5 Telugu-English Dictionary, P. 849.

6 Vol. I P. 325.

7 Monier williams: Sanskrit-English Dictionary, P. 879. ಸೆಯಿಂಟ್ ಪೀಟರ್‌ಬರ್ಗ್ ಕೋಶದಲ್ಲೂ ಇದೇ ರೂಪವಿದೆ.

8 H. A. Popley: The Music of India (New Delhi, 1966) P. 102.

ವಾದ್ಯವನ್ನು ಗುಜರಾತ್ ಮತ್ತು ರಾಜಾಸ್ಥಾನಗಳಲ್ಲಿ ಜಾನಪದ ಗಾಯಕರು ಬಳಸುತ್ತಿದ್ದಾರೆ ಎಂಬ ಸಂಗತಿಯನ್ನು ಶ್ರೀ ಎಸ್. ಕೃಷ್ಣಸ್ವಾಮಿಯವರು ಉಲ್ಲೇಖಿಸುತ್ತಾರೆ.[9] ಅದಕ್ಕೆ ಸಂಬಂಧಿಸಿದ ಅವರ ಮಾತುಗಳು ಇವು–" The earliest instrument played with a bow is probably the *Ravanahath* or *Ravanastra*, attributed to Ravana, the mythical King of Lanka. This instrument seems to have been used in Vedic times and has been referred to in Sanskrit treatises, What this instrument was like is rather doubtful ; but in some parts of Gujarat and Rajasthan there exists an instrument bearing more or less the same name.[10] It is Called *Ravanahatho* and is used by strolling musicians Called *Bharataris*.

The *ravanahatho* consists of a resonator made of half a coconut shell. The shell is polished and covered with skin which is fastened to the undrside of the shell by means of a Catton thread. A bamboo about two feet long is fixed to the resonator. The instrument carries two main strings one of which is made of a species of flax or horsehair the oher is of steel. Sometimes there are about 12 sympathetic strings of steel, all of them attached to a series of pegs fixed to the sides of the stick at the end.

While playing, the resonator is pressed against the left side of the chest while the handle faces upwards. It is Played with a crude bow made of horsehair. Small bells (ghunghurus) are attaced to the handle of the bow so that a jingling effect is Produced as the instrument is Played. Simple music covering a range of four to five notes can be Played easily.

It is a view that this instrument might have been the origin of the modern violin of the West".

ರಾವಣ ಹಸ್ತವು ತಂತೀ ವಾದ್ಯವಾದರೆ ಪಂಚಮುಖವು ಒಂದು ಚರ್ಮವಾದ್ಯ. ಹೆಸರೇ ಸೂಚಿಸುವಂತೆ ಇದು ಐದು ಮುಖಗಳುಳ್ಳ ಡ್ರಮ್ ವಾದ್ಯ. ಇದನ್ನು ಮದ್ರಾಸಿನ ಸರ್ಕಾರಿ ಮ್ಯೂಜಿಯಮ್ಮಿನಲ್ಲಿಟ್ಟಿದ್ದಾರೆ. ಆ ಮ್ಯೂಜಿಯಮ್ಮಿನ ಡೈರೆಕ್ಟರ್ ಅವರು ನನಗೆ ಬರೆದ ಪತ್ರವೊಂದರಲ್ಲಿ (೨೭-೭-೧೯೬೬) ಆ ವಾದ್ಯದ ವಿವರಗಳನ್ನು ಕೊಟ್ಟಿದ್ದಾರೆ : " Panchamukha Vadyam is a huge five-faced drum, mounted on a special stand or kept in position on a four-wheeled carriage It is used in temple music. The five faces are named after the five faces of Siva ; Sadyojatam Isanam, Tatpurusham, Aghoram and Vamadevam. The shell is of bronze and from its top emerge five hollow cylinders. These cylinders are covered by skin. The drum heads are on the same level. The diameter of the central face is slightly larger than those of the peripheral faces. The instrument is played with both the hands. It is played solo and in conjunction with the sudda maddalam. The timber resembles that of the tabala tarang. The pitch of the faces is adjusted by tightening or loosening the squeeze of the skin at the regin of the neck and below the rim. The Panchamukha Vadyam is referred to as Kuda-Panchamukhi by Arunagiri-nathar. Parasaivas are privileged class of people who are entitled to perform on it. ". ಚಿದಂಬರ ದೇವಾಲಯದ ಶಿಲ್ಪವೊಂದರಲ್ಲಿ ಪಂಚಮುಖ ವಾದ್ಯವನ್ನು ನೋಡಬಹುದೆಂದೂ ಇದನ್ನು ಹೋಲುವ ವಾದ್ಯವೊಂದು ಉತ್ತರದ ರಾಜ್ಗೀರ್‌ನಲ್ಲಿ ನಡೆದ ಭೂಶೋಧನೆಯಲ್ಲಿ ದೊರಕಿರುವುದೆಂದೂ, ಕಾಲ ಕ್ರಿ. ಪೂ. ಮೂರನೆಯ ಶತಮಾನವೆಂದೂ ಶ್ರೀ ಎಸ್. ಕೃಷ್ಣಸ್ವಾಮಿಯವರು ಹೇಳುತ್ತಾರೆ.[11]

ಈ ವಾದ್ಯ ಕರ್ಣಾಟಕದಲ್ಲಿಯೂ ಒಮ್ಮೆ ಬಳಕೆಯಲ್ಲಿದ್ದಿತೆಂಬುದಕ್ಕೆ ಎರಡು ಆಧಾರಗಳನ್ನು ಕೊಡಬಹುದು.

---

9 Musical Instruments of India (Delhi. 1967) P. 83.

10 ' ರಾವಣಹಾತೊ ' ಎಂಬುದಕ್ಕೆ ' ರಾವಣಹಸ್ತ 'ವೆಂಬುದು ಮೂಲವಾಗಿದ್ದಿರಬೇಕು.

11. Indian Musical Instruments, P. 9.

'ಪದ್ಮಣಾಂಕನ ಪದ್ಮರಾಜ ಪುರಾಣ'ದಲ್ಲಿ ವಾದ್ಯಗಳ ಪಟ್ಟಿ ಕೊಡುವಾಗ 'ಪಂಚಮುಖ'ದ ಹೆಸರು ಹೇಳಿ ಅದಕ್ಕೆ 'ಅತಿಶುಭಂಕರ' ಎಂಬ ವಿಶೇಷಣವನ್ನು ಕೊಡಲಾಗಿದೆ. (೩.೫೭) ಅರಳಗುಪ್ಪೆಯ ಶಿವ ದೇವಾಲಯದ ಮೇಲ್ಛಾವಣಿಯಲ್ಲಿರುವ ನಟರಾಜನ ವಿಗ್ರಹದ ಎಡಗಡೆ ಕುಳಿತಿರುವ ವ್ಯಕ್ತಿ ತನ್ನ ಮುಂದೆ ಮೂರು ಮೃದಂಗಗಳನ್ನು ಇಟ್ಟುಕೊಂಡು ಬಾರಿಸುತ್ತಿದ್ದಾನೆ.[12] ಇವು ಬೇರೆ ಬೇರೆಯಾಗಿ ಕಂಡುಬಂದರೂ ಅವುಗಳು ಒಟ್ಟಿಗೆ ಸೇರಿಕೊಂಡಂತಿರುವುದನ್ನು ನೋಡಿದರೆ ಅವುಗಳನ್ನು ಒಂದೇ ವಾದ್ಯವೆಂದು ಭಾವಿಸುವುದು ಉಚಿತವಾಗಿ ತೋರುತ್ತದೆ. ಇನ್ನೂ ಎರಡು ಮುಖಗಳು ಆಚೆ ಇವೆ ಎಂದು ಕಲ್ಪಿಸಿಕೊಳ್ಳುವುದಾದರೆ ಇದನ್ನು ಇನ್ನೊಂದು ರೀತಿಯ 'ಪಂಚಮುಖ'ವೆಂದು ಭಾವಿಸುವುದರಲ್ಲಿ ಅಂತಹ ತಪ್ಪು ಕಾಣಿಸದು.[13]

---

12. Karnataka through the, Ages Fig 25

13. ಮದ್ರಾಸ್ ಮ್ಯೂಜಿಯಮ್ಮಿನ 'ಪಂಚಮುಖ'ದಲ್ಲಿ ಒಂದೇ ನಗಾರಿಗೆ ಐದು ಮುಖಗಳಿವೆ. ಆದರೆ ಇಲ್ಲಾದರೋ ಮೂರು ಬಿಡಿ ಮೃದಂಗಗಳು ಸ್ಪಷ್ಟವಾಗಿ ಕಾಣಿಸುತ್ತವೆ.

ಇಲ್ಲಿರುವುವು ಬರಿಯ ಮೂರು ಮುಖಗಳೆಂದೂ, ಇವು ಮೂರೂ ಒಂದೇ ವಾದ್ಯವೆಂದೂ ಭಾವಿಸುವುದಾದರೆ ಆಗ ಅದು ತ್ರಿಮುಖ ಮೃದಂಗ ಅಥವಾ ಪುಷ್ಕರಕ್ಕೆ ನಿದರ್ಶನವಾಗುತ್ತದೆ. ಈ 'ಪುಷ್ಕರ' ವಾದ್ಯವು ಪೂನಾದ ರಾಜಾ ಕೇಳ್ಕರ್ ಮ್ಯೂಜಿಯಮ್ಮಿನಲ್ಲಿದೆ. (ಸಂತೋಷ ಕುಮಾರ ಗುಲ್ವಾಡಿ: 'ಡಮರು' (ಪ್ರಜಾಮತ ದೀಪಾವಳಿ ವಿಶೇಷ ಸಂಚಿಕೆ, 1966) ಪು. 153

---

## ಪಾರಿಜಾತಕ್ಕೆ

•

ಧರೆಗುರುಳಿದಿರೇಕಿನಿತು ಮುಂಜಾವಿನಲೆ ಪಾರಿಜಾತಗಳೆ,
ಕುಂದಿ ಹೋದೆನು ನಿಮ್ಮ ಕಂದಿದೀ ಮುಖ ಕಂಡು
ಅರುಣ ರವಿಯ ಕಿರಣದ ಕೆಂಪಳಿದಿಲ್ಲ
ಮಿಂದು ಮಡಿಯಾಗಿಲ್ಲ, ಸಿದ್ಧವಾಗಿಲ್ಲ ಶಿವಗೆ
ಆರೋಗಣೆಗೆ ಇಂದು ಶಿವಾರ್ಚನೆಯು
ಮುಗಿದ ಮೇಲಾದರು ಶಿವನ ಸಿರಿಮುಡಿಗೇರಿ
ಬಾಡಿದ್ದರೆಷ್ಟು ಚೆನ್ನು!
ಗಳಿಗೆ ಕಾಲದ ಬಾಳು ಮರುಗಳಿಗೆ ಸಾವು
ನಮ್ಮ ಜೀವವು ಅಂತೆಯೆ ಕ್ಷಣಿಕ
ಮುಂಜಾವಿನಾ ಹನಿ ಇರುವನಕ
ಬಾಲ್ಯ ಯೌವ್ವನ ಮುಪ್ಪು ಸಾವುಗಳು
ಬರುವ ಬಗೆ
ಬೆಳಗು ಮಧ್ಯಾಹ್ನ ಸಂಜೆ ರಾತ್ರಿಗಳಂತೆ ನಮಗೆ.

—ವೃಕ್ಷರಾಜ

(ರಾಬರ್ಟ್ ಹೆರಿಕ್‌ನ 'ಡೆಫೊಡಿಲ್ಸ್' ಕವಿತೆಯ ಭಾವಾನುವಾದ)

# ಕನ್ನಡ ನಾಡು, ಕನ್ನಡ ಭಾಷೆ ಮತ್ತು ಸಂಸ್ಕೃತಿ

ತಿ. ತಾ. ಶರ್ಮ

## ಪಂಚದ್ರಾವಿಡಗಳ ಮೂಲಭಾಷೆ ಯಾವುದು ?

* "Philalogists are agreed that in the Dravidan group of languages Tamil, Telugu and Kannada fall into a class by themselves. Of them the first two are the languages entitled to be considered the more ancient. Though Kanarese has no mean literature, still the belief of the ancient Tamil scholars was that the Kanarese language is a product of the inter-mingling of Tamil and Telugu. Jayamgoṇḍān the Prince of Poets of the early years of the twelfth century A.D. speaks of Kanarese being a jumble of 'some Telugu and more Tamil.' The truth of his observation will not be lost on those who have studied old Kanarese."

"ಭಾಷಾಶಾಸ್ತ್ರವಿಶಾರದರ ಅಭಿಪ್ರಾಯದಲ್ಲಿ ತಮಿಳು, ತೆಲುಗು, ಕನ್ನಡ, ಇವು ಮೂರೂ ದ್ರಾವಿಡ ಭಾಷಾವರ್ಗಕ್ಕೆಸೇರುತ್ತವೆ. ಮೂರರಲ್ಲಿ ಮೊದಲೆರಡು ಹೆಚ್ಚು ಪ್ರಾಚೀನ ಭಾಷೆಗಳೆಂದು ಒಪ್ಪಿಕೊಳ್ಳಲೇ ಬೇಕು. ಕನ್ನಡದಲ್ಲೂ ಅಷ್ಟೇನೂ ಕಡೆಗಣಿಸಬಹುದಾದ ಸಾಹಿತ್ಯವಿಲ್ಲವೆನ್ನಬಹುದಾದರೂ ಪ್ರಾಚೀನ ತಮಿಳು ವಿದ್ವಾಂಸರು "ಕನ್ನಡವು ತಮಿಳು-ತೆಲುಗು ಎರಡರ ಬೆರಕೆ ಭಾಷೆ" ಎಂದು ಭಾವಿಸಿದ್ದರು. ಕ್ರಿ.ಶ. ಹನ್ನೆರಡನೆಯ ಶತಮಾನದ ಕವಿರಾಜ ಜಯಂಗೊಂಡಾನ್ ಎಂಬಾತ "ಕನ್ನಡವೆಂದರೆ ಕೊಂಚ ತೆಲುಗು, ಹೆಚ್ಚು ತಮಿಳು, ಇವೆರಡರ ಕಲಬೆರಕೆ ಭಾಷೆ" ಅಂದಿದ್ದಾನೆ. ಹಳೆಗನ್ನಡವನ್ನು ಅಭ್ಯಾಸ ಮಾಡಿದವರಿಗೆ ಈ ಮಾತಿನ ಸತ್ಯದ ಅರಿವಾಗುತ್ತದೆ."

ಎಂಬುದಾಗಿ ಪಂಡಿತ ರಾಘವಯ್ಯಂಗಾರ್ಯರು – ಮಹಾಪಂಡಿತ ವಿಮರ್ಶಕರು ಹೇಳಿದರು. ಈ ಪಂಡಿತರು ನಿಜವಾಗಿಯೂ ಹಳಗನ್ನಡ ಕಾವ್ಯಗಳನ್ನು ಅಧ್ಯಯನ ಮಾಡಿದ್ದರೆ ಈ ಧಾಟಿಯಲ್ಲಿ ಖಂಡಿತವಾಗಿಯೂ ಬರೆಯುತ್ತಿರಲಿಲ್ಲ.

ಕನ್ನಡ, ತೆಲುಗು, ತಮಿಳು, ಮಲಯಾಳ, ತುಳು – ಈ ಐದು ಭಾಷೆಗಳಲ್ಲಿ ಯಾವುದು ಮೊದಲು, ಯಾವುದು ಅನಂತರದ್ದೆಂಬ ವಾದವನ್ನೆತ್ತಿ ಕಲಹಕ್ಕೆ ಕಾಲ್ಕೆರೆಯುವುದು ಸರಿಯಲ್ಲ. ಇವೈದೂ ಭಾಷೆಗಳ ಮೂಲಭಾಷೆ, ತಾಯಿಬೇರು, ಯಾವುದೆಂಬುದು ಮೊದಲು ನಿಶ್ಚಯವಾಗಲಿ.ಅದುವರೆಗೆ ದುರಭಿಮಾನದಿಂದ, ಚಿಲ್ಲರೆ ಜಗಳ ಮಾಡಿ ಪ್ರಯೋಜನವಿಲ್ಲ.

ಸಿಂಧು ಸಭ್ಯತೆ, ಸಿಂಧು ಲಿಪಿ, ಇವೇ ಮೊದಲಾದ ಜಟಿಲ ಸಮಸ್ಯೆಗಳು ಪೂರಣವಾಗದೆ ಹಾಗೆಯೇ ಉಳಿದಿವೆ. ಮಹೆಂಜೊದರೋ ಲಿಪಿ, ಸಭ್ಯತೆ, ದ್ರಾವಿಡವೋ, ದ್ರಾವಿಡೇತರವೋ? ಅದು ದ್ರಾವಿಡವೇ ಆದರೆ ಆ ಭೂಭಾಗವನ್ನೇಕೆ 'ದ್ರಾವಿಡ'ವೆಂದು ಕರೆಯಲಿಲ್ಲ? ವಿಂಧ್ಯಕ್ಕೆ ದಕ್ಷಿಣವಾದ ಪರ್ಯಾಯದ್ವೀಪವನ್ನು ಮಾತ್ರ ಏಕೆ ದ್ರಾವಿಡವೆಂದು ಕರೆಯಲಾಯಿತು? ಉದಾರ ದೃಷ್ಟಿಯ ಸಂಶೋಧನೆಗೆ ಅಪಾರ ಅವಕಾಶವಿದೆ.

## ಐತಿಹಾಸಿಕ-ಕಲಾ ಅವಶೇಷಗಳು ಹಾಳಾಗುತ್ತಿವೆ

"ಆರು ಏಳನೆಯ ಶತಮಾನದ ಅಕ್ಷರಗಳುಳ್ಳ ಗೌಡೂರಿನಲ್ಲಿಯ ತುಂಡುಶಾಸನ ಅಲ್ಲಿನ ಒಂದು ಹೊಲದಲ್ಲಿದ್ದಿತು. ಆ ಹೊಲ ಸರಿಯಾಗಿ ಬೆಳೆಕೊಡಲಿಲ್ಲವಂತೆ. ತಪ್ಪು ಅಲ್ಲಿಯ ಶಾಸನ ಕಲ್ಲಿನ ಮೇಲೆ ಹೊರಿಸಲ್ಪಟ್ಟಿತು! ಅನಿಷ್ಟ ನಿವಾರಣೆಗಾಗಿ ಕಲ್ಲು

*The Tamils and Andhras: Pandit Raghava Iyengar : 'Triveni' : March 1928, p. 253

ಒಡೆಯಲ್ಪಟ್ಟಿತು. ಮುಂದೆ ಹೊಲ ಬೆಳೆಕೊಡುತ್ತೋ ಇಲ್ಲವೋ–ಒಂದು ಮಹತ್ವದ ಶಾಸನ ಮಾತ್ರ ಕೊನೆಯವರೆಗೂ ನಷ್ಟವಾಯಿತು." *

ಎಂಬದಾಗಿ ಶ್ರೀ ರಿತ್ತಿಯವರು ತಮ್ಮ ವ್ಯಥೆಯನ್ನು ವ್ಯಕ್ತಪಡಿಸಿದ್ದಾರೆ. ಇಷ್ಟು ಮಾತ್ರವಲ್ಲ ಈ ವಿಷಾದ ವಚನವನ್ನು ಮುದುವರೆಸುತ್ತಾ

"ಕುರುಡಿಯಲ್ಲೊಂದು ಗುಡಿ ಇದೆ. ಅದಕ್ಕೆ ಈಗ ನೆಲಗುಡಿ ಎನ್ನುತ್ತಾರೆ. ಅಲ್ಲಿಯ ಮಹನೀಯರೊಬ್ಬರು ಅದನ್ನೀಗ ತಮ್ಮ ದನಗಳನ್ನು ಕಟ್ಟಲು ಉಪಯೋಗಿಸುತ್ತಾರೆ! ಮಧುಸೂದನನೆಂಬ ಒಬ್ಬ ಅಧಿಕಾರಿಯು ತಾನು ಅದನ್ನು ಬಹು ಶ್ರದ್ಧೆಯಿಂದ, ಭಕ್ತಿಯಿಂದ, ಕಟ್ಟಿಸಿದನೆಂದು ಗುಡಿಯಲ್ಲಿಯ ಶಾಸನಗಳಲ್ಲಿ ಬರೆಸಿದ್ದಾನೆ. ಅದರ ಅವಸ್ಥೆಯನ್ನೀಗ ಅವನು ನೋಡಿದ್ದರೆ ಏನನ್ನುತ್ತಿದ್ದನೋ! ಒಳಗೆ ಕಾಲಿಡಲೂ ಆಗದು ಅದರಲ್ಲಿ! ಅಲ್ಲೀಗ ದೇವರೂ ಇಲ್ಲ, ತನ್ನ ಆವಾಸಕ್ಕಾದ ಅವಮಾನವನ್ನು ಕಂಡು ಓಡಿ ಹೋಗಿರಬೇಕು! ಬಳಿಯಲ್ಲಿಯೇ ಆಕರ್ಷಕವಾದ ಎರಡು ಶಿಲ್ಪಗಳಿವೆ. ಒಂದು ಸಂಗೀತ ವಿದುಷಿಯದು–ತನ್ನ ನಾಜೂಕಾದ ಬೆರಳುಗಳಿಂದ ವೀಣೆಯನ್ನು ಮಿಾಟುತ್ತಿದ್ದಾಳೆ. ಇನ್ನೊಬ್ಬಳು ನರ್ತಕಿ–ಸಂಗೀತಗಾರಳ ತಾಳಕ್ಕೆ ಸರಿಯಾಗಿ, ಮೋಹಕವಾಗಿ ಹೆಜ್ಜೆಯನ್ನಿಕ್ಕುತ್ತಿದ್ದಾಳೆ. ಈ ಮೂರ್ತಿಗಳು ಯಾವ ಕ್ಷಣವೋ ಬಿದ್ದು ಹೋಗುವಂಥ ಸ್ಥಿತಿಯಲ್ಲಿ ನಿಂತಿವೆ!"

ಎಂದು ಹೇಳಿ, ಕಣ್ಣೀರಿಟ್ಟಿದ್ದಾರೆ.

ವಾಸ್ತುಶಿಲ್ಪ ಕಲಾಖನಿಯೆಂದು ಕೀರ್ತಿಗಳಿಸಿರುವ ನಮ್ಮ ರಾಜ್ಯದಲ್ಲಿ ಅಮೂಲ್ಯ ಪ್ರಾಚೀನ ಐತಿಹಾಸಿಕ–ಕಲಾವಸ್ತುಗಳು ಹೀಗೆ ಹಾಳಾಗುತ್ತಿವೆ. ನಮ್ಮ ರಾಜ್ಯ ಸರಕಾರ ಕೂಡಲೆ "ಆರ್ಕಿಯಲಾಜಿಕಲ್" ಆಡಳಿತ ಶಾಖೆಯನ್ನು ಸ್ವತಂತ್ರಮಾಡಿ, ಸಕಲಾಂಗ ಸಂಪೂರ್ಣಮಾಡಿ, ಸಾಕಾದಷ್ಟು ಮಂದಿ ನಿಪುಣ ಅಧಿಕಾರಿಗಳನ್ನು ಕೊಟ್ಟು, ವಾರ್ಷಿಕ ಆಯ–ವ್ಯಯ ಅಂದಾಜಿನಲ್ಲಿ ಈ ಆಡಳಿತ ಶಾಖೆಗೆ ಕನಿಷ್ಠ ಪಕ್ಷ ೫ ಲಕ್ಷ ರೂ.ಗಳನ್ನಾದರೂ ಒದಗಿಸೀತೆಂದು ನಿರೀಕ್ಷಿಸೋಣ.

ಈಗಿರುವಂತೆ ಈ ಆಡಳಿತ ಶಾಖೆಯು ಮೈಸೂರು ವಿಶ್ವವಿದ್ಯಾನಿಲಯದ ಒಂದಂಗವಾಗಿದೆ. ಇರಲಿ, ಬಾಧಕವಿಲ್ಲ. ಈ ಅಂಗದ ಬೆಲೆಯನ್ನರಿತು ವಿಶ್ವವಿದ್ಯಾನಿಲಯವದನ್ನು ಬಲಪಡಿಸಬೇಕಾದ ಅವಶ್ಯಕತೆ ಇದೆ. ನೂರಾರಲ್ಲ ಸಾವಿರಾರು ಪ್ರಾಚೀನ ದೇವಾಲಯಗಳೂ, ಶಿಲಾಶಾಸನಗಳೂ, ಶಿಲಾಮೂರ್ತಿಗಳೂ ಹಾಳಾಗುತ್ತಿವೆ. ಅವುಗಳ ಸಂರಕ್ಷಣೆ ಅತ್ಯಗತ್ಯ. ಹಾಗೆಯೇ ಭೂಶೋಧನೆಗಾಗಿ ಹತ್ತಾರು ಪ್ರಾಚೀನ, ಐತಿಹಾಸಿಕ ಕ್ಷೇತ್ರಗಳು ಅರ್ಧ ಶತಮಾನದಿಂದ ಕಾದಿವೆ. ಈ ಕೆಲಸ ನಡೆಯದೆ ಇದ್ದರೆ ಸತ್ಯವೂ, ಪೂರ್ಣವೂ ಆದ, ಕರ್ಣಾಟಕ ಸರ್ವತೋಮುಖವಾದ ಇತಿಹಾಸ ಬರೆಯಲು ಸಾಧ್ಯವಿಲ್ಲ.

### ಅರಿಕೇಸರಿಯ ತಂದೆಯ ಶಾಸನ

ಕುಕ್ಕರಹಳ್ಳಿಗೆ (ಮೈಸೂರು) ದಕ್ಷಿಣದ ಕಡೆ ತೋಟಿಯ ಹೊಲದಲ್ಲಿ ಬಿದ್ದಿರುವ ಶಾಸನಗಲ್ಲು ಬಹಳ ಮುಖ್ಯವಾದುದು. ಈ ಶಾಸನಗಲ್ಲನ್ನು ಕಾಪಾಡಬೇಕು. ಶಾಸನಗಳ ಸಂಗ್ರಹಕಾರರು ಈ ಶಾಸನವು ಸುಮಾರು ಕ್ರಿ.ಶ. ೯೦೦ರಲ್ಲಿ ಬರೆದಿರಬೇಕೆಂದೂ, ಇದರಲ್ಲುಕ್ತವಾಗಿರುವ ಚಾಳುಕ್ಯ ನರಸಿಂಗಯ್ಯನು ಪಂಪಕವಿ ಪೋಷಕ ಚಾಳುಕ್ಯ ಅರಿಕೇಸರಿಯ* ತಂದೆಯಾಗಿರಬೇಕೆಂದೂ, ಅನುಮಾನ ಮಾಡಿದ್ದಾರೆ. ಶಾಸನದ ಮುಖ್ಯ ಭಾಗವನ್ನಿಲ್ಲಿ ಕೊಡಲಾಗಿದೆ:

೧. ಸ್ವಸ್ತಿಸಮಧಿಗತ ಪಞ್ಚಮಹಾಸಬ್ದ ಮಹಾ
೨. ಸಾಮನ್ತನಾದಿವರಾಹ ಲಾಞ್ಛನ ನಾಹವ ನಿರ್ಭಯ
೩. ನಭಿಮಾನ ವಾಮನ ಮಟ್ಟನ ಚರಿತನ ಸತೀವಿದೂರ
೪. ನಾಳ್ದಾನಿ ವೀರಂ ಚಾಳುಕ್ಯಾರ್ಜುನಂ ಚಲಕೆ ವೊದಲಿ
೫. ಗ ಮರಮಟ್ಟಗಣ್ಡ ನಕಳಂಕ ಮಹೇಶ್ವರಂ ದ
೬. ಣ್ಡಿಂ ಮುತ್ತಿಱವೊಂ ಶ್ರೀಮತ್ ನಾರಸಿಂಗಯ್ಯ ನರಸಿಂಗೇ

---

*೧೯೬೨ನೆಯ ವರ್ಷ ರಾಯಚೂರು ಕರ್ನಾಟಕ ಸಂಘ ಬೆಳ್ಳಿಯ ಹಬ್ಬವನ್ನಾಚರಿಸಿ 'ಸವಿನೆನಪಿನ ವಿಶೇಷ ಸಂಚಿಕೆ' ಹೊರಡಿಸಿತು. ರಾಯಚೂರು ಜಿಲ್ಲೆಯ ಶಿಲಾಶಾಸನಗಳನ್ನು ಕುರಿತು ಶ್ರೀ ರಿತ್ತಿಯವರು ಬರೆದ ಲೇಖ; ಪು. ೪೪–೫೬.

* EP. Carn. vol. XIV, Mysore and Mandya, Dynastic List, P. 7.

೭. ಸ್ವರಮ್ಮಾಡಿಸಿ ಮಣಲೆವಾಡಿಯ ನಭ್ಯ
೮. ನ್ತ್ರರ ಸಿದ್ಧಿಯಾಗೆ ಬಿಟ್ಟಂ ಇ ಧರ್ಮ್ಮವಂ ಮೂ
೯. ನೂಗ್ಗಾರ್ಗವುಣ್ಣುಗಳು ಸಲಿಸುವೊರ್ ಪುಣ್ಯಾರ್ಥ
೧೦. ಕಲ್ನಾಟ ಬಿಟ್ಟ ದತ್ತಿ

*          *          *

ಪಂಪನೇ ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಈ ವಂಶವೃಕ್ಷವನ್ನು ಕೊಟ್ಟಿದ್ದಾನೆ:




ಈ ಶಾಸನ ಸಿಕ್ಕಿರುವುದು ಮೈಸೂರು ನಗರದ ಪರಿಸರದಲ್ಲಿ. ಅಷ್ಟು ಮಾತ್ರವಲ್ಲ, ಶಾಸನದ ನರಸಿಂಹನೇ 'ನರಸಿಂಗೇಶ್ವರ' ದೇವಾಲಯ ಕಟ್ಟಿಸಿದ. ಸಾಕಷ್ಟು ಸಂಶೋಧನೆಗಿಲ್ಲಿ ಅವಕಾಶವಿದೆ.

### ಸಾಹಿತ್ಯೇತಿಹಾಸದಲ್ಲಿ ಕಾಲವಿಭಾಗ

೧೯೩೧-೩೨ ಸುಮಾರಿನಲ್ಲಿ ನನ್ನ ಮತ್ತು ಕೆಲವು ಮಂದಿ ಕನ್ನಡ ಮತ್ತು ತೆಲುಗು ಸಾಹಿತಿಗಳ ಮಧ್ಯೆ ನಡೆದ ಪ್ರಶ್ನೋತ್ತರಗಳಲ್ಲಿ ಕೆಲವನ್ನಿಲ್ಲಿ ಕೊಡಲಾಗಿದೆ. ಇವು ಇಂದಿಗೂ ಚರ್ಚಾಪರರಿಗೆ ಸಹಾಯಕವಾಗಬಹುದು.

ಪ್ರ—ತನ್ನ ಕೃತಿಗಳಲ್ಲಿ ಕವಿಯು ಕಾಣಿಸಿಕೊಳ್ಳಬೇಕೆ ಬೇಡವೆ?

ಉ—ಕೃತಿಯು ಕವಿಯಿಂದ ಪೂರ್ಣ ಪ್ರತ್ಯೇಕವೆಂಬ ಭಾವನೆ ಅಥವಾ ಅಭಿಪ್ರಾಯ ಈ ಪ್ರಶ್ನೆಗೆ ಮೂಲ.

ಪ್ರ—ನಿಜ. ವ್ಯಾಸ ವಾಲ್ಮೀಕಿ ಮೊದಲಾದ ಪುರಾಣ ಕವಿಗಳ ಕೃತಿಗಳಲ್ಲಿ ಅವರು ಕಂಡುಬರುವುದಿಲ್ಲವಲ್ಲ? ಪಂಪ ರನ್ನರ ಕೃತಿಗಳಲ್ಲಿ ಅವರು ಕಂಡುಬರುವರಲ್ಲ? ಇಂದಿನ ನವ್ಯಕಾವ್ಯಗಳಲ್ಲಿ ಕವಿಗಳೆದ್ದು ಕುಣಿದಾಡುವುದು ಸ್ಪಷ್ಟವಾಗಿದೆಯಲ್ಲ?

ಉ—ನಿಮ್ಮ ಅನುಮಾನಗಳಿಗೆ ಪ್ರಶ್ನೆಗಳ ರೂಪ ಕೊಟ್ಟಿದ್ದೀರಿ. ಕವಿಯ 'ವ್ಯಕ್ತಿತ್ವ' ಬೇರೆ. ಕೃತಿಗಳಲ್ಲಿ ಕವಿ 'ಕೂಗಿ ಕುಪ್ಪಳಿಸುವ' ಮಾತು ಬೇರೆ. ಕವಿ-ಕೃತಿಗಳೆರಡರಲ್ಲೂ ಅವಿಭಾಜ್ಯವಾದ, ವಿವರಿಸಲಾಗದ, ಯಾವುದೋ ಒಂದು ಗುಣವಿದೆ. ಕೆಲವು ಕಡೆ ಈ ಗುಣ ಹೆಚ್ಚಾಗಿರಬಹುದು; ಕೆಲವು ಕಡೆ ಕಡಿಮೆಯಾಗಿರಬಹುದು. ಪದಪ್ರಯೋಗ, ವಾಕ್ಯರಚನೆ, ವಿಷಯ ಪ್ರತಿಪಾದನೆ, ನಿರಾಡಂಬರ, ಶುಚಿತ್ವ, ಔಚಿತ್ಯ - ಇವುಗಳಲ್ಲೆಲ್ಲ ಕವಿ "ತನ್ನತನ" ತೋರಿಸುತ್ತಾನೆ. ಆದರವನು ಡಂಗುರ ಬಾರಿಸುವುದಿಲ್ಲ.

ಪ್ರ—ಕನ್ನಡ ಸಾಹಿತ್ಯದಲ್ಲೇ ಆಗಲಿ ತೆಲುಗು ಸಾಹಿತ್ಯದಲ್ಲೇ ಆಗಲಿ ಸಾಹಿತ್ಯೇತಿಹಾಸಕಾರರು ಮಾಡಿರುವ ಕಾಲ ವಿಭಾಗ ವಿಧಾನ ಸಮರ್ಪಕವಾಗಿದೆಯೆ?

ಉ—ಜೈನಯುಗ, ವೀರಶೈವಯುಗ, ಬ್ರಾಹ್ಮಣಯುಗವೆಂದು ಕನ್ನಡ ಸಾಹಿತ್ಯದಲ್ಲಿ ಕಾಲ ವಿಭಾಗವಾಯಿತು. ಪುರಾಣ ಯುಗ, ಪ್ರಬಂಧ ಯುಗ, ಭಾವಕವಿತ್ವ ಯುಗ ಎಂಬದಾಗಿ ತೆಲುಗು ಸಾಹಿತ್ಯದಲ್ಲಿ ಕಾಲ ವಿಭಾಗವಾಯಿತು. ಅನಂತರದವರು ಅವರವರ ಅಪೇಕ್ಷೆಯಂತೆ ಕಾಲ ವಿಭಾಗ ಮಾಡುತ್ತ ಬಂದರು. ಕನ್ನಡ ಸಾಹಿತ್ಯವನ್ನು ವಸ್ತು ಹಿಡಿದು, ವ್ಯಕ್ತಿ ಹಿಡಿದು, ರಾಜವಂಶ ಹಿಡಿದು, ಛಂದೋರೂಪ ಹಿಡಿದು, ಕಾಲ ವಿಭಾಗ ಮಾಡಿದರು. [ತೆಲುಗಿನಲ್ಲಿ ಈಗ ನೋಡಿ: ಶ್ರೀ ಆರುದ್ರರು ಚಾಳುಕ್ಯಯುಗ, ಕಾಕತೀಯ ಯುಗ, ಪದ್ಮನಾಯಕ ಯುಗ, ರೆಡ್ಡಿ ರಾಜರ ಯುಗ, ಮೊಹಲ ರಾಯರ ಯುಗ, ನವಾಬರ ಯುಗ, ಕುಂಪಿಣೀ ಯುಗ, ಜಮೀನ್‌ದಾರಿ ಯುಗ, ಆಯನಿಕ ಯುಗ - ಹೀಗೆ ಕಾಲ ವಿಭಾಗ ಮಾಡಿ ಹತ್ತಾರು ಸಂಪುಟಗಳನ್ನು ಪ್ರಕಟಿಸಿಲ್ಲವೆ!] ಇಲ್ಲೆಲ್ಲ ಕಾಲವಿಭಾಗಕ್ಕಾಧಾರವೇನು? ಕವಿಯ ಸೃಷ್ಟಿ ಶಕ್ತಿಗೆ ಸ್ಫೂರ್ತಿ ಯಾವುದು? ಕವಿಯ ಪ್ರತಿಭಾ ಪ್ರಕಟನ ಸಮಯ ಯಾವುದು? ಕವಿಯು ಅಂತರ್ಮುಖಿ; ಅವನ

ಕೃತಿ ಆ ಕವಿಯ ಬಹಿರ್ಮುಖ. ಈ ಎಲ್ಲ ಸಂದರ್ಭಗಳಲ್ಲೂ ಕಾಲವನ್ನು ಅಳೆದು, ಸೀಮಾರೇಖೆಗಳನ್ನು ನಿಶ್ಚಯ ಮಾಡಲು ಪ್ರಯತ್ನ ಮಾಡುವುದೇ ಸರಿಯಲ್ಲ. ಆದರೂ ವಿಧಿ ಇಲ್ಲದೆ ಪ್ರಾಚೀನ, ಮಧ್ಯ, ಆಧುನಿಕ- ಹೀಗೆ ಮೂರು ಕಾಲವಿಭಾಗ ಮಾಡುವ ಸೂಚನೆ ಹೆಚ್ಚು ಅಂಗೀಕಾರಯೋಗವೆಂದು ಅನ್ನಿಸುತ್ತದೆ. ಕ್ರಿ. ಶ. ೧೧ನೆಯ ಶತಮಾನದವರೆಗೆ ಪ್ರಾಚೀನ, ಹದಿನಾರನೆಯ ಶತಮಾನದವರೆಗೆ ಮಧ್ಯ, ಅನಂತರ ಆಧುನಿಕ- ಎಂಬದಾಗಿ ಸ್ಥೂಲವಾಗಿ ವಿಭಾಗ ಮಾಡುವುದರಲ್ಲಿ ಕೊಂಚ ಅರ್ಥವಿದೆ; ಸೌಕರ್ಯವಿದೆಯೆಂದು ಕಾಣುತ್ತದೆ.

### ಮಹಾಸಾಹಿತಿ "ವಿಶ್ವಕರ್ನಾಟಕ"ದಿಂದ

೩೦-೬-೧೯೪೦ನೆಯ "ವಿಶ್ವಕರ್ನಾಟಕ"ದಲ್ಲಿ ನಾನೊಂದು "ಸಾಹಿತ್ಯಕೂಟ"ದಲ್ಲಿ ಮಾತನಾಡಿದ ಮಹಾಸಾಹಿತಿಯನ್ನು ಕುರಿತ ವರದಿ.

"ಫ್ರಾನ್ಸಿನ ಸ್ವಾತಂತ್ರ್ಯವಾದಿಯೂ, ಕಾದಂಬರಿಕಾರನೂ ಆದ ಎಮಿಲಿ ಜೋಲಾ ಮತ್ತು ಜೋಲಾ ದಂಪತಿಗಳಿಗೆ ೨-೪-೧೮೪೦ರಲ್ಲಿ ಮಗನಾಗಿ ಪ್ಯಾರಿಸ್ ನಗರದಲ್ಲಿ ಹುಟ್ಟಿದ. ಬೆಲ್‌ಜಾಕ್ ಆಗತಾನೆ ತನ್ನ ಸುಖಾಂತ ನಾಟಕವನ್ನು ಬರೆದು ಪ್ರಕಟಿಸಿದ್ದ. ವಿಕ್ಟರ್ ಹ್ಯೂಗೋ ಬೃಹತ್ಕಾದಂಬರಿಗಳನ್ನೂ, ಗೌಥಿಯರ್ ನೀಳ್ಗತೆಗಳನ್ನೂ, ಪ್ರಕಟಿಸುತ್ತಿದ್ದ ಸಾಹಿತ್ಯದ ಮಹಾಯುಗವದು ಫ್ರಾನ್ಸಿನಲ್ಲಿ.

ಜೋಲಾಗೆ ವಯಸ್ಸು ಇಪ್ಪತ್ತಾಯಿತು. ಜೀವನ ಮಾರ್ಗ ಹುಡುಕಲಾರಂಭಿಸಿದ. ಸುಂಕದ ಕಚೇರಿಯಲ್ಲೊಬ್ಬ ಗುಮಾಸ್ತೆಯಾದ. ಎರಡೇ ತಿಂಗಳಲ್ಲಿ ಆ ಕೆಲಸಕ್ಕೆ ಕೈಮುಗಿದ. ಹೊಟ್ಟೆ ಕೇಳುತ್ತದೆಯೆ? ಅಲ್ಲಿ ಇಲ್ಲಿ ಸಾಲ ಮಾಡಿ, ರೊಟ್ಟಿ, ಬೆಣ್ಣೆ, ಸೇಬು ತಿಂದು ಕಾಲ ಹಾಕಿದ. ಕವನಗಳನ್ನು ಕಟ್ಟಲಾರಂಭಿಸಿದ. 'ಉದಯ' ಎಂಬ ಅವನ ಕವನ ರಚನೆಯ ಕಾಲದ ಜೀವನ ಊಹಿಸಲಾಗದ್ದು. ಗುಬ್ಬಿಗಳನ್ನು ಹಿಡಿದು ಬೇಯಿಸಿ, ತಿನ್ನುತ್ತಿದ್ದ.

ಯಾವನೋ ಒಬ್ಬ ವೈದ್ಯ; ಅವನ ಶಿಫಾರಸಿನ ಮೇಲೆ ಪುಸ್ತಕ ಪ್ರಕಾಶಕನ ಬಳಿ ಪುಸ್ತಕಗಳನ್ನು ಕಟ್ಟಿಡುವ ಕೆಲಸ (ದಫ್ತರ ಬಂದ್!) ಸಂಪಾದಿಸಿದ; ಆಮೇಲೆ ಗುಮಾಸ್ತನಾದ. ಆಗ ಬರೆಯಲಾರಂಭಿಸಿದ ಕಾದಂಬರಿಗಳನ್ನು. ಒಂದಂತೂ ಅಸಾಧ್ಯ ಖಂಡನೆಗೆ ಗುರಿಯಾಯಿತು. ಯಾರೇನೇ ಹೇಳಲಿ

"ಕೆಲವು ಸಮಸ್ಯೆಗಳಿವೆ; ಅವುಗಳನ್ನು ಕುರಿತು ಬರೆಯಬೇಕು. ವಿವಾದಾಸ್ಪದವಾದ ವಿಚಾರಗಳನ್ನು ಬರೆಯಬೇಡವೆಂದು ಬುದ್ಧಿವಾದ ಹೇಳುವವರು ಶುದ್ಧ ಅವಿವೇಕಿಗಳೆಂದು ಹೇಳಬೇಕಾಗುತ್ತದೆ"

ಅನ್ನುತ್ತಿದ್ದ ಜೋಲಾ. ಕಲೆ, ವಿಜ್ಞಾನ, ಸಮಾಜೋದ್ಧಾರ- ಈ ಮೂರು ಜೋಲಾ ಮುಖಗಳು. ಕಥನ ಕಲೆಯಲ್ಲಿ ಅನುಪಮ. ದುಷ್ಟಸಮಾಜಕ್ಕೆ ಚಿಕಿತ್ಸೆಗಳನ್ನವುಗಳಲ್ಲಿ ವಿಧಿಸಿದ್ದಾನೆ. 'ಜರ್ಮಿನಲ್' ಎಂಬುದವನ ಕತೆಗಳಲ್ಲೆಲ್ಲ ರತ್ನಪ್ರಾಯವಾದದ್ದು. ಅದಕ್ಕವನು ಬರೆದಿರುವ ಮುನ್ನುಡಿಯ ಈ ವಚನ ನೋಡಿ:

"ನಾನಿಲ್ಲಿ ಕೂಲಿಗಾರರ ನರಕಕ್ಕೆ ಇಳಿದಿದ್ದೇನೆ. ಇದನ್ನು ಚಿತ್ರಿಸುವುದರಲ್ಲಿ ನಾನೇನನ್ನಾದರೂ ತುಂಬ ಹೊಲಸಿನ ವಿವರಗಳನ್ನು ಕೊಟ್ಟಿದ್ದರೆ ಅದಕ್ಕೆ ಕಾರಣ ನಮ್ಮ ಜನ, ನಮ್ಮ ಸಮಾಜ. ಇಂತಹ ಕೀಳು ಜೀವನ, ಸಮಾಜ, ನಮ್ಮಲ್ಲಿದೆಯೆಂಬುದನ್ನು ವಾಚಕಜನ ತಿಳಿಯಲಿ, ತಿಳಿದು ಕಣ್ಣೀರಿಡಲಿ, ಎಂದು ಬರೆದಿದ್ದೇನೆ. ಈ ಚಿತ್ರಗಳು ಎಳೆ ಹುಡುಗಿಯರಿಗಲ್ಲ; ಗೃಹಸ್ಥರು ಅಗತ್ಯವಾಗಿ ಓದಲಿಕ್ಕಾಗಿ. ಓದಿದವರು ನೀವೆಲ್ಲ ನ್ಯಾಯಕ್ಕಾಗಿ, ಜೀವದಯೆಗಾಗಿ, ನಿಮ್ಮ ಸ್ವರವನ್ನೆತ್ತಿದಿರೆಂದರೆ ಸಾಕು; ನನ್ನ ಕೆಲಸ ಸಾರ್ಥಕವಾಯಿತು."

ಇಂತಹ ಮಹಾಸಾಹಿತಿ ರಾಶಿರಾಶಿಯಾಗಿ ಪುಸ್ತಕಗಳನ್ನು ಬರೆದು ೨೯-೯-೧೯೦೨ನೆಯ ದಿನ ಇಹಲೋಕದಿಂದ ವಿಶ್ರಾಂತನಾದ.

---

# ಭೀಮನ ಮುನಿಸು ಮುನಿಸೇ?

ಎಚ್. ಜೆ. ಸೊರೊನ್ಹಾ

ಪಂಡಿತ ಜಯರಾಯಾಚಾರ್ಯರು ಬರೆದ 'ವೇಣೀ ಸಂಹಾರ'ಎಂಬ ನಾಟಕದಲ್ಲಿ ಕೃಷ್ಣನು ಕೌರವನ ಬಳಿ ಸಂಧಿಗೆಹೋಗಿ ವಿಫಲನಾಗಿ ಹಿಂದಿರುಗಿ ಬಂದುದು ಮೊದಲ್ಗೊಂಡು ಭೀಮನು ಕೌರವನ ತೊಡೆಯೊಡೆದು ದ್ರೌಪದಿಯ ಮುಡಿಗಟ್ಟುವ ವರೆಗಿನ ಮಹಾಭಾರತದ ಕಥೆಯನ್ನು ವಸ್ತುವಾಗಿ ಇಟ್ಟು ಅದೇ ಇಲ್ಲಿ ನಾಟಕವಾಗಿ ಪರಿವರ್ತಿಸಲಾಗಿದೆ. ಮಹಾಭಾರತಕ್ಕೆ ಧರ್ಮರಾಯನೇ ನಾಯಕನಾಗಿರುವುದು ನಿಜ. ಆದರೆ ಈ ನಾಟಕದಲ್ಲಿ ಆತನು ಕಾಣಿಸಿಕೊಳ್ಳುವುದು ಆರನೆಯ ಅಂಕದಲ್ಲಿ ಮಾತ್ರ. ಆದುದರಿಂದ ಭೀಮನೇ ಈ ನಾಟಕದ ನಾಯಕನೆಂದೇ ಹೇಳಬಹುದು. ವೇಣೀಸಂಹಾರದ ಪ್ರತಿಜ್ಞೆ ಹಿಡಿದು ಅವನು ಅದನ್ನು ಪೂರೈಸಿಕೊಳ್ಳುವವರೆಗೂ ನಡೆಯುವ ಘಟನೆಗಳು ಅವನ ಪಾತ್ರವನ್ನು ನಮ್ಮ ಕಣ್ಣೆದುರಿಗೆ ಕಟ್ಟುವಂತೆ ಬೆಳಗುತ್ತದೆ. ಅನೇಕ ಸಂದರ್ಭಗಳಲ್ಲಿ ಅವನ ನಡತೆ ವಿನಯದ ಎಲ್ಲೆಯನ್ನು ಮೀರಿ ಔದ್ಧತ್ಯದ ಸೀಮೆಯನ್ನು ಪ್ರವೇಶಿಸುತ್ತದೆ.

ಕೌರವನ ಮೇಲೆ ಭೀಮನ ಕೋಪಕ್ಕೆ ಕಾರಣವೇನು? ನಿಜವಾಗಿಯೂ ಇದು ಕೇಳಬೇಕಾದ ಪ್ರಶ್ನೆ. ಈ ಪ್ರಶ್ನೆಯ ಉತ್ತರ ಹಾಗೂ ಭೀಮನ ಕೋಪದ ಫಲಿತಾಂಶ ಇವೇ ಈ ನಾಟಕದ ಕಥೆಯ ಮುಖ್ಯ ಭಾಗ. ಕೌರವರು, ಪಾಂಡವರನ್ನು ಜೂಜಾಟ, ವಿಷಭೋಜನ, ಅರಗುಮನೆಯ ನಾಶ, ದ್ರೌಪದಿಯ ಮಾನಭಂಗ ಈ ಮೊದಲಾದ ನೀಚ ತಂತ್ರಗಳ ಮೂಲಕ ಅನ್ಯಾಯವಾಗಿ ಬಳಲಿಸಿದರೂ, ಈ ಎಲ್ಲಾ ಸಂಕಷ್ಟಗಳಲ್ಲಿಯೂ ಧರ್ಮರಾಯನು ತನ್ನ ಶಾಂತಿ ಸ್ವಭಾವ ಹಾಗೂ ಸಾತ್ವಿಕ ಗುಣವನ್ನೇ ಪ್ರಕಟಪಡಿಸುವುದನ್ನು ಕಂಡ ಭೀಮನು ಕೌರವರ ಮೇಲೆ ರೇಗುವನು.

ನಾಟಕಕಾರರು, ಪ್ರಸ್ತಾವನೆಯಲ್ಲಿಯೇ ಸೂತ್ರಧಾರ ಮತ್ತು ಪಾರಿಪಾರ್ಶ್ವಕರಿಬ್ಬರೊಳಗಿನ ಮಾತುಕತೆಯಲ್ಲೂ, ಕೌರವರ ಮೇಲೆ ಭೀಮನಿಗಿರುವ ಕೋಪದ ಕಿಡಿಯನ್ನು ಮೊದಲನೇ ಸಲ ಪ್ರಕಟಪಡಿಸಲು ಪ್ರಯತ್ನಿಸುತ್ತಾರೆ.

'ಆ : ದುರಾತ್ಮನೆ! ಅಧಮನಾದ ನಟನೆ:'
ಅರಗುಮನೆಯಗ್ನಿಯಿಂದಂ
ಗರಳಾನ್ನದೊಳಾಸಭಾಪ್ರವೇಶನದಿಂದುಂ
ಮರುಮರುಗಿಸುತೆಮ್ಮಸುಗಳ
ನೆರೆಕಪಟದೊಳೆಮ್ಮ ಸೊಮ್ಮನ ಪಹರಿಸುತ್ತಂ
ಬಳಿಕಂ ಪಾಂಡು ಕುಮಾರರ
ಲಲನೆಯ ಪರಿಧಾನ ಚತುರತತಿಗಳಸೆಳೆದಾ
ಮಲಿನಾತ್ಮಧಾರ್ತರಾಷ್ಟ್ರಾ
ವಳಿ ತಾನೇಂ ಸ್ವಸ್ಥಮಹುದೆ ಜೀವಿಸಿರಲ್ಕಾಂ.

ಮಂಗಳ ಹೇಳುವವರ ಹಿತವಾಗಿ ಮಾತನಾಡುತ್ತಿರುವ ಸಹದೇವನನ್ನು ಕುರಿತು ಭೀಮನು, ತನ್ನೊಬ್ಬನನ್ನು ಬಿಟ್ಟು ಉಳಿದ ಪಾಂಡುಪುತ್ರರು ಕೃಷ್ಣನೊಂದಿಗೆ ಕೌರವರಲ್ಲಿ ಸಂಧಿಗಾಗಿ ತೆರಳಲಿ. ತಾನು ಆ ದುಷ್ಟ ಕೌರವರನ್ನು ಹೋಳು ಹೋಳುಗಳನ್ನಾಗಿ ಮಾಡುವೆನು ಎಂದು ನಿಂದಿಸಿ ಹೇಳುವ ಮಾತು ಆತನ ಭಯಂಕರ ಕೋಪವನ್ನು ತೋರಿಸುವ ಎರಡನೆಯ ಸಂದರ್ಭ.

ಸಹದೇವನು ಭೀಮನ ಕಠಿಣ ಕೋಪವನ್ನು ನೋಡಿ ಆ ರೀತಿ ರೇಗುವುದು ಸರಿಯಲ್ಲ. ಅದರಿಂದ ಧರ್ಮರಾಯನು ಖೇದಪಡುವನು ಎಂದು ತಿಳಿಸಲು, ಭೀಮನು—

ಜನಪಾಸ್ಥಾನದೊಳಂತು ದುರ್ದಶೆಯೊಳಾಪಾಂಚಾಲಿ
ಕಂಗೊಂಡಳಾ
ವನದಲ್ಲಿರ್ದೆವು ಬೇಡರೊಂದಿಗೆ ಚಿರಂನಾರ್ವಟ್ಟೆ
ಯುಟವಿರಾ
ಟನೊಳಿದ್ದಾರ್ದುದುದಡಂಗಿ ಮಾಡದುದಗ್ಗೈದುಂ
ಖಿನ್ನನೊಳ್ಪೇದಮಂ
ಮುನಿದೆನ್ನೊಳ್ದೊರೆಯೊಂಪನಾ
ಕುರುಗಳೊಳ್ತಾನಾನನದ್ಯಾಪಿಯುಂ.

ಎಂದು ಸಾಮರ್ಷದಿಂದ ಕೇಳುವ ಪ್ರಶ್ನೆ ನಿಜವಾಗಿಯೂ ಕೌರವರ ಮೇಲೆ ಆತನಿಗಿದ್ದ ಕೋಪವನ್ನು ತಿಳಿಸುವ ಮತ್ತೊಂದು ನಿದರ್ಶನ.

ಸದಾಕಾಲ ತಮ್ಮಂದಿರಿಂದ ಮನ್ನಣೆಯನ್ನು ಕಂಡಿರುವ ಆ ಧರ್ಮಜನಿಗೆ ತಾನಿಂದು ನಿಂದೆಯನ್ನು ಬಯಸುವೆನು. ಆತನ ಅಪ್ಪಣೆಯನ್ನು ಮೀರಿ ತನ್ನ ಗದೆಯನ್ನು ಬೀಸಿ ಆ ಕೌರವರನ್ನೆಲ್ಲಾ ನುಚ್ಚುನೂರಾಗಿ ಮಾಡಿಬಿಡುವೆನು. ಇಂದಿನಿಂದ ಧರ್ಮರಾಯನು ತನಗೆ ಗುರುವಲ್ಲ, ತಾನು ಆತನಿಗೆ ವಿಧೇಯನಾಗಿ ಇರುವುದಿಲ್ಲ ಎಂಬ ಆ ಜಂಬದ ಮಾತನ್ನು ಯುಧಿಷ್ಠರನಿಗೆ ತಿಳಿಸು ಎಂದು ಸಹದೇವನೊಡನೆ ಹೇಳಿದುದನ್ನು ಕೇಳುವಾಗ ಭೀಮನ ಕೋಪಾಗ್ನಿಯು ಕೌರವರ ಮೇಲೆ ಸಿಡಿಲೇಳುತ್ತಿತ್ತು ಎಂಬುದನ್ನು ನಾಟಕಕಾರರು ಬಯಲುಪಡಿಸುತ್ತಾರಲ್ಲದೆ ಮತ್ತೇನು?

ಕೋಪೋದ್ದೀಪಿತನಾಗಿ ಮುಂದೆ ನಡೆಯುವ ಭೀಮನು ತಾನು ಆಯುಧ ಶಾಲೆಗೆ ತೆರಳುವ ಬದಲು ದ್ರೌಪದಿಯ ವಾಸಭವನದ ಕಡೆಗೆ ಹೋಗುವನು. ಅಲ್ಲಿ ಸಹದೇವನಿಂದ ತಡೆಯಲ್ಪಟ್ಟು ಮಾತನ್ನು ಮುಂದುವರಿಸಿ, ಕೃಷ್ಣನು ಯಾವ ಪಣದಿಂದ ಸಂಧಿಗೋಸ್ಕರ ದುರ್ಯೋಧನನಲ್ಲಿಗೆ ಹೋಗಿರುವನು ಎಂದು ಭೀಮನು ತಮ್ಮನನ್ನು ಕೇಳಲು, ಆತನಿಂದ, 'ಐದು ಗ್ರಾಮಗಳಿಗಾಗಿ' ಎಂದು ಕೇಳಿದ ಭೀಮನು ಕಿವಿಗಳನ್ನು ಮುಚ್ಚಿ, ನಿಜವಾಗಿಯೂ ಆ ಸಂಧಿಯು ಕ್ಷತ್ರಿಯರಲ್ಲಿ ಹುಟ್ಟಿದ ಅವರಿಗೆ ಕಳಂಕವನ್ನುಂಟು ಮಾಡುವುದು. ಆ ರಾಯನಲ್ಲಿದ್ದ ಕೋಪವೆಂಬ ತೇಜಸ್ಸು ಆ ಪಗಡೆಯಾಟವಾಡಿದಂದಿನಿಂದ ಮರೆಯಾಗಿ ಹೋಗಿದೆ. ತಾನು :

ಕುರುಶತವಧೆ ಮಾಡೇಂ ಕಾಯ್ದುದುಶ್ಯಾಸನಾರಾ
ತ್ಯುರದೆ ಕುಳಿತಸೃಕ್ಕಂ ಪೀರೆನಾಂ ತುಂಡುಮಾಡೇಂ
ಬಿರುಗದೆವೊಡೆಯಿಂ ದುರ್ಯೋಧನೋಗ್ರೋರುವಂತಾಂ
ವಿರಚಿಕೆ ಪಣದಿಂದಂ ಸಂಧಿಯಂ ನಿಮ್ಮ ರಾಯಂ

ಎಂದು ಭೀಮನು ಸಂಧಿಯನ್ನು ತಿರಸ್ಕರಿಸಿ ಹೇಳುವ ಮಾತಿನ ಮೂಲಕ ಭೀಮನ ತೀವ್ರ ಕೋಪವನ್ನು ನಮ್ಮ ಕಣ್ಣಿಗೆ ಕಟ್ಟಲು ಮೃಗರಾಜಾ ಲಕ್ಷ್ಮಣಭಟ್ಟನಾರಾಯಣರು ಉಪಯೋಗಿಸಿರುವರು. ಕೌರವರ ಮೇಲಿನ ರೋಷಾವೇಶದಿಂದ ಆತನು ದ್ರೌಪದಿಯ ಬರೋಣವನ್ನು ಕೂಡ ಕಾಣದಾಗುವನು.

ಗಾಂಧಾರಿದೇವಿಯ ಪಾದವಂದನೆಗಾಗಿ ಹೋದ ದ್ರೌಪದಿಯನ್ನು ಕುರಿತು ಭಾನುಮತಿಯು, ಐದು ಗ್ರಾಮಗಳನ್ನು ಬೇಡಲು ಬಂದ ಆಕೆಯ ಗಂಡಂದಿರು ಯಾಕಿನ್ನೂ ಆಕೆಯ ಮುಡಿಯನು ಕಟ್ಟಿಲ್ಲವೆಂದು ತುಚ್ಛೀಕರಿಸಿ ಆಡಿದ ಮಾತನ್ನು ಕೇಳಿದ ಕೂಡಲೇ ಪುನಃ ಭೀಮನ ಕೋಪದ ಬೆಂಕಿಗೆ ತುಪ್ಪವೆರೆದಂತಾಗುವುದು. ಆ ಕ್ಷಣವೇ ಆತನು ಹೀಗೆಂದು ಗರ್ಜಿಸುವನು :

ಚಲಭುಜದಿಂ ತಿರುಂಗಿಸಿದ ಚಂಡ ಗದಾಯುಧದುಗ್ರ
ಘಾತದಿಂ
ದಲಘು ಸುಯೋಧನೋರುಯುಗವಂ ಸದೆದಾತನ
ಸಾಂದ್ರರಕ್ತಸಂ
ಕುಲದೆ ಮುಳುಂಗಿಸಲ್ಕೆ ಕಿಸುವಣ್ಣವ ತಾಳ್ದಿದ
ನೀಳ್ದಪಾಣಿಯಂ
ಕಲಿಯಹ, ಭೀಮಸೇನನಿವನೇ ನಿನತೀಮುಡಿಕಟ್ಟಿ ಭೂಷಿಪಂ

ಈ ಭೀಮ ಪ್ರತಿಜ್ಞೆಯು ಅವನ ಕೋಪವು ಹದ ದಾಟಿ ತುತ್ತ ತುದಿಗೇರಿದೆಯೆಂದು ಸ್ಪಷ್ಟವಾಗಿ ತೋರಿಸಿಕೊಡುವುದು. ಕುರುಪತಿಯು ಕೃಷ್ಣನನ್ನು ಕಟ್ಟಿಹಾಕಲು ಪ್ರಯತ್ನಿಸಿದ ವಾರ್ತೆಯನ್ನು ಕೇಳಿದ ಧರ್ಮರಾಯನಲ್ಲಿ ಕೌರವರ ಮೇಲೆ ಕೋಪಾಗ್ನಿ ಉತ್ಪನ್ನವಾಗಲೆಂದು ತೆರೆಯಲ್ಲಿ ಹೇಳಿದುದನ್ನು ಕೇಳಿದ ಭೀಮನು ಸಂತೋಷದಿಂದ, ದ್ರೌಪದಿಯನ್ನು ಸಮಾಧಾನಪಡಿಸಿ ರಣಯಜ್ಞಕ್ಕಾಗಿ ತೆರಳುವನು. ರಣರಂಗದಲ್ಲಿ ಹಲವರ ವಧೆಯನ್ನು ಮಾಡಿ ತನ್ನ ಪ್ರತಿಜ್ಞೆಯನ್ನು ಕಾರ್ಯರೂಪಕ್ಕೆ ತಂದ ತರುವಾಯ ದುರ್ಯೋಧನನನ್ನು ಹುಡುಕುತ್ತಾ ಧೃತರಾಷ್ಟ್ರ ಗಾಂಧಾರಿಯರಿದ್ದಲ್ಲಿಗೆ ಬಂದು ಹೀಗೆಂದು ಗರ್ವದಿಂದ ನುಡಿದು ಅವರನ್ನು ವ್ಯಥೆಪಡಿಸುವನು :

ಕುಡಿದಾ ದುಶ್ಶಾಸನ ಗುರ
ದೆಡೆರಗುತವನೆಲ್ಲ ಕುರುಗಳಂ ಪುಡಿಗೆಯ್ದುಂ
ಕಡುಗಲಿ ಕುರುಪನ ತೊಡೆಗಳ
ನುಡಿವಂ ನಿಮ್ಮಡಿಗೆ ಭೀಮನಿದೊ ಪೊಡೆಮಟ್ಟಂ

ಅಷ್ಟರಲ್ಲಿ ದುರ್ಯೋಧನನು ಅಲ್ಲಿಯೇ ಕಾಣಿಸಿಕೊಳ್ಳಲು ಇಬ್ಬರೊಳಗೂ ವಾಗ್ವಾದ ಉಂಟಾಗಿ ಭೀಮನು ಕೋಪದಿಂದ ಗದೆಯನ್ನೆತ್ತಿ ದುರ್ಯೋಧನನ್ನು ಹೀಗೆಂದು ತುಚ್ಛೀಕರಿಸಿ ನುಡಿಯುವನು :

ಎಲೆವೆಲವೋ ಭರತವಂಶಕಳಂಕನೆ
ಕೆಡುನುಡಿಗನೆ ಮದ್ಗದೆಯಿಂ
ಕಡಿವಡೆವೀ ನಿನ್ನಯೊಡಲ ಕಾಪಿಗೆ ಗುರುಗಳ್
ತಡೆಯದಿರಲ್ದುಶ್ಶಾಸನ
ನೊಡನೀಗಳೆ ನಿನ್ನ ಕಳಪದಿಹನೇಂ ಭೀಮಂ

ಎಲೆ ಮೂಢನೆ, ಇನ್ನೊಂದನ್ನು ಕೇಳು –

ಬಿಡಿಸಲ್ಪಟ್ಟುದೊ ನಿನ್ನಳಲ್ವಧುಗಳಂತೆನ್ನಿಂದೆ
ನೇತ್ರಾಂಬುವಿಂ
ಕಡುಪಿಂ ಸೀಳ್ವಿಡೆಯಲ್ಲಿ ತಮ್ಮನೆರ್ದೆಯಂದಲ್ಲಿನ್ನನೇ
ಸಕ್ಕಿಮಾ
ಡಿಡಲಾಯ್ತೇತರಿನಾಯ್ತುದೇ ಕುನೃಪನೆ ನೀಂ
ಜೀವಿಸಲ್ಕಾರಣಂ
ಕಡುದರ್ಪಾಂಧಭವತ್ಕುಲಾಬ್ಜವನ ಮತ್ತೇಭೇಂದ್ರನೀ
ಭೀಮನೊಳ್

ಇನ್ನು ದುರ್ಯೋಧನನು ಒದರುತ್ತಿರಲು ಭೀಮನು ತನ್ನ ಅಂತಿನು ಪ್ರತಿಜ್ಞೆಯನ್ನು ಹೀಗೆಂದು ಪ್ರಕಟಪಡಿಸಿ ಅದರ ಸಾಧನೆಗೆ ತೊಡಗುವನು :

ತೋರಿತ್ತಾದೆನ್ನ ಬಲ್ದೋಳ್ಗದೆ ಬಿರುವುವೊಡೆ-
ಯಿಂದೂರುಗಳ್ನುರ್ಗೆನೀಂ ಬೀ
ಳ್ದಾರಂಗಸ್ಥಾನದೊಳ್ನಿನ್ನಯ ತಲೆಯೊಳಿಡು-
ತ್ತಂಘ್ರಿಯಂ ನಾಳೆ ಬೈಗೊಳ್
ಕ್ರೂರತ್ವದ್ಭಾತೃಮುಖ್ಯರ್ಕಳ ರಗುತದ ಬಾವನ್ನ-
ಮಿಾಮೆಯ್ಯೊಳೆಲ್ಲಂ
ತೋರಲ್ಮಿಾದ್ಯೋರ್ಟ್ಟ ಭೀಷ್ಮಾಭರಣವರವ
ತಾನಾಂಪನೀ ಭೀಮನಕ್ಕುಂ

ತನ್ನ ಪ್ರತಿಜ್ಞೆಯು ಸಫಲವಾಗದಂತೆ ಮಾಡಲು ಕೌರವನು ಸರೋವರದಲ್ಲಿ ಅವಿತುಕೊಂಡಿದ್ದುದನ್ನು ತಿಳಿದ ಭೀಮನು ಎಲ್ಲಾ ದಿಕ್ಕುಗಳಲ್ಲಿರತಕ್ಕ ಲತಾಗೃಹಗಳೂ ತುಂಬಿ, ಮುಂಬಾಯ್ಸು ಧ್ವನಿಯುಳ್ಳ ಹಾಗೂ ಅಲ್ಲಿನ ಜಲಚರ ಪಕ್ಷಿಗಳೂ ದೊಡ್ಡ ದೊಡ್ಡ ಮೊಸಳೆಗಳೂ, ಮಿಾನುಗಳೂ ಭಯಪಟ್ಟು ಕೋಲಾಹಲ ಧ್ವನಿಯನ್ನು ಮಾಡುತ್ತ ಮೇಲಕ್ಕೆ ಬರುವ ಹಾಗೂ ಆ ಕೊಳದ ನೀರನ್ನು ಕಲಕಿ ಭಯಂಕರವಾಗಿ ಗರ್ಜಿಸುತ್ತ ಹೀಗೆ ಹೇಳಿದನು : ' ವ್ಯರ್ಥವಾದ ಪೌರುಷಾಭಿಮಾನದಿಂದ ಪ್ರಸಿದ್ಧನಾದವನೆ ! ದ್ರೌಪದಿಯ ಕೇಶಾಂಬರಾಕರ್ಷಣವನ್ನು ಮಾಡಿದ ಮಹಾಪಾತಕಿಯೆ ! ಧಾರ್ತರಾಷ್ಟ್ರಾಧಮನೆ –

ಹರಿಯಲ್ಲಾ ಮಧುಕೈಟಭ
ಹರನೊಳನೆಸಗುತ್ತುಮಯ ದೌಷ್ಟ್ಯವನಿರ್ದಾ
ನರ ಪಶುವೆ ಭಯದೆ ಧುರವಂ
ತೊರೆದೀಗಳ್ಪಂಕದಲ್ಲಿ ನೀನೆ ವಿದಿರ್ಪಯ್
ಮತ್ತು ದುರಭಿಮಾನಮತ್ತನಾದ ಕೌರವಾಧಮನೆ !
ಮಿಾಂಟಲ್ಕೆನ್ನಿಂದೆ ಸತ್ತಾಕುರುಗಳರಸಿಯರ್ಬಿರ್ಚೆ
ತಂತಮ್ಮ ಕೂದ
ಲ್ಗಂಟಂ ಪಾಂಚಾಲರಾಜಾತ್ಮಜೆಯ ಮುಳಿಸು-
ಗಿರ್ಪ್ಕಾರಿತೆಂದಾಡವೇಳ್ಕುಂ
ಈಂಟುತ್ತಿರ್ಪನ್ನಮಾನಿನ್ನನುಜನೆರ್ದೆಯ ಕೆನ್ನೀರ
ನೀಂ ನೋಡುತ್ತಿರ್ದುಂ
ಕೂಂಟಾದತ್ತೇಕೆ ನಿನ್ನಾ ಕಲಿತನಮುಧಟುಂಸೊರ್ಕು
ಮೆಂತಾಯ್ತು ನಷ್ಟಂ

ಬಳಿಕ ಭೀಮ ಸುಯೋಧನರಿಬ್ಬರೂ ಪರಸ್ಪರ ಕ್ರೋಧದಿಂದ ದೂಷಿಸುತ್ತ, ಘೋರತರ ಗದಾಯುದ್ಧ ಪರಿಘಾಯುಧಗಳಿಂದ ರಂಜಿತವಾದ ಭುಜಪಂಜರವುಳ್ಳವರಾಗಿ ಚಕ್ರಗತಿ ವಿಶೇಷದಿಂದ ಸಂಚರಿಸುತ್ತ ಘೋರಯುದ್ಧ ಪ್ರಾರಂಭಿಸಿ ಭೀಮನು ತನ್ನ ವೈರಿಯ ತೊಡೆಯನ್ನು ಮುರಿದು ಆತನ ರಕ್ತದಲ್ಲಿ ತನ್ನ ಕೈಗಳನ್ನದ್ದಿ ದ್ರೌಪದಿಯ ಕೇಶರಾಶಿಯನ್ನು ಕಟ್ಟುವನು. ಈ ಎಲ್ಲಾ ದೃಷ್ಟಾಂತಗಳು ಕೌರವರ ಮೇಲೆ ಭೀಮನ ಮುನಿಸು ಮುನಿಸೇ ಎಂದು ಸ್ಪಷ್ಟವಾಗಿ ತೋರಿಸುತ್ತವೆ ಎಂಬುದರಲ್ಲೇನು ಸಂದೇಹ ?

# ಫ್ರಾಂಜ್ ಕಾಫ್ಕ

'ಸುಮನಾ'

ಫ್ರಾಂಜ್ ಕಾಫ್ಕ ಜುಲೈ ೩, ೧೮೮೩ರಂದು ಪ್ರಾಗ್ (Prague) ನಲ್ಲಿ ಜನಿಸಿದ. ತಂದೆ ಶ್ರೀಮಂತ ಜ್ಯೂಜೆಕ್ ವ್ಯಾಪಾರಿ. ಸ್ವಲ್ಪ ಕಾಲ ಸಾಹಿತ್ಯ ಮತ್ತು ವೈದ್ಯಕೀಯ ಅಭ್ಯಾಸ ನಡಸಿ ೧೯೦೩ರಲ್ಲಿ ಪದವೀಧರನಾದ. ತನ್ನ ವೈಯಕ್ತಿಕ ಜೀವನ ನಿರ್ವಹಣೆ ಹಾಗೂ ಸಾಹಿತ್ಯ ಸೃಜನೆಗಳಿಗೆ ಸಾಕಷ್ಟು ಸಮಯ, ಹೆಚ್ಚು ಅವಕಾಶ ದೊರೆಯಬೇಕಾದರೆ ತನಗೆ ಸ್ವತಂತ್ರ ಜೀವನ ನಡೆಸಬೇಕಾದುದರ ಅವಶ್ಯಕತೆಯಿದೆ ಎಂದು ಕಾಫ್ಕ ನಿರ್ಧರಿಸಿದಾಗ ಅವನ ಒಲವು ಸಹಜವಾಗಿ ಕಾನೂನಿನತ್ತ ಹೊರಳಿತು. ೧೯೦೬ರಲ್ಲಿ ಕಾಫ್ಕ ಪ್ರಾಗ್ ವಿಶ್ವವಿದ್ಯಾನಿಲಯದಿಂದ Law ಪದವಿಯನ್ನೂ ಪಡೆದ. ನಿರುದ್ಯೋಗದ ಸಮಸ್ಯೆ ಕಾಡತೊಡಗಿದಾಗ ಮೊದಲು ವಿಮಾಕಂಪೆನಿಯೊಂದರಲ್ಲಿ ಸಂಚಾರೀ ಉದ್ಯೋಗಕ್ಕೆ ಸೇರಿದ. ಅನಂತರ ಕಾರ್ಮಿಕ ಇಲಾಖೆಯಲ್ಲಿ ಗುಮಾಸ್ತೆಯಾದ. ಜೀವನ ಪೋಷಣೆಗಾಗಿ ಸಂಪಾದಿಸಬೇಕಾಗುವ ಈ ಉದ್ಯೋಗದ ದೈನಂದಿನ ಯಾಂತ್ರಿಕತೆ ಅವನ ಪಾಲಿಗೆ ಸಹಿಸಲಸಾಧ್ಯವಾದ ಹೊರೆಯಾಗಿ ಪರಿಣಮಿಸಿತು. ಆದುದರಿಂದ ಅವನು ಆ ಕೆಲಸವನ್ನು ತ್ಯಜಿಸಿದ. ಬರ್ಲಿನ್ ನಗರದ ಸಮೀಪದ ಹೊರವಲಯದಲ್ಲಿ ವಾಸಿಸಲಾರಂಭಿಸಿ, ಸಾಹಿತ್ಯ ರಚನೆಗೇ ತನ್ನನ್ನು ಸಂಪೂರ್ಣವಾಗಿ ಮುಡುಪು ಮಾಡಿಕೊಂಡ. ೧೯೦೯ರಲ್ಲಿ 'ಬೊಹಿಮಿಯಾ', ೧೯೧೨ರಲ್ಲಿ 'ರಿಚರ್ಡ್ ಮತ್ತು ಸ್ಯಾಮ್ಯುಎಲ್' ಕೃತಿಯ ಮೊದಲ ಅಧ್ಯಾಯ, ೧೯೧೩ರಲ್ಲಿ 'ಅಮೆರಿಕ', 'ದಿ ಕ್ಯಾಸಲ್', 'ದಿ ಟ್ರಯಲ್'ಗಳ ರಚನೆಯನ್ನು ಪ್ರಾರಂಭಿಸಿದ. ೧೯೧೭ರಲ್ಲಿ ಅವನಿಗೆ ಕ್ಷಯದ ಚಿಹ್ನೆಗಳು ಕಾಣಿಸಿಕೊಂಡವು. ಹಗಲಿರುಳೆನ್ನದೆ ದಿನಚರಿಯನ್ನು ಬರೆಯಲಾರಂಭಿಸಿದ. ಅಸಾಧ್ಯ ಕೆಮ್ಮು; ಆದರೆ ಗುಣಮುಖನಾಗುವ ಇಚ್ಛೆ. ಅದೇ ವರ್ಷ ವಿವಾಹವಾಗಲು ನಿರ್ಧರಿಸಿ, ಅನಂತರ ಅದನ್ನು ಎದುರಿಸುವ ವಿಲ್ಲದೆ ಮುರಿದ. ೧೯೧೯ರಲ್ಲಿ ಪುನಃ ನೀಲಿ ಕಣ್ಣುಗಳ ಸುಂದರಿಯೊಬ್ಬಳನ್ನು ಪ್ರೀತಿಸಿದ. ಎರಡು ಬಾರಿ ಮದುವೆ ನಿಷ್ಕರ್ಷೆಯಾದರೂ ಎರಡೂ ಬಾರಿ ಮುರಿದುಬಿತ್ತು. ಅವನ ಮಾನಸಿಕ ದೌರ್ಬಲ್ಯ ಇದಕ್ಕೆ ಒಂದು ಕಾರಣವಾದರೆ, ಉಲ್ಬಣಗೊಳ್ಳುತ್ತಿದ್ದ ಬೇನೆ ಇನ್ನೊಂದು ಕಾರಣವಾಗಿತ್ತು. ರೋಗ ಉಲ್ಬಣಿಸಿದಾಗ ಕಾಫ್ಕ ಸ್ಯಾನಿಟೋರಿಯಂ ಸೇರಿದ. ಕೊನೆಗಾಲಕ್ಕೆ ಅವನಲ್ಲಿ ವಿಶ್ವಾಸವಿಟ್ಟು ಅವನನ್ನು ಉಪಚರಿಸಿ ಸ್ಯಾನಿಟೋರಿಯಂನಲ್ಲಿ ನೋಡಿಕೊಂಡವಳು ಡೋರಾ ಮಾತ್ರ. ಬಾಲ್ಟಿಕ್ ಸಮುದ್ರದ ದಂಡೆಯಲ್ಲಿದ್ದ Berlin-Jewish peoples Homeನಲ್ಲಿ ಹೀನದರ್ಜೆಯ ಉದ್ಯೋಗದಲ್ಲಿ ಇದ್ದ ಡೋರಾಳನ್ನು ಕಾಫ್ಕ ಅನಿರೀಕ್ಷಿತವಾಗಿ ಕಂಡ. ಅವಳನ್ನು ಆ ಕೆಲಸದಿಂದ ಮುಕ್ತಗೊಳಿಸಿ, ಸ್ವಂತ ಮನೆ ಮಾಡಿ ಅವಳೊಂದಿಗೇ ಕೊನೆಯ ದಿನಗಳನ್ನು ಕಳೆಯಲಾರಂಭಿಸಿದ್ದ. ಇದಕ್ಕೆ ಸ್ವಲ್ಪ ಮೊದಲು ೧೯೨೦ರಲ್ಲಿ ಮಿಲೆನಾಳನ್ನು ಪಡೆಯಲು ಸರ್ವಪ್ರಯತ್ನಗಳನ್ನೂ ನಡೆಸಿದ್ದ. ಆದರೆ, ಅದು ದುರದೃಷ್ಟದಿಂದ ಕೇವಲ 'ಪತ್ರ - ಪ್ರೇಮ'ವಾಗಿಯೇ ಉಳಿಯಿತು. ಅವನು ಮಿಲೆನಾಳಿಗೆ ಬರೆದ ಪತ್ರಗಳೆಲ್ಲ ವಿಲಿಹೆಜ್‌ರ ಸಂಪಾದಕತ್ವದಲ್ಲಿ Letters to Milena' ಎಂಬ ರೂಪದಲ್ಲಿ ೧೯೫೩ರಲ್ಲಿ ಪ್ರಕಟಗೊಂಡಿದೆ. ಒಂದು ಪತ್ರದ ತುಣುಕು—"ನಾನು ಮುವ್ವತ್ತೆಂಟರ ಹೊಸ್ತಿಲಿನಲ್ಲಿದ್ದೇನೆ; ನಿನಗೊ ಇನ್ನೂ ಇಪ್ಪತ್ತುನಾಲ್ಕು ವರ್ಷ; ತಡವೇನೂ ಆಗಿಲ್ಲ . . ." ಅವನ ಈ ಅಸಫಲ ಪ್ರಣಯ ವ್ಯವಹಾರಗಳು; ಮಗನ ಸಾಹಿತ್ಯಕ ಪ್ರತಿಭೆಯನ್ನು ತುಚ್ಛವಾಗಿ ಕಂಡು ನಿರ್ಲಕ್ಷಿಸಿದ, ತನ್ನನ್ನು ತಾನು ರೂಪಿಸಿಕೊಂಡ ವ್ಯಕ್ತಿತ್ವದ ತಂದೆಯೊಡನೆ ಕಾಫ್ಕನ ವಿಲಕ್ಷಣ ಸಂಬಂಧ; ಎಲ್ಲಕ್ಕಿಂತ ಮಿಗಿಲಾಗಿ ತನ್ನದೇ ನಿಶ್ಚಲವಾದ ಪ್ರತಿಭಾಸಂಪನ್ನವಾದ ಪ್ರಾಮಾಣಿಕತೆ, ಒಂದು ಬಗೆಯ ಮಾನಸಿಕ ಸೂಕ್ಷ್ಮ ಸಂವೇದನೆ (Psycho Pactic)ಯ ಹೆಚ್ಚಳದಿಂದಾಗಿ ಅವನ ಆರೋಗ್ಯ ಮತ್ತಷ್ಟು ಹದಗೆಟ್ಟಿತು. ಇಷ್ಟೇ ಸಾಲದೆಂಬಂತೆ, ಯುದ್ಧಾನಂತರದ ಬರ್ಲಿನ್‌ನ 'ನಿರಶನ ವರ್ಷಗಳು' (Post' 18 'hunger years' of Berlin) ಅವನ ಬದುಕಿಗೆ ತಮ್ಮ

ಕುಂಚದಿಂದ ಅಂತಿಮರೇಖೆಗಳನ್ನು ಎಳೆದುವು. ಮೊದಲಿಂದಲೂ ತಾನು ಹೆಚ್ಚುಕಾಲ ಬದುಕುವುದಿಲ್ಲವೆಂದೇ ತಿಳಿದಿದ್ದ ಕಾಫ್ಕ ತನ್ನ ನಲವತ್ತನೆಯ ಜನ್ಮದಿನವನ್ನೂ ಕಾಣುವುದಿಲ್ಲವೆಂಬ ಸಂದೇಹ ವ್ಯಕ್ತಪಡಿಸಿದ್ದ; ಅವನು ಅಕ್ಟೋಬರ್ ೧೯೧೧ರಲ್ಲಿ ಬರೆದುಕೊಂಡಿದ್ದ ದಿನಚರಿಯು ಇದಕ್ಕೆ ಸಾಕ್ಷಿಯಾಗಿದೆ; ಆದರೆ ನಲವತ್ತು ವರ್ಷಗಳು ಬದುಕಿದಾಗ, ಸ್ವಯಂ ಆಶ್ಚರ್ಯಚಕಿತನಾದ. ಅದೇ ವರ್ಷ ತಾನು ಉಳಿಯುವುದಿಲ್ಲವೆಂದು ಅರಿತಿದ್ದ ಕಾಫ್ಕ ತನ್ನ ಆಪ್ತ ಸ್ನೇಹಿತ ಮ್ಯಾಕ್ಸ್ ಬ್ರಾಡ್‌ನಿಗೆ ಕಾಗದ ಬರೆದು, ತನ್ನೆಲ್ಲ ಸಾಹಿತ್ಯ ರಚನೆಗಳನ್ನೂ ಸುಟ್ಟು ಬೂದಿ ಮಾಡುವ ಅಂತಿಮ ಕೋರಿಕೆಯನ್ನು ವ್ಯಕ್ತಪಡಿಸಿದ್ದ: ಆದರೆ ಅದನ್ನು ಮರೆತು ಹಾಗೇ ಒಂದೆಡೆ ಇಟ್ಟುಬಿಟ್ಟಿದ್ದ. ತನ್ನ ನಲವತ್ತೊಂದನೆಯ ಹುಟ್ಟಿದ ದಿನವನ್ನು ಹಿಂದೆ ಹಾಕಿದ ಸಂತಸವಿದ್ದರೂ, ಜೂನ್ ೩, ೧೯೨೪ರಂದು ಸ್ನೇಹಿತರು ಸ್ಯಾನಿಟೋರಿಯಂನಲ್ಲಿದ್ದ ಅವನನ್ನು ಸಂದರ್ಶಿಸಲು ಬಂದಾಗ, ಕಾಫ್ಕ ತನ್ನ ಕೊನೆಯ ಉಸಿರೆನ್ನು ಎಳೆದಿದ್ದ! ಕೊನೆಗೂ ಅವನ ಭವಿಷ್ಯ ಸತ್ಯವಾಗಿತ್ತು . . . ಇಲ್ಲಿಗೆ ಅವನ ಬದುಕಿನ ಕತೆಯು ಪರಿಸಮಾಪ್ತಿಯಾಯಿತು.

ಸಾಯುವ ಮೊದಲು ಕಾಫ್ಕ ಯಾವ ಬಗೆಯ ಮರಣ ಶಾಸನವನ್ನೂ ಬರೆದಿರಲಿಲ್ಲ; ಯಾವ ನಿರ್ದೇಶನಗಳನ್ನೂ ನೀಡಿರಲಿಲ್ಲ. ಅವನ ಎಲ್ಲ ಹಸ್ತ-ಪ್ರತಿಗಳನ್ನೂ ಕಾಗದ ಪತ್ರಗಳನ್ನೂ ಶೋಧಿಸುವಾಗ ಮ್ಯಾಕ್ಸ್ ಬ್ರಾಡ್‌ನಿಗೆ ಬರೆದಿದ್ದ ಎರಡು ಪತ್ರಗಳು ದೊರಕಿದವು. ತನ್ನ ಪ್ರಿಯ ಸ್ನೇಹಿತನಿಗೆ ಕಾಫ್ಕ ತನ್ನ ಅಂತಿಮ ಹೃದಯಾಭಿಲಾಷೆಯನ್ನು ಹೀಗೆ ತೋಡಿಕೊಂಡಿದ್ದಾನೆ.

(A) " Dearest Max, my last request· Everything I leave behind me, in the way of note-books, manuscripts, letters, my own and other people's sketches and so on, is to be burned unread and to the last page · · ·

yours, Franz Kafka "

ಕಾಫ್ಕ ಬದುಕಿದ್ದಾಗಲೇ ಅವನ ಏಳು ಕೃತಿಗಳು ಪ್ರಕಟವಾಗಿದ್ದವು. ಅವನು ಸ್ವತಃ ಜೆಕ್ ಆದರೂ, ಕಾಫ್ಕ ಬರೆದುದೆಲ್ಲ ಜರ್ಮನ್ ಭಾಷೆಯಲ್ಲಿ. ಅವನ ಕೊನೆಗಾಲದ ಇನ್ನೊಂದು ಪತ್ರದಲ್ಲಿ ತನ್ನ ಸಾಹಿತ್ಯಸೃಷ್ಟಿಯಲ್ಲಿ ಅಳಿಯುವ ಉಳಿಯುವ ಕೃತಿಗಳ ಬಗೆಗೆ ಸೂಚನೆ ನೀಡಿದ್ದಾನೆ:

"Dear Max,

Perhaps this time I Shan't recover . . .

Just in case then, this is my last will concerning all I have written :

Of all my writings the only books that count are these ; the Judgement, the Stoker, Metamorphosis, Penal colony, country Doctor and the Short-Story : Hunger Artists (· . . there's to be no reprinting)· But everything else of mine that I have written, without exception . · · is to be burned, and that you should do it as soon as possible is what I beg of you Franz·"

ಆದರೆ ಕಾಫ್ಕ ಕಣ್ಮರೆಯಾದರೂ ಮ್ಯಾಕ್ಸ್ ಬ್ರಾಡ್‌ನಿಂದಾಗಿ ಅವನು ಸಾಹಿತ್ಯ ಜಗತ್ತಿನಲ್ಲಿ ಅಜರಾಮರನಾಗಿ ಉಳಿದ. ಇದಕ್ಕೆ ಕಾರಣ, ಮ್ಯಾಕ್ಸ್ ಕಾಫ್ಕನ ಅಂತಿಮ ಕೋರಿಕೆಯಂತೆ ನಡೆಯದೆ ಇದ್ದುದು. ಕಾಫ್ಕ ಸತ್ತ ಮರುವರ್ಷವೇ ಬ್ರಾಡ್ ತನ್ನ ಗೆಳಯನ ಕೋರಿಕೆಗೆ ವಿರುದ್ಧವಾಗಿ ಅವನ 'The Trial' ಕಾದಂಬರಿಯನ್ನು ಸಂಪಾದಿಸಿ ಪ್ರಕಟಿಸಿದ. ಮರುವರ್ಷ – 1926 -'The castte'; 1927ರಲ್ಲಿ 'America'; 1931ರಲ್ಲಿ The' Great wall of China'- ಹೀಗೆ ಒಂದೊಂದಾಗಿ ಎಲ್ಲ ಕೃತಿಗಳನ್ನೂ – ಇಂಗ್ಲೆಂಡಿನಲ್ಲಿ – ಪ್ರಕಟಿಸಿ, ಮ್ಯಾಕ್ಸ್ ಮಹೋಪಕಾರ ಮಾಡಿದ. ಒಂದೇ ಬದುಕಿನ ಅವಧಿಯಲ್ಲಿ ತನ್ನ ಮಾನಸಿಕ – ದೈಹಿಕ ಅಸ್ವಸ್ಥತೆಗಳಿಂದ, ಅಸಹಜ ಸಾಂಸಾರಿಕ ಸಾಮಾಜಿಕ ಸಂಬಂಧ – ವ್ಯವಹಾರಗಳಿಂದ ಮನಸ್ಸಿನ ಶಾಂತಿಯಿಲ್ಲದೆ ಸಾವಿರ ಮೃತ್ಯುಗಳನ್ನು ಅನುಭೋಗಿಸಿಯೂ ಕಾಫ್ಕ ಸಾಹಿತ್ಯ ಜಗತ್ತಿನಲ್ಲಿ ತನ್ನ ಕೃತಿಗಳಿಂದಾಗಿ ಶಾಶ್ವತನಾಗಿ ಉಳಿದ.

ಯೂರೋಪಿನ ಆಧುನಿಕ ಸಾಹಿತ್ಯವನ್ನು ಕುರಿತು ವಿವೇಚಿಸುವಾಗೆಲ್ಲ ಎಲ್ಲ ವಿಮರ್ಶಕರೂ ಮೂವರು ಮಹಾ ಸಾಹಿತಿಗಳ ಪ್ರಭಾವವನ್ನು ನಿರ್ವಿವಾದವಾಗಿ ಒಪ್ಪುತ್ತಾರೆ. ಇವರಲ್ಲಿ ಪ್ರತಿಯೊಬ್ಬರೂ ತಮ್ಮದೇ ವೈಶಿಷ್ಟ್ಯಪೂರ್ಣ ಶೈಲಿ, ರಚನಾಸುಭಗತೆ, ಪ್ರತಿಪಾದನಾಕ್ರಮ ಇವುಗಳಿಂದ ಸಾಹಿತ್ಯವನ್ನು ಹೆಚ್ಚು ಸಂಪನ್ನಗೊಳಿಸಿದ್ದಾರೆ. ಅವರಲ್ಲಿ ಇಬ್ಬರು ಫ್ರೆಂಚ್ ಸಾಹಿತಿಗಳು; ಜೀನ್ ಪಾಲ್ ಸಾರ್ಟ್ರೆ ಮತ್ತು ಆಲ್ಬರ್ಟ್ ಕ್ಯಾಮು. (ಕ್ಯಾಮು ಕಾರು ಅಪಘಾತಕ್ಕೆ ತುತ್ತಾಗಿ ಮಡಿದ). ಮೂರನೆಯವನು ಜರ್ಮನ್-ಫ್ರಾಂಚ್ ಕಾಫ್ಕ . . .

* * *

ಫ್ರಾಂಜ್ ಕಾಫ್ಕನ ಸಾಹಿತ್ಯ ಕೃತಿಗಳಲ್ಲಿ ಹೆಚ್ಚು

ಪ್ರಖ್ಯಾತವಾಗಿ ಬಹು ಚರ್ಚಿತವಾಗಿರುವುದು The Trial. ಅದು 1924ರಲ್ಲಿ ಅವನು ತನ್ನ ನಲವತ್ತೊಂದನೆಯ ವಯಸ್ಸಿನಲ್ಲಿ ಸತ್ತ, ಮರುವರ್ಷ ಪ್ರಕಟವಾಯಿತು. 1913ರಷ್ಟು ಮುಂಚೆಯೇ ಅದರ ರಚನೆಗೆ ಕಾಫ್ಕ ತೊಡಗಿದ್ದನೆಂದೂ, ಕೆಲವು ಅಧ್ಯಾಯಗಳು ನಿರೀಕ್ಷಿತವಾಗಿ ಕೊನೆಗೊಂಡಿದ್ದರೂ ಸಮರ್ಪಕ ಒಳಹೆಣಿಕೆಯಿರಲಿಲ್ಲವೆಂದೂ ತಿಳಿದುಬರುತ್ತದೆ. ಇಲ್ಲಿನ ಅಧ್ಯಾಯಗಳನ್ನೆಲ್ಲ ಕಥಾನಕ ಎಲ್ಲಿಯೂ ಕುಂಟದಂತೆ ಓಟ ಕೆಡದಂತೆ ಎಚ್ಚರಿಕೆ ವಹಿಸಿ ಒಟ್ಟುಗೂಡಿಸಿದ ಕೀರ್ತಿಯೂ ಮ್ಯಾಕ್ಸ್‌ನಿಗೇ ಸೇರುತ್ತದೆ. ಹಿಂದೆ ಕಾಫ್ಕ ತನಗೆ ಓದಿ ಹೇಳಿದ್ದುದರ ನೆನಪಿನ ಆಧಾರದ ಮೇಲೆ ಕಾದಂಬರಿಗೆ ಒಂದು ಕ್ರಮಬದ್ಧವಾದ ರೂಪವನ್ನಿತ್ತು Trial ಎಂದು ಹೆಸರಿಟ್ಟು ಮ್ಯಾಕ್ಸ್ ಪ್ರಕಟಿಸಿದ್ದಾನೆ. ಹೆಚ್ಚಿನ ಯಾವುದೇ ಬದಲಾವಣೆಗಳನ್ನು ತಾನು ಮಾಡದೆ, ಕೆಲವು ಹೆಸರುಗಳ ಸಂಕ್ಷಿಪ್ತ ಸಂಕೇತಗಳನ್ನು ವಿಸ್ತರಿಸಿರುವ ಸೂಚನೆಯನ್ನು ನೀಡಿದ್ದಾನೆ. ಉದಾಹರಣೆಗೆ F· B = Franlein Burstner, T = Titorelly.

'The Trial' ಕಾದಂಬರಿಯ ವಸ್ತು, ಘಟನೆ ಒಂದು ವರ್ಷ ಕಾಲದ ಪರಿಧಿಯಲ್ಲಿ ಮುಕ್ತಾಯಗೊಳ್ಳುತ್ತದೆ. ಈ ಕಾಲದ ಕಟ್ಟು ಕೇವಲ ಕಾದಂಬರಿಕಾರನ ಕಲ್ಪನೆಯ, ಕಾದಂಬರಿಗೆ ನೀಡಲೇಬೇಕಾದ ಅಂತ್ಯದ ಒಂದು ಪ್ರತೀಕವಾಗಿದೆ ಅಷ್ಟೆ. ಇಲ್ಲಿನ ನಾಯಕನ ಬದುಕಿನಲ್ಲಿ ಕಂಡುಬರುವ ವಿಲಕ್ಷಣ ಘಟನೆಯ ಸ್ವರೂಪ, ಪರಿಣಾಮ, ವೇದನಾನುಭೂತಿಗಳು ಯಾವ ವ್ಯಕ್ತಿಗೇ ಅನ್ವಯಿಸಬಲ್ಲ ಸಾಮಾನ್ಯತೆಯನ್ನೂ ಸಾರ್ವತ್ರಿಕತೆಯನ್ನೂ ಪಡೆದಿವೆಯಲ್ಲದೆ, ಅನಂತ ಕಾಲದವರೆಗೂ ಬಗೆಹರಿಯದ ಸಮಸ್ಯೆಯಾಗಿಯೇ ಉಳಿಯಬಲ್ಲ ಶಾಶ್ವತೆಯನ್ನು ಪಡೆದಿದೆಯೆಂದು ಕಾದಂಬರಿಕಾರನ ಅಭಿಪ್ರಾಯ. ಒಂದು ವರ್ಷದ ಕಾಲದ ಕಟ್ಟು ಕೇವಲ ಕಾದಂಬರಿಗೆ ಕೊಟ್ಟಿರುವ ಮುಕ್ತಾಯ, ಅಷ್ಟೆ . . .

ಈ ಕಾದಂಬರಿಯ ನಾಯಕ ಜೋಸೆಫ್ 'K'—30 ವರ್ಷದ ಸುಶಿಕ್ಷಿತ ತರುಣ; ದೊಡ್ಡ ಬ್ಯಾಂಕೊಂದರಲ್ಲಿ ಅಸಿಸ್ಟೆಂಟ್ ಮ್ಯಾನೇಜರ್ ಪದವಿಯಲ್ಲಿರುವವನು; ಉದ್ಯೋಗದಲ್ಲಿಯೂ ದಕ್ಷ, ಪ್ರಾಮಾಣಿಕ ಎಂದು ಹೆಸರು ಪಡೆದಿದ್ದಾನೆ; ವ್ಯವಹಾರಗಳಲ್ಲಿ ಸಭ್ಯ, ವಿಶ್ವಾಸಿ. Boarding Home ನಲ್ಲಿ ವಾಸ, ಒಂಟಿಜೀವನ. ಒಬ್ಬ ಚಿಕ್ಕಪ್ಪ ಮಾತ್ರ ಇವನ ಸಂಬಂಧಿಕ; ತಂದೆ-ತಾಯಿಗಳಿದ್ದಂತಿಲ್ಲ. ಇಷ್ಟು ಅವನ ವೃತ್ತಾಂತ.

30 ನೆಯ ಹುಟ್ಟುಹಬ್ಬ ಕಳೆದ ಎರಡು - ಮೂರು ದಿನಗಳಾನಂತರ ಒಂದು ದಿವಸ ಬೆಳಗ್ಗೆ ಏಳುವ ಮೊದಲೇ ಬಂದ ಇಬ್ಬರು ಆಗಂತುಕರು ಅವನಿಗೆ ಯಾವ ಕಾರಣವನ್ನೂ ನೀಡದೆ ಸೆರೆಹಿಡಿದಿರುವೆನೆಂದು ತಿಳಿಸುವ ಘಟನೆಯಿಂದ ಕಾದಂಬರಿ ಮೊದಲಾಗುತ್ತದೆ. ಕೆಲವು ಗಂಟೆಗಳ ಅವನ ಮನೆಯಲ್ಲಿಯೇ ಅವನನ್ನು ನಿರ್ಬಂಧದಲ್ಲಿಡಲಾಗುತ್ತದೆ. ಹಿರಿಯ ಅಧಿಕಾರಿಗಳು ಬಂದು ಏನೇನೊ ತನಿಖೆ ನಡೆಸಿ ಕೊನೆಗೊಮ್ಮೆ ಇವನ ಪ್ರಶ್ನೆಗಳಿಗೆ ಅಸಮರ್ಪಕ ಉತ್ತರಗಳನ್ನು ಕೊಟ್ಟು, ಭ್ರಮೆ ಹಿಡಿಸುತ್ತಾರೆ. ಮುಂದಿನ ಭಾನುವಾರ ನ್ಯಾಯಾಲಯಕ್ಕೆ ಬರಬೇಕೆಂಬ ಪ್ರಥಮ ಕರೆಯನ್ನು ಅವನಿಗೆ ತಿಳಿಸಲಾಗುತ್ತದೆ. ತನ್ನ ಮೇಲಿನ ಆರೋಪವೇನು, ತನ್ನ ಹಿಂದೆ ಏಕೆ ಇಬ್ಬರು ಸದಾ ಕಾವಲಿರುತ್ತಾರೆ—ಎಂಬ ಅವನ ಪ್ರಶ್ನೆಗಳಿಗೆ ಅವನಿಗೇ ಉತ್ತರ ದೊರೆಯುವುದಿಲ್ಲ. ತಿಳಿಯದ ನ್ಯಾಯಾಲಯವನ್ನು ವಿಳಾಸವಿಲ್ಲದೆ ಎಲ್ಲೆಲ್ಲೋ ಹುಡುಕಿ ಅಲೆದು ಕೊನೆಗೊಮ್ಮೆ ಸೇರಿದಾಗ ಅಲ್ಲಿನ ವಿಲಕ್ಷಣ ವಾತಾವರಣದಲ್ಲಿ ಗಮನಿಸುವವರೇ ಇಲ್ಲದೆ ಹೋಗಿ, ನ್ಯಾಯಾಧೀಶನಂತೆ ಕಾಣುತ್ತಿದ್ದವನ ಮುಂದೆ ನಿಂತು, ತನ್ನ ನಿರಪರಾಧಿತ್ವ ಹಾಗೂ ಮುಗ್ಧತೆಗಳ ಬಗೆಗೆ ದೊಡ್ಡ ಭಾಷಣವನ್ನೇ ಬಿಗಿದು, ವೃಥಾ ಆರೋಪಿತನಾದುದನ್ನು ಖಂಡಿಸಿ, ಬಂದ ದಾರಿ ಹಿಡಿಯುತ್ತಾನೆ—ಯಾವ ಪ್ರತಿಕ್ರಿಯೆಯೂ ಇಲ್ಲದೆ ಕೇವಲ "You have come late" ಎನಿಸಿಕೊಂಡು.

ಈ ಹೊತ್ತಿಗೆ ಅವನ ಮೇಲೆ ಬಂದಿದ್ದ ಆರೋಪಣೆಯ ಸುದ್ದಿ ಸಾಕಷ್ಟು ಜನಪ್ರಿಯವಾಗಿರುತ್ತದೆ-ಅದು ಏನೆಂದು ತಿಳಿಯದಿದ್ದರೂ! ಎಲ್ಲರೂ ಇವನನ್ನು ಸಂದೇಹದ ದೃಷ್ಟಿಯಿಂದ ಕಾಣುವವರೇ ಆಗುತ್ತಾರೆ. ನ್ಯಾಯಾಲಯದಿಂದ ನಿಯಮಿತರಾದ ಇಬ್ಬರು ಅಂಗರಕ್ಷಕರು ಬೇರೆ ಹಿಂದೆ ಸದಾ ಕಾವಲಿರುತ್ತಾರೆ. ಇವರಿಂದ ಅವನ ವ್ಯಕ್ತಿ ಸ್ವಾತಂತ್ರ್ಯಕ್ಕೆ ಯಾವ ಧಕ್ಕೆ ಉಂಟಾಗದಿದ್ದರೂ, ಮನಸ್ಸಿನ ಉಲ್ಲಾಸ, ಸ್ವಚ್ಛಂದತೆಯ ಪ್ರವೃತ್ತಿಗಳು ಕಣ್ಮರೆಯಾಗುತ್ತವೆ. ಬದಲಾಗಿ ಆಂತರೀಕ ಭೀತಿ, ವೇದನೆ ಮನಸ್ಸನ್ನು ಕವಿಯುತ್ತವೆ. Boarding Home ನ ಸಹವಾಸಿಗಳು, ಸುತ್ತಮುತ್ತಲವರು, ಸಹೋದ್ಯೋಗಿಗಳು, ಕೊನೆಗೆ ಇಡೀ ಸಮಾಜ-ಎಲ್ಲರೂ ಮುಗ್ಧನಾದ, ನಿರಪರಾಧಿಯಾದ ತನ್ನತ್ತ ದೃಷ್ಟಿ ಬೀರಿ, ಕೈತೋರಿಸುವಂತೆ ಅವನಿಗೆ ಅನಿಸುತ್ತದೆ. ಇದರಿಂದ ಮಾನಸಿಕ ಸ್ವಾಸ್ಥ್ಯವನ್ನು ಕಳೆದುಕೊಂಡು, ಕೆಲವು ವೇಳೆ ಕರ್ತವ್ಯಪ್ರಜ್ಞೆಯನ್ನೂ ಮರೆತುಬಿಡುತ್ತಾನೆ. ಯಾಂತ್ರಿಕವಾಗಿ ತನ್ನ ಕೆಲಸಗಳನ್ನು ಮುಗಿಸಬೇಕಾದ ಸ್ಥಿತಿಗೆ ಈ ಘಟನೆ ಅವನನ್ನು ತಂದಿಡುತ್ತದೆ.

ಅವನ ಮೇಲಿನ ಆರೋಪಣೆಯ ಸುದ್ದಿ ಅವನ ಚಿಕ್ಕಪ್ಪನಿಗೆ ಹೇಗೊ ತಿಳಿದಾಗ ಆಕಾಶವೇ ತಲೆಯ ಮೇಲೆ ಕಳಚಿ ಬಿದ್ದಂತೆ ಆತ ಓಡಿ ಬಂದು, 'ಕೆ'ಗೆ ಇಚ್ಛೆಯಿಲ್ಲದಿದ್ದರೂ, ಅವನನ್ನು ತನ್ನೊಬ್ಬ ಕಾಯಿದೆಯ ಪಂಡಿತ ಮಿತ್ರನಲ್ಲಿಗೆ ಕರೆದೊಯ್ದು, ಪರಿಚಯ ಮಾಡಿಸಿ, ಇವನ ಪರವಾಗಿ ನಿಯಮಿಸಿಸುತ್ತಾನೆ. ಅವನಿಂದ ನ್ಯಾಯಾಲಯದ 'Proceedings'ನ ವಿವರಣೆಯನ್ನು ಕೇಳಿಯೇ 'ಕೆ'ಯ ನಂಬಿಕೆ ಅರ್ಧ ಕುಸಿಯುತ್ತದೆ. ಕಾಯಿಲೆ ಬಿದ್ದಿದ್ದ ಆ ಕಾಯಿದೆ ಪಂಡಿತ ಚೇತರಿಸಿಕೊಂಡು ಇವನ ಕೇಸಿನ ಬಗ್ಗೆ ಮುಂದುವರಿಯುವುದರಲ್ಲಿಯೇ 'ಕೆ' ಅವನ ಮನೆಯ ಹೆಣ್ಣಾಳೊಬ್ಬಳೊಂದಿಗೆ ಸಂಬಂಧ ಬೆಳಸಿ, ಅವನ ಅಸಮಾಧಾನಕ್ಕೆ ಗುರಿಯಾಗುತ್ತಾನೆ. ಆದರೆ, ಆ ಹೆಣ್ಣಿಂದ ಇವನಿಗೆ ನ್ಯಾಯಾಲಯದ ಕೆಲಸಕಾರ್ಯಗಳು ಹೆಂಗಸರ ಪ್ರಭಾವವಿದ್ದಲ್ಲಿ ಶೀಘ್ರಪರಿಣಾಮವುಳ್ಳವಾಗುತ್ತದೆಂದು ಹೊಸ ಸಂಗತಿಯೊಂದು ತಿಳಿಯುತ್ತದೆ. ಆ ಪಂಡಿತನ ಸಲಹೆಯಲ್ಲಿದ್ದ ಇನ್ನೊಬ್ಬ ಆರೋಪಿತ ವ್ಯಾಪಾರಿಯಿಂದ ಮತ್ತಷ್ಟು ಮಾಹಿತಿ ದೊರೆಯುತ್ತವೆ–ವರ್ಷಗಟ್ಟಲೆ ಉರುಳಿದ್ದರೂ ಹಲವಾರು ವಕೀಲರನ್ನು ನಿಯಮಿಸಿಕೊಂಡಿದ್ದರೂ ಯಾವ ಬಗೆಯ ನಿರೀಕ್ಷಿತ ಮುನ್ನಡೆಯನ್ನೂ ಕಾಣದೆ, ಹಳೆಯ ವಕೀಲನ ಮನೆಯ ಬಾಗಿಲನ್ನೇ ನಾಯಿಯಂತೆ ಕಾಯುತ್ತ ಬಿದ್ದಿರುವ ಆ ಒಕ್ಕಣ್ಣಿನ ವ್ಯಾಪಾರಿಯ ಅಹವಾಲನ್ನು ಕೇಳಿ 'ಕೆ'ಗೆ ದಿಗ್ಭ್ರಮೆ ಹಿಡಿಯುವುದಷ್ಟೇ ಉಳಿದಿರುತ್ತದೆ!

ಈ ಮಧ್ಯೆ ನ್ಯಾಯಾಲಯದಿಂದ ಮತ್ತೇನು ಸೂಚನೆಗಳೂ ಬರದಿದ್ದರೂ ದಿನೇ ದಿನೇ ಅವನ ಆಂತರಿಕ ಪ್ರಜ್ಞೆ ಕುಸಿಯುತ್ತಿರುವಂತೆ, ದೃಢತೆ ದುರ್ಬಲವಾಗುತ್ತಿರುವಂತೆ, ಮಾನಸಿಕ ಅಸ್ವಸ್ಥತೆ ಹೆಚ್ಚುತ್ತಿರುವಂತೆ ಅವನಿಗೆ ಭಾಸವಾಗುತ್ತದೆ. ಉದ್ಯೋಗದಲ್ಲಿಯೂ ಬೇಸರ ಕಾಣಿಸಿಕೊಳ್ಳುತ್ತದೆ; ಆಲಸ್ಯತೆ ತಲೆದೋರುತ್ತದೆ: ಮಾಡಿದ ಕೆಲಸ ಸಮರ್ಪಕವೆನಿಸದೆ ತನ್ನ ದುರ್ಬಲತೆಯ ಬೆಲೆ ತೆರಬೇಕಾಗುತ್ತದೆ. ಒಂದು ದಿನ ತನ್ನ ಅನ್ಯಮನಸ್ಕತೆಯಿಂದಾಗಿ ಒಬ್ಬ ಗಿರಾಕಿಯ ಬಾಯಿಂದ ತನ್ನ ಮೇಲಿನ ಆರೋಪಣೆಯ ಸಂಗತಿ ತಿಳಿದಾಗ ಅವನು ಹೌಹಾರಿ ಹೋಗುತ್ತಾನೆ. ಆದರೆ ಆ ವ್ಯಾಪಾರಿ ಇವನಿಗೆ ಸಹಾಯ ಮಾಡುವುದಾಗಿ ಹೇಳಿ, ನ್ಯಾಯಾಲಯದೆಲ್ಲ ನ್ಯಾಯಾಧೀಶರುಗಳ ಚಿತ್ರ ಬರೆವ ವರ್ಣಚಿತ್ರಕಾರನತ್ತ ನಿರ್ದೇಶಿಸುತ್ತಾನೆ. ಆಸೆಯಿಟ್ಟುಕೊಂಡು ಹೋದ 'ಕೆ'ಗೆ ಅವನಿಂದ ಯಾವ ಬಗೆಯ ಸಹಾಯ ದೊರೆಯದಿದ್ದರೂ, ಆ ಬಗೆಯ ವೈಯಕ್ತಿಕ ಪ್ರಭಾವಗಳಿಂದ ತಾತ್ಕಾಲಿಕ ಪ್ರಯೋಜನ ಪಡೆದುಕೊಳ್ಳಬಹುದೆಂಬ ಸೂಚನೆ ಸಿಕ್ಕುತ್ತದೆ. ತನ್ನ ಚಿಕ್ಕಪ್ಪ ನಿಯಮಿಸಿದ್ದ ಮುದಿ ವಕೀಲನಲ್ಲಿ ನಂಬಿಕೆ ಕ್ಷೀಣಿಸಿ, ಅವನನ್ನು ನಿಷ್ಪ್ರಯೋಜಕವೆಂದು ನಿರ್ಧರಿಸಿ, 'ಕೆ' ಅವನ ನೇಮಕವನ್ನೂ ರದ್ದುಗೊಳಿಸಿಬಿಡುತ್ತಾನೆ– ಬಂದುದನ್ನು ಏಕಾಂಗಿಯಾಗಿ ಎದುರಿಸುವ ಆತ್ಮವಿಶ್ವಾಸದಿಂದ.

ಇವನ ಉದ್ಯೋಗವರ್ತುಲದಲ್ಲಿ ಇವನನ್ನು ತುಳಿಯಲು ಅಧಿಕಾರಿಯೊಬ್ಬ ಪ್ರಯತ್ನಿಸುತ್ತಿರುತ್ತಾನೆ. ಇದು 'ಕೆ'ಗೆ ತಿಳಿದಿದ್ದ ಸಂಗತಿಯೇ ಆದ್ದರಿಂದ, ಆ ಬಗೆಯ ಅವಕಾಶಗಳನ್ನು ಕೊಡದೆ 'ಕೆ' ಜಾಗರೂಕನಾಗಿರುತ್ತಾನೆ. ಒಮ್ಮೆ ಹೊರದೇಶದಿಂದ ಬಂದ ಅತಿಥಿಯೊಬ್ಬನಿಗೆ ಪ್ರೇಕ್ಷಣೀಯ ಸ್ಥಳಗಳನ್ನು ಸಂದರ್ಶಿಸಿ ಕರೆತರುವ ಕೆಲಸ 'ಕೆ'ಯ ಮೇಲೆ ಬೀಳುತ್ತದೆ – ಇದರಿಂದ ಅವನಿಗೆ ಮಾನ್ಯತೆ ದೊರೆಯುವ ಹೆಚ್ಚು ಸಂಭವವಿರುತ್ತದೆ. ಭೇಟಿ ಮಾಡಲೆಂದು ನಿರ್ದೇಶಿತವಾಗಿದ್ದ ಸ್ಥಳದಲ್ಲಿ ಕಾದು, ಅತಿಥಿ ಸಿಗದೆ 'ಕೆ' ಆ ಕ್ರೈಸ್ತಮಂದಿರದ ಧರ್ಮಗುರುವಿನ ಕೈಗೆ ಸಿಕ್ಕುತ್ತಾನೆ. 'ನೀನು ಆರೋಪಿತನಾಗಿರುವೆಯಲ್ಲವೆ?'–ಇದು ಅವನು ಅಲ್ಲಿಯೂ ಕೇಳಬೇಕಾಗಿ ಬಂದ ಮೊದಲ ಪ್ರಶ್ನೆ. ವಿಚಾರಿಸಿದಾಗ ಆ ಧರ್ಮಗುರು ಸೆರೆಮನೆಯವರೊಂದಿಗೆ ಮತಧರ್ಮ ಪ್ರಚಾರದ ಸಂಬಂಧ ಪಡೆದವನಾಗಿರುತ್ತಾನೆ. ಅವನಿಂದ 'ಕೆ'ಗೆ ಕಾನೂನಿನ ಅರ್ಥ ವಿವರಣೆ, ನ್ಯಾಯಪಡೆಯಲು ಹೊಂದಿರಬೇಕಾದ ಅರ್ಹತೆ, ಸಿದ್ಧತೆ, ಅದರ ಅಂಗ ಉಪಾಂಗಗಳ ಪರಿಚಯವಾಗುತ್ತದೆ. ಒಮ್ಮೆ ಗಾಳಕ್ಕೆ ಸಿಕ್ಕಿಬಿದ್ದ ಮೀನಿಗೆ ಹೇಗೆ ಮುಕ್ತಿ ಸುಲಭವಾಗಿ ದೊರೆಯಲಾರದೊ ಹಾಗೆಯೇ ಅಪರಾಧ ಮಾಡಿಯೊ ಮಾಡದೆಯೊ ಒಮ್ಮೆ ಆರೋಪಿತನೆಂದು ನಿರ್ಧರಿತನಾದ ವ್ಯಕ್ತಿಗೂ ನ್ಯಾಯಾಲಯದಿಂದ ಬಿಡುಗಡೆ ಸುಲಭವಾಗಿ ದೊರೆಯದೆಂದೂ, ಆ ಹಾದಿಯಲ್ಲಿನ ಅಡ್ಡಿ–ಆತಂಕಗಳು–ಸ್ವಾಭಾವಿಕ ಹಾಗೂ ತಾನೇ ಕೈಯಾರೇ ತಂದುಕೊಂಡ–ಒಮ್ಮೆ ಮೊದಲಿಟ್ಟರೆ ಅನಂತ ಕಾಲದವರೆಗೂ ವ್ಯಕ್ತಿಯೊಬ್ಬನನ್ನು ಸೆಳೆಯಬಲ್ಲದೆಂದೂ ಅರಿತುಕೊಳ್ಳುತ್ತಾನೆ.

ಒಂದು ವರ್ಷ ಉರುಳುತ್ತದೆ. 'ಕೆ'ಯ ೩೧ನೆಯ ಜನ್ಮದಿನದ ಹಿಂದಿನ ದಿನ ಬೆಳಿಗ್ಗೆ ಎಂದಿನಂತೆ ಕೊಠಡಿಯಲ್ಲಿ ಕುಳಿತು ಅತಿಥಿಗಳಾರನ್ನೊ ನಿರೀಕ್ಷಿಸುತ್ತಿರುತ್ತಾನೆ. ಆದರೆ ಬಂದವರಾರೊ! ಹಿಂದೆ ಬಂದಂತೆಯೇ ನ್ಯಾಯಾಲಯದಿಂದ ಬೇರಿಬ್ಬರು ವ್ಯಕ್ತಿಗಳು ಬಂದು ಸೆರೆ ಹಿಡಿದಿದ್ದೇವೆನ್ನುತ್ತಾರೆ; ಉಸಿರಾಡಲು ಅವಕಾಶವೀಯದೆ 'ಕೆ'ಯನ್ನು ತಮ್ಮೊಡನೆ ಕರೆದೊಯ್ಯುತ್ತಾರೆ. ಮರುಮಾತಿಲ್ಲದೆ ಬಂದು

ದನ್ನು ಎದುರಿಸಲು ಸಿದ್ಧನಾಗಿ ಮೌನವಾಗಿ 'ಕೆ' ಅವರನ್ನು ಹಿಂಬಾಲಿಸುತ್ತಾನೆ. ನಗರದ ಹೊರವಲಯದ ನಿರ್ಜನತೆಯ ವಾತಾವರಣಕ್ಕೆ ಅವನನ್ನು ಅವರು ಕರೆದೊಯ್ದು, ಅವನಿಗೆ ಚೂರಿಹಾಕಿ, ಅವನ ಬುದುಕಿನ ಸಮಾಪ್ತಿ ವಾಕ್ಯವನ್ನು ಹಾಡುತ್ತಾರೆ . . . ಇದು ಸ್ಥೂಲ ಕತೆ.

ಆದರೆ ಇದರ ಹಿನ್ನೆಲೆಯನ್ನು ವಿವೇಚಿಸಿದಾಗ ಕಾಫ್ಕ ಈ ಕಾದಂಬರಿಯಲ್ಲಿ ಕೇವಲ ನ್ಯಾಯಾಲಯದ ಸಮಸ್ಯೆಯೊಂದನ್ನು ವ್ಯಕ್ತಿಯೊಬ್ಬನ ಬದುಕಿಗೆ ಸಂಬಂಧಿಸಿದಂತೆ ನಿರ್ವಹಿಸಿರುವುದಕ್ಕಿಂತ ವಿಶೇಷವಾಗಿ ಮತ್ತೇನೊ ಪ್ರತಿಪಾದಿಸಿರುವುದರ ಪರಿಚಯವಾಗುತ್ತದೆ. ಕಾಫ್ಕ ನಿರಾಶಾವಾದಿಯಾಗಿದ್ದ; ಶೂನ್ಯವಾದದಲ್ಲಿ ಅವನಿಗೆ ಅಚಲ ವಿಶ್ವಾಸ, ಅತೀವ ನಂಬಿಕೆ. ಮಾನವನ ಬದುಕಿಗೆ ಮೃತ್ಯು ಅನಿವಾರ್ಯವಾದ ಅಂಗ; ಅದರ ಅನಂತರ ಶೂನ್ಯತೆಯೇ ಕವಿಯುವುದು ಎಂದು ಅವನ ಸಿದ್ಧಾಂತ. ತನ್ನ ದಿನಚರಿಯಲ್ಲಿ ಕಾಫ್ಕ ಒಂದೆಡೆ ಹೀಗೆ ಬರೆದಿದ್ದಾನೆ:

"ಮೃತ್ಯು ನಮ್ಮ ಎದುರಿಗೇ ಇದೆ; ಕ್ಲಾಸ್‌ರೂಮಿನ ಕಪ್ಪು ಹಲಗೆಯ ಮೇಲೆ ಬರೆದ ಅಲೆಕ್ಸಾಂಡರನ ದಂಡಯಾತ್ರೆಯಂತೆ ಅದನ್ನು ನಮ್ಮ ಹಣೆಯಲ್ಲಿ ಯಾರೊ ಬರೆದಿಟ್ಟಿದ್ದಾರೆ. ಬದುಕಿರುವವರೆಗೂ ಆ ವಿಚಿತ್ರ ಮೃತ್ಯುವನ್ನು ಎದುರಿಸಿ, ಅದರ ಹೇಳ ಹೆಸರಿಲ್ಲದಂತೆ ಮಾಡುವುದು ಅತ್ಯವಶ್ಯಕ . . ."

"ಮೃತನಾಗುವುದೆಂದರೆ ಶೂನ್ಯತಾಸ್ಥಿತಿಗೆ ಏರುವುದು; ಒಂದು ಬಗೆಯ 'ಅಸತ್'ಸ್ಥಿತಿಗೆ (ಸತ್ = Existance ಎಂಬರ್ಥದಲ್ಲಿ) ಬದಲಾಯಿಸುವುದು . . ."

ಮೇಲಿನ ದೃಷ್ಟಿಕೋನದಿಂದ ಈ ಕಾದಂಬರಿಯನ್ನು ವಿವೇಚಿಸಿದಾಗ ಇದರ ಮೌಲ್ಯಗಳ ಪರಿಚಯ ಬೇರೆಯಾಗುತ್ತದೆ. ಕಾದಂಬರಿಯ ಪ್ರಾರಂಭದಿಂದ ಕೊನೆಯವರೆಗೂ ಒಂದು ಅಗೋಚರ ಶಕ್ತಿಯ ಹಸ್ತವನ್ನು ನಾವು ಕಾಣುತ್ತೇವೆ. ತನ್ನ ಆಟಕ್ಕೆ ತಕ್ಕಂತೆ ಮಾನವನನ್ನು ಕುಣಿಸಿ ತಾನು ನಲಿಯಬಲ್ಲ ಆದರ ಸಬಲತೆಯೂ ಮಾನವನ ದುರ್ಬಲತೆಯೂ ಕಣ್ಣಿಗೆ ಬೀಳುತ್ತದೆ. ಕಾದಂಬರಿಯ ಅಂತ್ಯದಲ್ಲಿ 'ಕೆ'ಯನ್ನು ಕರೆದೊಯ್ಯಲು ಬರುವ ಇಬ್ಬರು ಮೃತ್ಯುವಿನ ಪ್ರತೀಕವೇ ಆಗಿದ್ದಾರಲ್ಲದೆ ಬೇರೆಲ್ಲ. ಕಾಫ್ಕ ಬರೆದಿದ್ದಾನೆ: "ಮೃತನಾಗುವುದೆಂದರೆ ಒಂದು ಅಸತ್ (ಸ್ಥಿತಿಯ)ಶಕ್ತಿಯ ಮುಂದೆ ನಮ್ಮ ಶಸ್ತ್ರಾಸ್ತ್ರಗಳನ್ನು ಒಪ್ಪಿಸಿ ಬಿಡುವುದು" ಎಂದು. ಮೃತ್ಯುವಿನಿಂದ ಪಾರಾಗುವುದು ಶಕ್ಯವೇ ಇಲ್ಲ! "ಆದರೆ ಒಮ್ಮೆ ಅಸತ್‌ಸ್ಥಿತಿಗೇರಿದ ಮೇಲೆ ಮತ್ತೊಂದು ಅಸತ್‌ಶಕ್ತಿಯ ಮುಂದೆ ಹೋರಾಡಿ ಮಾನವ ಹೇಗೆ ತಾನೆ ಸೋತಾನು? ಅದನ್ನು ಸೋಲೆಂದು ಹೇಗೆ ಕರೆಯಲಾದೀತು? ಆಗ ನಾವು ಸತ್ತಂತೆ ನಮಗೆ ಅನಿಸದೆ ಜೀವಿಸಿರುವುದು ಅನುಭವವಾಗುತ್ತದೆ . . ." ಅಂದರೆ, ವ್ಯಕ್ತಿ ಸತ್ತನಂತರವೂ ಅಮರನಾಗಿಯೇ ಉಳಿಯುತ್ತಾನೆ; ಇಲ್ಲಿ ಅವನ ವೈಯಕ್ತಿಕ ಸೋಲಿನ ಪ್ರಶ್ನೆಯೇ ಬರದೆ ಒಂದು ಮಾನವ ಬದುಕಿಗಿಂತ ಮಿಗಿಲಾದ ಶಕ್ತಿಯೊಡನೆ ಸೇರಿ ಹೋಗಿ ಒಂದಾಗುವುದರ ಅನುಭವ ಮಾತ್ರವಾಗುತ್ತದೆ.

ಹಾಗೆ ನೋಡುವಾಗ 'ಕೆ'ಯ ಸಾವು ಸಹ ಹೆಚ್ಚು ಅರ್ಥಪೂರ್ಣವೆನಿಸುತ್ತದೆ . . .

ಕಾಫ್ಕನ ಈ ವಿಚಾರಪ್ರಣಾಳಿಯು ಸಮರ್ಪಕವೆನಿಸಿದರೂ ಕಾದಂಬರಿಯಲ್ಲಿ ಇನ್ನೂ ಕೆಲವು ನ್ಯೂನತೆಗಳು ಉಳಿದುಕೊಂಡಿವೆಯನ್ನಬೇಕಾಗುತ್ತದೆ. ಕೊನೆಯವರೆಗೂ ಅವನ ಮೇಲಿನ ಆರೋಪಣೆ ಏನೆಂಬುದರ ಸುಳಿವು, ಸೂಚನೆ ನೀಡದೆಯೇ ಇರುವುದು ಕುತೂಹಲವನ್ನು ಕೆರಳಿಸುವುದರಲ್ಲಿ ಮಾತ್ರ ಹೆಚ್ಚು ಯಶಸ್ವಿಯಾದರೂ ಒಂದು ಬಗೆಯ ಅಸಂದಿಗ್ಧತೆಯನ್ನೂ ತಂದಿತ್ತಿದೆ. ಮೊದಲ, ಕಡೆಯ ಅನಿರೀಕ್ಷಿತ ಸೆರೆ ಹಿಡಿಯುವಿಕೆಯ ಸಂದರ್ಭಗಳೇ ಅಸಹಜವೆನ್ನಿಸಬಹುದು—ನಮ್ಮ ದೃಷ್ಟಿಯಿಂದ. ಆದರೆ ಯುದ್ಧಾನಂತರದ ಯೂರೋಪಿನಲ್ಲಿ, ನಾಜಿ ದುರಾಕ್ರಮಣದ ಸಮಯದಲ್ಲಿ ಇಂಥ ಸಾವಿರಾರು ಪ್ರಸಂಗಗಳು ವರದಿಯಾಗಿವೆಯಾಗಿ ಅಲ್ಲಿ ಇದು ಸಾಮಾನ್ಯ, ಸಹಜ. ನ್ಯಾಯಾಲಯದ ಲೌಕಿಕ ಆಚಾರ ವ್ಯವಹಾರಗಳನ್ನಾಗಲಿ ಅವುಗಳ ಕಾರ್ಯ ವಿಧಾನವನ್ನಾಗಲಿ ಕುರಿತು ಕಾಫ್ಕ ನೀಡಿರುವ ಚಿತ್ರ ಅಷ್ಟು ಖಚಿತವೆನಿಸುವುದಿಲ್ಲ. ಯಾವ ನ್ಯಾಯಾಲಯ ಒಬ್ಬ ವ್ಯಕ್ತಿಯ ಜೀವಿತ ಕಾಲದ ಸಮಸ್ತ ಅವಧಿಯಲ್ಲಿಯೂ ಅವನ ಮೇಲಿನ ಆರೋಪಣೆಯನ್ನು ಇತ್ಯರ್ಥಗೊಳಿಸದೆ ತಡೆಹಿಡಿದಿರುತ್ತದೆ? ಎಷ್ಟು ಉದಾಹರಣೆಗಳು ಇಂಥವು ಸಿಗಬಲ್ಲದು? ಎಂದು ಪ್ರಶ್ನಿಸಿದಾಗ ನಿರಾಸೆಯಾದೀತು. ವಕೀಲರ ಬದಲಾವಣೆಯೂ ಅಷ್ಟೇ ಕೌತುಕಪೂರ್ಣವೆನಿಸೀತು! ನ್ಯಾಯಾಲಯದಿಂದ 'ಕೆ'ಯ ಅಂಗರಕ್ಷಕರಾಗಿ ನಿಯಮಿತರಾದವರಿಬ್ಬರಿಗೆ 'ಕೆ'ಯ ಬ್ಯಾಂಕಿನಲ್ಲೇಕೆ ಅಮಾನುಷ ರೀತಿಯಲ್ಲಿ ಶಿಕ್ಷೆ ಕೊಡಲಾಗುತ್ತಿದ್ದಿತೆಂಬುದಕ್ಕೆ ಸಮರ್ಪಕ ಉತ್ತರ ಎಲ್ಲಿಯೂ ದೊರೆಯುವುದಿಲ್ಲ. ಇನ್ನು ಕ್ರೈಸ್ತಗುರುವಿನ ನ್ಯಾಯ ಅರ್ಹತಾ ನಿರೂಪಣೆಯಂತೆ ವಿವೇಚಿಸುವಾಗ 'ಕೆ' ನ್ಯಾಯಾಲಯದ ಬಾಗಿಲಲ್ಲಿ ಕಾಯುತ್ತ ಕುಳಿತಿರುವಷ್ಟು ಅರ್ಹತೆಯನ್ನೂ ಪಡೆಯದೆ ಹೋಗುತ್ತಾನೆ . . . ಅಂಥವನಿಗೆಲ್ಲಿ ನ್ಯಾಯ ದೊರೆತೀತು! ಆದರೂ ಕಾದಂಬರಿಯ ಪಾತ್ರ-ಸಂದರ್ಭ

ಪರಿಪೋಷಣೆ, ಅಂತ್ಯಘಟ್ಟದ ಅದ್ಭುತ ನಿರ್ವಹಣೆ, ಕಾಫ್ಕ ನಂತಹ ಪ್ರಭಾವೀ ಲೇಖಕರಿಗೆ ಮಾತ್ರ ಸಾಧ್ಯ! 'ಕೆ' ಸಾಯುವುದೆಂದೇ ನಿರ್ಧರಿತವಾದಾಗ ಅವನ ಮನಸ್ಸಿನ ಶಾಂತಿ, ನಿರಾಲೋಚನೆಯ ಸ್ಥಿತಿ ಎಂತಹವನಿಗಾದರೂ ಪರಮಸಿದ್ಧಿ. ಹಾಗೆ ಸಾವನ್ನು ಎದುರಿಸುವ ಧೈರ್ಯ, ಎದೆಗಾರಿಕೆ, ಸಹನೆ ಪರಮಗುಣವಾಗಬಲ್ಲವು. ಅಲ್ಲಲ್ಲಿ 'ಕೆ'ಯ ಬಾಯಿಂದ ಇಂಥ ವಾಕ್ಯಗಳೂ ಬರುತ್ತವೆ:

"I always wanted to snatch at the world with twenty hands, and not for a verty laudable motive, either . . ."

"Am I to leave this world as a man who shies away from all conclusions? Are people to say of me after I am gone that at the begin ning of my case I wanted it to finish, and at the end of it wanted it to begin . . . I have been left to say to myself all that is needed."

ಇಂಥ ಒಂದೊಂದು ಅನನ್ಯಸಾಧಾರಣವಾದ ನವ್ಯಕಾವ್ಯ ವನ್ನು ಹೋಲಬಲ್ಲ ಉಪಮೆಗಳೂ ಸಿಕ್ಕುತ್ತವೆ: "Like sickroom attendants waiting while their patient takes a rest . . .

ಕೊನೆಯದಾಗಿ ಈ ಕಾದಂಬರಿಯ ನಾಯಕ 'ಕೆ' ಬೇರಾರೂ ಅಲ್ಲ, ಸ್ವಯಂ ಕಾಫ್ಕ; ಈ ಕಾದಂಬರಿಯಲ್ಲಿ ಚಿತ್ರಿತವಾಗಿರುವ ಸಮಸ್ಯೆಯೂ ಅವನ ನಿಜಜೀವನದ ಕೆಲವು ಘಟನೆಗಳು ಎಂಬುದನ್ನು ನಾವು ತಿಳಿದಾಗ ಮಾತ್ರ ನಮ್ಮ ನಂಬಿಕೆ ಬುಡಮೇಲಾಗುವುದರಲ್ಲಿ ಸಂಶಯವಿಲ್ಲ!

---

# ಕನ್ನಡ ವಂಶವೃಕ್ಷ

ಚಿಗುರಿ ಹೂಮಿಡಿವೆಡೆದು ಬೆಡಗಿನಿಂ ಬಳುಕುತಿದೆ,
ಅದೆ ನೋಡಿ 'ಕನ್ನಡದ ವಂಶವೃಕ್ಷ';
ಜಗ್ಗದಿದೆ ಸಿಡಿಲಿಗೂ ಬಾನಿಗೂ ವ್ಯಾಪಿಸಿದೆ
ಹೆಮ್ಮೆಯಿಂ ಬೀಗಿರುವ ಸ್ವರ್ಣಪಕ್ಷ!

ಸಾಮ್ರಾಜ್ಯದೈಸಿರಿಯ ವೈಭವದ ವೈಬಣ್ಣ,
ಕವಿ ಕಾವ್ಯಗಳ ದಿವ್ಯ ಪರ್ಣರಾಶಿ;
ಪಂಪನಿಂ ಕುವೆಂಪು ವೈಖರಿಯ ಇನಿಕಂಪು
ಸೇರಿ ಮಾರುತ ಬೀಸೆ ತಂಪಸೂಸಿ!

ಜಾನಪದ ವಿವಿಧತೆಗೆ ನವ್ಯತೆಯ ಪ್ರಭೆಸೇರೆ
ದಿವಿನಾದ ದಿವ್ಯತೆಯ ಒಲವಿನಂದ;
ದಾಸ ಶಾಜಾಣಗಳ ಕೂಗಿನಲಿ ಮೈಮರೆತ
ಕನ್ನಡಿಗರಾಮರದ ಪಕ್ಷಿವೃಂದ.

ಸಂಸ್ಕೃತದ ಸಂಸ್ಕೃತಿಯ ಸಂಸ್ಕಾರವಿಹುದದಕೆ,
ಬೇರು ಬೇರಿಗು ಅದರ ಅಮೃತದೆರಕ;
ಪ್ರಕೃತಿವನಿತೆಯ ರಮ್ಯ ಕಾಂತಾರದವಯವಕೆ
ಪೂರ್ಣಿಮೆಯ ಪೂರ್ಣಶಶಿ ರಜತತಿಲಕ!

ವಿಸ್ತಾರ ಜಗದಗಲ, ಅಮಲ, ಸುವಿಮಲ, ಸುಜಲ,
ನಿತ್ಯ ನಿರ್ಮಲ ನಿರುತ ಸನ್ಮಂಗಲ;
ಪ್ರಖರ ಸಪ್ರಾಕಾರ ನಿಖರ ವರವೈಯಾರ
ನವ ನವೋನ್ಮೇಷತೆಯ ನವ್ಯಜಾಲ.

ಅಸಮ ಸವಿಫಲವಿದಕೆ ಬೆಸಸುವೊಡೆತಣ್ಣೆಳಲು
ಟಿಸಿಲು ಟಿಸಿಲಿಗು ಮೃಡನ ಬಾಹುದೃಢತೆ;
ಚೈತನ್ಯದವ್ಯಕ್ತ, ಔದಾರ್ಯ ಸಂಪದದ
ಚಿಂತನೆಯ ಸಂಭ್ರಾಂತಿಯೊಲವಿನೊರತೆ!

ಜಿ. ಮಹಾಬಲೇಶ್ವರ ಭಟ್

# ಮುದ್ದಣನು ಚಿತ್ರಿಸಿರುವ ನಾರದನ ಪಾತ್ರ

**ಕೆ. ಎಸ್. ಮಧುಸೂದನ**

ಮುದ್ದಣ ನಮ್ಮ ಸಾಹಿತ್ಯದ ನವೋದಯಕಾಲ ಆರಂಭವಾಗುವುದಕ್ಕೆ ಕೊಂಚ ಹಿಂದೆ ಬಂದವನು. ಈತನನ್ನು ಇಂದಿನ ಪೀಳಿಗೆಯ ಕನ್ನಡದ ಪ್ರವರ್ತಕನೆನ್ನಬಹುದು. ರಸಪುಷ್ಟಿಯಿಂದ ಕೂಡಿರುವ ಈತನ ಗದ್ಯದ ಹೊರಉಡುಪು ಹಳಗನ್ನಡ. ಅದರ ಧಾಟಿ, ವರ್ಣನಾ ವೈಖರಿ, ಕಥಾ ನಿರೂಪಣೆಗಳಲ್ಲಿ ಇಂದಿನ ಕನ್ನಡಮಾರ್ಗದ ಸೂಚನೆ ಇದೆ. ಈತನ ಕೈಯಲ್ಲಿ ಗದ್ಯ ಸೂತ್ರದ ಗೊಂಬೆಯಂತೆ ಕುಣಿದಿದೆ. ಇದನ್ನು ನಾವು 'ರಾಮಾಶ್ವಮೇಧ' ಹಾಗೂ 'ಅದ್ಭುತ ರಾಮಾಯಣಂ'ಗಳಲ್ಲಿ ಕಾಣಬಹುದು. ಪದಗಳ ನಿರ್ಮಿತಿಯನ್ನು ಮಾಡುವುದರ ಜತೆಗೆ ಪಾತ್ರ ಚಿತ್ರಣದಲ್ಲಿಯೂ ಮುದ್ದಣ ಎತ್ತಿದಕೈ. ಇದಕ್ಕೆ ಅದ್ಭುತರಾಮಾಯಣದಲ್ಲಿ ಅವನು ಚಿತ್ರಿಸಿರುವ ನಾರದನ ಪಾತ್ರವನ್ನು ನೋಡಬಹುದು.

ಶ್ರೀಮತಿಯ ಸ್ವಯಂವರದ ಪ್ರಸಂಗದಲ್ಲಿ ನಾರದನ ಪಾತ್ರದ ಪ್ರವೇಶ ಬಹಳ ಉಚಿತವಾಗಿದೆ. ನಾರದ ಪರ್ವತರಿಬ್ಬರೂ ಅಂಬರೀಷನ ಒಡ್ಡೋಲಗಕ್ಕೆ ಬರುವ ಸಂದರ್ಭದಲ್ಲಿ ಕವಿ ಅವರನ್ನು ಈ ರೀತಿ ವರ್ಣಿಸಿದ್ದಾನೆ. 'ಪೊಗೆಯುಳಿದಗ್ಗಿಯ ಪೋಲೊಂದೆಡೆಯೊಳ್, ತಣ್ಪುಗೊಂಡ ನೇಸರ ಪೋಲ್ ಪೆರತೊಂದೆಡೆಯೊಳ್ ಬೆಳಗುವ ನಾರದ ಪರ್ವತರೆಂಬಿರ್ವರ್ ಮುನಿಗಳ್ ಏಕಕಾಲದೊಳ್ ಆಗಸದತ್ತಣಿಂ ಅಂಬರೀಷನ ಮನೆಗೆಯ್ತಂದರ್' ಅಲ್ಲಿಗೆ ಬಂದ ಋಷಿಗಳಿಬ್ಬರೂ ಅವನ ಮಗಳರೂಪಕ್ಕೆ ಮಾರುಹೋಗುತ್ತಾರೆ. ನಾರದನಂಥ ಒಬ್ಬ ಮುನಿಯೂ ಓರ್ವ ಹೆಣ್ಣಿನ ರೂಪಿಗೆ ಮರುಳಾಗಬೇಕಾದರೆ ಆ ಹೆಣ್ಣಿನ ರೂಪು ಇನ್ನೆಷ್ಟಿರಬೇಡ? ಅದಕ್ಕಾಗಿಯೇ ಮುದ್ದಣನು ಶ್ರೀಮತಿಯ ರೂಪವರ್ಣನೆ ವಿಶೇಷವಾದ ಆಸ್ಥೆವಹಿಸಿರುವುದು. ಶ್ರೀಮತಿಯ ರೂಪಿಗೆ ಮರುಳಾದ ನಾರದನ ದೌರ್ಬಲ್ಯ ಇಲ್ಲಿ ನಮಗೆ ತಿಳಿಯುತ್ತದೆ. ಶ್ರೀಮತಿಯನ್ನು ಕಂಡಕೂಡಲೇ ಆಕೆಯನ್ನು ವರಿಸುವ ಆಸೆ ಅವನಿಗೆ ಉಂಟಾಯಿತು. ಅವನ ಜತೆಯಲ್ಲಿ ಪರ್ವತನಿಗೂ 'ಅವರಿರ್ವರಭ್ಯಾಗತರ್ಗುಂ ಬಿರ್ದಿನವರಪ್ಪ ಬಯಕೆವುಟ್ಟಿದುದು. ನಿಕ್ಕುವ ಮಾಗಲವರಿರ್ವರುಂ ಆ ಪೆಣ್ಗೆ ಕಣ್ಣಿಟ್ಟರ್.' ಕಲಹಪ್ರಿಯ ನಾರದನು ಮೊದಲು ಅಂಬರೀಷನಿಗೆ ತನ್ನ ಬಯಕೆಯನ್ನು ಹೇಳುತ್ತಾನೆ. ಅಷ್ಟೇ ಅಲ್ಲ. ಈ ಸ್ವಯಂವರದಲ್ಲಿ ತನ್ನ ಅಭ್ಯರ್ಥಿತನ ಯಶಸ್ವಿಯಾಗಲಿಕ್ಕೆ ವಿಷ್ಣುವಿನ ಬಳಿ ಸಹಾಯ ಯಾಚಿಸಲು ಹೊರಟವರಲ್ಲೂ ನಾರದನೇ ಮೊದಲಿಗನು. 'ಕೆಯ್ಯೊಡ್ಡಿಸುತೆ ಬಲ್ಪಗೆಯಿಂ ಬೇಡಿಕೊಳ್ವ ಮುನಿಯ ಕಿಬ್ಬಗೆಗೆ' ವಿಷ್ಣುವು ನಕ್ಕು 'ಅಂತಕ್ಕೆ' ಎನ್ನುತ್ತಾನೆ. ಸರ್ವಶ್ರೇಷ್ಠಮುನಿಗಳಲ್ಲೊಬ್ಬರಾದ ನಾರದನಲ್ಲೂ ಕೀಳುಬುದ್ಧಿ, ಸ್ವಾರ್ಥ ಹೇಗೆ ಅಡಗಿತ್ತು ಎಂದು ಹೇಳುವಲ್ಲಿ ಕವಿ ಯಶಸ್ವಿಯಾಗಿದ್ದಾನೆ.

ವೈಕುಂಠದಿಂದ ಬರುತ್ತಿರುವಾಗ ನಾರದನಿಗೆ ಸಂತೋಷವೋ ಸಂತೋಷ. ತಾನೇ ಗೆಲ್ಲುವೆನೆಂಬ ಸೊಲ್ಲು. ಆತನು ಆಗ "ಆ ಬಾಲೆ ಪರ್ವತನಂ ಕಂಡೆನಿತು ಹಾಸ್ಯಂಗೆಯ್ವಳೋ ಮೇಣದರ್ಕವನೆನಿತು ನಾಚುವನೋ ಕಾಣ್ಬೆಂ" ಎಂದು ಖುಷಿಪಡುತ್ತಾ ತೇಲಿಬರುತ್ತಿರುತ್ತಾನೆ. ತನ್ನ ಸಮಾನನಾದ ಇನ್ನೊಬ್ಬನ ಏಳಿಗೆಯ ಬಗೆಗೆ ನಾರದನು ಸಹಿಸಲಾರ. ಅವನ ಸ್ವಾರ್ಥಪರ ಬುದ್ಧಿ ಇಲ್ಲಿ ಚೆನ್ನಾಗಿ ವ್ಯಕ್ತವಾಗಿದೆ.

ಕವಿಯು ನಾರದನನ್ನು ಭೂಲೋಕದಿಂದ ವೈಕುಂಠಕ್ಕೂ ವೈಕುಂಠದಿಂದ ಭೂಲೋಕಕ್ಕೂ ಏದುಸಿರು ಬರುವಹಾಗೆ, ಮುಗ್ಗರಿಸಿ ಬೀಳುವಹಾಗೆ, ಹಿಂದೆ ತಿರುಗಿ ಮುಂದೆ ಓಡುವ ಹಾಗೆ, ಸಿಕ್ಕಾಪಟ್ಟೆ ಓಡಿಸಿ ಸುಸ್ತುಮಾಡಿಸಿದ್ದಾನೆ. ಲಕ್ಷ್ಮಿಯ ಕಾವಲುಗಾರ್ತಿಯರಿಂದ ನೂಕಿಸಿದ್ದಾನೆ. ನಾರದನ ಸೊಕ್ಕನ್ನು ವಿಷ್ಣುವಿನ ಉಕ್ಕಿನ ಪೆಟ್ಟಿನಿಂದ ಪುಡಿ ಪುಡಿ ಮಾಡಿಸಿದ್ದಾನೆ. ಅಮಂಗಲಕರವಾದ ಗೂಗೆಯ ಕೈಕೆಳಗೆ ಶಿಷ್ಯನನ್ನಾಗಿ ಮಾಡಿಸಿದ್ದಾನೆ.

ಶ್ರೀಮತಿ ಸ್ವಯಂವರದ ಪ್ರಸಂಗದಲ್ಲಿ ಪರ್ವತನನ್ನು ಸೋಲಿಸಲು ಹೋಗಿ ಅವನೊಡನೆ ತಾನೂ ನಗೆಪಾಟಲಿಗೀಡಾಗಿ ತಾನೇ ನಿರ್ಮಿಸಿಕೊಂಡ ಕಂದಕದಲ್ಲಿ ಬೀಳುತ್ತಾನೆ.

ಮುಂದೆ ವೈಕುಂಠದಲ್ಲಿ ಕೌಶಿಕ ಮುಂತಾದ ಗಾನವಿದ್ಯಾ ವಿಶಾರದರು ಗಾಯನ ಮಾಡುವ ಸನ್ನಿವೇಶ. ಒಳಗಡೆಗೆ ಯಾರನ್ನೂ ಬಿಡದೆ ಲಕ್ಷ್ಮಿಯ ಪಡಿಯರತಿಯರು ಕಾಯುತ್ತಿದ್ದರು. ನಾರದನು ಸಹನೆ ಮೀರಿ ನುಗ್ಗಲು ಪ್ರಯತ್ನಿಸುತ್ತಾನೆ. ಮುಲಾಜಿಲ್ಲದೆ ಅವರು ಇವನನ್ನು ತಳ್ಳುತ್ತಾರೆ. ಸೊಕ್ಕಡಗಿ ಉಮ್ಮಳಿಸುತ್ತಾ ಬಾಗಿಲಬಳಿ ಸಿಟ್ಟಿನಿಂದ ನಿಂತಿರುತ್ತಾನೆ. ಇವನ ಸಿಟ್ಟಿನ ಕಿಚ್ಚಿಗೆ ಪುಳ್ಳೆ ಹಾಕಿದಹಾಗೆ ಆಗ ತಾನೇ ಬಂದ ತುಂಬುರನನ್ನು ವಿಷ್ಣುವೇ ಸ್ವತಃ ಬಂದು ಆದರದಿಂದ ಒಳಗೊಯ್ಯುತ್ತಾನೆ. ಆಗಂತೂ ನಾರದನು ಕುದಿಕುದಿದು ಮನಸ್ಸಿನಲ್ಲಿ 'ಸುಡು ಸುಡು ತನ್ನೀ ಬಾಳ್ಕೆಯನ್. ಅಂತಿರ್ಪ ಮುದಿ ತುಂಬುರಂಗೆ ಸಮ್ಮಾನಮುಪ್ಪಿದೆ

ಯೊಳ್ ಎನಗೆ ದುಮ್ಮಾನಮಾದುದು ಗಡ! ಕಟಕಟಾ !' ಎಂದು ಹಲುಬುತ್ತಾನೆ. ಇದಕ್ಕೆಲ್ಲ ಕಾರಣಳಾದವಳು ಲಕ್ಷ್ಮಿ ಎಂದು ಹೇಳಿ ಅವಳಿಗೆ ಶಾಪಹಾಕಿ ಮುಯ್ಯನ್ನು ತೀರಿಸಿದೆನೆಂದು ಭಾವಿಸಿದರೆ ಲಕ್ಷ್ಮಿ ಆ ಶಾಪವನ್ನೇ ಸೀತಾ ಜನನಕ್ಕೆ ತಿರುಗಿಸಿಕೊಳ್ಳುತ್ತಾಳೆ. ಎರಡನೆ ಬಾರಿಯ ನಾರದನ ಸೋಲಿದು.

ವಿಷ್ಣು ಸಮಯ ನೋಡಿ ನಾರದನ ತಪ್ಪುಗಳನ್ನು ಎತ್ತಿ ತೋರಿಸಿ ತಾನು ಗಾಯನಕ್ಕೆ ಒಲಿಯುವಷ್ಟು ಬೇಗ ಇತರ ಪೂಜೆಗಳಿಗೆ ಒಲಿಯೆನೆಂದು ಹೇಳಿದಾಗ ನಾರದನಿಗೆ ಗಾಯನ ಕಲಿಯುವ ಆಸೆ ಅಂಕುರಿಸುತ್ತದೆ. ಆದರೆ ಇದರ ನೆಲೆಗಟ್ಟು ಶ್ರದ್ಧೆಯಾಗಲೀ ಭಕ್ತಿಯಾಗಲೀ ಅಲ್ಲ. ತುಂಬುರನನ್ನು ಸೋಲಿಸಬೇಕೆಂಬ ಸ್ಪರ್ಧಾಮನೋಭಾವ ಅಥವಾ ಸೊಕ್ಕು. ಅದಕ್ಕೆ ಅವನು ವಿಷ್ಣುವನ್ನು 'ತುಂಬುರ ಕೌಶಿಕರವೊಲ್' ಗಾನದಲ್ಲಿ ಪ್ರತಿಷ್ಠಿತನಾಗಿ ಮಾಡಬೇಕೆಂದು ಬೇಡುವುದು. ಅದಕ್ಕೆ ವಿಷ್ಣುವು ಒಪ್ಪಿ ಒಂದು ಗೂಗೆಯ ಬಳಿ ಹೋಗುವಂತೆ ಸೂಚಿಸುತ್ತಾನೆ. ಇಲ್ಲಿ ನಾವು ಮುದ್ದಣನ ವಿನೋದ ಪ್ರವೃತ್ತಿಯನ್ನು ಗುರುತಿಸಬಹುದು. ನಾರದನಿಗೆ ಎಷ್ಟು ಗರ್ವವೋ ಗೂಗೆರಾಜನಿಗೆ ಅಷ್ಟೇ ಸೌಜನ್ಯ. ಆತನ ನಡತೆ ನಾರದನ ನಡತೆಯನ್ನು ನಾಚಿಸುವಂಥದು.

ಗಾನಬಂಧು ಗೂಗೆರಾಜನು ನಾರದನಿಗೆ ಶ್ರಮ, ಶ್ರದ್ಧೆ ಗಳಿಂದ ನಿಧಾನವಾಗಿ ಪಾಠ ಹೇಳಿಕೊಡುತ್ತಾನೆ. ನಾರದನು ದಿವ್ಯ ಸಹಸ್ರವರ್ಷ ಪರ್ಯಂತ ಅಭ್ಯಾಸ ಮಾಡಿದ್ದು ಆಶ್ಚರ್ಯವೇ ಸರಿ. ೩೬೬೦ರ ಸ್ವರಗಳನ್ನು ಅರಿತು ಗಾನ ವಿದ್ಯೆಯಲ್ಲಿ ನೈಪುಣ್ಯ ಪಡೆಯುತ್ತಾನೆ.

ಗೂಗೆರಾಜನಿಂದ ಬೀಳ್ಕೊಂಡೊಡನೆಯೇ, ಆತನಿಗೆ ಬೀಜರೂಪದಲ್ಲಿದ್ದ ತುಂಬುರನನ್ನು ಸೋಲಿಸಿಬಿಡಬೇಕೆಂಬ ಬಯಕೆ ಹೆಮ್ಮರವಾಗಿಬಿಡುತ್ತದೆ. ತಕ್ಷಣವೇ ಅವನ ಬೀಡಿನ ಕಡೆಗೆ ನಡೆಯುತ್ತಾನೆ. ಆದರೆ ಅಲ್ಲಿ, ಅವನ ಬೀಡಿನಲ್ಲಿ ಅಂಗವಿಕಲರಾದ ಅನೇಕರು ಬಿದ್ದಿರುವುದನ್ನು ಕಾಣುತ್ತಾನೆ. ಅವರನ್ನು ಯಾರೆಂದು ಕೇಳಿದಾಗ ಅವರು ರಾಗ ರಾಗಿಣಿಯರೆಂದೂ ನಾರದನೆಂಬೊಬ್ಬನ ವಕ್ರಗಾಯನದಿಂದ ತಮಗೆ ಆ ಪರಿಸ್ಥಿತಿ ಬಂತೆಂದೂ, ತುಂಬುರನು ಹಾಡಿದರೆ ತಮ್ಮ ಅಂಗಗಳು ಸರಿಹೋಗುವುದೆಂದೂ ಹೇಳಿ 'ಎಲೈ! ಎಮ್ಮಂ ನೋಯಿಸುವಂ ನಾರದಂ, ಸಲಹುವಂ ತುಂಬುರಂ' ಎನ್ನುತ್ತಾರೆ. ಆಗ ನಾರದನಿಗಾದ ನಿರಾಶೆಯ ವ್ಯಾಪ್ತಿ ಎಷ್ಟಿರಬೇಡ?

ಇಲ್ಲಿ ಕವಿ ಧ್ವನಿವತ್ತಾಗಿ ವ್ಯಂಗ್ಯವಾಗಿ ನೇರವಾಗಿ ರಾಗ ರಾಗಿಣಿಯರ ಪಾತ್ರಗಳ ಮೂಲಕ ನಾರದನನ್ನು ಅಣಕಿಸಿದ್ದಾನೆ. ನಾರದನು ಮತ್ತೆ ವಿಷ್ಣುವಿನೆಡೆಗೆ ಬಂದು ದೂರುತ್ತಾನೆ ವಿಷ್ಣುವು ದ್ವಾಪರಯುಗದತನಕ ನಾರದನು ಗಾನಯೋಗಕ್ಕಾಗಿ ಕಾಯಬೇಕೆಂದು ಹೇಳುತ್ತಾನೆ.

'ವಿದ್ಯಾ ವಿನಯೇನ ಶೋಭತೆ'–ವಿದ್ಯೆ ಗರ್ವದಿಂದ ಒಲಿಯತಕ್ಕದ್ದಲ್ಲ. ವಿನಯದಿಂದ ಮಾತ್ರ ಎಂಬ ಅಂಶವನ್ನು ಮುದ್ದಣ ಮಾರ್ಮಿಕವಾಗಿ ನಾರದ ಪಾತ್ರದ ಮೂಲಕ ತಿಳಿಯ ಹೇಳಿದ್ದಾನೆ.

ಮುಂದೆ ದ್ವಾಪರಯುಗದಲ್ಲಿ ಕೃಷ್ಣಾವತಾರವಾದಾಗ 'ಪಿಂತೆ ನುಡಿಯಿತ್ತುದಂ ನೆನೆದು ನಾರದಂ ಹರಿಹರಿಯೆನುತೆ ಕೃಷ್ಣನೆಡೆಗೆಯ್ತಂದು ಮುನ್ನಿನಿರವನೆಳ್ಚರಿಸಿದನ್'. ಕೃಷ್ಣ ನಾದರೋ ಉದಾಸೀನದಿಂದ ಜಾಂಬವತಿಯ ಬಳಿಗೆ ಕಳುಹಿಸುತ್ತಾನೆ. ಜಾಂಬವತಿ, ಸತ್ಯಭಾಮೆ, ರುಕ್ಮಿಣಿ ಇವರುಗಳು ಈ ಮಹಾಶಯನಿಗೆ ಗಾನವಿದ್ಯೆಯನ್ನು ಬಡಿಸಿ ಕೈತೊಳೆದುಕೊಳ್ಳುತ್ತಾರೆ. ಕೃಷ್ಣ ಇವನ ಗಾನವಿದ್ಯೆಯ ಮುನ್ನಡೆಯನ್ನು ಕೇಳಿದಾಗ ಪಡಿಯುರತಿಯರು ಈತನಿಗೆ ಇನ್ನೂ ಸ್ವರಜ್ಞಾನವೇ ಹುಟ್ಟಿಲ್ಲವೆಂದು ತೀರ್ಮಾನಿಸುತ್ತಾರೆ. ಏನು ಮಾಡಿದರೂ ತನಗೆ ಗಾನ ವಿದ್ಯೆ ದಕ್ಕಲಿಲ್ಲ ಎಂಬುದು ನಾರದನಿಗೆ ಮನದಟ್ಟಾದಾಗ 'ತುಂಬುರನಂ ಗೆಲ್ವೆನೆಂಬ ಏರುಂ ಮನಮಿಳಿದುದು, ಸೊರ್ಕುಸಿರ್ಕುಗೊಂಡುದು, ಪೆರ್ಮೆಪೆರಸಾರ್ದುದು, ಹರಿಯ ಮೆಚ್ಚಿಪ ಬಗೆಯೊಂದೆ ಮಿಗಿಲಾದುದು. ಯಾವಾಗ ಈ ಸ್ಪರ್ಧಾ ಮನೋಭಾವ ಹೋಗಿ ಶ್ರದ್ಧೆ ಭಕ್ತಿ ಹುಟ್ಟಿತೋ ಆಗ ಶ್ರೀಕೃಷ್ಣನು ತಾನೆ ನಾರದನಿಗೆ ಗಾನ ಧಾರೆಯನ್ನು ಎರೆದನು. ಆಗ ನಾರದನು ಬ್ರಹ್ಮಾನಂದದಿಂದ ಮೈಮರೆತು ನಾಟ್ಯ ಮಾಡಿದನು. ಆಗ ಕೃಷ್ಣನು ಅವನಿಗೆ ಗಾನ ವಿದ್ಯೆ ಲಭಿಸಿತೆಂದೂ ತುಂಬುರನ ಸರಿಸಮಾನನಾದನೆಂದೂ ಹೇಳಿ ಹರಸಿದನು.

ನಾರದನ ಪಾತ್ರದ ಮೂಲಕ ಕವಿ ಓದುಗರಿಗೆ ಮನರಂಜನೆ ಒದಗಿಸಿದ್ದಾನೆ. ಒಟ್ಟಾರೆ 'ಅದ್ಭುತ ರಾಮಾಯಣಂ'ನ ಹಂದರದಲ್ಲಿ ನಾರದನ ಪಾತ್ರ ಪ್ರವೇಶದ ಔಚಿತ್ಯ ಪ್ರಶ್ನಾರ್ಹವಾದರೂ ತನ್ನದೇ ಚೌಕಟ್ಟಿನಲ್ಲಿ ಮುದ್ದಣನು ಚಿತ್ರಿಸಿರುವ ನಾರದನ ಪಾತ್ರ ಬೆರಗುಗೊಳಿಸುವಂಥಾದ್ದು. ನಾರದನು ಪಟ್ಟ ಪಾಡುಗಳನ್ನೂ, ಅನುಭವಿಸಿದ ಅಪಮಾನಗಳನ್ನೂ, ತಿಳಿಗೇಡಿತನವನ್ನೂ ಆತನ ಪಾತ್ರದಲ್ಲಿ ಹರಿಸಿದ್ದಾನೆ.

ಅದ್ಭುತ ರಾಮಾಯಣದ ನಾರದನ ಪಾತ್ರ ಜೀವಂತ ಕಳೆಯಿಂದ ಎಲ್ಲರ ಸಹಾನುಭೂತಿಯನ್ನು ಪಡೆಯುತ್ತದೆ.

---

# ಪಂಪ ಮಹಾಕವಿಯ ಬಾಹುಬಲಿ

ಡಿ॥ ಟಿ. ಎನ್. ಮಹಾದೇವಯ್ಯ

ಜೈನಧರ್ಮ ಕಾವ್ಯಧರ್ಮಗಳನ್ನು ಸಮನ್ವಯಗೊಳಿಸಿ ಹಿಂದಿನಿಂದ ನಡೆದುಬಂದ ಕಥೆಗೆ ಅವಲೋಪವೂ ಸಂಭವಿಸ ದಂತೆ ಮಾನವ ಧರ್ಮದ ಅಗಲ, ಆಳ, ಗಾಢಗೂಢ ಮನೋಧರ್ಮಗಳನ್ನು ನೈಸರ್ಗಿಕವೂ ಸೂಕ್ಷ್ಮವೂ ಆದ ರೀತಿಯಲ್ಲಿ ನಿರೂಪಿಸುವುದು ಪಂಪನ ಅದ್ಭುತ ಪ್ರತಿಭೆಗೆ ಸಾಕ್ಷಿ. ಭರತನಲ್ಲಿಂತೋ ಬಾಹುಬಲಿಯಲ್ಲೂ ಅದೇ ರೀತಿಯ ಅಭಿಮಾನಗಳನ್ನಿಟ್ಟಿದ್ದರೂ ಬಾಹುಬಲಿಯ ಭವ್ಯಮೂರ್ತಿ ಪಂಪನ ಧೀಮಂತ ಸ್ಮೃತಿಮಂದಿರದಲ್ಲಿ ಮೂಡಿನಿಂತಾಗ ಪಂಪನ ಅಂತರ್ಯ ಆವೇಶ ಸರ್ವಸ್ವವೂ ಅತ್ತ ಮಿಾಸಲಾಗಿ ಹರಿಯುತ್ತದೆ. ರಾಜ್ಯಮೋಹ ಕಿರಿದಾಗಿ, ಮೋಕ್ಷಮಾರ್ಗ ಹಿರಿದಾಗಿ ಸಾಫಲ್ಯ ಪಡೆವ ಜೀವನದ ಒಳತೋಟಿಯ ವಿಜಯವನ್ನು ನಿಷ್ಕೃಷ್ಟವಾದ ರೇಖೆ ವಿನ್ಯಾಸಗಳಿಂದ ರೂಪಿಸುತ್ತಾನೆ. ಚಂಚಲ ರಾಜ್ಯಲಕ್ಷ್ಮಿ ಮುಖದ ಮೇಲೆ ಅವಗುಂಠನವನ್ನೆಳೆದು ದೂರನಿಲ್ಲಿಸುತ್ತಾನೆ. ಮುಕ್ತಿಶ್ರೀ ಮನೋವಲ್ಲಭೆ ಕೆಲಸಾರಿ ಕೈಹಿಡಿದು ತಂದು ನೀರೆರೆದು ಸಹಕಾರ ವೃಕ್ಷಕ್ಕೆ ಹೊಂದಿಸುತ್ತಾನೆ.

ರತ್ನಾಕರನ ಬಾಹುಬಲಿಯನ್ನು ಕಾಣುವ ಮುನ್ನ ಕನ್ನಡ ಸಾಹಿತ್ಯದಲ್ಲಿ ಏಕಮೇವಾದ್ವಿತೀಯವಾದ ಪಂಪನ ಬಾಹುಬಲಿಯ ಜೀವರತ್ನ ಶೋಭೆಯನ್ನು ನೋಡಿದರೆ ಮುಂದಿನ ತುಲನಾತ್ಮಕ ವಿಮರ್ಶೆಯಲ್ಲಿ ಬಾಹುಬಲಿಯ ಲೋಕತಾರಕಮೂರ್ತಿ ಆರಿಂದ ಹೇಗೆ ಹೇಗೆ ರೂಪುಗೊಂಡಿದೆ ಯೆಂಬುದನ್ನು ಅರಿಯಬಹುದು; ಕವಿಗಳ ಅಭಿವ್ಯಕ್ತಿತ್ವ ಗಳನ್ನೂ ಅಳೆಯಬಹುದು.

ಆದಿಪುರಾಣದ ಕಾವ್ಯರಂಗದಲ್ಲಿ ಬಾಹುಬಲಿಯ ಪ್ರವೇಶ ವಾಗುವಾಗಲಿನ ಅವನ ದರ್ಶನ ಮನೆಸೂರುಗೊಳ್ಳು ವಂತಹುದು. ವೃಷಭನಾಥನ ಪತ್ನಿ ಸುನಂದಾದೇವಿಯ ಮಗ, ಕಾಮತಂತ್ರ, ಸಾಮುದ್ರಿಕ, ಆಯುರ್ವೇದ, ಧನುರ್ವೇದ, ಹಸ್ತಿ, ಅಶ್ವತಂತ್ರ, ರತ್ನ ಪರೀಕ್ಷೆ ಮೊದಲಾದ ಹಲವಾರು ಶಾಸ್ತ್ರಗಳಲ್ಲಿ ಧರ್ಮಮೂರ್ತಿಯಾದ ತಂದೆ ಆದಿನಾಥನಿಂದಲೇ ಪರಿಣಿತಿ ಪಡೆಯುತ್ತಾನೆ. ರೂಪಿನಲ್ಲಿ ಅಸದೃಶ ಸೌಂದರ್ಯದ ಮೂರ್ತಿಮಂತ ವ್ಯಕ್ತಿಯಾಗಿ ಅಂದಿನ ಮದನನೆಂಬ ಪರ್ಯಾಯನಾಮದಿಂದ ಸುಶೋಭಿತನಾಗಿ ದ್ದಾನೆ. ಭವ್ಯಾಕೃತಿಯಲ್ಲಿ ಭರತನಿಗಿಂತ ೨೫ ಮಾರು ಉನ್ನತನಾದ ಮೂರ್ತಿ. ಬಾಹುಬಲದಲ್ಲಂತೂ ಬಾಹುಬಲಿ ಯನ್ನು ಮಿೀರಬಲ್ಲವರು ಅಂದಿನ ಜಗತ್ತಿನಲ್ಲಿಲ್ಲ. ತಂದೆಯ ಪರಿನಿಷ್ಕ್ರಮಣ ಕಾಲಕ್ಕೆ ಪೌದನಪುರದ ಸಿಂಹಾಸನವನ್ನು ಪಿತನ ಆಜ್ಞೆಯಂತೆ ಸ್ವೀಕರಿಸಿ, ಯುವರಾಜನಾಗಿ ವಿರಾಜಿಸು ತ್ತಾನೆ. ಭರತನ ದಿಗ್ವಿಜಯದ ಸಂಭ್ರಮದಲ್ಲಿ ಕೆಲಕಾಲ ಬಾಹುಬಲಿ ಕಣ್ಮರೆಯಾಗುತ್ತಾನೆ. ಆದರೇನು ? ಲೋಕ ದೆದುರು ಶಾಶ್ವತ ಧರ್ಮಸಂಪತ್ತಿನಂತೆ ಮಹಾಕಾವ್ಯದ ಮುಖ್ಯ ಪ್ರಸಂಗದಲ್ಲಿ ಮತ್ತೆ ಕಣ್ಮುಂದೆ ಮೂಡಿ ನಿಲ್ಲುತ್ತಾನೆ. ಮತ್ತಾರೂ ಅಳಿಸಲಾರದ ಪ್ರಭಾಪೂರ್ಣ ರೂಪುರೇಷೆಗಳಿಂದ ನಿಂತುಬಿಟ್ಟಿದೆ ಆ ಮೂರ್ತಿ ಮಾನವ ಹೃದಯದಲ್ಲಿ ಅನಂತ ಶತಮಾನಗಳು ಗತಿಸಿಹೋದರೂ. ಈ ಧರ್ಮವೀರನ ಶಾಶ್ವತ ಜೀವನವನ್ನು ಅವಲೋಕಿಸಿದ ಪುಣ್ಯ ಜಿನ ಸೇನರದು – ಕನ್ನಡಕ್ಕೆ ಬಿಡುಗೈಯ ಕಾಣಿಕೆಯಾಗಿ ನೀಡಿದ ಅಮೋಘ ಔದಾರ್ಯ ಕವಿ ಪಂಪನದು.

ಅಯೋಧ್ಯೆಯ ಬಾಗಲಿಗೆ ಬಂದಕೂಡಲೇ 'ಒಳಪುಗದೆ ಪುರೋಪಾಂತದೊಳ್ ಚಕ್ರರತ್ನಂ' ನಿಲಲು ಭರತನ ಸಾಹಸ ವೀರ್ಯಗಳು ಕೆರಳಿದವು. ವಿಜಯ ದುರಾಗ್ರಹಿಗೆ ಅಣ್ಣತಮ್ಮಂದಿರ ಹಾರ್ದಿಕ ವಾತ್ಸಲ್ಯದತ್ತ ಗಮನವಿಲ್ಲ. 'ಸಕಲ ಜಗತ್ತೂ ತನಗೆ ಅಡಿಯಾಳಾಗಿ ಬರಬೇಕೆಂಬ ಒಂದೇ ಛಲ. ರಾಜ್ಯದ ಮೇಲಣ ವ್ಯಾಮೋಹದಿಂದ ತಮ್ಮಂದಿರನ್ನೂ ಆಳರಸನಾಗಿ ಕೀಳುದೃಷ್ಟಿ ಬೀರಿ ಕಂಡು ಎಂತಾದರೂ ಎಲ್ಲ ತಮ್ಮಂದಿರೂ 'ಶಾಸನಮಂ ನೆತ್ತಿ ಯೊಳಾಂತು' 'ಚಕ್ರೇಶನ ಪಾದಾಬ್ಜದೊಳ್' ಬಂದೆರಗಲೇ ಬೇಕು. ಉಳಿದ ತಮ್ಮಂದಿರಂತೂ ಸನ್ಯಾಸ ಸ್ವೀಕರಣಾರ್ಥ ವಾಗಿ ತಂದೆಯ ಸಮವಸರಣದತ್ತ ಸಾರ್ದರು. ಬಾಹುಬಲಿ ಮಾನೋನ್ನತನು, ಪರಾಕ್ರಮಿ, ತೇಜಸ್ವಿಯಾದ ಮಹಾ ಪುರುಷ. ಭರತನ ಅನುಜರಲ್ಲಿ ಅವನೇ 'ಅಗ್ಗಳದಭಟ.' ಉಳಿದ ತಮ್ಮಂದಿರೇ ಅಣ್ಣನ ಶಾಸನವನ್ನು ನೆತ್ತಿಯೊಳು ತಾಳಲು ನಿರಾಕರಿಸಿದಾಗ ಬಾಹುಬಲಿಯಂತಹ ಲೋಕೋತ್ತರ ಪುರುಷನು ಭರತನ ವಿಜಯ ದುರಾಗ್ರಹಕ್ಕೆ ಬಲಿಬೀಳುವುದು ಅಸಂಭವ. ಭರತನಿಗೆ ಇದರ ಅರಿವಿಲ್ಲದಿಲ್ಲ.

ತಾನು 'ನೆಗೞ್ದೀ ಷಟ್ಖಂಡ ಭೂಮಂಡಲಮನಿತುಮಂ ಗೆದ್ದಖಂಡ ಪ್ರತಾಪಿ'ಯಾದರೂ 'ಎನ್ನಣುಗದಮ್ಮನಿಲ್ಲದೆ ಬಿನ್ನನೆ ಸಾಮ್ರಾಜ್ಯಮಿನಿತುಮಾದೆರಕಮುಮುತ್ಯನ್ನತಿಯಲ್ತೆನಗಾತಂ ಮುನ್ನೆರಗದೊಡೆ' ಎಂಬ ನಿರ್ಧಾರಕ್ಕೆ ಬಂದರೂ ಬಾಹುಬಲಿ ಆ ಛಲಕ್ಕೆ ಮಾರ್ಕೊಂಡು ಎದುರಾಗದೆ ವಿಧಿಯಿಲ್ಲ. ಭರತನ ಎದೆಯಲ್ಲಿ ಅಳುಕಿಲ್ಲದಿಲ್ಲ; ಬಾಹುಬಲಿಯ ಭುಜಬಲ ಪರಾಕ್ರಮಗಳು ತನಗೆ ತಿಳಿಯದವುಗಳಲ್ಲ. ಸಾಮದಿಂದ ಆರಂಭಿಸಿ ದಂಡದಿಂದಲಾದರೂ ಅವನು ಶರಣು ಬರಲೇಬೇಕೆಂಬ ಉಗ್ರ ಅನುರೋಧದಿಂದ ಭರತನ ದೃಷ್ಟಿ ಮಂಕಾಗುತ್ತದೆ. ಚಕ್ರರಕ್ಷಿತನೆಂಬ ಗರ್ವ ಸೇರಿ ಆವನು ಪೂರ್ಣಾಂಧನಾಗುತ್ತಾನೆ.

'ಹರಿನ್ಮಣಿವರ್ಣನಂ ನೆರೆದಿದು ಮೇಣ್ ಕ್ಷಾತ್ರಂ, ತೇಜಂ, ಧರಾಧಿಪ ರೂಪದಿಂ ಧರೆಗೆ' ಎನ್ನುವಂತೆ 'ಚಕ್ರಿಗಮೆಸೆಯದಿನಿತು ತೇಜಸ್ಫುರಿತಂ' ಆಗಿ ಸಿಂಹಾಸನದಲ್ಲಿ ಕುಳಿತ ಬಾಹುಬಲಿಗೆ ದೂತನು ಬಂದು ತನ್ನೊಡೆಯನ ಸಮಸ್ತ ದಿಗ್ವಿಜಯಗಳನ್ನೂ ಉಬ್ಬಿ ಉತ್ಸಾಹದಿಂದ ಹಿರಿದು ಮಾಡಿ ವರ್ಣಿಸುವಾಗ ಅವನ ಮಾತುಗಳನ್ನು ಕೇಳುತ್ತಿರುವಂತೆ ಕಂಡರೂ ಬಾಹುಬಲಿಗೆ ಒಡಲಲ್ಲಿ ಕಿಚ್ಚೂಡಿದಂತಾಗುತ್ತದೆ ನಿರ್ಮಲಾಗ್ರಹದಿಂದೆ. ದೂತನೂ ಆವೇಶದಿಂದ ಒಡೆಯನ ವಿಜಯ ವೈಖರಿ ಬಿತ್ತರಿಸುವಾಗ ಬಾಹುಬಲಿ ಧಮನಿಗಳಲ್ಲಿ ಅವನ ಕ್ಷಾತ್ರ ರಕ್ತ ಕಾವೇರುತ್ತದೆ. ಭರತ ಮೊದಲು ಸಾಮ, ಅನಂತರ ದಂಡೋಪಾಯಗಳನ್ನು ಬಳಸಲಿರುವ ನೀತಿ ಬಾಹುಬಲಿಯ ಸೂಕ್ಷ್ಮ ದೃಷ್ಟಿಗೆ ಹೊಳೆಯದಿಲ್ಲ. ಚಕ್ರೇಶ ಪಾದಾಬ್ಜದಲ್ಲಿ ಎರಗಬೇಕೆಂಬ ಸೂಚನೆ ಕೇಳಿ ಸಿಡಿಲನ್ನೊಳಗೊಂಡ ನೀಲ ಮೇಘದಂತೆ 'ಕೋಪಗರ್ಭಸ್ಮಿತ'ನಾಗುತ್ತಾನೆ. ಅಣ್ಣನ ದಿಗ್ವಿಜಯದಲ್ಲಿ ತಮ್ಮನಿಗೆ ಅದಾವ ಮಹತ್ತೂ ಗೋಚರಿಸುವುದಿಲ್ಲ. ಆ ರಾಜ್ಯ ವ್ಯಾಮೋಹ, ಇತರ ಅರಸರ ಮೇಲೆ ದಾಳಿ, ಅದರಿಂದ ರಕ್ತಪಾತ ಅದರಮೇಲೆ ಇವನ ಅಧಿಕಾರ. 'ಕುಲಾಲ ಚಕ್ರಂ ತಿರಿವಂತೆ' ಚಕ್ರರತ್ನದ ಅಡಿಯಾಳಾಗಿ ಅದರ ಬೆನ್ನು ಹಿಂದೆ ಅಲೆದು ಈ ರಾಜ್ಯೈಶ್ವರ್ಯಗಳಿಸುವುದು ಯಾವ ಮಹಾ ವಿಜಯವೆಂಬ ತಿರಸ್ಕಾರ ದೃಷ್ಟಿ ಬಾಹುಬಲಿಯ ಧರ್ಮಪ್ರಿಯ ಮನಸ್ಸಿಗೆ ಪ್ರಬೋಧೆಯಾಗುತ್ತದೆ. 'ಸಮುದ್ರದ ತಡಿಯೊಳ್' ಪಸಿದು ಉಣ್ಣಪಟ್ಟು ಬಿರ್ದಿರ್ದು' ಉದಕಮಂತ್ರದ ಬಲದಿಂದ ಮಾಗಧಾಮರವನ್ನು ಗೆಲ್ದ ವಿಜಯ ವಿಜಯವೇ? ಚಿಲಾತಾವರ್ತರು ಪಿರಿದು ತಿಣಕವನ್ನು ತಂದಾಗ 'ಸುರುಳ್ದನಿದು ಕೊಡೆಯ ಚರ್ಮದ ಮಱೆಯೊಳ್ ಗೂಡಕೊಳ್ಳುತಿರ್ದುದು' ಶೌರ್ಯದ ಕುರುಹೇ? 'ಪೂರ್ವ ಮಹೀಶ್ವರನಾಮಮನೆಯ್ದೆ ಕಳೆದು ವೃಷಭಾಚಲದೊಳ್' ನಿಜನಾಮದ ಪ್ರಶಸ್ತಿ ರೂಪಿಸಿದ ಭರತ ನಗೆಗೀಡಾಗಲಿಲ್ಲವೆ? ಹೀಗೆ ಭರತನ ಒಂದೊಂದು ದಿಗ್ವಿಜಯ ಪ್ರಕರಣವೂ ಬಾಹುಬಲಿಗೆ ಸರ್ವ ಸಾಧಾರಣವಾದ ನೀರಸ ಸಾಧನೆಗಳಂತೆ ಕಾಣುತ್ತವೆ. ಅವನ ಈ ಮೂದಲಿಕೆ ಬರಿ ಆಡಂಬರದ ನುಡಿಗಡಣಗಳುಹುವ ವಿಡಾಯವಲ್ಲ; ಅವುಗಳಲ್ಲಿ ಅಸಾಧಾರಣ ಸಾಧನೆಯ ಗುರಿಯಿದೆ; ಸಾಮಾನ್ಯ ವಿಜಯವನ್ನು ಮೀರಿಸಿದ ಯಾವುದೋ ಮಹತ್ತರ ವಿಜಯ ಸಾಧನೆಯು ಗುರಿ ದೃಗ್ಗೋಚರವಾಗುತ್ತದೆ. ರಾಜನಾದವನಿಗೆ ಯಶೋಧನವೇ ನಿಧಿ. ಭರತನಿಗೆ ರಾಜ್ಯಬೇಕು; ಅಧಿಕಾರಬೇಕು; ಯಶಸ್ಸನ್ನು ಬಯಸಿಲ್ಲ; 'ಅದನಿಂ ತಿಳಿಪಿ, ಕಳಿಪಿ ಕಡೆ' ಮಾಡಿರುವನು. ಅನೇಕ ಅರಸುಗಳ ಮರಣಕ್ಕೆ ಕಾರಣನಾದನು. ಎಷ್ಟೋ ಸೇನೆ ಹತವಾಗಿದೆ; ಅದೆಷ್ಟು ನೆತ್ತರು ನೀರ್ಗಾಲುವೆಯಾಗಿ ಆಹವರಂಗವನ್ನು "ಆರ್ದ್ರಗೊಳಿಸಿದೆ." ಇಷ್ಟು ಮಾಡಿ ಆ ವಿಜಯದಿಂದ ಸಾಧಿಸಿದ ಮಹತ್ಕಾರ್ಯವಾವುದು? ಪಡೆದ ಅಪರೂಪ ಭೋಗವಾವುದು? ಹೊಂದಿದ ಮನಃತೃಪ್ತಿಯೇನು? ಷಟ್ಖಂಡದಗಲವೂ ಸಾಲದಾಯಿತು. ವ್ಯಾಮೋಹದಿಂದ ಹಿರಿದಾದ ವ್ಯಾಮೋಹವೇ ಜನಿಸಿತು. ವಿಜಯದ ಮೇಲೆ ವಿಜಯಗಳಿಸಿದುದರಿಂದ ಇಂದು ತಮ್ಮಂದಿರ ಮೇಲೂ ಅಸಹನೆ, ಅಸಮಾಧಾನ. ಅವರೂ ಆನತರಾಗಲೆಂಬ ದುರಾಗ್ರಹ ಹಿರಿದಾಯಿತು. ಈ ಆಸೆ ಈಡೇರುವತನಕ ಚಕ್ರೇಶ್ವರನ ಮನಸ್ಸಿಗೆ ಶಾಂತಿಯೆಲ್ಲಿಂದ ದೊರಕಬೇಕು? ಅಣ್ಣನ ಈ ದುರಾಗ್ರಹ, ಈ ಅಧಿಕಾರಾಕಾಂಕ್ಷೆಗಳನ್ನು ವಿನಮ್ರನಾಗಿ ಸ್ವೀಕರಿಸಲು ಬಾಹುಬಲಿ ಸಿದ್ಧನಾಗಿಲ್ಲ. ಮಾನಧನನಾದ ವೀರ ಇತರರ ಅಂಕಿತಕ್ಕೆ ಹೆದರಿ ಭೀತಿಯಿಂದ ಬಾಳಲರಿಯ.

ಇತರರೂ ಆ ರೀತಿ ಬಾಳುವುದು ಬಾಹುಬಲಿಗೆ ಹಿಡಿಸದು.

" ಪಿರಿಯಣ್ಣಂಗೆರಗುವುದೇಂ| ಪರಿಭವವೇಕೀರಿ
ನೆತ್ತಿಯೊಳ್ ಬಾಳಂ ನಿ
ರ್ನೆರಮೂರಿ ಚಲದಿನೆರಗಿಸ| ಲಿರೆ ಭರತಂ
ಗೆರಗುವೆರಕಮುಂಜಮೆಯಲ್ತೆ"

ಎಂಬುದು ಅವನ ತರ್ಕ.

ಆದುದರಿಂದ

"ಭರತಂ ಷಟ್ಖಂಡ ಭೂವಲ್ಲಭನೆನೆ ಸಿರಿಯಂ
ಗೆಂಟಜಿ಼ೊಳ್ ಕೇಳ್ದು ರಾಗಂ
ಬೆರಸಿಪ್ಪೀರ್ನಣ್ಪೆ ಸಾಲ್ಗುಂ ಕರೆದೊಡೆ ಬೆಸನೇನೆಂಬ
ಜೀಯೆಂಬ ದೇವಂ |
ಬರಸಾಳೆಂಬ ದೈನ್ಯಕ್ಕೆಲವೊ ತನುವನೊಡ್ಡುವಂತಾದಿ
ದೇವಂ |
ಪುರುದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾರೊಳಂ
ಪಂಥಮುಂಟೇ ‖ "

ಎಂಬುದು ಅವನ ಅಸ್ಖಲಿತ ಅಭಿಪ್ರಾಯ. ಅಣ್ಣನ ಅಪಮಾರ್ಗ ವರ್ತನೆಗಾಗಿ ವಿಷಾದಿಸಿಯೂ ವಿಷಾದಿಸುತ್ತಾನೆ. 'ಚಕ್ರೇಶನಾದೊಡಂ ತನ್ನಾಕ್ರಮಣಮನೆನ್ನೊಳೇಕೆ ಕೆಮ್ಮನೆ ತೋರ್ಪಂ' ಎಂದು ಚಿಂತಿಸುತ್ತಾನೆ. ಅನ್ಯಾಯ ಅತಿಯಾಗಿ ವ್ಯಾಪಿಸಲು ಬಿಡುವ ಮನಸ್ಸಿಲ್ಲದೆ ಅದು ತಾನಾಗಿ ಬಂದು ಮನೆಯ ಬಾಗಿಲಲ್ಲಿ ನಿಂದು ಬಲಿಕೇಳುವಾಗಲೂ ನಿರಾಕರಿಸದೆ ಎದೆತಟ್ಟಿ ದಿಟ್ಟತನದಿಂದ ಅದನ್ನು ಪ್ರತಿಭಟಿಸಿ ಲೋಕ ಕಲ್ಯಾಣದ ಮೂಲಕ ಆತ್ಮಕಲ್ಯಾಣ ಸಾಧಿಸಿದ್ದಾನೆ. ಮನಸ್ಸಿನ ಪ್ರಚೋದನೆ ಕಾರ್ಯಕ್ಕಿಳಿಯುತ್ತದೆ. ಇರ್ವರ ಸಾಮರ್ಥ್ಯದ ಪರೀಕ್ಷೆಯಾಗಲೇ ಬೇಕಿದ್ದರೆ ಹಿಂಜರಿಯಲೇಕೆ? 'ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ' ಎಂದು ದೂತನ ಮುಖಮುರಿದು 'ಸಂಗರ ನಿಕಷದೊಳೆಮ್ಮಂದಮಂ ನೀವೆ ಕಾಣ್ಬೈ' ಎಂದೂ ಹೇಳಿ ಕಳುಹಿಸುತ್ತಾನೆ. ತನ್ನ ಅಸೀಮಸಾಹಸದಲ್ಲಿ ನಂಬುಗೆಯಿಟ್ಟು ಈ ಅನ್ಯಾಯವನ್ನು ಒರಸುತ್ತೇನೆಂಬ ನಿಶ್ಚಲ ಪ್ರತಿಜ್ಞಾಬದ್ಧನಾದ ವೀರಬಾಹುಬಲಿಯಲ್ಲಿ ತುಸುವಾದರೂ ಮನಸ್ಸಿನ ಹೊಯ್ದಾಟ ಕಾಣಿಸದು. ರಣಾಂಗಣಕ್ಕೆ ಬಂದು ನಿಂತಾಗಲೂ ಅದೇ ಗಂಭೀರ ನಿಶ್ಚಲ ಕಾರ್ಯಾನುಸರಣಿ ಕಾಣುತ್ತದೆ.

ಸಮಸ್ತ ಸೇನಾ ಸಹಿತನಾಗಿ ತನ್ನ ಏಕಮಾತ್ರ ಶತ್ರು ಬಾಹುಬಲಿಯನ್ನು ಪ್ರತಿಭಟಿಸಿ ಜಯಿಸುವ ಮಹಾ-ಆಕಾಂಕ್ಷೆಯಿಂದ 'ವೀರ ಕ್ಷಾತ್ರ ಚೂಡಾಮಣಿ' ಭರತ ಚಕ್ರವರ್ತಿ ನಿಂತಿದ್ದಾನೆ ಒಂದೆಡೆಯಲ್ಲಿ. ಆತನಿಗೆ ಉಳಿದಿರುವುದು ವಿಜಯದ ಗುಂಗೊಂದೇ! ಇದಿರಾಳೀ ತನ್ನ ಒಡಹುಟ್ಟಿದ ತಮ್ಮನೆಂಬ ಅರಿವು ಅಭಿಮಾನಗಳು ಹಾರಿಹೋಗಿವೆ. ತನ್ನಂತೆಯೇ ಪುರು ಪರಮೇಶನ ಪುತ್ರನೆಂಬ ಪ್ರೀತಿವಾತ್ಸಲ್ಯವಿಲ್ಲ; ಅದೂ ಕರಗಿಹೋಗಿದೆ. ಬಾಹುಬಲಿ ಅವನ ತಮ್ಮನಹುದೋ ಅಲ್ಲವೋ ಅದು ಬೇಕಿಲ್ಲ ಅವನಿಗೆ; ಪೌದನಪುರದ ಯುವರಾಜ ಬಾಹುಬಲಿ ಷಟ್ಖಂಡಾಧಿಪತಿಯಾದ ತನಗೆ ಮಣಿದೆರಗಲೇಬೇಕು. ರಾಜ್ಯದ ಮೇಲಣ ಆಸೆಯಿಂದ ತಾನೊರ್ವನೇ ಪೌರುಷ ಪ್ರತಾಪಿಯೆಂಬ ಗರ್ವದಿಂದ ಉದ್ಧಟನಾದ ಬಾಹುಬಲಿಯು ಶಿಕ್ಷಿಸಿ ತಕ್ಕ ಶಾಸ್ತಿ ಮಾಡುವೆನೆಂಬ ರಣೋತ್ಸಾಹದಿಂದ ನಿಂತಿದ್ದಾನೆ ಭರತ! ಮತ್ತೊಂದೆಡೆ ಭ್ರಾತೃಪ್ರೇಮದಿಂದ ವಂಚಿತನಾಗಿ, ಕೀಳಾಳೆಂದು ಪರಿಗಣನಾಗಿ ಅದರ ಸೇಡನ್ನು ತಿದ್ದಿ ತೀರಿಸಲು ನಿಂತ ಬಾಹುಬಲಿ ಮತ್ತು ಅವನ ಸಾತ್ವಿಕ ಆಗ್ರಹ. ಅಣ್ಣನ ಅಪರಿಮಿತವಾದ ಈ ರಾಜ್ಯ ಮೋಹದ ಭೂತ ಬಿಡಿಸಬೇಕೆಂಬ ಕಳವಳ ಕೋಪದಿಂದ ವೀರಕ್ಷಾತ್ರ ಧರ್ಮವನ್ನು ಮೆರೆಯಲು ನಿಂತ ಬಾಹುಬಲಿ. ಇರ್ವರೂ ಪ್ರತಿಸ್ಪರ್ಧಿಗಳು ವಿಜಯಕ್ಕೆ. ಆದರೆ ಗುರಿಗಳು ಬೇರೆ. ಒಬ್ಬನದು ಸ್ವಾರ್ಥ! ಮತ್ತೊಬ್ಬನದು ನಿಸ್ವಾರ್ಥವಾದ ವೀರೋಚಿತ ಆತ್ಮಾಭಿಮಾನ! ಒಬ್ಬನದು ರಾಜ್ಯ ಅಧಿಕಾರಗಳ ಆಕಾಂಕ್ಷೆ! ಮತ್ತೊಬ್ಬನದು ಈ ಅತಿ ವ್ಯಾಮೋಹದ ವಿಪ್ಲವ ರೂಪುದರ್ಶಿಸಿ ಅದನ್ನು ತೊಡೆದು ಹಾಕಲೆಳಸುವ ಧರ್ಮಸಿದ್ಧತೆ! ಒಬ್ಬನದು ಇಹದ ಕರ್ಮ ಫಲಾಪೇಕ್ಷೆಯ ಇಚ್ಛೆ; ಇನ್ನೊಬ್ಬನದು ಧರ್ಮಫಲ ಸಾಧನೆಯ ನಿಷ್ಕಾಪೂರ್ಣ ನಿರೀಕ್ಷೆ; ಇರ್ವರು ವೀರರಲ್ಲಿ ಉದಾತ್ತ ಮನಸ್ಸು, ನಿಷ್ಕಳಂಕ ಚರಿತೆ, ಸಂಯಮಯುತ ವೀರಾವೇಶಗಳು ಹೆಚ್ಚಾಗಿ ಬಾಹುಬಲಿಯಲ್ಲಿ ಎದ್ದು ಕಾಣುತ್ತವೆ! ವಿಜಯ ಯಾರಿಗೆ ಏಕೆ ಎಂಬುದನ್ನು ಮೊದಲೇ ನಿರ್ಧರಿಸಿ ಬಿಡಬಹುದು.

ಯುದ್ಧಾರಂಭವಾಯಿತು. 'ಲಲಿತ ಮುಖ ಸರಸಿಜನೂ ನಿಶ್ಚಲ ಪಕ್ಷನೂ, ಸ್ಥಿಮಿತ ತಾರಕನೂ' ಆದ ಭುಜಬಲಿ 'ಕಣ್ಗೊಳೊಳೆತವೆ ಪೀರ್ವವೋಲ್, ನೋಡಿ ತೇಜಃಪುಂಜ ಪೂರಿತ ದೃಷ್ಟಿಯಿಂದ ಭರತನನ್ನು ಪರಾಭವಗೊಳಿಸಿದ. ಭರತನಿಗಿಂತ ಎಷ್ಟೋ ಮಾರು ಎತ್ತರನಾದ ಬಾಹುಬಲಿಗೆ ಜಲಯುದ್ಧದಲ್ಲೂ ಜಯ! ಮುಂದೆ ಮಲ್ಲಯುದ್ಧ! ರಾಜಾಧಿರಾಜರು ಸುತ್ತ ನೆರೆದಿದ್ದಾರೆ. ದೇವ ದೇವತೆಗಳು ಇರ್ವರ ಹೋರಾಟವನ್ನು ತದೇಕಚಿತ್ತರಾಗಿ ಈಕ್ಷಿಸುತ್ತಾ ಬಾನಿನಲ್ಲಿ ಕಾದು ನಿಂತಿದ್ದಾರೆ. ಬಾಹುಬಲಿ ಕ್ಷಣಮಾತ್ರದಲ್ಲಿ ಭರತನನ್ನು ದೆಸೆಗೆ ಬೀಸಿ ತನ್ನ ಹಿರಿಯ ಅವನೀಶ್ವರ, ಗುರು, ಪಿರಿಯಣ್ಣ, ಚಕ್ರವರ್ತಿ, ಮಹಿಮಾಕರನೆಂಬ ಅರಿವನ್ನು ನೆನೆದು ಮೆಲ್ಲಗೆ ನೆಲಕ್ಕೆ ಇಳಿಸುವನು. ನೆರೆದ ಸೇನೆಯೆದುರಿನಲ್ಲಿ ಸೋಲಿಸುವುದಕ್ಕಿಂತ ಹೆಚ್ಚು ಅಪಮಾನ ಉಂಟುಮಾಡಲು ಅವನ ಮನಸ್ಸು ಬಯಸುವುದಿಲ್ಲ. ಬಾಹುಬಲಿಯು ತನ್ನ ಸಂಯಮದೃಷ್ಟಿ ವಿನಯ ವರ್ತನೆ

ಗಳಿಂದ ಸರ್ವ ಮಾನ್ಯನಾಗುವನು. ಭರತನಿಗೆ ತಡೆಯ ಲಾರದಷ್ಟು ಅಪಮಾನ! ಸೋಲೆಂದರೇನೆಂಬುದನ್ನರಿಯದ ಅವನ ಹೃದಯಕ್ಕೆ ಈ ಆಘಾತ ಅತಿಯಾಯಿತು. ಆದರೆ ವಿವೇಚನೆಯಿಲ್ಲದೆ ಆವೇಶಕ್ಕೆ ಮತ್ತೆ ಮತ್ತೆ ಈಡಾದನು. ಸೇಡು ತೀರಿಸಿಕೊಳ್ಳುವ ಹಸಿವಿನ ಬೆಂಕಿಗೆ ಬಲಿಯಾಗಿ ಅಯುಕ್ತವಾದ ಅಧರ್ಮಯೋಚನೆಗೆ ಗುರಿಯಾದ! 'ಮನಸ್ಸಿನ ದಳ್ಳುರಿ'ಯಿಂದ ಕ್ಷುಭಿತವಾದ ಹೃದಯ, ಸೋಲನ್ನೊಪ್ಪಿಕೊಳ್ಳದ ದುಷ್ಟ ಬುದ್ಧಿಗಳು ಅವನ ಕೈಯಿಂದ ಮಾಡಬಾರದುದನ್ನು ಮಾಡಿಸಿದವು. ಪ್ರಜ್ಞಾಶೂನ್ಯನಾಗಿ 'ಚಕ್ರವೇ ಬಾಹುಬಲಿಯನ್ನು ಹೋಗಿ ತಾಗೆಂದು' ಅದಕ್ಕೆ ಅಣತಿಯನ್ನಿತ್ತ. ಚಕ್ರ ತಮ್ಮನ ಮರಣಕ್ಕೆ ಕಾರಣವಾಗಲೆನ್ನುವಷ್ಟು ಕ್ರೋಧಸಂತಪ್ತನಾದ. ಅಣ್ಣನ ಆಜ್ಞೆ, ಅಧಿಕಾರಗಳಿಗೆ ತಮ್ಮನ ಹೃದಯದ ರಕ್ತದ ಬಲಿಬೇಕಾಯ್ತು! ಅಣ್ಣನ ಪರಾಭವದ ಸೋಲನ್ನು ತಮ್ಮನ ಶಿರವಿಳುಹಿ ತೊಡೆಯಬೇಕಾಯ್ತು! ಅಣ್ಣನ ರಾಜ್ಯ ವ್ಯಾಮೋಹಕ್ಕೆ ಬಲಿಬಿದ್ದ ಸಹಸ್ರಾರು ಶವ ಸಂಖ್ಯೆ, ನೆತ್ತರು ಹೊಳೆಗಳಲ್ಲಿ ತಮ್ಮನ ರುಂಡ ಮುಂಡಗಳೂ ಈಜಿ ದಡ ಕಾಣಬೇಕು. ಎಂತಹ ವಿಲಕ್ಷಣ ಸನ್ನಿವೇಶ! ಜಗತ್ತು ಮೂಕವಾಗಿ ನಿಂತಿತು. ದೇವತೆಗಳು ಬೆಚ್ಚಿದರು. ನೆರೆದ ನರಸುರೋರುಗವ್ಯಂತರ ಪಡೆ ಬೊಂಬೆಯಂತೆ ನಿಶ್ಚಲವಾಯಿತು. ಪರಿಣಾಮವೇನೆಂದು ಕ್ಷಣ ಮಾತ್ರ ಪರಿಸ್ಥಿತಿ ಅತ್ತಿತ್ತ ತೂಗಿತು. ಆದರೆ ಭರತನ ಸುದೈವದಿಂದಲೇ ಎಂಬಂತೆ ಚಕ್ರರತ್ನವು ಬಾಹುಬಲಿಯನ್ನು ಬಲವಂದು 'ಅಣಂ ಭೇದಿಸಲಾಱದುದಱನಿರ್ದುದು.' ಎಂತಹ ಮಹಿಮಾ ಪೂರ್ಣ ಸನ್ನಿವೇಶ! ಚಕ್ರರತ್ನಕ್ಕಿಂತ ಮಿಗಿಲಾದ ಮಹಾಶಕ್ತಿಯಾವುದೂ ಭರತನಿಗಿಲ್ಲ. ಅವನ ಪ್ರಾಣ ಸರ್ವಸ್ವ, ಬಲ ಸರ್ವಸ್ವ, ಅಧಿಕಾರ ಸರ್ವಸ್ವವಾದ ಚಕ್ರವೇ ಎದುರಾಳಿಗೆ ಶರಣು ಬಂದು ಶಕ್ತಿಹೀನವಾಗಿ ಬಾಹುಬಲಿಯತ್ತ ಸೇರಿದ ಮೇಲೆ ಭರತನ ಒಳತೋಟಿ ಅಪಮಾನಗಳು ಅವರ್ಣನೀಯವೆಂದು ಹೇಳಬೇಕಿಲ್ಲ. ಆಕಾಶದಿಂದ ದೇವತೆಗಳು ಪೂಮಳೆಗರೆದರು. ನೆರೆದ ಜನರ ಜಯಕಾರಕ್ಕೆ ದಿಕ್ಕುಗಳು ಕಂಪಿಸಿದುವು. ಸಮಸ್ತಲೋಕದ ಅನುಗ್ರಹ ಆಶೀರ್ವಾದಕ್ಕೆ ಬಾಹುಬಲಿಯ ದಿವ್ಯ ಜೀವ ಈಡಾಯಿತು. 'ತನಗಲ್ಲದುದಂ ಮಾಡಿದನಿನಿತಂ ಚಕ್ರೇಶ' ಎಂಬ ಲೋಕ ನಿಂದೆಯ ಕಳಂಕ ಭರತನ ಪಾಲಿಗೆ ಬಂದಿತು. ಸನ್ನಿವೇಶವನ್ನು ಬಹು ಸೂಕ್ಷ್ಮವಾಗಿ ಅವಲೋಕಿಸಿ ಅರಿಯುತ್ತಿದ್ದ ಬಾಹುಬಲಿಗೆ ಮನಸ್ಸಿನಲ್ಲಿ ವ್ಯಥೆ, ಜಿಹಾಸೆ ಅಂಕುರಿಸಿದವು. ಈ ಲೌಕಿಕದ ಬಾಳಿನ ಮೇಲೆ ಬೇಸರ ಹುಟ್ಟಿತು. ಕ್ಷಾತ್ರಧರ್ಮೋಚಿತವಾಗಿ ಭರತನನ್ನು ಎದುರಿಸಿದರೂ ಮನಸ್ಸು ಅದನ್ನು ಮೆಚ್ಚಲಿಲ್ಲ; ವಿಜಯಲಕ್ಷ್ಮಿ ಒಲಿದು ಬಂದರೂ ವಿಜಯದಾಸೆ ಉಳಿದಿರಲಿಲ್ಲ; ಗೆಲುವಿನ ಸಂತಸವಂತೂ ಇಲ್ಲವೇ ಇಲ್ಲ. ಸೋತು ಸಿಗ್ಗಾಗಿ ನಿಂದ ಅಣ್ಣ ಒಂದೆಡೆಯಲ್ಲಿ ತಮ್ಮನ ಸಾವು ಬಯಸಿಯೂ ನಿಷ್ಫಲನಾಗಿ ನಿಂತಿದ್ದಾನೆ. ಅಜೇಯವಾದ ಸುದರ್ಶನ ಚಕ್ರವಿನ್ನೊಂದೆಡೆಯಲ್ಲಿ ಆಳಾಗಿ ನಿಂತಿದೆ. ರಾಜ್ಯವ್ಯಾಮೋಹ ಆರಿಂದ ಏನೇನು ಮಾಡಿಸದು? ಬಾಹುಬಲಿ ಹೃದಯದಲ್ಲಿ ಪಶ್ಚಾತ್ತಾಪ ಮೂಡುತ್ತದೆ.

ಸೋದರ ಸೋದರರಲ್ಲಿ, ತಂದೆ ಮಕ್ಕಳಲ್ಲಿ ವಿಷ ಬೀಜ ಬಿತ್ತಿ ಪ್ರಾಣಾಪಹರಣದ ಯೋಚನೆಯನ್ನೂ ತಂದೊಡ್ಡುವ, ಕಾಡಿಸಿ ಕೆಡುಕನ್ನುಂಟುಮಾಡುವ ರಾಜ್ಯ ವೈಭವದ ಚಂಚಲಲಕ್ಷ್ಮಿಯನ್ನು ಕಂಡು ಹೇಸುತ್ತಾನೆ.

"ಇನಿಯಪ್ಪ ಮೊದಲೊಳ್ ನಂಜಿನ| ಪನಿವೊಲ್
ಬಱಕೆಯ್ದೆ ಮುಳಿದುಕೊಂದಿಕ್ಕುವುವಿಂ|
ತೆನೆಯೆನೆ ವಿಷಯ ಸುಖಸ್ವಾ| ದನದೊಳ್ ಲಂಪಟರಿ
ದೇಕೆಯೊ ನರಪಶುಗಳ್."

ಎಂದು ಮನಸ್ಸು ಜಿಹಾಸೆತಾಳುತ್ತದೆ. ಅಣ್ಣನತ್ತ ತಿರುಗಿ ಅವನನ್ನು ತಾನೇ ಸಂತೈಸುತ್ತಾನೆ. 'ಚಕ್ರೇಶ ಸಿಗ್ಗನುಱಮುಳಿಸಂ ನೀನೆಂದಿಗಂ ಬಿಸುಡು' ಎಂದು ಹೇಳುತ್ತಾ ಪುರುದೇವನಿಂದ ತನಗೆ ಬಂದ ರಾಜ್ಯವನ್ನೂ ಪರಿತ್ಯಜಿಸಿ ಬಿಡುತ್ತಾನೆ.

"ಅವಧರಿಸದೆ ನಿನ್ನೊಳ್ ಪಿರಿ| ದವಿನಯಮಂ ನೆಗಱ್ದೆ
ದೋಷಮುಂತಪದೊಳ ನೀ
ಗುವೆನಣ್ಣ ಕಲುಷಮಂ ಬಿಸು| ಡುವುದೊರ್ಮೆಗೆ
ಮಱೆವುದೆನ್ನ ದುರ್ವಿಳಸನಮಂ"

ಎಂದು ದೈವಿಕ ಪಶ್ಚಾತ್ತಾಪದಿಂದ ವೀರವೈರಾಗ್ಯ ತಾಳಿ ಬಾಹುಬಲಿಯು ಪುಣ್ಯಪುರುಷನಾಗಿ ನಿಲ್ಲುತ್ತಾನೆ. ಮನುಜ ಕುಲದ ದುರ್ಬಲ ಮನೋಧರ್ಮ ರಾಜಲಕ್ಷ್ಮಿಯ ಆಸೆಗಾಗಿ ಅದೆಂತಹ ದುರಂತಕ್ಕೆ ಕೈಯಿಡದಿರದೆಂಬುದನ್ನು ಮನಗಂಡ ಧರ್ಮವೀರ ಬಾಹುಬಲಿಯ ಹೃದಯದಲ್ಲಿ ನಿರ್ಮಲವಾದ ಮಂಗಳಕರವಾದ ಆತ್ಮ ಕಲ್ಯಾಣದ ತಪಸ್ಸಿನ ಪ್ರೇರೇಪಣೆ ಹುಟ್ಟುತ್ತದೆ. ವೈರಾಗ್ಯ ಸ್ವೀಕರಿಸಿ

ಮಗನಿಗೆ ರಾಜ್ಯವಿತ್ತು ತಾನು ತಪಸ್ಸಿಗೆ ಹೊರಡುತ್ತಾನೆ![೧] ಅದೇ ಅಣ್ಣನಿಗೆ ಅವನು ಮಾನವನಾಗಿ ನೀಡಿದ ಅಂತ್ಯ ಸಂದೇಶ.

ಸೋತವನ ದುರಾಸೆಗೆ ಮನನೊಂದು, ಕರುಣೆದೋರಿ, ಗೆದ್ದ ವೀರ ರಾಜ್ಯಪರಿತ್ಯಜಿಸುವುದು ವಿಶ್ವದ ಇತಿಹಾಸದಲ್ಲೇ ಒಂದು ಅಪೂರ್ವ ಘಟನೆ. ಮಹೋನ್ನತ ಸನ್ನಿವೇಶಕ್ಕೆ ಹೊಂದಿಕೊಳ್ಳುವ ಒಂದು ಮಹಿಮಾಪೂರ್ಣ ಪಾತ್ರ ಬಾಹುಬಲಿಯದು. ಧರ್ಮಯುದ್ಧಗಳ ಹೋರಾಟ ನಿಲುಗಡೆಯಲ್ಲಿ ತಪೋವನವನ್ನು ಆಶ್ರಯಿಸುವ ಈ ಸನ್ನಿವೇಶದಲ್ಲಿ ಹೈಮಾಚಲ ವ್ಯಾಪ್ತಿಯನ್ನು ಕಾಣುತ್ತೇವೆ; ಅಂತೆಯೇ ಆ ಸನ್ನಿವೇಶದ ಬಾಹುಬಲಿ ಪಾತ್ರದಲ್ಲಿ ಮಾನಸ ಸರೋವರ ಸನಿಹ ವಿರಾಜಿತ ಕೈಲಾಸ ಶಿಖರವನ್ನು ದರ್ಶಿಸುತ್ತೇವೆ. ಪಂಪನ ಮಹಾಕಾವ್ಯಸೌಧಕ್ಕೆ ಈ ಪಾತ್ರಸನ್ನಿವೇಶಗಳೆರಡೂ ಹೊನ್ನಿನ ಕಳಸದಂತೆ ಅದರ ಶಿರಃಪ್ರಾಂತವನ್ನಲಂಕರಿಸಿ ದಿಕ್ಕುದಿಕ್ಕಿನಿಂದಲೂ ಶೋಭಾಪೂರ್ಣವಾಗಿ ಬೆಳಗುತ್ತ ನಿಂತಿವೆ.

ದೀಕ್ಷಾಬದ್ಧನಾದ ಬಾಹುಬಲಿ ಒಂದು ಸಂವತ್ಸರ ಪರ್ಯಂತ ಪ್ರತಿಮಾಯೋಗದಲ್ಲಿ ನಿಲ್ಲುತ್ತಾನೆ. ಕಠಿಣ ತಪಸ್ಸನ್ನು ಆಚರಿಸುತ್ತಾನೆ. ಸುತ್ತ ಹುತ್ತಗಳು ಬೆಳೆಯುತ್ತವೆ; ಅವುಗಳ ಮೇಲೆ ಬೆಳೆದುನಿಂತ ಬಳ್ಳಿಗಳು ವ್ಯಾಪ್ತವಾಗಿವೆ. ವಿಷಸರ್ಪಗಳ ನಿಶ್ವಾಸದ ಬಿಸಿಯಿಂದ ತಪಸ್ಸು ಉಗ್ರವಾದರೆ ಬಾಹುಬಲಿಯ ತಪಸ್ಸಿನ ಮಹಾಬೆಂಕಿಯಿಂದ ವನಪ್ರದೇಶವೇ ರುದ್ರಸೌಂದರ್ಯವಿರಾಜಿತವಾಗಿ ನಿಲ್ಲುತ್ತದೆ.* ಆದರೂ ಬಾಹುಬಲಿಗೆ ಕೇವಲ ಜ್ಞಾನ ಉದಯವಾಗಲಿಲ್ಲ. ಭರತನ ನೆಲದಲ್ಲಿ ನಿಂತಿರುವೆನೆಂಬ ಮನಃಕಷಾಯದಿಂದ ಜ್ಞಾನದರ್ಶನ ದೂರಾಗುತ್ತದೆ. ಆದಿನಾಥನ ಅಪ್ಪಣೆಯಂತೆ ಭರತ ಬಂದು ಬಾಹುಬಲಿ ಮುನಿಗೆರಗಿ ಮನಸ್ಸಿನ ಆ ಮಮಕಾರ ಕಳೆದ ನಂತರ ಜ್ಞಾನದರ್ಶನವಾಗುತ್ತದೆ; ಮೋಕ್ಷಸಾಧನೆಯಾಗುತ್ತದೆ. ನಶ್ವರ ಲೋಕದ ಸಂಬಂಧ ನೀಗಿ ಶಾಶ್ವತ ಸುಖ ಪಡೆದ ಇಂದ್ರಾದಿಗಳು ಬಂದು ಅರ್ಚಿಸಿದರು.

ಜಯ ನಿನದಂ ಸುರದುಂದುಭಿ ಜಯನಿನದಂ
ಪುಷ್ಪವರ್ಷವೊರ್ಮೆಯೆ ಸಕಲೋ|
ರ್ವಿಯನೆಯ್ದೆ ಪರ್ವುತಿರೆರ್ಚಿತ್ತೆಯ ಸರಿಯಂತೆರಗಿ
ಪೋದುದಮರ ಸಮಾಜಂ||

ಘಾತಿಕರ್ಮ ನಿರಸನಕ್ಕಾಗಿ ಪೃಥ್ವಿಯಲ್ಲಿ ಸಂಚರಿಸಿ ಕೈಲಾಸದತ್ತ ತೆರಳಿ ತಂದೆಯ ಬಳಿ ನಿಂದು, ಕಾಲಾನಂತರ ವೃಷಭತೀರ್ಥಂಕರನಿಗಿಂತ ಮುಂಚೆಯೇ ಅರ್ಹಂತ ಪದವಿಗೇರಿ ನಿರ್ವಾಣಸಾಯುಜ್ಯವನ್ನು ಹೊಂದಿದನು.

---

೧ ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಲಮೀ ಭಟ ಖಡ್ಗ
ಮಂಡಲೋ-
ತ್ಪಲವನ ವಿಭ್ರಮ ಭ್ರಮರಿಯಪ್ಪಮನೋಹರಿ
ರಾಜ್ಯಲಕ್ಷ್ಮಿ ಭೂ|
ವಲಯ ಮನಯ್ಯನಿತ್ತುದುಮನಾಂ
ನಿನಗಿತ್ತೆನಿದೇವುದಣ್ಣ ನೀ|
ನೊಲಿದ ಲತಾಂಗಿಗಂ ಧರೆಗಮಾಟಿಸಿದಂದು
ನೆಗಚ್ಚಿಮಾಸದೇ||
(ಆದಿಪುರಾಣ. ಪುಟ ೩೮೫. ಪದ್ಯ ೧೩೦).

* ಅಡಿವಿಡಿದಿಟ್ಟು ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗ|
ಳ್ವಿಡಿದು ವಿಕ್ಷೋರಗ ಪ್ರತತಿ ನೋಟಿಪ್ಪೊಡಗುರ್ವಿಸೆ
ಸುಯ್ವುಸುಯ್ಗಳಿಂ|
ಕಿಡಿ ಪೊಜಪೊಣ್ಮೆ ಬಾಹುಬಲಿ ಯೋಗಿಯ ಘೋರತಪೋ
ಮಹಾಗ್ನಿಯಿಂ|
ಸಿಡಿಸಿಡಿದುಣ್ಮುತಿರ್ಪ ಕಿಡಿಗಳೆಣ್ಗೆಯಾದುವು ತತ್ಪ್ರದೇಶಗಳ್||
(ಆದಿಪುರಾಣ, ಪುಟ ೩೮೮, ಪದ್ಯ ೧೪೦)

# 'ಕುವೆಂಪು' ಅವರ ಸಣ್ಣಕಥೆಗಳು

ಹು. ಕಾ. ಜಯದೇವ್

[ಮಾರ್ಚಿ ತಿಂಗಳ ಸಂಚಿಕೆಯಿಂದ ಮುಂದುವರೆದುದು]

'ಮಾಯದ ಮನೆ', 'ದೆವ್ವದ ಕಾಟ' ಮತ್ತು 'ಔದಾರ್ಯ'ಗಳು ವಸ್ತುವಿನ ದೆಸೆಯಿಂದ ಒಂದಕ್ಕೊಂದು ಸಂಬಂಧಿಸಿವೆ.

೧. ಡಾಖಾನಗರದ ಸುಪ್ರಸಿದ್ಧ ವೈದ್ಯನಾದ ಸುರೇಂದ್ರ ಬಾಬು ರಾತ್ರಿ ಹತ್ತು ಗಂಟೆಯಲ್ಲಿ, ದಕ್ಷಿಣ ಮೋಷಂಡಿಗೆ, ವಿಪಿನ ಚಂದ್ರಬಾಬುವಿನ ಪತ್ನಿಯ ಶುಷ್ರೂಶೆಗಾಗಿ ಹೊರಟನು. ವೈದ್ಯ ಧರ್ಮದ ಪ್ರಕಾರ ಅವನು ರೋಗಿಯ ಸೇವೆಗಾಗಿಯೇ ಹೊರಟಿರಲಿಲ್ಲ. ಧನಿಕನಾದ ಚಂದ್ರ ಬಾಬುವು ಕೊಡಬಹುದಾದ ಕೈತುಂಬ ಫೀಜಿಗಾಗಿ ಹೊರಟಿದ್ದನು. ಅಂದು ಬೆಳಗ್ಗೆ ಫೀಜು ಕೊಟ್ಟ ಹೊರತು ರೋಗಿಯ ಸೇವೆಗೆ ತಾನು ಬರುವುದಿಲ್ಲವೆಂದು ಹೇಳಿ, ರೋಗಿಯ ಶುಷ್ರೂಶೆಗೆ ಹೋಗದೆಯಿದ್ದು ಬಡ ವಿಧವೆಯೊಬ್ಬಳ ಮಗನ ಸಾವಿಗೆ ಕಾರಣನಾಗಿದ್ದನು.

ಅಯಾಚಿತವಾಗಿ ತಮ್ಮ ಪ್ರೇತಲೋಕದ ಸದಸ್ಯ ಸಂಖ್ಯೆ ಹೆಚ್ಚುವುದಕ್ಕೆ ಅಪರೋಕ್ಷವಾಗಿ ಸಹಾಯ ಮಾಡಿದ ಸುರೇಂದ್ರ ಬಾಬುವನ್ನು ಯೋಗ್ಯ ರೀತಿಯಿಂದ ಸತ್ಕರಿಸಲು ಪ್ರೇತಗಳು ನಿರ್ಧರಿಸಿದವು. ಹಾಗೆ ನಿರ್ಧರಿಸಿದ ನಂತರ ಸುರೇಂದ್ರ ಬಾಬುವನ್ನು, ಹೆಸರು ಕೇಳಿದರೇ ಹೆದರುವ ದೆವ್ವಗಳ ಬೀಡೆಂದು ಪ್ರಸಿದ್ಧವಾಗಿದ್ದ ದಕ್ಷಿಣ ಮೋಷಂಡಿಯ ಮನೆಗೆ ಕರೆದೊಯ್ದು ಧನಪಿಶಾಚಿ ವೈದ್ಯರಿಗೆ ತಕ್ಕ ರೀತಿಯಲ್ಲಿ ಸತ್ಕರಿಸಿದುವು.

ಮೇಲಿನ 'ಮಾಯದ ಮನೆ' ಒಂದು ವಿಚಿತ್ರವಾದ ಕಥೆ. ಕಥೆಯು ಆವರಣ ಪ್ರಧಾನವಾಗಿದೆ. ಕಥೆಯಲ್ಲಿ ಬರುವ ಒಂದೊಂದು ಮಾತೂ ಭಯಾನಕ ಸನ್ನಿವೇಶವನ್ನು ಮೈ ನವಿರೇಳುವಂತೆ ಚಿತ್ರಿಸುತ್ತದೆ.

ಇದೊಂದು ಕಲ್ಪನಾ ಪ್ರಧಾನವಾದ ಕಥೆ. ಇಲ್ಲಿ ಬರುವ 'ವೈದ್ಯ ಮಹಾಶಯ' ಮುಂತಾದ ಪದಗಳು ಬಂಗಾಳಿ ಸಾಹಿತ್ಯದ ಪ್ರಭಾವ ಇವರ ಮೇಲೆ ಬಿದ್ದಿದೆಯೇನೋ ಅನ್ನಿಸುತ್ತದೆ. ಗಳಗನಾಥರ ಮತ್ತು ವೆಂಕಟಾಚಾರ್ಯರ ಕಾದಂಬರಿಗಳನ್ನು ನೆನಪಿಗೆ ತರುತ್ತದೆ.

೨. 'ದೆವ್ವದ ಕಾಟ'ದಲ್ಲಿ ಮಾತ್ರ 'ಕುವೆಂಪು' ತಮ್ಮ ನೈಜ ಲೋಕವಾದ ಮಲೆನಾಡಿಗೆ ತಿರುಗಿ ಬಂದದ್ದರಿಂದ ಸಹಜತೆ ತಾನೇ ತಾನಾಗಿದೆ. ದೆವ್ವಗಳಲ್ಲಿರುವ ಮೂಢ ನಂಬಿಕೆಗಳ ಬಗ್ಗೆ ಸಹಜ ವಿನೋದ ಇಲ್ಲಿದೆ. ಒಂದು ದೊಡ್ಡ ಪತ್ತೇದಾರಿ ಕಾದಂಬರಿ ಬರೆಯಬಹುದಾದ ವಸ್ತುವನ್ನುಳ್ಳ ಈ ಕಥೆಯನ್ನು ಸಣ್ಣ ಕಥೆಯ ಚೌಕಟ್ಟಿನಲ್ಲಿ ಹಿಡಿದು, ಪತ್ತೇದಾರಿ ಕಾದಂಬರಿಗಳಲ್ಲಿರುವಂತೆಯೇ ಇಲ್ಲಿಯೂ "ಮುಂದೇನಾಗುವುದು? ಕಲ್ಲು ಬೀರುತ್ತಿರುವುದು ದೆವ್ವವೆ ಮನುಷ್ಯನೆ?" ಎಂಬ ಕುತೂಹಲವನ್ನು ಸೆರೆ ಹಿಡಿದು ಕಥೆಯನ್ನು ಹೆಣೆದಿರುವ ಕಥೆಗಾರರನ್ನು ನಾವು ಹೊಗಳಲೇ ಬೇಕು.

ದೆವ್ವಗಳಲ್ಲಿ ನಂಬಿಕೆಯಿರಲಿ ಇಲ್ಲದಿರಲಿ, ಜನರು ಆ ವಿಚಾರದಿಂದ ತಮ್ಮ ಸ್ವಂತ ಲಾಭ ಮಾಡಿಕೊಳ್ಳುವುದನ್ನು ಬಿಡುವುದಿಲ್ಲ. ಇದಕ್ಕೆ ಉದಾಹರಣೆ ಮುಂಗನಹಳ್ಳಿಯ ಸಿಂಗಾ ಜೋಯಿಸರು.

"ಕಥೆ ಕೊನೆಯವರೆಗೂ ಏರೇರಿಕೆಯಲ್ಲಿ ವಾಚಕರ ಕುತೂಹಲವನ್ನು ಕೆರಳಿಸುತ್ತದೆ. ಮುಕ್ತಾಯದ ರಮ್ಯ ವಿಸ್ಮಯ ಅಕೃತವಾಗಿದೆ" ಎಂದು ಎಸ್. ವಿ. ಪರಮೇಶ್ವರ ಭಟ್ಟರು ಹೇಳಿದ್ದಾರೆ. ಅವರು ಹೇಳಿರುವುದು ನಿಜ. ಆದರೂ ಕಥೆಗಾರರು ಕೊನೆಗೆ ಮುತ್ತಣ್ಣನೇ ಕಲ್ಲು ಬೀರುತ್ತಿದ್ದನೆಂದು ವಿವರಿಸಿ ಹೇಳಬೇಕಾಗಿರಲಿಲ್ಲ. ನವಿಲೂರಿನಲ್ಲಿದ್ದುದು ರಂಗರಾಯರದೊಂದೇ ಮನೆ. ರಾಯರು ನವಿಲೂರಿಗೆ ಬಂದ ಎರಡು ದಿನದಲ್ಲೇ ಮನೆಯ ಮೇಲೆ ಕಲ್ಲು ಬೀಳಲಾರಂಭಿಸಿತು. ಯಾರಿಗೂ ಕಾಣದ ಕಳ್ಳ ಮುತ್ತಣ್ಣನಿಗೆ ಕಂಡು ಗುಂಡು ಹಾರಿಸಿದ. ಆದರೂ ಕಳ್ಳ ಸಿಗಲಿಲ್ಲ. ಗುಂಡಿನ ಪೆಟ್ಟಿನಿಂದ ಸೋರಿದ ನೆತ್ತರು ಮಾತ್ರ ಕಾಣಿಸಿತು. ಜೇಲರ ಮಾದನ ಗುಂಡಿನಿಂದ ಕಾಲಿನ ಮೂಳೆ ಮುರಿದಿದ್ದ ಮುತ್ತಣ್ಣನನ್ನು ಬೆಂಗಳೂರು ವಿಕ್ಟೋರಿಯ ಆಸ್ಪತ್ರೆಗೆ ಸಾಗಿಸಿದ್ದ ಕಾಲದಲ್ಲಿ ಕಳ್ಳರ ಗಲಾಟೆಯಿರಲಿಲ್ಲ ಎಂಬ ಅಂಶಗಳನ್ನೆಲ್ಲಾ ಗಮನಿಸಿದ ಓದುಗನಿಗೆ

ಮುತ್ತಣ್ಣನೇ ಕಲ್ಲು ಬೀರುತ್ತಿದ್ದ ಎಂಬ ಅನುಮಾನ ಸಹಜವಾಗಿ ಬಂದಿರುತ್ತದೆ. ಅದು ಇನ್‌ಸ್ಪೆಕ್ಟರ್ ಹುಸೇನರು ಮುತ್ತಣ್ಣನನ್ನು ಜೇಬಿನಲ್ಲಿರುವ ಕಲ್ಲು ಸಮೇತ ಹಿಡಿದಾಗ ದೃಢವಾಗುತ್ತದೆ. ಇಷ್ಟಕ್ಕೆ ಕಥೆ ಮುಕ್ತಾಯವಾಗಿದ್ದರೆ, ಮುಕ್ತಾಯದ ರಮ್ಯ ವಿಸ್ಮಯಕ್ಕೆ ಮತ್ತಷ್ಟು ಕಳೆಯೇರುತ್ತಿತ್ತು ಎಂದು ಹೇಳಬಹುದು.

೩. 'ಕುವೆಂಪು'ರವರ ಇನ್ನೊಂದು ಕಥೆ "ಔದಾರ್ಯ" ದಲ್ಲಿಯೂ ದೆವ್ವದ ವಸ್ತುವೇ ಇದ್ದರೂ ಅದು ವಿನೋದಕ್ಕಾಗಿ ಬರದೆ ಕಥೆಯನ್ನು ಒಂದು ಕರುಣ ಗೀತವನ್ನಾಗಿ ಮಾರ್ಪಡಿಸಿದೆ. ಡೇವಿಡ್ ಮಾಸ್ಟರರ ಅದ್ಭುತ ರಮ್ಯತೆ 'ಎಡ್ಗರ್ ಅಲಾನ್ ಪೋ'ರ ಕಥೆಗಳನ್ನು ನೆನಪಿಗೆ ತರುವಷ್ಟು ಉಜ್ವಲವಾಗಿದೆ." ಎಂದು ಕುರ್ತುಕೋಟಿಯವರು ಹೇಳಿದ್ದಾರೆ.

ಇಲ್ಲಿನ ಕಥಾತಂತ್ರ ಉತ್ತಮವಾಗಿದೆ. ಸತ್ತ ಡೇವಿಡ್ ಮಾಸ್ತರೆ ತಮ್ಮ ಕಥೆಯನ್ನು ಹೇಳುವಂತೆ ಚಿತ್ರಿಸಿದೆ. ಡೇವಿಡ್ ಮಾಸ್ತರು ತಮ್ಮ ಕಥೆಯನ್ನು ಮುಗಿಸಿದ ಕೂಡಲೆ ನಾವೂ ಅಮಲ್ದಾರರೊಡನೆ "ಹೇಗೆ ಮೇಲಕ್ಕೆ ಬಂದಿರಿ?" ಎಂದು ಪ್ರಶ್ನಿಸುವಂತಾಗುತ್ತದೆ. "ಯಾರೋ ಕಿಲಕಿಲ ನಕ್ಕಂತಾಯಿತು. ನೋಡಿದರೆ ಡೇವಿಡ್ ಮಾಸ್ಟರು ಮಾಯವಾಗಿದ್ದರು" ಎಂದು ಓದಿದಾಗ ಅಮಲ್ದಾರರಿಗೆ ಮೈಬೆವರಿಟ್ಟಂತೆ ವಾಚಕರಿಗೂ ಮೈಬೆವರಿಟ್ಟರೆ ಆಶ್ಚರ್ಯವೇನಲ್ಲ.

ಮೇಲಿನ ಮೂರು ಕಥೆಗಳಲ್ಲಿಯೂ ದೆವ್ವದ ವಸ್ತುವೇ ಬಂದಿದೆ. ಆದರೂ ದೆವ್ವಗಳಲ್ಲಿ ಕಥೆಗಾರರಿಗೆ ನಂಬಿಕೆಯಿದೆಯೇ ಇಲ್ಲವೇ ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ!

* * *

ಸಣ್ಣ ಕಥೆಗಳಲ್ಲಿ ಮನಶ್ಶಾಸ್ತ್ರದ ಪ್ರಯೋಗದ ದೃಷ್ಟಿಯಿಂದ 'ನನ್ನ ದೇವರು', 'ಆದರ್ಶ ಸಾಧನೆ' ಮತ್ತು 'ಮೀನಾಕ್ಷಿಯ ಮನೆ ಮೇಷ್ಟರು' ಒಂದಕ್ಕೊಂದು ಸಂಬಂಧಪಟ್ಟಿವೆ. ಆದರೆ ಕಥಾ ತಂತ್ರದಲ್ಲಿ Flash back ಮತ್ತು Personal revelation ದೃಷ್ಟಿಯಿಂದ 'ನನ್ನ ದೇವರು' ಮತ್ತು 'ಆದರ್ಶ ಸಾಧನೆ' ತೀರ ನಿಕಟವಾಗಿವೆ. ಮೇಲಿನ ತಂತ್ರಗಳನ್ನು ಸಣ್ಣ ಕಥಾ ಪ್ರಪಂಚದಲ್ಲಿ ಉಪಯೋಗಿಸಿದವರಿದ್ದರೂ 'ಕುವೆಂಪು'ರವರಷ್ಟು ಸಮರ್ಥವಾಗಿ ಮತ್ತು ಸಮರ್ಪಕವಾಗಿ ಉಪಯೋಗಿಸಿದವರು ಇನ್ನೊಬ್ಬರಿಲ್ಲ.

೧. 'ನನ್ನ ದೇವರು'ವಿನಲ್ಲಿ ಭಾಷೆ ಬಹು ರಮ್ಯವಾಗಿದೆ. ಅವಳು, ವಯಸ್ಸಿಗೆ ಸಹಜವಾಗಿ ವಿಷಯ ಸುಖದತ್ತ ತನ್ನ ಮನಸ್ಸು ಹರಿದಾಗ, ತನ್ನಂತೆಯೇ ಇತರರೂ, ತನ್ನ ಭಾವನವರೂ ಕೂಡ ಎಂದು ಭಾವಿಸುತ್ತಾಳೆ. ತನ್ನ ಕಾಮವಾಸನೆಯ ಛದ್ಮವೇಷದ ದುಷ್ಟ ಆಸೆಗೆ ಮೇಲಿನ ವಾದದಿಂದ ಸಮರ್ಥಿಸಿಕೊಂಡು, ತನ್ನ ಭಾವನವರ ಕೊಠಡಿಗೆ ಒಂದು ರಾತ್ರಿ ಹೋಗುತ್ತಾಳೆ. ಒಂದು ವ್ಯಕ್ತಿಯಲ್ಲಿ, ಆತ ಅಥವಾ ಆಕೆ ಬೆಳೆದ ಸಂಸ್ಕೃತಿಯ ಪಾಪ-ಪುಣ್ಯ, ನರಕ-ಸ್ವರ್ಗ ಮುಂತಾದ ಭಾವಗಳು ಅವ್ಯಕ್ತವಾಗಿ ಮನಸ್ಸಿನ ಆಳದಲ್ಲಿ ಬೇರುಬಿಟ್ಟಿರುತ್ತವೆ. ಈ ಭಾವನೆಗಳಿಗೆ ವಿರುದ್ಧವಾಗಿ ನಡೆಯಲು ಹೋದಾಗ ಅವು ಜಾಗೃತವಾಗಿ ಕೆಲಸ ಮಾಡುತ್ತವೆ. ಅಂತೆಯೇ ಆಕೆಗೂ, ಆ ರಾತ್ರಿಯಲ್ಲಿ, ತನ್ನ ಭಾವನವರನ್ನು ನೋಡಿದಾಗ ತನ್ನ ಗಂಡನೇ ಅಲ್ಲಿ ಕಾಣಿಸುತ್ತಾನೆ. ಆಕೆ ಮೂರ್ಛೆ ಹೋಗುತ್ತಾಳೆ. ಮಾರನೆಯ ಬೆಳಗ್ಗೆ ತನ್ನ ಭಾವನವರು ತನ್ನ ಗುಟ್ಟನ್ನು ರಟ್ಟು ಮಾಡದಿದ್ದುದಕ್ಕಾಗಿ ಆ ಪವಿತ್ರ ಮುಖಮಂಡಲವನ್ನೇ ನೋಡುತ್ತಾ "ನನ್ನ ದೇವರೇ, ನಿನಗೆ ಸಹಸ್ರ ನಮಸ್ಕಾರ!" ಎನ್ನುವ ಮಾತು ಅರ್ಥವತ್ತಾಗಿದೆ. ಕಥೆಯ ಮುಕ್ತಾಯ ಸೊಗಸಾಗಿದೆ. ಒಟ್ಟಿನಲ್ಲಿ ಈ ಕಥೆ ಒಂದು ಭಾವಗೀತದಂತಿದೆ.

೨. ನಾವು ಮಾಡುತ್ತಿರುವುದೇ ಸರಿಯಾದದ್ದು, ಸರ್ವೋತ್ಕೃಷ್ಟವಾದದ್ದು ಎಂಬ ಭಾವನೆ ಪ್ರತಿಯೊಬ್ಬನಲ್ಲಿಯೂ ಇರುತ್ತದೆ. ಆದರೆ ಅದನ್ನು ಇತರರಿಗೆ ಸ್ಪಷ್ಟವಾಗಿ, ಪರಿಣಾಮಕಾರಿಯಾಗಿ ಬಿಂಬಿಸಿ ಹೇಳುವುದು ಕಷ್ಟ. ಈ ಕಷ್ಟಸಾಧ್ಯವಾದ ಕೆಲಸವನ್ನು ಲೀಲಾಜಾಲವಾಗಿ ನಿರ್ವಹಿಸುತ್ತಾನೆ "ಆದರ್ಶ ಸಾಧನೆ"ಯ ಚಂದ್ರು.

ಚಂದ್ರು ಮೊದಲು ಆದರ್ಶ ಸಂನ್ಯಾಸಿಯಾಗಬೇಕೆಂದಿದ್ದ, ಅವಿವಾಹಿತನಾಗಿದ್ದುಕೊಂಡು ಆದರ್ಶ ವ್ಯಕ್ತಿಯಾಗಬೇಕೆಂದಿದ್ದ, ಆದರ್ಶ ಗ್ರಾಮಸೇವಕನಾಗಬೇಕೆಂದಿದ್ದ, ಆದರ್ಶ ಪತಿಯಾಗಬೇಕೆಂದಿದ್ದ. ಆದರೆ ಯಾವುದೂ ಆಗಲಿಲ್ಲ. ಈ ಮನೋಭಾವಗಳ ಪರವಾಗಿ, ಅವುಗಳ ಶ್ರೇಷ್ಠತೆಯ ವಿಚಾರವಾಗಿ, ಎಷ್ಟು ಉದ್ವೇಗದಿಂದ, ಎಷ್ಟು ಸಾಮರ್ಥ್ಯದಿಂದ, ಎಷ್ಟು ಶ್ರದ್ಧೆಯಿಂದ ವಾದಿಸಿ ಬೋಧಿಸುತ್ತಿದ್ದನೋ ಅಷ್ಟೇ ಉದ್ವೇಗ ಸಾಮರ್ಥ್ಯ ಶ್ರದ್ಧೆಗಳಿಂದ ಅಲ್ಲದೆ ಇನ್ನೂ ಪ್ರಬಲವಾದ ವಾಗ್ವೈಖರಿಯಿಂದ ವಾದಿಸಿ ಬೋಧಿಸಿ ಆ ಮನೋಭಾವದ ವಿರುದ್ಧವಾಗಿಯೂ ನಮ್ಮನ್ನು ಒಪ್ಪಿಸುತ್ತಾನೆ.

ಇಂತಹ ಸಣ್ಣ ಕಥೆ, ಕಥಾಪ್ರಪಂಚದಲ್ಲೇ ಅತಿ ವಿರಳವೆಂದು ಹೇಳಬಹುದು.

೩. "ಮೀನಾಕ್ಷಿಯ ಮನೆ ಮೇಷ್ಟ"ರ ಮಾನಸಿಕ

ಪ್ರಪಂಚ ಮತ್ತೊಂದು ತೆರನಾದುದು. ಮೊದಮೊದಲು ಮೀನಾಕ್ಷಿಯನ್ನು ಕಂಡರೆ ಮೇಷ್ಟರಿಗೆ ತಂಗಿಯ ಭಾವನೆ. ಅನಂತರ ನಿಧಾನವಾಗಿ, ಮೀನಾಕ್ಷಿಯ ವಯಸ್ಸು ಲಂಗಕ್ಕೂ ಸೀರೆಗೂ ನಡುವೆ ಉಯ್ಯಾಲೆಯಾಡಿ ಸೀರೆಯನ್ನೇ ಉಡ ತೊಡಗಿದ ಮೇಲೆ, ತಮ್ಮ ಮನೋಪ್ರಪಂಚದಲ್ಲಿ ಆಕೆಯ ಪತಿಯಾಗಿ ವಿಹರಿಸತೊಡಗಿದರು. ಆದರೆ ಬಹುಕಾಲ ಕಟ್ಟಿಕೊಂಡಿದ್ದ ಶೃಂಗಾರ ಮಂದಿರ ಭೂಕಂಪಕೆಂಬಂತೆ ಮುರಿದು ಬಿರಿಯಿತು. ಮೀನಾಕ್ಷಿಗೆ ಮದುವೆಯಾಯಿತು. ಆಕೆ ತನ್ನ ಪತಿಗೆ ಎರಡನೆಯ ಪತ್ನಿ. ಮೀನಾಕ್ಷಿಯ ಮನೆಯ ಮೇಷ್ಟರು, ಆಕೆಯ ಪತಿಯನ್ನು ರಾಕ್ಷಸನಿಗೆ ಹೋಲಿಸಿಕೊಂಡು, ಆತನಿಂದ ಮೀನಾಕ್ಷಿಯನ್ನು ಪಾರು ಮಾಡಲು ಹರಿತವಾದ ಚಾಕುವೊಂದನ್ನು ತೆಗೆದುಕೊಂಡು ಹೋಗುತ್ತಾನೆ. ಅಲ್ಲಿ ನಯವಿನಯ ಸಂಪನ್ನನೂ, ಸುಸಂಸ್ಕೃತನೂ, ವಿದ್ಯಾವಂತನೂ ಆದ ಮೀನಾಕ್ಷಿಯ ಗಂಡನನ್ನು ನೋಡಿ ತಾನು ಬಂದಕಾರಣಕ್ಕಾಗಿ ತನಗೇ ಹೇಸಿಗೆಯಾಗಿ, ತಾನು ಬಂದ ಕಾರಣವನ್ನು ಮರೆಸಿ ಮೀನಾಕ್ಷಿಗೆ ಚಾಕುವನ್ನು ಉಡುಗೊರೆಯಾಗಿ ಕೊಟ್ಟು ಬರುತ್ತಾನೆ.

ವಿದ್ಯಾವಂತರಾದವರು, ಭಾವುಕರಾದವರಿಂದ ಹೇಗೆ ಸಮಾಜಕ್ಕೆ ತೊಂದರೆಯುಂಟಾಗುತ್ತದೆಂಬುದನ್ನು ಮೇಷ್ಟರು ಮದುವೆಗೆ ಮುಂಚೆ ಕಾಗದ ಬರೆದ ಸಂದರ್ಭ ಮತ್ತು ಮೀನಾಕ್ಷಿಯ ಗಂಡನನ್ನು ಕೊಲೆ ಮಾಡಬೇಕೆಂದು ಹೊರಟ ಸಂದರ್ಭಗಳು ಚೆನ್ನಾಗಿ ಚಿತ್ರಿಸುತ್ತವೆ.

* * * *

ಮಲೆನಾಡಿನ ಸ್ಮೃತಿ ತರಂಗದಲ್ಲಿ – 'ದೈತ್ಯ ಶೈಲಿ' ಎಂದು 'ಕುವೆಂಪು'ರವರೇ ಕರೆದುಕೊಂಡಿರುವ ತಮ್ಮ ಶೈಲಿಯನ್ನು ಜಿ. ಎಸ್. ಶಿವರುದ್ರಪ್ಪನವರು 'ಪರ್ವತಾರಣ್ಯ ಶೈಲಿ' ಎಂದರೆ ಹೆಚ್ಚು ಸಮರ್ಪಕವಾಗಬಹುದು ಎಂದು ಹೇಳಿದ್ದಾರೆ. ಈ 'ಪರ್ವತಾರಣ್ಯಶೈಲಿ' ಅವರ ನೈಜ ಲೋಕದ ಮಲೆನಾಡಿಗೆ ಸಂಬಂಧಪಟ್ಟ 'ಯಾರೂ ಅರಿಯದ ವೀರ', 'ದೆವ್ವದ ಕಾಟ', 'ಶ್ರೀಮನ್ನೂಕವಾಗಿತ್ತು' ಮತ್ತು 'ಸಾಲದ ಮಗು' ಕಥೆಗಳಲ್ಲಿ, ಅವರ ಇತರ ಕಥೆಗಳಲ್ಲಿಯಂತೆಯೇ ಆದರೂ ಇನ್ನೂ ಹೆಚ್ಚಾಗಿ ಬಂದಿದೆ.

"'ಯಾರೂ ಅರಿಯದ ವೀರ'ದಲ್ಲಿ 'ಕುವೆಂಪು ಕಥೆಗಾರಿಕೆಯ ಕೊನೆಯ ಹಂತವನ್ನು ಮುಟ್ಟಿದರು. ಮಲೆನಾಡಿನ ನೆರೆ ಹಾವಳಿಯಲ್ಲಿ ಮುಳುಗುತ್ತಿದ್ದ ದೋಣಿಯನ್ನುಳಿಸಲು ನೀರಿಗೆ ಹಾರಿದ ಲಿಂಗನೇ 'ಯಾರೂ ಅರಿಯದ ವೀರ.' ಮಲೆನಾಡಿನ ದಟ್ಟವಾದ ಕತ್ತಲೆಯಲ್ಲಿ, ನೆರೆಯ ನೀರಿನ ರಭಸದಲ್ಲಿ, ಪ್ರಕೃತಿಯ ಭೀಕರ ನಿರ್ಜನತೆಯಲ್ಲಿಯೂ ಕೂಡ, ಸಾವಿನೊಂದಿಗೆ ಹೋರಾಡುವ ಜೀವ ಶಕ್ತಿಯ ಉದಾತ್ತತೆ ಜನ್ಮು ತಟ್ಟಿಸುವ ರಸಾನುಭವವನ್ನುಂಟುಮಾಡುತ್ತದೆ. ಶೈಲಿಯಲ್ಲಿ ಭಾವಗೀತದಂತಿದ್ದರೂ ಮಹಾಕಾವ್ಯದ ಸನ್ನಿವೇಶವೊಂದರ ಪ್ರಭಾವವನ್ನು ಈ ಕಥೆ ಬೀರುತ್ತದೆ" ಎಂದು ಕುರ್ತಕೋಟಿಯವರು ಹೇಳಿದ್ದಾರೆ.

'ಯಾರೂ ಅರಿಯದ ವೀರ' ಕಥೆಯ ಸುಬ್ಬೇಗೌಡರು ಮತ್ತು 'ದೆವ್ವದ ಕಾಟದ' ನವಿಲೂರ ರಂಗರಾಯರು ಉತ್ತರ ಧ್ರುವವಾದರೆ 'ಸಾಲದ ಮಗು'ವಿನ ಗೌಡರು ದಕ್ಷಿಣ ಧ್ರುವವಾಗುತ್ತಾರೆ, ಗುಣದಲ್ಲಿ. ಈ ಎರಡು ಧ್ರುವಗಳ ನಡುವೆ ಬರುತ್ತಾರೆ 'ಶ್ರೀಮನ್ನೂಕವಾಗಿತ್ತು' ಕಥೆಯ ನಾಲೂರು ನಾಗಣ್ಣಗೌಡರು. ಸುಬ್ಬೇಗೌಡರು ಮತ್ತು ರಂಗರಾಯರು ತಮ್ಮ ಆಳುಗಳ ಮೇಲೆ ಸಂಪೂರ್ಣ ವಿಶ್ವಾಸ ಮಮತೆ ಇಟ್ಟಿದ್ದವರು. 'ಸಾಲದ ಮಗು'ವಿನ ಗೌಡರು ಏಳು ಎಂಟು ವರ್ಷದ ಹುಡುಗ ಸುಬ್ಬನನ್ನು, ಅದೂ ಜ್ವರ ಬಂದವನನ್ನು ಮೀನಿನ ಆಸೆಗಾಗಿ ನಿಶಾರಾತ್ರಿಯಲ್ಲಿ, ಧಾರಾಕಾರವಾಗಿ ಮಳೆ ಸುರಿಯುತ್ತಿರುವಾಗ ಕಳಿಸುವಂತಹ ನಿಸ್ಕರುಣಿ. ನಾಗಣ್ಣಗೌಡರಾದರೆ ಅತಿ ಕಟುಕರಲ್ಲ, ಆದರೆ ಸಮಯ ಸನ್ನಿವೇಶಗಳೊದಗಿದರೆ ಕ್ರೂರವಾಗಿ ವರ್ತಿಸಲು ಹಿಂದೆಮುಂದೆ ನೋಡುವವರಲ್ಲ.

'ಯಾರೂ ಅರಿಯದ ವೀರ'ದ ಲಿಂಗನ ಪಾತ್ರ ಮೂಡಲಾದರೆ 'ದೆವ್ವದಕಾಟ'ದ ಮುತ್ತಣ್ಣನ ಪಾತ್ರ ಪಡುವಲು. ಲಿಂಗ ತನ್ನ ಸ್ವಾಮಿಯ ಸಂಸಾರವನ್ನುಳಿಸಲು ತುಂಬಿದ ನೆರೆಯಲ್ಲಿ ನೀರಿಗೆ ಹಾರಿ ಹೇಗೋ ಬದುಕಿಬಂದರೂ ತನ್ನ ತ್ಯಾಗವನ್ನು ಹೇಳಿಕೊಳ್ಳಲೊಲ್ಲ. ಮುತ್ತಣ್ಣ ತನಗೆ ಅನ್ನವಿಟ್ಟು ಒಬ್ಬ ಮನುಷ್ಯನನ್ನಾಗಿ ಮಾಡಿ ಮನೆ ಮಗನಂತೆಯೇ ಭಾವಿಸಿರುವ ರಂಗರಾಯರು ನವಿಲೂರಿಗೆ ಬಂದದ್ದರಿಂದ ತನ್ನ ಆಟ, ದರ್ಪ, ಬಲಗಳಿಗೆ ಚ್ಯುತಿ ಬರುವುದೆಂದು ರಂಗರಾಯರನ್ನೇ ನವಿಲೂರಿನಿಂದ ಓಡಿಸಲು ಯತ್ನಿಸಿದ.

ಮಹಾರಾಷ್ಟ್ರದ ಸುಪ್ರಸಿದ್ಧ ಸಾಹಿತಿ ಮಾಮಾವಾರೇರ್ಕರ್ ಹೇಳುವಂತೆ 'ಕುವೆಂಪು' ಮೇಲೆ ಮೇಲೆ ಹಾರುತ್ತಲೇ ಭೂಮಿಯ ಮೇಲಿನ ಸರ್ವಸ್ವವನ್ನೂ ಗ್ರಹಿಸುವ ಗರುಡನ ದೃಷ್ಟಿಯಂತೆ ಜೀವನದ ಎಲ್ಲ ಚಟುವಟಿಕೆಗಳನ್ನೂ ಗ್ರಹಿಸುವವರು. ಅವರಿಗೆ ಜನರ ಮೌಢ್ಯವನ್ನೇ ಬಂಡವಾಳವನ್ನಾಗಿಟ್ಟುಕೊಂಡು ಸುಲಿಗೆಮಾಡುವ ಮಂಗನಹಳ್ಳಿ ಸಿಂಗಾಜೋಯಿಸರಾಗಲಿ, ಕಿರಣಕೇರಿ ಶಂಕರಶಾಸ್ತ್ರಿಗಳಾಗಲಿ, ತಿಮ್ಮು, ಸೀತೆ, ವಾಸು, ನಾಗರಮುಗ್ಧತೆ, ನಿರ್ಮಲ ಅಂತಃಕರಣವಾಗಲೀ, ಸುಬ್ಬ ಇದ್ದ ಚಿಂತಾಜನಕ

ಸ್ಥಿತಿಯಾಗಲೀ, ವಿಾಸಿನಿಂದ ತುಂಬಿಹೋಗಿ ಕೂಣೆಯೊಳಗಿನಿಂದ ಬರುತ್ತಿದ್ದ 'ಚೊಳ್ ಚೊಳ್' ಎಂಬ ಶಬ್ದವಾಗಲೀ ಹೆಚ್ಚಲ್ಲ ಅಥವಾ ಕಡಿಮೆಯಲ್ಲ. ಎಲ್ಲವನ್ನೂ ಒಂದೇ ವಿಧವಾದ ಆಸಕ್ತಿ ಕುತೂಹಲಗಳಿಂದ ಗಮನಿಸಿ ಅದೇ ಆಸಕ್ತಿಯಿಂದ ಎಲ್ಲ ಸನ್ನಿವೇಶಗಳನ್ನೂ ಒಂದೇ ತೆರನಾಗಿ ಚಿತ್ರಿಸಬಲ್ಲವರು 'ಕುವೆಂಪು'.

*         *         *         *

ಕ್ರಾಂತಿಕಾರಕವಾದ, ವಿನೂತನ ಶೈಲಿಯಲ್ಲಿ ಸಂಕೇತಗಳ ಮೂಲಕ ಚಿತ್ರಿಸಿರುವ ಕಥೆ 'ಧನ್ವಂತರಿಯ ಚಿಕಿತ್ಸೆ.' ಈ ಕಥೆ ಬಡತನದ ಒಂದು ನೈಜ ಚಿತ್ರಣವೆಂದು ಕೆಲವರು ತಿಳಿದಿದ್ದಾರೆ. ಅದು ಬಡತನವಲ್ಲ–ಸಮಾಜದ ರಾಜಯಕ್ಷ್ಮ. ಅದಕ್ಕೆ ಸಕಾಲದಲ್ಲಿ ಚಿಕಿತ್ಸೆಯಾಗಬೇಕು. ಅಂತಿಂತಹ ಚಿಕಿತ್ಸೆ ಸಾಲದು. ದೇವ ವೈದ್ಯನಾದ ಧನ್ವಂತರಿಯಿಂದಲೇ ಚಿಕಿತ್ಸೆ ನಡೆಯಬೇಕು.

ಈ ಕಥೆಯಲ್ಲಿ ಬರುವ ವಿಶ್ವಾಮಿತ್ರ ಮತ್ತು ಪರಶುರಾಮರು ಕ್ರಾಂತಿಶಕ್ತಿಗಳ ಸಂಕೇತವಾಗಿದ್ದಾರೆ. ರೈತನ ಎದೆಯಮೇಲೆ ಸಮಸ್ತ ಚಕ್ರಾಧಿಪತ್ಯವೂ ಮಹಾ ಪರ್ವತಾಕಾರವಾಗಿ ನಿಂತಿದೆ. ಮುಖ್ಯಪಟ್ಟಣ ಅದರ ನೆತ್ತಿಯಲ್ಲಿ ರಾಜಿಸುತ್ತಿದೆ. ಅಲ್ಲಿಯ ದೇವಾಲಯಗಳೂ ವಿದ್ಯಾನಿಲಯಗಳೂ ಕ್ರೀಡಾಮಂದಿರಗಳೂ ಪ್ರಮೋದವನಗಳೂ ಕರ್ಮಸೌಧಗಳೂ ರಾಜಪ್ರಸಾಧಗಳೂ ತಮ್ಮ ಭಾರವನ್ನೆಲ್ಲಾ ರೈತನ ಎದೆಯ ಮೇಲೆ ಹಾಕಿ ಸಂಸ್ಕೃತಿ ಮತ್ತು ನಾಗರಿಕತೆಯ ಹೆಸರಿನಿಂದ ಮೆರೆಯುತ್ತಿವೆ.

ಕ್ರಾಂತಿಗೆ ಇಂತಹ ಸಮಯಕ್ಕಿನ್ನ ಅನುಕೂಲವಾದ ಸನ್ನಿವೇಶ ಮತ್ತೊಂದು ದೊರೆಯಲಾರದು. ರೈತನ ಮೇಲಿರುವ ಭಾರ ಕಡಿಮೆಯಾದರೆ ದೃಢಕಾಯನಾಗುವ ಅವನೇ ಕೆಳಕ್ಕೆ ಬೀಳುವ ರಾಜ್ಯದ ಭಾರವನ್ನು ಎದೆಯ ಮೇಲೆ ಹಾಕಿಕೊಳ್ಳುವುದಕ್ಕೆ ಬದಲಾಗಿ ಹೆಗಲ ಮೇಲೆ ಹೊತ್ತು, ರಾಜ್ಯಭಾರ ನಿರ್ವಹಿಸುತ್ತಾನೆ ಎಂಬ ಸೂಚನೆ ಇಲ್ಲಿದೆ.

*         *         *         *

'ಶ್ರೀಮನ್ಮೂಕವಾಗಿತ್ತು' ಕಥೆಗೆ ಹಿಂದೆಯಿಟ್ಟಿದ್ದ ಹೆಸರು 'ಪಾಪ ಎಳೆಗರು.' ನಾಗಣ್ಣಗೌಡರ ಏಳೆಂಟು ವರುಷದ ಮಗ, ವಾಸು, ಕಾಯಿಲೆ ಮಲಗಿದ್ದ. ಅವನು ಬಹುವಾಗಿ ನರಳುತ್ತಿದ್ದ. ಆಗಾಗ ತನ್ನ ಸತ್ತ ತಾಯಿಯನ್ನು ಕರೆಯುತ್ತಿದ್ದ. ಇದನ್ನು ನೋಡಿ ರಂಗನಿಗೆ ತನ್ನ ಎಳೆಗರು ಅದರ ತಾಯಿಗಾಗಿ ಮರುಗುವ ಚಿತ್ರ ಕಣ್ಣೆದುರು ಸುಳಿಯಿತು. ರಂಗ:ಎಳೆಗರುವಿಗೂ ಮರುಗಿದ; ವಾಸುವಿಗೂ ಮರುಗಿದ.

ವಾಸು ಇದ್ದಕ್ಕಿದ್ದ ಹಾಗೆ "ಪಾಪ ಎಳೆಗರು ಹೊಡೆದುಕೊಂಡು ಹೋಗೋ ರಂಗಾ" ಎಂದ. ನಾಗಣ್ಣಗೌಡರು "ಹೊಡೆದುಕೊಂಡು ಹೋಗಲಿ ಇವನೆಮ್ಮೆ, ತೋರಿಸು" ಎಂದು ಆಳಿಗೆ ಹೇಳಿದರು. ಗೌಡರು ವಾಸು ಹೇಳದಿದ್ದರೆ ಎಮ್ಮೆ ಹೊಡೆದುಕೊಂಡು ಹೋಗಲು ಹೇಳುತ್ತಿದ್ದರೋ ಇಲ್ಲವೋ ಅನುಮಾನ. ರಂಗ "ದೇವರೇ ಇವರನ್ನು ಉಳಿಸು" ಎಂದು ಎಮ್ಮೆಯೊಡನೆ ಹೊರಟ. ರಂಗನ ಹಾರೈಕೆಯೂ ವಾಸುವನ್ನುಳಿಸುವಲ್ಲಿ ಸಹಾಯಕವಾಗಿಲ್ಲದೆಯಿಲ್ಲ. ರಂಗನ ನಿಷ್ಕಲ್ಮಷವಾದ ಹೃದಯ ಕಥೆಯ ಶ್ರೀಮಂತಿಕೆಯನ್ನು ಹೆಚ್ಚಿಸಿದೆ. ರಂಗನ ಹರಕೆ, ಎಮ್ಮೆಯ ಆಶೀರ್ವಾದ ಇವು ಸಾಮಾನ್ಯವೇನಲ್ಲ. ರಂಗ "ದೇವರೇ ಇವರನ್ನು ಉಳಿಸು" ಎಂದಾದರೂ ಹೇಳಿದ ಬಾಯಿಯಿದ್ದದ್ದರಿಂದ. ಆ ಮೂಕಪ್ರಾಣಿ ಬಾಯಿಯಿಲ್ಲದೆ ಏನನ್ನೂ ಹೇಳಲಾಗಲಿಲ್ಲ. ಆದರೇನು! ಅದರ ಕರುಳ ಒಲವು ರಂಗನದಕ್ಕಿಂತಲೂ ಕಡಮೆಯದೇನೂ ಅಲ್ಲ. ಅದರ ಶ್ರೀಮನ್ಮೌನದಲ್ಲಿ ಚಿರಕೃತಜ್ಞತೆಯ, ಅನಂತ ಋಣಸಮರ್ಪಣೆಯ ಭಾವ ಭಾರವಾಗಿತ್ತು. ಅದರ ಒತ್ತಡ ವರ್ಣನಾತೀತ.

ಕೆರೆಯೂರಿನಲ್ಲಿ ಎಮ್ಮೆ ತನ್ನ ಎಳೆಗರುವನ್ನು ಮೂಸಿ ನೆಕ್ಕಿದಾಗ ಅತ್ತ ನಾಲೂರಿನಲ್ಲಿ ವಾಸುವಿಗೆ ಅದೇ ಸಮಯಕ್ಕೆ ಜ್ವರ ಇಳಿಯಿತು. ಗೌಡರು ಜೋಯಿಸರ ವಿಭೂತಿ ಮಹಿಮೆಯನ್ನು ಹೊಗಳಿದರು. "ನೋಡಿದಿರೋ ನಮ್ಮ ಜೋಯಿಸರ ಮಹಿಮೆ! ಹುಡುಗಗೆ ಜ್ವರ ಬಿಟ್ಟೇಹೋಗಿದೆ" ಎಂದರು. (ಪಾಪ ಅವರಿಗೇನು ಗೊತ್ತು ಅದು ಮೂಗು ಪ್ರಾಣಿಯ ಆನಂದದ ಆಶೀರ್ವಾದದ್ದೆಂದು) ದೂರದ ಕೆರೆಯೂರಿನಲ್ಲಿ ತನ್ನ ಮುದ್ದು ಕರುವನ್ನು ಮೂಸಿ ನೆಕ್ಕುತ್ತಿದ್ದ ಮೂಗುಪ್ರಾಣಿಯ ಆನಂದದ ಆಶೀರ್ವಾದ ವಿಭೂತಿ ಆದನ್ನಾಲಿಸಿ ಶ್ರೀಮನ್ಮೂಕವಾಗಿತ್ತು!

ಇದನ್ನು ಕಥೆಗಾರರು ಕಲಾತ್ಮಕವಾಗಿ ಸೂಚಿಸಿದ್ದಾರೆ. ಜೋಯಿಸರ ವಿಭೂತಿ ಮೇಲುಕಣ್ಣಿಗೆ ತೋರುವ ಕಾರಣ. ಒಳಕಣ್ಣಿಗೆ ಬೇರೆ ಋತುವೇ ಹೊಳೆಯುತ್ತದೆ. ಅದೇ ದರ್ಶನ. ತನ್ನನ್ನು ಕೃಪೆಗೈದು ಬಿಡುಗಡೆ ಮಾಡಿದ ಆ ಮಗುವನ್ನು ಮಾತು ಬಾರದ ತಾಯಿ ಎಮ್ಮೆ ಆಶೀರ್ವದಿಸಿತು. ಆ ಆಶೀರ್ವಾದದ ಫಲವಾಗಿ ಹುಡುಗ ಬದುಕಿದ.

'ದರ್ಶನ ವಿಮರ್ಶೆ' ಗ್ರಂಥದ ಮುನ್ನುಡಿಯಲ್ಲಿ "ಬಹುಶಃ ನಮಗೆ ತಿಳಿದ ಮಟ್ಟಿಗೆ ದರ್ಶನ ವಿಮರ್ಶೆಯನ್ನು ಮೊದಲಿಗೆ ಬರೆದವರು 'ಕುವೆಂಪು'" ಎಂದು ಹೇಳಿದ್ದಾರೆ.

ಅದೇ ರೀತಿಯಲ್ಲಿ 'ಶ್ರೀಮನ್ಮೂಕವಾಗಿತ್ತು' ಅಂತಹ ದರ್ಶನ ಕಥೆಗಳನ್ನು ಬರೆದವರಲ್ಲಿ 'ಕುವೆಂಪು'ರವರೇ ಮೊದಲಿಗರಿರ ಬಹುದು ಎಂದು ಹೇಳಬಹುದು.

* * * *

'ಕುವೆಂಪು'ರವರು ಬರೆದುದು ಮೇಲಿನ ಹದಿನೇಳು ಕಥೆ ಗಳನ್ನು ಮಾತ್ರ. 'ನನ್ನ ದೇವರು ಮತ್ತು ಇತರ ಕಥೆಗಳು' ಅನ್ನು ಕುರಿತು The Indian P.E.N. ಪತ್ರಿಕೆ "The eight stories of the book are, in a word, eight gems" ಎಂದು ಹೇಳಿದೆ. ಇದೇ ಮಾತನ್ನು "ಸಂನ್ಯಾಸಿ ಮತ್ತು ಇತರ ಕಥೆಗಳು" ಕಥಾಸಂಕಲನಕ್ಕೂ ಹೇಳ ಬಹುದು.

ಸಣ್ಣ ಕಥೆಗಳಲ್ಲಿ ವರ್ಣನೆ ಎಷ್ಟಿರಬೇಕು, ಏಕಿರಬೇಕು ಎನ್ನುವುದಕ್ಕೆ 'ಕುವೆಂಪು'ರವರ ಕಥೆಗಳನ್ನೋದಬೇಕು. 'ಕುವೆಂಪು'ರವರಿಗಿನ್ನ ಮೊದಲು ನಿಸರ್ಗದ ಇಷ್ಟೊಂದು ವಿವರಗಳನ್ನು ಯಾರೂ ಸಣ್ಣಕಥೆಗಳಲ್ಲಿ ತಂದಿರಲಿಲ್ಲ. ಇಂತಹ ವರ್ಣನೆಗಳಿಂದ ಅವರ ಕಥೆಗಳಿಗೆ ಒಳ್ಳೆಯ ಮೆರಗು ಬಂದಿದೆ.

ಕಥೆಯಲ್ಲಿ ನಿರೂಪಣಾಕೌಶಲ್ಯ ಬಹಳ ಮುಖ್ಯ. ಈ ಕೌಶಲದ ಒಂದು ಮುಖ ಬರವಣಿಗೆಯ ಸೊಗಸಿನಲ್ಲಿದೆ, ಮಾತುಗಾರಿಕೆಯ ಬೆಡಗಿನಲ್ಲಿದೆ. ಈ ಸೊಗಸು ಈ ಬೆಡಗು ಇವರ ಕಥೆಗಳಲ್ಲಿ ರೇಷ್ಮೆಯ ಕರವಸ್ತ್ರದ ಮೇಲಣ ಕಸೂತಿ ಹೂವಿನಂತೆ ಬಹಳ ಆಕರ್ಷಕವಾಗಿ ಬಂದಿದೆ . . . ಶೈಲಿ ಕಾಂತಿಯುಕ್ತವಾಗಿದೆ, ಸತ್ವಪೂರ್ಣವಾಗಿದೆ. ಹಾಸ್ಯವನ್ನೂ, ಗಾಂಭೀರ್ಯವನ್ನೂ ಬರವಣಿಗೆಯಲ್ಲಿ ಸೊಗಸಾಗಿ ಕಥೆ ಗಾರರು ಪ್ರಕಟಿಸಿದ್ದಾರೆ. ವಸ್ತುವಿಗೆ ಅನುಗುಣವಾದ ನಿರೂಪಣಾ ಶೈಲಿ ಇಲ್ಲಿದೆ. ಕಥೆಗಳ ಆರಂಭ, ಬೆಳವಣಿಗೆ, ಮುಕ್ತಾಯ ಇವು ಕಲಾತ್ಮಕವಾಗಿ ಬಂದಿವೆ. ಕವಿಯ ಪ್ರಪಂಚ ಜ್ಞಾನ ಮಾನವನ ಸ್ವಭಾವದ ವರ್ಣನೆಯಲ್ಲಿ ಎದ್ದು ಕಾಣುತ್ತದೆ. ಜನದ ಬಾಳುವೆಯನ್ನು ಕಂಡು ಕೇಳಿ ತಿಳಿದು ನುಡಿಯುವ ಹಿರಿಮೆ ಇಲ್ಲಿದೆ.

'ಕುವೆಂಪು'ರವರ ಸಣ್ಣಕಥೆಗಳ ಶ್ರೇಷ್ಠತೆಯಿರುವುದು ಅವು ಸಮಕಾಲೀನ ಜೀವನದ ಎಲ್ಲ ಅಂಶಗಳಿಗೂ ಪ್ರತಿಸ್ಪಂದಿ ಯಾದುವೆಂಬುದರಲ್ಲಿ. ನಿಸರ್ಗದ ಚೆಲುವು, ಆದರ್ಶಪ್ರಿಯತೆ, ಕ್ರಾಂತಿಯ ವೀರಭಾವ, ಆಧ್ಯಾತ್ಮಿಕತೆ ಮೊದಲಾದ ಎಲ್ಲ ವಿಷಯಗಳಿಗೂ ಅವರ ಸಣ್ಣಕಥೆಗಳು ಇಂಬುಕೊಟ್ಟಿವೆ. ಹೀಗಾಗಿ ಹೊಸಗನ್ನಡ ಸಣ್ಣಕಥೆಗಳ ಇತಿಹಾಸದಲ್ಲಿ ಅವರ ಸ್ಥಾನ ಭದ್ರವಾಗಿದೆಯೆಂಬುದರಲ್ಲಿ ಯಾವಸಂಶಯವೂ ಇಲ್ಲ.

'ಕುವೆಂಪು'ರವರು ಸಂಖ್ಯೆಯಲ್ಲಿ ಕಡಿಮೆ ಕಥೆಗಳನ್ನು ಬರೆದಿರುವುದರಿಂದಲೂ ಮತ್ತು ಸಾಹಿತ್ಯದ ಇತರ ಕ್ಷೇತ್ರ ಗಳಲ್ಲಿ ಪ್ರಸಿದ್ಧರಾಗಿರುವುದರಿಂದಲೂ ಅವರ ಸಣ್ಣಕಥೆಗಳು ಜನಪ್ರಿಯತೆಯನ್ನು ಗಳಿಸಲಿಲ್ಲ ಎಂಬ ವಾದವಿದೆ. ಈ ವಾದದಲ್ಲಿ ಹುರುಳಿಲ್ಲ. ಅವು ನಾಲ್ಕು ಬಾರಿ, ಐದು ಬಾರಿ ಪುನರ್ಮುದ್ರಣ ಹೊಂದಿರುವುದೇ ಅವುಗಳ ಜನಪ್ರಿಯತೆಗೆ ಸಾಕ್ಷಿ.

"ಸಣ್ಣಕಥೆ ಅಲ್ಪಜೀವಿಗಳ ಮಹಾಕಾವ್ಯ" ಎಂದು ರಂ. ಶ್ರೀ. ಮುಗಳಿಯವರೂ, "ಸಣ್ಣಕಥೆ ಬರೆಯುವುದು ಬಹಳ ಕಷ್ಟದ ಕೆಲಸ-ಕಿರಿದರಲ್ಲಿ ಹಿರಿದಾದ ಭಾವ, ಜ್ಞಾನ, ಅನುಭವಗಳನ್ನು ತುಂಬಿ ಜೀವನಕ್ಕೆ ಬೆಳಕು ಬೀರುವುದು ಅದರ ವೈಶಿಷ್ಟ್ಯ" ಎಂದು ಬಿ. ಎಂ. ಶ್ರೀ. ಅವರೂ ಹೇಳಿದ್ದಾರೆ. ಈ ಮಾತುಗಳ ಸತ್ಯವನ್ನು 'ಕುವೆಂಪು'ರವರ ಕಥೆಗಳಲ್ಲಿ ಕಾಣಬಹುದು. ಆದ್ದರಿಂದ ಸಂಖ್ಯಾದೃಷ್ಟಿಯಿಂದ 'ಕುವೆಂಪು'ರವರ ಸಣ್ಣಕಥೆಗಳನ್ನು ಅವಗಣನೆ ಮಾಡಿದರೆ ಸತ್ಯಕ್ಕೆ ಅಪಚಾರವಾದೀತು. ಆ ಕಥೆಗಳ ಸ್ಥಾನಮಾನ ಸಣ್ಣಕಥೆಗಳ ಪ್ರಪಂಚದಲ್ಲಿ ಏನು ಎನ್ನುವುದು ಪೂರ್ವಗ್ರಹ ಪೀಡಿತರಲ್ಲದ ವಿಮರ್ಶಕರಿಂದ ನಡೆಯಬೇಕಾದ ಕೆಲಸ.

"ಸಂನ್ಯಾಸಿ ಮತ್ತು ಇತರ ಕಥೆಗಳು" ಕಥಾಸಂಕಲನಕ್ಕೆ ನಮ್ಮ ಶ್ರೇಷ್ಠ ಕಥೆಗಾರರೂ, ಹಿರಿಯರೂ ಆದ ಶ್ರೀನಿವಾಸರು ಸೊಗಸಾದ ಮುನ್ನುಡಿ ಬರೆದು, ಕಥೆ ಬರೆಯುವುದನ್ನು ಶ್ರೀ 'ಕುವೆಂಪು'ರವರು ಎಲ್ಲಾದರೂ ಕಡಿಮೆ ಮಾಡಿದರೆ ನಮ್ಮ ಸಾಹಿತ್ಯಕ್ಕೆ ಬಹಳ ನಷ್ಟವಾಗುವುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಅಭಿಪ್ರಾಯವನ್ನು 'ಕುವೆಂಪು'ರವರ ಕಥೆ ಗಳನ್ನೋದಿದ ಎಲ್ಲರೂ ಒಪ್ಪುತ್ತಾರೆ.

## ಗ್ರಂಥಋಣ


೧. ಯುಗಧರ್ಮ ಹಾಗೂ ಸಾಹಿತ್ಯ ದರ್ಶನ
—ಕೆ. ಡಿ. ಕುರ್ತುಕೋಟಿ

೨. 'ಉದುಗೊರೆ'ಯಲ್ಲಿ ಎಸ್. ವಿ. ಪರಮೇಶ್ವರಭಟ್ಟ, ಎಂ.ಎ. ಅವರ ಲೇಖನ

೩. ವಿಮರ್ಶೆಯ ಪೂರ್ವ ಪಶ್ಚಿಮ
—ಜಿ. ಎಸ್. ಶಿವರುದ್ರಪ್ಪ

೪. ಕಾವ್ಯವಿಹಾರ
—ಕುವೆಂಪು

೫. ದರ್ಶನ ವಿಮರ್ಶೆ
ಸಂಪಾದಕರು: ಡಾ॥ ಜಿ. ಎಸ್. ಶಿವರುದ್ರಪ್ಪ ಮತ್ತು ಡಾ॥ ಪ್ರಭುಶಂಕರ

# ಬಿ. ವೆಂಕಟಾಚಾರ್ಯರ ಕೃತಿಗಳು

ಸಂಗ್ರಹಕಾರರು :

**ಶ್ರೀನಿವಾಸ ಹಾವನೂರ**

| ಕೃತಿ | ಮೊದಲ ಪ್ರಕಟಣೆ | ಪ್ರಕಾರ | ಮೂಲ | ವಿಷಯ |
|---|---|---|---|---|
| ೧ | ೨ | ೩ | ೪ | ೫ |
| ಅಡವಿಯ ಹುಡುಗಿ | ೧೯೧೬ | ಕಾದಂಬರಿ | | |
| ಅತ್ತಿಗೆ | | ಕಾದಂಬರಿ | | |
| ಅಮೃತಪುಲಿನ | ೧೯೦೭ | ಕಾದಂಬರಿ | ನನಿಲಾಲ ವಂದ್ಯೋಪಾಧ್ಯಾಯ | |
| ಅಹಲ್ಯಾಬಾಯಿ | | ಚರಿತ್ರೆ | ಯೋಗೀಂದ್ರ ಬಸು | |
| ಅಂತಃಪುರದ ರಹಸ್ಯ | | ಕಾದಂಬರಿ | | |
| ಆನಂದ ಮಠ | ೧೮೯೯ | ಕಾದಂಬರಿ | ಬಂಕಿಂಚಂದ್ರ | ಸನ್ಯಾಸಿ ವಿದ್ರೋಹ |
| ಇದೊಂದು ಚಿತ್ರ | | ಕಾದಂಬರಿ | ಬಂಕಿಂಚಂದ್ರ | |
| ಇಂದಿರೆ | ೧೮೯೭ | ಕಾದಂಬರಿ | ಬಂಕಿಂಚಂದ್ರ | |
| ಉನ್ಮಾದಿನಿ | | ಕಾದಂಬರಿ | ಯೋಗೇಂದ್ರನಾಥ | ಸಾಮಾಜಿಕ |
| ಉಪವಾಸ | | | | |
| ಕಪಾಲ ಕುಂಡಲ | ೧೮೯೮ | ಕಾದಂಬರಿ | | |
| ಕಮಲಾಕಾಂತ | ೧೯೦೯ | ಕಾದಂಬರಿ | ಬಂಕಿಂಚಂದ್ರ | |
| ಕರ್ಮಕ್ಕೆ ತಕ್ಕ ಫಲ | ೧೮೯೮ | ಕಾದಂಬರಿ | | |
| ಕೃಷ್ಣಕಾಂತನ ಉಯಿಲು | ೧೯೦೯ | ಕಾದಂಬರಿ | ಬಂಕಿಂಚಂದ್ರ | ಸಾಮಾಜಿಕ |
| ಕ್ಷತ್ರಿಯ ರಮಣಿ | | ಕಾದಂಬರಿ | | ಸಾಮಾಜಿಕ |
| ಕಾಗೆ | | | | |
| ಕೊಹಿನುರು | ೧೯೦೫ | ಕಾದಂಬರಿ | (ಕೊಟ್ಟಿಲ್ಲ) | |
| ಗೀತೋಕ್ತ ಧರ್ಮ | | ಪ್ರಬಂಧ | "ಓರ್ವ ಪ್ರಖ್ಯಾತ ಬಂಗಾಲೀ ಲೇಖಕ" | ಧರ್ಮವಿಚಾರ |
| ಚಂದ್ರಶೇಖರ | (>೧೮೯೮) | — | ಬಂಕಿಂಚಂದ್ರ | |
| ಚಿತ್ರವಿಚಿತ್ರಾವಳಿ ಭಾ.೧,೨ | — | ಕಥನ | ಅರೇಬಿಯನ್ ನೈಟ್ಸ್ | |
| ಚಿದ್ರತ್ನ ನಾಟಕರತ್ನ | | | | |
| ದಾಡಿಯ ಹೇಳಿಕೆ | | | | |
| **ದುರ್ಗೇಶ ನಂದಿನಿ** | ೧೮೮೫ | ಕಾದಂಬರಿ | ಬಂಕಿಂಚಂದ್ರ | ಐತಿಹಾಸಿಕ |
| **ದೇವೀ ಚೌಧುರಾಣಿ** | ೧೮೯೯ | ಕಾದಂಬರಿ | ಬಂಕಿಂಚಂದ್ರ | |
| ದೇಶಾಂತರಗಳಲ್ಲಿ ಪ್ರಾಚೀನ ಭಾರತ ಪುರುಷರು | | ಚರಿತ್ರೆ | | |
| ನವಾಬನಂದಿನಿ | | ಕಾದಂಬರಿ | | ಐತಿಹಾಸಿಕ |

| ೧ | ೨ | ೩ | ೪ | ೫ |
|---|---|---|---|---|
| ನೀರದೆ | | ಕಾದಂಬರಿ | ಸತೀಶ ಚಂದ್ರ | |
| ನೀಳಾಗೀತ[೧] | ೧೮೯೮ | ಕಾದಂಬರಿ | | |
| ನೊಂದ ನುಡಿ | | ಕಾದಂಬರಿ | | |
| **ಪರಿಮಳಾ** | ೧೯೦೨ | ಕಾದಂಬರಿ | | ಪತ್ತೇದಾರಿ |
| ಪ್ರಾಚೀನ ಮತ್ತು ನವೀನ ಕಾಲದ ಸ್ತ್ರೀ ಪುರುಷರು | | ಪ್ರಬಂಧ | | ಸಾಮಾಜಿಕ |
| ಭಗವಚ್ಛಾಸ್ತ್ರ ಭಾಸ್ಕರ | | | | |
| ಭರತಖಂಡದ ಪೂರ್ವವೃತ್ತ | | ಇತಿಹಾಸ | | |
| **ಭಾರತ ಮಹಿಳಾ** | ೧೮೮೪ | ಸಾಮಾಜಿಕ | ಹರಪ್ರಸಾದ ಶಾಸ್ತ್ರಿ | |
| **ಭ್ರಾಂತಿ ವಿಲಾಸ** | ೧೮೭೬ | ಕಾದಂಬರಿ | ಈ.ಚ.ವಿದ್ಯಾಸಾಗರ | ಕಾಮಿಡಿ ಆಫ್ ಎರರ್ಸ್‌ದ ರೂಪಾಂತರ |
| ಮನೋರಮಾ | ೧೯೦೭ | ಕಾದಂಬರಿ | ಪಾಂಚಕರೀ ಡೇ | |
| ಮಶಕ | | | | |
| ಮೃಣ್ಮಯಿ | | ಕಾದಂಬರಿ | | |
| ಮೃಣಾಳಿನಿ | | ಕಾದಂಬರಿ | | |
| **ಮಾಧವೀಲತಾ** | ೧೯೦೧ | ಕಾದಂಬರಿ | ಸಂಜೀವ ಚಂದ್ರ | |
| ಮಾಲತಿ | | ಕಾದಂಬರಿ | — | |
| ಯವನ ಯಾಮಿನೀ ವಿನೋದಗಳು | | ಕಥನ | ಅರೇಬಿಯನ್ ನೈಟ್ಸ್ | |
| ಯುಗಳಾಂಗುರೀಯ | (>೧೮೯೮) | ಕಾದಂಬರಿ | | |
| ರಜನೀ[೨] | ೧೮೯೮ | ಕಾದಂಬರಿ | ಬಂಕಿಂಚಂದ್ರ | ಸಾಮಾಜಿಕ |
| ರಮಾಬಾಯಿ | | ಕಾದಂಬರಿ | | |
| ರಾಜಸಿಂಹ | | ಕಾದಂಬರಿ | ಬಂಕಿಂಚಂದ್ರ | |
| ರಾಜಾಸ್ಥಾನದ ಕಥೆಗಳು | | ಕಥನ | | Todd's Annals of Rajasthan |
| ರಾಧಾರಾಣಿ | (<೧೮೯೮) | ಕಿರುಕಥನ | | |
| ರಾಮೇಶ್ವರನ ಅದೃಷ್ಟ | | ಕಥನ | ಬಂಕಿಂಚಂದ್ರ | |
| ರಾಸೆಲಾಸ | | | | |
| ಲೀಲೆ | ೧೯೧೦ ? | ಕಾದಂಬರಿ | ಯೋಗೀಂದ್ರ ಬಾಬುವಿನ ಕೃತಿಯನ್ನು ಅವಲಂಬಿಸಿದೆ. | ಸಾಮಾಜಿಕ |
| ಲೋಕ ರಹಸ್ಯ ಭಾ. ೧,೨ | | | ಬಂಕಿಂಚಂದ್ರ | |
| ಲೋಕೈಕ ಚತುರ | | | | |

೧. ೨ನೇ ಮುದ್ರಣ. ೧೯೧೦

೨. ಪಾತ್ರಗಳೇ ಕಥೆಯನ್ನು ಹೇಳಿಕೊಂಡು ಹೋಗುವ ವಿಧಾನ.

| ೧ | ೨ | ೩ | ೪ | ೫ |
|---|---|---|---|---|
| **ವಂಗವಿಜೇತ** | | ಕಾದಂಬರಿ | ಆರ್. ಸಿ. ದತ್ತ | ಐತಿಹಾಸಿಕ |
| **ವಿಷವೃಕ್ಷ** | ೧೯೦೦ | ಕಾದಂಬರಿ | ಬಂಕಿಂಚಂದ್ರ | ಸಾಮಾಜಿಕ |
| ವೆನಿಸು ನಗರದ ವಣಿಕ | | | ಶೇಕ್ಸಪಿಯರ್ | |
| ವೈಜ್ಞಾನಿಕ ಪ್ರಹಸನ | | | | |
| **ಶಾಕುಂತಳಾ** | ೧೮೮೨ | ಚರಿತ್ರೆ | ಈ.ಚ.ವಿದ್ಯಾಸಾಗರ | |
| ಶಾರದಾಸ್ತೋತ್ರ ಕದಂಬಕಂ | | ಪದ್ಯ | | |
| ಶಾರದಾಸ್ತೋತ್ರ ನಿರ್ಮಿತಿ[೩] | <೧೮೯೮ | | | ಸ್ವತಂತ್ರ |
| ಮಂಡಲಂ | | ಪದ್ಯ | | |
| ಶಾಂತಿ ಭಾ. ೧, ೨ | | ಕಾದಂಬರಿ | | ಅವಕಾಶ ತೋಷಿಣಿಯಲ್ಲಿ |
| **ಸಾಧನೆ** | ೧೯೧೧ | ಪತ್ತೇದಾರಿ | ಸತ್ಯೇಂದ್ರನಾಥಕುಮಾರ | ೩ನೇ ಪತ್ತೇದಾರಿ |
| **ಸೀತಾರಾಮ** | ೧೯೦೧ >೧೮೯೮ | ಕಾದಂಬರಿ | ಬಂಕಿಂಚಂದ್ರ | |
| **ಸೀತಾವನವಾಸ** | ೧೮೮೪ | ಕಥನ | ಈ.ಚ.ವಿದ್ಯಾಸಾಗರ | ಪೌರಾಣಿಕ |
| ಸ್ತ್ರೀ ಶಿಕ್ಷೆಯ ರಹಸ್ಯ | | ಪ್ರಬಂಧ | | ಸಾಮಾಜಿಕ |
| ಸುಶಿಕ್ಷಿತ ಸಭ್ಯರಾದ ಹಿಂದುಗಳು | | ಸಾಮಾಜಿಕ | | |
| ಸ್ತೋತ್ರಸ್ತಬಕ (ಟಿಪ್ಪಣಿ)[೪] | >೧೮೯೮ | ಪದ್ಯ | | ಸ್ತೋತ್ರ |

[ಇಲ್ಲಿ ಕೊಟ್ಟಿರುವ ವಿವರಗಳಿಗೆ ಹೊಸದಾಗಿ ಏನಾದರೂ ಸೇರಿಸಬೇಕಾದುದು ಇದ್ದರೆ ಓದುಗರು ಅದನ್ನು ತಿಳಿಸಬೇಕಾಗಿ ಬಿನ್ನಹ]

—ಸಂಪಾದಕ

---

೩. ಶೃಂಗೇರಿ ಜಗದ್ಗುರುಗಳ ಮುಖೋದ್ಗೀರ್ಣವಾದುದು.

೪. ಶೃಂಗೇರಿ ಜಗದ್ಗುರುಗಳ ಮುಖೋದ್ಗೀರ್ಣವಾದುದು.



ಉಭಯಕುಶಲೋಪರಿ



ಪರಿಷತ್ತಿನ ಅಧ್ಯಕ್ಷರಿಂದ ಸನ್ಮಾನಪತ್ರ ಪಠನ



ಪರಿಷತ್ತಿನ ಅಧ್ಯಕ್ಷರಾದ ಜಿ. ವೆಂಕಟಸುಬ್ಬಯ್ಯನವರಿಂದ ಡಾ. ಮಾಸ್ತಿ ಅವರಿಗೆ ಸನ್ಮಾನ ಫಲಕ ಸಮರ್ಪಣೆ



ಡಾ. ಮಾಸ್ತಿ ವೆಂಕಟೇಶ ಐಯ್ಯಂಗಾರ್ ಅವರು ಭಾಷಣ ಮಾಡುತ್ತಿದ್ದಾರೆ

# ಮಾಸ್ತಿ ವೆಂಕಟೇಶ ಐಯ್ಯಂಗಾರ್ ಅವರಿಗೆ ಪರಿಷತ್ತಿನ ಸನ್ಮಾನ




ಕನ್ನಡ ಸಾಹಿತ್ಯದ ಆಚಾರ್ಯ ಪುರುಷರಲ್ಲಿ ಒಬ್ಬರೂ ಕನ್ನಡ ಸಾಹಿತ್ಯ ಪರಿಷತ್ತಿನ ಏಳ್ಗೆಗಾಗಿ ದುಡಿದ ಪ್ರಾತಃ ಸ್ಮರಣೀಯರಲ್ಲಿ ಹಿರಿಯರೂ ಆಗಿರುವ ಡಾ|| ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರಿಗೆ ಭಾರತ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಸಂದುದಕ್ಕಾಗಿ ಕನ್ನಡದ ಜನತೆಯ ಪರವಾಗಿ ಕನ್ನಡ ಸಾಹಿತ್ಯ ಪರಿಷತ್ತು ಸನ್ಮಾನ ಸಮಾರಂಭ ವೊಂದನ್ನು ಏರ್ಪಡಿಸಿತ್ತು.

ಕನ್ನಡ ಸಾಹಿತ್ಯ ಸರಸ್ವತಿಯ ದೇಗುಲದಲ್ಲಿ ನಡೆದ ಸಂಭ್ರಮದ ಈ ಉತ್ಸವಕ್ಕೆ ನಾಡುನುಡಿಗಳಿಗೆ ಸೇವೆ ಸಲ್ಲಿಸಿದ ಅನೇಕ ಹಿರಿಯ ವಿದ್ವಾಂಸರೂ ಪರಿಷತ್ತಿನ ಅಭಿಮಾನಿಗಳೂ ಆಗಮಿಸಿದ್ದರು.

ಆರಂಭದಲ್ಲಿ ಕುಮಾರಿಯರಾದ ಕೈವಾರ ಪದ್ಮ ಮತ್ತು ಮಾಲತಿ ಅವರು ಪ್ರಾರ್ಥನೆ ಮಾಡಿದರು. ಅನಂತರ ಮಾಸ್ತಿ ಅವರ 'ಬಿನ್ನಹ' ಕೃತಿಯಿಂದ ಶ್ರೀಮತಿ ಕಮಲಾ ರಾಮಕೃಷ್ಣ ಅವರು ವಾಚನ ಮಾಡಿದರು.

ಅತಿಥಿಗಳನ್ನು ಶ್ರೀ ಹಂಪ. ನಾಗರಾಜಯ್ಯನವರು ಸ್ವಾಗತಿಸಿದರು.

ಪ್ರೊ|| ಎ. ಎನ್. ಮೂರ್ತಿರಾಯರು ಸಣ್ಣಕಥೆಗಳ ಕ್ಷೇತ್ರದಲ್ಲಿ ಮಾಸ್ತಿಯವರು ಮಾಡಿದ ಸಾಧನೆಯನ್ನು ಕುರಿತು ಹೃದಯಂಗಮವಾಗಿ ಮಾತನಾಡಿದರು. ಅವರು ರಂಗಪ್ಪನ ಕಥೆಗಳನ್ನು ಸ್ಮರಿಸಿ, ಮಾಸ್ತಿಯವರ ಕಥೆಗಳನ್ನು ಓದುತ್ತಿದ್ದರೆ ಗ್ರೀಕ್ ಸಾಹಿತ್ಯದ ನೆನಪು ಬರುವುದೆಂದರು. ಅವರ ಕೃತಿಗಳಲ್ಲಿ ಹಿತವಾದ ಸಾಹಿತ್ಯದೊಡನೆ ಆಲೋಚನಾ ಪರತೆ ಇದೆ ಎಂದರು. "ಅವರದು ಅನುಕರಣ ಸಾಹಿತ್ಯ ವಲ್ಲ; ಅನುಭವ ಸಾಹಿತ್ಯ" ಎಂದು ಮುಕ್ತಕಂಠದಿಂದ ಹೊಗಳಿದರು.

ಅನಂತರ ಮಾತನಾಡಿದ ವಿ. ಸೀ. ಅವರು "ಮಾಸ್ತಿ ಅವರಿಗೆ ಕನ್ನಡದ ಜನ ಮಾನ್ಯತೆಯನ್ನು ಪುರಸ್ಕಾರವನ್ನು ಎಂದೋ ಕೊಟ್ಟಿದ್ದಾರೆ. ಇದು ಬಹಳ ತಡವಾಗಿ ಬಂದ ಪ್ರಶಸ್ತಿ" ಎಂದು ಅಭಿಪ್ರಾಯಪಟ್ಟರು.

ಮಾಸ್ತಿ ಅವರು ತಾವು ಬರೆದುದಲ್ಲದೆ ಹತ್ತು ಜನರಿಂದ ಬರೆಸಿದರು; ದೇಶಕ್ಕೆ ಕೀರ್ತಿ ತಂದ ಕುವೆಂಪು ಅವರ ಮೊದಲ ಕೃತಿಯನ್ನು ಪ್ರಕಟಿಸಿದರೆಂದರು.

ಡಾ. ಚಿದಾನಂದಮೂರ್ತಿಯವರು "ನಾಡಿನ ಶ್ರೇಷ್ಠ ವ್ಯಕ್ತಿ–ಸಾಹಿತಿಗೆ ಸನ್ಮಾನ ಮಾಡಿದ್ದೇವೆ. ಈ ಸನ್ಮಾನ ಉತ್ತಮ ಕೃತಿಗಳ ಸೃಷ್ಟಿಗೆ ಪ್ರೇರಣೆಯಾಗಲಿ" ಎಂದು ಹಾರೈಸಿದರು.

"ಮಾಸ್ತಿ ಅವರ ಮಾತು ಹೇಗೆ ಸ್ವಚ್ಛವೋ ಹಾಗೆಯೇ ಅವರ ಬರಹವೂ ಸ್ವಚ್ಛ" ಎಂದು ನುಡಿದ ಜಿ. ನಾರಾಯಣ ಅವರು ಪತ್ರಿಕಾ ಸಂಪಾದಕರಾಗಿ ಮಾಸ್ತಿಯವರ ಸೇವೆ ಯನ್ನು ಕೃತಜ್ಞತೆಯಿಂದ ಸ್ಮರಿಸಿದರು.

ಪರಿಷತ್ತಿನ ಅಧ್ಯಕ್ಷರಾದ ಪ್ರೊ|| ಜಿ. ವೆಂಕಟಸುಬ್ಬಯ್ಯ ನವರು ಅತಿಥಿಗಳಿಗೆ ಸನ್ಮಾನ ಪತ್ರವನ್ನು ಅರ್ಪಿಸಿದರು. ಅನಂತರ ಮಾಸ್ತಿ ಅವರಿಗೆ ಶಾಲನ್ನು ಹೊದಿಸಿ 'ಕರ್ಣಾಟಕದ ಕಾವ್ಯಪಾರ್ಥ'ರಾದ ಅವರಿಗೆ 'ಗೀತೋಪದೇಶ'ದ ಸುಂದರ ಚಿತ್ರವಿರುವ ಫಲಕವನ್ನು ಕಾಣಿಕೆಯಾಗಿ ಕೊಟ್ಟರು.

ತಮಗೆ ನೀಡಿದ ಸನ್ಮಾನಕ್ಕೆ ಮಾಸ್ತಿ ಅವರು ಉತ್ತರ ಕೊಡುತ್ತ "ನಮ್ಮ ಜನಕ್ಕೆ ನಮ್ಮ ಭಾಷೆಯಲ್ಲಿ ಸಾಹಿತ್ಯ ಸಿಗಲಿ ಎಂದು ಬರೆದೆ" ಎಂದು ಹೇಳಿದರು.

"ಕನ್ನಡ ದೇಶದಲ್ಲಿ ಒಂದೊಂದು ಅಂಗುಲವೂ ಕನ್ನಡ. ನಾನೇನು ಬರೆದೆ? ನಾಡು ಬರೆಯಿತು. ಜನ ಬರೆಯಿಸಿತು" ಎಂದು ಉದ್ಗಾರ ತೆಗೆದ ಅವರು ಜನತೆಯ ಸುಖವನ್ನು ಹಾರೈಸಿದರು.

ವಂದನಾರ್ಪಣೆಯೊಂದಿಗೆ ಸರಳವಾದ ಈ ಸಮಾರಂಭವು ಯಶಸ್ವಿಯಾಗಿ ಮುಕ್ತಾಯಗೊಂಡಿತು.

# ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಗೆ

## ೧೯೬೮ರ ಅತ್ಯುತ್ತಮ ಕನ್ನಡ ಗ್ರಂಥಕ್ಕಾಗಿ

## ಭಾರತದ ಸಾಹಿತ್ಯ ಅಕಾದಮಿ ಪ್ರಶಸ್ತಿ ದೊರೆತ ಸಂದರ್ಭದಲ್ಲಿ ಸಮರ್ಪಿಸಿದ

# ಸನ್ಮಾನ ಪತ್ರ

**ಪೂಜ್ಯ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರೇ,**

ಕನ್ನಡ ಸಾಹಿತ್ಯದ ನವೋದಯದ ನಂದನದ ಕೋಗಿಲೆಯಂತೆ ಹಾಡಿ ಜನಮನವನ್ನು ಸೂರೆಗೊಂಡವರೂ, ಕನ್ನಡ, ಸಂಸ್ಕೃತ, ಇಂಗ್ಲಿಷ್, ತಮಿಳು ಭಾಷೆಗಳಲ್ಲಿ ಉದ್ದಾಮ ಪಂಡಿತರೂ, ಕನ್ನಡ ಸಾಹಿತ್ಯ ಪರಿಷತ್ತನ್ನು ಪೋಷಿಸಿ ಬೆಳೆಯಿಸಿದವರೂ, ಕಾವ್ಯ, ಸಣ್ಣಕತೆ, ಕಾದಂಬರಿ, ವಿಮರ್ಶೆ, ಜೀವನಚರಿತ್ರೆ, ನಾಟಕ ಮುಂತಾದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಉದ್ಗ್ರಂಥಗಳನ್ನು ರಚಿಸಿ ಕನ್ನಡದ ಕಣಜವನ್ನು ತುಂಬಿದವರೂ, ಅನೇಕ ಯುವಕ ಚೈತನ್ಯಗಳನ್ನು ಪೋಷಿಸಿ ಪ್ರೋತ್ಸಾಹಿಸಿ ವಿಕಸನಗೊಳಿಸಿದವರೂ ಸರಕಾರದ ಉನ್ನತ ಅಧಿಕಾರವನ್ನು ಜನರ ಹಿತಸಂವರ್ಧನೆಗೆ ಮೀಸಲಿಟ್ಟವರೂ, ರಾಜರ್ಷಿ ನಾಲ್ಮಡಿ ಕೃಷ್ಣರಾಜ ಒಡೆಯರವರ ಮತ್ತು ಶ್ರೀ ಜಯಚಾಮರಾಜ ಒಡೆಯರವರ ಮೆಚ್ಚಿಕೆಗೆ ಪಾತ್ರರಾದವರೂ, "ರಾಜಸೇವಾಪ್ರಸಕ್ತ" ಎಂಬ ಬಿರುದನ್ನು ಪಡೆದವರೂ ಆದ ತಮ್ಮನ್ನು ಈ ದಿನ ಸ್ವಾಗತಿಸಿ ಪರಿಷತ್ತಿನ ಸದಸ್ಯರ ಸಮ್ಮುಖದಲ್ಲಿ ಕನ್ನಡಿಗರ ಕೃತಜ್ಞತೆಯನ್ನೂ ಗೌರವವನ್ನೂ ಸಮರ್ಪಿಸಲು ನಮಗೆಲ್ಲ ಅತ್ಯಾನಂದವಾಗಿದೆ. ಈಸಮಾರಂಭಕ್ಕೆ ದಯಮಾಡಿಸಲು ತಾವು ಒಪ್ಪಿಗೆಯಿತ್ತುದಕ್ಕೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ತಾವು ಚಿನ್ನದ ನಾಡಾದ ಕೋಲಾರ ಜಿಲ್ಲೆಯ ಮಾಸ್ತಿಯ ಹೊಂಗೇನಹಳ್ಳಿಯಲ್ಲಿ ೧೮೯೧ರಲ್ಲಿ ಕನ್ನಡಾಂಬೆಯ ಪುತ್ರರತ್ನವಾಗಿ ಜನ್ಮತಾಳಿ, ವಿದ್ಯಾರ್ಥಿ ಜೀವನದಲ್ಲಿ ಪ್ರತಿವರ್ಗದಲ್ಲಿಯೂ ಪ್ರಥಮ ಶ್ರೇಣಿಯನ್ನು ಸಂಪಾದಿಸಿ, ಎಂ.ಎ. ಪದವೀಧರರಾಗಿ ಮೈಸೂರು ರಾಜ್ಯಾಡಳಿತದ ಅಧಿಕಾರವರ್ಗವನ್ನು ಪ್ರವೇಶಿಸಿ "ಶಿಸ್ತಿನ ಸಿಪಾಯಿ" ಎಂಬ ಸತ್ಕೀರ್ತಿಯನ್ನು ಗಳಿಸಿದಿರಿ. ಬಡ್ತಿಯ ಬಗ್ಗೆ ಬಂದ ಅಡ್ಡಿಯನ್ನು ವಿರೋಧಿಸಿ ಅಧಿಕಾರದಿಂದ ನಿವೃತ್ತಿಯನ್ನು ಬಯಸಿ ಆತ್ಮಾಭಿಮಾನದ ಸತ್ತ್ವ ಎಂಥದೆಂಬುದನ್ನು ಪ್ರತ್ಯಕ್ಷವಾಗಿ ಪ್ರಮಾಣಿಸಿದಿರಿ.

ಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದ ತಾವು ೧೯೨೩ರಲ್ಲೇ "ಅರುಣ" ಕವನ ಸಂಗ್ರಹವನ್ನು ರಚಿಸಿದಿರಿ. 'ಶ್ರೀನಿವಾಸ' ಎಂಬ ಕಾವ್ಯನಾಮಕ್ಕೆ ಅಂದೇ ಅರುಣೋದಯವಾಯಿತು. ಸಣ್ಣಕತೆಗಳ ಸ್ವರೂಪ, ಸತ್ತ್ವ, ಸೌಂದರ್ಯ, ಸಂಸ್ಕೃತಿಗಳು ಎಂಥವೆಂಬುದನ್ನು ದೃಷ್ಟಾಂತಪಡಿಸಿದ ತಮ್ಮನ್ನು ಕನ್ನಡ ಸಣ್ಣಕತೆಗಳ ಪಿತಾಮಹರೆಂದು ಜನತೆ ಕೊಂಡಾಡುತ್ತಿದೆ. ೧೯೪೦ರಿಂದ ಶ್ರೇಷ್ಠವರ್ಗದ ಮಾಸಪತ್ರಿಕೆಯಾದ "ಜೀವನ"ದ ಸಂಪಾದಕರಾಗಿ ನಾಡಿನ ಲೇಖಕರಲ್ಲಿ ಹಲವರನ್ನು ಬೆಳೆಸಿದಿರಿ. ಇಂದು ಸುಪ್ರಸಿದ್ಧರಾಗಿರುವ ಹಲವರು ಕನ್ನಡ ಲೇಖಕರು ತಮ್ಮ ಪ್ರೋತ್ಸಾಹದ ಆಶ್ರಯದಲ್ಲಿ ಬೆಳಕಿಗೆ ಬಂದರೆಂಬುದನ್ನು ನಾಡು ನೆನೆದು ಕೃತಜ್ಞವಾಗಿದೆ.

೧೯೨೯ರಲ್ಲಿ ಬೆಳಗಾವಿಯಲ್ಲಿ ನಡೆದ ಹದಿನೈದನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ತಮ್ಮನ್ನು ಆರಿಸಿ

ಜನತೆ ತನ್ನ ಮೆಚ್ಚಿಗೆಯನ್ನು ವ್ಯಕ್ತಪಡಿಸಿದೆ. ತಮ್ಮ ವಿದ್ವತ್ತನ್ನೂ ದೇಶಸೇವೆಯನ್ನೂ ಮೆಚ್ಚಿದ ಕರ್ಣಾಟಕ ಸಿಂಹಾಸನಾಧೀಶ್ವರರಾದ ಮೈಸೂರು ಶ್ರೀ ಜಯಚಾಮ ರಾಜ ಒಡೆಯರ್ ಅವರಿಂದ "ರಾಜಸೇವಾಪ್ರಸಕ್ತ" ಎಂಬ ಪ್ರಶಸ್ತಿಯನ್ನು ಪಡೆದಿರಿ. ಅಂದು ಅವರು ಆಡಿದ "ನಾವೆಲ್ಲ ಮರೆತುಹೋದ ಅನೇಕ ಕಾಲದ ಬಳಿಕವೂ ದೇಶ ತಮ್ಮನ್ನು ಪೂಜಿಸುತ್ತಿರುತ್ತದೆ" ಎಂಬ ಮೆಚ್ಚಿಗೆ ಎಂಥವರಿಗೂ ಆನಂದವನ್ನು ತರುತ್ತದೆ. ತಮ್ಮ ಸರ್ವತೋಮುಖವಾದ ಸಾಹಿತ್ಯ ಪ್ರತಿಭೆಯನ್ನು ಗುರುತಿಸಿ ಕರ್ನಾಟಕ ವಿಶ್ವವಿದ್ಯಾನಿಲಯದವರು ಡಾಕ್ಟರೇಟ್ ಪದವಿಯಿತ್ತು ಗೌರವಿಸಿದುದು ತಮ್ಮ ಪ್ರತಿಭೆಯನ್ನು ಕುರಿತು ಜನತೆ ಪಡೆದಿರುವ ಕೃತಜ್ಞತೆಗೆ ಸಾಕ್ಷಿಯಾಗಿದೆ.

**ಕನ್ನಡ** ಸಾಹಿತ್ಯ ಪರಿಷತ್ತನ್ನು ತಾವು ಪೋಷಿಸಿ ಬೆಳೆಸಿದಿರಿ. ತಮ್ಮ ಅಧಿಕಾರದ ಅವಧಿಯಲ್ಲಿ ಪರಿಷತ್ತಿಗೆ ಸದಸ್ಯ ಸಂಪತ್ತು ಹೆಚ್ಚಿದುದನ್ನೂ ತಾವು ಜನತೆಯಲ್ಲಿ ಓಡಾಡಿ ಕನ್ನಡ ಸಾಹಿತ್ಯ ಪರಿಷತ್ತಿನ ಬಗ್ಗೆ ಅಭಿಮಾನ ಬೆಳೆಯುವಂತೆ ಮಾಡಿದುದನ್ನೂ ನಾವು ಎಂದೂ ಮರೆಯಲಾರೆವು.

**ಹೀಗೆ** ಅರ್ಧಶತಮಾನಕ್ಕೂ ಮಿಕ್ಕು ಬಹುಮುಖವಾದ ಸಾಹಿತ್ಯ ಸೇವೆಯನ್ನು ಸಲ್ಲಿಸಿ, ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಶಾಶ್ವತಗುಣಗಳುಳ್ಳ ಕೃತಿಗಳನ್ನು ರಚಿಸಿ ಕನ್ನಡನಾಡಿನಲ್ಲೆಲ್ಲ ಸುತ್ತಾಡಿ ತಮ್ಮ ವಾಙ್ಮಂತ್ರದಿಂದ ಕನ್ನಡದ ಕೈಂಕರ್ಯಕ್ಕೆ ಯುವಕ ಚೈತನ್ಯವನ್ನು ಪ್ರೋತ್ಸಾಹಿಸಿ, ಕನ್ನಡಿಗರ ಹೃದಯಮಂದಿರದಲ್ಲಿ ಸಿಂಹಾಸನಸ್ಥರಾಗಿ ವಿರಾಜಮಾನರಾಗಿರುವ, ಸರಳತೆ, ಸೌಂದರ್ಯ, ಸತ್ಯ, ಗಾಂಭೀರ್ಯ, ಅನುಕಂಪ, ಸೌಜನ್ಯಗಳೆಂಬ ಸಾಹಿತ್ಯಗುಣಗಳ ಮೂರ್ತಿಸ್ವರೂಪರಾಗಿರುವ, ಅನ್ವರ್ಥವಾಗಿಯೂ ಕನ್ನಡದ '**ಶ್ರೀ-ನಿವಾಸ**'ರಾಗಿರುವ, ತಮಗೆ ಕೇಂದ್ರ ಸಾಹಿತ್ಯ ಅಕಾದಮಿಯ ಪ್ರಶಸ್ತಿ ದೊರೆತ ಈ ಶುಭಸಂದರ್ಭದಲ್ಲಿ ತಮ್ಮನ್ನು ಸನ್ಮಾನಿಸುವ ಅವಕಾಶವು ಸಾಹಿತ್ಯ ಪರಿಷತ್ತಿಗೆ ದೊರಕಿರುವುದು ಅಪೂರ್ವವಾದುದೆಂದು ನಾವು ಭಾವಿಸುತ್ತೇವೆ.

**ತಾವು** ನಮ್ಮ ನಡುವೆ ಬಹುಕಾಲವಿದ್ದು ಕನ್ನಡ ಜನತೆಯನ್ನು ಸನ್ಮಾರ್ಗದಲ್ಲಿ ನಡೆಸಲು ಸೂಚನೆ ಸಲಹೆಗಳನ್ನು ಕೊಡುತ್ತ ನಮ್ಮನ್ನು ಹರಸುತ್ತಿರಬೇಕೆಂದೂ ಭಗವಂತನು ತಮಗೂ ತಮ್ಮ ಆಪ್ತೇಷ್ಟರಿಗೂ ಆಯುರಾರೋಗ್ಯಗಳನ್ನು ಕೊಟ್ಟು ಕಾಪಾಡಲೆಂದೂ ಹಾರೈಸುತ್ತೇವೆ.

"ಸಿರಿಗನ್ನಡಂ ಗೆಲ್ಗೆ"

**ಜಿ. ವೆಂಕಟಸುಬ್ಬಯ್ಯ**
ಅಧ್ಯಕ್ಷರು
**ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರು**

**ಬೆಂಗಳೂರು-೧೮**

**೧೨-೩-೧೯೬೯**

# ವಿಮರ್ಶನರಂಗ

ಚಕ್ರಬಂಧನ: (ಕಥಾಸಂಕಲನ) ಲೇಖಕರು: ಮಾವಿನಕೆರೆ ರಂಗನಾಥನ್, ಪ್ರಕಾಶಕರು: ಪುರೋಗಾಮಿ ಸಾಹಿತ್ಯ ಸಂಘ, ೧೦ನೆಯ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು–೩, ಪುಟ: ೧೩೨, ಬೆಲೆ: ರೂ. ೨–೫೦.

'ಚಕ್ರಬಂಧನ' ಮಾವಿನಕೆರೆ ರಂಗನಾಥನ್ ಅವರ ಎರಡನೆಯ ಕಥಾಸಂಕಲನ. ಈ ಸಂಕಲನದಲ್ಲಿ ಹತ್ತು ಕತೆಗಳಿವೆ.

'ಪಾಪಿ', 'ಚಕ್ರಬಂಧನ', 'ಮಳೆ ನಿಂತಮೇಲೆ' ಮತ್ತು 'ಪರ್ಜನ್ಯ'–ಈ ಸಂಕಲನದಲ್ಲಿನ ಉತ್ತಮ ಕತೆಗಳು. ಈ ಕತೆಗಳಲ್ಲಿನ ಪಾತ್ರರಚನೆ, ಶೈಲಿ, ನಾವೀನ್ಯತೆ ಪ್ರಶಂಸೆಗೆ ಯೋಗ್ಯವಾಗಿದೆ. ಚಿರಕಾಲ ನೆನಪಿನಲ್ಲಿ ಉಳಿಯುವಂಥವೂ ಆಗಿವೆ.

ತಂದೆ ಸತ್ತಾಗ, ಎಲ್ಲರೂ ಆ ಸಾವಿಗಾಗಿ ಮರುಗುವಾಗ, ಮಗನ ಮನಸ್ಸಿನ ಮೇಲೆ ಏನು ಪರಿಣಾಮವೂ ಆಗಲಿಲ್ಲವೆ? ಆತ ಅಜ್ಜಿಯ ಮಡಿಲಲ್ಲಿ ಮುಖವನ್ನು ಹುದುಗಿಸಿ ಮೌನವಾಗಿ ಅಳುವಾಗ ಆ ಕೋಲಾಹಲವನ್ನು 'ಪರ್ಜನ್ಯ' ಕತೆಯಲ್ಲಿ ನಾವು ಕಾಣುತ್ತೇವೆ. ಹಾಗೆಯೆ ಗಾಣ ಆಡಲು ಬಿಟ್ಟು, ಎಣ್ಣೆ ತೆಗೆದು ಇರಿಸಿಕೊಂಡು, ಹೇಗಾದರೂ ಈ ವರ್ಷ ಒಪ್ಪಿಕೊಂಡ ತೆರವನ್ನು ಅಳಿಯನಿಗೆ ಕೊಟ್ಟುಬಿಡಬೇಕು ಎಂದು ಕನಸನ್ನು ಕಂಡ ಗಾಣಿಗರ ವೆಂಕಟನ ಮನಸ್ಸಿನ ತುಮುಲವನ್ನು ಕನಿಕರದಿಂದ ವೀಕ್ಷಿಸುತ್ತಿದ್ದಾಗ, ಆತನಿಗಾದ ನಿರಾಸೆಯನ್ನು ನೋಡಿ ನಾವೂ ನಿಟ್ಟುಸಿರು ಬಿಡಬೇಕಾಗುತ್ತದೆ. ಈ ಕತೆಗಳಲ್ಲಿನ ಅಂತ್ಯ ಪರಿಣಾಮಕಾರಿಯಾಗಿ ಮುಕ್ತಾಯವಾಗಿದೆ.

ಉಪಕಾರ ಮಾಡುವುದು, ಮಾಡಿಸಿಕೊಳುವುದು, ಸ್ವಾರ್ಥಕ್ಕಾಗಿಯೆ ಎನ್ನುವಂತೆ 'ಚಕ್ರಬಂಧನ'ದ ಮೆನ್ಸೀಸನ ನಡತೆ, ಬಾಳಿನಲ್ಲಿ ಅಡ್ಡಹಾದಿ ಹಿಡಿದ 'ಪಾಪಿ' ಕತೆಯಲ್ಲಿನ ಸಿಂಗಾರಿ, ಅವನಿಗೊದಗಿದ ದುರಂತ – ಇಂಥ ಪಾತ್ರಗಳನ್ನು ಸೃಷ್ಟಿಸಿದ ಲೇಖಕರ ಕಲ್ಪನಾಸಾಮರ್ಥ್ಯ ಮೆಚ್ಚುವಂಥಹುದು.

ಈ ಸಂಕಲನದಲ್ಲಿ ಇನ್ನೂ ಎರಡು ಒಳ್ಳೆಯ ಕತೆಗಳಿವೆ. 'ರೋಲ್ಡ್‌ಗೋಲ್ಡ್ ನೆಕ್ಲೇಸ್' ಮತ್ತು 'ಏಕಾಕಿ' ಇವೇ ಆ ಕತೆಗಳು. ಕತೆಗಾರನ ಕುಸುರಿ ಕೆಲಸ, ಜಾಣ್ಮೆ, ಈ ಕತೆಗಳಲ್ಲೂ ಯಶಸ್ವಿಯಾಗಿವೆ. 'ಪರಾಭವ', 'ರಾಜೀವ' ಮತ್ತು 'ಪ್ರಾಯಶ್ಚಿತ್ತ' ಅಷ್ಟು ಪರಿಣಾಮಕಾರಿಯಾಗಿಲ್ಲ.

ಒಟ್ಟಿನ ಮೇಲೆ ಮಾವಿನಕೆರೆ ಅವರಿಗೆ ಕತೆ ಹೇಳುವ ಕಲೆ ಚೆನ್ನಾಗಿ ಸಿದ್ಧಿಸಿದೆ ಎಂದು ಧಾರಾಳವಾಗಿ ಹೇಳಬಹುದಾಗಿದೆ. ಮನಮುಟ್ಟುವಂತೆ ವಿಷಯವನ್ನು ಸಮಗ್ರವಾಗಿ ಹೇಳಬೇಕೆಂಬ ಅವರ ಉತ್ಸಾಹ, ನಿರೂಪಣಾಶಕ್ತಿ, ಈ ಸಂಕಲನದ ಕತೆಗಳಲ್ಲಿ ಕಾಣಬಹುದಾಗಿದೆ. ಆದರೆ ನಾಲಿಗೆ, ಗಾಭರಿ, ಅಣಿಮುತ್ತು, ರೋಧಿಸು, ಬಸ್ಸಾಪು, ಬುಜ, ಸ್ವೇಚ್ಛೆ, ಕಿರುಚು, ವ್ಯವಹಾರಿಕ—ಇಂಥ ಶಬ್ದಗಳು ಪದೇ ಪದೇ ಬರುವುದರಿಂದ, ಭಾಷೆಯ ಅಭ್ಯಾಸದ ಕಡೆಗೂ ಶ್ರೀಯುತರು ಗಮನಹರಿಸುವುದಾದರೆ ಒಳ್ಳೆಯ ಕೃತಿಗಳನ್ನು ಅವರಿಂದ ನಾವು ನಿರೀಕ್ಷಿಸಬಹುದಾಗಿದೆ.

* * * *

ಬಾಳಯೋಗಿ (ಕಥಾಸಂಕಲನ) ಲೇಖಿಕೆ: ಶ್ರೀಮತಿ ಇಂದುಮತಿ ವಿಭೂತಿ, ಬಿ.ಎ., ಔರಂಗಾಬಾದ್, ಪ್ರಕಾಶಕರು: ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ಬಿಜಾಪುರ ಜಿಲ್ಲೆ. ಪುಟ ೬೦, ಬೆಲೆ: ರೂ. ೧–೫೦.

ಈ ಸಂಕಲನದಲ್ಲಿ ಏಳು ಕತೆಗಳಿವೆ. ಪರಿವಿಡಿಯಲ್ಲಿ ಒಂಬತ್ತು ಎಂದು ಇದೆ. 'ಶರಣರ ಕಾಲದಲ್ಲಿ ಮಹಿಳಾ ಜೀವನ' ಎನ್ನುವ ಪ್ರಬಂಧವನ್ನೂ, ಬಸವಣ್ಣನವರ ಮೇಲೆ ಒಂದು ಕವನವನ್ನೂ ಇಲ್ಲಿ ಸೇರಿಸಲಾಗಿದೆ. ಇವುಗಳು ಕತೆಗಳು ಅಲ್ಲವಾದುದರಿಂದ ಈ ಕಥಾಸಂಕಲನದಲ್ಲಿ, ಹಾಗೆ ಹೆಸರಿಟ್ಟು, ಅವನ್ನು ಯಾಕೆ ಸೇರಿಸಲಾಯಿತು ಎನ್ನುವುದು ನಮಗೆ ಅರ್ಥವಾಗುತ್ತಿಲ್ಲ.

ಹಾಗೆ ನೋಡಿದರೆ, ಈ ಸಂಕಲನದಲ್ಲಿರುವ ಒಂದೆರಡು ಕತೆಗಳನ್ನು ಬಿಟ್ಟರೆ (ಬಾಳಯೋಗಿ, ಭೀತಿ, ಸುಶೀಲೆ) ಉಳಿದುವೆಲ್ಲವನ್ನೂ ಪ್ರಬಂಧಗಳೆಂದೇ ಹೇಳಬಹುದಾಗಿದೆ. ಸಣ್ಣಕತೆಯ ತಂತ್ರವನ್ನು ಲೇಖಿಕೆಯರು ಇನ್ನೂ ರೂಢಿಸಿಕೊಳ್ಳಬೇಕಾಗಿರುವುದರಿಂದ ಹಾಗೆಂದೇ ಇವು ಪ್ರಬಂಧಗಳಾಗಿಯೆ ಉಳಿದಿವೆ.

ಆದರೆ ಶ್ರೀಮತಿ ಇಂದುಮತಿಯವರದು ಸೊಗಸಾದ ಶೈಲಿ. ಅಭ್ಯಾಸ ಮಾಡಿದರೆ ಅವರು ಚೆನ್ನಾಗಿ ಬರೆಯಬಲ್ಲರು, ಒಳ್ಳೆಯ ಕತೆಗಾರ್ತಿಯಾಗಬಲ್ಲರು, ಎನ್ನುವುದನ್ನು ಈ ಸಂಕಲನದ ಅವರ ಬರವಣಿಗೆಯಲ್ಲಿ, ಕತೆಗಳಲ್ಲಿ, ನಾವು ಕಾಣಬಹುದಾಗಿದೆ. ಕನ್ನಡ ನೆಲದಿಂದ ದೂರವಾಗಿ ನಿಂತು ಸಾಹಿತ್ಯ ಸೇವೆ ಮಾಡುತ್ತಿರುವ ಶ್ರೀಮತಿಯವರ ಒಳ್ಳೆಯ ಬರವಣಿಯನ್ನು ಗುರುತಿಸಿ ಪ್ರೋತ್ಸಾಹಿಸಿ ಈ ಸಂಕಲನವನ್ನು ಹೊರತಂದಿರುವ ಶ್ರೀ ಅರವಿಂದ ಗ್ರಂಥಾಲಯದ ಪ್ರಕಾಶಕರನ್ನು ನಾವು ಅಭಿನಂದಿಸುತ್ತೇವೆ.

* * * *

ತೀರ (ಕಥಾಸಂಕಲನ) ಲೇಖಕರು : ಈಶ್ವರಚಂದ್ರ, ಪ್ರಕಾಶಕರು : ಸಂಪದ ಪ್ರಕಾಶನ, ೫೩, ಇಂದಿರಾ ನಗರ, ಬೆಂಗಳೂರು-೮ ಪುಟ : ೧೫೬, ಬೆಲೆ : ರೂ. ೩-೦೦.

ಈಶ್ವರಚಂದ್ರರ ಈ ಕತಾಸಂಕಲನದಲ್ಲಿ ಹನ್ನೆರಡು ಕತೆಗಳಿವೆ.

ಬೆಳಕಿಗೆ ಬರುತ್ತಿರುವ ಉದಯೋನ್ಮುಖ ಕತೆಗಾರರಲ್ಲಿ ಈಶ್ವರಚಂದ್ರರು ಗಮನಾರ್ಹರಾಗಿದ್ದಾರೆ. 'ಸುಧಾ' ಪತ್ರಿಕೆಯ ಸಂಪಾದಕರಾದ ಇ. ಆರ್. ಸೇತೂರಾಂ ಅವರು ಈ ಸಂಕಲನಕ್ಕೆ ಮುನ್ನುಡಿಯನ್ನು ಬರೆಯುತ್ತ ಹೀಗೆ ಹೇಳಿದ್ದಾರೆ: 'ಸರಳವಾದ ಚೌಕಟ್ಟಿನಲ್ಲಿ ಕೆಲವೇ ಸುಂದರ ಪಾತ್ರಗಳಿಂದ ಶೋಭಿಸುವ ಇವರ ಶೈಲಿ ಮೋಹಕವಾಗಿದೆ . . .'

ಈ ಸಂಕಲನದಲ್ಲಿನ ಕತೆಗಳನ್ನು ಓದಿದ ಮೇಲೆ ಈ ಮಾತು ಬಹುಮಟ್ಟಿಗೆ ನಿಜವೆನ್ನಿಸುತ್ತದೆ. 'ತೀರ', 'ಕಿಚ್ಚು', 'ಕನವರಿಕೆ', 'ನವ ಏಕಲವ್ಯ', 'ತೆರೆದಿಟ್ಟ ಪುಸ್ತಕ', ಮತ್ತು 'ರೂಹು ತಳೆದ ಚಿತ್ರ'-ಈ ಸಂಕಲನದಲ್ಲಿನ ಯಶಸ್ವೀ ಕತೆಗಳಾಗಿವೆ.

ಈಶ್ವರಚಂದ್ರರು ತಮ್ಮ ಕತೆಗಳ ಪಾತ್ರರಚನೆ ಮತ್ತು ಪಾತ್ರನಿರೂಪಣೆಗಳಲ್ಲಿ ತುಂಬ ಕೌಶಲ್ಯವನ್ನು ತೋರಿದ್ದಾರೆ. ಇಲ್ಲಿನ ಕಥಾಸಾಮಗ್ರಿಗಳು ನೇರವಾಗಿ ಜೀವನದಿಂದ ಬಂದುವು; ಜೀವನದ ದುಃಖಮಯ ಚಿತ್ರಗಳೂ ಕೂಡ. ಸಾಹಿತ್ಯದಲ್ಲಿ ದುಃಖಮಯ ಜೀವನವನ್ನು ಪರಿಣಾಮಕಾರಿಯಾಗಿ ಚಿತ್ರಿಸುವುದು ಒಂದು ಬಗೆಯಾದರೆ, ಓದುಗರಿಗೆ ಮನರಂಜನೆಯನ್ನು ನೀಡಿ ಸುಖ ಸಂತೋಷವನ್ನು ತರುವಂಥ ಕಲೆ, ಮತ್ತೊಂದು ಬಗೆಯದು.

ಈ ಕಲೆಯಲ್ಲಿ ಈಶ್ವರಚಂದ್ರರು ತುಂಬ ಯಶಸ್ವಿಯಾಗಿದ್ದಾರೆ ಎನ್ನುವುದಕ್ಕೆ ಈ ಸಂಕಲದಲ್ಲಿನ ಅತ್ಯುತ್ತಮ ಕತೆಗಳಾದ 'ತೀರ' ಮತ್ತು 'ಕಿಚ್ಚು' ಇವುಗಳನ್ನು ಉದಾಹರಣೆಯಾಗಿ ಕೊಡಬಹುದಾಗಿದೆ. ಸಾಂಕೇತಿಕ ಸನ್ನಿವೇಶಗಳಿಂದ, ಅಂತಃಕರಣಕ್ಕೆ ಮುಟ್ಟುವಂತೆ ನಿರೂಪಿಸುವ ಭಾಷೆಯ ಬಳಕೆಯಿಂದ ಓದುಗನ ಹೃದಯವನ್ನು ಇವು ಸೂರೆಗೊಳ್ಳುತ್ತವೆ. 'ತೀರ' ಸಂಕಲನದಲ್ಲಿನ ಒಟ್ಟಾರೆ ಎಲ್ಲ ಕತೆಗಳೂ ಜಾಣ್ಮೆಯಿಂದ, ಕುಸುರಿ ಕೆಲಸದಿಂದ ಕೂಡಿದ್ದು ಪರಿಣಾಮಕಾರಿಯಾಗಿವೆ.

ಮುದ್ರಣ, ಮುಖಚಿತ್ರ ಎಲ್ಲ ಅಂದವಾಗಿರುವ ಈ ಪುಸ್ತಕ ತುಂಬ ಅಚ್ಚುಕಟ್ಟಾಗಿದೆ. ಸಂಗ್ರಾಹ್ಯವಾದ ಸಂಕಲನ.

* * * *

ಭಾರತರತ್ನ (ಜೀವನ ಚರಿತೆ) ಲೇಖಕರು: ಸಾ.ಶಿ. ಮರುಳಯ್ಯ, ಪ್ರಕಾಶಕರು : ಸುದರ್ಶನ ಪ್ರಕಾಶನ, ತಾರಾನಿವಾಸ, ತಿಪಟೂರು. ಪುಟ : ೧೩೨, ಬೆಲೆ : ರೂ. ೨-೦೦

ಜವಹರಲಾಲ್ ನೆಹರೂರವರ ಜೀವನ ಚರಿತ್ರೆಯನ್ನು ಲೇಖಕರು ಈ ಕೃತಿಯಲ್ಲಿ ಸ್ವಾರಸ್ಯವಾಗಿ ವಿವರಿಸಿದ್ದಾರೆ. ನೆಹರೂರವರ ಮೇಲೆ ಬಂದಿರುವ ಪುಸ್ತಕಗಳು ಕನ್ನಡದಲ್ಲಿ ವಿರಳವೆಂದೇ ಹೇಳಬೇಕು. ಬಂದಿರುವ ಒಂದೆರಡು ಪುಸ್ತಕಗಳು ಬೃಹತ್ ಗಾತ್ರದವು. ಹೀಗಾಗಿ ಆ ಮಹಾಪುರುಷನ ಚರಿತ್ರೆಯನ್ನು ಎಲ್ಲರೂ ಓದಿ ತಿಳಿಯುವುದು ಸಾಧ್ಯವಿಲ್ಲದಿರುವಾಗ, ಲೇಖಕರು ಈ ಪುಸ್ತಕವನ್ನು ಹೊರತಂದು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

'ನಾವು ಭಾರತೀಯರು, ಭಾರತ ರಾಷ್ಟ್ರ ನನ್ನದು' ಎನ್ನುವ ಶೀರ್ಷಿಕೆಯೊಂದಿಗೆ, ಜವಹರಲಾಲ್ ನೆಹರೂರವರ ವಂಶವೃಕ್ಷದೊಂದಿಗೆ ಪ್ರಾರಂಭವಾಗಿ, ನೆಹರೂರ ಅಂತ್ಯದ ವರೆಗಿನ ಕತೆ ಇಲ್ಲಿದೆ. ನೆಹರೂರವರ ಜೀವನದಿಂದ ಮುಖ್ಯವಾದ ಘಟನೆಗಳನ್ನು ಲೇಖಕರು ಆಯ್ದಿದ್ದಾರೆ. ಬರವಣಿಗೆ ಸಾರ್ಥಕವಾಗಿದೆ.

ಆದರೆ ಒಂದೇ ಕೊರತೆ. ಈ ಪುಸ್ತಕದ ಕರಡನ್ನೇ ತಿದ್ದಲಿಲ್ಲವೇನೊ ಎನ್ನುವಷ್ಟು ಅಸಂಖ್ಯೆಯ ಅಚ್ಚಿನ ದೋಷಗಳು. ಪುಟಪುಟಗಳಿಗೂ ಸಾಲುಸಾಲುಗಳಿಗೂ ಸಹ. ಕೆಲವು ಸಲ ಇವು ವಿಪರೀತಾರ್ಥಕ್ಕೂ ಎಡೆಮಾಡಿಕೊಡುತ್ತವೆ. ಉದಾ: ಧ ರ ತ ಖ ಂ ಡ, ನಾವು ಫಾರತರು (ನಾವು ಭಾರತೀಯರು) ಕಾಶ್ಮೀರ ಶೋಳಿಸುತ್ತದೆ, ಕೃಷ್ಣಾಮಾರಿ (ಕೃಷ್ಣಾ ಹತೀ ಸಿಂಗ್), ಸಾಬಮೂರ್ತಿ (ಸಬರ್ಮತಿ) - ಹೀಗೆ. ಮತ್ತೆ ಕೆಲವು ಕಡೆ ಒಂದೇ ಪುಟದಲ್ಲಿ (ಪುಟ ೨೭) ಏಕವಚನ ಮತ್ತು ಬಹುವಚನ ಎರಡು ಪ್ರಯೋಗಗಳೂ ಇವೆ. ಉದಾ : ಇವರು ಹೋಗಿದ್ದುದು ನಾರ್ವೆ ದೇಶ, ಈತ ತೇಲಿಕೊಂಡು ಹೊರಟ. ಇಂಥ ದೋಷಗಳು ಈ ಕೃತಿಯಲ್ಲಿ ಹೇರಳವಾಗಿವೆ.

ಮುಂದಿನ ಮುದ್ರಣದಲ್ಲಿ ಈ ದೋಷಗಳನ್ನು ಸರಿಪಡಿಸಿದರೆ ಇದು ಸ್ವಾಗತಾರ್ಹವಾದ ಕೃತಿಯಾಗುತ್ತದೆ.

* * *

ನೀನು ಬೇಕು (ಅನುವಾದಿತ ಕಾದಂಬರಿ) ಮೂಲ ಲೇಖಕರು : ಕೊಮ್ಮೂರಿ ಸಾಂಬಶಿವರಾವ್, ಅನುವಾದ : ಶೋಭಾಶಂಕರ್, ಪ್ರಕಾಶಕರು : ಸುದರ್ಶನ ಪ್ರಕಾಶನ, ತಾರಾನಿವಾಸ, ತಿಪಟೂರು. ಪುಟ : ೧೯೪, ಬೆಲೆ : ರೂ. ೨-೫೦

ನಮ್ಮ ಕೃತಿಗಳನ್ನು ಮತ್ತೊಂದು ಭಾಷೆಗೆ ಅನುವಾದ ಮಾಡುವುದಾದರೆ ಹಾಗೆಯೆ ಮತ್ತೊಂದು ಭಾಷೆಯ ಕೃತಿಗಳನ್ನು ನಮ್ಮ ಭಂಡಾರಕ್ಕೆ ಸೇರಿಸುವ ಪ್ರಯತ್ನ ನಡೆಯುವುದಾದರೆ, ಆಯಾ ಭಾಷೆಯ ಶ್ರೇಷ್ಠ ಕೃತಿಗಳನ್ನು ಆರಿಸುವುದು ಅನುವಾದಕರ ಹಾಗೂ ಪ್ರಕಾಶಕರ ಮುಖ್ಯ ಹೊಣೆಗಾರಿಕೆಯಾಗಿದೆ.

ಪ್ರಸ್ತುತ ಪೀಠಿಕೆ ಈ ಕಾದಂಬರಿಗೆ ಸಂಬಂಧಪಟ್ಟದ್ದು. ಇಂಥ ಅಗ್ಗದ ಕಾದಂಬರಿಗಳು ನಮ್ಮಲ್ಲಿ ಹೇರಳವಾಗಿವೆ. ಮಾರುಕಟ್ಟೆಯಲ್ಲಿ ತುಂಬಿಹೋಗಿವೆ. ಹೀಗಿರುವಾಗ ಮನಸೋಯಿಚ್ಛೆ ಮೆರೆಯುವ, ಅತಿ ಕಾಮುಕತನವನ್ನು ಚಿತ್ರಿಸುವ ಪಾತ್ರಗಳಿಂದೊಡಗೂಡಿದ ಇಂಥ ಕೃತಿಗಳನ್ನು ಬೇರೆ ಭಾಷೆಯಿಂದ ತರುವುದಾದರೂ ಯಾಕೆ?

ಈ ಕಾದಂಬರಿ, ಮದುವೆಗೆ ಮೊದಲು ಒಬ್ಬನನ್ನು ಪ್ರೇಮಿಸಿ ಬೇರೊಬ್ಬನನ್ನು ಮದುವೆಯಾಗಿ, ಏಳು ವರ್ಷಗಳು ಕಳೆದ ಮೇಲೆ ಮತ್ತೆ ಮೊದಲಿನ ಪ್ರೇಮಿಯೊಡನೆ ಕಲೆತು ಚೆಲ್ಲಾಟವಾಡುವ ಒಂದು ಹೆಣ್ಣಿನ ಕತೆ. ಆತನ ಮನೆಯಲ್ಲಿಯೂ ಎಲ್ಲರೂ ಸ್ವೇಚ್ಛಾಚಾರಿಗಳೇ. ತಮ್ಮ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾದ. ತಂಗಿ ಮುಸಲ್ಮಾನನನ್ನು, ಭಾವೈಕ್ಯ.

ಇಷ್ಟೇ ಅಲ್ಲ. ಕತೆ ಇನ್ನೂ ಮುಂದಕ್ಕೆ ಸಾಗುತ್ತದೆ. ಪರಪುರುಷನೊಂದಿಗೆ ತನ್ನ ಪತ್ನಿ ಲಲ್ಲೆಯಾಡುವುದನ್ನು ತಿಳಿದ ಮೇಲೂ, ಆಕೆ ಅವನೊಂದಿಗೇ ಬಾಳುವೆ ನಡಸುತ್ತೇನೆ ಎಂದು ಸಾರಿದಾಗ, ಈತ ಆಕೆಯ ತಪ್ಪನ್ನು ಮನ್ನಿಸಲು ಮುಂದಾಗುತ್ತಾನೆ. ಆರು ತಿಂಗಳು ಅವಧಿಯನ್ನು ನೀಡಿ ಆವಳೊಂದಿಗೆ ವಿಹಾರ ಹೊರಡುತ್ತಾನೆ.

'ಲೈಂಗಿಕ ನೀತಿಯನ್ನು ನಿರೂಪಿಸಿ' ಹಾಗೆಯೆ 'ಲೈಂಗಿಕ ಅತೃಪ್ತಿಯ ಒಂದು ಮುಖವನ್ನು' ಈ ಕಾದಂಬರಿ ಚಿತ್ರಿಸುತ್ತದೆಂದು ಪ್ರಕಾಶಕರು ಹೇಳಿಕೊಂಡಿದ್ದಾರೆ. ಕೊನೆಯ ಪುಟದಲ್ಲಿ 'ಬರಲಿರುವ ಕೊಮ್ಮೂರಿಯವರ ಕಾದಂಬರಿಗಳು' ಎನ್ನುವಲ್ಲಿ ಐದು ಕೃತಿಗಳ ಹೆಸರು ಇದೆ. ಅದರ ಕೆಳಗೆ 'ಇನ್ನೂ ಬಹಳ ಇವೆ' ಎನ್ನುವ ವಾಕ್ಯವೂ ಇದೆ. ಪ್ರಸ್ತುತ ಕೃತಿ ಒಂದೇ ಮುಖವನ್ನು ಚಿತ್ರಿಸಿರುವಾಗ, ಇನ್ನು ಕೊಮ್ಮೂರಿಯವರ ಬರಲಿರುವ ಕೃತಿಗಳು ಲೈಂಗಿಕ ಅತೃಪ್ತಿಯ ನಾನಾ ನೀತಿಗಳನ್ನೂ ನಾನಾ ಮುಖಗಳನ್ನೂ ಚಿತ್ರಿಸುತ್ತವೇನೊ ಕಾದುನೋಡಬೇಕಾಗಿದೆ.

**ಶೇಷನಾರಾಯಣ**

**ಸಾಕ್ಷಿ** (ಕವನ ಸಂಗ್ರಹ) ಲೇಖಕ+ಪ್ರಕಾಶಕರು: ಕೆ. ವಿರೂಪಾಕ್ಷಗೌಡ, ಶ್ರೀ ಕೊಟ್ಟೂರೇಶ್ವರ ಪ್ರಕಾಶನ, ಹಗರಿ ಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ. ಕ್ರೌನ್ ೧/೮, ಪುಟ: ೬೦, ಬೆಲೆ: ರೂ. ೧-೦೦.

ಈ ಸಂಗ್ರಹದಲ್ಲಿ ಇಪ್ಪತ್ತೆಂಟು ಕವನಗಳನ್ನು ಕೊಡಲಾಗಿದೆ. ಇದರಲ್ಲಿ ಮೂರು ಜನಪದ ಗೀತಗಳು, ಎಂಟು ಪುಟಗಳಲ್ಲಿ ವಿವಿಧ ವಿಷಯಗಳನ್ನುಳ್ಳ ಚುಟುಕಗಳಿವೆ. ರಚನೆಯಲ್ಲಿ ವಸ್ತುವಿನಲ್ಲಿ ವಿವಿಧತೆಯಿದೆ. ಸಮಕಾಲೀನ ಜನ ಸಾಮಾನ್ಯರ ಜೀವನದ ಚಿತ್ರಣ, ರಸಮಯ ಭಾವನೆಗಳ ಪ್ರಕಟೀಕರಣ–ಇಂಥವನ್ನಿಲ್ಲಿ ಕಾಣಬಹುದು. ಕವಿ ಭಾವನೆಯಲ್ಲಿ ಶುಚಿ–ರುಚಿಗಳಿವೆ, ಪ್ರೌಢಿಮೆಯ ಪ್ರದರ್ಶನವಿಲ್ಲ, ಭಾಷೆಯಲ್ಲಿ ಅಷ್ಟೊಂದು ಶುಚಿತ್ವವಿಲ್ಲ. ಪಟ್ಟಣಿಗರು ಆಡುವ ಇಂಗ್ಲಿಷ್ ಬೆರೆತ ಕನ್ನಡವಿದೆಯೆನ್ನಬಹುದು. ಕವಿಯ ಕವನವೆಂಬುದು ಸಾಕ್ಷಿಯಂತೆ—

ಸಾಲದ ಪತ್ರಕೆ ಸಾಕ್ಷಿ ಹಾಕಿದೊಲು
ನಮ್ಮ ಕವನಗಳು ನಿತ್ಯ
ಅವರು ಕೊಟ್ಟರು ನೀವು ಪಡೆದಿರಿ
ಪತ್ರ ಹುಟ್ಟಿದುದು ಸತ್ಯ

ಕವಿ ಸುಮ್ಮನೆ ಇರಲಾರ, ಭಾವನೆ ಮೂಡಿದಾಗ ಬರೆವುದೇ ಅವನ ಕೆಲಸ—

ಕ್ರಿಯೆಯ ಮೂಲ ನಮ್ಮಯ ಕವನಕೆ
ಕಂಡರೆ ಬರೆವುದು ರೂಢಿ
ಬರೆಯದ ಹೊರತು ನೆಮ್ಮದಿಯಿಲ್ಲ
ಗರ್ಭಿಣಿ ಹಡೆಯುವ ಮೋಡಿ

ಇಂತಹ ಕೆಲವು ಕವನಗಳ ನುಡಿ, ಕವಿಯ ಅಂತಸ್ಸತ್ವವನ್ನು ನುಡಿಯುತ್ತದೆ.

ಕವನಗಳನ್ನು ಬರೆದ ಮೇಲೆ, ಸ್ವತಃ ಪ್ರಕಾಶನವನ್ನೂ ಕೈಗೊಂಡುದು ಲೇಖಕರ ಅಭಿನಂದನಾರ್ಹ ಸಾಹಸ. ಭಾವನೆಗಳ ಆಳ ಹರಹುಗಳಲ್ಲಿ, ಲಯಬದ್ಧ ರಚನೆಯಲ್ಲಿ, ಭಾಷೆಯ ಶುದ್ಧ ಪ್ರಯೋಗದಲ್ಲಿ, ಈ ಲೇಖಕರ ಲೇಖನ ಶಕ್ತಿ ಇನ್ನಷ್ಟು ಪಳಗಲಿ – ಎಂಬುದೇ ನಮ್ಮ ಆಶಯ.

* * *

**ಶಿವಲಿಂಗ ಚಾರಿತ್ರ**: ಸಂ. ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು ಪ್ರಕಾಶನ: ಶ್ರೀ ಶೈಲ ನಿಡುಮಾಮಿಡಿ ಗ್ರಂಥ ಭಂಡಾರ, ನಂ. ೪೯, ಹ. ಬ. ಸಮಾಜ ರಸ್ತೆ, ಬಸವನಗುಡಿ, ಬೆಂಗಳೂರು–೪. ಕ್ರೌನ್ ೮/೧ ಪುಟ: ೪೨+೩೦, ಬೆಲೆ: ೦–೭೫,

ಶ್ರೀ ಶೈಲ ಜಗದ್ಗುರು ಪೀಠಕ್ಕೆ ಸಂಬಂಧಿಸಿದ ಕವಿಗಳಲ್ಲೊಬ್ಬರಾದ 'ಶಾಂತವೀರ ದೇಶಿಕ'ನಿಂದ ವಿರಚಿತವಾದ

ಚಿಕ್ಕ ಚಂಪೂಕಾವ್ಯವಿದು. ಈ ಕವಿಯ ಇತರ ಗ್ರಂಥಗಳು-ಸೌಂದರೇಶ್ವರ ಯಕ್ಷಗಾನ, ಶಿವಗಣ ಚಾರಿತ್ರ, ಶಿವಮಹತ್ವಸಾರ, ಶಿಖಾಮಣಿ ಸಂಗ್ರಹ ಶತಕ, ಗಿರಿಜಾದೇವೀ ಸಂಕೀರ್ತನ-ಎಂಬಿವು. ಈ ಕವಿಗೆ ಪರಕವಿ ಗಜೇಂದ್ರ ಕಂಠೀರವ, ಶಿವಕವಿ ಭೃತ್ಯ-ಎಂಬ ಬಿರುದುಗಳಿದ್ದುವು. ಕವಿಯ ಕಾಲ ಕ್ರಿ. ಶ. ೧೬೫೦ ಎಂದು ವಿವರಿಸಲಾಗಿದೆ. ಈ ಕವಿಯ ಪ್ರಪಿತಾಮಹನು ಪಂಡಿತಾರಾಧ್ಯವಂಶದ ಗುರುವರ್ಯ ಶಿವಲಿಂಗಾರ್ಯನು. ಈತನ ಮಗ ವೀರಣಾರ್ಯನು. ಅವನ ವಧು ನಂಜಾಂಬಿಕೆಯಲ್ಲಿ ಜನಿಸಿದವನು ಚೆನ್ನವೀರದೇವನು. ಚೆನ್ನವೀರನ ಮಡದಿ ಗಿರಿಜಾಂಬಿಕೆಯಲ್ಲಿ ಹುಟ್ಟಿದವನೇ ಈ ಕಾವ್ಯಕರ್ತೃವಾದ ಶಾಂತವೀರನು. ಈ ಶಿವಲಿಂಗಾಚಾರ್ಯ - ವೀರಣಾರ್ಯ - ಚೆನ್ನವೀರಾಚಾರ್ಯರು ತಮ್ಮ ಜೀವನವನ್ನು ಶಿಷ್ಯವರ್ಗದ ಧಾರ್ಮಿಕ ಸಾಂಸ್ಕೃತಿಕ ಪ್ರಜ್ಞೆಯ ವಿಕಾಸಕ್ಕಾಗಿ ಸವೆಯಿಸಿಡುದೇ ಈ ಕಾವ್ಯವಸ್ತು.

ಈ ಕಾವ್ಯದಲ್ಲಿ ಮೂರು ಅಧ್ಯಾಯಗಳಿವೆ. ಒಟ್ಟು ೧೨೮ ಪದ್ಯಗಳಿವೆ. ಕಂದ-ವೃತ್ತಗಳು-ವೃತ್ತಗಳಲ್ಲಿ ಖ್ಯಾತ ಕರ್ಣಾಟಕಗಳಲ್ಲದೆ, ದೋಧಕ-ತೋಟಕ-ಮಲ್ಲಿಕಾ ಮಾಲೆ ಮುಂತಾದವೂ ಸಮಾವೇಶಗೊಂಡಿವೆ. ಸಂಪಾದಕರ ಪೀಠಿಕೆಯೂ ಶ್ರೀ ಜ. ಚ. ನಿ. ಯವರು ಬರೆದಿರುವ ಕವಿ ಕಾವ್ಯ ಭಾವ ವಿವರಣೆಯೂ ಪ್ರಾಸ್ತಾವಿಕ ವಿಮರ್ಶೆ-ವಿವರಣೆಗಳಿಂದ ಕಾವ್ಯ ರಸಸ್ವಾದನೆಗೆ ದಿಗ್ದರ್ಶನ ಮಾಡುತ್ತಿವೆ. ಕವಿ ಕಾಲ ನಿರ್ಣಯದಲ್ಲಿ ಸಂದೇಹಕ್ಕೆಡೆಯಿದೆ.

ಈ ಕವಿಯ ಜನಕನಾದ ಚೆನ್ನವೀರಾರ್ಯನು ಹುಣಸೂರಿನ ನಂಜರಾಜೇಂದ್ರನ ಅರಮನೆಗೆ ಬಂದು ಅವನಿಂದ ಸತ್ಕೃತನಾದ ಸಂಗತಿ ಈ ಕಾವ್ಯದಲ್ಲಿದೆ. ಹುಣಸೂರಿನ ಶಾಸನ ಪ್ರಕಾರ (E.P C. Vol. I) ನಂಜರಾಜನ ಕಾಲ ಕ್ರಿ. ಶ. ೧೫೦೨-೧೫೩೩. ಈತನು ಹುಣಸೂರನ್ನು ಬಿಟ್ಟು ನಂಜರಾಜ ಪಟ್ಟಣವನ್ನು (ಈಗಿನ ಕೊಡಗು ಜಿಲ್ಲೆಯಲ್ಲಿ) ಕಟ್ಟಿಸಿ, ಅಲ್ಲಿ ಆಳಿದನೆಂತಲೂ ಆತನ ವಂಶದವರೂ ಮತ್ತೆ ಅಲ್ಲೇ ಆಳಿದರೆಂತಲೂ ತಿಳಿದು ಬರುತ್ತದೆ. ನಂಜರಾಜನು ಹುಣಸೂರನ್ನು ಯಾವಾಗ ಬಿಟ್ಟನೋ ಸರಿಯಾಗಿ ತಿಳಿಯಬೇಕಷ್ಟೆ. ಅಂತೂ ಸುಮಾರು ೧೫೨೦ ಎಂದಿಟ್ಟುಕೊಳ್ಳಬಹುದು. ಚೆನ್ನವೀರನ ಕಾಲವು ಸುಮಾರು ಅದೇ ಇರಬೇಕಾಗುತ್ತದೆ. ಚೆನ್ನವೀರನು ನಂಜರಾಜನನ್ನು ಬೀಳ್ಕೊಟ್ಟು ಹೋದನಂತರ ಶಾಂತವೀರ ದೇಶಿಕನು ಹುಟ್ಟಿದನೆಂದು ಹೇಳಿರುವುದರಿಂದ ಈ ಕಾವ್ಯವನ್ನು ಬರೆದ ಕವಿಯ ಕಾಲ ಸುಮಾರು ೧೫೫೦ ಎಂದಿಟ್ಟುಕೊಳ್ಳಬಹುದೆಂದು ತೋರುತ್ತದೆ. ಈ ಗಣನೆಯ ಪ್ರಕಾರ ಈ ಕವಿಯ ಕಾಲ ಒಂದು ನೂರು ವರ್ಷ ಹಿಂದೆ ಹೋಗುತ್ತದೆ. ಆದರೆ ಕನ್ನಡ ಕವಿಚರಿತೆ ಸಂಪುಟ ೩ರಲ್ಲಿ ಹೇಳಿದ ನಿರ್ಣಯಕ್ಕೆ ಇದು ಅಡ್ಡ ಬರುತ್ತದೆ.

ಹಿತಮಿತ ವರ್ಣನೆ, ಔಚಿತ್ಯ ಪ್ರಜ್ಞೆ, ಪದಪದ್ಯಗಳಲ್ಲಿ ಭಾವರಸಗಳನ್ನು ತುಂಬುವ ಜಾಣ್ಮೆ-ಇವು ಕವಿಯ ಕಾವ್ಯ ಶಕ್ತಿಯ ವೈಶಿಷ್ಟ್ಯಗಳು. "ಇದು ಕೇವಲ ಕಾವ್ಯವಲ್ಲ; ದಿವ್ಯಕಾವ್ಯ" ಹಳೆಯ ಬಂಧದಲ್ಲಿಯೂ ಹೊಸತನವನ್ನು ಕಂಡು ಜನರು ಇದನ್ನು ಮೆಚ್ಚುವುದರಲ್ಲಿ ಸಂದೇಹವಿಲ್ಲ.

* * *

**ಹರಕೆ:** (ಕವನಗಳು) ಲೇಖಕರು+ಪ್ರಕಾಶಕರು: ಮೈ. ಶ್ರೀ ಸಂಪತ್ ಕುಮಾರ್, "ಸಾಹಿತ್ಯ ಸುಧೆ", ನಂ. ಬಿ. ೨೧, ಬಿ. ಇ. ಎಲ್. ಕಾಲೋನಿ, ಜಾಲಹಳ್ಳಿ, ಬೆಂಗಳೂರು-೧೩. ಕ್ರೌನ್ ೮/೧, ಪುಟ ೪+೪೪, ಬೆಲೆ: ರೂ. ೧-೦೦.

ಸಣ್ಣ ಸಣ್ಣ ಭಾವನೆಗಳು ಆಗೊಮ್ಮೆ ಈಗೊಮ್ಮೆ ಮೂಡಿ ಬರುವ ಸನ್ನಿವೇಶಗಳು ಎಲ್ಲರಿಗೂ ಒದಗುತ್ತವೆ. ಸಂದರ್ಭೋಚಿತವಾಗಿ ಮಾತಾಡುವಲ್ಲಿ, ಮಾತಿಗೆ ಮಾತು ಕೂಡುವಲ್ಲಿ, ಬುದ್ಧಿ ಮನಃ ಪರಿಣಾಮಗಳಿಂದ ವಿಚಾರಗರ್ಭಿತ ವಾಕ್ಯಗಳು ಹೊರ ಹೊಮ್ಮುತ್ತವೆ. ಅವು ಸತ್ವಯುತವಾಗಿ ಬಂದು ಸತ್ಯ-ಸೌಂದರ್ಯ ರೂಪಗಳಿಂದ ಕವನಗಳೆನಿಸುವುದುಂಟು-ಎಂಬುದನ್ನು ಈ ಕವನಸಂಕಲನದ ಉದಾಹರಣದ ಸಂದರ್ಭದಲ್ಲಿ ತಿಳಿಸಬಹುದು.

ಈ ಸಂಕಲನದಲ್ಲಿ ಇಪ್ಪತ್ತೆರಡು ಶಿರೋನಾಮಗಳ ಕವನಗಳಿವೆ. ಒಂದೊಂದು ಮಾತೂ ಇಲ್ಲಿ ಕವನವೆನಿಸಿದೆ. ಪಾದ ಪರಿಮಿತಿ ಪದ್ಯ ಲಕ್ಷಣವೆಂಬುದು ಪಾದಗಳು. ಕೆಲವು ಶಬ್ದಗಳ ಕೂಟವೆಂಬುದು ಇಲ್ಲಿನ ಕವನಗಳಿಗೆ ಅನ್ವಿತವಾಗುತ್ತದೆ. ಈ ಕವನಗಳಲ್ಲಿ ನುಡಿಯಿದೆ, ನಡೆಯಿಲ್ಲ. ಶಬ್ದ-ಸಂಧಿ-ವಾಕ್ಯ ದೋಷಗಳಿಂದ ಹರಕೆ ಅರಕೆಯಾಗಿದೆಯೆನ್ನದೆ ವಿಧಿಯಿಲ್ಲ. ಲೇಖಕರ ಕೃತಜ್ಞತೆಯ ಮೊದಲ ವಾಕ್ಯವನ್ನೂ "ಅರ್ಪಣೆ" ಎಂಬುದರ ಕೆಳಗಿನ ವಾಕ್ಯವನ್ನೂ ನೋಡಬಹುದು. ಇನ್ನು ಕವನಗಳಲ್ಲಿ ಒಲವೆ (ಒಲ್ಮೆ, ಒಲುಮೆ-ಸರಿ), ಚಿಗಿರು (ಚಿಗುರು-ಸರಿ), ಮನಃ ತಾಪ (ಮನಸ್ತಾಪ-ಸರಿ), ಬೀರುತ್ತರುಷದಿ (ಬೀರುತ್ತ ಹರುಷದಿ - ಸರಿ), ಮರತರೆ (ಮರೆತರೆ - ಸರಿ) - ಇಂಥ ತಪ್ಪುಗಳಲ್ಲಿ ಕೆಲವು. ಭಾಷೆ-ಭಾವ ಸಂಪತ್ತುಗಳಿಂದ ಪ್ರಬುದ್ಧವಾಗಿ, ಶುದ್ಧವಾಗಿ, ಲಯಬದ್ಧವಾಗಿ ಸೊಗಸಾಗಿ ಈ ಲೇಖಕರ ಮುಂದಿನ ಕವನಗಳು ಪ್ರಕಟವಾಗಲೆಂದು ಹಾರೈಕೆ.

**ಟಿ. ಕೇಶವಭಟ್ಟ**



# ಕನ್ನಡ ಸಾಹಿತ್ಯ ಪರಿಷತ್ತಿನ ಸಕಲ ಸದಸ್ಯ ಸಭೆಯ ಐವತ್ತೂರನೆಯ ವಾರ್ಷಿಕಾಧಿವೇಶನ

ಕನ್ನಡ ಸಾಹಿತ್ಯ ಪರಿಷತ್ತಿನ ಐವತ್ತೂರನೆಯ ಸಕಲ ಸದಸ್ಯರ ವಾರ್ಷಿಕಾಧಿವೇಶನವು ದಿನಾಂಕ ೧೧-೫-೧೯೬೯ ರಂದು ಭಾನುವಾರ ಬೆಳಗ್ಗೆ ೯-೩೦ ಗಂಟೆಗೆ ಸಾಹಿತ್ಯ ಪರಿಷನ್ಮಂದಿರದಲ್ಲಿ ಸೇರಿದ್ದಿತು. ಸಭೆಗೆ ದಾಖಲೆ ಪುಸ್ತಕದ ಪ್ರಕಾರ ೨೩೮ ಮಂದಿ ಸದಸ್ಯರು ಆಗಮಿಸಿದ್ದರು. ದಾಖಲೆ ಪುಸ್ತಕದಲ್ಲಿ ರುಜು ಮಾಡದ ಅನೇಕ ಸದಸ್ಯರು ಹಾಜರಿದ್ದು ಪರಿಷತ್ತಿನ ಸಭಾಭವನ ತುಂಬಿತ್ತು. ಇತ್ತೀಚೆಗೆ ಇಷ್ಟು ಹೆಚ್ಚು ಸಂಖ್ಯೆಯಲ್ಲಿ ಸದಸ್ಯರು ಬಂದಿದ್ದುದು ಇದೇ ಮೊದಲು.

ಕಾರ್ಯದರ್ಶಿಗಳು ಅನಾರೋಗ್ಯದ ಕಾರಣ ಹಾಜರಿರಲಿಲ್ಲವಾದ್ದರಿಂದ ಗೌರವ ಕೋಶಾಧಿಕಾರಿಗಳಾದ ಶ್ರೀ ಎನ್. ವರದರಾಜನ್ ಅವರು ಸಭೆ ಪ್ರಾರಂಭವಾಗಿರುವುದೆಂದು ಸಾರಿ, ಶ್ರೀ ಜಿ. ವೆಂಕಟಸುಬ್ಬಯ್ಯನವರು ಅಧ್ಯಕ್ಷರಾಗಿರಬೇಕೆಂದು ಪ್ರಾರ್ಥಿಸಿ, ತಿಳಿವಳಿಕೆ ಪತ್ರವನ್ನು ಓದಿದರು. ಶ್ರೀ ಜಿ. ವೆಂಕಟಸುಬ್ಬಯ್ಯನವರು ಎಲ್ಲ ಸದಸ್ಯರಿಗೂ ಸ್ವಾಗತವನ್ನು ಕೋರಿ, ಅಖಿಲ ಕರ್ಣಾಟಕ ವ್ಯಾಪ್ತಿಯುಳ್ಳ ನಿಬಂಧನೆಯಿಂದ ಕನ್ನಡ ಜನತೆಯ ದೃಷ್ಟಿ ಪರಿಷತ್ತಿನ ಕಡೆ ಕೇಂದ್ರೀಕೃತವಾಗಿರುವುದೆಂದು ತಿಳಿಸಿ, ಕೋಪತಾಪಗಳಿಗೆ ಉದ್ವೇಗಕ್ಕೆ ಎಡೆಗೊಡದೆ ೧೯೬೮ರ ವರದಿಯ ಬಗ್ಗೆ ಸಲಹೆ ಸೂಚನೆಗಳನ್ನು ಕೊಡಬೇಕೆಂದು ಪ್ರಾರ್ಥಿಸಿದರು ಮತ್ತು ಕಾರ್ಯಾರಂಭಕ್ಕೆ ಮೊದಲು ರಾಷ್ಟ್ರಾಧ್ಯಕ್ಷರಾದ ದಿವಂಗತ ಜಾಕೀರ್‌ಹುಸೇನ್ ಮತ್ತು ಶ್ರೀ ಆರ್. ಎಲ್. ನರಸಿಂಹಯ್ಯ ಅವರ ಬಗ್ಗೆ ಸಭೆ ಮೌನದಿಂದೆದ್ದು ನಿಂತು ಸಂತಾಪವನ್ನು ವ್ಯಕ್ತಪಡಿಸಿತು. ಅನಂತರ ಸದಸ್ಯರ ಭಾಷಣಗಳು ಪ್ರಾರಂಭವಾದುವು.

ವಿಷಯಸೂಚಿಯಲ್ಲಿ ಅಧ್ಯಕ್ಷರ ಚುನಾವಣೆ ಕಡೆಯ ವಿಷಯವಾಗಿದ್ದರೂ ಒಂದೇ ಕಾಲದಲ್ಲಿ ಸಭೆಯ ನಡವಳಿಕೆಗಳೂ ಮತಪತ್ರಗಳ ಎಣಿಕೆಯೂ ನಡೆಯುವಂತೆ ಸಭೆ ನಾಲ್ಕು ಮಂದಿ ಮತಗಣಕರನ್ನು ಆರಿಸಬೇಕೆಂದು ಕೇಳಲು ಅದರಂತೆ ಶ್ರೀಗಳಾದ ರಾಮನರಸಯ್ಯ, ಸತ್ಯಪಾಲ್, ಚೌಡಪ್ಪರೆಡ್ಡಿ ಮತ್ತು ಸತ್ಯನಾರಾಯಣ ಇವರನ್ನು ಮತಗಣಕರನ್ನಾಗಿ ಸಭೆ ಆರಿಸಿತು. ಇವರುಗಳು ಶ್ರೀ ಜಿ. ನಾರಾಯಣ ಅವರ ಪರವಾಗಿ ಗೊತ್ತಾಗಿದ್ದ ಶ್ರೀಗಳಾದ ಆರ್. ಎಚ್. ರಾಜು ಮತ್ತು ನಾಗರಾಜರಾವ್, ಹಾಗೆಯೇ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಪರವಾಗಿ ಶ್ರೀಗಳಾದ ಮ. ನ. ಮೂರ್ತಿ ಮತ್ತು ನಂಜುಂಡಯ್ಯ – ಈ ಪ್ರತಿನಿಧಿಗಳೊಡನೆ ಚುನಾವಣಾಧಿಕಾರಿಗಳಾದ ಶ್ರೀ ಜಿ. ವಿದ್ಯಾರಾಜ್ ಅವರ ನೇತೃತ್ವದಲ್ಲಿ ಸಭೆಯ ಅನುಮತಿಯಿಂದ ಪರಿಷತ್ತಿನ ಬೇರೊಂದು ಕೊಟಡಿಯಲ್ಲಿ ಮತಗಳ ಎಣಿಕೆಯ ಕಾರ್ಯವನ್ನು ಪ್ರಾರಂಭಿಸಿದರು. ಚುನಾವಣಾಧಿಕಾರಿಗಳ ಸೂಚನೆಯಂತೆ ಚುನಾವಣೆಯ ಫಲಿತಾಂಶವನ್ನು ಎಣಿಕೆ ಮುಗಿದ ಮೇಲೆ ಪ್ರಕಟಿಸಲು ಸಭೆಯ ಅನುಮತಿ ಪಡೆಯಲಾಯಿತು.

ಸದಸ್ಯರು ತುಂಬಾ ಸಹಕಾರ ಮನೋಭಾವದಿಂದ ಪರಿಷತ್ತಿನ ಕುಂದುಕೊರತೆಗಳ ಬಗ್ಗೆ ಮಾತನಾಡಿದರು. ವಾರ್ಷಿಕ ಸಭೆಯಲ್ಲಿ ಕಾರ್ಯಸಮಿತಿ ಸದಸ್ಯರು ಹಾಜರಿರಬೇಕು. ಅಚ್ಚುಕೂಟದಿಂದ ಪರಿಷತ್ತಿಗೆ ನಷ್ಟವಾಗದಂತೆ ವ್ಯವಸ್ಥೆ ಮಾಡಬೇಕು, ವಸಂತ ಸಾಹಿತ್ಯೋತ್ಸವ ಹೆಚ್ಚು ವಿಜೃಂಭಣೆಯಿಂದ ನಡೆಯಬೇಕು, ಪುಸ್ತಕ ಭಂಡಾರ ಮತ್ತು ವಾಚನಾಲಯದ ವ್ಯವಸ್ಥೆ ತುಂಬಾ ಅಸಮರ್ಪಕ ಅದನ್ನು ಬಹಳ ಉತ್ತಮಪಡಿಸಬೇಕು, ಕಾರ್ಪೊರೇಷನ್ನಿನವರು ಹೆಚ್ಚು ಧನಸಹಾಯ ಕೊಡುವಂತೆ ಕೇಳಬೇಕು, ರತ್ನ ಪರೀಕ್ಷೆಗೆ ಸರ್ಕಾರದ ಮನ್ನಣೆ ದೊರೆಯುವಂತೆ ಮಾಡಬೇಕು, ನಿಘಂಟಿನ ಸಂಚಿಕೆಗಳು ಬೇಗ ಬೇಗ ಪ್ರಕಟವಾಗುವ ವ್ಯವಸ್ಥೆ ಮಾಡಬೇಕು, ಉಚಿತವಾಗಿ ಬಂದ ಪುಸ್ತಕಗಳ ಬೆಲೆಯನ್ನು 'ಆಸ್ತಿ'ಯಲ್ಲಿ ಸೇರಿಸಬೇಕು, ವಸೂಲಾಗಲಾರದ ಬಾಕಿಗಳನ್ನು ಲೆಕ್ಕದಿಂದ ತೆಗೆದುಹಾಕಬೇಕು, ರಂಗಮಂದಿರದಿಂದ ಬರುವ ಹಣ ಅದರ ಅಭಿವೃದ್ಧಿಗೇ ವಿನಿಯೋಗವಾಗಬೇಕು, ಸರ್ಕಾರದಿಂದ ಬರುವ ಸಹಾಯ ಧನ ಒಂದು ಲಕ್ಷಕ್ಕೆ ಏರುವಂತೆ ಮಾಡಬೇಕು, 'ನುಡಿ' ಪತ್ರಿಕೆಗೆ ಸಾಕಾದಷ್ಟು ಜಾಹೀರಾತುಗಳನ್ನು ಒದಗಿಸಿ ಅದು ತನ್ನ ಕಾಲ ಮೇಲೆ ತಾನು ನಿಲ್ಲುವಂತೆ ಮಾಡಬೇಕು, ಪರಿಷತ್ತಿನ ಪ್ರಕಟನೆಗಳು ಹೆಚ್ಚಾಗಬೇಕು, ಮುಗಿದ ಪುಸ್ತಕ



ನೂತನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರಿಗೆ ಸ್ವಾಗತ



ಮಾಜೀ ಅಧ್ಯಕ್ಷರಾದ ಶ್ರೀ ಜಿ. ವೆಂಕಟಸುಬ್ಬಯ್ಯನವರಿಗೆ ಬೀಳ್ಕೊಡಿಗೆ



ನೂತನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರಿಗೆ ಅಭಿನಂದನೆಗಳನ್ನರ್ಪಿಸುತ್ತಿರುವುದು



ಚುನಾವಣಾಧಿಕಾರಿಗಳಾದ ಶ್ರೀ ಜಿ. ವಿದ್ಯಾರಾಜ್ ಅವರನ್ನು ಅಭಿನಂದಿಸುತ್ತಿರುವುದು

ಗಳ ಪುನರ್ಮುದ್ರಣವಾಗಬೇಕು, ಪರಿಷತ್ತಿನ ಪರೀಕ್ಷೆಗಳಿಗೆ ತರಗತಿಗಳನ್ನು ತೆರೆಯಬೇಕು, ಪರಿಷತ್ತಿಗೆ ಗುರುಸ್ಥಾನದ ಗೌರವ ಸಲ್ಲಬೇಕು, ತನ್ನ ಅಂತಃಶಕ್ತಿಯಿಂದ ಅದು ಸರ್ಕಾರಕ್ಕೂ ಸಲಹೆ ಕೊಟ್ಟು ಕನ್ನಡ ನುಡಿಯ ಬಳಕೆ ಅಭಿವೃದ್ಧಿಗೆ ಸಹಾಯಕವಾಗಬೇಕು, ಪ್ರಚಾರ ಕಾರ್ಯ ಹೆಚ್ಚಾಗಿ, ಕನ್ನಡೇತರರ ಪ್ರಭಾವ ಕುಗ್ಗುವಂತೆ ನಡೆಯಬೇಕು. ಸಾಹಿತ್ಯ ಗ್ರಂಥಗಳ ಸಾಹಿತಿಗಳ ಪರಿಚಯದ ಪುಟ್ಟ ಹೊತ್ತಿಗೆಗಳನ್ನು ಪ್ರಕಟಿಸಬೇಕು, ದತ್ತಿ ಉಪನ್ಯಾಸಗಳು ಪ್ರತಿಯೊಬ್ಬರದೂ ಆಗಬೇಕು, ರಾಜ್ಯೋತ್ಸವ ಇನ್ನೂ ಹೆಚ್ಚು ವಿಜೃಂಭಣೆಯಿಂದ ನಡೆಯಬೇಕು, ಪರಿಷತ್ತಿನ ಕಟ್ಟಡಕ್ಕೆ ಸುಣ್ಣಬಣ್ಣ ಬಳಿಸಿ ಅಂದವಾಗಿ ನಿರ್ಣಯ ತಂದರು. ಆದರೆ ಅಧ್ಯಕ್ಷರು ಇದಕ್ಕೆ ಒಪ್ಪಿಗೆ ಕೊಡಲಿಲ್ಲ.

ಕೋಶಾಧಿಕಾರಿಗಳು ಲೆಕ್ಕಪತ್ರಗಳ ಬಗ್ಗೆ ಸೂಕ್ತ ವಿವರಣೆ ನೀಡಿದ ನಂತರ ಶ್ರೀ ವೆಂಕಟಸುಬ್ಬಯ್ಯನವರು ತಾವು ಅಧ್ಯಕ್ಷರಾಗಿ ಚುನಾಯಿತರಾಗಿ ಬಂದಾಗ ಯಾವ ಯಾವ ಆಶೋತ್ತರಗಳನ್ನಿಟ್ಟುಕೊಂಡಿದ್ದರೆಂಬುದನ್ನೂ ಹಣದ ಅಭಾವ ಹಾಗೂ ಕಾರ್ಯಕರ್ತರ ಅಭಾವದಿಂದ ಮತ್ತು ಕೆಲವು ಸದಸ್ಯರ ಅಸಹಕಾರದಿಂದ ಅದು ಕಾರ್ಯಗತವಾಗಲಿಲ್ಲವೆಂಬುದನ್ನೂ ವಿವರಿಸಿ ದೀರ್ಘವಾಗಿ ಭಾಷಣ ಮಾಡಿ ಸದಸ್ಯರು ಪ್ರಸ್ತಾಪಿಸಿದ್ದ ಎಲ್ಲ ವಿಷಯಗಳಿಗೂ ಉತ್ತರಿಸಿದರು. ಅನಂತರ ೧೯೬೮ನೆಯ ವರದಿ ಮತ್ತು

## ಪರಿಷದಧ್ಯಕ್ಷರ ಚುನಾವಣೆ

ಬೇರೊಂದು ಕಡೆ ಚುನಾವಣೆಗಾಗಿ ಬಂದಿದ್ದ ಮತಪತ್ರಗಳನ್ನು ಚುನಾವಣಾಧಿಕಾರಿಗಳಾದ ಶ್ರೀ ಜಿ. ವಿದ್ಯಾರಾಜ್ ಅವರು ಉಮೇದುವಾರರ ಪ್ರತಿನಿಧಿಗಳ ಸಮ್ಮುಖದಲ್ಲಿ ಎಣಿಸಿ ಫಲಿತಾಂಶವನ್ನು ಪ್ರಕಟಿಸಿದರು. ಉಮೇದುವಾರರಾಗಿದ್ದ ಶ್ರೀ ಜಿ. ನಾರಾಯಣ ಅವರಿಗೆ ೧೭೯೦ ಮತಗಳೂ ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರಿಗೆ ೧೧೧೯ ಮತಗಳೂ ಮತ್ತು ಶ್ರೀ ಪಿ. ಎನ್. ರೆಡ್ಡಿ ಅವರಿಗೆ ೩ ಮತಗಳೂ ಬಂದಿದ್ದು ಶ್ರೀ ಜಿ. ನಾರಾಯಣ ಅವರು ಪರಿಷದಧ್ಯಕ್ಷಸ್ಥಾನಕ್ಕೆ ಚುನಾಯಿತರಾದರೆಂದು ಪ್ರಕಟಿಸಲಾಯಿತು.

ಒಟ್ಟು ೩೭೭೦ ಮತದಾರರಿಂದ ೨೯೬೨ ಮತಗಳು ಬಂದಿದ್ದು ಅವುಗಳಲ್ಲಿ ೩೦ ಮತಗಳು ಅನರ್ಹಗಳೆಂದು ತೀರ್ಮಾನಿಸಲಾಯಿತು.

ಸ್ವಚ್ಛವಾಗಿಡಬೇಕು. ಸದಸ್ಯತ್ವದ ಚಂದಾ ಹೆಚ್ಚಬೇಕು. ಉಪಸಮಿತಿಗಳ ಕಾರ್ಯವರದಿಯಾಗಬೇಕು-ಇವಲ್ಲದೆ ಲೆಕ್ಕಪತ್ರಗಳ ಬಗ್ಗೆ ಕೆಲವು ವಿವರಣೆಗಳನ್ನು ಕೇಳಿದರು. ಕೆಲವು ಸದಸ್ಯರು ಈ ಸಲದ ಚುನಾವಣೆಯಲ್ಲಿ ಕಾರ್ಯಸಮಿತಿ ನಿರ್ಣಯ ಗೊತ್ತಿದ್ದ ಉಮೇದುವಾರರು ಹೈ-ಕೋರ್ಟು ಸಿವಿಲ್‌ಕೋರ್ಟುಗಳಿಗೆ ಹೋಗಿ ಸಾಹಿತ್ಯ ಪರಿಷತ್ತಿನ ಘನತೆ ಗೌರವಗಳಿಗೆ ಧಕ್ಕೆ ಬರುವಂತೆ ನಡೆದುಕೊಂಡ ಸದಸ್ಯರನ್ನು ಪರಿಷತ್ತಿನ ೯ನೆಯ ನಿಬಂಧನೆಯ ಪ್ರಕಾರ ಪರಿಷತ್ತಿನ ಸದಸ್ಯತ್ವದಿಂದ ತೆಗೆದುಹಾಕಬೇಕೆಂದು ಲೆಕ್ಕ ಪರಿಶೋಧಕರು ಪರಿಶೀಲಿಸಿದ ಲೆಕ್ಕದ ಪಟ್ಟಿಗಳೂ ಸರ್ವಾನುಮತದಿಂದ ಅಂಗೀಕಾರವಾದುವು.

೧೯೬೯ನೆಯ ಸಾಲಿಗೂ ಶ್ರೀ ಡಿ. ಎಸ್. ರಂಗನಾಥ್ ಅವರೇ ಪರಿಷತ್ತಿನ ಲೆಕ್ಕಪತ್ರಗಳ ತನಿಖೆಗಾರರಾಗಿರಬೇಕೆಂದು ಸಭೆ ಸರ್ವಾನುಮತದಿಂದ ತೀರ್ಮಾನಿಸಿತು.

೧೯೬೯ನೆಯ ಆಯವ್ಯಯದ ಅಂದಾಜುಪಟ್ಟಿಯೂ ಸರ್ವಾನುಮತದಿಂದ ಅಂಗೀಕಾರವಾಯಿತು.

ನಿಯಮಾನುಸಾರವಾಗಿ ಸದಸ್ಯರು ಕಳುಹಿಸಿದ್ದ ಈ ಕೆಳಗಿನ ಎರಡು ಸೂಚನೆಗಳೂ ಸರ್ವಾನುಮತದಿಂದ ಅಂಗೀಕೃತವಾದುವು :

ತ. ;:

ಯ ಸಾಹಿತಿಗಳನ್ನು ಗುರುತಿಸಿ ಪ್ರತಿ ವರ್ಷವೂ ಬ.. ಸರ್ಕಾರ ಸನ್ಮಾನಿಸುವುದಕ್ಕಿಂತ ಮುಂಚೆ ಪರಿಷತ್ತು ಸನ್ಮಾನಿಸಬೇಕು.

ಸೂಚಕರು : ಶ್ರೀ ಶ್ರೀನಿವಾಸ ಉಡುಪ
ಅನುಮೋದಕರು : ಶ್ರೀ ವೆಂಕಟಗಿರಿ ಕಡೇಕಾರ್

(೨) "ಕನ್ನಡ ಸಾಹಿತ್ಯ ಪರಿಷತ್ತು ಕನ್ನಡೇತರರಿಗಾಗಿ ಕನ್ನಡದಲ್ಲಿ ಶ್ರೇಣಿಬದ್ಧವಾಗಿ ಪದವಿ ಮಟ್ಟದವರೆಗೆ ಪರೀಕ್ಷೆಗಳನ್ನು ನಡೆಯಿಸಿ ಅದಕ್ಕೆ ಸರಕಾರದ ಮನ್ನಣೆಯನ್ನು ಪಡೆಯತಕ್ಕದ್ದು.

ಸೂಚಕರು : ಮ. ಕೃ. ರಂಗರಾವ್
ಅನುಮೋದಕರು : ವಿ. ಕೆ. ನಂಜುಂಡಯ್ಯ

ಅನಂತರ ನಾಲ್ಕೂವರೆ ವರ್ಷಗಳ ಕಾಲ ಪರಿಷತ್ತಿನ ಕೆಲಸಗಳನ್ನು ಸಮರ್ಪಕವಾಗಿ ನಡೆಸಿಕೊಂಡು ಬಂದು, ಹಣದ ಮತ್ತು ಇತರ ಅಡಚಣೆಗಳನ್ನು ಸಾಮರ್ಥ್ಯದಿಂದ ಎದುರಿಸಿ, ನಿಘಂಟಿನ ಆರು ಸಂಚಿಕೆಗಳ ಪ್ರಕಟನೆಯನ್ನು ಮಾಡಿ, ಸರ್ಕಾರದ ಸಹಾಯದ್ರವ್ಯವನ್ನು ಹೆಚ್ಚಿಸಿಕೊಟ್ಟು ಸದಸ್ಯ ಸಂಪತ್ತನ್ನು ಹೆಚ್ಚಿಸಿ, ಪ್ರಚಾರಕಾರ್ಯವನ್ನು ನಡೆಸಿ ಪರಿಷತ್ತಿನ ಘನತೆಯನ್ನು ಹೆಚ್ಚಿಸಿರುವುದನ್ನು ಕುರಿತು ಶ್ರೀ ಎಸ್. ಶಂಕರಪ್ಪನವರು ಮಾತನಾಡಿ ಕೃತಜ್ಞತೆಯನ್ನು ಸಲ್ಲಿಸುವ ಈ ಕೆಳಗಿನ ನಿರ್ಣಯವನ್ನು ಮಂಡಿಸಿದರು. ಶ್ರೀ ವಸಂತರಾಜಯ್ಯನವರು ಆ ನಿರ್ಣಯವನ್ನು ಅನುಮೋದಿಸಿದರು :

**ನಿರ್ಣಯ :**

(೧) ಪರಿಷತ್ತಿನ ಆರ್ಥಿಕ ಅಭಿವೃದ್ಧಿಗಾಗಿ ಹಲವು ಯೋಜನೆಗಳನ್ನು ಕಾರ್ಯಗತಗೊಳಿಸಿಯೂ ಸರ್ಕಾರದ ವಾರ್ಷಿಕ ಸಹಾಯ ದ್ರವ್ಯವನ್ನು ೨೫,೦೦೦ ರೂಪಾಯಿಗಳಿಗೆ ಹೆಚ್ಚಿಸಿಯೂ ಪರಿಷತ್ತಿನ ಆಡಳಿತವನ್ನು ಸುವ್ಯವಸ್ಥಿಗೊಳಿಸುವಲ್ಲಿ ಅಧ್ಯಕ್ಷ ಪ್ರೊ|| ಜಿ. ವೆಂಕಟಸುಬ್ಬಯ್ಯನವರು ತುಂಬ ಪರಿಶ್ರಮಿಸಿ ಯಶಸ್ಸು ಪಡೆದಿದ್ದಾರೆ. ಅದರಂತೆ ಕನ್ನಡ-ಕನ್ನಡ ನಿಘಂಟಿನ ಪ್ರಗತಿ, ಕನ್ನಡ ನುಡಿ, ಪರಿಷತ್ಪತ್ರಿಕೆ-ಅವುಗಳ ವಿಶಿಷ್ಟ ಸಂಚಿಕೆಗಳು ಕವಿ-ಕೃತಿ ಉಪನ್ಯಾಸ ಮಾಲೆ ಇತ್ಯಾದಿ ಕಾರ್ಯಕ್ರಮಗಳಿಂದ ಪರಿಷತ್ತಿನ ಕಾರ್ಯಕ್ರಮಗಳಿಗೆ ಒಂದು ಹೊಸ ಸ್ವರೂಪವನ್ನು ತಂದುಕೊಟ್ಟಿದ್ದಾರೆ. ಇದಕ್ಕೆ ಕಾರಣ ಕರ್ತರಾದ ಅಧ್ಯಕ್ಷರಿಗೂ ಕಾರ್ಯದರ್ಶಿ ಕೋಶಾಧಿಕಾರಿಗಳಿಗೂ ಕಾರ್ಯಕಾರಿ ಸಮಿತಿಯ ಸದಸ್ಯರಿಗೂ ಈ ಸಭೆಯು ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಸೂಚಕರು : ಎಸ್. ಶಂಕರಪ್ಪ
ಅನುಮೋದಕರು : ಎಸ್. ಬಿ. ವಸಂತರಾಜಯ್ಯ

ಸಭೆ ಕರತಾಡನಗಳೊಡನೆ ಸಂತೋಷದಿಂದ ಸರ್ವಾನುಮತದಿಂದ ಅಂಗೀಕರಿಸಿತು.

ರಾಷ್ಟ್ರಗೀತೆಯಾದನಂತರ ಸಭೆ ಮುಕ್ತಾಯವಾಯಿತು.

## ಪರಿಷತ್ತಿನ ಆಶ್ರಯದಲ್ಲಿ ನಡೆದ ಸಭೆಗಳು

ದಿನಾಂಕ ೯-೨-೧೯೬೭ರಂದು ರಾಜಾಜಿನಗರದ ವಿದ್ಯಾವರ್ಧಕ ಸಂಘದಲ್ಲಿ "ಶ್ರೀ ಜ. ಚ. ನಿ. ಅವರ ಕೃತಿಗಳು" ಎಂಬ ವಿಷಯವನ್ನು ಕುರಿತು ಪಂಡಿತ ಶ್ರೀ ಕೆ. ಪಿ. ಶಿವಲಿಂಗಯ್ಯನವರು ಉಪನ್ಯಾಸ ಮಾಡಿದರು. ಪಂಡಿತ ಶ್ರೀ ಹು. ಮ. ರಾಮಾರಾಧ್ಯರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಇದು ವಿದ್ಯಾವರ್ಧಕ ಸಂಘದಲ್ಲಿ ನಡೆದ ಉಪನ್ಯಾಸಮಾಲೆಯ ೪೩ನೆಯ ಕಾರ್ಯಕ್ರಮ.

ದಿನಾಂಕ ೧೨-೩-೧೯೬೭ನೆಯ ಬುಧವಾರ ಸಂಜೆ ಪರಿಷತ್ತಿನಲ್ಲಿ ಭಾರತ ಸಾಹಿತ್ಯ ಅಕಾದೆಮಿಯಿಂದ ಬಹುಮಾನಿತರಾದ ರಾಜಸೇವಾಪ್ರಸಕ್ತ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಗೆ ಸನ್ಮಾನ ಸಮಾರಂಭವನ್ನು ಏರ್ಪಡಿಸಿತ್ತು. ಪರಿಷತ್ತಿನ ಅಧ್ಯಕ್ಷ ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಶ್ರೀಗಳಾದ ಎ. ಎನ್. ಮೂರ್ತಿರಾಯರು, ವಿ. ಸೀತಾರಾಮಯ್ಯನವರು, ಎಂ. ಚಿದಾನಂದಮೂರ್ತಿಯವರು ಜಿ. ನಾರಾಯಣ ಇವರುಗಳು ಭಾಷಣ ಮಾಡಿದರು.

ದಿನಾಂಕ ೧೪-೩-೧೯೬೭ನೆಯ ಮಂಗಳವಾರ ಸಂಜೆ ಪರಿಷನ್ಮಂದಿರದಲ್ಲಿ ಶ್ರೀ ಸಂ. ಗೋ. ಬಿಂದೂರಾಯರ ನಿಧನದ ಪ್ರಯುಕ್ತ ಸಂತಾಪ ಸೂಚಕ ಸಭೆಯನ್ನು ಏರ್ಪಡಿಸಿತ್ತು. ಸುಬೋಧ ಎಂ. ರಾಮರಾಯರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀಗಳಾದ ಕೆ. ಸಂಪದ್ಗಿರಿರಾಯರು, ಗಮಕಿ ಎಂ. ರಾಘವೇಂದ್ರರಾಯರು, ಶ್ರೀ. ಬಿ. ಶ್ರೀ ಪಾಂಡುರಂಗರಾಯರು ಮತ್ತು ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾಯರು ದಿವಂಗತರನ್ನು ಕುರಿತು ಮಾತನಾಡಿದರು.

ದಿನಾಂಕ ೧೬-೪-೧೯೬೭ರಂದು ಪರಿಷನ್ಮಂದಿರದಲ್ಲಿ ಶ್ರೀ ಹೊಸಬಾಳೆ ಸೀತಾರಾಮರಾಯರು ಲಕ್ಷ್ಮೀಶನ ಜೈಮಿನೀ ಭಾರತದಿಂದ ಕಾವ್ಯವಾಚನ ಮಾಡಿದರು.

# ಸಂಪಾದಕೀಯ

## ಡಾ. ಜಕೀರ್ ಹುಸೇನ್

ನಮ್ಮ ಪ್ರಿಯ ರಾಷ್ಟ್ರಪತಿಗಳಾಗಿದ್ದ ಡಾ. ಜಕೀರ್ ಹುಸೇನ್ ಅವರು ನಿಧನ ಹೊಂದಿದುದರಿಂದ ಭಾರತದ ನಿಷ್ಠಾವಂತ ಪುತ್ರರೊಬ್ಬರು ಕಣ್ಮರೆಯಾದಂತಾಗಿದೆ. ದೇಶಸೇವಕರಾಗಿ, ಶಿಕ್ಷಣತಜ್ಞರಾಗಿ, ವೇದಾಂತಿಗಳಾಗಿ, ಉನ್ನತ ವ್ಯಕ್ತಿಯಾಗಿ ಅವರು ಭಾರತದ ಸಂಪೂರ್ಣ ಪ್ರತಿನಿಧಿಯಾಗಿದ್ದರು. ಅವರ ನಿಷ್ಠೆ ನಮ್ಮನ್ನು ಮುಂದು ವರಿಸುವಂತಾಗಲಿ. ಅವರ ಆತ್ಮಕ್ಕೆ ಸದ್ಗತಿಯುಂಟಾಗಲಿ ಎಂದು 'ಕನ್ನಡ ನುಡಿ' ಪ್ರಾರ್ಥಿಸುತ್ತದೆ.

## ಪರಿಷತ್ತಿನ ನೂತನ ಅಧ್ಯಕ್ಷರು

ಕನ್ನಡ ಸಾಹಿತ್ಯ ಪರಿಷತ್ತಿನ ಚುನಾವಣೆಗಳು ನಡೆದು ನಗರದ ಮಾಜಿ ಮೇಯರ್ ಅವರೂ 'ವಿನೋದ' ಮಾಸ ಪತ್ರಿಕೆಯ ಸಂಪಾದಕರೂ, ದಕ್ಷಕಾರ್ಯಕರ್ತರೂ, ಶ್ರೇಷ್ಠ ಆಡಳಿತಗಾರರೂ, ಸನ್ಮಿತ್ರರೂ, ಜನಪ್ರಿಯರೂ, ಉತ್ಸಾಹಿಗಳೂ ಆದ ಶ್ರೀ ಜಿ. ನಾರಾಯಣ ಅವರು ೬೦೦ಕ್ಕೂ ಹೆಚ್ಚು ಬಹುಮತದಿಂದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳನ್ನು ಸೋಲಿಸಿ ಆಯ್ಕೆಗೊಂಡಿದ್ದಾರೆ. ಅವರು ಈಗಾಗಲೇ ಅಧ್ಯಕ್ಷತೆಯ ಅಧಿಕಾರವನ್ನು ವಹಿಸಿಕೊಂಡಿದ್ದಾರೆ. ಈ ಸಂಧಿ ಸಮಯದಲ್ಲಿ ಶ್ರೀ ಜಿ. ನಾರಾಯಣ ಅವರು ಆರಿಸಿ ಬಂದಿರುವುದು ಪರಿಷತ್ತಿನ ಅಭಿವೃದ್ಧಿಗೂ ಕೀರ್ತಿಗೂ ಸಹಾಯಕ ವಾಗಿದೆ. ಶ್ರೀ ನಾರಾಯಣ ಅವರು ಕನಸುಗಾರರು, ಜೊತೆಗೆ ಕಾರ್ಯಕರ್ತರು. ಅವರ ಕನಸುಗಳನ್ನೇ ನನಸಾಗಿ ಮಾಡುವ ಶಕ್ತಿ ಸಾಹಸಗಳುಳ್ಳವರು. ಈಗ ಅವರ ಉತ್ಸಾಹಕ್ಕೆ ತಕ್ಕ ಅವಕಾಶ ಸಿಕ್ಕಿದೆ ಎಂದು ನಮಗೆ ಅನ್ನಿಸುತ್ತದೆ. ಶ್ರೀಯುತರ ಅಧಿಕಾರಾವಧಿಯಲ್ಲಿ ಕನ್ನಡದ ಸರ್ವತೋಮುಖವಾದ ಅಭಿವೃದ್ಧಿಯುಂಟಾಗಿ ಪರಿಷತ್ತಿನ ಮತ್ತು ಶ್ರೀ ಜಿ. ನಾರಾಯಣ ಅವರ ಕೀರ್ತಿ ಭಾರತದಲ್ಲೆಲ್ಲ ಶಾಶ್ವತವಾಗಿ ಸ್ಥಾಪಿತವಾಗಲಿ.

## ಕನ್ನಡ ನುಡಿ

'ನುಡಿ'ಯ ಈ ಸಂಚಿಕೆಯಲ್ಲಿ ಮೇ ೧೫ರ ವರೆಗಿನ ಪರಿಷತ್ತಿಗೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನೂ ಪ್ರಕಟಿಸಿದ್ದೇವೆ. ಮುಂದಿನ ಸಂಚಿಕೆ ಜುಲೈ ಒಂದನೇ ತಾರೀಖು ಪ್ರಕಟವಾಗುತ್ತದೆ. ಇಷ್ಟು ತಡವಾದುದಕ್ಕೆ ವಾಚಕರು ಕ್ಷಮಿಸಬೇಕಾಗಿ ಕೋರಿಕೆ.

---

## ಪ್ರೊ. ಜಿ. ವೆಂಕಟಸುಬ್ಬಯ್ಯನವರು ಪರಿಷತ್ತಿನ ಸದಸ್ಯರಿಗೆ ಇತ್ತಿರುವ

## ಬೀಳ್ಕೊಡುಗೆಯ ಸಂದೇಶ

**ಸನ್ಮಾನ್ಯ ಸದಸ್ಯ ಮಿತ್ರರೇ,**

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿ ನಾನು ೨೫-೧೦-೧೯೬೪ರಂದು ಅಧಿಕಾರವನ್ನು ವಹಿಸಿಕೊಂಡು ಇಲ್ಲಿಯತನಕ (೧೧-೫-೧೯೬೯) ನನ್ನ ಶಕ್ತಿ ಇದ್ದಷ್ಟು ಮಟ್ಟಿಗೆ ಪರಿಷತ್ತಿನ ಉನ್ನತಿಗಾಗಿ ಶ್ರಮಿಸಿದ್ದೇನೆ. ನನ್ನ ಜೊತೆಯಲ್ಲಿ ಅಧಿಕಾರಿಗಳಾಗಿ ಶ್ರಮಿಸಿದ ಎಲ್ಲ ಮಿತ್ರರಿಗೂ ನಾನು ನನ್ನ ಕೃತಜ್ಞತೆಗಳನ್ನು ಈ ಮೂಲಕ ಸಲ್ಲಿಸುತ್ತಿದ್ದೇನೆ. ಸದಸ್ಯರ ಬೆಂಬಲ ನನಗೆ ಅಗಾಧವಾಗಿ ಇದ್ದುದರಿಂದ ನಾನು ಮಾಡಿರುವಷ್ಟು ಕಾರ್ಯವಾದರೂ ಸಾಧ್ಯವಾಯಿತು. ಇಲ್ಲದಿದ್ದರೆ ನನಗೂ ಪರಿಷತ್ತಿಗೂ ತುಂಬ ತೊಂದರೆಗಳು ಒದಗುತ್ತಿದ್ದುವು. ಆದುದರಿಂದ ಸದಸ್ಯರೆಲ್ಲರಿಗೂ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳು.

ನಾನು ನಾಡಿನ ಪ್ರವಾಸವನ್ನು ಕೈಕೊಂಡಾಗ ನಾಡಿನ ಎಲ್ಲ ಕಡೆಯಲ್ಲಿಯೂ ನನ್ನ ಕನ್ನಡ ಬಾಂಧವರು ತೋರಿಸಿದ ಆದರಾತಿಥ್ಯಗಳಿಗೆ ನಾನು ಚಿರಋಣಿಯಾಗಿದ್ದೇನೆ. ನನ್ನ ಲೇಖಕ ಮಿತ್ರರು ನನ್ನ ವಿಷಯದಲ್ಲಿ ತುಂಬ ವಿಶ್ವಾಸದಿಂದ ನಡೆದುಕೊಂಡಿದ್ದಾರೆ. ಹಿರಿಯ ಸಾಹಿತಿಗಳು ನನ್ನ ಚೈತನ್ಯವನ್ನೇ ಹೆಚ್ಚಿಸಿದ್ದಾರೆ. ನಿಮ್ಮೆಲ್ಲರ ವಿಶ್ವಾಸವನ್ನು ಗಳಿಸಿದ ನನಗೆ ಆತ್ಮಪ್ರತ್ಯಯ ಇಂದು ಹೆಚ್ಚಿದೆ. ಇದರಿಂದ ನನ್ನ ಮುಂದಿನ ಕಾರ್ಯಕ್ರಮಗಳಲ್ಲಿ ನನಗೆ ಧೈರ್ಯ ಬಂದಂತಾಗಿದೆ.

ನಾನು ಅಧಿಕಾರವನ್ನು ಶ್ರೀ ಜಿ. ನಾರಾಯಣ ಅವರಿಗೆ ವಹಿಸಿಕೊಡುತ್ತಿರುವ ಈ ಸಂದರ್ಭದಲ್ಲಿ ತಮ್ಮ ಮುಂದೆ ಒಂದೆರಡು ಆಶೋತ್ತರಗಳನ್ನು ಇಡುತ್ತಿದ್ದೇನೆ. ಪರಿಷತ್ತಿನ ರಂಗಮಂದಿರದ ನಿರ್ಮಾಣ, ಪ್ರಾಚೀನ ಕನ್ನಡ ಗ್ರಂಥಗಳ ಪ್ರಕಟಣೆ, ಆಧಾರಭೂತವಾದಂಥ ಕೈಪಿಡಿಗಳ ಪ್ರಕಟಣೆ, ಅಖಿಲ ಕರ್ಣಾಟಕ ಪ್ರಾತಿನಿಧ್ಯದ ಅಭಿವೃದ್ಧಿ, ಸಾಹಿತಿಗಳ ಜಿಲ್ಲಾ ಸಮಿತಿಗಳ ರಚನೆ, ಜಿಲ್ಲಾ ಸಾಹಿತ್ಯ ಸಮ್ಮೇಳನಗಳು, ಮುಂತಾದ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದ ನಾನು ಅವುಗಳಲ್ಲಿ ಯಾವುದನ್ನೂ ಅಧಿಕ ಪ್ರಮಾಣದಲ್ಲಿ ಸಾಧಿಸಲಾಗಲಿಲ್ಲ. ಆದರೆ ಪರಿಷತ್ತಿನ ಹಣಕಾಸಿನ ಪರಿಸ್ಥಿತಿ, ನೂತನ ನಿಬಂಧನೆಗಳ ರಚನೆ ನಿಘಂಟಿನ ಪ್ರಕಟನೆಯಲ್ಲಿ ಪ್ರಗತಿ ಕನ್ನಡ ಸಾಹಿತ್ಯ ಪರಿಷತ್ತಿಗೆ ತಕ್ಕಷ್ಟು ಪ್ರಸಿದ್ಧಿ ಇವುಗಳನ್ನು ಉಂಟುಮಾಡಿದ್ದೇನೆ. ಇದಕ್ಕೆ ಸಹಾಯಕರಾದ ನನ್ನ ಎಲ್ಲ ಸಹೋದ್ಯೋಗಿಗಳಿಗೂ ನನ್ನ ಕೃತಜ್ಞತೆಗಳು.

ಶ್ರೀ ಜಿ. ನಾರಾಯಣ ಅವರ ಅಧಿಕಾರಾವಧಿಯಲ್ಲಿ ಇನ್ನೂ ಅಧಿಕ ಪ್ರಮಾಣದಲ್ಲಿ ಕಾರ್ಯಗಳು ನೆರವೇರಲಿ, ಅದಕ್ಕೆ ತಮ್ಮೆಲ್ಲರ ಬೆಂಬಲ ದೊರಕಲಿ, ನನ್ನ ಕೈಲಾದ ಸಹಾಯವನ್ನು ಕೊಡಲು ನಾನೂ ಸದಾ ಸಿದ್ಧನಾಗಿದ್ದೇನೆ.

ಕನ್ನಡ ಸಾಹಿತ್ಯ ಪರಿಷತ್ತು ಬೆಳೆದು ಭಾರತದಲ್ಲಿಯೇ ಇಷ್ಟು ಕಾರ್ಯ ಮಾಡುವ ಸಾಹಿತ್ಯ ಸಂಸ್ಥೆಯಿಲ್ಲವೆಂಬಂಥ ಕೀರ್ತಿಗೆ ಪಾತ್ರವಾಗಲಿ ಎಂದು ಹಾರೈಸುತ್ತೇನೆ. ನಾಡಿನ ಸಕಲರ ಚೈತನ್ಯವೂ ಈ ಸಂಸ್ಥೆಯ ಅಭಿವೃದ್ಧಿಗೆ ಬೆಂಬಲವಾಗಲಿ, ಅಲ್ಪತನ ಅಳಿದು ಹಿರಿತನ ಬೆಳೆಯಲಿ.

**ಯೋವೈ ಭೂಮಾ ತತ್ಸುಖಂ ನಾಲ್ಪೇಸುಖಮಸ್ತಿ.**

---

# ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ-ಕನ್ನಡ ನಿಘಂಟು

## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಿದ್ದು ಮೊದಲ ಸಂಪುಟದ ಮೂರನೆಯ ಸಂಚಿಕೆ ಈಗಾಗಲೇ ಪ್ರಕಟವಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿ ಅದನ್ನು ಮುಂಗಡವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ಮುಂಗಡ ಹಣ ನೂರು ರೂಪಾಯಿಗಳನ್ನು ಹತ್ತು ರೂ.ಗೆ ಕಡಿಮೆಯಿಲ್ಲದ ಕಂತುಗಳಲ್ಲಿ ಪಾವತಿ ಮಾಡಬಹುದು. ಆದರೆ ಪೂರ್ತ ಹಣ ಸಂದಾಯವಾಗುವವರೆಗೆ ಸಂಚಿಕೆಗಳನ್ನು ಕಳಿಸಲಾಗುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ **ರಿಯಾಯಿತಿಯ ದರದಲ್ಲಿ** ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಒಂದು ಸಂಪುಟವು ಸಿದ್ಧವಾದ ಬಳಿಕ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು.

ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಗ್ರಾಹಕರು ಮುಂಗಡ ಬೆಲೆಯ ಜೊತೆಗೆ ಹತ್ತು ರೂಪಾಯಿಗಳನ್ನು ಅಂಚೆವೆಚ್ಚ, ರವಾನೆ ವೆಚ್ಚಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು "ರಿಜಿಸ್ಟರ್ಡ್ ಪೋಸ್ಟ್" ಮೂಲಕ ಕಳಿಸಬೇಕೆಂದು ಗ್ರಾಹಕರು ಅಪೇಕ್ಷಿಸಿದಲ್ಲಿ ಆ ವಿಷಯವನ್ನು ಅವರು ಲಿಖಿತರೂಪದಲ್ಲಿ ಮೊದಲೇ ತಿಳಿಸಬೇಕು. ಹಾಗೆ ಮಾಡದಿದ್ದರೆ ಸಂಚಿಕೆಗಳನ್ನು "ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್" ಸಮೇತವಾಗಿ ಸಾದಾ ಟಪಾಲಿನ ಮೂಲಕ ಕಳಿಸಲಾಗುವುದು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ ತಿಳಿಸಿ ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

ನಿಘಂಟಿನ ಬಿಡಿಸಂಚಿಕೆಗಳನ್ನು ಪ್ರತಿ ಒಂದಕ್ಕೆ ನಾಲ್ಕು ರೂಪಾಯಿಗಳಂತೆ ಪಡೆಯಬಹುದು.

**ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮**

ಈ ವಿಳಾಸಕ್ಕೆ ಹಣ ಕಳುಹಿಸಿ ಪತ್ರ ವ್ಯವಹಾರ ಮಾಡಬಹುದು.

Reg. No. B. G. 4—April-May 1969

Licensed to Post without
pre-payment, Licence No. 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಬೆಂಗಳೂರು-೧೮

ಸಂಪಾದಕ

ಜಿ. ವೆಂಕಟಸುಬ್ಬಯ್ಯ

ಸಂಪಾದಕ ಮಂಡಲಿ

ಶ್ರೀನಿವಾಸರಾವ್ ಕೊರಟಿ

ಆರ್. ರಾಚಪ್ಪ

# ಕನ್ನಡ ನುಡಿ



ಜೂನ್-ಜುಲೈ : ೧೯೬೮

ಸಂಪುಟ ೩೧

ಸಂಚಿಕೆ ೬–೭

ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ.

ಬೆಂಗಳೂರು-೧೮

# ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ-ಕನ್ನಡ ನಿಘಂಟು

## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆವ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಲಾಗಿದೆ. ೧೯೭೨ರಲ್ಲಿ ನಿಘಂಟು ಪೂರ್ತಿಯಾಗುವ ನಿರೀಕ್ಷೆ ಇದೆ. ಮೊದಲ ಸಂಪುಟದ ಐದನೆಯ ಸಂಚಿಕೆ ಈಗಾಗಲೇ ಪ್ರಕಟವಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಇದು ಇನ್ನೂ ಹೆಚ್ಚಾಗಬಹುದು. ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿ ಅದನ್ನು ಮುಂಗಡ ವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ಮುಂಗಡ ಹಣ ನೂರು ರೂಪಾಯಿಗಳನ್ನು ಹತ್ತು ರೂ.ಗೆ ಕಡಿಮೆಯಿಲ್ಲದ ಕಂತುಗಳಲ್ಲಿ ಪಾವತಿ ಮಾಡ ಬಹುದು. ಆದರೆ ಪೂರ್ತ ಹಣ ಸಂದಾಯವಾಗುವವರೆಗೆ ಸಂಚಿಕೆಗಳನ್ನು ಕಳಿಸಲಾಗುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ **ರಿಯಾಯಿತಿಯ ದರದಲ್ಲಿ** ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಸಂಪುಟಗಳು ಸಿದ್ಧವಾದಂತೆ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು. ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಈಗ ಹೆಚ್ಚಾಗಿರುವ ಅಂಚೆ ದರದಂತೆ ರಿಜಿಸ್ಟರ್ ಅಂಚೆಯ ಮೂಲಕ ಕಳುಹಿಸುವ ಪ್ರತಿ ಸಂಚಿಕೆಗೂ ಒಂದು ರೂಪಾಯಿನ ಅಂಚೆವೆಚ್ಚ ತಗಲುತ್ತದೆ. ಆದುದರಿಂದ ಗ್ರಾಹಕರು ಮುಂಗಡ ಬೆಲೆಯ ಜೊತೆಗೆ ***ಐವತ್ತು** ರೂಪಾಯಿಗಳನ್ನು ಅಂಚೆವೆಚ್ಚ ರವಾನೆ ವೆಚ್ಚಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ ತಿಳಿಸಿ ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

ನಿಘಂಟಿನ ಬಿಡಿಸಂಚಿಕೆಗಳನ್ನು ಪ್ರತಿ ಒಂದಕ್ಕೆ **ನಾಲ್ಕು** ರೂಪಾಯಿಗಳಂತೆ ಪಡೆಯಬಹುದು.

**ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮**

ಈ ವಿಳಾಸಕ್ಕೆ ಬ್ಯಾಂಕ್ ಡ್ರಾಫ್ಟ್ ಅಥವಾ ಮನಿಯಾರ್ಡರ್ ಅಥವಾ ನಗದಾಗಿ ಹಣ ಕಳಿಸಿ ಪತ್ರವ್ಯವಹಾರ ಮಾಡಬಹುದು.

---

* **ವಿ. ಸೂ:–** ಸಂಚಿಕೆಗಳ ರವಾನೆಗೆ ಅವಶ್ಯಕವಾದ ಐವತ್ತು ರೂಪಾಯಿಗಳನ್ನು ಇದುವರೆಗೆ ಸಲ್ಲಿಸದೆ ಇರುವ ಅಥವಾ ಕಡಮೆ ಹಣವನ್ನು ಸಲ್ಲಿಸಿರುವ ಗ್ರಾಹಕರು ಸಂಚಿಕೆಗಳನ್ನು ಪಡೆಯುವ ನಿಶ್ಚಿತೆಗಾಗಿ ಈ ಕೂಡಲೇ ಪೂರ್ತಿ ಹಣವನ್ನು ಸಲ್ಲಿಸಬೇಕಾಗಿ ಕೋರಿದೆ.

# ಕನ್ನಡ ನುಡಿ

'ಕನ್ನಡ ನುಡಿ' ಕರ್ನಾಟಕದ ಗೆಜೆಟಿಯರ್ ಆಗಬೇಕು

—ಬಿ.ಎಂ.ಶ್ರೀ



**ಸಂಚಿಕೆ : ೬–೭ ಸಂಪುಟ : ೩೨**

**ಜೂನ್-ಜುಲೈ ೧೯೬೯**

●

**ಈ ಸಂಚಿಕೆಯಲ್ಲಿ . . .**



# ಪಾಷಂಡನ ಪ್ರಾಯಶ್ಚಿತ್ತ

ಸಂಗ್ರಹ: **ವೆಂಕಟೇಶ ಸಾಂಗಲಿ**

●

[ವಿಶ್ವವಿಖ್ಯಾತ ಸಾಹಿತಿ–ಪದ್ಮವಿಭೂಷಣ ಹಾಸನದ ರಾಜಾರಾಯರ ಕವಿತೆ ಇದು. ಅವರ ಬರವಣಿಗೆ ಆಂಗ್ಲ ಭಾಷೆಯಲ್ಲಿ. ಆದರೆ ಅವರು ಕನ್ನಡದಲ್ಲಿಯೂ ಉತ್ತಮವಾಗಿ ಬರೆಯಬಲ್ಲರೆಂಬುದಕ್ಕೆ ನಿದರ್ಶನವಾಗಿ 'ಜಯಕರ್ನಾಟಕ'ದ ಹಳೆಯ ಪುಟಗಳಲ್ಲಿ ಕೆಲವು ಲೇಖನ ಸಿಕ್ಕುತ್ತದೆ. ಅವರ ಕವಿಚೇತನ ಕನ್ನಡ, ಕರ್ನಾಟಕಕ್ಕಾಗಿ ಅಂದು ಮಿಡುಕುತ್ತಿದ್ದ ಬಗೆ ಈ ಕವಿತೆಯಲ್ಲಿ ವ್ಯಕ್ತವಾಗಿದೆ. ಪ್ಯಾರಿಸ್‌ನಲ್ಲಿದ್ದಾಗ ಅವರು ಇದನ್ನು ಬರೆದದ್ದು. ಮೂವತ್ತೈದು ವರ್ಷಗಳ ಹಿಂದೆ ಕನ್ನಡಿಗನ ಸ್ಥಿತಿ ಇಂದಿಗೂ ಅದೇ ಆಗಿದೆ. ಕಾವ್ಯಗುಣಕ್ಕಿಂತ ಕವಿಯ ಮನೋಧರ್ಮ ಇಲ್ಲಿ ಮುಖ್ಯ.]

**ಕೇಳಿ, ಕೇಳಿ**
**ಮಹನೀಯರೇ ಕೇಳಿ**
**ಕರ್ನಾಟಕದಾಸನು**
**ಮುಸುಗುಟ್ಟುತಿಹನು.**
**ಕೇಳಿ, ಕೇಳಿ**
**ಮಹನೀಯರೇ ಕೇಳಿ**
**ಹುಟ್ಟಿದ್ದು ಹಾಸನ**
**ಕರ್ನಾಟಕದ ಹೃದಯ ಕಮಲದಲ್ಲಿ**
**ಬೆಳೆದದ್ದು ಭಾಗ್ಯನಗರ**
**ಕರ್ನಾಟಕದ ಬಲತಾಯ ಭಯದಲ್ಲಿ**
**ಮೆರೆದುದು ಗಂಗಾ ಯಮುನಾ ತೀರಗಳಲ್ಲಿ**
**ಇರುವುದು ಪಾಶ್ಚಾತ್ಯ ಪ್ರಪಂಚದಲ್ಲಿ**
**ಹೇ, ಮಹನೀಯರೇ ಕೇಳಿ**
**ಕರ್ನಾಟಕದಾಸನು**
**ಮುಸುಗುಟ್ಟುತಿಹನು.**
**ರನ್ನನ ಹೆಸರನು ಕೇಳಲಿಲ್ಲ**
**ಪಂಪನ ಹೆಸರದು ಮೊದಲೇ ಇಲ್ಲ**
**ಸೋಮೇಶ್ವರನ ಶತಕವ ತಿಳಿಯಲಿಲ್ಲ**
**ಜೈಮಿನಿಯ ಝೇಂಕಾರವ ಕೇಳಲಿಲ್ಲ**
**ಕಾವೇರಿಯ ಸೊಗಸನ್ನು ನೋಡಿದ್ದೆ**
**ಹೇಮಾವತಿಯ ದಡದಲ್ಲಿ ಹಾಯ್ದಿದ್ದೆ**
**ಬೇಲೂರಿನ ಬೆಳಕನ್ನು ನೋಡಿದ್ದೆ**
**ಹಳೆಯಬೀಡಿನ ಹಾಡನ್ನು ಕಂಡಿದ್ದೆ**
**ಕನಕನ ಕೀರ್ತನೆಗಳ ಕಲಿಯಲಿಲ್ಲ**
**ಪುರಂದರನ ಪಲ್ಲವಿಗಳ ನುಡಿಯಲಿಲ್ಲ**
**ಶಂಕರನ ತತ್ವವನು ಗ್ರಹಿಸಲಿಲ್ಲ**
**ಬಸವನ ಭಕ್ತಿಯ ಬೇಡಲಿಲ್ಲ**

ಕೃಷ್ಣರಾಜನ ಮೈಸೂರ ನೋಡಿದ್ದೆ
ಬೆಂಗಳೂರಿನ ಷೋಕನು ಹೇಸಿದ್ದೆ
ತಲಕಾಡಿನ ಮರಳಲಿ ಆಡಿದ್ದೆ
ತೆರುಕಣಾಂಬಿಯ ಕೆರೆಯ ಕಂಡಿದ್ದೆ
ಕೇಳಿ, ಕೇಳಿ
ಮಹನೀಯರೇ
ಕರ್ನಾಟಕದಾಸನು
ಮುಸುಗುಟ್ಟುತಿಹನು-

* * *

ರಾತ್ರಿಯೆಲ್ಲಾ ನಿದ್ರೆಯಿಲ್ಲ
ಬಿದ್ದು ಬಿದ್ದು
ಎದ್ದು ಎದ್ದು
ಉರುಳುತಿರುವೆನು
'ಅಲ್ಪ' ಪರ್ವತದ ಚಳಿಗಾಳಿಯು
ಬೀಸುತಿರುವುದು
'ಲಾಮನ್' ಸರೋವರದ ಹಸುರು
ಮಿರುಗುತಿರುವುದು
ಮೋಡವಿಲ್ಲದ ಆಕಾಶದಲ್ಲಿ
ಚಂದ್ರನು ನಗುತಿರುವನು
ಹೊರಗೆ ಇಂಪು
ಒಳಗೆ ಹಾಳು
ಹೊರಗೆ ಸೊಗಸು
ಒಳಗೆ ಶೋಕ
ಇಗೊ ಎದ್ದೆ
ಇಗೊ ಮತ್ತೆ ಬಿದ್ದೆ
ದೇವ ನನ್ನದೇನು ತಪ್ಪೊ ?
ಹೇಳು
ದೇವ ನನ್ನದೇನು ತಪ್ಪೊ ?
ಕನವರಿಕೆ . . . .
ಇಲ್ಲದ ಹೆದರಿಕೆ . . . .
ಎಲ್ಲೆಲ್ಲಿಯೂ ಪರ್ವತಗಳು
ಕುಣಿಯುತಿರುವವು !
ಕೊನೆಗೆ ಬೆಳಗಿನ ಕೋಳಿಯು
ಕೂಗಿತು
ಹಸುವು ತನ್ನ ಎಳೆಯ ಕರುವನ್ನು
ಕರೆಯಿತು

ಸಂಪಿಗೆಯ ಗಂಧವಲ್ಲಾ
ರೋಜಿನ ಕಂಪು—
ಹೃದಯವು ತನಗೆ ತಾನೆ
ಹಾಡಲಾರಂಭಿಸಿತು
ಅದೇನು ಹೇಳಿತು ಕೇಳಿ :
" ಹೊಲೆಯನಾದರೇನು
ಬ್ರಹ್ಮಜ್ಞಾನವು ಬರುವುದು ಏಳು !
ಶತ್ರುವಾದರೇನು
ಸ್ನೇಹದ ಶಾಂತಿಯ ಕಾಣುವೆ ಏಳು !
ನಿಶ್ಶಕ್ತನಾದರೇನು
ಆತ್ಮಶಕ್ತಿಯು ಹುಟ್ಟುವುದು, ಏಳು !
ನನ್ನ ತೊರೆದರೇನು
ನನ್ನ ಕೀರ್ತಿಯ ಸ್ಮರಿಸುವೆ ಏಳು . . . .
ಏಳು, ಏಳು
ಮಗುವೇ
ಏಳು . . . . !
ಕಣ್ತೆರೆದು ನೋಡಿದೆ . . . .
ಕರ್ನಾಟಕದೇವಿಯು ನಿಂತಿದ್ದಳು !
ಮಲೆನಾಡಿನ ಹಸುರಿನ ಸೀರೆ
ಕೋಲಾರದ ಚಿನ್ನದ ಓಲೆ
ಧಾರವಾಡದ ಕುಪ್ಪಸ
ಮಂಗಳೂರಿನ ಮಾಣಿಕ್ಯ . . . .
ತಲೆಯಮೇಲೆ ಗೋದಾವರಿ
ಕಾಲಕೆಳಗೆ ನೀಲಗಿರಿ . . . .
ಆ ಕಣ್ಣುಗಳ ಹೇಗೆ ತಾನೆ ಬಣ್ಣಿಸಲಾದೀತು !
ಅವುಗಳ ತೇಜಸ್ಸೇ ಸರ್ವತೇಜಸ್ಸು
ನೋಡಿದೆ
ಹಾಡಿದೆ
ಕರ್ನಾಟಕ ದಾಸನಾದೆ.
ಕೇಳಿ, ಕೇಳಿ,
ಮಹನೀಯರೆ ಕೇಳಿ
ಕರ್ನಾಟಕ ದಾಸನು
ಮುಸುಗುಟ್ಟುತಿಹೆನು
ಕೇಳಿ, ಕೇಳಿ
ಮಹನೀಯರೆ ಕೇಳಿ.

# ಕವಿ-ಪ್ರವಾದಿ*

■ ನೀಲತ್ತಳ್ಳಿ ಕಸ್ತೂರಿ

ಜೀವನದಲ್ಲಿ ಕವಿಯ ಸ್ಥಾನವೇನು, ಜೀವನದ ನಾಟಕದಲ್ಲಿ ಕವಿ ವಹಿಸುವ ಪಾತ್ರವೇನು ಎನ್ನುವುದು ದೊಡ್ಡ ಪ್ರಶ್ನೆ. ಇದಕ್ಕೆ ಉತ್ತರ ಕೊಡುವುದೂ ಸಾಹಸದ ಕೆಲಸವೇ. ಅದಕ್ಕೆ ಕೈಹಾಕಿದರೆ ನಾವು ಕಾವ್ಯದ ಗುರಿಯೇನು ? ಜೀವನದಲ್ಲಿ ಅದರ ಸ್ಥಾನವೇನು ಎನ್ನುವುದನ್ನು ಪರಿಶೀಲಿಸಬೇಕಾಗುತ್ತದೆ. ಆ ಕ್ಷೇತ್ರ ದೊಡ್ಡದು. ಜೀವನ ಹೇಗೆ ಸಹಸ್ರ ಮುಖವೋ ಕಾವ್ಯವೂ ಕವಿಯೂ ಹಾಗೆಯೆ. ಬಾಳಿನಾಗಸದಂತೆಯೆ ಕಾವ್ಯಾಕಾಶವೂ ವಿಶಾಲ, ಅನಂತ. ಬಾಳಿನ ಸುತ್ತ ಬಳಸಿಕೊಂಡಿದೆ ಕಾವ್ಯ. ವಾಯುಮಂಡಲ ಭೂಮಿಯನ್ನು ಮುಸುಕಿರುವಂತೆ, ರಾತ್ರಿಯ ನಕ್ಷತ್ರಮಾಲೆ ನೆಲದ ಮಕ್ಕಳಿಗೆ ಸೊಗವೀಯುವಂತೆ, ತಿಂಗಳ ಬೆಳಕು ಬುವಿಯನ್ನು ಬಾನಿನೊಡನೆ ಮೇಳೈಸುವಂತೆ, ಜೀವನದ ಸುತ್ತ ಹಬ್ಬಿಕೊಂಡಿದೆ ಕಾವ್ಯ. ಅದಿಲ್ಲದ ಬಾಳು ಬರಡಾಗುತ್ತದೆ.

ಹೀಗೆ ಸ್ಥೂಲವಾಗಿಯೇನೊ ಕಾವ್ಯ – ಜೀವನಗಳಿಗೆ ಸಂಬಂಧವನ್ನು ಹೇಳಿಬಿಡಬಹುದು. ಆದರೆ ಆದರಿಂದ ಜೀವನದಲ್ಲಿ ಕಾವ್ಯದ ಸ್ಥಾನ, ಕವಿಯ ಪಾತ್ರ ನಿಕರವಾಗಿ ತಿಳಿಯಿತೆ ಎಂದು ಕೇಳಿದರೆ, ಉತ್ತರ ಪ್ರಶ್ನಾರ್ಥಕ ಚಿಹ್ನೆಯೆ! ಈ ಬಗ್ಗೆ ನಮ್ಮ ಮನಸ್ಸನ್ನು ಹರಿಯಬಿಡುವುದು ಸೊಗಸಿನ ಸಂಗತಿ. ಆದಿಯಿಂದ ಈಗಿನವರೆಗೂ ಸಾಗಿದೆ ಜನಜೀವನ. ಲೋಕದಲ್ಲಿ ಬೇರೆ ಬೇರೆ ಕಾಲದಲ್ಲಿ ಎಷ್ಟೆಷ್ಟೋ ಕವಿಗಳು ಬಂದು ಹೋದರು. ಅವರೊಡನೆಯೆ ಹೊರಟುಹೋಗದಂತಹ ಕಾವ್ಯವನ್ನು ಜಗತ್ತಿಗಿತ್ತು ಹೋದರು. ಲೋಕದಮೇಲೆ, ಜನಮಾನಸದ ಮೇಲೆ ಆದ ಅವರ ಪ್ರಭಾವ ಅನೇಕ ತೆರನಾದದ್ದು. ಯುಗಧರ್ಮವನ್ನನುಸರಿಸಿ ಕಾವ್ಯದ ಪರಿಣಾಮವೂ ಲೋಕದಮೇಲೆ ಆಗಿದೆ. ಏಕೆಂದರೆ ಮಹಾಕವಿ, ತಾನು ಹೇಳುವುದು ಸಾರ್ವಕಾಲಿಕ ಗೀತವಾದರೂ, ತನ್ನ ಸಮಕಾಲೀನ ಜೀವನವನ್ನು ಬಿಟ್ಟು ದೂರ ನಿಲ್ಲಲಾರ, ನಿಲ್ಲಬಾರದು. ಜೀವನವೂ ಸಾಹಿತ್ಯವೂ ಜೊತೆ ಜೊತೆಯಾಗಿ ಸಾಗಬೇಕು. ಜೀವನ ಸಹಿತವಾದುದೇ ಸಾಹಿತ್ಯ, ರಹಿತವಾದುದು ಅಲ್ಲ ಎಂದಿದ್ದಾರೆ ವಿನೋಬಾ. ಅಂತೆಯೆ ಕವಿ ಲೋಕಜೀವನದಲ್ಲಿ ನಾನಾ ಪಾತ್ರಗಳನ್ನು ವಹಿಸಿದ್ದಾನೆ. ಕಾಲಕ್ಕೆ ತಕ್ಕಂತೆ, ಸನ್ನಿವೇಶಕ್ಕೆ ತಕ್ಕಂತೆ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಪಾತ್ರವಹಿಸಿದ್ದಾನೆ. ಕೆಲವು ಪಾತ್ರಗಳು ತಾತ್ಕಾಲಿಕವಾಗಿ ತೋರಿದರೂ, ಒಟ್ಟಿನಲ್ಲಿ ಸಾರ್ವಕಾಲಿಕವೇ, ಕೆಲವಂತೂ ಹೊರಗೂ ಒಳಗೂ ಪೂರಾ ಸಾರ್ವಕಾಲಿಕ. ಚಿರಂಜೀವಿಯಾದ ಸಾಹಿತ್ಯವನ್ನು ರಚಿಸಿ ಕವಿ ಲೋಕದಲ್ಲಿ ಸಂತನ ಹಾಗೆ, ರಸಋಷಿಯ ಹಾಗೆ ಮಹಾಶಿಲ್ಪಿಯ ಹಾಗೆ ತನ್ನದೇ ಸ್ಥಾನ ಪಡೆದುಕೊಂಡಿದ್ದಾನೆ.

ಅಷ್ಟೇ ಅಲ್ಲ. ಕವಿಯೇ ಈ ವಿವಿಧ ಪಾತ್ರಗಳನ್ನು ವಹಿಸುವುದೂ ಉಂಟು. ವಾಸ್ತವವಾಗಿಯೂ ಇಂತಹವರೆಲ್ಲ ಎಚ್ಚೆತ್ತ ಆತ್ಮದ ನಾನಾ ಪ್ರತೀಕಗಳು, ಎಲ್ಲರಲ್ಲೂ ಒಂದೇ ಅಂತಃಸ್ಸತ್ವ. ಅದರ ಆವಿರ್ಭಾವ ಆಗಿರುವುದು ಬೇರೆ ಬೇರೆ ರೂಪದಲ್ಲಿ ಕೆಲವರು ರಸಚೇತನರು, ಕೆಲವರು ಆನಂದ ಚೇತನರು, ಕೆಲವರು ಜ್ಞಾನಿಗಳು, ಮತ್ತೆ ಕೆಲವರು ಕರ್ಮಯೋಗಿಗಳು, ಇನ್ನೂ ಕೆಲವರು ಭಕ್ತರು. ಹೀಗೇ ನಾನಾ ಬಗೆ. ಒಂದೇ ಅಂತಃಸ್ಸತ್ವ ಸಹಸ್ರ ಮುಖವಾಗಿ ವ್ಯಾಪಿಸಿದೆ. ನದಿ ತನ್ನ ಮುಖಭೂಮಿಯಲ್ಲಿ ಕವಲು ಕವಲಾಗಿ ಒಡೆದು ನಾನಾ ಶಾಖೆಗಳಾಗಿ ಕಡಲನ್ನು ಸೇರುವ ಹಾಗೆ ಈ ಚೇತನವೂ ಸತ್ತ್ವವೂ ನಾನಾ ರೂಪಗಳಲ್ಲಿ ಲೋಕಸಾಗರದಲ್ಲಿ ಸೇರುತ್ತವೆ. ಕವಿಯನ್ನೇ ಕುರಿತು ವಿಮರ್ಶಿಸುವುದು ನಮ್ಮ ಇಲ್ಲಿನ ಕೆಲಸವಾದುದರಿಂದ ಉಳಿದ ಚೇತಃಸ್ವರೂಪರ ಮಾತು ಅಂತಿರಲಿ.

ಕವಿಯೇ ಉಳಿದೆಲ್ಲರ ಪಾತ್ರ ವಹಿಸಿರುವುದೂ ಉಂಟು ಎಂದೆ. ಕಾವ್ಯ ಪ್ರಪಂಚದಲ್ಲಿ ಈ ಮಾತಿಗೆ ಸಿಗುವ ಉದಾಹರಣೆಗಳು ಅಸಂಖ್ಯ. ಬಹುಶಃ ಎಲ್ಲ ಕವಿಗಳೂ ಒಂದಲ್ಲ ಒಂದು ರೀತಿ ಬಾಳಿನ ನಾನಾ ಪಾತ್ರಗಳನ್ನು ವಹಿಸಿರುವುದನ್ನು ಸುಲಭವಾಗಿ ತಿಳಿಯಬಹುದು.

---

* ಖಲೀಲ್ ಗೀಬ್ರಾನ್ ಕವಿಯ The prophet (ಪ್ರವಾದಿ) ಗ್ರಂಥದ ಬಗ್ಗೆ ಒಂದು ವಿವೇಚನೆ.

'ಭೂಪತಿಯೆ ಕವಿಯಾಗಿ, ಕವಿ ಚಮೂಪತಿಯಾಗಿ' ಎಂದು ಕನ್ನಡದ ಹಿಂದಿನ ಮಹಾಕವಿಗಳಾದ ನೃಪತುಂಗ ಪಂಪರನ್ನು ಕುರಿತೆಂದಿದ್ದಾರೆ ಈಗಿನ ಕವಿಗಳೊಬ್ಬರು. ಕವಿ ರಾಜನಾಗಿದ್ದ, ಸೇನಾಧಿಪತಿ ಆಗಿದ್ದ, ಕರಣಿಕನಾಗಿದ್ದ' ಮಂತ್ರಿಯಾಗಿದ್ದ. ಆದರೆ ಇವೆಲ್ಲಕ್ಕೂ ಹೆಚ್ಚಿನದಾಗಿ ಕವಿ ಜ್ಞಾನಿಯಾಗಿದ್ದ, ತತ್ವವೇತ್ತನಾಗಿದ್ದ, ದಾರ್ಶನಿಕನೂ ಆಗಿದ್ದ, ಕಲಾಶಿಲ್ಪಿಯೂ ಆಗಿದ್ದ, ಕ್ರಾಂತಿಕಾರನಾಗಿದ್ದ, ಸುಧಾರಕನೂ ಆಗಿದ್ದ, ಕೊನೆಗೆ ಸಂತ, ಪ್ರವಾದಿಯೂ ಆಗಿದ್ದ ; ರಾಮಾಯಣದಂತಹ ಸರ್ವಾಂಗ ಸುಂದರ ರಸಾಮೃತವನ್ನು ನೀಡಿದ ವಾಲ್ಮೀಕಿ ಮಹಾತಪಸ್ವಿ, ಋಷಿ, ಗುರು, ಮಹಾಭಾರತದಂತಹ ಇತಿಹಾಸ ಧರ್ಮಗ್ರಂಥ ರಚಿಸಿ ಅದರಲ್ಲಿ ಭಗವದ್ಗೀತೆಯ ಸುಂದರ ಕಾವ್ಯಮಯ ರೂಪಕದಲ್ಲಿ ಬಾಳಿನ ರಹಸ್ಯವನ್ನೆಲ್ಲ ಬೋಧಿಸಿ ಮಹಾತತ್ವ ದರ್ಶನ ಮಾಡಿಸಿದ ವ್ಯಾಸರು ಮಹಾಜ್ಞಾನಿಗಳು. ಆ ಕಾಲದ ಗುರುಗಳು ತತ್ವವೇತ್ತರು. ತುಲಸೀದಾಸ, ತುಕಾರಾಮ, ರಾಮದಾಸ, ಕನ್ನಡದ ದಾಸರು, ಶರಣರು, ತಮಿಳಿನ ಆಳ್ವಾರುಗಳು, ಶಿವಶರಣರು, ಸಂತಕವಿಗಳು. ಅವರ ಕಾವ್ಯದಲ್ಲಿ ರಸವಿದೆ, ಆನಂದದ ಅನುಭವವೂ ಇದೆ; ಧರ್ಮದರ್ಶನವೂ ಇದೆ, ತತ್ವ ಜಿಜ್ಞಾಸೆಯೂ ಇದೆ, ಸಾಮಾಜಿಕ ರೀತಿನೀತಿಗಳನ್ನೂ ಬೋಧಿಸಿದ್ದಾರೆ. ಬಸವಣ್ಣನವರಂಥ ಕವಿಗಳು ಕಾವ್ಯದಲ್ಲಿ ಮಾತ್ರವೇ ಅಲ್ಲ, ಧರ್ಮದಲ್ಲೂ ಸಮಾಜದಲ್ಲೂ ಕ್ರಾಂತಿಯನ್ನೇ ಎಬ್ಬಿಸಿದಾರೆ. ಚಾರ್ಲ್ಸ್ ಡಿಕನ್ಸ್ ತನ್ನ ಅನೇಕ ಕಾದಂಬರಿಗಳಲ್ಲಿ ಅಂದು ಇದ್ದ ಸಾಮಾಜಿಕ ದುಃಸ್ಥಿತಿಗಳನ್ನು ಹೃದಯಂಗಮವಾಗಿ ವಿವರಿಸಿದ್ದಾನೆ. ಎಳೆ ವಯಸ್ಸಿನ ಮಕ್ಕಳನ್ನು ಹೇಗೆ ಕಠಿನ ತರವಾದ ಕೆಲಸಗಳಿಗೆ ಉಪಯೋಗಿಸುತ್ತಿದ್ದರು, ಕಾರ್ಖಾನೆಗಳ ಹೊಗೆ ಕೊಳವಿಯೊಳಗೆ ಇಳಿದು ಒರೆಸುವುದೇ ಮುಂತಾದ ಕಷ್ಟದ ಕೆಲಸಗಳಿಗೂ ಮಕ್ಕಳನ್ನು ನಿಯೋಗಿಸುತ್ತಿದ್ದರು ಎನ್ನುವುದನ್ನೆಲ್ಲ ಚಿತ್ರಿಸಿದ್ದಾನೆ. ಆಗಿನ ಕಾಲದಲ್ಲಿ ಡಿಕನ್ಸ್‌ನ ಕಾದಂಬರಿಗಳು ಕ್ರಾಂತಿಯನ್ನೇ ಉಂಟು ಮಾಡಿದವು. ಅದರ ಪರಿಣಾಮವಾಗಿ ಎಳೆ ಮಕ್ಕಳನ್ನು ಕಷ್ಟದ ಕೆಲಸಕ್ಕೆ ಸೇರಿಸಬಾರದೆಂದು ಪಾರ್ಲಿಮೆಂಟಿನಲ್ಲಿ ನಿಷೇಧಾಜ್ಞೆ ಮಾಡಲಾಯಿತು. ಇಂಥ ಸಮಾಜ ಸುಧಾರಣೆ ಆದದ್ದು ಕವಿಯ ಲೆಕ್ಕಣಿಯಿಂದಲೇ. ಫ್ರಾನ್ಸಿನ ಕತೆಯಂತೂ ಇನ್ನೂ ಹೆಚ್ಚಿನದು. ವಾಲ್ಟೇರ್ ರೂಸೋಗಳಂತಹ ಉಜ್ವಲ ಸಾಹಿತಿಗಳೂ ಫ್ರಾನ್ಸಿನಲ್ಲಿ ದೊಡ್ಡ ಕ್ರಾಂತಿಗೆ ಬೀಜ ಬಿತ್ತಿದರು. ಫ್ರಾನ್ಸಿನ ಮಹಾ ಕ್ರಾಂತಿಯ ಮೂಲಮಂತ್ರ, ಸ್ವಾತಂತ್ರ್ಯ, ಸಮತೆ ಮತ್ತು ಸಹೋದರತ್ವ –Liberty, Equality and Fraternity ಈ ಮಂತ್ರದ ಸೃಷ್ಟಿಕರ್ತರು ಆ ಮಹಾ ಸಾಹಿತಿಗಳೇ. ಇದು ಕ್ರಾಂತಿಕಾರಿ ಕವಿಯ ಒಂದು ಚಿತ್ರ.

ನಾವೀಗ ನೋಡ ಹೊರಟಿರುವುದು ಕವಿಯ ಇನ್ನೊಂದು ಮುಖ. ಇಂಥೆಲ್ಲ ಪಾತ್ರವಹಿಸುವ ಕವಿ ಪ್ರವಾದಿಯೂ ಆಗುತ್ತಾನೆ. ಎತ್ತರದಲ್ಲಿ ನಿಂತವನು ತಗ್ಗಿನವನು ಕಾಣಲಾರದ ವಿಶಾಲ ದೃಶ್ಯವನ್ನು ಕಾಣುತ್ತಾನೆ. ಅಂತೆಯೇ ಸಾಧಾರಣ ಜೀವಿಯೊಡನಿದ್ದರೂ ಅವನಿಗಿಂತ ದೂರದರ್ಶಿತ್ವ ಉಳ್ಳ ಕವಿ ಭೂತ ಭವಿಷ್ಯತ್ತುಗಳ ವಿಶಾಲ ಲೋಕವನ್ನು ದರ್ಶನ ಮಾಡಿಕೊಳ್ಳುತ್ತಾನೆ. ಅಷ್ಟೇ ಅಲ್ಲ, ತನಗಾದ ಅನುಭವವನ್ನೆಲ್ಲ ತನ್ನವರಿಗೆ ಹೇಳಿಯೂ ಹೇಳುತ್ತಾನೆ. ಬೇಲೂರನ್ನು ನೋಡಿ ಬಂದವನು ನೋಡದೆ ಇರುವ ತನ್ನವರಿಗೆ ಅಲ್ಲಿನ ಕಲೆಯನ್ನು ಕುರಿತು ಹೇಳುವ ಹಾಗೆ, ಅಲ್ಲಿನ ಶಿಲ್ಪದ ಚಿತ್ರಗಳನ್ನು ತೋರಿಸುವ ಹಾಗೆ. ಅಲೌಕಿಕ ಆನಂದದ ಅನುಭವ ಮಾಡಿಕೊಂಡ ಕವಿ ಆ ಅನುಭವವನ್ನೆಲ್ಲ ರಸಮಯವಾಗಿ ಹಾಡುತ್ತಾನೆ, ತನ್ನ ಸುತ್ತಲವರಿಗೆ. ತಾನು ಕಂಡ ವೈಶಾಲ್ಯವನ್ನು ಬಣ್ಣಿಸುತ್ತಾನೆ. ಪ್ರವಾದಿಯಾಗುತ್ತಾನೆ. "ನಾನು ಕವಿ, ನಾನು ಪ್ರವಾದಿ" ಎಂದು ಒಂದು ಕಡೆ ಎನ್ನುತ್ತಾರೆ ಗೋಕಾಕರು. ಗೀಬ್ರಾನ್ ಕವಿಯು 'ಪ್ರವಾದಿ' ಅಂಥ ಸತ್ಯದ ದರ್ಶನ ಮಾಡಿಸುತ್ತದೆ.

ಪ್ರವಾದಿ ಜನರ ನಡುವೆಯೇ ಇರುವವನು. ಆದರೆ ಅವರಿಗಿಂತ ಎತ್ತರ ಏರಬಲ್ಲವ. ಅವರ ಕಣ್ಣಿಗಿಂತ ಅವನದು ಹೆಚ್ಚು ಸೂಕ್ಷ್ಮ, ಶಕ್ತಿಯುತ. ಎಲ್ಲ ಜೀವಿಗಳೂ ಯಾವುದೋ ಮಹಾಚೇತನದ ಮಹಾಜ್ವಾಲೆಯ ಕಿಡಿಗಳೇ. ಆದರೆ ಅದನ್ನರಿತವರು ಎಲ್ಲರೂ ಅಲ್ಲ. ಪ್ರವಾದಿ ಅದನ್ನು ಕಂಡುಕೊಂಡಿದ್ದಾನೆ. ಈ ಲೋಕವೇ, ಈ ಜೀವನವೇ ಸಮಸ್ತ ಸರ್ವಸ್ವ ಎಂದು ಉಳಿದವರ ಭಾವನೆ. ಪ್ರವಾದಿಗೆ ಹಾಗಲ್ಲ. "ಇದೊಂದು ಮಧ್ಯಂತರ ವ್ಯವಸ್ಥೆ ಅಷ್ಟೆ, ನಾನು ಬಂದುದು ಅಲ್ಲಿಂದ, ನಾನು ಹೋಗುವುದೂ ಅಲ್ಲಿಗೇ. ಏನೋ ಉದ್ದೇಶ್ಯದಿಂದ ನನ್ನ ಜನ್ಮವಾಗಿದೆ ಇಲ್ಲಿ. ಅದು ಪೂರೈಸಿದೊಡನೆ ನನ್ನ ಇಲ್ಲಿನ ಬದುಕೂ ಮುಗಿಯಬೇಕು. ನನ್ನ ಹಾದಿ ನಾನು ಹಿಡಿಯಬೇಕು. ಮತ್ತೆ ಬರಬೇಕಾದ ಅಗತ್ಯವಿದ್ದರೆ ಬಂದರಾಯಿತು" ಎಂದುಕೊಂಡು, ಅಂತೆಯೆ ನಿರ್ಲಿಪ್ತ ಜೀವನ ನಡೆಸುತ್ತಾನೆ. ಸುತ್ತಲವರಿಗೆ ಪ್ರೀತಿಯ, ಜ್ಞಾನದ ಮಳೆಗರೆಯುತ್ತ ಸಜ್ಜೀವನದ ಸಂದೇಶ ಬೀರುತ್ತ ತನ್ನ ಜನ್ಮೋದ್ದೇಶವನ್ನು ಸಾಧಿಸುತ್ತಾನೆ.

೨

ಈಗ ಪ್ರವಾದಿಯ ಇಹಲೋಕ ಜೀವನದ ಕೊನೆಯ ಘಟ್ಟ. ಕೊನೆಯನ್ನು ಮೊದಲೇ ತಿಳಿದಿದ್ದ ಆತ. ಈಗ ಸುಗ್ಗಿಯ ಕಾಲ. ಆತನ ಜೀವನದ ಸುಗ್ಗಿಯೂ ಹೌದು. ಆ ದಿನ ಆತ ಹೊರಗೆ ಹೋಗಿ ಗುಡ್ಡವೇರಿ ಕಡಲಿನ ಕಡೆ ನೋಡಿದ. ದೂರದಲ್ಲಿ ಮುಸಕು ಮುಸಕಾಗಿ ನಾವೆ ಬರುತ್ತಿರುವುದು ಕಂಡಿತು. ಅದರಲ್ಲಿ ಆತ ಇನ್ನು ಹೊರಡಬೇಕು ತನ್ನ ತಾಯಿನಾಡಿಗೆ. ಅವನ ಸಂತಸ ಎದೆ ತುಂಬಿತು. ಕಣ್ಣು ಮುಚ್ಚಿ ಧ್ಯಾನಿಸಿದ. ಆದರೆ ದೇಹತ್ಯಾಗ ಅಷ್ಟು ಸುಲಭವೆ? ಹಳೆಯ ಬಟ್ಟೆ ಹರಿದುಹೋದರೆ ಅದನ್ನು ಬಿಸುಟು ಹೊಸದು ತೊಡುತ್ತದೆ ಆತ್ಮ ಎನ್ನುತ್ತದೆ ಗೀತೆ. ಇಹಜೀವನದ ತ್ಯಾಗ ಹಳೆ ಅಂಗಿಯನ್ನು ತೆಗೆದುಹಾಕುವಷ್ಟು ಸರಾಗವೆ? ಬಾಳಿನ ನೋವು ನಲಿವುಗಳನ್ನು ಅನುಭವಿಸಿದ ಜೀವಕ್ಕೆ ಅಷ್ಟು ಸುಲಭ ಆಗಲಾರದು. ಪ್ರವಾದಿಯ ಅನುಭವವೂ ಅಂತೆಯೆ. "ನಾನು ಹಳೆಯ ಬಟ್ಟೆ ತೆಗೆದುಹಾಕುತ್ತಿಲ್ಲ. ನನ್ನ ಚರ್ಮವನ್ನೇ ಸುಲಿದು ಒಗೆಯುತ್ತಿದ್ದೇನೆ. ನನ್ನ ಹಿಂದೆ ನಾನು ಬಿಟ್ಟುಹೋಗುವುದು ಒಂದು ವಿಚಾರ ಮಾತ್ರ ಅಲ್ಲ. ಹಸಿವು ಬಾಯಾರಿಕೆಗಳಿಂದ ಸವಿಗೊಂಡ ಹೃದಯವನ್ನೇ ಬಿಟ್ಟು ಹೋಗುತ್ತೇನೆ" ಎನಿಸುತ್ತದೆ. ಹಾಗೆಂದು ನಿಲ್ಲಲಾದೀತೆ? ಸಮಸ್ತವನ್ನೂ ತನ್ನೆಡೆಗೆ ಕರೆಯುವ ಅನಂತ ಸಾಗರ ಅವನನ್ನು ಕರೆಯುತ್ತಿದೆ. ಹೋಗಲೇಬೇಕು. ಹೋಗದೆ ನಿಂತರೆ ಮಣ್ಣಾಗಿ ಕಲ್ಲಾಗಿ ಬಿದ್ದಿರಬೇಕಾಗುತ್ತದೆ. ಹೋದರೆ ಅನಂತದೊಡನೆ ಲೀನವಾಗಬಹುದು. ಹೋಗುವಾಗ ತನ್ನೊಡನೆ ಇದ್ದವರನ್ನೂ ಕರೆದೊಯ್ಯಬೇಕೆಂದು ಆಸೆಯೇನೊ ಇದೆ. ಅವರೊಡನೆ ಅವನ ಜೀವ ಬೆಸೆದಿದೆ, ಬೆರೆತಿದೆ, ಒಂದಾಗಿದೆ. ಆದರೆ ಕರೆದೊಯ್ಯುವುದು ಹೇಗೆ ಸಾಧ್ಯ? ನಾಲಗೆ ತುಟಿಗಳಿಂದ ಹುಟ್ಟಿದ ಮಾತು ಅವನ್ನು ಬಿಟ್ಟು ಹೊರಹೋದಾಗಲೇ ಅದರ ಸಾರ್ಥಕ್ಯ. ಆಗಲೇ ಅದು ಅನಂತ ಶಬ್ದವಾಗುತ್ತದೆ. ಗಗನದಲ್ಲಿ ವಿಹರಿಸುವ ಗರುಡ ತನ್ನ ಗೂಡನ್ನು ಬಿಟ್ಟು ಮೇಲೆ ಹಾರಲೇಬೇಕು.

ನದಿಗೆ ಹೊಳೆಗೆ ಸಾಗರವೇ ಕೊನೆ. ಅಲ್ಲೇ ಅದಕ್ಕೆ ಮುಕ್ತಿ. ನದಿಯ ಸ್ವಾತಂತ್ರ್ಯ ಸಾರ್ಥಕ್ಯ ಕಡಲಿನಲ್ಲಿ. ಕಡಲನ್ನು ಸೇರುವ ಮುನ್ನ ಒಮ್ಮೆ ಒಂದೇ ಒಂದು ಬಾರಿ ಒಂದು ಬಳಸು ಹರಿದು, ಒಂದು ಗಾನ ಹಾಡಿ, ಅನಂತರ ಸೇರುತ್ತದೆ. ಅಂತೆಯೆ ಪ್ರವಾದಿಯೂ ಆಮೇಲೆ ಅನಂತಸಾಗರದಲ್ಲಿ ಅನಂತಬಿಂದುವಾಗಿ ಸೇರಿ ಹೋಗುತ್ತಾನೆ.

ಆ ವೇಳೆಗೆ ಈ ಸುದ್ದಿಯನ್ನರಿತ ಜನವೆಲ್ಲ ತಮ್ಮ ಕೆಲಸ ಕಾರ್ಯ ಹೊಲ ಗದ್ದೆ ಬಿಟ್ಟು ಓಡಿಬರುತ್ತಾರೆ. ತಮ್ಮ ಜೀವನದ ಬೆಳಕಾಗಿದ್ದ ಪ್ರವಾದಿ ತಮ್ಮನ್ನಗಲುವುದನ್ನು ತಾಳಲಾರದೆ ಕಂಬನಿ ಸುರಿಸುತ್ತಾರೆ. ಅದನ್ನು ಕಂಡ ಪ್ರವಾದಿಯ ಎದೆಯೂ ಮಿಡಿಯುತ್ತದೆ. ಈ ಮುಗ್ಧ ಜೀವಿಗಳೊಡನೆ ಆತನ ಬಾಳು ಸಾಗಿದೆ. ಅವರೇ ಅವನ ಜೀವನದ ಜೀವ. ಅವರಿಗಾಗಿಯೆ ಬದುಕಿದ್ದಾನೆ. "ಈ ಸಮಯದಲ್ಲಿ ಅವರು ಇಷ್ಟು ಕಾತರರಾಗಿ ಇಷ್ಟು ಪ್ರೇಮಮಯರಾಗಿ ನನ್ನೆಡೆಗೆ ಬರುತ್ತಿದಾರೆ. ನಾನವರಿಗೆ ಏನು ಸಮಾಧಾನ ನೀಡಲಿ? ಅವರಿಗೆ ಎಂಥ ಹಾಡು ಹಾಡಲಿ? ನನ್ನೆದೆ ರಸಮಯ ಫಲಗಳಿಂದ ತುಂಬಿದ ಮರವಾಗಬಾರದಿತ್ತೆ? ಹಣ್ಣುಗಳನ್ನಾರಿಸಿ ಅವರಿಗೆ ಕೊಡುತ್ತಿದ್ದೆ. ನನ್ನಾಸೆಗಳೆಲ್ಲ ಚಿಲುಮೆಗಳಾಗಿ ಮಧುರವಾದ ನೀರುಗರೆಯಬಾರದಿತ್ತೆ? ಅವರ ಪಾತ್ರೆಗಳನ್ನು ತುಂಬಿಕೊಡುತ್ತಿದ್ದೆ. ಇದೇ ನನ್ನ ಸುಗ್ಗಿಯ ದಿನವಾದರೆ ನಾನು ಕೃಷಿ ಮಾಡಿದ್ದು ತಾನೆ ಎಲ್ಲಿ? ಯಾವ ಕಾಲದಲ್ಲಿ? ನನ್ನ ಈ ದೀಪವನ್ನು ಮೇಲೆತ್ತುವ ಗಳಿಗೆ ಇದೇ ಆದರೆ, ಈ ದೀಪದಲ್ಲಿ ನನ್ನ ಜ್ಯೋತಿ ಉರಿಸುವುದಿಲ್ಲ. ಬರಿದಾದ ದೀಪವನ್ನು ಹಾಗೇ ಎತ್ತುತ್ತೇನೆ. ರಾತ್ರಿಯ ರಕ್ಷಕ ತಾನೇ ಎಣ್ಣೆ ತುಂಬಿ ತನ್ನ ದೀಪ ಹತ್ತಿಸುತ್ತಾನೆ" ಎಂದುಕೊಳ್ಳುತ್ತಾನೆ. ನಮ್ಮಲ್ಲಿ ನಮ್ಮತನ ಇರುವವರೆಗೆ ದೈವೀಭಾವ ಬರುವುದಕ್ಕೆ ಎಡೆಯೆಲ್ಲಿ?

ಈ ವೇಳೆಗೆ ಊರಜನವೆಲ್ಲ ಬಂದು ಬೇಡಿಕೊಳ್ಳುತ್ತಾರೆ: "ನೀನು ಹೋಗಬೇಡ, ನಿನ್ನನ್ನರಸಿ ಅರಸಿ ಆಯಾಸಗೊಳ್ಳುವ ತ್ರಾಸು ಕೊಡಬೇಡ ನಮ್ಮ ಕಣ್ಣಿಗೆ" ಎಂದು ಅಂಗಲಾಚುತ್ತಾರೆ. ಪ್ರವಾದಿಗೆ ಎದೆ ತುಂಬಿಬಂದು, ಆತ ಮಾರುತ್ತರವಿಲ್ಲದೆಯೆ ಊರ ಕಡೆ ಹೊರಡುತ್ತಾನೆ. ಅಲ್ಲಿ ಒಬ್ಬಾಕೆ ಅನುಭಾವಿ ಬಂದೆನ್ನುತ್ತಾಳೆ: "ನೀನು ನಮಗೆ ಎಷ್ಟು ಬೇಕಾಗಿದ್ದರೂ, ಈಗ ಹೋಗದಿರು ಎನ್ನಬಾರದು ನಾವು. ನೀನು ಕಾದು ನಿಂತಿದ್ದ ಗಳಿಗೆ ಬಂದಿದೆ. ದೋಣಿ ಬಂದಿದೆ; ಏರಿ ಹೋಗಲೇಬೇಕು. ನಿನ್ನ ಮೇಲೆ ನಮಗಿರುವ ಪ್ರೀತಿ ನಿನ್ನನ್ನು ಇಲ್ಲಿ ಕಟ್ಟಿಹಾಕುವ ಬಂಧನವಾಗಬಾರದು. ಆದರೆ ಹೋಗುವ ಮುನ್ನ ನಿನ್ನ ಸತ್ಯ ದರ್ಶನವನ್ನು ನಮಗೆ ತಿಳಿಸು. ನಾವು ಕೇಳಿ ನಮ್ಮ ಮಕ್ಕಳಿಗೆ ಹೇಳುತ್ತೇವೆ. ಹಾಗೇ ಅದು ನಿಲ್ಲದೆ ಹರಿಯುತ್ತದೆ. ನಿನ್ನ ಏಕಾಂತತೆಯಲ್ಲಿ ನಮ್ಮ ಹಗಲನ್ನೆಲ್ಲ ಗಮನಿಸಿದ್ದೀಯೆ. ನಿನ್ನ ಎಚ್ಚರದಲ್ಲಿ ನಮ್ಮ ನಿದ್ದೆಯ ನಗೆ–ಅಳುಗಳನ್ನು ಆಲಿಸಿದ್ದೀಯೆ: ಅಂತೆಯೆ ಬಾಳಿನ ಸತ್ಯವನ್ನು ತೋರು."

ಇಲ್ಲಿ ಗೀತೆಯ ಮಾತು ನೆನಪಾಗುವುದು ಸಹಜ:

ಯಾ ನಿಶಾ ಸರ್ವ ಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ||

ಇದು ಸ್ಥಿತಪ್ರಜ್ಞನ, ಯೋಗಿಯ ಲಕ್ಷಣ.

ಜನ ಕೇಳುವ ಬಾಳಿನ ಎಲ್ಲ ವಿಷಯಗಳ ಬಗ್ಗೆಯೂ ಪ್ರವಾದಿ ಸತ್ಯವನ್ನು ತಿಳಿಸುತ್ತಾನೆ. ಈ ವಿಷಯಗಳು ಐಹಿಕ ಪಾರಮಾರ್ಥಿಕ ಎಲ್ಲವನ್ನೂ ಒಳಗೊಂಡಿವೆ. ಬಾಳಿಗೆ ಎರಡೂ ಬೇಕಲ್ಲ. ಇಹದಲ್ಲಿ ಸಜ್ಜೀವನ ನಡೆಸದೆ ಪರದಲ್ಲಿ ಸದ್ಗತಿ ಬಯಸಿದರೆ ಹೇಗೆ? ಪರದ ಚಿಂತೆ ಮಾಡದೆ ಇಹದಲ್ಲೇ ಮುಳುಗಿದ್ದರೆ ಬಾಳು ಕೆಸರಿನಲ್ಲಿ ಸಿಕ್ಕಿಕೊಳ್ಳುತ್ತದೆ. ಅದನ್ನು ಮೀರಿ ಮೇಲೆದ್ದು ಅರಳುವುದು ಹೇಗೆ? ಪ್ರವಾದಿ ಎಲ್ಲ ವಿಷಯಗಳನ್ನೂ ಪ್ರಸ್ತಾಪಿಸಿ ತನ್ನ ಎದೆಯನ್ನು ಬಿಚ್ಚಿ ಹರಹುತ್ತಾನೆ. ಒಂದೊಂದು ಮಾತಿನಲ್ಲೂ ಅನುಭವದ ಅನುಭಾವದ ಪರಿಮಳ ತಾನೇ ತಾನಾಗಿ ಹೊರಸೂಸುತ್ತದೆ.

ಪ್ರೇಮ, ಮದುವೆ ಮಕ್ಕಳು, ಮನೆ, ಉಡುಪುಗಳಿಂದ ಮೊದಲುಗೊಂಡು ದಾನ ಕರ್ಮ ಸುಖ ದುಃಖ ನೋವು ನಲಿವು ಕಾಲಧರ್ಮ ಸೌಂದರ್ಯ ಪ್ರಾರ್ಥನೆ, ಕೊನೆಗೆ ಸಾವು, ಹೀಗೆ ಜೀವನದ ಎಲ್ಲ ಮುಖಗಳಲ್ಲೂ ಸತ್ಯದ ದರ್ಶನ ಮಾಡಿಸುತ್ತಾನೆ. ಇವೆಲ್ಲದರಲ್ಲೂ ಮೂಲತಃ ಒಂದೇ ದೃಷ್ಟಿ, ಊರ್ಧ್ವಗಮನ. ಪ್ರವಾದಿ ಯಾವ ಮಾತೇ ಎತ್ತಿಕೊಳ್ಳಲಿ, ಅದು ಲೌಕಿಕವೋ ಅಲೌಕಿಕವೋ, ಅವನ ದೃಷ್ಟಿ ಹರಿಯುವುದು ಒಂದೇ ನಿಟ್ಟಿನಲ್ಲಿ. ಇದು ನೆಲ ಬಿಟ್ಟು ಮೇಲೇರುವ ಗರುಡಾತ್ಮನ ಗಮನ, ಗುರಿ ಅದೇ, ಅನಂತದಲ್ಲಿ ಲೀನವಾಗುವುದು. ನಾವು ನಾವು ಅದಕ್ಕೆ ಏನೇ ಹೆಸರು ಕೊಡಬಹುದು. ಸಾಕ್ಷಾತ್ಕಾರ ಎನ್ನಿ, ನಿರ್ವಾಣ ಎನ್ನಿ, ದೇವಸಾಮ್ರಾಜ್ಯ (Kingdom of God) ಎನ್ನಿ, ಕೈವಲ್ಯ ಎನ್ನಿ, ಇವೆಲ್ಲ ಭಿನ್ನ ಭಿನ್ನ ಹೆಸರು. ಆದರೆ ವಸ್ತು ಒಂದೇ. ಯಾವುದೋ ಸಚ್ಚಿದಾನಂದದ ದರ್ಶನದ ಅನುಭವ.

ಈ ಗುರಿ ಇಟ್ಟುಕೊಂಡವನು ತನ್ನ ಬಾಳನ್ನೆಲ್ಲ ಅದಕ್ಕೆ ತಕ್ಕಂತೆಯೇ ನಡೆಸಬೇಕು. ಮೈಸೂರಿಗೆ ಹೊರಟವನು ಮದರಾಸಿನ ದಾರಿ ಹಿಡಿದರೆ ಹೇಗೆ? ಆದ್ದರಿಂದ ನಾವು ಎಲ್ಲೇ ಇರಲಿ, ಏನೇ ಲೌಕಿಕ ಜೀವನ ನಡೆಸುತ್ತಿರಲಿ, ಪ್ರತಿಯೊಂದು ಕೃತಿಯಲ್ಲೂ ಚಿಂತೆಯಲ್ಲೂ ಅದೇ ಗುರಿಯತ್ತ ನಮ್ಮ ಗಮನವಿರಬೇಕು. ಅದಕ್ಕೆ ತಕ್ಕಂಥ ಸಜ್ಜೀವನ ನಡೆಸಬೇಕು. ಪ್ರವಾದಿಯ ಎಲ್ಲ ಮಾತುಗಳಲ್ಲೂ ಇದೇ ಊರ್ಧ್ವಗಾಮಿಯಾದ ಚೇತನದ ದರ್ಶನವೇ ನಮಗಾಗುತ್ತದೆ.

(ಮುಂದುವರಿಯುವುದು)

---

## ತಿರುಕರ ಹಾಡು

ಧರ್ಮರೇ ತಾಯ್ತಂದೆ ಶಿವ ಶಿವಾ ಶಿವ ನೀವು |
ತಿರುಕರೆಮ್ಮನು ನೋಡಿ ಮರುಕತೋರಿಸಿರೊಡೆಯ || ಪ ||

ಬೆಳಗಾಗಿ ಬಿಸಿಲೇರೆ ಬಡಗುಡಿಸಲನು ಬಿಟ್ಟು
ಒಡನಾಡಿಗಳ ಕೂಡೆ ಗುಂಪಾಗಿ ಹೊರಡುವವು !
ಒಡಕು ಮಡಿಕೆಯ ಮಣ್ಣು ಮುರುಕುಗಳ ಹುಡುಕಿ,
ಹಾಳು ಹೊಟ್ಟೆಯ ಪಾಡು! ತಿರುಪ ಬೇಡುತಲಿಹೆವು || ೧ ||

ಬೇಡಿದರು ಬೇಸತ್ತು ಕಾಡಿದರು ಗೋಗರೆದು
'ನಡೆ ಮುಂದೆ! ನಡೆ ಮುಂದೆ!' ಎಂಬೊಂದೆ ನುಡಿಯು
ನಡೆನಡೆದು ಸಾಕಾಯ್ತು! ಕೈಕಾಲು ಸೋತಾಯ್ತು!
ಇಳೆಯಂಚು ಬಲುದೂರ ನಿಲುಕುವಂತಿಲ್ಲ || ೨ ||

ಬೇಸಿಗೆಯ ಬಿಸಿಲೆಂದು, ಚಳಿಗಾಲ ಚಳಿಯೆಂದು
ದಿನವೊಂದರಾರಾಮವೆಮಗಿಲ್ಲವಾಯ್ತು!
ನೆರಳೆಂದು ನಿಲಲಿಲ್ಲ! ಮಳೆಯೆಂದು ಬಿಡಲಿಲ್ಲ!
ದಿನದಿನವು ಬೇಡುವೆವು ಬಿಡಲಾಗದೀ ಕರ್ಮ || ೩ ||

ಮನೆಮನೆಯ ಬಾಗಿಲಲಿ ಅಂಗಲಾಚುತ ಸುತ್ತಿ
ಬರಿ ಹೊಟ್ಟೆ! ಬರಿ ಗೈಯು! ತುತ್ತೊಂದು ಗತಿಯಿಲ್ಲ!
ಕರುಣೆಯನು ತೋರಿಸಿರಿ; ಕೊಡುವವರು ಕೊಡಿರಪ್ಪ!
ಕೈಯೊಡ್ಡಿ ಕೊಟ್ಟುದುದ ಎದೆಗಪ್ಪಿ ಹಿಗ್ಗುವೆವು! || ೪ ||

ಕೊಟ್ಟವರು ಅರಸಾಗಿ ಕೊಡದವರು ರಿಸಿಯಾಗಿ
ರೇಗದಿರಿ ನಮ್ಮೊಡೆಯ ಹಾಳೊಡಲ ತಾಪ!
ದೇವ ಕರುಣಿಸಿಕೊಟ್ಟ, ನಾವು ಬೇಡಿದುದಿಷ್ಟು;
ತಿರಿ ತಿರಿದು ಸುತ್ತುತ್ತ ಸಾಯುವುದೆ ಕೊನೆಯೆಮಗೆ || ೫ ||
|| ಧರ್ಮರೇ ||

**ದಿ|| ಟಿ. ಎನ್. ಮಹಾದೇವಯ್ಯ**

# ಗಂಗಾಧರಂ ಶಾಸನ-ಒಂದು ಉತ್ತರ



ಎಂ. ಎಂ. ಕಲಬುರ್ಗಿ

ಪಂಪ ಮಹಾಕವಿಯ ತಾಯಿಯು ಜೋಯಿಸಸಿಂಘನ ಮಗಳೇ? ಮೊಮ್ಮಗಳೇ? ಎಂಬ ವಿಷಯದ ಬಗೆಗೆ ಡಾ|| ಪಿ. ಬಿ. ದೇಸಾಯಿ ಅವರಿಗೂ ನನಗೂ ಲೇಖನ ಮರು ಲೇಖನಗಳ ಚರ್ಚೆ ನಡೆದು ಇಲ್ಲಿಗೆ ಒಂದು ವರ್ಷಗತಿಸಿತು. ಈ ಮಧ್ಯ ಡಾ|| ಚಿದಾನಂದಮೂರ್ತಿಗಳು ನನ್ನ ಅಭಿಪ್ರಾಯವೇ ಸರಿಯೆಂದು ನಿಷ್ಪಕ್ಷಪಾತ ಹೇಳಿಕೆಯನ್ನು[೧] ವ್ಯಕ್ತಪಡಿಸುವಲ್ಲಿ ಈ ಚರ್ಚೆ ಒಂದು ಘಟ್ಟಕ್ಕೆ ಬಂದಿತ್ತು. ಈಗ ಮತ್ತೆ ಡಾ|| ದೇಸಾಯಿ ಅವರು ಕನ್ನಡನುಡಿ[೨]ಯಲ್ಲಿ 'ಗಂಗಾಧರಂ ಶಾಸನ-ಕೈಗೆ ಕನ್ನಡಿ' ಎಂಬ ಇನ್ನೊಂದು ಲೇಖನ ಬರೆದು ನನ್ನ ಅಭಿಪ್ರಾಯವನ್ನು (ನ್ಯಾಯವಾಗಿ ಹೇಳಬೇಕೆಂದರೆ ನನ್ನನ್ನು) ಟೀಕಿಸಿದ್ದಾರೆ. ಇದೇ ಸಮಯಕ್ಕೆ ಮೈಸೂರು ರಾಜ್ಯದ ಶಾಸನ ಇಲಾಖೆಯ ವರಿಷ್ಠ ಅಧಿಕಾರಿಗಳೂ, ಸುಪ್ರಸಿದ್ಧ ಶಾಸನ ವಿದ್ವಾಂಸರೂ ಆದ ಶ್ರೀ ಜಿ. ಎಸ್. ಗಾಯಿ ಅವರು ಶಾಸನವಿದ್ದಸ್ಥಳಕ್ಕೆ ಹೋಗಿ, ಶಾಸನ ಶಿಲೆಯನ್ನು ಕಣ್ಣಾರೆ ಪರೀಕ್ಷಿಸಿ,[೩] ಶಾಸನ ನಕಲನ್ನು ಅಭ್ಯಸಿಸಿ ಪ್ರಬುದ್ಧ ಕರ್ಣಾಟಕ[೪]ದಲ್ಲಿ 'ಪಂಪನ ತಮ್ಮ ಜಿನವಲ್ಲಭನ ಶಾಸನ' ಎಂಬ ಲೇಖನ ಬರೆಯುತ್ತ ನನ್ನ ಅಭಿಪ್ರಾಯವನ್ನು ನಿರ್ಣಯಾತ್ಮಕವಾಗಿ ಎತ್ತಿಹಿಡಿದಿದ್ದಾರೆ. ಶ್ರೀ ದೇಸಾಯಿ ಅವರಿಗೆ ಶ್ರೀ ಗಾಯಿ ಅವರ ಲೇಖನವೇ ಉತ್ತರ ರೂಪದಲ್ಲಿರುವಾಗ ಈ ಲೇಖನ ಅನವಶ್ಯ. ಆದರೂ ಶ್ರೀ ದೇಸಾಯಿ ಅವರ ಲೇಖನದ ನಾಲ್ಕು ಅಂಶಗಳನ್ನು ಇಲ್ಲಿ ಚರ್ಚಿಸುವದು ಅನಿವಾರ್ಯವಾಗಿದೆ.

(೧) ಶ್ರೀ ದೇಸಾಯಿ ಅವರು "ಜೋಯಿಸಸಿಂಘನ ಮರ್ಮವಬ್ಬಣಬ್ಬೆಯ ಮಗಂ" ಎಂಬ ಪಾಠವನ್ನು ಇಟ್ಟುಕೊಂಡು, ಅದನ್ನು "ಜೋಯಿಸಸಿಂಘನ ಮರ್ಮಂ+ ಅಬ್ಬಣಬ್ಬೆಯ ಮಗಂ" ಎಂದು ಬಿಡಿಸಿದ್ದಾರೆ. ಹೀಗೆ ಬಿಡಿಸಿ ಮತ್ತೆ ಕೂಡಿಸಿದಲ್ಲಿ ಜೋಯಿಸಸಿಂಘನಮರ್ಮನಬ್ಬಣಬ್ಬೆಯಮಗಂ" ಎಂದಾಗುತ್ತದೆಯೇ ಹೊರತು ಶ್ರೀ ದೇಸಾಯಿ ಅವರು ಹೇಳುವಂತೆ "ಜೋಯಿಸಸಿಂಘನ ಮರ್ಮವಬ್ಬಣಬ್ಬೆಯ ಮಗಂ" ಎಂದಾಗದು. ಅದಕ್ಕಾಗಿ ಅಬ್ಬಣಬ್ಬೆ ಜೋಯಿಸಸಿಂಘನ ಮಗಳು ಎಂದು ಅವರು ಸಾಧಿಸುವಲ್ಲಿ ಅಲ್ಲಿ 'ನ'ಕಾರವಿರಬೇಕೇ ಹೊರತು ಈಗ ಭಾವಿಸಿರುವ 'ವ'ಕಾರವಲ್ಲ. (ನಕಾರವಿಟ್ಟುಕೊಂಡರೂ ವಾಕ್ಯರಚನೆ ತಪ್ಪುತ್ತದೆ. ಆ ಮಾತು ಬೇರೆ.) ಅದಕ್ಕಾಗಿ ಶ್ರೀ ದೇಸಾಯಿ ಅವರು ಸಾಧಿಸುವ ಸಂಧಿವಿಗ್ರಹಗಳು ಅವ್ಯಾಕರಣವೆನಿಸಿವೆ.

(೨) ಜನತೆಯ ಅಜ್ಞಾನ ಮತ್ತು ಪ್ರಕೃತಿ ಪ್ರಕೋಪಗಳಿಂದಾಗಿ ಶಾಸನಗಳ ಮೈತುಂಬ ಗೆರೆ ಕಚ್ಚುಗಳುಂಟಾಗುವದು ಸ್ವಾಭಾವಿಕ. ಇದನ್ನು ನಕಲುಗೊಳಿಸಿದಾಗ ನಕಲು ಪ್ರತಿಯಲ್ಲಿ ಬಿಳಿಯ ಹಾಳೆ ಕಪ್ಪುಮಸಿಯಿಂದಾಗಿ ಇವು ಇನ್ನೂ ಒಡೆದು ಕಾಣಿಸುತ್ತವೆ. ಇಂಥ ನಕಲು ಪ್ರತಿಯ ಫೋಟೋ ತೆಗೆದಾಗ ಅಕ್ಷರಗಳ ಜೊತೆ ಕಚ್ಚುಗೆರೆಗಳು ಮೂಡುವದು ಸಹಜ. ಆದರೆ ಡಾ|| ದೇಸಾಯಿ ಅವರು ಇಲ್ಲಿ ನುಣುಪಾದ ಕರಿಯ ಹಲಗೆಯಮೇಲೆ ಲಕ್ಷಣವಾಗಿ ಅಕ್ಷರ ತೀಡಿದಂತಹ ಫೋಟೋ ಕೊಟ್ಟಿರುವರೇ ಹೊರತು ಕಚ್ಚುಗೆರೆಗಳಿಂದ ಕೂಡಿದ ಸ್ವಾಭಾವಿಕ ಚಿತ್ರ ಕೊಟ್ಟಿಲ್ಲ. ಇದು ತಮಗೆ ಬೇಡವಾದ ಗೆರೆಯನ್ನು ಮರೆಮಾಡಿ, ಬೇಕಾದ ಗೆರೆಗಳನ್ನು ಇಟ್ಟುಕೊಂಡು ರೂಪಿಸಿದ ಅನುಕೂಲ ಚಿತ್ರವಾಗಿದೆ; ತಮ್ಮ ಅಭಿಪ್ರಾಯಕ್ಕೆ ಒಲಿಸಿಕೊಳ್ಳುವ ಒಂದು ಕುಶಲತಂತ್ರವಾಗಿದೆ. ಅದಕ್ಕಾಗಿ ಈ ಚಿತ್ರ ಪ್ರಾಮಾಣಿಕವಾಗಿಲ್ಲವೆನ್ನಬೇಕಾಗುತ್ತದೆ.

(೩) ಶಾಸನದಲ್ಲಿ ಭೀಮಪಯ್ಯ ಜೋಯಿಸಸಿಂಘ ಅಬ್ಬಣಬ್ಬೆ ಮತ್ತು ಜಿನವಲ್ಲಭ ಇವರ ಸಂಬಂಧವನ್ನು "ರಾಮನ, ಜನಕನ ಮೊಮ್ಮಗ, ಸೀತೆಯ ಮಗ ಲವ" ಎಂಬ ಉದಾಹರಣೆಯಿಂದ ತಿಳಿಸಿಹೇಳಿದುದು ವ್ಯರ್ಥ ಪ್ರಯತ್ನವಾಗಿದೆ; ಕನ್ನಡ ವ್ಯಾಕರಣ ವಾಕ್ಯರಚನಾ ವಿಧಾನಕ್ಕೆ ವ್ಯತಿರಿಕ್ತವಾಗಿದೆ. ಹೀಗಿದ್ದರೂ "ಇಂಥ

---

೧. ಪ್ರಜಾವಾಣಿ, ೮-೧೨-೬೮

೨. ಏಪ್ರಿಲ್-ಮೇ, ೧೯೬೯ ಸಂಚಿಕೆ

೩. ಡಾ|| ದೇಸಾಯಿ ಅವರು ಈ ಶಾಸನ ಶಿಲೆಯನ್ನು ಕಣ್ಣುಟ್ಟಿ ನೋಡಿಲ್ಲವೆಂಬುದನ್ನು ಇಲ್ಲಿ ನೆನೆಯಬೇಕು.

೪. ಸಂಪುಟ ೫೦-ಸಂಚಿಕೆ ೪

ಪ್ರಯೋಗವು ಅಂದಿನ ನಿರೂಪಣಾ ಶೈಲಿಗೆ ಸ್ವಾಭಾವಿಕವಾದುದು" ಎಂದು ಹೇಳಿದ ಮಾತು ಹಳಗನ್ನಡ ವ್ಯಾಕರಣದೆದುರು ಅಮಾನ್ಯವೆನಿಸುತ್ತದೆ.

(೪) 'ಅಬ್ಬಣಬ್ಬೆ ಜೋಯಿಸಸಿಂಘನ ಮಗಳು' ಎಂಬ ತಮ್ಮ ವಾದವನ್ನು ಬಲಪಡಿಸಿಕೊಳ್ಳಲು "ಡಾ|| ವೆಂಕಟರಮಣಯ್ಯ, ಡಾ|| ಹಿರೇಮಠ, ಪ್ರೊ. ಕುಲಕರ್ಣಿ ಅವರು ಇದೇ ಅಭಿಪ್ರಾಯವನ್ನು ಗ್ರಹಿಸಿದ್ದಾರೆ" ಎಂದು ಡಾ|| ದೇಸಾಯಿ ಅವರು ಹೇಳುತ್ತಾರೆ. ಈ ಶಾಸನ ದೊರೆತ ಹೊಸದರಲ್ಲಿ, ಮಗಳು - ಮೊಮ್ಮಗಳು ಎಂಬುದು ಸಮಸ್ಯೆಯಾಗಿರದ ಸಮಯದಲ್ಲಿ ಹೇಳಿದ ಅವರ ಮಾತುಗಳನ್ನು ಬೆಂಬಲವಾಗಿಟ್ಟುಕೊಂಡಿದ್ದಾರೆ. ಆದರೆ ಈಗ ಅದೇ ಡಾ|| ವೆಂಕಟರಮಣಯ್ಯ, ಡಾ|| ಆರ್. ಸಿ. ಹಿರೇಮಠ, ಪ್ರೊ. ವ್ಹಿ. ಜಿ. ಕುಲಕರ್ಣಿ ಅವರನ್ನು ಕೇಳಿದರೆ "ಅಬ್ಬಣಬ್ಬೆ ಮಗಳಲ್ಲ; ಮೊಮ್ಮಗಳು" ಎಂದು ಅವರು ಸತ್ಯವನ್ನು ಮುಕ್ತಮನಸ್ಸಿನಿಂದ ಒಪ್ಪಬಹುದೇನೋ? ಈ ಎಲ್ಲ ಕಾರಣಗಳಿಂದ ಡಾ|| ದೇಸಾಯಿ ಅವರ ವಾದ ನಿರಾಧಾರವೆಂದು ಇನ್ನೊಮ್ಮೆ ಹೇಳಬಯಸುತ್ತೇನೆ.

ಕೊನೆಗೆ ನಿಲ್ಲುವುದು ದುರಾಗ್ರಹವಲ್ಲ ; ಸತ್ಯ. ಅದಕ್ಕಾಗಿ ಡಾ|| ದೇಸಾಯಿಯವರಂತೆ 'ಪ್ರಾಧ್ಯಾಪಕರ ನಾಲಗೆಗೆ ಯೋಗ್ಯವಲ್ಲದ' ಭಾಷೆಯನ್ನು ಬಳಸಿ, ನನ್ನ ಲೆಕ್ಕಣಿಕೆಯನ್ನು ವ್ಯಕ್ತಿಟೀಕೆಗಾಗಿ ಉಪಯೋಗಿಸಲಾರೆ. ಈ ಟೀಕಾತ್ಮಕ ಲೇಖನವಲ್ಲದೆ ಬೇರೆ ನಾಲ್ಕು ಪುಟಗಳ ಒಂದು 'ಅಸಂಸ್ಕೃತ ಪತ್ರ' ವನ್ನು ನನಗೆ ಬರೆದಿದ್ದಾರೆ. ಅಲ್ಲಿಯ ಮಾತುಗಳನ್ನು ಬಹಿರಂಗಗೊಳಿಸಿ, ನಮ್ಮ ಹಿರಿಯ ತಲೆಮಾರಿನ ವಿದ್ವಾಂಸರೊಬ್ಬರ ಸಣ್ಣಮನಸ್ಸನ್ನು ಬಯಲಿಗೆಳೆದು ಸಾಹಿತ್ಯಕ್ಷೇತ್ರದಲ್ಲಿ ಅವರನ್ನು ಅಪ್ರಿಯಗೊಳಿಸಲಾರೆ.

---

# ಹಬ್ಬ

■

ಧುತ್ತೆಂದು—
  ಕಣ್ಮನವ ಕೋರೈಸಿ ವೈನಾಗಿ ಬಂದು
  ಬದುಕಿನಕ್ಷದ ಸುತ್ತ ಗಿರಿಗಿರಿ ತಿರುಗಿ
  ಎಲುಬು ಹಂದರ ಹೊಕ್ಕು ಕಚಗುಳಿಯಿಟ್ಟು
  ಮತ್ತ ಮುತ್ತನು ಇತ್ತ ಭಾವ!
  ಮೆಲ್ಲನೆ ತಬ್ಬಿ ಹಿಡಿವೆವೆಂದರೆ–ಓಡುವ ಕುದುರೆಗೆ
  ಸವಾರ ಹಿಡಿದ ಹಸಿಹುಲ್ಲು
  ಬೆಳಕಿನ ಕಂಬಿ,
  ಅದೃಷ್ಟ ನಿರ್ಲಿಪ್ತದ ಸಿದ್ಧಿ.
  ನಮಗೊ, ಸುತ್ತಲಿನ ಜೇಡಬಲೆಗಳ ಬಿಡಿಸಿ, ಮೂರ್ತಿಯ
  ಸ್ವರ್ಣವರ್ಣವನು ಕಣ್ಣಿಗೆ ತುಂಬಿಕೊಳುವಾಸೆ.
  ಪುಷ್ಪಗಳ ಶಯ್ಯೆಯಲಿ ಪವಡಿಸುವಾಸೆ.
  ಕಣ್ಣು ತೆರೆದಾಗ "ಧರ್ಮಶಾಲೆಯ ತಿರುಕ"
ಒಳಗೆ-ಬಾಡಿ ಮುದುಡಿದ ಮನಸು ಕಾಣುತಿದೆ
  ನೀರು ಕಾವೇರಿ ಬೆಳ್ನೊರೆಯ ಸೂಸುವ ಸೊಗಸೊಗಸು!
  (ತಣಿದಾಗ ಅದೃಶ್ಯವಾಗುವ ಕಸುವು)
  ಉಸಿರೆಲ್ಲ ವಾತದ ಸೆಳವು, ರುಚಿ ಬೇವು!
  ಎಣ್ಣೆ, ಚಿಗರುಗಳ ಕಮಟು ತೃಷೆಯು.
ಆದರೂ
  ನಡೆಯುತಿದೆ ಜೀವದೇವರ ತೇರು–ಮೈಮನ ಸೆಳೆದು,
  ಮುಂಗೈಯ ಬೆಲ್ಲ ನೆಕ್ಕಿ ಚಪ್ಪರಿಸುವ ಚಪಲಸಂತೆಗಳ ಹೊತ್ತು
  ಸಾಲದಿರೆ ಇದ್ದೇ ಇದೆ–ಹಸಿವ ಗುಣಿಸುವ ತಂತ್ರ
  ಧೂಳಿನಲಿ ಢಿಕ್ಕಿ ಹೊಡೆದು
  ನಿಲ್ಲುವ ಹಿಗ್ಗು–ಮಂತ್ರದ ಸೇವೆ.
  (ಇನ್ನೂ) ತಿರುಗು ತೊಟ್ಟಿಲಲಿ ಕೂರುವ ಮಾಟ
    ಮತ್ತೆ ಕುಸ್ತಿ, ಡೊಂಬರಾಟ!

■

ಎಸ್. ಬಿ. ಹಾಲಾಡಿ

# ರೂಪದರ್ಶಿ — ಒಂದು ವಿವೇಚನೆ

■ ರಾಧೇಯ

ಅಯ್ಯರ್ ಅವರು ಹುಟ್ಟು ಸಾಹಿತಿಗಳಲ್ಲ; ಆದರೆ ಸಾಹಿತಿಗಳ ಸಾಲಿನಲ್ಲಿ ಭದ್ರವಾಗಿ ತಳವೂರಿದವರು. ಅವರು ಬರೆದಿರುವ ಕಾದಂಬರಿಗಳ ಸಂಖ್ಯೆ ಕೈ ಬೆರಳೆಣಿಕೆಯನ್ನೂ ದಾಟಿಲ್ಲ; ಆದರೆ ಅವು ಜನಪ್ರಿಯತೆ ಗಳಿಸಿವೆ. ಅವರ ಕಾದಂಬರಿಗಳಲ್ಲಿ ತುಸು ಅತಿ ಎನಿಸುವಂಥ ಆದರ್ಶಪ್ರಿಯತೆ, ತ್ಯಾಗ, ಕಷ್ಟ-ಸುಖಗಳ ವಿವೇಚನೆ ಇಲ್ಲವೆ ಕಲ್ಪನೆಯ ವಿಲಾಸ ಪ್ರಧಾನವಾಗಿರುತ್ತದೆ. 'ರೂಪದರ್ಶಿ' 'ಶಾಂತಲಾ' ಇವು ಇಂಥ ಕಾದಂಬರಿಗಳಾಗಿವೆ.

'ರೂಪದರ್ಶಿ' ಕಾದಂಬರಿಯ ಕಥನಕ್ರಮದಲ್ಲಿ ಹೊಸತನವಿದೆ; ಆತ್ಮವೃತ್ತದಂತೆ ತಂತ್ರದಲ್ಲಿ ಕಾದಂಬರಿ ಸಾಗುತ್ತದೆ. ಪ್ರಸಿದ್ಧ ಶಿಲ್ಪಿ ಮೈಕಲ್ ಏಂಜಲೊ, ಕಡೆಯಬೇಕೆಂದು ನಿರ್ಧರಿಸಿದ ಬಾಲ ಏಸುವಿನ ಶಿಲ್ಪಕ್ಕೆ ರೂಪದರ್ಶಿಯಾಗಿ ಸಿಕ್ಕಿದ ಅರ್ನೆಸ್ಟ್ ಎಂಬ ಬಡ ಹುಡುಗನ ದಾರುಣ ಕಥೆ ಮುನ್ನೂರು ಪುಟಗಳಲ್ಲಿ ವಿಸ್ತೃತವಾದ ಇಂಬನ್ನು ಪಡೆದಿದೆ. ಕಲ್ಪನೆಯ ವಿಲಾಸ, ಎಷ್ಟು ಆಳಕ್ಕೆ, ಎಷ್ಟು ಮೇಲಕ್ಕೆ ಹೋಗಬಹುದು ಎಂಬುದಕ್ಕೆ ಕಾದಂಬರಿ ಒಂದು ಜ್ವಲಂತ ನಿದರ್ಶನ. ಕಥಾನಾಯಕ ಅರ್ನೆಸ್ಟನ ಪಾತ್ರದಿಂದ ಹಿಡಿದು, ಬರುವ ಎಲ್ಲಾ ಪಾತ್ರಗಳೂ ಪೋಷಕ ಪಾತ್ರಗಳಾಗಿ, ಗಿಳಿಮಾತನ್ನು ಒಪ್ಪಿಸಿ ತಮ್ಮ ಪಾಲಿನ ಕೆಲಸವನ್ನು ಮುಗಿಸಿದೆವೆಂದು ನಿಶ್ಚಿಂತೆಯಿಂದ ಕೈ ತೊಳೆದುಕೊಂಡು ಕೂಡದೆ, ವ್ಯವಸ್ಥಿತ ರೀತಿಯಲ್ಲಿ ಕಾದಂಬರಿಯ ಯಶಸ್ಸಿಗೆ ಕಡೆತನಕ ಹೋರಾಟ ನಡೆಸಿವೆ. ಈ ದೃಷ್ಟಿಯಿಂದ ನೋಡಿದಾಗ ಇದೇ ಒಂದು ಬಗೆ; ಗೌಣ ಪಾತ್ರಗಳೂ ಇಲ್ಲಿ ಮುಖ್ಯ ಪಾತ್ರದಷ್ಟೇ ಕೆಲಸ ಮಾಡಿವೆ. ಅಮುಖ್ಯವೆನಿಸಿಕೊಳ್ಳಬೇಕಾಗಿದ್ದಂಥ ನಾಯಿ 'ನಿಸ್ಸಿ' ಕಟುಕ, ಹೆಂಡದಂಗಡಿಯ ಮಾಲಿಕ-ಇವರೂ ಕಾದಂಬರಿಯ ಸಫಲತೆಗೆ ಕಾರಣರಾಗಿದ್ದಾರೆ.

ಕ್ರಿಸ್ತನ ಜೀವನ ಚರಿತೆಯನ್ನು ಚಿತ್ರಿಸಲು ಮೈಕಲ್‌ಗೆ, ರೂಪದರ್ಶಿಯಾಗಿ ನಿಲ್ಲುವ ಮುದ್ದುಮೊಗದ ಬಾಲಕನೊಬ್ಬನ ಆವಶ್ಯಕತೆ ಇದ್ದಿತು. ಅವನ ಸುದೀರ್ಘ ಹುಡುಕಾಟದಲ್ಲಿ ಪೀಸಾದಲ್ಲಿ ಅರ್ನೆಸ್ಟ್ ಎಂಬ ಬಡಬಾಲಕ ಸಿಗುತ್ತಾನೆ. ಆ ಬಾಲಕನ ಏಕೈಕ ಆಸರೆ ಅಜ್ಜಿಯ ಮನಸ್ಸನ್ನು ಗೆಳೆಯ ಬೆನೆಟ್ಟೋನ ನೆರವಿನಿಂದ ಒಲಿಸಿ, ಅವರೀರ್ವರೊಂದಿಗೆ ಫ್ಲಾರೆನ್ಸ್ ನಗರಕ್ಕೆ ಬರುತ್ತಾನೆ.

ಇದೇ ಕಥೆಯ ಆರಂಭವಾಗಿದೆ. ಅರ್ನೆಸ್ಟೋವನ್ನು ಮುಂದಿಟ್ಟುಕೊಂಡು ಮೈಕಲ್ ಕಾರ್ಯ ಮುಂದುವರೆಸಿದ. ಚಿತ್ರಗಳ ಕಾರ್ಯ ಮುಗಿದ ತರುವಾಯ, ಅಜ್ಜಿಯೊಂದಿಗೆ ಅವನು ಪೀಸಾಕ್ಕೆ ಮರಳುವನು.

ಇಲ್ಲಿಂದ ಕಥೆಯ ದಾರುಣತೆಯ ಚಿತ್ರಣ ಆರಂಭ. ಮನೆಗೆ ಕಾಲಿಡುತ್ತಿದ್ದಂತೆಯೇ ತಮಗೆ ಊರೆಗೋಲಾಗಿದ್ದ ಬೆನೆಟ್ಟೋ ಧರ್ಮಾವತಾರರು ವಲಸೆಹೋದ ಸುದ್ದಿ ತಿಳಿಯುತ್ತದೆ. ಅಜ್ಜಿಯ ಕಣಸಿನ ಭವ್ಯ ಮಹಲು ತಳಹದಿಯ ಸಮೇತ ಕುಸಿಯಿತು; ಜೊತೆಗೆ ಲಿಸ್ಸಾ ಸಂಸಾರ ಸಮೇತ ದೂರಹೋದ ವಿಷಯ ಅವಳಿಗೆ ಎರಡನೆಯ ಆಘಾತ.

ಅನಂತರದ ಕಥೆಯಲ್ಲಿ ಮೈಕಲ್, ಏಸುವನ್ನು ಹಿಡಿದುಕೊಟ್ಟು ಅವನ ಸಾವಿಗೆ ಕಾರಣಕರ್ತನಾದ ಜುದಾಸನನ್ನು ಚಿತ್ರಿಸಲು, ಜುದಾಸನಂಥ ಕಪಟಿಯನ್ನು ರೂಪದರ್ಶಿಯಾಗಿ ಹೊಂದಲು-ಹುಡುಕಿಕೊಂಡು ಹೊರಟ ಪ್ರಸಂಗ ವರ್ಣಿತವಾಗಿದೆ. ಇಲ್ಲಿ ಅರ್ನೆಸ್ಟ್‌ನ ಕಥೆಯನ್ನು ಬೇಕೆಂದೇ ತಡೆದು ನಿಲ್ಲಿಸಿರುವ ಔಚಿತ್ಯ ಶ್ಲಾಘನೀಯ; ಮೆಚ್ಚುವಂಥ ಈ ತಂತ್ರದಲ್ಲಿ ಟಾಯಿಟ್ಟನ ಸ್ವಭಾವ, ಲೀನಾಳ ಎದೆಯಲ್ಲಿನ ದ್ವಂದ್ವದ ಕಳವಳ, ಅವಳು ಅನುಭವಿಸಿದ್ದ ಮೂಕಸಂಕಟ ಕಾದಂಬರಿಯಲ್ಲಿನ 'ಭಾವುಕತೆ' ಗೆ ಪೌಷ್ಟಿಕಾಂಶಗಳಾಗಿವೆ. ಇಡೀ ಕಾದಂಬರಿಯಲ್ಲಿನ ಭಾವ ತೀವ್ರತೆಯ ಪ್ರಥಮ ಪರಿಚಯವೂ ಇಲ್ಲಿಂದಲೇ ಆಗುವುದು. ಮೈಕಲ್ ತಾನು ಮಾಡಬಹುದಾಗಿದ್ದುದನ್ನು ಮಾಡಿದ-'ಟಾಯಿಟ್ಟೊನನ್ನು ಕ್ಷಮಿಸು; ಮನೆಯಲ್ಲಿ ಶಾಂತಿ ನೆಲಸಲಿ'ಎಂಬ ಲೀನಳ ಕೋರಿಕೆಗೆ ಅಮೆನ್ ಎಂದ; ರಕ್ಷಾಕವಚವೆಂದು ಸುವರ್ಣ ಶಿಲುಬೆಯ ಹಾರ ನೀಡಿದ.

ಮುಂದಣ ಕಥೆಯಲ್ಲಿ ಒಮ್ಮೆಲೇ ತೀವ್ರತೆ ಬಂದಿದೆ; ಕಾರ್ಗಾಲದ ಹುಚ್ಚುನೆರೆಯಂತೆ ಕಾದಂಬರಿ ವೇಗವಾಗಿ ಸಾಗಿದೆ. ಲೀನಳನ್ನು ಬೀಳ್ಕೊಂಡು ಬರುವ ದಾರಿಯಲ್ಲಿಯೇ 'ಎಂಪೊಲಿ'ಎಂಬಲ್ಲಿ ಅವನು ತಂಗಿದ್ದು, ಅನಂತರ ಇದ್ದಕ್ಕಿದ್ದಂತೆಯೇ ಮನದಲ್ಲಿ ಇದು ಸೈತಾನನ ಊರು ಇಲ್ಲಿ ಜುದಾಸ ಸಿಕ್ಕಬಹುದೇ ಎಂಬ ಬಯಕೆ ಮೊಳೆತದ್ದು, ಹೆಂಡದಂಗಡಿಯಲ್ಲಿದ್ದ ಗುಂಪಿನಲ್ಲಿ 'ಜುದಾಸ' ರೂಪಿ 'ಗರಿಬಾಲ್ಡಿ' ಸಿಕ್ಕಿದ್ದು, ಅವನು ಮೈಕಲ್‌ನೊಂದಿಗೆ ಬರಲು ಒಪ್ಪಿಕೊಂಡದ್ದು, ಗಳಸ್ಯ-ಕಂಠಸ್ಯ ಗುಂಪನ್ನು ತೊರೆದದ್ದು, ಒಮ್ಮೆಲೇ ಎಲ್ಲದಕ್ಕೂ 'ಹೂಂ' ಗುಟ್ಟುತಿದ್ದುದು-ಈ ಘಟನೆಗಳೆಲ್ಲ ಪವಾಡದಂತೆ ನಡೆಯುತ್ತವೆ. ಅಯ್ಯರರು ನೀಡಿರುವ ಕಾರಣಗಳಲ್ಲಿ ಸಮಾಧಾನಕ್ಕಿಂತ ಸಂಶಯವೇ ಅಧಿಕವಾಗಿದೆ. ಮುಂದೆಯೂ ಇದು ಹೆಚ್ಚುತ್ತಲೇ ಹೋಗುವುದು. ಗರಿಬಾಲ್ಡಿಯ ಗೊಣಗಾಟ, ಕಿರುಚಾಟ, ಅಳುವಿಕೆ-ಎಲ್ಲವಕ್ಕೂ ಮೈಕಲ್ ನೀಡಿರುವ ಉತ್ತರವೂ ಸಮರ್ಪಕವಾಗಿಲ್ಲ; ಫ್ಲಾರೆನ್ಸ್‌ಗೆ ಬಂದಿದ್ದೇನೆಂದು ಗರಿಬಾಲ್ಡಿಗೆ ಹೊಳೆದು ಅವನು ಥಟ್ಟನೆ ಹಿಂದೆ ಸಿಕ್ಕಿದ ಅನೇಕ ಊರುಗಳನ್ನು ನಿರ್ಲಕ್ಷಿಸಿದವನು. ಜಿಹಾಸೆಯಿಂದ ಮರವಟ್ಟು ನೋಡುವುದು, ತಲೆಯಲ್ಲಿ ಏನೇನೋ ಆಗುತ್ತಿದೆ ಎನ್ನುವುದು ಇದಕ್ಕೆ ಸ್ಪಷ್ಟತೆಯನ್ನು ಒದಗಿಸಿಕೊಡುತ್ತದೆ-ಮೈಕಲ್ ಗರಿಬಾಲ್ಡಿಯೊಂದಿಗೆ, ದೇಗುಲಕ್ಕೆ ಹೋದಾಗ ನುಗ್ಗಿಬರುವ ಅರ್ನೆಸ್ಟೋನ ನೆನಪು; ಅವನ 'ಚಿಕ್ಕಪ್ಪಾ' ಎಂಬ ಮಧುರ ನುಡಿ. ಇಲ್ಲಿ ಮತ್ತೊಂದು ಪ್ರಬಲ ಶಂಕೆ ಹುಟ್ಟುವುದು. ಗರಿಬಾಲ್ಡಿ ಶ್ವಪಚ; ತನ್ನ ಪೂರ್ವೋತ್ತರಗಳನ್ನು ಮರೆತು ಕಾಡುಪಶುವಾಗಿದ್ದವ; ಅಂತಹವ ಒಮ್ಮೆಲೇ 'ಯಾರ ಹಾಗೆ ನನ್ನನ್ನು ಹೊಂದಿಸಿಕೊಳ್ಳುವೆ?' ಎಂಬುದು ಅನಿರೀಕ್ಷಿತ ಸಿಡಿಲೇಟು! ಈ ಪ್ರಶ್ನೆಯಿಂದ ಮೈಕಲ್ ತತ್ತರಿಸಿದಂತೆ ಓದುಗರ ಸಂದೇಹಕ್ಕೆ ರೆಕ್ಕೆ ಮೂಡುವುದು. ಅಲ್ಲಿ ಲೇಖಕರು ಕಾರಣ ಕೊಡದಿರುವುದೇ ಒಂದು ಸಮಾಧಾನದಂತಿದೆ.

ಮುಂದಿನ ಘಟನೆ ಮೈಕಲನಿಗೆ ಮಾತ್ರ ಅನಿರೀಕ್ಷಿತ. ಗರಿಬಾಲ್ಡಿಗೆ ಪೂರ್ವದ ಸ್ಮರಣೆ ಮರಳಿದೆ; ಮೈಕಲಿಗದು ಕುಂದಿದೆ. ಶೈಲಿಯಲ್ಲಿ ಒಮ್ಮೆಲೇ 'ಭಾವುಕತೆ' ತೀವ್ರವಾಗುತ್ತದೆ; ಭಾಷೆ ಅದಕ್ಕೆ ಸಹಕರಿಸುತ್ತದೆ. ಕರುಣೆಯ ರಸ ಚಿಲುಮೆಯಂತೆ ಚಿಮ್ಮುತ್ತದೆ. ಗರಿಬಾಲ್ಡಿಯಾಗಿದ್ದ ಅರ್ನೆಸ್ಟ್ ಪುನಶ್ಚೇತನಗೊಂಡ ಸ್ಮೃತಿಯ ನೆರವಿನಿಂದ ಸಾದ್ಯಂತನಾಗಿ ತನ್ನ ದುರಂತ ಬದುಕಿನ ಹೃದಯ ವಿದ್ರಾವಕ ಕಥೆಯನ್ನು ಹೇಳುತ್ತಾ ಹೋದಂತೆ ಕಾದಂಬರಿ ಮುಂದುವರೆಯುತ್ತದೆ.

ಅರ್ನೆಸ್ಟೋನ ವೈಯಕ್ತಿಕ ಸಂಬಂಧಗಳ ಜೋಡಣೆಯಿಂದ ಲೇಖಕರು ಅವನ ಪಾತ್ರವನ್ನು ಸಜೀವಗೊಳಿಸಿದ್ದಾರೆ; ಅರ್ನೆಸ್ಟೋನೊಂದಿಗೆ ಏನಾದರೊಂದು ರೀತಿ ಸಂಬಂಧ ಇಟ್ಟುಕೊಂಡಿದ್ದ ಜನರಲ್ಲಿ ಮುಕ್ಕಾಲುಪಾಲು ಒಳ್ಳೆಯವರೇ ಇದ್ದಾರೆ; ಮೊದಲನೆಯ 'ಖಳನಾಯಕಿ' ಯಾಗಿ ಅವನ ಬದುಕಿನಲ್ಲಿ ಬಿರುಗಾಳಿಯಾಗಿ ಬಂದ ಗಿಯೋವನಿ ಸಾಹುಕಾರನ ಹೆಂಡತಿ, ಅವಳ ಹಿರಿಯ ಮಗ, ಸಾಹುಕಾರ, ಟಾಯಿಟ್-ಇವರೆಲ್ಲ ಕೃತಘ್ನರು. ಆದರೆ ಇಲ್ಲಿ ದೈವವೇ ಹಿರಿಯ ಖಳನಾಯಕ; ಪರಿಸ್ಥಿತಿಯೂ ಅದಕ್ಕೆ ಸಹಾಯಕ. ಲೀನಾ, ಲಿಸ್ಸಾ, ಬಾಂಬಿ, ಗಾರ್ಡಿಯಾ, ನನ್ನೆಟ್ಟ, ಮಾರ್ಕಸ್, ಹೆಲೆನ್, ಯುವೋನಾ ಇವರೆಲ್ಲ ಅರ್ನೆಸ್ಟೋವಿನ ಹಿತೈಷಿಗಳೇ; ಮಧುರ ಬಾಂಧವ್ಯವಿಟ್ಟುಕೊಂಡಿದ್ದವರೇ. ಇವರ ದೃಷ್ಟಿಯಲ್ಲಿ ಅರ್ನೆಸ್ಟ್ ನಿರ್ಭಾಗ್ಯ, ಕ್ರೂರ ದೈವದೇಟಿಗೆ ಸಿಲುಕಿದ ನತದೃಷ್ಟ.

ಈ ಎಲ್ಲ ಪಾತ್ರಗಳ ಸ್ವಭಾವ ಅರಳುತ್ತಾ ಹೋದಂತೆ ಅರ್ನೆಸ್ಟೊನ ಪಾತ್ರದ ನಿರ್ಮಾಣ ಮುಂದುವರಿಯುವುದು; ಹೆಚ್ಚು ಸ್ಪಷ್ಟವಾಗಿ ಅವನ ಸ್ವಭಾವ ಕಾಣಿಸುವುದು.

ಅರ್ನೆಸ್ಟೋ ಕಿರಿವಯಸ್ಸಿನಿಂದಲೂ ಕಷ್ಟಪಟ್ಟವನು; ಕಷ್ಟದಲ್ಲೇ ಬೆಳೆದವನು. ಅಜ್ಜಿಯ ಅಸದೃಶ ಪ್ರೇಮದ ಇನಿವಾಲನ್ನುಂಡು ನೋವಿನಲ್ಲೂ ನಲಿವನ್ನು ಕಂಡಿದ್ದವನು; ದೊಡ್ಡವನಾದ ಬಳಿಕ ಕುರುಡಿ 'ಬಾಂಬಿ' ಯನ್ನು ಬಾಳಗೆಳತಿಯನ್ನಾಗಿ ಮಾಡಿಕೊಳ್ಳಬೇಕೆಂಬ ಕಣಸನ್ನು ಕಟ್ಟಿದ್ದವನು. ಅವನ ಜೀವನದಲ್ಲಿನ ಸುಖದ ಅವಧಿ ಎಂದರೆ ಎರಡು ಘಟ್ಟಗಳು-ಒಂದು ಫಾರ್ಲೆನ್ಸ್‌ದಿಂದ ಬೀಳ್ಕೊಂಡು ಪೀಸಾಕ್ಕೆ ಬಂದು ಕಳೆದ ಎರಡು ವರ್ಷ; ಅನಂತರ ಟಾಯಿಟ್ಟನ ಮಾಳಿಗೆಯಲ್ಲಿ ನೌಕರಿ ಹಿಡಿದು ಯವೋನಳ ಮನೆಯಲ್ಲಿದ್ದಾಗಿನ ಕೆಲವು ದಿನಗಳು. ಹಾಗೆ ಹೇಳುವುದಾದರೆ ಅವನ ಜೀವನ ವಿಫಲವಾದದ್ದೇ; ಕ್ಷಮೆ, ಪ್ರಾಮಾಣಿಕತೆ, ಸದ್‌ವ್ಯವಹಾರಗಳು ಅವನ ಅಂತರಂಗದ ಉದಾತ್ತತೆಗೆ ಸಾಕ್ಷಿ; ಬಾಳಿನುದ್ದಕ್ಕೂ ಬರಿಯ ಕಹಿಯ ವಿಷಫಲವನ್ನುಂಡರೂ ಅದಕ್ಕೆ ಪ್ರತಿಕ್ರಿಯೆ ತೋರಿಸದೆ, ತನ್ನ ಕರ್ಮವನ್ನೇ ಹಳಿದುಕೊಂಡು ಬೇರೆಯವರಿಗೆ ಆದಷ್ಟು ನೆರವು ನೀಡುತ್ತಾ ಹೋದ ಪರೋಪಕಾರಿ ಜೀವ ಅವನದು. ಕಲ್ಪನೆಯ ನಿಲುಕದಂಥ ನಾರಕೀಯ ಹಿಂಸೆಯನ್ನು ಗಿಯೋವನಿಯ ಹೆಂಡತಿ ಕೊಡಿಸಿದಾಗಲೂ ಶಪಿಸಿದವನಲ್ಲ; ಅವರೂ

ಅರ್ನೆಸ್ಟ್ ಜೀವನದಲ್ಲಿ ನಂಬುಗೆ ಕಳೆದುಕೊಂಡವನಲ್ಲ; ಯಮಹಿಂಸೆಯಲ್ಲೂ, ಹಾಲಾಹಲದಲ್ಲಿಯೂ ಒಂದು ಅಮೃತಬಿಂದು ಅಡಗಿರುವುದೆಂಬ ದೃಢನಂಬಿಕೆಯ ಮೇಲೆ ಜೀವಿಸಲು ನಿರ್ಧರಿಸಿದವನು; ಆದರೂ ನಡುನಡುವೆ ಜೀವಿಸಿರುವಾಗ ಇರುವ ಈ ಅನುಬಂಧಗಳು ಸತ್ತಮೇಲೆ ಲವಲೇಶವೂ ಇಲ್ಲದೆ ಹೋಗುವುದೇ? ಎಂಬ ನಿರಾಶೆಯ ಕರಿ ತೆರೆಗಳು ಸುಳಿಯುತ್ತವೆ; ಅಂಥ ಹೊತ್ತಿನಲ್ಲಿ ಕ್ಷಣ ಹೊತ್ತು ಸ್ತಬ್ಧನಾದರೂ ಅರ್ನೆಸ್ಟ್ ಮತ್ತೆ ಬದುಕಿನತ್ತಲೇ ಮುಖ ಮಾಡಿದವನು, ಅವನಿರಿಸಿದ್ದ ಜೀವನ ಶ್ರದ್ಧೆ, ದ್ರಾಕ್ಷಿ ತೋಟದ ಮಾಲಿಕನ ಬಳಿ ಇದ್ದಾಗ ಮತ್ತಷ್ಟು ಗರಿ ಗೆದರಿಕೊಂಡಿದೆ; ಬಾಳುವುದು ಸುಖವಾಗಿ ಕಂಡಿದೆ ಅವನಿಗೆ.

ಆದರೆ ಅವನು ನಂಬಿದ್ದ ಜೀವನದ ಮೌಲ್ಯಗಳೆಲ್ಲಾ ಜೀವನದಲ್ಲಿ ಸಿಗಲೇ ಇಲ್ಲ; ಸುಖವೆನ್ನುವುದು ಶ್ರೀಮಂತರ ಹಕ್ಕು ಎನ್ನುವ ತರ್ಕಕ್ಕೆ ಅವನು ಜೋತು ಬಿದ್ದಿದ್ದಾನೆ. ಅವನ ಆ ಅನಿಸಿಕೆ ಸರ್ವಕಾಲಿಕ ಸತ್ಯಕಥನವೇನಲ್ಲ. ಅವನ ವೈಯಕ್ತಿಕ ಬದುಕೆಲ್ಲಾ ಕನಸನ್ನೂ, ಕಲ್ಪನೆಯನ್ನೂ ಅವಲಂಬಿಸಿದೆ.

ಇಷ್ಟೊಂದು ವಿಷಮತೆ ಅವನ ಬಾಳನ್ನು ಆವರಿಸಲು ಕಾರಣವಾದರೂ ಏನು? ಅವನ ಬದುಕೇಕೆ ಇಷ್ಟೊಂದು ವಿಸಂಗತಿಗಳಿಂದ ತುಂಬಿದೆ? ಈ ಪ್ರಶ್ನೆಗಳಿಗೆ ಅರ್ನೆಸ್ಟನ ದುರದೃಷ್ಟಕರ ಬದುಕೇ ಉತ್ತರ. ಅರ್ನೆಸ್ಟನ ವ್ಯಕ್ತಿತ್ವ ನಿರ್ಮಾಣದಲ್ಲೇ ಈ ಕಾದಂಬರಿಯ ಯಶಸ್ಸು ಅಡಗಿದೆ.

ಪ್ರಾರಂಭದಲ್ಲೇ ಘಟಿಸುವ ಅಜ್ಜಿಯ ಸಾವು ಓದುಗರ ಸಹಾನುಭೂತಿಯನ್ನು ಅರ್ನೆಸ್ಟ್ ಬಗ್ಗೆ ಉದ್ದೀಪನಗೊಳಿಸುತ್ತದೆ. ಅನಂತರ ಆರಂಭವಾಗುವ ದುಃಖ ಪ್ರಸಂಗಗಳು ಅವನ ಬಗ್ಗೆ ಅನುಕಂಪೆಯನ್ನು ಹೆಚ್ಚಿಸುತ್ತಲೇ ಹೋಗುವುದು. ಅರ್ನೆಸ್ಟನ ವಿವರಣೆಯಲ್ಲಿ ಕಾಣುವ ಚಿತ್ರ ಅತ್ಯಂತ ಮಾನವೀಯ, ಅಷ್ಟೇ ಮರ್ಮಸ್ಪರ್ಶಿ. ಬದುಕಿದ್ದಾಗ, ಅವನು ನಂಬಿದ್ದು ಈ ಮಾನವತೆಯೊಂದನ್ನೇ; ಲೀನಾ, ಲಿಸ್ಸಾ ತಾಯಿಯರೂ ಇಂಥ ಜಗದಲ್ಲಿದ್ದಾರೆ ಎಂಬ ಮಾತು ಅದನ್ನೇ ಪುಷ್ಟೀಕರಿಸಿದೆ. ಸಾವು ಬಂದಾಗಲೂ ಅವನು ತೆಕ್ಕೆ ಬಿದ್ದಿದ್ದೂ ಅದಕ್ಕೆ.

ಲೇಖಕರು ಅರ್ನೆಸ್ಟ್ ಪಾತ್ರದ ಮೂಲಕ ಜೀವನದ ಒಳಿತು–ಕೆಡಕುಗಳನ್ನು ಅಳೆಯಲು ಹೊರಟಿದ್ದಾರೆ. ಮಾನವತೆಯನ್ನು ಇದರಿಂದ ಅಳೆಯಲಾಗದು; ಎಂತಲೇ ಅವರ ಈ ಪ್ರಯತ್ನ ಅಪೂರ್ಣವಾಗಿದೆ. ಅರ್ನೆಸ್ಟನಂಥ ಸಹೃದಯ ಜೀವಿಗೆ ಇಂಥ ಜಗತ್ತು ಸಲ್ಲದೇ ಎಂಬುದು ಶೇಷಪ್ರಶ್ನೆ; ಲೇಖಕರು ಇದನ್ನು ಉತ್ತರಿಸುವ ಗೋಜಿಗೇ ಕೈಯಿಕ್ಕಿಲ್ಲ. ಅವನ ಅತಿಯಾದ ಒಳ್ಳೆಯತನವೇ, ಅವನ ಅತ್ಯಂತ ಪ್ರಬಲವಾದ ದೌರ್ಬಲ್ಯ; ಇದೊಂದೇ ಸಾಲದೆಂಬಂತೆ ಅಳುಕೂ ಅವನನ್ನು ಆಶ್ರಯಿಸಿದೆ. ತನ್ನ ಅದೃಷ್ಟವೇ ಇಂಥದು ಎಂದು ಅರ್ನೆಸ್ಟ್ ಜೀವನದಲ್ಲಿ ಪಡೆಯಬಹುದಾಗಿದ್ದ ಎಲ್ಲ ಮೌಲ್ಯಗಳನ್ನು ಪಡೆಯಲಿಲ್ಲ; ಅನಿರೀಕ್ಷಿತ ಆಘಾತಕ್ಕೆ ಸಿಲುಕಿ ಅವನ ಜೀವನದ ಅಂತ್ಯ ಅತ್ಯಂತ ಘೋರವಾಯಿತು.

ಈ ದುರಂತದ ಚಿತ್ರಣದಲ್ಲಿ, ಕಲ್ಪನೆ ನೈಜತೆಯನ್ನು ಮೀರಿ ನಿಂತಿದೆ. ಘಟನೆಗಳೆಲ್ಲವೂ ಚಲನಚಿತ್ರದಂತೆ ವ್ಯವಸ್ಥಿತ ರೂಪದಲ್ಲಿ ಮೂಡಿಬರುತ್ತವೆಯಾದ ಕಾರಣ, ಕಾದಂಬರಿ ಕೊನೆಯವರೆಗೂ ಒಂದು ಕ್ರಮಬದ್ಧವಾದ ಕುತೂಹಲವನ್ನು ಕಾಯ್ದಿರಿಸಿಕೊಂಡಿದೆ. ಅದರ ಸಾರ್ಥಕತೆ ಈ ರಹಸ್ಯದಲ್ಲೇ ಅಡಗಿರುವುದು.

ಮೈಕಲ್ ಏಂಜೆಲೋ ಸತ್ಯದಲ್ಲಿರಿಸಿದ್ದಷ್ಟು ನಂಬುಗೆಯನ್ನು ಜೀವನದಲ್ಲೂ ಇರಿಸಿದ್ದವ. ದೇವನ ಕ್ರಿಯೆಗಳಲ್ಲಿ ಅವನಿಗೆ ಯಾವ ಸಂದೇಹವೂ ಇಲ್ಲ. ಆದರೆ ಅರ್ನೆಸ್ಟೋನ ಬದುಕು ದುರಂತವಾದುದಕ್ಕೆ ಅವನ ಬಳಿ ನಿಟ್ಟುಸಿರು ಹೊರತು ಉತ್ತರವಿಲ್ಲ. ಅವನ ನಂಬಿಕೆಯೇ ಅವನನ್ನು ಅಲ್ಲಾಡಿಸಿದೆ; ಸವಾಲಿನಂತೆ ಅವನೆದುರು ನಿಂತಿದೆ ಅರ್ನೆಸ್ಟನ ನತದೃಷ್ಟತೆ; ಆಗಲೂ ಮೈಕಲ್ ಮೂಕನೇ ಆಗಿ ಮರವಟ್ಟು ಹೋಗುವನು. ಅರ್ನೆಸ್ಟನ ಜೀವನ ಅವನಿಗೊಂದು ಸಮಸ್ಯೆ; ಟಾಯಿಟ್ಟನ ಬದುಕು ಲೀನಾ ಹಾಗೂ ಮೈಕಲ್‌ಗೆ ಒಂದು ಕಗ್ಗಂಟು; ಗಿಯೋವನಿ ದಂಪತಿಗಳಿಗೆ ಅರ್ನೆಸ್ಟೊ ಒಂದು ಸಮಸ್ಯೆ. ಹೀಗೆ ಇಲ್ಲಿ ಬರುವ ಪಾತ್ರಗಳೆಲ್ಲ ಒಂದು ಇನ್ನೊಂದಕ್ಕೆ ಸಮಸ್ಯೆಯಾಗಿಯೇ ನಿಂತಿವೆ; ಆದುದರಿಂದಲೇ ಪೂರ್ಣವಾದ, ಖಚಿತವಾದ ಸಮಾಧಾನ–ಓದುಗನಿಗೆ ದೊರೆಯುವುದಿಲ್ಲ.

ಈ ದೃಷ್ಟಿಯಲ್ಲಿ ನೋಡಿದಾಗ ಅರ್ನೆಸ್ಟೋನ ಬದುಕೆ ಸ್ವಲ್ಪ ವಾಸಿ ಎನ್ನಬಹುದು; ಅವನು ಮೊದಲಿನಿಂದಲೂ ಆಶಾವಾದಿಯಾಗಿಯೇ ಉಳಿದದ್ದರಿಂದ, ಬದುಕಿನುದ್ದಕ್ಕೂ ಆಘಾತಗಳು ಬಂದರೂ ಅವನು ಈ ಸಮಸ್ಯೆಗಳಿಗೆ ಮಾತ್ರ ಉತ್ತರಿಸುವ ಗೋಜಿಗೆ ಹೋಗುವುದಿಲ್ಲ. ಅವನಿಗೆ ನಿರಾಶೆ ಸಿಕ್ಕಿದ್ದರೂ ಅದರಿಂದ ಅವನ ಮನಕ್ಕೇನೂ ಆಘಾತವಾಗುವುದಿಲ್ಲ. ಸಹಜವೆನ್ನುವಂತೆ ಅದನ್ನವನು ಸ್ವೀಕರಿಸಿದ್ದಾನೆ.

ಧರ್ಮ-ಅಧರ್ಮಗಳ ಚರ್ಚೆ ಇಂದಿನದಲ್ಲ; ಸೃಷ್ಟಿಯಾದಾಗಿನಿಂದ ಇರುವ ಚರ್ಚೆ. ಸಂಚಿತ ಕರ್ಮ ಗ್ರಹಚಾರ-ಈ ಮಾತುಗಳ ವಿವರಣೆಯೂ ಅಷ್ಟೇ ಹಳೆಯದು. ಬದುಕಿನ ಮೂಲಾಧಾರವಾದ ಮಾನವತೆಯ ಹಿನ್ನೆಲೆಯಲ್ಲಿ ಈ ಪ್ರಶ್ನೆಗಳನ್ನು ಚಿತ್ರಿಸಿ ಅವುಗಳಿಗೆ ಉತ್ತರ ಪಡೆಯಲು ಸಾಧ್ಯವಿಲ್ಲ. "ರೂಪದರ್ಶಿ" ಕಾದಂಬರಿ ಓದುಗರ ಮನದಲ್ಲಿ ಪ್ರಶ್ನೆಗಳನ್ನು ಕೆರಳಿಸಬಲ್ಲದು; ಗಿಯೋವನಿಯಂಥ ಸ್ವಾರ್ಥಿಗಳ ಬಗ್ಗೆ ಆವೇಶ ಹುಟ್ಟಿಸಬಹುದು; ಆದರೆ ಸಾತ್ವಿಕಗಳನ್ನು ಬಿಡಿಸುವುದರಲ್ಲಿ ಮಾತ್ರ ಪೂರ್ಣ ವಿಫಲವಾಗಿದೆ ಎನ್ನಬಹುದು.

'ರೂಪದರ್ಶಿ' ಭಾಷೆಯ ಸುಭಗತೆಯಿಂದ ನೋಡುವಲ್ಲಿ ಮೇಲ್ಮಟ್ಟದ ಕಾದಂಬರಿ. ಸರಳವಾದ ವಿವರಣೆಯಿಂದ, ಅದು ಅತ್ಯಂತ ಸಾಮಾನ್ಯ ದರ್ಜೆಯವನಿಗೂ ಅರ್ಥವಾಗುವುದು. ಶೈಲಿಯಲ್ಲಿ ಕ್ಲಿಷ್ಟತೆ ಅಪ್ಪಿತಪ್ಪಿಯೂ ತಲೆಹಾಕಿಲ್ಲ. ಪ್ರಾಚೀನ ರೋಮುದ ಜನ-ಜೀವನವನ್ನು ಆ ಮಟ್ಟದಲ್ಲೇ ಇರಿಸಲು ಬಳಸಿರುವ ವಿವರಣೆಗಳು, ಬಹಳಷ್ಟು ಯಶಸ್ವಿಯಾಗಿವೆ; ಅರ್ನೆಸ್ಟೋನ ವಿಫಲ ಜೀವನದ ಚಿತ್ರಣದೊಂದಿಗೆ ಅಂದಿನ ಸಮಕಾಲೀನ ಜೀವನದ ಸ್ಪಷ್ಟ ಚಿತ್ರಣವೂ ಓದುಗನಿಗೆ ಲಭಿಸಿದೆ.

---

# ಸರ್ವೇಶ್ವರನ ವಚನಗಳು

■

ತೆರೆ : ಹೃದಯ ಗವಾಕ್ಷವ  
ತೊರೆ : ಅಶಿವ ಸಂಕುಚಿತವ  
ಗಾಳಿ ಬೆಳಕು ಮೈದುಂಬಿ ಮನದುಂಬಲಿ  
ರಕ್ತ ಮಾಂಸ ಒಗ್ಗೂಡಿ ಮೈಮನ ಪುಷ್ಟಿಯಾಗಲಿ  
ಒಳ ಹೊರಗು ಬೆಳಗಲಿ  
ಸರ್ವೇಶ್ವರ ಮೆಚ್ಚುವಂತೆ ಪವಿತ್ರವಾಗಲಿ

ಶಕ್ತಿ ಯುಕ್ತಿಗಿಂತ ಉಕ್ತಿ ಚೆನ್ನಿರಬೇಕು  
ಶಾಖ ಏರಿದಾಗ ಮಳೆ ಬೀಳಬೇಕು  
ನಿರಾಶೆಯೆ ಅಹಂ ನಿರಶನದ ಗುರುತಾಗಬೇಕು  
ಬಾಳಿನ ಅರಿಸಮಾಸ ಸರಿಸಮಾಸವಾಗಬೇಕು  
ಆದಿಗಲ್ಲದೆ ವಿರಾಮ ಅಂತ್ಯಕ್ಕಿರಬೇಕು  
ಪರಿಪೂರ್ಣತೆ ಮುಕ್ತಾಯದ ಚಿಹ್ನೆ ಸರ್ವೇಶ್ವರ.

■

ಡಿ. ಲಿಂಗಯ್ಯ

# ಕನ್ನಡ ನಾಡು, ಕನ್ನಡ ಭಾಷೆ ಮತ್ತು ಸಂಸ್ಕೃತಿ

■ ತಿ. ತಾ. ಶರ್ಮ

**ಕನ್ನಡ-ಪ್ರಾಕೃತ ಭಾಷೆ**

ಶ್ರೀಮಾನ್ ರಾಘವೇಂದ್ರಾಚಾರ್ಯ ಎಸ್. ಪಂಚಮುಖಿಯವರು ಧಾರವಾಡದ "ಕನ್ನಡ ಸಂಶೋಧನ ಸಂಸ್ಥೆ"ಯ ಅಧಿಕಾರಿಗಳಾಗಿದ್ದು ಅಭಿನಂದನೀಯವಾದ ಕೆಲಸ ಮಾಡಿದ್ದಾರೆ. ಅವರು ಪ್ರಕಟಿಸಿರುವ ಮುಂಬಯಿ ಕರ್ನಾಟಕ ಶಾಸನಗಳ ಮೊದಲನೆಯ ಸಂಪುಟದ ೬೯ ಶಿಲಾಶಾಸನಗಳಲ್ಲಿ ಎರಡನೆಯ ಶಾಸನ ೨೦-೫-೬೯೯ರಂದು ಹುಟ್ಟಿದ್ದು. ಬಾದಾಮಿ ಚಾಳುಕ್ಯ ವಿಜಯಾದಿತ್ಯ ಸತ್ಯಾಶ್ರಯನ ಆಳ್ವಿಕೆಯ ಮೂರನೆಯ ವರ್ಷಕ್ಕೆ ಸಂಬಂಧಪಟ್ಟದ್ದು. ಜಂಬುಲಿಂಗ ದೇವಾಲಯದ ಕಂಬದ ಮೇಲಿದೆ ಹದಿನೈದು ಸಾಲುಗಳ ಶಾಸನ. ಮೊದಲ ಹತ್ತು ಪಾದಗಳು ಸಂಸ್ಕೃತದಲ್ಲಿವೆ; ಉಳಿದ ಐದು ಕನ್ನಡದಲ್ಲಿವೆ.

ರಾಜಮಾತೆಯಾದ ವಿನಯವತೀ ದೇವಿಯು ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಸ್ಥಾಪನೆ ಮಾಡಿದಳೆಂದು ಶಾಸನವು ಹೇಳುತ್ತಿದೆ.

"ಬ್ರಹ್ಮಾ ವಿಷ್ಣು ಮಹೇಶ್ವರ ಸ್ಥಾಪನೆ (ನಂ)
ವಿನಯವತ್ಯಾ ರಾಜಮಾತ್ರಾಕೃತಂ ಅತಃಪರಂ
**ಪ್ರಾಕೃತಭಾಷಯಾ** ವರ್ಣ್ಯಾ ಣ್ಯೇತಾನಿ
ದತ್ತಾನಿ ಸುಚ್ಛಾನಿ"

ಎಂದು ಹೇಳಿ ಮುಂದೆ ಕನ್ನಡದಲ್ಲಿ ಬರೆಯಲಾಗಿದೆ.

೧೧. "ಪೆಱ್ಕುಳಕ್ಕೆ ಮೊದಲಾಗೆ ಅಂಗಾಡಿಯುಳಿ
ಮೂರ್ಱನ ಮೆಣ್ಣೆಯು

೧೨. ಮು ಮರಿಸಿನಮುಂ ಮೇಣೊಪ್ಪಱಲಂ
ಸಕ್ಕರೆ ಇರ್ಪಱಲಂ ಪೆಱ

೧೩. ಸೋಳಿಪ್ಪಱಲ ಐಯ್ದಡೆ ಕೊಟ ಕಾ
ಇರ್ಪ್ಪತ್ತೈದಂ ಉಱಲ್ಲಾಗೆ ಸಾಲಿ

೧೪. ಒಳುರೇ ವಣ್ಣೆಸಿಗೆಯಿಯೆದು ಮಾಲಗಾಱ
ಶ್ರೀಮಾಂಜೇ ಮೂಟ ಇನಿ

೧೫. ಥೂ ಇಪ್ಪತೆಯ್ದು ಮುಮ್ಮೊದಲಾಗೆ
ಯ್ಪಾಡಿ ವೀಸಾಭಾಗಂ ಪುಲ್ಲರು . . .

ಈ ಐದು ಸಾಲುಗಳ ಹಳೆಗನ್ನಡವನ್ನು, ಶಾಸನ ಬರೆಸಿದವರೂ, ಬರೆದವನೂ ಇಬ್ಬರೂ "ಪ್ರಾಕೃತ ಭಾಷೆ" ಯೆಂದು ಕರೆದಿದ್ದಾರೆ. ಹೀಗೆ ಬರೆದಿರುವುದು ಲೇಖಕನ ಉದಾಸೀನತೆಯ ಫಲವಲ್ಲ. ಬಹಳ ಮಾಡಿ ನೋಡಿದರೆ ಕನ್ನಡ, ತೆಲುಗು, ಮೊದಲಾದ ಭಾಷೆಗಳು "ಶೈಶವಾವಸ್ಥೆ"ಯಲ್ಲಿದ್ದಾಗ, ಅವು "ದಿನ ದಿನ ಪ್ರವರ್ಧಮಾನಕ್ಕೆ ಬರುತ್ತಿದ್ದಾಗ, ನಾಗರಿಕರು-ಸಂಸ್ಕೃತರು ಆ ಭಾಷೆಗಳನ್ನು "ಪ್ರಾಕೃತ"ವೆಂದೇ ಕರೆದಿರಬೇಕು. ಮೊದಲು ಮೊದಲು ದೇಶ ಭಾಷೆಗಳ ಮೇಲೆ ಪಾಕೃತ ಪ್ರಭಾವ ಪ್ರಬಲವಾಗಿದ್ದು, ಅನಂತರ ಅವು ಸಂಸ್ಕೃತ ಪ್ರಭಾವಕ್ಕೆ ಒಳಗಾಗಿರಬೇಕು. ಸಂಸ್ಕೃತ-ಪ್ರಾಕೃತ ಪಕ್ಷಪಾತಿಗಳೇ ಮುಂದೆ ಬಂದು ದೇಶ ಭಾಷೆಗಳ "ವಕಾಲತ್ತು" ವಹಿಸಿ, ಅವೂ "ನಾಗರಿಕ ಸ್ಥಾನಮಾನ"ಗಳನ್ನು ಪಡೆಯುವಂತಾಗಿರಬೇಕು. ಈ ಮಹತ್ಕಾರ್ಯ ಸಾಧನೆಯಲ್ಲಿ ಜೈನಧರ್ಮಾವಲಂಬಿಗಳ ಸೇವೆ ಸ್ಮರಣೀಯವಾದದ್ದು. "ಕಾಡು ಕನ್ನಡ"ವನ್ನು "ಕಾವ್ಯ ಕನ್ನಡ"ವನ್ನಾಗಿ ಪರಿವರ್ತನಗೊಳಿಸಿದ ಕೀರ್ತಿ ಜೈನರದು. ಶ್ರೀಮಾನ್ ಪಂಚಮುಖಿಗಳ ಈ ವಚನ ಕುರಿತು ಮೆಲುಕು ಹಾಕುವ ಅವಶ್ಯಕತೆ ಇದೆ.

"Puligere near Adur, Okkunda near Palasige, Kisuvolal or Pattadakal (called also Pattada Kisuvolal in one of the inscriptions) near Aihole and Koppana-nagara or Koppal, which are described as the boundaries of a region of Tirul-gannada (Pure Kannada) in the Kaviraja marga (9th century A. D.) were centres of Jainisiam and Jaina calture, when the budding kannada language was nurtured into a literary classical vehicle by the Jain

poets and philosphers long before the composition of the Kavirajamarga. Nripatunga Amoghavarsha I who was a staunch Jaina poet, philosopher and King had naturally a bias for the Kannada of the above mentioned area where poets like Ravikeerti had lived and composed works."*

**ಕಾರವಾರ ಜಿಲ್ಲೆಯ ಶಿಲಾ ಶಾಸನಗಳು**

ಕರ್ನಾಟಕ ಶಿಲಾ ಶಾಸನಗಳ ಮೊದಲನೆಯ ಸಂಪುಟದಲ್ಲಿ ಕಾರವಾರ ಜಿಲ್ಲೆಯ ಶಾಸನಗಳ ಮಾತನ್ನೆತ್ತಿ ಶ್ರೀ ಪಂಚಮುಖಿಯವರು ಅಮೂಲ್ಯವಾದೆರಡು ಸೂಚನೆಗಳನ್ನು ಮಾಡಿದ್ದಾರೆ.

೧. ಹೊಯಿಸಳ ರಾಜಮನೆತನದ ಆಳ್ವಿಕೆಯ ಪತನಾನಂತರ ವಿಜಯನಗರದ ನಾನಾ ರಾಜವಂಶಗಳ ಮುಖ್ಯ ಮುಖ್ಯ ರಾಜರೂ, ಅವರ ಸಾಮಂತರೂ, ಈ ಜಿಲ್ಲೆಯೊಂದಿಗೆ ನಿಕಟಸಂಪರ್ಕ ಹೊಂದಿದ್ದರೆಂಬುದನ್ನು ಈ ಶಾಸನಗಳು ಸಾರುತ್ತಿವೆ. ವಿಜಯನಗರ ಸ್ಥಾಪನೆಗೆ, ಸಂಗಮ ರಾಜವಂಶದ ಆರಂಭಕ್ಕೆ, ಸಂಬಂಧಪಟ್ಟ ಕ್ಲಿಷ್ಟ ಸಮಸ್ಯಾ ಪರಿಹಾರಕ್ಕೆ ಈ ಶಾಸನಗಳ ಅಧ್ಯಯನ ಸಹಾಯ ಮಾಡಬಹುದು.

೨. ಈ ಶಾಸನಗಳು ಈ ಜಿಲ್ಲೆಯ ಧಾರ್ಮಿಕ, ಸಾಮಾಜಿಕ, ವಾಣಿಜ್ಯ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ. ಅಲ್ಲದೆ ಈ ಶಾಸನಗಳ †ಶಬ್ದಸಂಪದ ಈ ಜಿಲ್ಲೆಗೇ ವಿಶಿಷ್ಟವಾಗಿದ್ದು, ಕನ್ನಡ ದೇಶೀ ವೈವಿಧ್ಯತೆಯ ಅಧ್ಯಯನಕ್ಕೆ ಸಹಾಯಕಗಳಾಗಿವೆ.

§ಬೈಲೂರು ಮಾರ್ಕಂಡೇಶ್ವರ ದೇವಾಲಯದಲ್ಲಿರುವ ೧೫-೧೬ನೆಯ ಶತಮಾನದ ಶಾಸನದಲ್ಲಿ ಬಳಸಿರುವ ಮಾತುಗಳಿವು.

| | | |
|---|---|---|
| ಅರುಗಡಿ | ಮನೆ ಹಣ | ನೊಗಹಣ |
| ಒಕ್ಕಲು ಗುತ್ತಗೆ | ಕಾಣಿಕೆ | ಖಡಾಯ |
| ಬೆಳಾಕರಣ | ಬೆಳುದಂಡ | ಎಸೆ |
| ಒಸಗೆ | ಬಿಡಾರ | ವತ್ತುಗಾಯಿ |
| ಮನೆರಾಉ | ಅಂಗೋಡ | ಅಂಗಸ |

ಈ ಮಾತುಗಳ ನಿಕರವಾದ ಅರ್ಥವನ್ನು ತಿಳಿಯುವ ಅವಶ್ಯಕತೆ ಇದೆ. ಇಂದೂ ಈ ಜಿಲ್ಲೆಯಲ್ಲಿ ಈ ಮಾತು ಬಳಕೆಯಲ್ಲಿರಬೇಕು.

ಅದೇ ಮಾರ್ಕಂಡೇಶ್ವರ ದೇವಾಲಯದ ಇನ್ನೊಂದು *ಶಾಸನದಲ್ಲಿ

| | | |
|---|---|---|
| ಅಂಗೋಡು | ಅಂಗಸಸಿ | ನೀರುದಾರಿ |
| ಬಾಳು | ಕಾರುಗಾಲಬಾಳು | ಉದಾಕಟೆಯ ಬಾಳು |
| ಕಟ್ಟಿನ ನೀರು | ಕ್ರಿಯಾಕಾರ. | |

ಎಂಬ ಮಾತುಗಳಿವೆ.

**ಮಂಗಳ ಮಜ್ಜನ ಮಹೋತ್ಸವ**

ಮುಂಡೊಳ್ಳಿಯ ಅಮರೇಶ್ವರ ದೇವಸ್ಥಾನದ *ಶಾಸನವೊಂದು ಇಮ್ಮಡಿ ದೇವರಾಯನ ಕಾಲದ್ದು; ಕ್ರಿ. ಶ. ೧೪೬೭ರಲ್ಲಿ ಹುಟ್ಟಿದ್ದು. ಆಗ "ಆಚರಸ ಒಡೆಯರು ಬಾರಕೂರ ರಾಜಧಾನಿಯಲಿದ್ದು ತುಳು ರಾಜ್ಯ" ಪ್ರತಿಪಾಲನೆ ಮಾಡುತ್ತಿದ್ದರು. ಆಗ ಆಚರಸ ಒಡೆಯರು

" ಬಟಕಳದೊಳಗೆ ಮುಂಡವಳಿಯ ಗ್ರಾಮದ
ತಿಗಳ ನಾಗಮನೆಯ ವಾಮನ ಉಪಾಧ್ಯಾಯರ
ಮಗ ಪುರುಷೋತ್ತಮ ಭಟ್ಟರಿಗೆ ದೇವ
ರಾಯ ಮಹಾರಾಯರ ಮಂಗಳ ಮಜ್ಜನ
ಮಹೋತ್ಸವದಲ್ಲಿ ಸೋಮೋಪರಾಗ
ಪುಣ್ಯಕಾಲದಲು ದೇವರಾಯ ಮಹಾರಾಯರ
ಆಯುಶ್ಯಾಭಿವೃಧ್ಯರ್ಥವಾಗಿ ಆಚರಸ
ಒಡೆಯರು ಮುಂಡವಳ್ಳಿಯ ಗ್ರಾಮದ ವೊ
ಳಗೆ ಪುರುಷೋತ್ತಮ ಬಟ್ಟರಾ ತಂಮ
ಸಂತಾನ ಪಾರಂಪರಿಯದಿಂದ ಶ್ರೀ ದುರ್ಗ್ಗಾ
ಸ್ಥಾನದಲ್ಲಿ ಚಾತುರ್ಮಾಸ್ಯ ನಾಲ್ಕು ತಿಂಗಳು
ಪ್ರತಿವರುಶ ವರುಶದಲು ದೇವೀ ಮಹಾತ್ಮೆ
ಸ್ತೋತ್ರ ಜಪವ ಮಾಡುಉದಕ್ಕೆ ಧರ್ಮ

---

* Karnataka Inscriptions, Vol. I Intro. P. vi

†These lithic records present a vocabulary that is peculiar to the area and helps to demankate the different dialects in the Kannada Language.

§No. 54 of 1939-40.

* No. 55 of 1939-40, Karnataka Inscriptions Vol. I

* No. 58. of 1939-40, Karnataka Inscriptions Vol. I

ವಾಗಿ ಪುರುಶೋತ್ತಮ ಬಟ್ಟರಿಗೆ ಮುಂ
ಡವಳಿಯ ಗ್ರಾಮದವರು ಬಾರಕೂರ ಆರಮ
ಮನೆಗೆ ತೆರುವ ಕುಳದ ಪೊನ್ನಿನವೊಳಗೆ
. . . ಹಂನೆರಡು ಹೊಂನನೂ ಪುರುಷೋತ್ತಮ
ಬಟ್ಟರು ಅವರ ಸಂತಾನ ಪಾರಂಪರಿಯಕ್ಕೆ
ನಡೆದು ಬಾಹ ಮರಿಯಾದೆಯಲು ಅವರಿಗೆ
ದಾರೆಯನೆಱದು ದರ್ಮಸಾಸವನು"

ಬರಸಿಕೊಟ್ಟರು.

ಇದು ಅಮೂಲ್ಯ ಐತಿಹಾಸಿಕ ಅಂಶವೊಂದಕ್ಕೆ ಬಲ ಕೊಡುವ ಶಾಸನ. ವಿಜಯನಗರದ ಇಮ್ಮಡಿ ದೇವರಾಯನನ್ನು ಕೊಲ್ಲುವ ಪಿತೂರಿಯೊಂದು ಅರಮನೆಯಲ್ಲೇ ನಡೆಯಿತು. ಆಗ ಮಹಾಪ್ರಧಾನ ದಂಡನಾಯಕ ಲಕ್ಷ್ಮೀಧರ ಈ ಸಂಚನ್ನು ಹೇಗೋ ಮೊದಲೇ ತಿಳಿದುಕೊಡು, ತಕ್ಕ ಸಿದ್ಧತೆಮಾಡಿ, ಸಂಚುಗಾರ–ಕೊಲೆಪಾತಕಿಗಳನ್ನೆಲ್ಲ ಕೊನೆಗಾಣಿಸಿದ. ಬಹಳ ಮಾಡಿ ದೇವರಾಯರು ಆ ವಿಪತ್ತಿನಿಂದ ಪಾರಾದ ಸಮಯದಲ್ಲಿ ಸಾಮ್ರಾಜ್ಯದಲ್ಲೆಲ್ಲ ಸಂತೋಷದ ಉತ್ಸವ ನಡೆದಿರಬೇಕು. ಬಾರಕೂರ ರಾಜ್ಯದಲ್ಲೂ ಆಚರಸ ಒಡೆಯರು "ಮಂಗಳ ಮಜ್ಜನ ಮಹೋತ್ಸವ" ವನ್ನು ವೈಭವದಿಂದ ನಡೆಸಿ, ಮಹಾರಾಜರ ಆಯುರಾರೋಗ್ಯಕ್ಕಾಗಿ ದಾನ ಧರ್ಮಗಳನ್ನು ಮಾಡಿರಬೇಕು; ದೇವಕಾರ್ಯಗಳ ವ್ಯವಸ್ಥೆ ಮಾಡಿರಬೇಕು.

ಮಕ್ಕಿ ಮತ್ತಿಯ* ಶಾಸನವೂ ಸಹ ಈ "ಮಂಗಳ ಮಜ್ಜನ" ಕುರಿತ ಪ್ರಸಂಗಕ್ಕೆ ಸಂಬಂಧಪಟ್ಟ ಹಾಗಿದೆ.

## ಉಭಯ ಕವೀಶಂ ದ್ವಿಜಂ ಶಂಕರಾರ್ಯಂ

ಹಾಡುವಳ್ಳಿಯ ಹಿರೇಬಸ್ತಿಯ ಮುಂದಿನ ಕಂಚಿನ *ಮಾನಸ್ತಂಭದ ಮೇಲೆ ೧೩-೪-೧೪೭೪ ರಲ್ಲಿ ಬರೆದ ಸಾಳ್ವೇಂದ್ರ ಕ್ಷಿತಿಪನ ದಾನ ಶಾಸನ ಕೆತ್ತಿದೆ. ಆ ಶಾಸನವನ್ನು

"ವರತರ್ಕ್ಕಾಲಂಕೃತಿ ವ್ಯಾಕರಣ ಪರಿಣತಂ
ಶುದ್ಧ ಸಮ್ಯಕ್ತ್ವರತ್ನಾ
ಭರಣ ಶ್ರೀ ಗೋಪಣಾತ್ಮೋದ್ಭವನುಭಯ
ಕವೀಶಂ ದ್ವಿಜಂ ಶಂಕರಾರ್ಯಂ
ಪರಮಾರ್ಹಚ್ಛಾಸನಕ್ಕೊಳ್ಪೆಸೆವ ಕೃತಿಯನಾ
ಚಂದ್ರತಾರಂಬರಂ ಸು
ಸ್ಥಿರಮಾಗಲ್ಸಾಳುವೇಂದ್ರಾಧಿಪ ನಭಿಮತದಿಂ
ಸಜ್ಜನವ್ಮೆಚ್ಚೆ ಪೇಳ್ದಂ"

ಕಂಚಿನ ಮಾನಸ್ತಂಭಸ್ಥಾಪಿಸಿ, ಘಂಟಾ ಮಾಲೆಯಂ ಕೊಟ್ಟು, ಚತುರ್ವಿಧ ದಾನಮಂ ಶ್ರೀ ಚಂದ್ರನಾಥನಿಗೆ ಮಾಡಿದ ಸಾಳ್ವೇಂದ್ರ ಕ್ಷಿತಿಪನನ್ನು ಕುರಿತ ಪದ್ಯಗಳಿವು.

"ಜಿನಪಾದಾಂಭೋಜಮಂ ಪೂಜಿಸದೆ
ಜಿನ ಮುನೀಂದ್ರ ಪ್ರತಾನಕ್ಕಲಂಪಿಂ
ವಿನುತಾಹಾರಾದಿ ದಾನಂ ಗೊಡದೆ
ಜಿನಮತಾಶ್ಲಿಷ್ಮ ಶಿಷ್ಟಗ್ರ್ಗೆ ಸ್ನೆತೊ
ಳ್ಪಿನ ವಾತ್ಸಲ್ಯಮಂ ತಳ್ತೆಸಗದುಳಿದ
ಕೃತ್ಯಂಗಳಂ ಮಾಡೆನೆಂಬೊಂ
ದನುವೃತಂ ಸಾಳುವೀಂದ್ರ ಕ್ಷಿತಿಪತಿ
ತಿಲಕಂಗಲ್ಲದನ್ಯಗ್ಗಿದುಂಟೆ"

"ತ್ರಿದಶೋರ್ವ್ವೀಮಧ್ಯದೊಳ್ಕೃನಿಮಿರ್ದು
ನಿಲೆ ಹಟ ದ್ದೇವಕೂಟಂ ನಭೋ ರಂ
ಗದೊಳೆತ್ತಂ ಪಂಚರತ್ನಪ್ರಭೆ ನಿಲೆ
ನಿಖಿಲಾಶಾಂತದೊಳ್ಚಂದ್ರ ಗಂಗಾ
ನದೀವತ್ಕೀರ್ತಿಧ್ವಜಂ ಗಳ್ನಿಲೆ
ನಿಲಿಸಿದೊಡಂ ಸಾಳುವಿಂದ್ರೇಂದ್ರನೇ ನಿಂ
ದುದೊ ಮಾನಸ್ತಂಭ ಮಕ್ಷಿದ್ಯುತಿ
ವಿತತಲತಾಸ್ತಂಭ ಮುದ್ಭಾಸಿ ಕುಂಭಂ"

"ಸರಿ ಇಲ್ಲೀ ಸಾಳುವೀಂದ್ರಗಹಹ
ಜಿನಮಹಾಧರ್ಮ್ಮದೊಳ್ನೋಳ್ಪೊಡೆತ್ತ
ಲ್ಸರಿ ಇಲ್ಲಿಂ ತುಂಗಚೈತ್ಯಾಲಯದ
ಸಿರಿಗಹೋ ಚಂದ್ರನಾಥಂಗದಾರುಂ
ಸರಿಯಿಲ್ಲೆಂದಪ್ಪ ದಿಙ್ಮಂಡಲಮಱ
ವಿನೆಗಂ ಸಾಱುವಂತಾಯ್ತು ಬಾನೊ
ಪಿರಿದುಂ ತದ್ದೇವಕೂಟ ಸ್ಫುಟಘಟಿತ
ಹಟದ್ರತ್ನ ಘಂಟಾ ನಿನಾದಂ"

---

* No. 65 of 1239-40, Karnataka Inscriptions I

* No. 59 of 1939-40, Karnataka Inscriptions I

# ತೌಳವ ನಾಡಿನ ಕೆಲವು ವೈಶಿಷ್ಟ್ಯಗಳು

■ ಕೆ. ವೆಂಕಟರಾಯಾಚಾರ್ಯ

ಭಾರತದ ಒಳನಾಡಿಯಂತಿರುವ ಪ್ರತಿಯೊಂದು ನಾಡಿನಲ್ಲಿಯ ವೈಶಿಷ್ಟ್ಯ ಬೇರೆ ಬೇರೆ ಇದೆ. ಪ್ರಸ್ತುತ, ತೌಳವ ನಾಡಿನ ಬಗೆಗೆ ಕೆಲವನ್ನು ಕುರಿತು ಬರೆಯಲೆಳಸಿದ್ದೇನೆ.

ಪಡುಕಡಲು ಹಾಗೂ ಪಡುಗಟ್ಟದ ನಡುವೆ, ರಾಮೇಶ್ವರದಿಂದ ಶೂರ್ಪಾರಕದ ವರೆಗೆ ಹರಡಿದ ಭೂಭಾಗ 'ಪರುಶುರಾಮಕ್ಷೇತ್ರ'ವೆಂದು ಪೌರಾಣಿಕವಾಗಿ ಪ್ರಚುರವಿದೆ. ಐತಿಹಾಸಿಕವಾಗಿ ಇದರಲ್ಲಿ ಕುರುಹುಗಳಿಗೆಡೆಯಿಲ್ಲ. ಕಾಲಾಂತರದಲ್ಲಿ ಈ ಪ್ರದೇಶವು ವಿಭಿನ್ನರೀತಿಯಲ್ಲಿ ಸಾಗಿದೆ; ಏಕತೆಯಲ್ಲಿ ಅನೇಕತೆಯೂ ಕಂಗೊಳಿಸುತ್ತದೆ. ಇದೀಗ ಕೇರಳ (ಚೇರ), ತುಳು, ಕನ್ನಡಗಳೆಂಬ ಮೂರು ನಾಡುಗಳಲ್ಲಿ ಈ ಪ್ರದೇಶ ಹರಹಿದೆ; ಬರುತ್ತಾ ತುಳುವು ಕನ್ನಡದೊಂದಿಗೆ ಬೆರೆತಿದೆ.

## ಚಾರಿತ್ರಿಕ ವಿಚಾರ

ಈ ತುಳುನಾಡಿನ ಬಗ್ಗೆ ಚಾರಿತ್ರಿಕ ವಿಚಾರಗಳನ್ನು ಪ್ರಾಧಾನ್ಯತಃ ಪರಿಶೀಲಿಸುವಲ್ಲಿ, ಕ್ರಿ. ಪೂ. ಮೂರನೆಯ ಶತಕದಲ್ಲಿದ್ದ ಅಶೋಕಮಹಾರಾಜನ ಶಿಲಾಶಾಸನದಲ್ಲಿ ಇದರ ಹೆಸರಿದೆ;. ಆತನ ರಾಜ್ಯದ ಹೊರಗಡೆಯವೆಂದು "ಚೋಡ ಪಂಡಿಯ ಸತಿಯಪುತ್ರೋ ಕೇಲಪುತ್ರೋ ತಂಬಪಂಣಿ"ಗಳು ಹೇಳಲಾಗಿವೆ. ಚೋಳ ಪಾಂಡ್ಯ ಕೇರಳಪುತ್ರ ಮತ್ತು ತಾಮ್ರಪರ್ಣಿಗಳಲ್ಲದೆ 'ಸತಿಯಪುತ್ರ'ವು ಯಾವುದಿರಬೇಕೆಂಬ ಜಿಜ್ಞಾಸೆ ವಿದ್ವಾಂಸರಲ್ಲಿ ಅನೇಕ ವಾದಗಳಿವೆ (ಅಶೋಕನ ಶಿಲಾಶಾಸನಗಳು: ಮುಂಬೈ ವಿಶ್ವವಿದ್ಯಾಲಯದ ಪ್ರಕಟನೆ ನೋಡಿರಿ). ಆದರೆ, ಸತಿಯಪುತ್ರವೆಂದರೆ ವ್ಯಾಸಭಾರತದಲ್ಲಿ 'ಸತೀನರಾಃ' ಎಂಬುದಕ್ಕೆ ಸಮಾನವಾದ ಅರ್ಥ ಮೂಲರೂಪ (ಪರ್ಯಾಯ ಶಬ್ದ) ವಿರುವುದು; 'ಸತಿಯರೇ ನರರಾಗಿ (ಪುತ್ರರಾಗಿ) ಉಳ್ಳ ಜನತೆಯ ಪ್ರದೇಶವೆಂದು ತಿಳಿಯಬಹುದಾಗಿದೆ (ಸಾಹಿತ್ಯದ ಹಿನ್ನೆಲೆಯಲ್ಲಿ ಇದನ್ನು ವಿವರಿಸಿದ್ದೇನೆ). ಅಂದರೆ ಅಳಿಯ ಸಂತಾನಕಟ್ಟಿನ ಬಳಕೆ ತುಳುನಾಡಿನವರಲ್ಲಿದೆ. 'ಮರುಮಕ್ಕತ್ತಾಯಂ' ಎಂಬುದು ಕೇರಳದವರಲ್ಲಿದೆ. ಅವರನ್ನು ಕೇರಳ ಪುತ್ರರೆಂದೇ ಪ್ರತ್ಯೇಕಶಃ ಇಲ್ಲಿ ಹೇಳಿದೆ. ಹಾಗಾಗಿ ಸತಿಯಪುತ್ರರೆಂದರೆ ತೌಳವರೆಂದೇ ನಾವು ನಿರ್ಧರಿಸಬಹುದು. "ಗೋಕರ್ಣದಿಂದ ರಾಮೇಶ್ವರದ ವರೆಗೆ ಮಲೆಯಾಳ (ಕೇರಳ) ಪ್ರದೇಶವೆಂಬ ಹೇಳಿಕೆ"ಯು ಇದರಿಂದ ದೂರವಾಗುತ್ತದೆ. "ಸತಿಯಪುತ್ರವೆಂಬುದು ನಮ್ಮ (ತುಳು) ನಾಡಿಗೆ ಅನುಮಾನಿತ ಸತ್ಯವೆಂದು ಒಪ್ಪಿಕೊಂಡರೂ, ಇದನ್ನು ಚರಿತ್ರೆಕಾರರು ಒಪ್ಪುವುದಿಲ್ಲೆಂ"ದು (ತುಳುನಾಡು ಪು. ೨೪೦, ಶ್ರೀ ಪಿ. ಜಿ. ಭಟ್) ಆಧಾರ ವಿವರಣೆಯಿಲ್ಲದೆ ಹೇಳುವುದು ಸೊಗಸಲ್ಲ. 'ಸತಿಯಪುತ್ರ'ರೆಂಬುದಕ್ಕೆ ಬೇರೆ ಮೂಲ-ಅರ್ಥ ಸೊಗಸದು. ತೌಳವರ ನಾಡು ಪ್ರಾಚೀನತಃ ಮಹಾಭಾರತ ಗ್ರಂಥ ಹಾಗೂ ಅಶೋಕನ ಶಿಲಾಶಾಸನಗಳಲ್ಲಿ ಹೆಸರುಗೊಂಡು, ವೈಶಿಷ್ಟ್ಯದಿಂದ ಕೂಡಿದೆಯೆಂಬುದೇ ಸಾಧುವಾಗಿದೆ. ಸತಿಯಪುತ್ರರೆಂದರೆ ತೌಳವರೆಂದೇ ಅರ್ಥವಾಗುತ್ತದೆ.

## ಪೌರಾಣಿಕ ಕಥೆಗಳು

ಪರಶುರಾಮನು ಪ್ರಪ್ರಥಮತಃ ಇಲ್ಲಿಯ ನಾಲ್ಕು ತಂಡದವರನ್ನು ಪವಿತ್ರೀಕರಿಸಿ ಬ್ರಾಹ್ಮಣರನ್ನಾಗಿಸಿದನೆನ್ನುತ್ತಾರೆ: (ಪರಶುರಾಮನು ಈ ಕ್ಷೇತ್ರ ಸೃಷ್ಟಿಸಿದ ಮೇಲೆ) "ಸಮೀಪದಲ್ಲಿ ಯೋಗ್ಯಬ್ರಾಹ್ಮಣರಿಲ್ಲದ ಕಾರಣ, ಸಮುದ್ರತೀರದಲ್ಲೆ ಹುಟ್ಟಿ ಕೆಟ್ಟ ಕೆಲಸಗಳಿಂದ ಆಚಾರರಹಿತರಾಗಿ ಕೇವಲ ಬಲೆಗಳನ್ನು ಬೀಸುವುದು, ಮೀನಿನ ವ್ಯಾಪಾರ ಮಾಡುವುದು, ಮೃಗಗಳ ಬೇಟೆಯಾಡುವುದು ಮೊದಲಾದ ದುರ್ವ್ಯಾಪಾರದ ನಾಲ್ಕು ತಂಡದವರನ್ನು ಕರೆತರಿಸಿ, ಅವರಿಗೆ ಸದುಪದೇಶವನ್ನು ಮಾಡಿ, ಅವರ ದುರ್ವ್ಯಾಪಾರಗಳನ್ನು ಬಿಡಿಸಿ, ಅವರಿಂದ ಪಾಪ ಪರಿಹಾರಕ್ಕಾಗಿ ಅನೇಕ ಸತ್ಕರ್ಮಗಳನ್ನು ಮಾಡಿಸಿ, ಪುನೀತರನ್ನಾಗಿ ಮಾಡಿದನು." (ಶ್ರೀಮದಾನಂದತೀರ್ಥ ಭಗವತ್ಪಾದರು. ಪುಟ ೮, ಶ್ರೀ ಅಡ್ಡೆ ವೇದವ್ಯಾಸಾಚಾರ್ಯ). ಮತ್ತೆ ಅವರಿಗೆ ಪರಶುರಾಮನು ಶಾಪವಿತ್ತುದರಿಂದ ತ್ರಿಕರ್ಮಿಗಳಾದರೆಂಬೂ ಹೇಳಿದೆ (ಅದೇ ಪುಟ ೧೩). ಈ ಕತೆಗೆ ಐತಿಹಾಸಿಕ ಬೆಂಬಲವಿಲ್ಲ.

### ಚಾರಿತ್ರಿಕವಾಗಿರುವ ಹೇಳಿಕೆಗಳು

ಮಯೂರವರ್ಮಾದಿ ರಾಜರು ಬೇರೆಡೆಯಿಂದಲೆ ಇಲ್ಲಿಗೆ ಬ್ರಾಹ್ಮಣರನ್ನು ಕರೆಯಿಸಿದರೆನ್ನುವುದಕ್ಕೆ ಹಲವು ಲೇಖಗಳು ಕಾಣುತ್ತಿವೆ. ಹೀಗೆ ಕರೆಯಿಸಿಕೊಂಡವರು ಬೇರೆ ಬೇರೆಡೆಯಲ್ಲಿ ಪ್ರತ್ಯೇಕಶಃ ನಿವಾಸಿಗಳಾಗಿದ್ದರು. ಇಲ್ಲಿನವರೂ ಇವರೊಂದಿಗೆ ಸಂಪರ್ಕವಿರಿಸಿಕೊಂಡರು. ತೌಳವ ಬ್ರಾಹ್ಮಣರ ಕೆಲವು ಕುಲನಾಮಗಳೂ, ಮನೆತನಗಳೂ, ಹೆಸರುಗಳೂ, ಭಾಷಾವಿಚಾರಗಳೂ ಈ ಬಗೆಗೆ ವಿವರಿಸಲು ಸಹಾಯಕಗಳಾಗಿವೆ. ಇತರ ವರ್ಗದ ಬ್ರಾಹ್ಮಣರು ಕೇವಲ ಕನ್ನಡನುಡಿಯಾಡುವರು; ತೌಳವ ಬ್ರಾಹ್ಮಣರಿಗಿಂತ ವಿಶಿಷ್ಟವಾದ ಪ್ರತ್ಯೇಕವಾದ ರೀತಿಗಳಿಂದ ಕೂಡಿರುವುದೂ ಇಲ್ಲಿ ಗಮನೀಯವಾಗಿದೆ.

### ತೌಳವರ ಕಟ್ಟು

ಕ್ರಿಸ್ತಾಬ್ದ ೧-೨ನೆಯ ಶತಕಕ್ಕೆ ಹಿಂದಿನ ತಮಿಳು ಗ್ರಂಥದಲ್ಲಿ ಪ್ರಾಚೀನವಾಗಿ ಹೆಸರಿಸಿದ ಭೂತಾಳಪಾಂಡ್ಯನು ಬಾರಕೂರಲ್ಲಿ ಕ್ರಿ.ಶ. ೭೭ಕ್ಕೆ ಪಟ್ಟಾಭಿಷಿಕ್ತನಾಗಿದ್ದಿರಬಹುದೆಂದು ಹೇಳುತ್ತಾರೆ. ಅವನೇ ಈ ನಾಡಿನಲ್ಲಿ 'ಅಳಿಯಕಟ್ಟು' ಮೊದಲಿಗೆ ಬಳಸಿದ್ದವನೆಂದು ಹೇಳಿಕೆಯಿದೆ (ಶ್ರೀ ಗೋವಿಂದ ಪೈ, ತುಳುನಾಡು-ಪೂರ್ವಸ್ಮೃತಿ. ಪುಟ ೩೧). ಆದರೆ ಈ ಮೇಲೆ ಹೇಳಿದಂತೆ, ವ್ಯಾಸಭಾರತದ ಮತ್ತು ಅಶೋಕ ಶಾಸನದ ಆಧಾರಗಳಿಂದ, ಭೂತಾಳ ಪಾಂಡ್ಯನಿಗಿಂತ ಹಿಂದೆ-ಕೆಲವು ಶತಕಗಳಷ್ಟು ಹಿಂದೆ-ಇಲ್ಲಿಯ ಜನಾಂಗವು ಈ ಕ್ರಮವನ್ನು ಅನುಸರಿಸಿಕೊಂಡಿತ್ತೆಂದು ತಿಳಿಯುವುದು. ಹಾಗಾದರೆ, ಭೂತಾಳಪಾಂಡ್ಯನು ಇದರ ಪರಿಷ್ಕರ್ತನೆಂದು ಮಾತ್ರ ನಾವು ತಿಳಿಯಬಹುದಾಗಿದೆ.

### ತುಳು-ತೌಳವ ಹೆಸರುಗಳು

ಈ ಹೆಸರುಗಳು ಈ ನಾಡಿಗೆ ಯಾವ ಕಾರಣ ಬಂದಿರಬೇಕೆಂದು ಅನೇಕರು ಅನೇಕಶಃ ವಿವರಿಸುತ್ತಾರೆ: ತುಲಾಪುರುಷದಾನ, ತುಲಾಭಾರಗಳಿಂದಾಗಿ ಈ ಹೆಸರಾಗಿರಬೇಕೆಂದು ಪೌರಾಣಿಕರು ನಿರೂಪಿಸುತ್ತಾರೆ. ಅಚ್ಚ ದ್ರಾವಿಡ ನುಡಿಗಳಿಂದಲೆ ಇಲ್ಲಿಯ ಹಲವೆಡೆಯ ಹೆಸರುಗಳಿವೆ. ಹಾಗಾಗಿ, ಇದನ್ನು ಕೇವಲ ಸಂಸ್ಕೃತಭಾಷೆಯಿಂದ ನಿರ್ವಚಿಸುವುದು ತರವಲ್ಲ. ಅದರಿಂದ ಈ ಆಶಯ ಸ್ವೀಕಾರ್ಯವಲ್ಲ. ಇನ್ನು, 'ತುಳ್ಳೈ, ತುಳ್ಳೈಯಂ' ಎಂಬವಕ್ಕೆ ತಮಿಳಲ್ಲಿ-ನೀರಲ್ಲಿ ಹುಟ್ಟುಹಾಕುವುದು ಎಂಬುದರಿಂದಲೂ, ಹರಿವಂಶದ 'ದಾಶಾ ಜಲೇಮಗ್ನಾಮುದ್ಗರಾ ನಾಮ ವಿಶ್ರುತಾಃ' ಎಂಬ ಉಲ್ಲೇಖದಿಂದಲೂ, ಇದು ದಾಶಭೂಯಿಷ್ಠವಾದುದರಿಂದ ಈ ಹೆಸರು ಬಂದಿರಬೇಕೆನ್ನುತ್ತಾರೆ (ಶ್ರೀ ಗೋವಿಂದ ಪೈ, ಅದೇ ಪುಟ ೧೯). ತುಳುವರ ಭಾಷೆಯಲ್ಲೂ 'ತುಳಾವು, ತುಳಾವುನಿ' ಎಂದೂ, 'ತುಳಾವೆ, ತುಳಾಯೆ' ಎಂದೂ, ನೀರಲ್ಲಿ ದೋಣಿ ನಡೆಸುವಾಗ ಹುಟ್ಟುಹಾಕುವುದಕ್ಕೆ ಹೆಸರಾಗಿದೆ (ಸುಳಾವುನಿ ಎಂಬುದು ಪ್ರಾದೇಶಿಕ ವಿಭೇದ ರೂಪವು). **ಆ ಪ್ರಾಚೀನಕಾಲದಲ್ಲಿ ಇದು ಕೇವಲ ದಾಶವೃತ್ತಿ ಭೂಯಿಷ್ಠವಾಗಿತ್ತು;** ಕಾಲಾಂತರದಲ್ಲಿ ಕೃಷಿ, ಗೋರಕ್ಷಾದಿಗಳು ತೊಡಗಿದವೆಂದರೆ ತಪ್ಪಾಗದು. ಕರ್ನಾಟ-ಕರ್ಣಾಟ-ಕರುನಾಡು-ಕನ್ನಡವೆಂಬ ಹೆಸರಲ್ಲಿ ಎರಡು ಕೂಡುನುಡಿಗಳಿವೆ. ಅಂದರೆ, ದೊಡ್ಡ ನಾಡು ಎಂದು ಬಲ್ಲವರು ಇದಕ್ಕೆ ಅರ್ಥವಿಸುತ್ತಾರೆ (ಕವಿಚರಿತೆ, ಕನ್ನಡನಾಡಿನ ಚರಿತೆ). ಅರ್ಥಾತ್, ತುಳು ಹಾಗೂ ಕನ್ನಡವೆಂಬೀ ಹೆಸರುಗಳು ಕೇವಲ ಜನಾಂಗದ ಹೆಸರಾಗಿಲ್ಲ. ಆ ಜನರ ವೃತ್ತಿ ಹಾಗೂ ಪ್ರಾದೇಶಿಕ ವಿಶೇಷಗಳನ್ನು ಅವು ಸೂಚಿಸುತ್ತವೆ. ಉದಾ: 'ಸತೀನರಾಃ', 'ಸತಿಯಪುತ್ರ'ರೆಂದರೆ, ಅದೊಂದು ಕಟ್ಟಳೆಯನ್ನು ಅನುಸರಿಸಿದವರೆಂದು ಈ ಮೊದಲೇ ಹೇಳಿದೆ. ಮರು, ಕಚ್ಛ, ಚೇರಗಳಂತೆ ಸ್ಥಳದ ವೈಶಿಷ್ಟ್ಯವನ್ನು ಕುರಿತು 'ತುಳು' ಎಂದಿಲ್ಲ, ವೃತ್ತಿಗತವಾಗಿ 'ತುಳು - ತುಳುನಾಟ್ - ತೌಳವ'ರೆಂದಿದೆ. 'ತುಳು'ವು 'ತುರು'ವೆಂಬ ಕನ್ನಡನುಡಿಯ ರೂಪಾಂತರವೆನ್ನರಿವುದೂ ಸಾಜವಲ್ಲ. ಈ ನಾಡಿನ ಭಾಷೆ (ತೌಳವ ಭಾಷೆ)ಯಲ್ಲಿ 'ತುರು'ವೆಂಬ ನುಡಿಯ ಬಳಕೆಯಿಲ್ಲ. ಈ ಮೊದಲೆಂದಂತೆ, ಸಂಸ್ಕೃತದಿಂದ ಅಥವಾ ಕನ್ನಡ ಭಾಷೆಯಿಂದ ಇದರ ಅರ್ಥವು ಅದೇನೂ ಸೊಗಸಾಗದು.

### ಪ್ರಾಚೀನತೆ

'ತುಳು'ವೆಂಬೀ ನುಡಿಯ ಬಳಕೆಯ ಪ್ರಾಚೀನತೆಯನ್ನು ಕಾಣಬೇಕು: 'ಪರಣಾರ್' ಎಂಬ ತಮಿಳು ಕವಿಯ ಸಾಹಿತ್ಯದಲ್ಲಿ 'ತುಳುನಾಟ್' ಎಂದು ಉಲ್ಲೇಖವಿದೆ. ಸಂಘಂ ಸಾಹಿತ್ಯವು ಕ್ರಿ.ಶ. ೧-೩ನೆಯ ಶತಕದಲ್ಲಿ ಬರೆದಿರಬೇಕೆಂದು ಚಾರಿತ್ರಿಕರ ಆಶಯ. (ತುಳುನಾಡು: ಶ್ರೀ ಪಿ. ಗುರುರಾಜಭಟ್, ಪುಟ ೨೫). ಅದಾಗಿ, 'ತುಳವ' ಎಂಬ ಉಲ್ಲೇಖವು ಕ್ರಿ.ಶ. ೧೧೮೪ರ ಬಲ್ಲಾರಿಯ ಶಾಸನದಲ್ಲಿದೆ. 'ಇದುವರೆಗೆ ದೊರೆತಿರುವ ಶಾಸನಗಳಲ್ಲಿ ಆ ಹೆಸರಿನ ಪ್ರಾಯಃ ಮೊತ್ತಮೊದಲಿನ ಉಲ್ಲೇಖ ಇದೇ ಏನೋ? (ಶ್ರೀ ಗೋವಿಂದ ಪೈ, ತೆಂಕನಾಡು ಪುಟ ೧೬). ಆದರೆ, ಗ್ರಂಥಸ್ಥವಾಗಿ ತೌಳವವೆಂಬೀ ಹೆಸರು ಕ್ರಿಸ್ತಾಬ್ದ ಹತ್ತನೆಯ

ಶತಕದ (ಇಸ್ವಿ ೯೭೪-೭೮) ಕನ್ನಡ ಗ್ರಂಥದಲ್ಲಿದೆ. ನಾಗವರ್ಮ (ಮೊದಲನೆಯವ) ಬರೆದ ಕನ್ನಡ ಛಂದೋಂಬುಧಿಯಲ್ಲಿದೆ (ಮದ್ರಾಸ ಪ್ರತಿ ಪುಟ ೧೪) :

"ಮತ್ತಂ ಕರ್ಣಾಟಾಂಧ್ರ ದ್ರವಿಡ ವರಾಟ ಲಾಟ ಮಾಳವ ಗೌಳವ ಘೂರ್ಜರ ಕಳಿಂಗಾಂಗ ವಂಗ ಕೇರಳ ಬಾಹ್ಲಿಕ ಮಗಧ ಚೇದಿ ವಾಚಾಲ ಪಾಂಚಾಲ ವೆಂಗಿ **ತೌಳವಾದಿ** ದೇಶಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವ ವಿಷಯ ಭಾಷಾ ಜಾತಿಗಳಕ್ಕುಂ. ಅವಾವುವೆಂದೊಡೆ—

" ಮದನವತಿಯಕ್ಕರಂ ಚೌ |
ಪದಿ ಗೀತಿಕೆಯೇಳೆ ತಿವದಿಯುತ್ಸಾಹಂ ಷ |
ಟ್ಪದಿಯಕ್ಕರಿಕೆ ಕರಂ ಚೆ |
ಲ್ವೊದವಿದ ಛಂದೋವತಂಸಮಬ್ಜದಳಾಕ್ಷೀ || "

ರೆ|| ಕಿಟ್ಟೆಲ್ಲರು ಪ್ರಕಟಿಸಿದ 'ನಾಗವರ್ಮನ ಛಂದೋಂಬುಧಿ'ಯಲ್ಲಿ ಈ ಮೊದಲಾಗಿ ಹೇಳಿದ 'ಸಂಸ್ಕೃತಂ ಪ್ರಾಕೃತಮಪಭ್ರಂಶ ಪೈಶಾಚಿಕಮೆಂಬ ಮೂರುವರೆ ಭಾಷೆಗಳೊಳ್ ಪುಟ್ಟುವ ದ್ರವಿಡಾಂಧ್ರಕರ್ಣಾಟಕಾದಿ **ಷಟ್ಪಂಚಾಶತ್** ಸರ್ವವಿಷಯ ಭಾಷಾ ಜಾತಿಗಳಕ್ಕುಂ' ಎಂಬುದರ ಟಿಪ್ಪಣಿಯಲ್ಲಿ ೫೬ ದೇಶಗಳ ಹೆಸರುಗಳನ್ನು ಹೇಳಿದ್ದು, ಅವಲ್ಲಿ **ತುಳವವೂ** ಒಂದಾಗಿ ಸೇರಿದೆ (ಪುಟ ೨೨). ಒಟ್ಟಿನಲ್ಲಿ 'ತುಳುನಾಡು' ಕ್ರಿಸ್ತಪೂರ್ವದಿಂದ ಬಳಕೆಗೊಂಡ ಹೆಸರಾಗಿದೆ.

**ತುಳುನಾಡಿನ ವಿಸ್ತಾರ**

ತುಳುನಾಡು ಅಂದು ಅದೆಷ್ಟು ವಿಸ್ತಾರಗೊಂಡಿತ್ತೆಂದು ಪ್ರತ್ಯೇಕಶಃ ಹೇಳಲು ಆಧಾರಗಳಿಲ್ಲ. ಪರಂತು, ಆಳ್ವಖೇಡದೊಂದಿಗೆ ತುಳುನಾಡು ಸೇರಿದ್ದಿತಲ್ಲದೆ, ಅದೇ ತುಳುನಾಡು ಆಗಿಲ್ಲ, ಅಷ್ಟು ವಿಸ್ತಾರಗೊಂಡಿಲ್ಲ. ತುಳುನಾಡು ಪ್ರತ್ಯೇಕಶಃ ಹೆಸರಿಸಿದ ಆಧಾರಗಳಲ್ಲಿ ಈ ಹರಹಿನ ವಿಷಯಾಂಶಕ್ಕೆಡೆಯಾಗಿಲ್ಲ. ಆದರೂ, ಇಂದಿನ ಪರಿಸ್ಥಿತಿಯನ್ನು ಪರಿಶೀಲಿಸಿದರೆ, ದ. ಕ. ಜಿಲ್ಲೆಯ ಬಾರಕೂರಿಂದ ಚಂದ್ರಗಿರಿ (ಪಯಸ್ವಿನಿ) ತನಕ, ಪಡುಗಟ್ಟ-ಪಡುಕಡಲುಗಳ ನಡುವೆ ಇರುವ ನೆಲವು 'ತುಳುನಾಡು' ಎಂದು ಹೆಸರುಗೊಂಡಿರಬೇಕೆಂದು ಹೇಳಲಡ್ಡಿಯಿಲ್ಲ.

"ತುಳು ಭಾಷೆಯು ಉತ್ತರ ಕನ್ನಡ ಜಿಲ್ಲೆಯ ಭಟ್ಕಳದಲ್ಲೂ ಪ್ರಚಾರದಲ್ಲಿತ್ತೆಂಬುದು ಶಿರಾವಿಯಲ್ಲಿ ದೊರಕಿದ ಶಕವರ್ಷ ೧೨೭೮ನೆಯ (ಇಸ್ವಿ ೧೩೫೬) ವೀರಕುಲಶೇಖರ ದೇವರಸನ (ಆಳುವರಸನ) ಶಾಸನದಿಂದ ತಿಳಿದು ಬರುತ್ತದೆ: 'ಎರಡು ಭಾಷೆಯ ಗ್ರಾಮುಜನರಿಂಗೆ ಅರಸರು ಅಡುವ ಬಿಡಾರವನು ಆಚಂದ್ರಾರ್ಕವಾಗಿ ವು ತಾಇದೆವು It is interesting to not that the people are referred to as talking two languages, evedently the Tulu and Kannada, (K. I. Vol. III Pt I No. 5). ಇದು ಧಾರವಾಡದ ಕನ್ನಡ ಸಂಶೋಧನಾ ಸಂಸ್ಥೆಯಲ್ಲಿ ಶ್ರೀ ಆರ್. ಎಸ್. ಪಂಚಮುಖಿಯವರ ಸಂಪಾದಕತ್ವದಲ್ಲಿ ಪ್ರಕಟವಾದ 'ಕನ್ನಡ ಶಾಸನಗಳು' ಎಂಬುದರಿಂದ ಉಡುಪಿಯ ಶ್ರೀ ಪಿ. ಜಿ. ಭಟ್ಟರಿಂದ 'ತುಳುನಾಡು' ಎಂಬ ಗ್ರಂಥದಲ್ಲಿ ಎತ್ತಿ ಬರೆಯಲಾಗಿದೆ. ಉತ್ತರ ಕನ್ನಡದಲ್ಲಿ ಈ ಶಾಸನದ ಕಾಲದಲ್ಲಿ-ಇದಕ್ಕೆ ಸಂಬಂಧಿಸಿದವರಲ್ಲಿ-ತುಳು ಭಾಷೆಯವರಿದ್ದರೆನ್ನುವಂತೆ ಹೆಚ್ಚು ಸಾಧಾರವಾದ ವಿವರಣೆ ಹೇಳಿಲ್ಲ. ದ. ಕ. ಜಿಲ್ಲೆಯ ಉಡುಪಿಯಲ್ಲೂ ಬಾರಕೂರಿನ ಬಡಗಣ ಎಡೆಗಳಲ್ಲಿ ಹಾಗೂ ಕುಂದಾಪುರ ತಾಲೂಕಿನಲ್ಲಿ ತುಳುಭಾಷೆಯವರು ನೆಲಸಿದ್ದರೆಂದು ಹೇಳಲು ದೊರಕಿದ ಮಟ್ಟಿಗೆ ಆಧಾರಗಳಿಲ್ಲ. ಅಲ್ಲಿಯವರೆಲ್ಲರೂ ಕನ್ನಡಿಗರು, ಕನ್ನಡ ಭಾಷೆಯಾಡುವವರು. ಅಂದ ಮೇಲೆ, ಅದಕ್ಕಿಂತ ಬಡಗಣ ಭಟ್ಕಳದಲ್ಲಿ (ಶಿರಾವಿಯಲ್ಲಿ) ಆ ಕಾಲಕ್ಕೆ ಕೂಡಾ ತುಳುಭಾಷೆ ಹರಡಿತ್ತೆನ್ನುವುದು ಚೆನ್ನಲ್ಲ! ಉಡ್ಪಿಯ ಬಡಗಣವರಿಗೂ ತುಳುನಾಡವರಿಗೂ ಪರಸ್ಪರ ರಕ್ತ ಸಂಬಂಧಗಳಾಗುತ್ತಿದ್ದಿಲ್ಲ. ಹಾಗಾಗಿ, ಅಲ್ಲಿಯ 'ಎರಡು ಭಾಷೆ'ಗಳೆಂದರೆ, ತುಳು ಮತ್ತು ಕನ್ನಡಗಳೆನ್ನಲು ಆಧಾರಗಳಿಲ್ಲ, ಅಲ್ಲಿ ಕನ್ನಡ ಹಾಗೂ ಕೊಂಕಣಿಯವರಿದ್ದರು; ಈ ಭಾಷೆಗಳೇ ಹೇಳಿರಬೇಕು. ಉತ್ತರ ಕನ್ನಡ ಜಿಲ್ಲೆಯ ಹಲವೆಡೆಯ ಶಾಸನಗಳಲ್ಲಿ - ನಗಿರ, ಹೈವ, ತುಳು, ಹೈಗ, ಕೊಂಕಣರಾಜ್ಯಗಳೆಂದು ಸಮಸ್ತಪದವಾಗಿ ಹೇಳಿದುದನ್ನು ನೋಡಿದರೆ, ಆ ಭಾಗವು 'ತುಳುನಾಡು' ಆಗಿಲ್ಲವೆಂದೂ ತಿಳಿಯುತ್ತದೆ. ಅಂದ ಮೇಲೆ, ಅಲ್ಲಿ ತುಳವರಿಲ್ಲ, ತುಳುಭಾಷೆಯವರಿಗಲ್ಲವೆಂದೇ ಹೇಳಬೇಕು (ಅದೇ ಪುಸ್ತಕದ ಸಂಪುಟ ೧ರಲ್ಲಿ, ೪೮, ೫೬, ೬೨-೬೪, ೬೭-೬೯, ಇತ್ಯಾದಿ. ಸಂಪುಟ ೩ರಲ್ಲಿ ೯, ೧೧, ೧೬ನೆಯ ಶಾಸನ ನೋಡಬಹುದು) ಇನ್ನೊಂದು ಶಾಸನದಲ್ಲಿ-ಸಂಸ್ಕೃತ ಶ್ಲೋಕಗಳನ್ನೊಳಗೊಂಡುದರಲ್ಲಿ-ಉಭಯಕವಿಯೆಂದಿದೆ. ಅಂದರೆ, ಸಂಸ್ಕೃತ ಹಾಗೂ ಕನ್ನಡವೆಂದೇ ಅರ್ಥವಾಗುತ್ತದೆ. ಒಟ್ಟಿನಲ್ಲಿ, ಉ. ಕ. ಜಿಲ್ಲೆಯು ತುಳುನಾಡಿಗೆ ಒಳಪಟ್ಟಿಲ್ಲ, ತುಳುವರು ಅಲ್ಲಿದ್ದಿಲ್ಲವೆಂಬುದೆ ಸಾಜವು. ತುಳುನಾಡಿನ ರಾಜಧಾನಿ ಬಾರಕೂರೆಂದು ಹಲವಾರು ಶಾಸನಗ್ರಂಥಗಳಲ್ಲಿ ಹೇಳಿದೆ. ಇದರ ದಕ್ಷಿಣ ಸೀಮೆಯಾದರೋ, 'ಪಯಸ್ವಿನಿ' (ಕಾಸರಗೋಡು ತಾಲೂಕಿನ ನದಿಗಳಲ್ಲೊಂದು) ಆಗಿತ್ತೆಂದು ತಿಳಿಯುತ್ತವೆ:

ಶ್ರೀ ಮಧ್ವಾಚಾರ್ಯರ ಜೀವನ ಚರಿತ್ರೆಯನ್ನು ವಿವರಿಸುವ 'ಮಧ್ವವಿಜಯ'ದಲ್ಲಿ 'ಪಯಸ್ವಿನೀಂ ಕೇರಳಭೂಷಣಾಯಿತಾಂ' ಎಂದಿದೆ! ಕಾಸರಗೋಡು ತಾಲೂಕು (ಆ ತುಳುನಾಡ ಬಹುಭಾಗ) ಇತ್ತೀಚೆಗೆ – ೧೯೫೬ರಿಂದ ಈಚೆಗೆ-ಕೇರಳದೇಶಕ್ಕೆ ಸೇರ್ಪಡೆಯಾದುದು ಚಾರಿತ್ರಿಕ ಸಮ್ಮತವಾಗುವುದು. ಇನ್ನಾದರೂ ಬಲುಬೇಗನೆ-ಮಿಕ್ಕ ತುಳುನಾಡಿನಂತೆ-ಕನ್ನಡದಲ್ಲೆ ಅದು ಸೇರಿಕೊಳ್ಳುವಂತಾದರೆ ಉಭಯಾನಂದಕರವಾದೀತು. ಕಾಸರಗೋಡು ತುಳುನಾಡಿನ-ಕನ್ನಡದ – ವಿಭಾಗವೆಂಬುದಕ್ಕೆ 'ಮಧುಪುರ'ವೆಂಬ ಗ್ರಂಥದಲ್ಲಿ ಹಲವು ವಿವರಣೆಗಳಿವೆ.

**ತೌಳವ ಭಾಷಾವಿಚಾರ**

ತುಳುನಾಡಿನ ಜನರ ಆಡುನುಡಿಗೆ 'ತೌಳವ ಭಾಷೆ'ಯೆಂದು ಹೆಸರಿದೆ. ಕನ್ನಡ, ತಮಿಳು, ತೆಲುಗು, ಮಲೆಯಾಳ ಮತ್ತು ತೌಳವ ಭಾಷೆಗಳಿಗೆ 'ಪಂಚದ್ರಾವಿಡಭಾಷೆ'ಗಳೆನ್ನುತ್ತಾರೆ. ಇವಲ್ಲಿ ಮೊದಲಿನೆರಡು ನುಡಿಗಳಲ್ಲಿ ಪ್ರಾಚೀನತಮ ಗ್ರಂಥಗಳ ರಚನೆಯಾಗಿದೆ. ಮಿಕ್ಕೆರಡು ಭಾಷೆಗಳಲ್ಲಿ ಮತ್ತೆ ಕೃತಿ ರಚನೆಯಾಗಿದೆ. ಪರಂತು, ತುಳುವರ-ತೌಳವ-ಭಾಷೆಯ **ಪ್ರತ್ಯೇಕಲಿಪಿಯಿಲ್ಲ**ದಿರುವುದರಿಂದ, ಗ್ರಾಂಥಿಕರೂಪ ರಚನೆಗಳಾಗಿಲ್ಲ. ಇದೀಗ ತೌಳವ ಬ್ರಾಹ್ಮಣರುಮಾತ್ರ ಬಳಸುವ **ತುಳುಲಿಪಿಯು ತೌಳವರಿಗೆ ತಿಳಿದಿಲ್ಲ.** ಅದೂ ಮಲೆಯಾಳ ಲಿಪಿಸಾದೃಶ್ಯದಿಂದ ಬಳಸಿದ -ತೌಳವ ಬ್ರಾಹ್ಮಣರಿಗೆ ಮಾತ್ರ ಅಭ್ಯಾಸವಿರುವ-ಅಕ್ಷರಮಾಲೆಯಾಗಿದೆ. ಹಲವಾರು ತೌಳವ ಕವಿಗಳು ಕನ್ನಡ ಮತ್ತು ಇತರ ಭಾಷೆಗಳಲ್ಲಿ ಕೃತಿರತ್ನಗಳನ್ನು ರಚಿಸಿದ್ದಾರೆ. ತುಳುವರ-ತೌಳವ – ಭಾಷೆಯಲ್ಲಿ ಹಲವಾರು 'ಪಾಡ್ದನಗಳು' ಬಾಯ್ದೆರೆಯಾಗಿ ಪ್ರಚುರವಾಗಿವೆ. ಇವುಗಳ ಸಂಕಲನದಿಂದ ಈ ಸಾಹಿತ್ಯ-ಸಂಸ್ಕೃತಿಗಳ ಅಧ್ಯಯನಕ್ಕೆ ಅನುಕೂಲವಿದೆ. ಸರಕಾರವಾಗಲೀ, ಮಹಾಸಂಸ್ಥೆಯಾಗಲೀ ಈ ಬಗೆಗೆ ಮನಸ್ಸುಗೊಡುವಂತಾಗಲಿ.

ತೌಳವ ಭಾಷೆಯಲ್ಲಿ ದ್ರಾವಿಡವರ್ಗದ ಮಿಕ್ಕ ನಾಲ್ಕು ಭಾಷೆಗಳ ಸಾಮ್ಯವಿರುವಂತೆ, ಸ್ವತಂತ್ರ ಹಾಗೂ ವಿಶಿಷ್ಟಗಳಾದ ಕೆಲವು ಲಕ್ಷಣಗಳು ಕೂಡಿವೆ. ಈ ಭಾಷೆಯ ವ್ಯಾಕರಣ ವಿಚಾರಗಳನ್ನು ಈ ಬಗೆಗೆ ಉಲ್ಲೇಖಿಸಬಹುದು. ಹಲವು ವರ್ಷಗಳ ಹಿಂದೆ ಶ್ರೀ ಎಸ್. ಯು. ಪಣಿಯಾಡಿಯವರು ಮೊದಲಾದವರು ಈ ವಿಚಾರ ಚಿಕ್ಕ ಪುಸ್ತಿಕೆ ಪ್ರಕಟಿಸಿದ್ದಾರೆ. ತುಳು-ಆಂಗ್ಲ (ಆಂಗ್ಲ ಹಾಗೂ ತುಳು) ಶಬ್ದಕೋಶವೂ ಮುದ್ರಿತವಾಗಿದೆ. ಕೆಲವು ತೌಳವ ಶಾಬ್ದಿಕ ವಿಚಾರಗಳುಳ್ಳ ನನ್ನ ಲೇಖವೊಂದು ಬೇರೆಡೆ ಪ್ರಕಟವಾಗಿದೆ (ಮೈಸೂರು ವಿಶ್ವವಿದ್ಯಾಲಯದ 'ಪ್ರಬುದ್ಧಕರ್ಣಾಟಕ'ದಲ್ಲಿ ನೋಡಿರಿ.)

ಪ್ರತಿಯೊಂದು ನಾಡಿನ ಪ್ರಾಚೀನ ಸ್ಥಳಗಳಿಗೆ ಆಯಾ ಭಾಷೆಯಲ್ಲೆ ಹೆಸರಿಸಿರುವುದನ್ನು ಕಾಣುತ್ತೇವೆ. ಅಂತೆ ತುಳುನಾಡಿನ ಹಲವು ಹೆಸರುಗಳು ತೌಳವ ರೀತಿಯಲ್ಲಿ 'ಮಧ್ವವಿಜಯ'ದಲ್ಲಿ ಹೇಳಿವೆ (ರಾಷ್ಟ್ರಬಂಧು, ತಾ|| ೩೧-೧೦-೬೫) ಇಂತಹ ಬಗೆಗೆ ಇನ್ನೂ ಹೆಚ್ಚು ಪರಿಶೋಧನೆಗಳಾದಲ್ಲಿ ಇನ್ನೂ ಹೆಚ್ಚು ಬೆಳಕು ಬೀಳಬಹುದಾಗಿದೆ. ಈ ಕೆಲಸಕ್ಕೆ ಇದೊಂದು 'ನಾಂದಿ'ಯಾಗಿದೆ. (ಕ. ಸಾ. ಪರಿಷತ್‌ಪತ್ರಿಕೆಯ ೧೯೬೬ರ ಸಂಚಿಕೆಯಲ್ಲಿ ನನ್ನ ಲೇಖ ನೋಡಿರಿ.)

**ತೌಳವ ಸಂಪ್ರದಾಯಗಳು**

ತೌಳವರ ಒಂದೆರಡು ಸಂಪ್ರದಾಯ ವೈಶಿಷ್ಟ್ಯಗಳು ಇಲ್ಲಿ ಎತ್ತಿ ಬರೆಯದೆ ಈ ಬರೆಹ ಅಪೂರ್ಣವಾದೀತು.

ತೌಳವರಲ್ಲಿ ಭೂತಾರಾಧನೆ ಬಲು ಹೆಚ್ಚಿನ ಮಟ್ಟದಲ್ಲಿ ಪ್ರಚುರವಿದೆ. ಕೆಲವು ಸನಾತನಧರ್ಮದಿಂದ ಎರಕೊಂಡವು ಇವೆ; ಜುಮಾದಿ=ಧೂಮಾವತಿ, ಪಂಜುರ್ಲಿ=ವಾರಾಹಿ, ಅಬ್ಬಕ್ಕ = ಅರ್ಭಕ, ಲವಿಚಾಮುಂಡಿ = ವ್ಯಾಘ್ರಾವಾಹನೆ ಚಾಮುಂಡಿ, ಇತ್ಯಾದಿ. ಇವುಗಳನ್ನು ಮನೆಯ ಒಳಗೆ ಮಂಚದಲ್ಲೊ, ಮನೆಯ ಹೊರಗಡೆ ಗುಡಿಗಳಲ್ಲೊ, ಊರ ಸಂದುಗಳ ಕಲ್ಲುಗಳಲ್ಲೊ, ಊರ ನಡುವಣ ಸ್ಥಾನಗಳಲ್ಲೊ ಪೂಜಿಸುವುದು. ಇವಕ್ಕೆ ವರ್ಷಕ್ಕೆ ವರ್ಷಕ್ಕೊಮ್ಮೆ ಬಂಡಿ, ಅಯನ, ನೇಮ, ಕೋಲ, ತಂಬಿಲ ಇತ್ಯಾದಿ ಸೇವೆಗಳಾಗುತ್ತಿವೆ. ಆಗ ಇವುಗಳ ಪೂರ್ವ ಚರಿತ್ರೆಯನ್ನು ಹೇಳುವ, ಪ್ರಾರ್ಥನೆಯನ್ನು ಸಲ್ಲಿಸುವ 'ಪಾಡ್ದನ'ಗಳನ್ನು ಹಾಡುತ್ತಾ ನಲಿಯುತ್ತಾರೆ. ಕೆಲವು ದೈವಗಳ ಪ್ರತೀಕವಾಗಿ ಪಾತ್ರಿ, ಪೂಜಾರಿಗಳು ಖಡ್ಗ, ಘಂಟಾಮಣಿಗಳನ್ನು ಹಿಡಿದು ಆವೇಶದಿಂದ ಕೂಡಿ ಭಾವುಕರಿಗೆ 'ನುಡಿ'ಗಳನ್ನು ಹೇಳುವರು. ಕೆಲವಕ್ಕೆ ಮೃಗಾದಿವಾಹನಗಳಿವೆ. ಕೆಲವಕ್ಕೆ ಸಾತ್ತ್ವಿಕಾಹಾರಗಳ ನೈವೇದ್ಯವಿದ್ದರೆ, ಕೆಲವೆಡೆ ಕೋಳಿ ಕುರಿ ಕೋಣಗಳ ಬಲಿದಾನವಿದೆ. ದೇವಾಲಯಗಳ ಜಾತ್ರೆಗಳಲ್ಲಿ ದೇವ-ದೈವಗಳ ಭೇಟಿಯಾಗುವುದೂ ಇದೆ. ತೌಳವನಾಡಿನಲ್ಲಿ ದೇವಾಲಯುಗಳಿಗಿಂತಲೂ ದೈವ ಗುಡಿಗಳೇ ಹೆಚ್ಚಿವೆಯೆನ್ನಬಹುದು. ಒಟ್ಟಿನಲ್ಲಿ 'ತೌಳವರು ಮೂಲತಃ ಭೂತಾರಾಧಕರು' ಎನ್ನುವುದಕ್ಕೆ ಅಡ್ಡಿಯಿಲ್ಲ. ಈ ಕ್ರಮವು ಬೇರೆ ನಾಡುಗಳಲ್ಲಿ ಇಲ್ಲಿಯಷ್ಟು ಪ್ರಸಾರ

ವಿಲ್ಲೆಂದರೆ ಸುಳ್ಳಾಗದು. ಈ ಭೂತಾರಾಧನೆಯ ಪ್ರಾಚೀನತೆಯ ಬಗೆಗೆ ಹೆಚ್ಚಿನ ಅನ್ವೇಷಣವು ಅಗತ್ಯ. ಪರಂತು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ ಭಗವದ್ಗೀತೆಯೆಂಬ ಉದ್ಗ್ರಂಥದಲ್ಲಿ ಒಂದು ನುಡಿಯಿದೆ; ಅಂದರೆ ಆ ಹಿಂದೆ ಇಂತಹ ರೀತಿಯಿತ್ತೇ ಎಂಬ ಜಿಜ್ಞಾಸೆಯಾಗುತ್ತದೆ: "ಯಾಂತಿ ದೇವವ್ರತಾ ದೇವಾನ್ ಪಿತೃನ್ ಯಾಂತಿ ಪಿತೃವ್ರತಾಃ| **ಭೂತಾನಿ ಯಾಂತಿ ಭೂತೇಜ್ಯಾ** ಯಾಂತಿ ಮದ್ಯಾಜಿನೋಽಪಿ ಮಾಂ" (೯-೨೫).

ಇನ್ನೊಂದಾಗಿ, ತೌಳವರಲ್ಲಿ ಸ್ತ್ರೀಪ್ರಧಾನ ಕೌಟುಂಬಿಕ ಕ್ರಮವಿದೆ. ಇದರಿಂದ ಅವರಿಗೆ 'ಸತೀನರಾಃ', 'ಸತಿಯ ಪುತ್ರಾಃ' ಎಂಬವು ಬಂದಿರಬೇಕೆಂದು ಈ ಮೊದಲೇ ಹೇಳಿದೆ. ಕೇರಳದ 'ಮರುಮಕ್ಕತ್ತಾಯಂ' ಕ್ರಮುಕ್ಕೂ ಇದಕ್ಕೂ ಕೆಲವು ವಿಚಾರ ಸಾಮ್ಯವಿದ್ದರೂ, ಇದರ ಸ್ವಂತಗಾರಿಕೆಯಿಂದಾಗಿ ಹಾಗೆ ಹೆಸರಿಸಿರಬೇಕೆಂದರೆ ತಪ್ಪಲ್ಲ. ಇವರಲ್ಲಿ ಆಸ್ತಿ (ಸ್ಥಿರಚರ ವಸ್ತುಗಳು), ಕೌಟುಂಬಿಕ ಶೌಚ (ಜನನದ-ಮರಣದ ಸಲುವಾಗಿ ಶುದ್ಧಿಗೊಳ್ಳುವ ದಿನದ ತನಕ ಬಳಸುವ ನಿಯಮ)ಗಳು ಸ್ತ್ರೀ ಪ್ರಾಧಾನ್ಯದಿಂದಲೇ ಸಾಗುವುದಲ್ಲದೆ, ಮಕ್ಕಳ (ಗಂಡುಮಕ್ಕಳ) ಕಟ್ಟಿನಂತಹದಲ್ಲವೆಂದು ಖಚಿತವಿದೆ. ಪ್ರತಿಯೊಂದು ಜನಾಂಗದ ವಿಭಾಗದ ವಿವರ ಇನ್ನೊಮ್ಮೆ ಬರೆಯಬಹುದಾಗಿದೆ.

ಇನ್ನು ತೌಳವ ಕವಿವರೇಣ್ಯ 'ಮುದ್ದಣ'ನ ಶ್ರೀರಾಮಪಟ್ಟಾಭಿಷೇಕದ ಕೊನೆಯ ಪದ್ಯಭಾಗವೊಂದನ್ನು ಬರೆದು ಈ ಬರೆಹ ಪೂರಯಿಸಲಾಗಿದೆ. ತೌಳವನಾಡಿನ ಮಹಾಕ್ಷೇತ್ರದ ಕಿಂಚಿತ್ ವರ್ಣನೆಯಿದು: ಪಡುಗಡಲ್ಗಡೆಯೊಳೆಳೆಡೆಯಂ ಭೃಗೂದ್ವಹಂ| ಪಡೆದನದರೊಳ್ ಸ್ಯೆ ಪಿ ಗೆ ಡೆ ಯಾ ಗಿ ಕನ್ನಡದ| ನುಡಿವೆಣ್ಗೆ ಭರ್ತೃಮಂದಿರಮಾಗಿ ಸುಖಕೆ ಬೀಡಾಗಿ ನಾಡಾಗಿ ಮೆರೆವ| ಉಡುಪಪುರವೆಂಬ ಸುಕ್ಷೇತ್ರಮುಂಟು . . ." (೫-೯೭).*

* ವಿ. ಸೂ: ಉಡುಪಿಯಲ್ಲಿ ಶ್ರೀಕೃಷ್ಣನನ್ನು ಕನಕದಾಸನ ನಿಮಿತ್ತವಾಗಿ ಪಶ್ಚಿಮಾಭಿಮುಖಕ್ಕೆ ತಿರುಗಿಸಿರಬೇಕೆಂದು ನನ್ನ ಲೇಖನವೊಂದು ಈ ಮೊದಲು ಬೇರೆಡೆಯಲ್ಲಿ (ತಾ|| ೨೧-೮-೬೬ರ ಸಂಯುಕ್ತಕರ್ನಾಟಕದಲ್ಲಿ) ಪ್ರಕಟವಾಗಿದೆ. ಬಲ್ಲವರು ಇಂತಹ ಬಗೆಗೆ ಪುನಃ ಪುನಃ ಸಂಶೋಧನೆಗೆಳಸಬೇಕ., ಕೇವಲ ಕಟ್ಟುಕತೆಯೇ ಚರಿತ್ರೆಯಲ್ಲ!

# ಪ್ರಜ್ಞೆ

■

ಏಳು—
ಉರುಳಿರುವ ದೀಪ ಎತ್ತಿಟ್ಟು
ಹತ್ತಿ ಹಚ್ಚಿ, ಹಚ್ಚಿಸಿ ಉರಿಸೇಳು
ವಿಕ್ಷುಬ್ಧ ಸಮುದ್ರದ
ಹುಚ್ಚೆದ್ದ ಅಲೆಗಳಲಿ
ಎತ್ತಲೋ ಹೋಗಿದ್ದೆ-ಮುಂದೆ ಸಾಗಿ
ಕೊನೆಗೆ ತಡವಾಗಿ ಸಿಕ್ಕಿದ ನೀರ ತೀರದಲಿ
ಮನೆ ಮಾಡಿ,
ಸ್ಥಿತ ಪ್ರಜ್ಞೆಯ ತಾಳಿ
ಹಣತೆ ಹಚ್ಚುವಲ್ಲಿ
ಲೋ ಮೂಳ,
ಬದುಕು ಚೊಕ್ಕವಾಗಿ.

■

**ಕೆ. ಎಂ. ಕೋದಂಡರಾಮಶೆಟ್ಟಿ**

# ಫೋನೀಂ - ನಾಮರೂಪಗಳು

■ ಎಂ. ಜಿ. ವೆಂಕಟೇಶಯ್ಯ

ಶುದ್ಧಾಕ್ಷರ (ಫೋನೀಂ)ದ ಉತ್ಪತ್ತಿ ವಿಚಾರವಾಗಿ ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಹೀಗೆ ಹೇಳಿದ್ದಾನೆ :

ಅನುಕೂಲ ಪವನನಿಂ[1] ಜೀ
ವನಿಪ್ಪದಿಂ ನಾಭಿಮೂಲದೊಳ್ ಕಹಳೆಯ ಪಾಂ ‖
ಗಿನವೊಲ್ ಶಬ್ದದ್ರವ್ಯಂ
ಜನಿಯಿಸುಗುಂ ಶ್ವೇತಮುದಜಕಾರ್ಯಂ ಶಬ್ದಂ ‖ ೨ ‖

ಜೀವಾತ್ಮನ ಇಚ್ಛೆಯಿಂದ ಅನುಕೂಲವಾದ ಮಾರುತದಿಂದ ನಾಭಿಮೂಲದಲ್ಲಿ ಕಹಳೆಯಾಕಾರದ ಹಾಗೆ ಶಬ್ದ ದ್ರವ್ಯಂ ಧವಳ ವರ್ಣವಾಗಿ ಹುಟ್ಟುವುದು ; ಅದರ ಕಾರ್ಯ ಶಬ್ದ

[ವಿಚಾರಂ[2] – ಶಬ್ದ ದ್ರವ್ಯಮೆಂದೊಡೆ ಘಟಕ್ಕೆ ಮೃತ್ತಿಕೆಯಂತೆ ಅಕ್ಷರಾತ್ಮಕವಾದ ಶಬ್ದಂಗಳ್ಪುಟ್ಟುವುದರ್ಕೆ ಉಪಾದಾನಕಾರಣವಾದ ವಸ್ತುವೆಂದಱಿವುದು ; ಶಬ್ದಕ್ಕೆ ದ್ರವ್ಯತ್ವಮುಂ ಜೈನರ್ ಪೇೞ್ದಪರ್ – ]

ತನುವಾದ್ಯಂ ನಾಲಗೆನಾ
ದನದಂಡಂ ಕರ್ತೃವಾತ್ಮನವನ ಮನೋವೃ ‖
ತ್ತಿ ನಿಮಿತ್ತಮಾಗಿ ಶಬ್ದಂ
ಜನಿಯಿಸುಗುಂ ಧವಳವರ್ಣಮಕ್ಷರ ರೂಪಂ ‖ ೩೪ ‖

ಶರೀರವು ವಾದ್ಯವು, ನಾಲಗೆ ವಾದನದಂಡ, ಆತ್ಮನು ವಾದ್ಯವನ್ನು ನುಡಿಸುವ ಕರ್ತೃ, ಆತ್ಮನ ಮನಸ್ಸಿನ ವರ್ತನೆ ನಿಮಿತ್ತ. ಧವಳವರ್ಣವಾದ ಅಕ್ಷರರೂಪವಾದ ಶಬ್ದವು ಹೀಗೆ ಜನಿಯಿಸುವುದು.[3]

ಇದನ್ನು ನಾವು ಈ ಮುಂದೆ ತೋರಿಸಿರುವ ಚಿತ್ರದಿಂದ ವಿಶದಪಡಿಸಬಹುದು :

1 ಶುದ್ಧಾಕ್ಷರಂ – ಕನ್ನಡನುಡಿ. Oct. 1968, ಪುಟ : ೧೧–೧೪

2 ಕೇಶಿರಾಜವಿರಚಿತ ಶಬ್ದಮಣಿದರ್ಪಣಂ—ಸಿಟ್ಟೂರು ನಂಜಯ್ಯನ ವ್ಯಾಖ್ಯಾನ ಸಹಿತ–ಕರ್ಣಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು 1920, ಪುಟ ೫

3 *ibid* ಪುಟ ೨೪.




ಚಿತ್ರ ೧

1. ತನು (ಶರೀರ), 2. ಅನುಕೂಲ ಮಾರುತ, 3. ನಾಭಿಮೂಲ, 4. ನಾಲಗೆ.

ತನು (1) ವಿನಲ್ಲಿ ಅನುಕೂಲಪವನ ಅಥವಾ ಅನುಕೂಲ ಮಾರುತ (2) ವಿದೆ. ಆತ್ಮನ ಮನಸ್ಸಿನ ನಿಮಿತ್ತ (ಕಾರಣ) ವಾಗಿ ಆ ಅನುಕೂಲ ಮಾರುತದಿಂದ (ಅದರಲ್ಲಿನ ಚಲನೆಯ ಮೂಲಕ) ಶಬ್ದದ್ರವ್ಯವು (ಯಾವುದರಿಂದ ಶಬ್ದ ಮುಂದೆ ಆಗುವುದೋ ಅದು) ನಾಭಿಮೂಲ (3) ದಲ್ಲಿ ಜನಿಯಿಸುತ್ತದೆ. ತನುವು ವಾದ್ಯವೆಂದರೆ, ನಾಲಗೆ (4) ವಾದನದಂಡ.

### ಅನುಕೂಲಪವನನಿಂ

ಶರೀರದಲ್ಲಿರುವ ಗಾಳಿಯಿಂದಲೆ ಶಬ್ದದ್ರವ್ಯವು ಉತ್ಪತ್ತಿಯಾಗುತ್ತದೆ ಎಂದು ನಮ್ಮ ಪೂರ್ವಿಕರು ಕೂಡ ವಿವರಿಸಿದ್ದಾರೆ. ಮೀಮಾಂಸಕರು ಉತ್ಪತ್ತಿಯನ್ನು ಒಪ್ಪದೆ, ಅದು ಅಭಿವ್ಯಕ್ತವಾಗು † ತ್ತದೆ ಎಂದು ಹೇಳಿದ್ದಾರೆ.

† We speak of a thing as *utpanna* when it is actually brought into existence, where as we call something *abhivyakta* when it happens to be already existent and is only rendered perceptble by some kind of effort *Production*, therefore, refers to things that are created or non-eternal and *manifestation* relates to only permanent entities. So far as the evolution of sound is concerned, the former represents the view of the *Naiyāyikas* and the latter that of the *Mimāmsakas*—The Linguistic speculations of the Hindus, by P. Chakravarti, Ph.D.,–University of Culcutta; Calcutta, 1933, P. 78-79.

ಇಂಥಾ ಅನುಕೂಲಪನವುಂಟೆಂದು **ಶಿಕ್ಷಾ** ಒಪ್ಪುತ್ತದೆ.[4] ಈ ವಿಚಾರವಾಗಿ **ಛಾಂದೋಗ್ಯೋಪನಿಷತ್**‌ನಲ್ಲಿ[5]

ಅಥಯಃ ಪ್ರಾಣಾಪಾನಯೋಃ ಸಂಧಿಃ ಸ
ವ್ಯಾನ ಯೋ ವ್ಯಾನಃ ಸಾವಾಕ್

[ಅಥ=ಮತ್ತು ಪ್ರಾಣಾಪಾನಯೋಃ=ಪ್ರಾಣಾಪಾನಗಳ ಯಃ=ಯಾವ ಸಂಧಿಃ=ಸಂಧಿಯು ಸಃ=ಅದು ವ್ಯಾನಃ=ವ್ಯಾನವು ; ಯಃ=ಯಾವುದು ವ್ಯಾನಃ=ವ್ಯಾನವೋ ಸಾ=ಅದು ವಾಕ್=ವಾಕ್ಕೂ]

ಎಂದು ಇದನ್ನು ವ್ಯಾನ ವಾಯುವೆಂದು ಕರೆಯಲಾಗಿದೆ. ಮಾತನಾಡುವಾಗ ಇದಕ್ಕಾಗಿಯೆ ಉಸಿರಾಡುವುದು ಕಷ್ಟವೆಂದು ಹೇಳಲಾಗಿದೆ[6]

ಈ ಅನುಕೂಲ ಮಾರುತ (ವಾದನ ಮಾರುತ)ವು ಚಲನ ಸಮತೆ (Dynamic Equillibrium) ಯಲ್ಲಿರುತ್ತದೆ; ಅಲ್ಲದೆ ಅಶಬ್ದತೆಯಲ್ಲಿರುತ್ತದೆ; ಎಂಬುವುದು ಹಿಂದಿನ ಶಾಸ್ತ್ರ ತತ್ವಜ್ಞರ ಮತ. ಇದನ್ನು **ಧನಂಜಯ** ಎಂದು ಸಂಗೀತದರ್ಪಣ (Chapt I ಶ್ಲೋ. 43-41)ದಲ್ಲಿ ಕರೆಯಲಾಗಿದೆ.

**ಶ್ವೇತಂ**

ಶಬ್ದದ್ರವ್ಯವನ್ನು ತೇಜಸ್ಸೆಂದು (Energy) ಎಂದು ಪರಿಗಣಿಸಬೇಕು.

(ತೇ)ಜೋಮಯೀ ವಾ(ಕ್)-ಎಂಬುದಾಗಿ ಛಾಂದೋಗ್ಯೋಪನಿಷತ್ತಿನಲ್ಲಿದೆ.[7]

ಪ್ರಾಚೀನ ಶಾಸ್ತ್ರಗಾರರು ಏಳು ವಿಧವಾದ ತೇಜಸ್ಸುಗಳನ್ನು ನಿರೂಪಿಸಿದ್ದಾರೆ. (೧) ಕಾಲಿ (ಕಪ್ಪು ರಶ್ಮಿಯುಳ್ಳದ್ದು) (೨) ಕರಾಲಿ (ಕೆಂಪು ರಶ್ಮಿಯುಳ್ಳದ್ದು) (೩) ಮನೋಜವೇ (ತಿಳಿಯ ತೆಳು ಪಚ್ಚೆ ಬಣ್ಣದ ರಶ್ಮಿಯುಳ್ಳದ್ದು. ಇವುಗಳಿಗೆ ಎಕ್ಸ್-ರೇ ಗುಣವನ್ನು ಹೇಳುತ್ತಾರೆ) (೪) ಸುಲೋಹಿತೇ (ಇದರ ವಿಚಾರ ಗೊತ್ತಿಲ್ಲ) (೫) ಸುಧೂರ್ಮವರ್ಣೀ (ಉದಾ ಅಥವಾ ನೇರಳೆಯ ಹಣ್ಣಿನ ರಶ್ಮಿಯುಳ್ಳದ್ದು) (೬) ಸ್ಫುಲಿಂಗಿನೀ (ಅರಸಿನ ಬಣ್ಣದ ರಶ್ಮಿಯುಳ್ಳದ್ದು) ಮತ್ತು (೭) ವಿಶ್ವರುಚೀ (ಬಿಳಿಯ ಬಣ್ಣದ ರಶ್ಮಿಯುಳ್ಳದ್ದು)*

ಈ ವಿಶ್ವರುಚೀ ತೇಜಸ್ಸು ಸೂರ್ಯನ ಮೇಲೆ ಬಿದ್ದು ಸೂರ್ಯನಿಂದ ಬೆಳಕನ್ನು ಹೊರಡಿಸುತ್ತದೆ ಎಂಬುದು ಕೂಡ ಕೆಲವು ತತ್ವಜ್ಞರ ಮತ.

ಶಬ್ದದ್ರವ್ಯವು ಏಳನೆಯದಾದ ವಿಶ್ವರುಚಿ ತೇಜಸ್ಸಿಗೆ ಸೇರಿದ್ದೆಂದು ಸೂಚಿಸುವುದಕ್ಕಾಗಿ ಅದರ ಬಣ್ಣವು ಶ್ವೇತ (ಬಿಳಿಯದು) ಎಂದು ಹೇಳಲಾಗಿದೆ ಎಂದು ನಾವು ಅರ್ಥ ಮಾಡಿಕೊಳ್ಳಬೇಕಾಗಿದೆ.

**ನಾಭಿ ಮೂಲದೊಳ್**

ಚತ್ವಾರಿ ವಾಕ್ ಪರಿಮಿತಾಪದಾನಿ-ಎಂಬ ಋಗ್ವೇದದಲ್ಲಿರುವುದನ್ನು[8], ಭರ್ತೃಹರಿ, ನಾಗೇಶ, ಗೌಡಪಾದ ಸಾಯ

---

4 The s'iksās also speak of the internal air as the creative factor of sound - ibid, page 86.

5 ಛಾಂದೋಗ್ಯೋಪನಿಷತ್-ಶ್ರೀ ರಾ ಮ ಕೃ ಷ್ಣಾ ಶ್ರ ಮ, ಮೈಸೂರು, ೧೯೬೧, ಪುಟ ೨೧ (I, ೩, ೩)

6 The question relating to both evolution and transmission of sound is intimately connected with the movement of air and *speech is now being recogniesed as a modification of the act of breathing.* The transformation of air in to sound is an idea traceable to the old seriptures, The *Chandogya Upanisad* has described the speech sound as a kind of internal air. It has clearly stated that the internal air called *vyanā*, which represents an intermediary stage between inspiration (*prāna)* and expiration *(apāna*) is the same *as vāk* and that it is on this account that at the time of speaking one has to refrain from both inhaling and exhaling. The Linguestic speculations of the Hindus-P. Chakravarti P. 85.

---

7 ಛಾಂದೋಗ್ಯೋಪನಿಷತ್- ಶ್ರೀ ರಾ ಮ ಕೃ ಷ್ಣಾ ಶ್ರ ಮ ಮೈಸೂರು, ೧೯೬೧, (೬-೫-೪) ಪುಟ ೩೨೭

* ಇವುಗಳನ್ನೇ ಮುಂಡಕೋಪನಿಷತ್ತಿನಲ್ಲಿ, ಏಳು ನಾಲಗೆಗಳು ಎಂದು ಕರೆಯಲಾಗಿದೆ-ಮುಂಡಕೋಪನಿಷತ್ತು, ವೈ. ಸುಬ್ಬರಾವ್, ಕ್ಯಾಕ್ಸಟನ್ ಪ್ರೆಸ್, ಬೆಂಗಳೂರು, ೧೯೨೭ ಪುಟ ೯೮ ಸಂಸ್ಕೃತ ಮೂಲ ಮುಂಡಕ ೧ ಖಂಡ ೨ ॥ ೪ ॥

8 The Linguestic Speculations of the Hindus-P, Chakravarti P. 48

ನಾದಿಗಳು ವಿವರಿಸುತ್ತಾ ನಾಲ್ಕು ವಿಧವಾದ ವಾಕ್ಕನ್ನು ವಿಂಗಡಿಸಿರುತ್ತಾರೆ :

(೧) ಪರಾವಾಕ್ಕು (ಮೂಲಾಧಾರದಲ್ಲಿ)
(೨) ಪಶ್ಯಂತೀವಾಕ್ಕು (ನಾಭಿ ಮೂಲದಲ್ಲಿ)
(೩) ಮಧ್ಯಮಾವಾಕ್ಕು (ಹೃದಯದಲ್ಲಿ)
(೪) ವೈಖರೀ ವಾಕ್ಕೂ (ವದನದಲ್ಲಿ)

ಆದುದರಿಂದ ಅವರ ಮತದಲ್ಲಿ ಶಬ್ದದ್ರವ್ಯವು **ಮೂಲಾಧಾರ**ದಲ್ಲಿ ಜನಿಸುತ್ತದೆ ಎಂಬುದೇ.

ಪರಾ, ಪಶ್ಯಂತೀ, ಮಧ್ಯಮಾಗಳು ಸಾಮಾನ್ಯರಿಗೆ ಗೋಚರವಾಗುವುದಿಲ್ಲ ; ಯೋಗಿಗಳಿಗೆ ಮಾತ್ರ ಗೋಚರವಾಗುತ್ತವೆ. ವೈಯಾಕರಣಿಗಳು ತಮ್ಮ ಅಭ್ಯಾಸಕ್ಕೆ ತೆಗೆದುಕೊಂಡಿರುವುದು ವೈಖರೀ ವಾಕ್ಕೂ ಮಾತ್ರ.




ಚಿತ್ರ ೨

1. ಮೂಲಾಧಾರ, 2. ನಾಭಿಮೂಲ, 3. ಹೃದಯ
4. ಧ್ವನಿಪೆಟ್ಟಿಗೆ, 5. ನಾಲಗೆ, 6. ತನು (ಶರೀರ)

೧ರಿಂದ ೨ರವರೆಗೆ–ಪರಾ ; ೨ರಿಂದ ೩ರವರೆಗೆ–ಪಶ್ಯಂತೀ ; ೩ರಿಂದ ೪ರವರೆಗೆ–ಮಧ್ಯಮಾ ; ೪ನ್ನು ದಾಟಿದ ಮೇಲೆ ವೈಖರೀ. ಆದುದರಿದಲೇ ಕೇಶಿರಾಜನು–ನಾಲಗೆ ವಾದನ ದಂಡಂ–ಎಂದು ಹೇಳಿರುವುದು. ವೈಖರೀ ವಾಕ್ಕು ಶಬ್ದ ; ಎಂಬುದನ್ನು ಒಪ್ಪಿಕೊಂಡು ಅಕ್ಷರ (ಅಕ್ಕರ)ಗಳ ಉತ್ಪತ್ತಿ ಸ್ಥಾನವನ್ನು ಕೇಶಿರಾಜನು ಹೀಗೆ ಹೇಳಿರುತ್ತಾನೆ.

ಕೊರಲುಂ ಜಿಹ್ವಾಮೂಲಮು
ಮುರಮುಂ ತಾಲುಗೆಯು ಮೋಷ್ಠಮುಂ ನಾಸಿಕೆಯುಂ ||
ಶಿರಮುಂ ದಂತಮು ಮೆಂದ
ಕ್ಕರ ಮುದಯಿಪ ತಾಣಮಾದುವೀ ಪೇಟ್ಟಿಂಟುಂ || ೩೦ ||

ಈ ಎಂಟು ತಾಣಗಳಲ್ಲಿ ಉದಯಿಪ ವೈಖರೀ ವಾಕ್ಕಿನಲ್ಲಿ ನಾವು ಎರಡು ಭಾಗಗಳನ್ನು ಇಲ್ಲಿ ಗಮನಿಸಬಹುದು.

### ನಾಮ

ಮೊದಲನೆಯದು ಅಕ್ಷರದ ಭೌತ ಪ್ರಪಂಚ (phsyical universe) ಇದನ್ನು ಪಾಶ್ಚಾತ್ಯ ಶಾಸ್ತ್ರಜ್ಞರು ಧ್ವನಿಶಾಸ್ತ್ರ (phonetics) ಎಂದು ಕರೆದಿದ್ದಾರೆ. ಇದು ಕೇವಲ ಭೌತ ಉಚ್ಚಾರಣೆ (physical articulation) ಗೆ ಸಂಬಂಧಪಟ್ಟ ವಿಚಾರ. ಇವುಗಳ ಉಚ್ಚಾರಣೆಯು ಕೆಡದಂತೆ, ಸರಿಯಾದ ರೀತಿಯಲ್ಲಿ ಅದು ಬಳಕೆಯಲ್ಲಿರಬೇಕೆಂಬ ಧ್ಯೇಯವೇ ಹಿಂದಿನ **ಶಿಕ್ಷಾ** ವೇದಾಂಗದ ಗುರಿ.

ಹಿಂದಿನ ಕಾಲದಲ್ಲಿ ಮೊಟ್ಟಮೊದಲು–ಅ ಆ ಇ ಈ,–ಉಚ್ಚಾರಣೆಯನ್ನು ಹೇಳಿಕೊಡುತ್ತಿದ್ದರು. ಅವುಗಳ ಉಚ್ಚಾರಣೆಯು ಸ್ವಲ್ಪವೂ ವ್ಯತ್ಯಾಸವಾಗದಂತೆ ಇರಬೇಕೆಂಬುದೇ ಅದರ ಧ್ಯೇಯ.

**ನಿರುಕ್ತ**ದ ಗುರಿ ಶಿಕ್ಷಾ ಗುರಿಗಿಂತಲೂ ಸ್ವಲ್ಪ ಹೆಚ್ಚಿನದೆಂದೇ ಹೇಳಬೇಕಾಗಿದೆ. ಅದನ್ನು ಅಭ್ಯಾಸಮಾಡುವಾಗ ವೈಖರೀ ಅಕ್ಷರದ ಭೌತ ಪ್ರಪಂಚವನ್ನು ಅವರು **ನಾಮ**ವೆಂದು ಕರೆದರು. ಈ **ನಾಮ**ವೆಂಬುದನ್ನು ಪಾಶ್ಚಿಮಾತ್ಯ ತತ್ವಜ್ಞರು ಸೂಚಿಸಿರುವ (Signifiant-Physical Element) ಎಂಬುದಕ್ಕೆ ಸರಿಯೆನ್ನಬಹುದು.[9]

### ಸ್ಫೋಟ–ರೂಪ

ಕರ್ತೃವಾತ್ಮನವನ ಮನೋವೃತ್ತಿ ನಿಮಿತ್ತಮಾಗಿ ಶಬ್ದಂಜನಿಯಿಸುಗುಂ–ಎಂದಾಗ, ಶಬ್ದೋತ್ಪತ್ತಿಗೆ ಕಾರಣ **ಮನೋವೃತ್ತಿ** ಎಂದು ಹೇಳಿದಂತಾಯಿತು.

ಇದು ಸಾಮಾನ್ಯಮಾನವನಿಗೂ ಅರ್ಥವಾಗುವ ವಿಚಾರ.

ಆದರೆ ಮನೋವೃತ್ತಿಯಿಂದ ಅಕ್ಕರ (ಅಕ್ಷರ)ವು ಹೇಗೆ ಜನಿಸುತ್ತದೆ ಎಂಬುದನ್ನು ವಿವರಿಸುವಾಗ ವೇದಾಂತಿಗಳಿಗೂ ತಾಂತ್ರಿಕರಿಗೂ ವ್ಯತ್ಯಾಸವಿದೆ. ತಾಂತ್ರಿಕರು ಹೇಳಿರುವ ಕೆಲವು ವಿಚಾರಗಳು ವ್ಯಾಕರಣಕ್ಕೆ ಅಗತ್ಯವಾದವು (ಸಂಬಂಧಪಟ್ಟವಗಳೂ)ಗಳಲ್ಲ. ಆದುದರಿಂದ ವೇದಾಂತ ನ್ಯಾಯವೈಶೇಷಿಕರ ಅಭಿಪ್ರಾಯವನ್ನು ಮಾತ್ರ ಇಲ್ಲಿ ತೆಗೆದುಕೊಳ್ಳಲಾಗಿದೆ.

ಅಕ್ಷರವನ್ನುತ್ಪತ್ತಿ ಮಾಡಬೇಕೆಂದು ಮನಸಿಗೆ ಬಂದ ಕೂಡಲೆ ಅದರಲ್ಲಿ ಚಲನೆ (ರಜೋಗುಣ) ಯುಂಟಾಗುತ್ತದೆ.

9 The word *signifiant* means " that which signifies ", and signifie means " That which is signified", contemporary linguistic terminology world call the physical element the *formant* and the semantic element the *morpheme*. The Science of Language–by John P Hughes, Random House, New York, Jan. 1967 edn. P. 15

ಅದು ಆತ್ಮಸಂಬಂಧವನ್ನುಂಟುಮಾಡಿಕೊಳ್ಳುತ್ತದೆ. ಆಗ ಆತ್ಮನು ಮನೋವೃತ್ತಿಗನುಗುಣವಾಗಿ ವಾದನವಾರುತದಲ್ಲಿ ಶಬ್ದದ್ರವ್ಯವನ್ನುತ್ಪತ್ತಿಮಾಡುತ್ತಾನೆ. ಅದು ಪರಾ ಪಶ್ಯಂತೀ ಮಧ್ಯಮಾಗಳಾಗಿ ಕೊನೆಯಲ್ಲಿ ವೈಖರೀ ರೂಪದಲ್ಲಿ ಅಕ್ಷರವಾಗಿ ನಮಗೆ ಗೋಚರವಾಗುತ್ತದೆ.

ಮನಸ್ಸಿನಲ್ಲಾಗುವ ಚಲನೆ ವ್ಯಕ್ತವಾಗುವುದು ಸ್ಫೋಟದಿಂದ. ಸ್ಫೋಟವೆಂದರೆ ಕೇವಲ **ಹೊಡೆಯುವುದು** ಎಂದರ್ಥವಲ್ಲ. ಯಾವ ಒಂದು ಅಣುವಿನಿಂದ ಅರ್ಥವು ನಮ್ಮ ಮನಸ್ಸಿಗೆ **ಹೊಳೆಯಲು** ಅವಕಾಶವಾಗುತ್ತದೋ ಅದು ಸ್ಫೋಟ. ಇದನ್ನೇ ಶಾಸ್ತ್ರಕಾರರು **ರೂಪ** ಎಂದು ಕರೆದಿದ್ದಾರೆ. ಈ **ರೂಪ**ವೆಂಬುದನ್ನು ಪಾಶ್ಚಿಮಾತ್ಯ ಶಾಸ್ತ್ರಜ್ಞರು ಸೂಚಿಸಿರುವ [signifie] ಎಂಬುದಕ್ಕೆ ಸರಿಯೆನ್ನಬಹುದು.

ಆದುದರಿಂದ ಈ **ರೂಪ**ವೂ ಕೂಡ **ನಾಮು**ದೊಂದಿಗೆ ಪರಾಪಶ್ಯಂತೀ ಮಧ್ಯಮಾ ವೈಖರೀ ವಾಕ್ಕಾಗಿ ನಮಗೆ ಗೋಚರವಾಗುತ್ತದೆ.

ಸ್ಫೋಟವಾದಿಗಳು ಈ **ರೂಪಕ್ಕೇ** ಪ್ರಾಧಾನ್ಯವನ್ನು ಕೊಟ್ಟರು. ಈಗಿನ ಧ್ವನಿಮಾ ವಿಜ್ಞಾನ(phonemics)ದಲ್ಲಿ ಇದಕ್ಕೇ ಹೆಚ್ಚಾದ ಪ್ರಾಮುಖ್ಯವು ತೋರಿಬರುತ್ತಿದೆ.

**ನಾಮು-ಬೋಧೆ**

ಅಕ್ಷರ (Phoneme)ದ **ನಾಮು ಬೋಧೆ**ಯು ನಮಗೆ ಎರಡು ರೂಪದಲ್ಲಿ ಆಗುತ್ತದೆಂದು ಕೇಶಿರಾಜನು ಹೇಳಿದ್ದಾನೆ.

ವ್ಯವಹಿರಿಪುವೆರಡು ರೂಪಿಂ
ದವಕ್ಕರಂ ಶ್ರಾವಣಂ ಸ್ವನೈಕಾಕಾರಂ ॥
ವಿವಿಧಾಕಾರಂ ಲಿಪಿ ಭೇ
ದ ವೃತ್ತಿಯಿಂ ಚಾಕ್ಷುಷಂ ಪುರಾತನಮತದಿಂ ॥೩॥

ಪುರಾತನ ಮತದಿಂದ ಅಕ್ಕರ (ಅಕ್ಷರ)ಗಳು ತಾವು ಶ್ರಾವಣ ಚಾಕ್ಷುಷವೆಂಬ ಎರಡು ರೂಪಿಂದ ವ್ಯವಹರಿಸುವುವು; ಧ್ವನಿಯಿಂದಾಕಾರಮುಳ್ಳದ್ದು **ಶ್ರಾವಣಂ** ಎನಿಸುವುದು; ಲಿಪಿಗಳ ಭೇದದ ವರ್ತನೆಯಿಂದ ಬೇರೆ ಬೇರೆ ಆಕಾರವಾಗಿ ಕಣ್ಣುಗಳಿಗೆ ತೋರುವುದು **ಚಾಕ್ಷುಷ** ಎನಿಸಿಕೊಳ್ಳುವುದು. ಕಿವಿಗೆ ಕೇಳಿಸುವ ಅಕ್ಷರ ಶ್ರಾವಣ; ಕಣ್ಣಿಗೆ ಕಾಣಿಸುವ ಅಕ್ಷರ ಚಾಕ್ಷುಷ.

ಲಿಪಿಯಿಂದ ನಾಮು ಬೋಧೆಯಾಗುವುದು. ಲಿಪಿಯು ಉಚ್ಚಾರಣೆಯ ಪ್ರತೀಕ.

ನಾವು ಹಿಂದೆ ಕೇಳಿದ ಒಂದು ಹಾಡನ್ನು ವೀಣೆಯಲ್ಲಿ ಬಾರಿಸುವಾಗ ಅದರಲ್ಲಿ ನಾವು "ಅಕ್ಕರ"ಗಳನ್ನು ಗುರ್ತಿಸುತ್ತೇವೆ. ಅವು ವೀಣೆಯಲ್ಲಿ ಅಭಿವ್ಯಕ್ತವಾದಂತೆ ತೋರುತ್ತವೆ. ಆದರೆ ಎರಡು ವೀಣೆಗಳನ್ನಿಟ್ಟುಕೊಂಡು ಬಾರಿಸಿ "ಮಾತನಾಡುವುದಕ್ಕೆ" ಸಾಧ್ಯವಿಲ್ಲ. ಏಕೆಂದರೆ, ನಮಗೆ "ಅಕ್ಕರ"ಗಳೆಂದು ತೋರಿಬರುವವು ಸ್ವರಗಳು[10], ಶುದ್ಧಾಕ್ಷರ (Phoneme)ಗಳಲ್ಲ. ಇಂಥಾ ಶಬ್ದಗಳನ್ನು ಪೂರ್ವಿಕರು **ಧ್ವನ್ಯಾತ್ಮಕ ಶಬ್ದ**ಗಳೆಂದು ಕರೆದರು.

ಇವುಗಳಲ್ಲಿ **ನಾಮು**ವಿದೆ; ಆದರೆ **ರೂಪ**ವಿಲ್ಲ.

ಶ್ರಾವಣವನ್ನೇ ಆಧಾರವಾಗಿಟ್ಟುಕೊಂಡು, ಅದರ ಪ್ರತೀಕವಾಗಿ ಲಿಪಿಯನ್ನೇರ್ಪಡಿಸಿಕೊಂಡು, ಒಂದು ನೂತನ ರೀತಿಯಲ್ಲಿ ಭಾಷೆಯನ್ನು ವಿವರಿಸಬಹುದೆ ಎನ್ನುವ ಪ್ರಯತ್ನ ನಡೆಯಿತು. ಉಚ್ಚಾರಣೆಯನ್ನು ಗ್ರಹಿಸಿ ಶಾಸ್ತ್ರೋಕ್ತವಾಗಿ ವಿಂಗಡಿಸಲು ಕೈಮೋಗ್ರಾಫ್ (Kymograph) ಉಪಯೋಗಿಸಲಾಯಿತು. ಅದರಿಂದ ಸಾಕಷ್ಟು ಅನುಕೂಲ ತೋರಿಬರದೇ ಇರಲು, ಈಗ ಸ್ಪೆಕ್ಟ್ರೋಗ್ರಾಫ್ (Sound Spectro-graph) ಉಪಯೋಗಿಸುತ್ತಿದ್ದಾರೆ. ಈ ವಿಧವಾದ ಪರಿಶೀಲನೆಯ (Physcological) (or articulatory) Phonetics ಭಾಗಕ್ಕೆ ಸೇರಿದ್ದು. ಇದನ್ನು ನಾವು ಶುದ್ಧಾಕ್ಷರ (Phoneme) ನಾಮು ಪರಿಶೀಲನೆ ಎಂದು ಕರೆಯಬಹುದು.

ಇಂಗ್ಲಿಷನ್ನು ತೆಗೆದುಕೊಂಡರೆ ಅದರಲ್ಲಿರುವ ಸ್ವರ (Vowels) ಗಳು ಏಳು (7). ಅವುಗಳನ್ನು ಡೇನಿಯಲ್ ಜೋನ್ಸ್ (Daniel Jones)ರವರು ಪರೀಕ್ಷೆ ಮಾಡಿದಾಗ ೧೨೦ ಬೇರೆ ಬೇರೆ ಸ್ವರ ಶಬ್ದಗಳು ಕಂಡುಬಂದವು.[11] ವ್ಯಂಜನಗಳ ಉಚ್ಚಾರಣೆಗಳು ಅದರ ಸಂಗಡ ಸೇರಿದರೆ ಇನ್ನೆಷ್ಟು ಶಬ್ದಧ್ವನಿಗಳು ಕಂಡುಬರಬಹುದೋ, ಯೋಚಿಸಬೇಕಾದ ವಿಚಾರ. ಪ್ರತಿ ಶಬ್ದ ಧ್ವನಿಗೂ ಒಂದೊಂದು ಆಕಾರವನ್ನು ಚಾಕ್ಷುಷವಾಗಿ ನಿರ್ಮಿಸಿದರೆ

---

೧೦ ಅನೇಕ ವಿಧದ ಧ್ವನಿಗಳನ್ನು ವೀಣೆಯಲ್ಲಿ ನುಡಿಸಲು ಸಾಧ್ಯ. ಆದರೆ ಮಾನವನ ಕಿವಿಗೆ ವಿರಳವಾಗಿ ನಿರ್ದಿಷ್ಟವಾಗಿ ಕೇಳಿಸುವವು ೪೬೨ ಧ್ವನಿಗಳು ಮಾತ್ರ ಎಂದು ದಿ॥ ಸಂಗೀತ ವಿದ್ವಾನ್ ಅನಂತಶಾಸ್ತ್ರಿಗಳು ಒಂದು ಸಮಯದಲ್ಲಿ ಹೇಳಿದರು.

11 Leave your Language Alone !-Robert A. Hall. J. R. Linguistica, I thaca, NY. 1950. page 84.

(Alphabets) ಒಂದು ಭಾಷೆಯ ಧ್ವನಿಗಳನ್ನು ನಮೂದಿಸುವುದಕ್ಕೆ ಎಷ್ಟು ಸಂಖ್ಯೆ ಬೇಕೆಂಬುದನ್ನು ನಾವು ಇದರಿಂದ ಊಹಿಸಬಹುದಾಗಿದೆ. ಒಂದು ಭಾಷೆಗೆ ನಾನೂರಷ್ಟು (೪೦೦) ಅಕ್ಷರ (Alphabets) ಗಳನ್ನು ನಿರ್ಮಾಣ ಮಾಡಿದರೆ, ಆ ಭಾಷೆಯನ್ನು ಕಲಿಯುವುದಕ್ಕೆ ಸುಲಭ ಸಾಧ್ಯವೆ? ಆದುದರಿಂದ ಕೇವಲ ಶ್ರಾವಣ ಧ್ವನಿಯನ್ನೇ ಪ್ರಾಧಾನ್ಯವನ್ನಾಗಿಟ್ಟುಕೊಂಡು ಭಾಷೆಯನ್ನು ನಿರೂಪಿಸುವುದು ಭಾಷಾ ವೈಜ್ಞಾನ ತತ್ವಜ್ಞರಿಗೆ ಸಮಂಜಸವಾಗಿ ಕಂಡುಬರಲಿಲ್ಲ. ಅವುಗಳಲ್ಲಿ ಗಣ್ಯವಾದಷ್ಟು ವ್ಯತ್ಯಾಸವಿಲ್ಲದವುಗಳನ್ನು ಒಟ್ಟಿಗೆ ಸೇರಿಸಿ, ಅವುಗಳಿಗೆ ಚಾಕ್ಷುಷಾಕೃತಿಯನ್ನು ಕೊಡಲು ಒಂದು ಲಿಪಿಯನ್ನೇರ್ಪಡಿಸಿದರು.

### ರೂಪ-ಬೋಧೆ

ನಮಗೆ ಅನೇಕ ವಿಧಗಳಲ್ಲಿ ರೂಪ (Signifie) ಬೋಧೆಯುಂಟಾಗುತ್ತದೆ. ಅರ್ಥವು ಸ್ಫೋಟವಾಗುತ್ತದೆ.

ಮಗು ಅತ್ತರೆ ಅದಕ್ಕೆ ತೊಂದರೆಯುಂಟಾಗಿದೆ ಎಂದು ನಮಗೆ ಗೊತ್ತಾಗುತ್ತದೆ. ಅದರಲ್ಲಿ ರೂಪ ಬೋಧೆ ಉಂಟಾಗಲಿ ನಾಮ ಬೋಧೆಯಿಲ್ಲ; ಏಕೆಂದರೆ, ಒಂದೇ ಮಗು ನಾನಾ ರೀತಿಯಲ್ಲಿ ಅಳುತ್ತದೆ. ಬೇರೆ ಬೇರೆ ಮಕ್ಕಳು ಒಂದೇ ಧ್ವನಿಯಲ್ಲಿ ಅಳುವುದಿಲ್ಲ.

ಬಾವುಟಗಳ ಚಲನೆಯಿಂದ ಒಬ್ಬರು ಮತ್ತೊಬ್ಬರಿಗೆ ತಮ್ಮ ಅಭಿಪ್ರಾಯವನ್ನು ತಿಳಿಸಬಹುದು. ಹಿತ್ತಾಳೆಯ ಕಹಳೆ (Bugle) ಧ್ವನಿಯಿಂದ ಸೇನೆಯನ್ನು ಹಿಂದಕ್ಕೆ ಹೋಗಲು ಆಜ್ಞೆ ಮಾಡಬಹುದು. ಇವುಗಳಲ್ಲಿಯೂ ರೂಪ ಬೋಧೆ ಉಂಟಾಗಲಿ ನಾಮ ಬೋಧೆಯಿಲ್ಲ.

ಭರತನಾಟ್ಯದಲ್ಲಿ ಹಸ್ತ ಲಕ್ಷಣಾದಿಗಳಲ್ಲಿಯೂ ಹಾಗೆಯೇ. ನಾಟ್ಯ ಪ್ರಾರಂಭದಲ್ಲಿ ಪತಾಕ ಹಸ್ತವನ್ನು ತೋರಿಸಿದ ಕೂಡಲೇ-ನಾಟ್ಯವನ್ನು ಪ್ರಾರಂಭ ಮಾಡುತ್ತೇನೆ-ಎಂದು ಹೇಳಿದಂತೆ ಸ್ಫೋಟವಾಗುತ್ತದೆ. ಆದರೆ ನಾಟ್ಯವಾಡುತ್ತಿರುವಾಗ, ಮಧ್ಯೆ ಪತಾಕ ಹಸ್ತವನ್ನು ತೋರಿಸಿದಾಗ, ಅದು ಸಮಯಾನುಸಾರವಾಗಿ ಈ ಅರ್ಥಗಳನ್ನು ಕೊಡುತ್ತವೆ-ಸಮುದ್ರ, ವಿಭಕ್ತಿಗಳು, ವಾಯು, ಕುದುರೆ, ವರ್ಷ, ತಿಂಗಳು, ದಿನ, ಆದುದರಿಂದ ಇಲ್ಲಿಯೂ ರೂಪ ಬೋಧೆ ಇದೆಯಾಗಲಿ ನಾಮ ಬೋಧೆಯಿಲ್ಲ.

### ಲಿಪಿ-ನಾಮರೂಪ

ನಿರ್ದಿಷ್ಟವಾದ ನಾಮರೂಪಗಳೆರಡೂ ಲಿಪಿಯಿಂದ ನಮಗೆ ಬೋಧೆಯಾಗುತ್ತದೆಂದು ಮೇಲಿನ ವಿಚಾರಗಳಿಂದ ಗ್ರಹಿಸಬಹುದು. ಅದಕ್ಕಾಗಿಯೆ ಹಿಂದಿನ ಭಾಷಾಶಾಸ್ತ್ರ ತತ್ವಜ್ಞರು ಭಾಷೆಗೆ ಒಂದು ಲಿಪಿಯು ಅಗತ್ಯವೆಂದು ಅದನ್ನು ಏರ್ಪಡಿಸಿದರು.

### ಲಿಪಿ-ಬೋಧೆ

ಬರೆದ ಲಿಪಿ → ನೋಟ → ವರ್ಣ → ನಾದ ಧ್ವನಿ –< ನಾಮ (Signifiant) / ರೂಪ (Sinifie)

ಲಿಪಿಯನ್ನು ನೋಡಿದ ಕೂಡಲೆ ವರ್ಣವು ನೆನಪಿಗೆ ಬರುತ್ತದೆ. ಅದರಿಂದ ನಾದ ಧ್ವನಿಗಳೆರಡೂ ಅವನಿಗೆ ತೋರಿ ನಾಮ ರೂಪಗಳು ಬೋಧೆಯಾಗುತ್ತವೆ.

### ಗಣ್ಯ ವ್ಯತ್ಯಾಸ

ಫೋನೀಂ (Phoneme) ನಾಮ ರೂಪಗಳನ್ನು ನಿರ್ದಿಷ್ಟವಾಗಿ ಗೊತ್ತುಮಾಡುವಾಗ **ನಾಮ**ದಲ್ಲಿ ಗಣ್ಯವಾದಷ್ಟು ವ್ಯತ್ಯಾಸವಿಲ್ಲದವುಗಳನ್ನು ಒಟ್ಟಿಗೆ ಸೇರಿಸಿ ಹೆಸರಿಸಬಹುದೆಂದು ಆಧುನಿಕ ಭಾಷಾ ವೈಜ್ಞಾನಿಕರು ಅಭಿಪ್ರಾಯ ಕೊಟ್ಟರು. ಗಣ್ಯವಾದಷ್ಟು ವ್ಯತ್ಯಾಸವಿದೆ ಎಂಬುದನ್ನು ತಿಳಿಯುವುದು ಹೇಗೆ?

ಅರ್ಥ ವ್ಯತ್ಯಾಸವು ಯಾವ ನಾಮದಿಂದ ಉಂಟಾಗುವುದೋ ಅದನ್ನು ಗಣ್ಯ ವ್ಯತ್ಯಾಸವನ್ನು ಕೊಡುವ ನಾಮವೆಂದು ಪರಿಗಣಿಸಬೇಕೆಂದು ನಿರ್ಧರಿಸಿದರು. ಇದರಿಂದ ಅವರು ರೂಪ ವ್ಯತ್ಯಾಸಕ್ಕೆ ಪ್ರಾಧಾನ್ಯ ಕೊಟ್ಟಂತಾಯಿತು. ರೂಪ ವ್ಯತ್ಯಾಸವಿಲ್ಲದ ಧ್ವನ್ಯಾತ್ಮಕಗಳೆಲ್ಲವನ್ನೂ ಅವರು ಒಂದೇ ಫೋನೀಂ (Phoneme) ಎಂದು ಭಾವಿಸಬೇಕು-ಎಂದು ಹೇಳಿದಂತೆ ಆಯಿತು. ಈ ತತ್ವವನ್ನು ನಾವು ಎಡ್ವರ್ಡ್ ಸಪೀರ್ (Edward Sapir) ಲೇನಾರ್ಡ್ ಬ್ಲೂಂ ಫೀಲ್ಡ್ (Leonard Bloom field) ಪ್ರಿನ್ಸ್ ನಿಕೊಲಾಸ್ ಟ್ರುಬೆಟ್ಸ್ ಕಾಯ್ (Prence Nicholas Trubetzkoy) ಮುಂತಾದವರುಗಳ ಬರಹಗಳಲ್ಲಿ ಕಾಣಬಹುದು.

### ಕಾರ (Phoneme) ವನ್ನು ಗುರ್ತಿಸಬೇಕಾದರೆ

ಹಿಂದೆ ಕಾರ-ವೆಂದು ಗುರ್ತಿಸಬೇಕಾದರೆ ಎರಡು ವಿಚಾರಗಳನ್ನು ಹೇಳಲಾಯಿತು.[12] ಈಗ ಮೂರನೆಯ ವಿಚಾರ

---

12 ಶುದ್ಧಾಕ್ಷರ-ಕನ್ನಡ ನುಡಿ, October 1968 ಪುಟ 13.

ವೊಂದು ಅತ್ಯಗತ್ಯವೆಂದು ಮೇಲಿನ ವಿಚಾರಗಳಿಂದ ಗೊತ್ತಾಗುತ್ತದೆ. ಒಂದು ಭಾಷೆಯ ಕಾರ (Phoneme) ಗಳನ್ನು ತೆಗೆದುಕೊಂಡರೆ, ಅವುಗಳಲ್ಲಿರುವ ಗಣ್ಯವಾದ ವ್ಯತ್ಯಾಸಗಳು ನಮಗೆ ಗೋಚರವಾಗಬೇಕು. ಯಾವ ಕಾರ (Phoneme) ವನ್ನು ತೆಗೆದುಕೊಂಡರೂ ಅದು ಮಿಕ್ಕ ಕಾರಗಳಿಗಿಂತ ನಮಗೆ ಬೇರೆಯಾಗಿ ಕಾಣಬೇಕು. ಉದಾಹರಣೆಗಾಗಿ–ಮಾಡು, ಮಾಡಿ, ಮಾಡೋ, ಮಾಡೇ–ಇಲ್ಲಿರುವ ಉ, ಇ, ಓ, ಏ, ಇವುಗಳು ಒಂದರಿಂದ ಮತ್ತೊಂದು ನಾಮ ರೂಪಗಳಲ್ಲಿ ಬೇರೆ ಬೇರೆಯಾಗಿರುವುದರಿಂದ ಇವುಗಳು ಬೇರೆ ಬೇರೆ ಶುದ್ಧಾಕ್ಷರ (Phoneme)ಗಳು.

---

## ರಾಗ ಲಹರಿ

●

ಎಲ್ಲಿಯೋ ಕಾಣದೆಡೆ ನೀ ಕುಳಿತುಕೊಂಡಿರುವೆ
ಸವಿಯಾಗಿ ನುಡಿಸುತಿಹೆ ಆ ನಿನ್ನ ಕೊಳಲ
ನಿನ್ನ ಕಾಣಲು ಕಣ್ಣು ಕಾತುರದಿ ಕಾಯುತಿವೆ
ಬೇಗ ಬಳಿ ಬಾರಯ್ಯ ಬಾರೋ ಗೋಪಾಲ.

ನಾನೊ ಮಾನವಳಯ್ಯ ದಿವ್ಯ ಮಾರುತಿ ನೀನು
ಬಾನ ಪುಸ್ತಕದ ನಕ್ಷತ್ರಗಾನ
ಹೂ ಹೂಗಳೆದೆಯಲ್ಲಿ ನಿನ್ನ ರಾಗದ ಲಹರಿ
ತಂಗಾಳಿಯಲಿ ನಿನ್ನ ಕೊಳಲದನಿಯಾನ.

ಇಲ್ಲಿ ಬೃಂದಾವನದ ತುಂಬೆಲ್ಲ ನಿನ್ನ ದನಿ
ನಿನ್ನ ಕೊಳಲಿನ ಮೋಡಿ ಗಿಡಗಿಡದಲಿ
ಅಲ್ಲಿ ಗುಡಿಯಲಿ ಹೋಗಿ ನಿನ್ನ ಕಾಣುವೆನೇನು
ನಿನ್ನ ಸಾಸಿರ ಮೂರ್ತಿ ಹೂ ಹೂವಲಿ.

ಒಮ್ಮೆ ಸುಳಿಯುವೆ ಇಲ್ಲಿ ಪಿಸುಗುಡುವೆ ಕಿವಿಯಲ್ಲಿ
ಮತ್ತೆ ಯಮುನೆಯ ತಡಿಯ ಬಂಡೆಯೇರಿ
ಅದರ ಕಲರವದಲ್ಲಿ ನಿನ್ನ ರಾಧೆಯ ಕರೆವೆ
ಇಲ್ಲಿ ನಾ ಕಾಯುತಿಹೆ ನಿನ್ನ ದಾರಿ.

●

ಸು. ರುದ್ರಮೂರ್ತಿಶಾಸ್ತ್ರಿ

# ಲಕ್ಷ್ಮೀಶನಲ್ಲಿ ಔಚಿತ್ಯಪ್ರಜ್ಞೆ

■ ಕುಶಲಾನುಜ

ಕರ್ನಾಟಕ ಕವಿಚೂತವನಚೈತ್ರನ ಕಾವ್ಯಾರಾಮದಲ್ಲಿ ವಿಹರಿಸುವ ಸೂಕ್ಷ್ಮದರ್ಶಿಯಾದ ಸಹೃದಯನಿಗೆ ಅಲ್ಲಿ ಅನೇಕ ಸುಮನೋಹರ ಹೃದಯಸ್ಪರ್ಶಿ ದೃಶ್ಯಗಳು ಕಂಡು ಬರುವುದು ಅಪೂರ್ವವಲ್ಲ. ನಾದಲೋಲುಪತೆಯ ದೆಸೆಯಿಂದ ಅವನ ಕಾವ್ಯ ಭಾವನಾಕಾವ್ಯಕ್ಕಿಂತ ನಾದ ಕಾವ್ಯವಾಗಿದೆ ಎಂಬ ಅಪವಾದವಿದ್ದರೂ ಅವನ ನವನವೋನ್ಮೇಷಶಾಲಿನಿಯಾದ ಪ್ರತಿಭೆಯ ಭಾವನೆಯ ಆಳವನ್ನು ಅರಿಯಬೇಕಿದ್ದರೆ ಸಹೃದಯ ಮಹಾಶಯರು ಯಾವ ಪೂರ್ವಗ್ರಹವನ್ನೂ ಇಟ್ಟುಕೊಳ್ಳದೆ ಅಹಮ್ಮನ್ನು ತೊರೆದು ಆತನ ಕಾವ್ಯಮಹಾರ್ಣವದ ಪೂತಗಂಗಾಸಲಿಲದಂತಿರುವ ಸೀತಾವನವಾಸದಲ್ಲಿ ತೇಂಕಾಡಬೇಕು; ರಸಾನಂದವನ್ನು ಪಡೆಯಬೇಕು. ಆದರೆ ಅಂತಹ ಸಹೃದಯರು ಇಂದು ನಮ್ಮಲ್ಲಿ ಎಷ್ಟು ಜನ ದೊರಕಬಹುದು? ಅದಕ್ಕಾಗಿಯೇ ಕವಿಯೂ ವಿಮರ್ಶಕರೂ ಆದ ಸವ್ಯಸಾಚಿ ಕುವೆಂಪುರವರು 'ಕೃತ್ತಿಕೆ'ಯಲ್ಲಿ "ನೀನೇರಬಲ್ಲೆಯಾ ನಾನೇರುವೆತ್ತರಕೆ? ನೀ ಹಾರಬಲ್ಲೆಯಾ ನಾ ಹಾರುವಗಲಕ್ಕೆ? ನೀ ಮುಳುಗಬಲ್ಲೆಯಾ ನಾ ಮುಳುಗುವಾಳಕ್ಕೆ?"ಎಂದು ಸೂಕ್ಷ್ಮಮತಿಯಾದ ಸಹೃದಯನಿಗೆ ಸವಾಲು ಹಾಕಿದ್ದಾರೆ. ಕವಿಯ ಹೃದಯದೊಂದಿಗೆ ಸಮಹೃದಯನಾಗಿ ಅವನ ಭಾವದ, ಕಲ್ಪನೆಯ ಅಗಾಧತೆಯನ್ನು ಅರಿತು ಅವನುಂಡ ರಸವನ್ನೂ, ಕಂಡ ಸೌಂದರ್ಯವನ್ನೂ ಅನುಭವಿಸಿದರೇನೇ ಕವಿಗೆ ತೃಪ್ತಿ. ಇಲ್ಲದಿದ್ದರೆ :

'ಅರಸಿಕೇಷು ಕವಿತ್ವ ನಿವೇದನಂ |
ಶಿರಸಿ ಮಾ ಲಿಖ ಮಾ ಲಿಖ ಮಾ ಲಿಖ'

ಎಂದು ವಿಧಿಯನ್ನು ಬೇಡಿಕೊಳ್ಳಬೇಕಾದೀತು!

ಕವಿಕೃತಿಯನ್ನು ಆಳವಾಗಿ ಅಭ್ಯಾಸಮಾಡಿ ಅವನ ಭಾವಕ್ಕೆ ಕನ್ನಡಿ ಹಿಡಿದು ಎತ್ತಿತೋರಿಸುವುದೇ ವಿಮರ್ಶಕನ ಗುರಿ. ಲಕ್ಷ್ಮೀಶನ 'ಸೀತಾವನವಾಸ'ದಲ್ಲಿ ಬರುವ ಒಂದು ಪದ್ಯವನ್ನು ಆಯ್ದುಕೊಂಡು ಕವಿಯ ಭಾವ, ಔಚಿತ್ಯಪ್ರಜ್ಞೆಯನ್ನು ತಿಳಿಸುವುದೇ ಪ್ರಸ್ತುತ ಲೇಖನದ ಗುರಿ. ವಿಮರ್ಶಕ ದಾರಿದೀಪವೇ ವಿನಾ ಮಾರ್ಗದರ್ಶಕನಲ್ಲ. ಆದುದರಿಂದ ಇಲ್ಲಿ ಬರುವ ಕವಿಯ ಆಶಯ, ಪದಜೋಡಣೆಯ ಔಚಿತ್ಯದ ನಿಲುವೆಯನ್ನು ಬಲ್ಲಂತೆ ಮಾಡಲು ಯತ್ನಿಸಿದ್ದೇನೆ. ಆದರೆ 'ಇದೇ' ಎನ್ನುವಂತಿಲ್ಲ.

ದೇವಿ ನಿನಗಿನ್ನೆಗಂ ಪೇಳ್ದುದಿಲ್ಲಪವಾದ
ಮಾವರಿಸೆ ನಿನ್ನನೊಲ್ಲದೆ ರಘುಕುಲೋದ್ವಹಂ
ಸೀವರಿಸಿ ಬಿಟ್ಟು ಕಾಂತಾರಕ್ಕೆ ಕಳುಹಿ ಬಾಯೆಂದೆನಗೆ ನೇಮಿಸಿದೊಡೆ
ಆ ವಿಭುವಿನಾಜ್ಞೆಯಂ ಮೀರಲರಿಯದೆ ನಿಮ್ಮ-
ನೀ ವಿಪಿನಕೊಡಗೊಂಡು ಬಂದೆ ನಿನ್ನೊಯ್ಯೊಯ್ಯ-
ನಾವಲ್ಲಿಗಾದೊಡಂ ಪೋಗೆಂದು ಲಕ್ಷ್ಮಣಂ ಬಾಷ್ಪಲೋಚನನಾದನು

ಗೊಂಡಾರಣ್ಯದ ಮಧ್ಯೆ ಲಕ್ಷ್ಮಣನ ರಥ ಸಾಗಿದೆ, ಪೂತ ಸೀತಾಮಾತೆಯನ್ನು ಕುಳ್ಳಿರಿಸಿಕೊಂಡು. ಪುಣ್ಯಾಶ್ರಮ ಸಂದರ್ಶನಾರ್ಥವಾಗಿ ಶ್ರೀರಾಮನನ್ನು ಬೇಡಿ ಸೀತೆ ಋಷಿಪತ್ನಿಯರಿಗೆ ಬಾಯಿನಾದಿಗಳನ್ನು ಕೊಡುವ, ಆಶ್ರಮವನ್ನು ನೋಡುವ ಹುಮ್ಮನಸ್ಸಿನಿಂದ ಲಕ್ಷ್ಮಣನ ರಥದಲ್ಲಿದ್ದಾಳೆ. ಆದರೆ ಎಂದು ರಥ 'ಅಡಿಯಿಡುವೊಡಸದಳವೆಂಬ ಕರ್ಕಶದ ಮಾರ್ಗದಿಂದೆ' ಸಾಗಿತೋ ಆಗಲೇ ಸೀತೆಯ ಮನದಲ್ಲಿ ಭಯವಾಗತೊಡಗಿದೆ. ಋಷ್ಯಾಶ್ರಮದ ಮಾರ್ಗ ಆಕೆಗೆ ಹೊಸತಲ್ಲ; ಇಂತಹ ಗೊಂಡಾರಣ್ಯದಲ್ಲಿ ಋಷ್ಯಾಶ್ರಮವಿರಲಸಾಧ್ಯ. 'ದಾರುದಾರುಣದ ಕಟ್ಟಡವಿಗಿಲ್ಲಿಗೇತೈತಂದೆ ತಂದೆ ಸೌಮಿತ್ರಿ' ಎಂದಾಗ ಲಕ್ಷ್ಮಣನ ಸ್ಥಿತಿಯನ್ನು ವರ್ಣಿಸಲಸಾಧ್ಯ. ಹೇಳಲೂ ಆರ, ಹೇಳದಿರಲಾರ. ಉಯ್ಯಾಲೆಯಂತೆ ಜೋತಾಡುತ್ತಿದೆ ಮನ. ಅಂತೂ ಕೊನೆಗೆ ಶೋಕದಿಂದ ಬೆಂಡಾಗಿ ಸೀತೆಯನ್ನು ಸಂಬೋಧಿಸಿದ್ದಾನೆ 'ದೇವಿ' ಎಂದು. ಮುಂದೆ ಹೇಳಲು ಕಂಠ ಬಿಗಿದಿದೆ. ಆದರೂ ಗಟ್ಟಿಮನಸ್ಸು ಮಾಡಿಕೊಂಡು ಬಹುಶಃ ನೆಲದ ಕಡೆ ಶೂನ್ಯದೃಷ್ಟಿಯಿಂದ ನೋಡುತ್ತಾ '[ತಾಯೆ!] ಇದುವರೆಗೆ ನಿನ್ನಲ್ಲಿ ನಿಜಾಂಶವನ್ನು ಹೇಳಿಲ್ಲ. ಅಪವಾದ ನಿನ್ನ ಮೇಲೆ ಉಂಟಾಗಲಾಗಿ ರಘುಕುಲೋದ್ವಹಂ ನಿನ್ನನ್ನು ತಿರಸ್ಕರಿಸಿ, ಕಾಡಿನಲ್ಲಿ ಬಿಟ್ಟು ಬಾ ಎಂದು ನನ್ನನ್ನು ನೇಮಿಸಿದ್ದಾನೆ. ಆ ರಾಜಾಜ್ಞೆಯನ್ನು ಮೀರಲಾರದೆ ನಿಮ್ಮನ್ನು ಈ ವಿಪಿನಕ್ಕೆ ತಂದಿದ್ದೇನೆ. ಇನ್ನು

ಮೆಲ್ಲಮೆಲ್ಲನೆ ಎಲ್ಲಿಗಾದರೂ ಹೋಗು' ಎಂದು ಬಾಷ್ಪ ಲೋಚನನಾದನು. ಬಹುಶಃ ಒಂದೇ ಉಸಿರಿನಿಂದ ಹೇಳಿ ಖಿನ್ನಮನಸ್ಕನಾಗಿ ನಿಂತಿರಬೇಕು ಸೌಮಿತ್ರಿ.

ಸೀತೆ ಲಕ್ಷ್ಮಣನಿಗೆ ಮಾತೃಸ್ವರೂಪಳು. ತಾಯಿಯನ್ನು ಬಿಟ್ಟು ಮಗ ಇರಲಾರ. ಆದರೂ ಅಂತಹ ಸಂದರ್ಭ ಯೊದಗಿದೆ. 'ದೇವಿ'ಯೆಂಬ ಗೌರವಸೂಚಕ, ಆತ್ಮೀಯಪದ ಅದೆಷ್ಟು ಭಕ್ತಿಪೂರಕವಾಗಿದೆ; ಅದೆಷ್ಟು ಗೌರವಪೂರಿತ ವಾಗಿದೆ. ಕವಿ ಬಳಸಿದಂತಹ 'ರಘುಕುಲೋದ್ವಹಂ' ಮತ್ತು 'ವಿಭುವಿನಾಜ್ಞೆ' ಅದೆಷ್ಟು ಔಚಿತ್ಯವಾಗಿದೆ! ರಘು ಕುಲದಲ್ಲಿ ಹುಟ್ಟಿದ ಅರಸರು ಅಪವಾದಭೀರುಗಳು. ಈಗ ಸೀತೆಗೆ ಅಪವಾದವಾವರಿಸಿದೆ. ಅಂತಹವಳನ್ನು ರಘುಜ ಅರಮನೆಯಲ್ಲಿ ಇರಿಸಿಕೊಳ್ಳಲಾರ. ಅಂತಹ ಅಪರಾಧಿನಿ ಯನ್ನು ರಘುಕುಲೋದ್ವಹಂ 'ಸೀವರಿಸ'ಬೇಕಾಗಿದೆ. ಅದಕ್ಕೇ ರಘುವಂಶಜನಾಗಿ ಶ್ರೀರಾಮನು ಸೀತೆಯನ್ನು ತ್ಯಜಿಸಬೇಕಾಗಿದೆ. ಇಲ್ಲಿ ಶ್ರೀರಾಮನೋ ಅಥವಾ ಇನ್ನಾವ ಅನ್ವರ್ಥಪದವನ್ನೋ ಬಳಸಿದರೆ ಅನೌಚಿತ್ಯವಾಗುತಿತ್ತು. ಸೀತಾರಾಮ ಸೀತೆಯನ್ನು ಬಿಡಲಾರ. ಆದರೆ ರಘುಜನಾಗಿ, ರಾಜಾರಾಮನಾಗಿ ಜನಾಭಿಪ್ರಾಯಕ್ಕೆ ಮನ್ನಣೆ ಕೊಡ ಬೇಕಾಗಿದೆ. ಸೀತಾರಾಮನಿಗೂ ರಘುಜನಿಗೂ ಮನ-ತುಮುಲವಾಗಿ ಕೊನೆಗೆ ರಘುಜನೇ ಗೆದ್ದಿದ್ದಾನೆ. ಆದರೆ ಆ ಗೆಲುವು ಗೆಲುವಲ್ಲ. ಗೆದ್ದದ್ದಕ್ಕಾಗಿ ಸೀತೆಯನ್ನು ಸೀವರಿಸಿದ್ದಾನೆ. ಗೆದ್ದು ಸೋತದರ ಸಂಕೇತ ಆತನ ಮನದಳಲು! ಅತ್ತ ಲಕ್ಷ್ಮಣ ಕಿಂಕರ. ರಾಮಾನುಜನಲ್ಲ. ರಾಮಾನುಜನಾದರೆ ಒಂದು ವೇಳೆ ಅವನ ಆಜ್ಞೆಯನ್ನು ಮೀರಬಹುದಿತ್ತು. ಅಣ್ಣನಿಗೆ ಬುದ್ಧಿ ಹೇಳಬಹುದಿತ್ತು. ಆದರೆ ಪ್ರಕೃತ ಶ್ರೀರಾಮ ಅಣ್ಣನಲ್ಲ; ವಿಭು! ವಿಭುವಿನ ಆಜ್ಞೆ ಯನ್ನು ಮೀರಿದರೆ ಕಿಂಕರನಿಗೆ ಉಳಿಗಾಲವಿಲ್ಲ. ಅದ ಕ್ಕಾಗಿಯೇ ಕವಿ 'ವಿಭುವಿನಾಜ್ಞೆಯಂ ಮೀರಲೊಲ್ಲದೆ' ಎಂದಿದ್ದಾನೆ. 'ಇನ್ನೆಲ್ಲಿಗಾದೊಡಂ ಒಯ್ಯೊಯ್ಯನೆ ಪೋಗು' ಎಂದಿದ್ದಾನೆ ಮೈದುನ ಲಕ್ಷ್ಮಣ. ಗೊಂಡಾರಣ್ಯ; ಕಾಲಿಡಲು ತೆರಪಿಲ್ಲದಂತಹ ನಿಬಿಡಾರಣ್ಯ; ಹುಲಿ ಕರಡಿ ಶಾರ್ದೂಲಾದಿ ಕ್ರೂರಮೃಗಗಳಿಂದ ಕೂಡಿದ ಅರಣ್ಯವದು. ಸೀತೆ ತುಂಬು ಗರ್ಭಿಣಿ. ಜನಕಜೆಗೆ ದಿಕ್ಕಿಲ್ಲ! ಮುಂದೆ ಗತಿ ಇಲ್ಲ!! ಆದರೆ ಅಲ್ಲೇ ಇದ್ದರೆ ಉಳಿವಿಲ್ಲ!!! ಬೇಗ ಬೇಗ ಸಾಗಲು ಸಾಧ್ಯವಿಲ್ಲ; ಹೊಟ್ಟೆಯಲ್ಲಿ ಪಿಂಡೋತ್ಪತ್ತಿ ಯಾಗಿದೆ. ಗರ್ಭರಕ್ಷಣೆಗಾಗಿ ಒಯ್ಯೊಯ್ಯನೆ ಸಾಗು; ಆತ್ಮಹತ್ಯೆ ಮಾಡಿಕೊಳ್ಳಬೇಡ ಎಂಬ ಧ್ವನಿ ಇಲ್ಲಿ ಸೂಚ್ಯ ವಾಗುವುದನ್ನು ಕಾಣಬಹುದು. ಬಾಷ್ಪಲೋಚನನಾಗುವು ದಲ್ಲದೆ ಇನ್ನೇನನ್ನೂ ಮಾಡಲಾರದೆ ಲಕ್ಷ್ಮಣನ ಅಸಹಾಯ ಸ್ಥಿತಿಯನ್ನು ಕವಿ ಅದೆಷ್ಟು ಸೂಚ್ಯವಾಗಿ ಹೇಳಿದ್ದಾನೆ.

ಮೃದುವಾದ ಪದಗಳ ಲಾಲಿತ್ಯ ನಾದ ಮಾಧುರ್ಯವನ್ನ ಲ್ಲದೆ ಕರುಣರಸವನ್ನು ಹೃದಯಂಗಮವಾಗಿ ಚಿತ್ರಿಸಲು ಸಹಾಯವಾಗಿದೆ. ಶೋಕದ ಭಾರವನ್ನು ಬಿಡಿ ಬಿಡಿ ಪದ ಗಳಿಂದ ಅದೆಷ್ಟು ಸುಂದರವಾಗಿ ತುರುಬಿದ್ದಾನೆ ಕವಿ!

---

## ಕನ್ನಡಿಗರ ಸಿರಿಯ ಬೆಳೆ

■

ಬೆಟ್ಟಗುಡ್ಡಗಳ ನಾಡು, ನಮ್ಮ ಕನ್ನಡದ ನಾಡು,
ಸುತ್ತಲೂ, ಮರಗಿಡಗಳ ನೆರಳು.
ಬೆಟ್ಟ ಗುಡ್ಡಗಳ ನಡುವೆ ಬೆಳೆಯ ಬೆಳೆದರು,
ನಮ್ಮ ರೈತರು ನವಣೆ, ರಾಗಿ ಜೋಳವ ||

ದೂರ ದೂರದ ಊರು ಹತ್ತಿರಕೆ ಕಾಣುತಿರಲು,
ಸುತ್ತಲೂ ಕೆರೆ-ಹಳ್ಳ ತೊರೆಗಳು ಹರಿದು
ಮೈಯೆಲ್ಲ ಹಸಿರು ಪಚ್ಚೆತೆನೆಗಳು ಕೂಡಿ,
ಬಯಲು ಸೀಮೆಯ ರೈತನ ಮನವ ತುಂಬಿ ||

ಬಂದಿದ್ದ ಬರಗಾಲ ಇಂದಿಲ್ಲ ಎಮಗೆಂದು,
ಒಂದಾಗಿ ಎಲ್ಲರ ಮನ ಇಂದು.
ಕನ್ನಡದ ಜನರಲ್ಲ ಒಳ್ಳೆಯ ಬೆಳೆಯ ಬೆಳೆದು,
ಕುಣಿದಾಡಿದರು ಹರುಷದಿ ಸಿರಿ ಬೆಳೆಯ ಬೆಳೆದು

■

ಜಿ. ವಿ. ಶಿವಸ್ವಾಮಿ



# ವಿಮರ್ಶನರಂಗ

**ಬಸವ ಪ್ರಕಾಶ:** ಲೇ. : ಶಾಂತಳಾದೇವಿ ಮಾಳವಾಡ, ಪ್ರ : ಸುರುಚಿ ಪ್ರಕಾಶನ, ಸರಸ್ವತಿಪುರಂ, ಮೈಸೂರು-೫, ಪುಟ: ೨೬೬ ಬೆಲೆ : ೫-೫೦.

ಹಲವಾರು ಲೇಖನಗಳಿಂದ ಕನ್ನಡ ಸಾಹಿತ್ಯಕ್ಕೆ ಪರಿಚಿತರಾದ ಶ್ರೀಮತಿ ಶಾಂತಳಾದೇವಿ ಮಾಳವಾಡ ಇವರು ಬಸವಣ್ಣನವರ ಜೀವನವನ್ನು ಕುರಿತು, ' ಬಸವ ಪ್ರಕಾಶ ' ದಲ್ಲಿ ವಿವೇಚಿಸಿದ್ದಾರೆ. ಬಸವಣ್ಣನ ಜನನ, ಉಪನಯನ ಸಮಯದಲ್ಲಿ ಆದ ಘರ್ಷಣೆ, ಕೂಡಲ ಸಂಗಮಕ್ಕೆ ಅವನು ಬೆಳೆಸಿದ ಪ್ರಯಾಣ, ಅವನ ವಿದ್ಯಾಭ್ಯಾಸ ಮುಂತಾದ ವಿಷಯಗಳನ್ನು ಧ್ವನಿಪೂರ್ಣವಾಗಿ ಅತ್ಯಂತ ಹೃದಯಂಗಮವಾಗಿ ಭಾವಭರಿತ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಅವನ ವಿವಾಹ, ಅವನ ಕಾಯಕ, ಅವನಿಗೆ ದೊರೆತ ಶರಣರ ಸಂಸರ್ಗ ಮುಂತಾದ ವಿಚಾರಗಳನ್ನು ಬಹಳ ತಾರ್ಕಿಕವಾಗಿ ವಿಚಾರಮಾಡಿ, ನಮ್ಮೆಲ್ಲರ ಮನಸ್ಸಿನಲ್ಲಿ ಬಸವ ಪ್ರಕಾಶವನ್ನುಂಟುಮಾಡಿದ್ದಾರೆ.

ಬಸವಣ್ಣನವರ ಬಹುಮುಖವಾದ ವ್ಯಕ್ತಿತ್ವವನ್ನು, ಅವರ ಪ್ರತಿಭೆಯನ್ನು ಈ ಕೃತಿಯಲ್ಲಿ ಸಾಹಿತಿಯಾಗಿ ಚಿತ್ರಿಸಿದ್ದಾರೆ. ಶೈಲಿ ಸರಳವಾಗಿದೆ, ಸುಂದರವಾಗಿದೆ. ಜನಸಾಮಾನ್ಯರಿಗೆ ಹಿಡಿಸುವಂತೆ, ಈ ' ಬಸವ ಪ್ರಕಾಶ 'ದ ತುಂಬ ಒಂದು ಕನವರಿಕೆಯ ಜಗತ್ತಿದೆ. ವಚನ ಸಾಹಿತ್ಯವನ್ನು ಭಕ್ತಿಪೂರ್ವಕವಾಗಿ ಅಭ್ಯಸಿಸಿ, ಅದರ ತಿರುಳಿನೊಡನೆ ಒಂದಾಗಿ ತೃಪ್ತಿಗೊಂಡ ಪಿಪಾಸೆ ಈ ಕತೆಯಲ್ಲೆಲ್ಲಾ ತನ್ನನ್ನು ತಾನೇ ಬರೆದುಕೊಂಡಿದೆ ಎಂಬ ಗೋಕಾಕರ ಮಾತು ಸತ್ಯ. ಇದೊಂದು ಚಾರಿತ್ರಿಕ ಕಾದಂಬರಿಯಾದರೂ ಚರಿತ್ರೆಯ ಕೆಸರಿನಲ್ಲಿ ಸಿಕ್ಕಿಕೊಂಡಿಲ್ಲ. ಜನಸಾಮಾನ್ಯರ ನಂಬಿಕೆಗೆ ಅನುಗುಣವಾಗಿ ಈ ಕಾದಂಬರಿಯನ್ನು ರಚಿಸಿದ್ದಾರೆ. ಅದರಲ್ಲಿಯೂ ಪ್ರಭುದೇವರ ಪುನರಾಗಮನ ಮುಂತಾದ ಪ್ರಕರಣಗಳು ಅದ್ಭುತ ರಮ್ಯವಾಗಿ ಬಂದಿವೆ.

* * * *

**ನೈವೇದ್ಯ :** (ಪ್ರಬಂಧ ಸಂಗ್ರಹ) ಸಂ. : ಕೆ. ವಿರೂಪಾಕ್ಷಗೌಡ ಮತ್ತು ಲದಾಫ್ ಹಕೀಮ್ ಸಾಹೇಬ, ಪ್ರ : ಶ್ರೀ ಕೊಟ್ಟೂರೇಶ್ವರ ಪ್ರಕಾಶನ, ಹಗರಿ ಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ, ಪುಟ: ೯೦, ಬೆಲೆ : ರೂ. ೧-೫೦.

ಹಲವಾರು ಬಳ್ಳಾರಿ ಜಿಲ್ಲೆಯ ಲೇಖಕರ ಲೇಖನಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಈ ಜಿಲ್ಲೆಯ ಪ್ರಾತಿನಿಧಿಕ ಪ್ರಬಂಧಗಳ ಸಂಗ್ರಹಗಳು ಇಲ್ಲಿವೆ. ಬಸವಣ್ಯೆಪ್ಪ, ಚಂದ್ರಶೇಖರ ಪಾಟೀಲ್, ಪೂರ್ವಚಾರ್ ಮುಂತಾದ ಇಪ್ಪತ್ತೆರಡು ಜನಗಳ ಲೇಖನಗಳ ಸಂಗ್ರಹ ಈ ಪುಸ್ತಕದಲ್ಲಿವೆ.

ಮಲ್ಲಾರಿಭಟ್ಟರ ' ಜೀವನದಲ್ಲಿ ನಗು ' ಗವಿಸಿದ್ಧಪ್ಪರ ' ರಷ್ಯಾದಿಂದ ಕನ್ನಡಿಗನ ಪತ್ರ ' ಬಸವರಾಜ ಶರ್ಮಾ ಅವರ ' ಹಾಸ್ಯರಸ ', ಚಂದ್ರಶೇಖರಯ್ಯ ಅವರ ' ಮನೆಗೊಬ್ಬ ಅಜ್ಜಿಯೆ ಲೇಸು ' ಮುಂತಾದ ಲೇಖನಗಳು ಉಲ್ಲೇಖನೆಗೆ ಯೋಗ್ಯವಾಗಿವೆ. ಲೇಖನಗಳ ಶೈಲಿ ಆದಷ್ಟು ಸರಳವಾಗಿದೆ, ಜನಾಕರ್ಷಕವಾಗಿದೆ. ವಿಷಯ ವೈವಿಧ್ಯ ಹೆಚ್ಚಾಗಿದೆ. ಇಂತಹ ಪ್ರಬಂಧ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಹೊಸದು. ಪ್ರಬಂಧ ಸಾಹಿತ್ಯದ ಪ್ರಾಕಾರ ಸಾಕಷ್ಟು ಬೆಳೆಯದಿದ್ದಾಗ ಇಂತಹ ಸಂಗ್ರಹಗಳು ಸ್ವಾಗತಾರ್ಹ.

* * * *

**ಸರ್ವಂತರಾತ್ಮನ ವಚನಗಳು :** (ವಚನಗಳು) ಲೇ. : ಚಂದ್ರಶೇಖರ ವಿ. ಬಡೆಗಣ್ಣವರ, ಪ್ರ. : ವಿ. ಬಿ. ಬಡಿಗಣ್ಣವರ ಬಂಧುಗಳು, ಗದಗ. ಬೆಲೆ : ೦-೫೦ ಪೈಸೆ.

ಶ್ರೀ ಬಸವಣ್ಣನವರ ಅಷ್ಟಶತಮಾನೋತ್ಸವದ ಸವಿನೆನಪಿಗಾಗಿ ವರ್ಣಿಸಿರುವ ಈ ಪುಸ್ತಿಕೆಗೆ ಬಸವಣ್ಣನವರ ಸ್ತೋತ್ರ ಜಂಗಮಸ್ತೋತ್ರ ಮುಂತಾದವುಗಳಿಂದ ತೊಡಗಿ, ಭಕ್ತ ಪ್ರಸಾದಿ ಸ್ಥಳಗಳನ್ನು ವರ್ಣಿಸುತ್ತಾ, ವೀರಶೈವ ಸ್ಥಳಗಳ ವರ್ಣನೆ, ಶೀಲ, ಮೋಕ್ಷ, ಕಾಯಕ ಮುಂತಾದವುಗಳನ್ನು ಎರಡೆರಡು ಮಾತುಗಳಿಂದ ತಿಳಿಸಲು ಪ್ರಯತ್ನಿಸಿದ್ದಾರೆ. ಈ ಪುಸ್ತಕದಲ್ಲಿ ಹೇಳಿಕೊಳ್ಳುವಂತಹ ಅಂಶಗಳೇನೂ ಇಲ್ಲ.

**ಎಂ. ಚಂದ್ರಶೇಖರ್**

**ದಿಟ್ಟಿಸಿ ನೋಡಿದರೆ** (ವ್ಯಕ್ತಿಚಿತ್ರಗಳು) ಲೇ : ಸಿಂಪಿ ಲಿಂಗಣ್ಣ, ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ಜಿ. ವಿಜಾಪೂರ ಪ್ರಕಾಶನ, ಪುಟ : ೧೪+೯೮, ಬೆಲೆ : ರೂ. ೧-೫೦

ಕನ್ನಡ ಕುಲರಸಿಕರಾದ ಸಿಂಪಿ ಲಿಂಗಣ್ಣನವರು ಶ್ರೀ ಅರವಿಂದ ಗ್ರಂಥಾಲಯ ಮೂಲಕ ಕನ್ನಡ ಸಾಹಿತ್ಯ

ಸರಸ್ವತಿಗೆ ಸಲ್ಲಿಸುತ್ತಿರುವ ಸೇವೆ ಅಮೂಲ್ಯವಾದುದು; ಅಮೋಘವಾದುದು. ಅರವತ್ನಾಲ್ಕರ ಅಂಚಿನಲ್ಲಿಯೂ ಸಹ ನಿರಂತರವಾಗಿ ಅವರ ಹರಿತ ನುರಿತ ಲೇಖನಿ ಮುಂದು ವರಿಯುತ್ತಿರುವುದು ನಾಡಿನ ಸೌಭಾಗ್ಯವೇ ಸರಿ. ಶ್ರೇಷ್ಠ ಶಿಕ್ಷಕರಾಗಿ, ಆದರ್ಶ ಆಧ್ಯಾತ್ಮಿಗಳಾಗಿ ಉನ್ನತ ನಿಲುವಿನ ಲೇಖಕರಾಗಿ ಸಿಂಪಿಯವರು ನಾಡಿನ ಜನಮನವನ್ನು ಗೆದ್ದ ವರು; ಬಾಳನ್ನು ಬಂಗಾರವನ್ನಾಗಿ ಮಾಡಿಕೊಂಡವರು. ಕಸದಲ್ಲಿಯೇ ರಸವನ್ನು ಕಾಣುವ ಅವರ ಉದಾರ ಉದಾತ್ತ ಮನೋಭಾವನೆ ಅವರ ವಿಶಾಲ ಹೃದಯವನ್ನು ಎತ್ತಿ ತೋರಿಸುತ್ತದೆ. ಇದಕ್ಕೆ ನಿದರ್ಶನವಾಗಿ 'ದಿಟ್ಟಿಸಿ ನೋಡಿದರೆ' ಹೊರಬಂದಿದೆ. ಇದು ಅವರ ಗ್ರಂಥಾಲಯದ ೯ನೇ ವರ್ಷದ ೪ನೇ ಗ್ರಂಥ. ಹಳ್ಳಿಯ ಬಾಳಿನ ರಸ ನಿಮಿಷ ಗಳು ಚಿತ್ರ ವಿಚಿತ್ರವಾದ ವ್ಯಕ್ತಿ ಚಿತ್ರಗಳ ಮೂಲಕ ಸುಂದರವಾಗಿ ಮೂಡಿಬಂದಿವೆ. ಇವುಗಳಲ್ಲಿ ವಿನೋದವಿದೆ; ವಿಕಾಸವಿದೆ; ಸಂತೋಷವಂತೂ ಸರಿಯೇ. ಓದುಗನಿಗೆ ಇದಕ್ಕಿಂತ ಹೆಚ್ಚಿಗೇನು ಬೇಕು! ಸುತ್ತಲಿನ ಸಮಾಜದಲ್ಲಿ ಕಾಣುವ ಮಾನವ ಸ್ವಭಾವದ ವೈವಿಧ್ಯದ ನೈವೇದ್ಯ ಇಲ್ಲಿ ಸಿಂಪಿಯವರು ತೋರಿಸಿದ್ದಾರೆ; ವಿಶ್ಲೇಷಿಸಿದ್ದಾರೆ. ಓದುಗನೇ ಗಡಬಡಿಸುವಂತೆ ಮಾಡುವ ಶಕ್ತಿ ಈ ವ್ಯಕ್ತಿ ಚಿತ್ರಗಳಲ್ಲಿ ವ್ಯಕ್ತವಾಗಿದೆ. ಲಟ್ಟಣಿಗೆ ಸಾಹೇಬರನ್ನು ಕುರಿತ ಅವರ ಭಾಷ್ಯ ಇಂತಿದೆ: "ಊಟ ಹೊರಗೆ, ತಂಬೂರಿ ಮನೆಗೆ ಬರತೊಡಗಿತು. ಅನ್ನ ಯಾರಾದರೂ ಕೊಟ್ಟಾರು, ಪಚನ ಶಕ್ತಿ ಯಾರು ಕೊಡುವರು?" ಹೀಗೆ ಅವರ ಕಾವ್ಯ ಶಕ್ತಿ, ಹಾಸ್ಯರಸ, ವಿಡಂಬನ ದೃಷ್ಟಿ, ಕಲ್ಪನಾ ಚಾತುರ್ಯ, ಸೂಕ್ಷ್ಮದರ್ಶನ, ಈ ಕೃತಿಯಲ್ಲಿ ಒಡಮೂಡಿವೆ. ಪ್ರತಿಯೊಬ್ಬ ಕನ್ನಡಿಗನೂ ಓದಬೇಕಾದ ಗ್ರಂಥವಿದು.

**ಎಸ್. ಎಸ್. ಭೂಸರಡ್ಡಿ**

•

**ಸರ್ ಐಸಾಕ್ ನ್ಯೂಟನ್** : ಲೇ. : ಶ್ರೀ ಆರ್. ವಿ. ಅಬ್ಬಿಗೇರಿ ಪ್ರ. : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೭, ಪುಟ: ೫೫, ಬೆಲೆ : ೦–೨೫ ಪೈಸೆ.

ಆಧುನಿಕ ಭೌತಶಾಸ್ತ್ರದ ಪಿತಾಮಹ ಸರ್ ಐಸಾಕ್ ನ್ಯೂಟನ್ನಿನ ವೈಜ್ಞಾನಿಕ ಶೋಧಗಳನ್ನೂ ವೈಯಕ್ತಿಕ ಜೀವನವನ್ನೂ ಸರಳ ಶೈಲಿಯಲ್ಲಿ ಹೇಳಹೊರಟ ಕಿರು ಹೊತ್ತಗೆಯಿದು. ಕೆಲವೊಂದು ಚಿತ್ರಗಳಿದ್ದರೆ ವಿಷಯ ಗ್ರಹಣಕ್ಕೆ ಸಹಾಯಕವಾಗುತ್ತಿತ್ತು. ಆದರೂ ಸ್ತುತ್ಯ ಪ್ರಯತ್ನ.

**ಸೂ. ಸು.**

**ಚಕ್ರತೀರ್ಥ** : ತ. ರಾ. ಸು. ಅವರ ಕಾದಂಬರಿ; ಸುದರ್ಶನ ಪ್ರಕಾಶನ.

ಇತ್ತೀಚೆಗೆ ಚಲನಚಿತ್ರವಾಗಿ ರಜತ ಪರದೆಯ ಮೇಲೆಯೂ ಕಾಣಿಸಿಕೊಂಡ, ತ. ರಾ. ಸು. ಅವರ ಜನ ಪ್ರಿಯ ಕಾದಂಬರಿ 'ಚಕ್ರತೀರ್ಥ'ದ ಎರಡನೆಯ ಮುದ್ರಣ ಇದು. ವರ್ಣರಂಜಿತ ಮುಖಚಿತ್ರ, ಉತ್ತಮ ಮುದ್ರಣ ಗಳಿಂದ ಕೂಡಿರುವ ಈ ಆಕರ್ಷಕ ಹೊತ್ತಿಗೆಯನ್ನು ಪ್ರಕಟಿಸಿರುವ ಸುದರ್ಶನ ಪ್ರಕಾಶನದವರು ಅಭಿನಂದನಾರ್ಹರು.

* * *

**ಮುಂಜಿನಕಾನು** : (ಕಾದಂಬರಿ) ನಾ. ಡಿಸೋಜ; ಪ್ರ. : ರವೀಂದ್ರ ಪುಸ್ತಕ ಭಂಡಾರ, ಕಾರ್ಗಲ್, ಶಿವಮೊಗ್ಗ ಜಿಲ್ಲೆ, ಪುಟ : ೨೩೦, ಬೆಲೆ : ೮–೦೦

ತಮ್ಮ ಸಣ್ಣ ಕತೆಗಳ, ಒಂದೆರಡು ಕಾದಂಬರಿಗಳ ಮೂಲಕ ಸಾಕಷ್ಟು ಪರಿಚಿತರಾಗಿರುವ ನಾ. ಡಿಸೋಜ ಅವರ 'ಮುಂಜಿನ ಕಾನು' ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನಲ್ಲಿ ವಿಶೇಷವಾಗಿರುವ ಗಿರಿಜನವೆಂದು ಪರಿಗಣಿತ ವಾಗಿರುವ 'ಹಸ್ಲ'ರೆಂಬ ಒಂದು ಹಿಂದುಳಿದ ಜನಾಂಗದ ಅದರ ಹತ್ತಾರು ವ್ಯಕ್ತಿಗಳ, ಅವರ ದೈನಂದಿನ ಬದುಕಿನ ಕಷ್ಟ ನಿಷ್ಠುರಗಳ ಸುತ್ತ ಹೆಣೆದ ಕಾದಂಬರಿ. ಒಡೆಯನ ಶೋಷಣಾಪ್ರವೃತ್ತಿ, ಹುಟ್ಟಾಳುಗಳ ಅಜ್ಞಾನ ಹಾಗೂ ಅಂಧಶ್ರದ್ಧೆ ಹಾಗೂ ಮಲೆನಾಡಿನ ಸೆರಗಿನಲ್ಲಿ ವಾಸಿಸುವ ಅವರ ಕೌಟುಂಬಿಕ ಜೀವನದ ಕೆಲವು ಮಧುರ ಕ್ಷಣಗಳನ್ನೆಂತೊ ಅಂತೆಯೇ ಅವರ ಅತ್ಯಾಚಾರಗಳನ್ನೂ ಲೇಖಕರು 'ತೀರಾ ಗ್ರಾಮೀಣವೇನಲ್ಲ'ದ ಸರಳ ಭಾಷೆ ಯಲ್ಲಿ ಓದುಗರಿಗೆ ಪರಿಚಯ ಮಾಡಿಕೊಟ್ಟಿದ್ದಾರೆ. ಹಸ್ಲರ ಕೂಸೊಬ್ಬ ಅವರ ಅಂಧಶ್ರದ್ಧೆಗೆ ವಿರುದ್ಧವಾಗಿ ಪಟ್ಟಣದಲ್ಲಿ ವಿದ್ಯೆ ಕಲಿತು ಪುನಃ ಹಳ್ಳಿಗೇ ಹಿಂದಿರುಗಿ ತನ್ನ ಜೀವನದ ಸುಪ್ರಭಾತದ ಸ್ವತಂತ್ರ ನೆಲೆಯನ್ನು ಅಲ್ಲಿಯೇ ಕಂಡುಕೊಳ್ಳುವ ದೃಶ್ಯ ಉತ್ತಮವಾಗಿದೆ. ಲೇಖಕರ ಪ್ರಕೃತಿ ವರ್ಣನೆಯಲ್ಲಿನ ಸಹಜತೆ, ಸಜೀವತೆ ಅಚ್ಚರಿ ತರು ತ್ತದೆ. ಅಲ್ಲಲ್ಲಿ ಕಾಣುವ ಕೆಲವು ಗದ್ಯ ಸಾಲುಗಳು–ಉದಾ. 'ಬಯಲ ಮಧ್ಯದಲ್ಲಿ ಬೆತ್ತಲೆಯಾಗಿ ಬಿದ್ದ ಕಾಲುದಾರಿ'– ನವ್ಯ ಕಾವ್ಯಕ್ಕೆ ಉದಾಹರಣೆಗಳಾಗಬಲ್ಲವು. ಪುಸ್ತಕದ ಕೊನೆಯಲ್ಲಿ ಶಬ್ದಕೋಶವೊಂದನ್ನು ಕೊಟ್ಟು ಲೇಖಕರು ಉಪಕರಿಸಿದ್ದಾರೆ.

ಒಟ್ಟಿನಲ್ಲಿ ಇದೊಂದು ಉತ್ತಮ ಪ್ರಾದೇಶಿಕ ಕಾದಂಬರಿ ಯೆನ್ನಬಹುದು.

**ಸುಮನಾ**

**ತುಂಬಿದ ಬಿಂದಿಗೆ** (ಕವನ ಸಂಕಲನ) : ಕವಿ : "ಕಮಲನಾಭ" ಪ್ರಕಾಶಕರು : ಯುಗಪುರುಷ ಪ್ರಕಟನಾಲಯ, ಕಿನ್ನಿಗೋಳಿ ದ.ಕ. ಆಕೃತಿ : ಕ್ರೌನ್ ೧/೮ ; ಪುಟ : ೬೨ ; ಬೆಲೆ : ರೂ. ೧–೫೦.

ಮೂವತ್ತೇಳು ಕವನಗಳ ಸಾರದಿಂದ ತುಂಬಿದ ಬಿಂದಿಗೆ. "ತುಂಬಿದ ಬಿಂದಿಗೆ" ಅಗಲಿದ ಮಹಾನುಭಾವರ ಸ್ಮರಣೆಯ ಕರುಣದ ಕೆಲವು ಪದ್ಯಗಳನ್ನೂ ಜೀವಂತ ಮಹಾನುಭಾವ ರನ್ನೂ ಹೊಗಳುವ ಒಂದೆರಡು ಕವನಗಳನ್ನೂ ಬಿಟ್ಟರೆ, ಉಳಿದವು ಶ್ರೇಯಸ್ಸನ್ನೂ ಹಾರೈಸುವವು ಮತ್ತು ತತ್ವನಿಷ್ಠ ವಾದವು ! ಸಮಾಜಕ್ಕೆ ಮಾರ್ಗದರ್ಶಕವಾಗುವ ಉತ್ತಮ ನೀತಿಯನ್ನುಳ್ಳವು. ಈ ನೀತಿಬೋಧೆಯಲ್ಲಿ ಅಲಂಕಾರೋಕ್ತಿ ಯಿದೆ, ವಿಡಂಬನೆಯಿದೆ, ನೇರವಾದ ವಿಧಿ-ನಿಷೇಧಗಳೂ ಇವೆ. ಕವನಗಳ ರಚನೆ ಓಜಸ್ಸಿನಿಂದ ಕೂಡಿ, ಮಾತ್ರಾಗಣ ಘಟಿತವಾಗಿ, ಲಯಬದ್ಧವಾಚನಕ್ಕೆ ಒಪ್ಪುತ್ತಿದೆ. ಪ್ರಾದೇಶಿಕ ವೈಶಿಷ್ಟ್ಯವುಳ್ಳ ನುಡಿಗಟ್ಟು, ನುಡಿ – ನಾಣ್ಣುಡಿಗಳು ನಿರೂ ಪಣೆಗೆ ಕಳೆಗೊಟ್ಟಿವೆ. ಕಾವ್ಯ ಲಕ್ಷಣಾಂಗಗಳಾದ ವ್ಯವ ಹಾರಪ್ರಜ್ಞೆ, ಶುಭಪ್ರಾಪ್ತಿ, ಸದುಪದೇಶ – ಎಂಬಿವಕ್ಕೆಲ್ಲ ಇಲ್ಲಿ ಸ್ಥಾನ ಬಂದಿರುವುದು ಶ್ಲಾಘನೀಯ. ಕವಿಯ ವಿದ್ವತ್ತನ್ನು ಹೊರದೋರುವ ರೂಪಕಾಲಂಕಾರವು ಹೆಚ್ಚಿನ ಕಡೆಯಲ್ಲಿಯೂ ಇದೆ. ದುಡಿಮೆಯ ಹಿರಿಮೆಯನ್ನು ಸಾರುವ ರೂಪಕದ ಒಂದು ನುಡಿಯಿದು—

ಬೆಮರಿನೆಣ್ಣೆ ಸುರಿಯದಿರಲು ಸೊಗದ ಸೊಡರು ಬೆಳಗದು
ದುಡಿಮೆಯುಣಿಸ ತಿನಿಸದಿರಲು ನಾಡಿನೊಡಲು ಬೆಳೆಯದು
ಕೈಯ ಮೈಯ ಕೊಳಕು ಕೆಸರೆ ಬಾಯ್ಗೆ ಮೊಸರ ಸುರಿವುದು
ಬನ್ನ ಬವಣೆ ಕುಲುಮೆಯಲ್ಲಿ ಬಾಳ ಹೊನ್ನು ಹೊಳೆವುದು

ಇಂದಿನ ಗುರಿಗೆಟ್ಟ ರಾಜಕೀಯವನ್ನು ಟೀಕಿಸುವ ಪದ್ಯವೂ ಇದೆ—

ನಾಡಿನ ನೀತಿಯ ಜನತೆಯ ಶೋಷಿಸೆ
ಮದ್ದಿಗೆ ಮರವನು ಕಡಿದಂತೆ
ವಿನಾಯಕನ ಮಾಡಲು ಹವಣಿಸಿಯೂ
ವಾನರನು ನಿರ್ಮಿಸಿದಂತೆ

ಮನುಷ್ಯನ ಮೇಲು ಕೀಳುತನಗಳು ಅವನ ಮಾತಿನಲ್ಲೇ ಕಾಣಿಸುತ್ತವೆ—

ಬಾಯನುಲಿಯಲು ತೆರೆವ ತನಕವು
ಮೇಲುಕೀಳೊಂದೇ ತೆರ
ನಾದಭೇದವೆ ಸೂಚಿಸಿರುವುದು
ಕಾಗೆ ಕೋಗಿಲೆಯಂತರ

ಒಟ್ಟಿನಲ್ಲಿ ಇದೊಂದು ವಿಚಾರ ಪ್ರಧಾನ, ಬೋಧಪ್ರದ ಕವನ ಸಂಗ್ರಹ. ಇಲ್ಲಿ ಹೃದಯದ ಮಿಡಿತ ಕಡಮೆ, ಬುದ್ಧಿಯ ಚದುರು ಅಧಿಕ. ಇದಕ್ಕೆ ಶ್ರೀ ಫಲಿಮಾರು ಮಠದ ಸ್ವಾಮಿಗಳವರು ಮುನ್ನುಡಿ ಬರೆದು ಹರಸಿದ್ದಾರೆ.

* * *

**ಸುದಾಮಚರಿತೆ:** ಸಂಪಾದಕರು : ಕೆ. ರಾಘವೇಂದ್ರರಾವ್ ; ಪ್ರಕಾಶಕರು : ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು-೫ ಕ್ರೌನ್ ೧/೮ ; ಪುಟಗಳು ೨೬+೮೩. ಬೆಲೆ : ಸಾಧಾರಣ ಪ್ರತಿ ರೂ. ೨–೫೦ ; ಉತ್ತಮ ಪ್ರತಿ ರೂ. ೪–೫೦.

ಇದು ಹೊಸತಾಗಿ ಪ್ರಕಟವಾಗಿರುವ ಆರು ಸಂಧಿಗಳುಳ್ಳ ಒಂದು ಚಿಕ್ಕ ಕಾವ್ಯ; ಭಾಮಿನಿ ಷಟ್ಪದಿಯಲ್ಲಿ ರಚಿತ ವಾದುದು. ಇದರಲ್ಲಿ ೧೪೮ ಪದ್ಯಗಳಿವೆ. ಕಾವ್ಯಕರ್ತೃ ಬ್ರಾಹ್ಮಣನೆಂದು ತೋರುತ್ತದೆ. ಹೆಸರು ತಿಳಿದಿಲ್ಲ. ರಾಯ ಚೂರು ಕಡೆ ಇದನ್ನು ನಿತ್ಯ ಪಾರಾಯಣ ಮಾಡುವವರು ಇರುವುದರಿಂದ ಮತ್ತು ಆ ಕಡೆ ಇದರ ಪ್ರತಿಗಳು ದೊರೆಯು ವುದರಿಂದ ಕವಿ ಆ ಕಡೆಯವನಿರಬೇಕೆಂದು ಸಂಪಾದಕರು ಹೇಳಿರುತ್ತಾರೆ. ಕವಿಯ ಕಾಲ ೧೯ನೆಯ ಶತಮಾನದ ಆರಂಭವಿರಬಹುದೆಂದು ಅಭಿಪ್ರಾಯ.

ಶ್ರೀ ರಾಘವೇಂದ್ರರಾಯರು ಇದನ್ನು ನಾಲ್ಕು ಹಸ್ತಪ್ರತಿ ಗಳಿಂದ ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ. ವಿಸ್ತೃತ ಪೀಠಿಕೆ ಬರೆದು, ಅದರಲ್ಲಿ ಕಥಾಸಾರ-ಕಾವ್ಯ ವಿಮರ್ಶೆ ಗಳನ್ನು ಕೊಟ್ಟಿದ್ದಾರೆ. ಪಾಠಾಂತರಗಳನ್ನು ಗುರುತಿಸಿ ದ್ದಾರೆ. ಗ್ರಂಥದ ಕೊನೆಗೆ ಶಬ್ದಕೋಶವನ್ನು ಕೊಟ್ಟು ಓದುಗರಿಗೆ ಸೌಲಭ್ಯವೊದಗಿಸಿದ್ದಾರೆ. ಪ್ರೊ. ದೇ.ಜ.ಗೌ. ಅವರು ವಿದ್ವತ್ಪೂರ್ಣವಾದ ಮುನ್ನುಡಿಯಿಂದ ಪುಸ್ತಕ ವನ್ನು ಅಲಂಕರಿಸಿದ್ದಾರೆ.

ಈ ಕಾವ್ಯವಸ್ತು ಭಾಗವತಾಂತರ್ಗತವಾದ ಕುಚೇಲನ ಕಥೆ. ಈ ಕಥೆಯನ್ನು ಶಿವನು 'ಹರಿಕಥೆ' ಎಂದು ಕರೆದಿ ದ್ದಾನೆ. ಇದನ್ನು ಶಿವನು ಪಾರ್ವತಿಗೆ ಹೇಳುವಂತೆ ಇಲ್ಲಿ ತಿಳಿಸಲಾಗಿದೆ. ಇದು ಕೃಷ್ಣಭಕ್ತಿಯ ಕಾವ್ಯ. ವರ್ಣನೆಗೆ ಒಂದು ಉದಾಹರಣವಾಗಿ ಕೃಷ್ಣಸುದಾಮರಿಗೆ ಬಡಿಸಿದ ಭೋಜ್ಯವಸ್ತುಗಳ ವಿವರವನ್ನುಳ್ಳ ಒಂದು ಪದ್ಯವಿದು :

ಅನ್ನಭಕ್ಷ್ಯವು ಸಾರುಹುಳಿ ಕಲ
ಸನ್ನ ಬುತ್ತಿಯು ಬಹುಪರಿಯ ಪರ
ಮಾನ್ನ ಸಂಡಿಗೆ ಹಪ್ಪಳವು ಸಿಹಿಕರಣೆ ಪಳ್ಧ್ಯವನು ॥

ಹೊನ್ನ ಹರಿವಾಣದಲಿ ಬಡಿಸಿದ
ರೆಣ್ಣುರಿಗೆ ಬೀಸುರಿಗೆ ಮಂಡಿಗೆ
ಬೆಣ್ಣೆ ಕಾಸಿದ ತುಪ್ಪ ದಧಿ ಮಧುಕ್ಷೀರ ಸಕ್ಕರೆಯ ॥

ಲಾಕ್ಷಣಿಕ ದೃಷ್ಟಿಯಿಂದ ಈ ಕಾವ್ಯಕ್ಕೆ ಅಷ್ಟೊಂದು ಹಿರಿಮೆ ಸಲ್ಲದಿದ್ದರೂ ಕನ್ನಡದ ಸಾಹಿತ್ಯ ವೈಫಲ್ಯಕ್ಕೆ ನಿದರ್ಶನವಾಗಿದ್ದು ಓದಲರ್ಹವಾಗಿದೆ.

* * *

**ಭವತಿ ಭಿಕ್ಷಾಂದೇಹಿ :** (ಕವನ ಸಂಕಲನ) ಆಕೃತಿ ಕ್ರೌನ್ ೧/೮, ಪುಟ : ೪೮ + ೮ ಬೆಲೆ : ೧–೦೦. ಲೇ. : ಮುಜಿಬೈಲು ಭಾಸ್ಕರ ಭಂಡಾರಿ, ಪ್ರ. : ಸಾಹಿತ್ಯಾಂಜಲಿ ಗ್ರಂಥಮಾಲೆ, ಕೋಟಿಕಾರು, ಮಂಗಳೂರು ದ. ಕ.

ಈ ಸಂಕಲನದ ಕವಿ ಕನ್ನಡ ಸರಸ್ವತಿಯ ಚರಣಕ್ಕೆ ಮಣಿದು ಆಕೆಯಲ್ಲಿ ಭಿಕ್ಷೆ ಬೇಡುವವನೆಂಬ ಭಾವನೆಯಿಂದಲೂ ಮುದ್ದಣ ಕವಿ ಕಲಿಸಿದ ಈ ಸಪ್ತಾಕ್ಷರಿ ಮಂತ್ರವೇ ತನ್ನಂಥವರಿಗೆ ಆಧಾರವೆಂಬ ಕಲ್ಪನೆಯಿಂದಲೂ ಈ ಕವನ ಸಂಕಲನಕ್ಕೆ "ಭವತಿ ಭಿಕ್ಷಾಂದೇಹಿ" ನಾಮವಿಟ್ಟಿರುವಂತೆ ಕಾಣುತ್ತದೆ. ಇಲ್ಲಿನ ಕವನಗಳಲ್ಲಿ ಹೃದಯವನ್ನರಳಿಸತಕ್ಕ ಸಾಹಿತ್ಯಾಭಿಮಾನ, ದೇಶಾಭಿಮಾನ, ಸೇವೆ, ದುಡಿಮೆ, ರಸಿಕತೆ ಮುಂತಾದುವನ್ನು ಭಾವಗರ್ಭಿತ, ವಾಗಿ ಅರ್ಥಪುಷ್ಟಿಯುಕ್ತವಾಗಿ ಪ್ರತಿಪಾದಿಸಲಾಗಿದೆ. ಜಯ ಭಾರತ ಜನನಿ, ಸೋದರ ಸೈನಿಕನಿಗೆ, ಕಾಯಕವೇ ಕೈಲಾಸ ದುಡಿ ಇಲ್ಲವೆ ಮಡಿ, ಊರ ಕಮ್ಮಾರ, ಬಿಂಕದ ಹೆಣ್ಣಿಗೆ, ಇಂದು ನಾಳೆ, ಅಗಲಿದ ಕಾವ್ಯರ್ಷಿಗೆ, ಮಂತ್ರಿಗೆ ಮನವಿ, ಹೃದಯಗೀತ–ಇವು ಉತ್ತಮ ಕವನಗಳೆನ್ನಬಹುದು. ಇವುಗಳಲ್ಲಿ ಕವಿ ಹೃದಯದ ಅಂತಃಸತ್ವವೂ ಭಾವಸ್ಪಂದನಗಳೂ ಕಂಡುಬರುತ್ತಿವೆ. ಇಲ್ಲಿನ ಕೆಲವು ಕವಿತೆಗಳು ಸ್ಪರ್ಧೆಯಲ್ಲಿ ಗೆದ್ದವುಗಳಾಗಿಯೂ ತಿಳಿದುಬರುತ್ತದೆ.

ಛಂದೋಬದ್ಧ ರಚನೆಯಲ್ಲಿ ಈ ಕವಿಗೆ ಸಾಮರ್ಥ್ಯವು ತಕ್ಕಷ್ಟಿದೆ. ಇಲ್ಲಿ ಭಾಮಿನಿ ಷಟ್ಪದಿ, ಕುಸುಮ ಷಟ್ಪದಿ, ವೀರ ಚೌಪದಿ, ರಗಳೆಗಳಲ್ಲಿ ಅಲ್ಲದೆ ನೂತನ ಛಂದೋಲಯಗಳಲ್ಲಿಯೂ ಸಫಲ ಪ್ರಯೋಗ ನಡೆದಿದೆ. ರಚನೆಯಲ್ಲಿ ಪಾರುಷ್ಯವಿಲ್ಲ, ಪದಗಳು ಬಿಡಿ ಬಿಡಿಯಾಗಿ ಭಾವ ಪ್ರಕಟಣೆಗೆ ಸಹಜವಾಗಿವೆ. ಮೇಲುಮಟ್ಟದ ಸಾಹಿತ್ಯ ಪ್ರಕಾಶನಕ್ಕೆ ಹೆಸರಾದ ಸಾಹಿತ್ಯಾಂಜಲಿ ಗ್ರಂಥಮಾಲೆಯವರು ಇದನ್ನು ಪ್ರಕಟಿಸಿರುವುದೂ ಇದರ ಹಿರಿಮೆಗೊಂದು ಜ್ವಲಂತವಾದ ಸಾಕ್ಷಿಯಾಗುತ್ತದೆ. ರಾಷ್ಟ್ರಕವಿ ಗೋವಿಂದ ಪೈಗಳಿಗೆ ಈ ಸಂಕಲನವು ಅರ್ಪಿತವಾಗಿದೆ. ಕವಿ ಬೇಂದ್ರೆಯವರು ಮುನ್ನುಡಿ ಬರೆದಿದ್ದಾರೆ. ಪುಸ್ತಕದ ಮುಖಪತ್ರ ಕಾಗದ, ಮುದ್ರಣ ಎಲ್ಲವೂ ಚೆನ್ನಾಗಿವೆ. ಕನ್ನಡಿಗರೆಲ್ಲರೂ ಮೆಚ್ಚಬಹುದಾದ ಕವನ ಸಂಕಲನ.

* * *

**ಪ್ರಜಾಪ್ರಭುತ್ವದ ಮೂಲ ತತ್ವಗಳು :** ಲೇ. : ಕೆ. ಬಿ. ಬಕ್ಕಪ್ಪ, ಎಂ.ಎ., ಪ್ರ.: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಪುಟ : ೮+೬೨, ಬೆಲೆ : ೦–೨೫ ಪೈಸೆ.

ಕರ್ನಾಟಕ ವಿಶ್ವವಿದ್ಯಾಲಯದ ಪ್ರಚಾರೋಪನ್ಯಾಸ ಗ್ರಂಥಮಾಲೆಯ ಅರವತ್ತನಾಲ್ಕನೆಯ ಪುಸ್ತಕವಿದು. ಇದರಲ್ಲಿ ಪ್ರಜಾಪ್ರಭುತ್ವವೆಂದರೆ ಏನೆಂಬುದನ್ನು ವಿವರಿಸಿ, ಅದರ ಐತಿಹಾಸಿಕ ಹಿನ್ನೆಲೆಯನ್ನೂ, ವಿಧಾನಗಳನ್ನೂ, ಅದರ ಪ್ರಯೋಜನಗಳನ್ನೂ ತಿಳಿಸಲಾಗಿದೆ. ಪ್ರಜಾಪ್ರಭುತ್ವದ ಆವಶ್ಯಕ ತತ್ವಗಳನ್ನೂ ನಿರೂಪಿಸಿ, ಭಾರತದಲ್ಲಿ ಅದರ ಸ್ವರೂಪವೆಂತಹದೆಂಬುದನ್ನು ಲೇಖಕರು ವಿವರಿಸಿದ್ದಾರೆ. ಈಗಿನ ಪ್ರಜಾಪ್ರಭುತ್ವ ಪದ್ಧತಿ ೧೭ನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಹುಟ್ಟಿತೆಂದು, ಪುರಾತನ ಕಾಲದಲ್ಲಿ ಗ್ರೀಸ್ ದೇಶದಲ್ಲಿ ಈ ಪದ್ಧತಿ ಇತ್ತೆಂದು, ಭಾರತದಲ್ಲಿ ವೇದಕಾಲದಲ್ಲಿ ಸಭೆ–ಸಮಿತಿಗಳು ಪ್ರಜಾಪ್ರಭುತ್ವ ಸೂತ್ರಗಳ ಪಾಠವನ್ನು ರಾಜರುಗಳಿಗೆ ಬೋಧಿಸುವ ದೇಗುಲಗಳಾಗಿದ್ದವೆಂದು, ಕೌಟಲ್ಯನು ಪ್ರಜಾಪ್ರಭುತ್ವದ ಆಡಳಿತವಿದ್ದ ರಾಜ್ಯಗಳನ್ನು ಉಲ್ಲೇಖಿಸಿರುವನೆಂದು ಮಾನ್ಯ ಲೇಖಕರು ನಿರೂಪಿಸಿದ್ದಾರೆ.

ಪ್ರಜಾಪ್ರಭುತ್ವದ ವಿಧಾನಗಳೂ ಅವಶ್ಯಕ ತತ್ವಗಳೂ ಋಗ್ವೇದದ ಸೂಕ್ತಗಳಲ್ಲಿ ಕಾಣಿಸುತ್ತವೆ. ಅಲ್ಲಿ ಹೇಳಿರುವ "ಬಹುಪಾಯ್ಯ ಸ್ವರಾಜ್ಯ"ವೇ ಲಿಂಕನ್ ಹೇಳಿರುವ "A government of the people, for the people and by the people" ಎಂಬುದು. ಋಗ್ವೇದದ ಪ್ರಥಮ ಮಂಡಲದ ಎಂಬತ್ತನೆಯ ಸೂಕ್ತವು "ಸ್ವರಾಜ್ಯ ಸೂಕ್ತ" ಪ್ರಜಾತಂತ್ರದ ಸಫಲತೆಗೆ ನಿಯಮಗಳನ್ನು (ಋ. ೫–೬೬–೬) ಈ ಒಂದು ಸೂಕ್ತದಲ್ಲಿ ಹೇಳಿದೆ. ಶಾಸಕರ ಲಕ್ಷಣಗಳನ್ನೂ ಇಲ್ಲಿ ಹೇಳಿದೆ. ಪ್ರಜಾಪ್ರಭುತ್ವದ ಸಫಲತೆಗೆ ಮುಖ್ಯಕಾರಣವು ರಾಷ್ಟ್ರೀಯತೆ ಎಂಬುದರ ವಿವರಣೆಯೂ ವೇದದಲ್ಲಿ ದೊರೆಯುತ್ತದೆ. ಈ ಆಧಾರದಿಂದ ಇಂದಿಗೆ ಹೊಸತೂ ಆಶ್ಚರ್ಯಕರವೂ ಎನಿಸತಕ್ಕ ಭಾರತೀಯ ಪ್ರಾಚೀನ ವಿಚಾರಗಳ ವಿಶ್ಲೇಷಣೆಯನ್ನೂ ಸೇರಿಸಿದ್ದರೆ ಚೆನ್ನಾಗಿತ್ತು. ಇದರಿಂದ ನಮ್ಮ ಜನತೆಗೆ ನಮ್ಮ ಅರಿವೂ ಅಭಿಮಾನವೂ ಆಗುತ್ತಿತ್ತು. ಆದರೂ ಪ್ರಚಲಿತ ವಿಚಾರಗಳನ್ನು ಸರಳವಾಗಿ ಜನತೆಗೆ ತಿಳಿಸುವ ಈ ಪುಸ್ತಕವು ಸ್ವಾಗತಾರ್ಹ.

* * *

**ಹರಿಜನರ ಸಮಸ್ಯೆಗಳು ಹಾಗೂ ಅವುಗಳ ಪರಿಹಾರ:** ಲೇಖಕರು: ಎನ್. ಕೆ. ಕಡೆತೋಟದ, ಎಂ.ಎ. ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಪುಟಗಳು: ೧೦+೩೮; ಬೆಲೆ: ೨೫ ಪೈಸೆ.

ಕರ್ನಾಟಕ ವಿಶ್ವವಿದ್ಯಾಲಯದ ಉಪನ್ಯಾಸ ಗ್ರಂಥ ಮಾಲೆಯಲ್ಲಿ ಅರವತ್ತೆರಡನೆಯ ಪುಸ್ತಕವಾಗಿ ಇದು ಹೊರ ಬಂದಿದೆ. ಮಾನ್ಯ ಲೇಖಕರು ಹರಿಜನರ ಬಗೆಗೆ ಶಾಸ್ತ್ರೀಯ ದೃಷ್ಟಿಯಿಂದ ಅಭ್ಯಾಸಮಾಡಿ, ಏತದ್ವಿಷಯಕವಾಗಿ ಮಾಡಿದ ಉಪನ್ಯಾಸವೇ ಈ ಪುಸ್ತಕದ ಸಾಹಿತ್ಯವಸ್ತು. ಇದರಲ್ಲಿ ನಮ್ಮ ಭಾರತದ ವಿವಿಧ ಪಂಗಡಗಳಾಗಿರುವ ಹರಿಜನರ ಸ್ಥೂಲ ಪರಿಚಯವನ್ನು ಕೊಟ್ಟಿದ್ದಾರೆ. ಅಸ್ಪೃಶ್ಯತಾ ನಿವಾರಣೆ ಹರಿಜನೋದ್ಧಾರಗಳನ್ನು ಮಾಡಿದವರಲ್ಲಿ ಮಹಾತ್ಮಾ ಬಸವಣ್ಣನವರನ್ನೂ ಮಹಾತ್ಮ ಗಾಂಧಿಯವರನ್ನೂ ಉಲ್ಲೇಖಿಸಿದ್ದಾರೆ. ಆರ್ಯಸಮಾಜ ಸ್ಥಾಪಕ ಶ್ರೀ ದಯಾನಂದ ಸರಸ್ವತಿಯವರ ಕಾರ್ಯವು ಈ ದಿಶೆಯಲ್ಲಿ ಅನನ್ಯವಾದುದರಿಂದ ಅದನ್ನೂ ಈ ಸಂದರ್ಭದಲ್ಲಿ ವಿವರಿಸಬಹುದಾಗಿತ್ತು. ಮುಂದಿನ ಪುಟಗಳಲ್ಲಿ ಹರಿಜನರ ಸಮಸ್ಯೆಗಳು, ಅವರ ಆಹಾರ—ವಿಹಾರ, ನಡತೆಗಳು, ಜೀವನಕ್ರಮ ಮುಂತಾದುವನ್ನೆಲ್ಲಾ ಪ್ರಸ್ತಾಪಿಸಿ, ಮತಾಚಾರ - ಸಂಸ್ಕೃತಿಗಳಲ್ಲಿ ಅವರು ಹೇಗೆ ಹಿಂದುಳಿದ ಹಿಂದುಗಳೇ ಆಗಿರುವರೆಂಬುದನ್ನು ವಿವರಿಸಿರುತ್ತಾರೆ. ಅವರ ಸಮಸ್ಯೆಗಳಿಗೆ ಸಾಮಾಜಿಕ, ರಾಜಕೀಯ ಮತ್ತು ಮಾನಸಿಕ ವಿಧಗಳಲ್ಲಿ ಪರಿಹಾರವನ್ನೂ ನಿರೂಪಿಸಿದ್ದಾರೆ.

* * *

**ಶ್ರೀಶೈಲ ಪೀಠದರ್ಶನ:** ಶ್ರೀ ಜ. ಚ. ನಿ. ಮತ್ತು ಇತರ ಲೇಖಕರು. ಪ್ರಕಾಶಕರು: ಶ್ರೀ ಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ೪೯, ಹ. ಬ. ಸಮಾಜ ರಸ್ತೆ, ಬಸವನಗುಡಿ, ಬೆಂಗಳೂರು-೪. ಆಕೃತಿ ಡೆಮ್ಮಿ ೧/೮; ಪುಟಗಳು: ೮ ೩೩೩ ೨೫; ಬೆಲೆ: ಸಾದಾಪ್ರತಿ ರೂ. ೫-೦೦; ಉತ್ತಮಪ್ರತಿ ರೂ. ೭-೫೦.

ಪುರಾಣಪ್ರಸಿದ್ಧ ಸಪ್ತಶೈಲಗಳಲ್ಲಿ ಒಂದಾಗಿರುವ ಶ್ರೀಶೈಲದ ಚರಿತ್ರೆ ಬಹಳ ಪ್ರಾಚೀನತೆಯುಳ್ಳದು. ಮಹಾಭಾರತ, ಸ್ಕಾಂದ ಪುರಾಣಗಳಲ್ಲಿ ಶ್ರೀಶೈಲದ ಪ್ರಶಂಸೆ ಇದೆಯೆನ್ನಲಾಗಿದೆ. ಕ್ರಿ.ಶ. ಒಂದನೆಯ ಶತಮಾನದಿಂದ ಇಲ್ಲಿ ಶೈವ ಸಂಪ್ರದಾಯ ಬೆಳೆದುಬಂದಿದೆ. ಕ್ರಿ.ಶ. ಏಳನೆ ಶತಮಾನದಲ್ಲಿ ಶ್ರೀ ಶಂಕರಾಚಾರ್ಯರು ಇಲ್ಲಿಗೆ ಬಂದುದೂ ವಿದಿತವಿದೆ. ಇಲ್ಲಿನ ಶ್ರೀ ಮಲ್ಲಿಕಾರ್ಜುನ ಲಿಂಗೋದ್ಭವರೆನ್ನಲಾದ ಜಗದ್ಗುರು ಪಂಡಿತಾರಾಧ್ಯರಿಂದ ಸ್ಥಾಪಿತವಾದ ಸೂರ್ಯ ಸಿಂಹಾಸನದ ಧಾರ್ಮಿಕ ಪೀಠದ ಆಚಾರ್ಯ ಪರಂಪರೆಯವರು ಪವಾಡವೆಸಗಿದವರೂ ರಾಜಪೂಜಿತರೂ ಲೋಕ ಕಲ್ಯಾಣ ಸಾಧಕರೂ ಆಗಿದ್ದರು. ಶ್ರೀಶೈಲಪೀಠವು ನಮ್ಮ ದೇಶದ ಪ್ರತಿಯೊಂದು ಶಿವಕ್ಷೇತ್ರಕ್ಕೆ ಮತ್ತು ಶಿವತತ್ವಾವಲಂಬಿ ಜನತೆಗೆ ಮೂಲಸಂಬಂಧವುಳ್ಳದಾಗಿ ತೋರುತ್ತದೆ. ಜಾತಿ-ಮತಭೇದಗಳನ್ನು ಲೆಕ್ಕಿಸದೆ ಗುಣಗ್ರಹಣಶೀಲದಿಂದ ಸಂಪನ್ನವಾದ ಈ ಗುರುಪೀಠದ ಇಂದಿನ ಸ್ವಾಮಿಗಳಾಗಿರುವ ಶ್ರೀ ಜಗದ್ಗುರು ಚನ್ನಬಸವ ದೇಶಿಕೇಂದ್ರರು (ಶ್ರೀ ಜ. ಚ. ನಿ. ಅವರು) ಅಧ್ಯಾತ್ಮ ಸಾಹಿತ್ಯ ಎಂಬೆರಡನ್ನೂ ಬೆಳಗಿಸಿ ಬೆಳೆಸಿಕೊಂಡು ಬಂದವರು. ಶ್ರೀಗಳವರ ಸಾಹಿತ್ಯ ರಚನೆಯಂತೂ ಸಂಖ್ಯಾಶತಕ ಸಮೀಪವನ್ನೆಯ್ದಿದೆ. ಶ್ರೀಗಳವರು ಧರ್ಮಸಿಂಹಾಸನವೇರಿ ಇಪ್ಪತ್ತೈದು ವರ್ಷಗಳಾದ ಮಧುರ ಸ್ಮೃತಿಗಾಗಿ ೧೯೬೭ನೆಯ ಏಪ್ರಿಲ್‌ನಲ್ಲಿ ಆಚರಿಸಿದ ರಜತಮಹೋತ್ಸವವು ಕನ್ನಡಿಗರ ಸ್ಮೃತಿಪಟದಲ್ಲಿ ಅಚ್ಚಳಿಯದೆ ನಿಲ್ಲತಕ್ಕವು. ಈ ಸಂದರ್ಭದಲ್ಲಿ "ದಾಸೋಹ" ಮತ್ತು "ಜೀವನ ಸಿದ್ಧಾಂತ" ಎಂಬೆರೆಡು ಗ್ರಂಥಗಳ ಉದ್ಘಾಟನೆ ಆಗಿದೆ. ಹಿಂದು ಸಮಾಜದ ನಾನಾ ಕ್ಷೇತ್ರಗಳಲ್ಲಿ ಸ್ತುತ್ಯಸೇವೆ ಸಲ್ಲಿಸಿದ ಇಪ್ಪತ್ತೈದು ಮಂದಿ ಮಹಾವ್ಯಕ್ತಿಗಳಿಗೆ ಶ್ರೀಗಳವರ ವರಹಸ್ತದಿಂದ ಸುವರ್ಣ ಪದಕಗಳೂ ನಾಮಪ್ರಶಸ್ತಿಗಳೂ ಸಂದಿರುತ್ತವೆ. ಇಂತಹ ಸಮಕಾಲಿಕ ಸಂಗತಿಗಳಿಗಿಂತ ಮುಖ್ಯವಾಗಿ ಶ್ರೀಶೈಲ ಪೀಠದ ಇತಿಹಾಸ ಸಂಶೋಧನೆಗಳನ್ನುಳ್ಳ ಸುಂದರ ಪರಿಚಯದ ಒಂದು "ಬೆಳ್ಳಿಯ ಹಬ್ಬದ ಸ್ಮರಣ ಸಂಪುಟ"ವಾಗಿ "ಶ್ರೀ ಶೈಲ ಪೀಠದರ್ಶನ" ಎಂಬೀ ಗ್ರಂಥವು ಪ್ರಕಟವಾಗಿ ಪಾಠಕರ ಕರಪೀಠವನ್ನು ಸೇರಿದೆ.

ಶ್ರೀ ಜ. ಚ. ನಿ. ಅವರು, ಪ್ರೊ. ಎಸ್. ಕೆ. ರಾಮಚಂದ್ರರಾಯರು, ಶ್ರೀ ಎಂ. ಜಿ. ನಂಜುಂಡಾರಾಧ್ಯರು, ಶ್ರೀ ಬಂಡಾರು ತಮ್ಮಯ್ಯನವರು, ಶ್ರೀ ಅರುಲಯ್ಯ ದೀಕ್ಷಿತರು, ಶ್ರೀ ಓ. ಎನ್. ಲಿಂಗಣ್ಣಯ್ಯ, ಶ್ರೀ ಎಚ್. ಗಂಗಾಧರನ್-ಅವರ ಬಹುಮೂಲ್ಯವಾದ ಸಂಶೋಧಕ-ವಿವರಣಾತ್ಮಕ ಲೇಖನಗಳಿಂದ ಗ್ರಂಥವು ಸೊಗಸಾಗಿದೆ. ಶ್ರೀ ಶ್ರೀನಿವಾಸ ಕೊರಟಿಯವರು ಬರೆದ ನಿಡುಮಾಮಿಡಿ ಸ್ವಾಮಿಗಳ ಒಂದು ಐತಿಹಾಸಿಕ ಕಥೆಯನ್ನೂ ಇದರಲ್ಲಿ ಕೊಡಲಾಗಿದೆ. ಗ್ರಂಥಾರಂಭದಲ್ಲಿ ಕವಿ "ಅಮರವಾಣಿ" ವಿರಚಿತ "ಪಂಡಿತಾರಾಧ್ಯ ಸುಪ್ರಭಾತ" ಪುಣ್ಯಾಸ್ತವವಿದೆ. ಶ್ರೀಶೈಲದ ಮೂರ್ತಿ ಶಿಲ್ಪಗಳ ಚಿತ್ರಗಳನ್ನು ಕೊಟ್ಟಿರುವುದರಿಂದ ಕೆಲಮಟ್ಟಿಗೆ ಶ್ರೀಶೈಲದ ಪ್ರತ್ಯಕ್ಷ ದರ್ಶನವೇ ಈ ಗ್ರಂಥದಿಂದ ಆಗುವಂತಿದೆ.

ವಿವಿಧ ವಿದ್ವಾಂಸರ ಒಳ್ಳೆಯ ಲೇಖನಗಳು, ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಗಳ ಮುನ್ನುಡಿ, ಸಚಿತ್ರ ವಿವರಣೆಗಳು, ರಜತ ಮಹೋತ್ಸವದ ಪರಿಚಯ, ಪ್ರಶಸ್ತಿ ಪಡೆದ ವ್ಯಕ್ತಿಗಳ ಭಾವ ಚಿತ್ರಗಳು, ಸುಂದರ ಮುಖಪತ್ರ, ಮುದ್ರಣ ಇತ್ಯಾದಿಗಳಿಂದ ಗ್ರಂಥವು ಮನೋಜ್ಞವಾಗಿದೆ.

* * *

**ಕವಿಚಕ್ರವರ್ತಿ ಸುರಂಗಕೃತ ತ್ರಿಷಷ್ಠಿ ಪುರಾತನ ಚಾರಿತ್ರಂ:** ಸಂಪಾ. : ಡಾ|| ಆರ್. ಸಿ. ಹಿರೇಮಠ, ಎಂ.ಎ.,ಪಿ.ಹೆಚ್ ಡಿ, ಪ್ರ. : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಆಕೃತಿ ಡೆಮ್ಮಿ ೧/೮, ಪುಟ : ೩೪೦+೮೩೧, ಬೆಲೆ : ರೂ. ೧೦–೦೦

ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಾಶನದ ಕನ್ನಡ ಕಾವ್ಯ ಮಾಲೆಯಲ್ಲಿ ಐದನೆಯ ಪುಷ್ಪವಾಗಿ ಪ್ರಕಟವಾಗಿರುವ ಒಂದು ಮಹಾ ಚಂಪೂಕಾವ್ಯವಿದು. ಈ ಕಾವ್ಯ ವಸ್ತುವಿನಲ್ಲಿ ಪಾತ್ರರಾಗಿರುವ ತ್ರಿಷಷ್ಠಿ (ಅರುವತ್ತಮೂವರು) ಪುರಾತನರು ಕ್ರಿ. ಶ. ಸುಮಾರು ಐದನೆಯ ಶತಮಾನದಿಂದ ಒಂಬತ್ತನೆಯ ಶತಮಾನದ ಅವಧಿಯಲ್ಲಿ ತಮಿಳುನಾಡಿನಲ್ಲಿ ಬಾಳಿ ಬೆಳಗಿ, ಶೈವಮತದ ಉನ್ನತಿಗೆ ಕಾರಣರಾದವರು. ಈ ಚಾರಿತ್ರವು ಮೊದಲು ಕಾಣಿಸಿರುವುದು ತಮಿಳು ಗ್ರಂಥಗಳಾದ "ತಿರುತ್ತೊಂಡತ್ತೊಗೈ" ಮತ್ತು "ಪೆರಿಯ ಪುರಾಣ"ಗಳಲ್ಲಿ ಎಂದು ಮಾನ್ಯ ಸಂಪಾದಕರು ವಿವರಿಸಿದ್ದಾರೆ.

ಈ ಮಹಾಕಾವ್ಯ ಕರ್ತೃವು ವೀರಶೈವ ಕವಿಗಳಲ್ಲಿ ಕವಿಚಕ್ರವರ್ತಿ ಬಿರುದನ್ನು ಪಡೆದವರಲ್ಲಿ ಏಕೈಕನೆನಿಸಿದ ಸುರಂಗನು; "ವಸ್ತುಕ ವರ್ಣಕ ಕವಿಜನ ಕರ್ಣಾಭರಣ"ನು. ಇವನ ಕಾಲ ಕ್ರಿ. ಶ. ಹದಿನೈದನೆಯ–ಹದಿನಾರನೆಯ ಶತಮಾನವಿರಬಹುದೆಂದು ಸಕಾರಣವಾಗಿ ತರ್ಕಿಸಲಾಗಿದೆ. ಕವಿ ಹೇಳಿರುವಂತೆ ಈ ಕಾವ್ಯವಸ್ತು ಲೈಂಗ್ಯ ಪುರಾಣದಿಂದ ಆಯ್ದುದು. ಅಲ್ಲಿ ಉಪಮನ್ಯು ಕಣಾದನಿಗೆ ವಿವರಿಸಿದುದನ್ನು ಇಲ್ಲಿ ಕವಿ ಹೇಳಿರುತ್ತಾನೆ.

ಅರವತ್ತಮೂರು ಆಶ್ವಾಸಗಳಿಂದ ೩೧೯೯ ಕಂದ ವೃತ್ತಾದಿ ಪದ್ಯ–ಗದ್ಯ ಭಾಗಗಳಿಂದ ಕೂಡಿದ ಈ ಕಾವ್ಯವು ಸುರಮ್ಯವಾದ ನಾಟಕೀಯತೆಯಿಂದ ಕೂಡಿದೆ. ಇದರಲ್ಲಿ ಕವಿಪ್ರತಿಭೆಯನ್ನುಳ್ಳ ಕಥನಕಲೆ ಅಡಕವಾಗಿದೆ. ಅಷ್ಟಾದಶ ವರ್ಣನೆಗಳನ್ನು ಕವಿಯು ಔಚಿತ್ಯವರಿತು ಹಿತವಾಗಿ ಮಿತವಾಗಿ ಪ್ರಯೋಗಿಸಿದ್ದಾನೆ. ಕವಿ ಅದ್ಭುತ ಪಾಂಡಿತ್ಯವುಳ್ಳವನಾದರೂ ಪಾಂಡಿತ್ಯ ಪ್ರದರ್ಶನಕ್ಕಾಗಿ ಬಂಧವನ್ನು ಬಿಗುಪುಮಾಡಿಲ್ಲ. ಇದು ಭಕ್ತಿಪ್ರಧಾನವಾದ ಕಾವ್ಯ. ಶೈವಭಕ್ತಿರಸಪೂರಿತ ಕಾವ್ಯೋದ್ದೇಶದಲ್ಲಿ ಸುರಂಗಕವಿ ಹರಿಹರನನ್ನು ಅನುಸರಿಸಿದ್ದಾನೆ. ಶಿವನೇ ಇಲ್ಲಿ ಮುಖ್ಯ ಪಾತ್ರವೆನ್ನಬಹುದು. ಪುರಾತನರ ಭಕ್ತಿ ಪರೀಕ್ಷೆಗಾಗಿ ಮಾಡಿದ ಆತನ ಲೀಲೆಯೇ ಇದರಲ್ಲಿ ಅಧಿಕ. ಇದರಿಂದ ಕವಿಯು ದೇವಲೋಕ ಮರ್ತ್ಯಲೋಕಗಳನ್ನು ಭಕ್ತಿಯ ನಿಚ್ಚಣಿಕೆಯಿಂದ ಒಂದುಗೂಡಿಸಿದ್ದಾನೆ ಎನ್ನಬಹುದು.

ಈ ಮಹಾ ಕಾವ್ಯವನ್ನು ಡಾ|| ಹಿರೇಮಠರು ಎರಡೂವರೆ ಮೂಲ ಪ್ರತಿಗಳ ಸಹಾಯದಿಂದ ಸಂಪಾದನೆ ಮಾಡಿ, ಶಾಸ್ತ್ರೀಯವಾಗಿ ಸಂಸ್ಕರಿಸಿ ನಮ್ಮ ಮುಂದಿಟ್ಟಿದ್ದಾರೆ. ಸ್ವೀಕಾರಾರ್ಹವೆನಿಸುವ ಪಾಠವನ್ನು ಇಟ್ಟುಕೊಂಡು, ಪಾಠಾಂತರಗಳನ್ನು ಅಡಿಯಲ್ಲಿ ಕೊಟ್ಟಿದ್ದಾರೆ. ವಿಸ್ತಾರವಾಗಿ ಸಮರ್ಪಕವಾಗಿ ಸಂಶೋಧಾತ್ಮಕವಾಗಿ ೩೩೬ ಪುಟ ಪರಿವಿಡಿಯು ಪ್ರಸ್ತಾವನೆಯಲ್ಲಿ ತ್ರಿಷಷ್ಟಿ ಪುರಾತನರ ಪರಿಚಯ, ಕವಿ ಕಾವ್ಯ ವಿಚಾರ, ಕಥಾಸಾರ–ಮುಂತಾದುವನ್ನು ವಿವರವಾಗಿ ಕೊಟ್ಟು ಗ್ರಂಥ ವ್ಯಾಸಂಗಕ್ಕೂ ಗ್ರಂಥದ ಮೂಲ್ಯಮಾಪನಕ್ಕೂ ತಕ್ಕ ಅನುವು ಮಾಡಿಕೊಟ್ಟಿದ್ದಾರೆ. ಗ್ರಂಥದ ಕೊನೆಗೆ ೮೩ ಪುಟ ಗಾತ್ರದ ಪರಿಶಿಷ್ಟವಿದೆ. ಇಲ್ಲಿ ಪದ್ಯಾರಂಭಸೂಚಿ, ಶಬ್ದಾರ್ಥ, ಪಾಠವಿವೇಚನೆ, ಒಪ್ಪೋಲೆ ಸಂದರ್ಭ ಗ್ರಂಥಗಳು–ಮುಂತಾದವನ್ನೆಲ್ಲ ನಿರೂಪಿಸಿದ್ದಾರೆ. ಇಷ್ಟೊಂದು ಯೋಗ್ಯ ರೀತಿಯಲ್ಲಿ ಈ ಉದ್ಗ್ರಂಥವನ್ನು ರೂಪಿಸಿರುವ ಮಾನ್ಯ ಸಂಪಾದಕರೂ ಇದನ್ನು ಪ್ರಕಟಿಸಿರುವ ಪ್ರಕಾಶನಾಧಿಕಾರಿಗಳೂ ಕಾವ್ಯ ಸಾಹಿತ್ಯವನ್ನು ಮೆಚ್ಚತಕ್ಕ ಕನ್ನಡಿಗರಿಗೆಲ್ಲ ಚಿರಕೃತಜ್ಞರು. ಗ್ರಂಥದ ಮುಖಪತ್ರ, ಕಾಗದ, ಮುದ್ರಣಗಳೆಲ್ಲವೂ ಚೆನ್ನಾಗಿವೆ. ಸಾಹಿತ್ಯದ ಬೆಲೆ ಹೆಚ್ಚಾಗಿದ್ದರೂ ಗ್ರಂಥದ ಬೆಲೆ ಹೆಚ್ಚಾಗಿಲ್ಲ.

ಶಬ್ದ ಸೌಂದರ್ಯ ಅರ್ಥಸೌಂದರ್ಯಗಳಿಂದ ರಮ್ಯವಾಗಿ, ಅಲಂಕಾರಯುಕ್ತ ವರ್ಣನೆಗಳಿಂದ ಮೋಹಕವಾಗಿ, ಭಕ್ತಿಜ್ಞಾನ ಬೋಧಕ ಸನ್ನಿವೇಶಗಳಿಂದ ಗ್ರಾಹ್ಯವಾಗಿ, ಉದಾತ್ತ ವಿಚಾರಗಳಿಂದ ಸೇವ್ಯವಾಗಿ, ಮನಸ್ಸಿಗೆ ಶಿವಸಂಸ್ಕಾರಗಳನ್ನುಂಟುಮಾಡುವುದರಿಂದ ಸಂಪೂಜ್ಯವಾಗಿ ರಂಜಿಸುವ ಕಾವ್ಯವೆಂದು ನಿರ್ಣಯಿಸಬಹುದು.

**ಟಿ. ಕೇಶವಭಟ್ಟ**

# ಸ್ತ್ರೀ ಕಾ ರ

## ಕಾದಂಬರಿ

ತಂಗಿಯ ಕಾಣಿಕೆ; ಲೇ: ಸುನೀತಿ ಉದ್ಯಾವರ್; ಪ್ರ: ಶ್ರೀ ಪ್ರಸಾದ ಪ್ರಕಾಶನ, ಮನುವನ, ಬೆಂಗಳೂರು-೨೩; ಪುಟ: ೧೭೬, ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೦೦, ೧೯೬೯.

ಕೆಂಪುತ್ರಿಕೋನ ಮತ್ತು ಅಜ್ಞಾತ; ಲೇ: ಡಿಸೋಜ, ನಾ; ಪ್ರ: ರವೀಂದ್ರ ಪುಸ್ತಕ ಭಂಡಾರ, ಕಾರ್ಗಲ್, ಶಿವಮೊಗ್ಗ ಜಿಲ್ಲೆ; ಪುಟ: ೧೭೮; ೧೨೦ (೨ ಪುಸ್ತಕಗಳು ಸೇರಿವೆ); ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೮-೦೦, ೧೯೬೮.

ನುಡಿಯೇ ದೇವರ ಪೂಜೆ; ಲೇ: ಮಲ್ಲರಾಜು ಅರಸು, ಬಿ; ಪ್ರ: ಮೋಹನ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು-೪; ಪುಟ: ೧೦+೧೦೮; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೦೦, ೧೯೬೮.

ಸಂನ್ಯಾಸಿ; ಲೇ: ಸೀತಾರಾಮಯ್ಯ, ಎಂ. ಕೆ; ಪ್ರ; ಮೋಹನ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು-೪; ಪುಟ: ೪೧೬; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೬-೦೦, ೧೯೬೯.

## ಕಥಾಸಂಕಲನ

ರತ್ನಗರ್ಭಾ ವಸುಂಧರಾ; ಲೇ: ಮಲ್ಲಿಕಾ; ಪ್ರ: ಲಕ್ಷ್ಮೀ ಪ್ರಕಾಶನ, ನಂ. ೭, ಲ್ಯಾಂಗ್‌ಫೋರ್ಡ್ ರಸ್ತೆ, ಬೆಂಗಳೂರು-೨೫; ಪುಟ: ೨೫೭; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೪-೦೦, ೧೯೬೮.

ಬಹುರತ್ನಾ ವಸುಂಧರಾ; ಲೇ: ಮಲ್ಲಿಕಾ; ಪ್ರ: ಲಕ್ಷ್ಮೀ ಪ್ರಕಾಶನ, ಲ್ಯಾಂಗ್ ಫೋರ್ಡ್ ರಸ್ತೆ, ಬೆಂಗಳೂರು-೨೫; ಪುಟ: ೨೪೨, ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೪-೦೦, ೧೯೬೮.

ಉಡುಗೊರೆ; ಲೇ: ದಯಾನಂದ ತೊರ್ಕೆ; ಪ್ರ: ಅಜಂತ ಸಾಹಿತ್ಯ, ೧೧೦, ಮಹಾರಾಷ್ಟ್ರ ಮಹಿಳಾ ವಿದ್ಯಾಲಯ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು-೪; ಪುಟ: ೧೦೨; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೦-೫೦, ೧೯೬೯.

## ಪ್ರಬಂಧ

ದಿಟ್ಟಿಸಿ ನೋಡಿದರೆ; ಲೇ: ಸಿಂಪಿ ಲಿಂಗಣ್ಣ; ಪ್ರ: ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ವಿಜಾಪುರ ಜಿಲ್ಲೆ; ಪುಟ: ೧೩+೯೮+೨; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೫೦, ೧೯೬೮.

ನೈವೇದ್ಯ; ಸಂಪಾದಕರು: ವಿರೂಪಾಕ್ಷಗೌಡ ಕೆ. ಮತ್ತು ಲದಾಫ್ ಹಕೀಂ ಸಾಹೇಬ್; ಪ್ರ. ಶ್ರೀ ಕೊಟ್ಟೂರೇಶ ಪ್ರಕಾಶನ, ಹಗರಿಬೊಮ್ಮನಹಳ್ಳಿ ಪೋಸ್ಟ್, ಬಳ್ಳಾರಿ ಜಿಲ್ಲೆ; ಪುಟ: ೮೯; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೫೦, ೧೯೬೯.

## ಕವನ

ಭಾವಸೌರಭ; ಲೇ: ದಾನಪ್ಪ ಜತ್ತಿ; ಪ್ರ: ಶಾರದಾಂಬ ಸಾಹಿತ್ಯ ಮಂದಿರ, ತಿಕೋಟಾ, ವಿಜಾಪುರ ಜಿಲ್ಲೆ; ಪುಟ: ೪೩; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೦೦, ೧೯೬೯.

ಪ್ರವಾಸ; ಲೇ: ಮರುಳಸಿದ್ದಯ್ಯ, ಎಚ್. ಎಂ; ಪ್ರ: ಕಾದಂಬರಿ ಪ್ರಕಾಶನ, ಧಾರವಾಡ; ಪುಟ: ೧೪+೭೬; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೦೦, ೧೯೬೮.

ಸಂಗಮ; ಲೇ: ವಿವಿಧ ಲೇಖಕರು; ಪ್ರ: ಶ್ರೀ ಬಸವ ಸಮಿತಿ, ಬೆಂಗಳೂರು-೯; ಪುಟ: ೪+೭೩; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೨೫, ೧೯೬೯.

ಭಾವಪೂಜೆ; ಲೇ: ಶಂಕರ ಬಿ, ಮೋಟಗಿ; ಪ್ರ: ಎಸ್. ಡಿ. ಮೋಟಗಿ, ಕರ್ನಾಟಕ ಹೈಸ್ಕೂಲ, ಹಿರೇಬಾಗೇವಾಡಿ, ಪುಟ: ೩೯; ಬೆಲೆ: ರೂ. ೧-೫೦, ೧೯೬೯.

ಕನ್ನಡ ಕಾವ್ಯ ಕಾವೇರಿ; ಲೇ: "ಸುಧಾಪ್ರಿಯ" ಪ್ರ: ವೇಣುಗೋಪಾಲ, ಆರ್ಯಕಲಾಸಂಘ, ಚಿಕ್ಕಪೇಟೆ, ತುಮಕೂರು; ಪುಟ: ೫೨; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೦೦, ೧೯೬೯.

## ಯಕ್ಷಗಾನ

ಖರಾಸುರವಧೆ; ಲೇ: ಶಂಕರನಾರಾಯಣ ಭಟ್ಟ ಕೆ.; ಪ್ರ: ಆದರ್ಶ ಪ್ರೆಸ್, ಪುತ್ತೂರು (ದ.ಕ.); ಪುಟ: ೬೭+೨;

ಆಕಾರ : ಕ್ರೌನ್ ಅಷ್ಟದಳ; ಬೆಲೆ : ರೂ. ೧-೨೫, ೧೯೬೯.

ಚಂದ್ರಹಾಸ ಚರಿತೆ; ಲೇ: ವಾಸುದೇವ ಪ್ರಭು ಎಂ.; ಪ್ರ: ವಿಜಯ ಸಾಹಿತ್ಯ ಮಾಲೆ, ಸುರತ್ಕಲ್ಲು (ದ.ಕ.); ಪುಟ: ೨೦; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೦-೫೦, ೧೯೬೯.

ಶ್ರೀ ಪದ್ಮಾವತಿ ದೇವೀ ಮಹಾತ್ಮ್ಯೆ ಅಥವಾ ಜಿನದತ್ತ ರಾಯನ ಚರಿತ್ರೆ; ಲೇ: ವಾಸುದೇವನಾಯಕ್ ಯು.: ಪ್ರ: ಎಂ. ಡಿ. ಅಧಿಕಾರಿಗಳು ಮ್ಯಾನೇಜರ್, ವರಂಗಮಠ; ಪುಟ: ೨೪+೬೮; ಬೆಲೆ: ರೂ. ೧-೨೫, ೧೯೬೯.

## ವಿಮರ್ಶೆ

ಅಶ್ವಾರೂಢ ಬಸವೇಶ್ವರ; ಲೇ: ಚನ್ನಪ್ಪಗೌಡ ಮಾಸ್ತರ ಯಲಬುರ್ಗಿ, ಪ್ರ: ಬಸವ ತತ್ವ ಪ್ರಚಾರ ಸಮಿತಿ, ಯಲಬುರ್ಗಿ, ಪುಟ: ೧೦+೧೩೭, ಆಕಾರ: ಕ್ರೌನ್ ಅಷ್ಟದಳ, ಬೆಲೆ: ರೂ. ೧-೫೦, ೧೯೬೯.

## ನಾಟಕ

ತಬ್ಬಲಿ; ಲೇ: ನಾ. ಡಿಸೋಜ; ಪ್ರ: ರವೀಂದ್ರ ಪುಸ್ತಕ ಭಂಡಾರ; ಕಾರ್ಗಲ್, ಶಿವಮೊಗ್ಗ ಜಿಲ್ಲೆ; ಪುಟ: ೨೪+೩೯; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೦೦, ೧೯೬೮.

ತಾರಾಮಂಡಲ; ಲೇ: ಮೂರ್ತಿ ಎಂ. ಎಸ್.; ಪ್ರ: ರವೀಂದ್ರ ಪುಸ್ತಕ ಭಂಡಾರ, ಕಾರ್ಗಲ್, ಶಿವಮೊಗ್ಗ ಜಿಲ್ಲೆ; ಪುಟ: ೩೦; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೦೦, ೧೯೬೮.

ನಾಡಪ್ರೇಮಿ; ಲೇ: ಮೂರ್ತಿ ಎಂ. ಎಸ್.; ಪ್ರ: ರವೀಂದ್ರ ಪುಸ್ತಕ ಭಂಡಾರ, ಕಾರ್ಗಲ್, ಶಿವಮೊಗ್ಗ ಜಿಲ್ಲೆ ಪುಟ: ೪೦; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೦೧, ೧೯೬೮.

## ವಚನ ಸಾಹಿತ್ಯ

ಬಸವನ ಬಟ್ಟೆ; ಲೇ: ಪಾವಟೆ ಸಿದ್ದರಾಮಪ್ಪ ದುಂ. ಪ್ರ: ಲಿಂಗ ಸಾಹಿತ್ಯ ಪ್ರಕಾಶನ, ಮೂರುಸಾವಿರ ಮಠದ ನೆರೆ, ಹುಬ್ಬಳ್ಳಿ; ಪುಟ: -೭+೧೬; ಆಕಾರ; ಕ್ರೌನ್ ಅಷ್ಟದಳ; ಬೆಲೆ; ರೂ. ೧-೦೦, ೧೯೬೯.

ಆಚರಣ ತ್ರಿವಿಧಿ; ಲೇ: ಶ್ರೀ ಜ. ಚ. ನಿ.; ಪ್ರ: ಶ್ರೀ ಶಿವಾದ್ವೈತ ತತ್ವ ಪ್ರಚಾರ ಕೇಂದ್ರ, ಗಿರಿಯಪುರ, ಚಿಕ್ಕ ಮಗಳೂರು ಜಿಲ್ಲೆ; ಪುಟ: ೧೧೬; ಬೆಲೆ: ರೂ. ೦-೫೦, ೧೯೬೯.

ಭಕ್ತ ಭೂಮಿಕೆ; ಲೆ: ಶ್ರೀ ಜ. ಚ. ನಿ.; ಪ್ರ: ಶ್ರೀ ಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ೪೯, ಹ. ಬ. ರಸ್ತೆ, ಬಸವನಗುಡಿ, ಬೆಂಗಳೂರು-೪; ಪುಟ: ೩೭+೪; ಬೆಲೆ: ೦-೫೦, ೧೯೬೮.

ಶ್ರೀ ಶರಣ ಬಸವೇಶ್ವರ ಪುರಾಣ; ಲೇ: ಕವಿತಿಲಕ ಗುರುಲಿಂಗ ಸಿದ್ದಕವಿ; ಪ್ರ: ಶರಣ ಬಸವೇಶ್ವರ ಸಂಸ್ಥಾನ ಶರಣ ನಗರ, ಗುಲ್ಬರ್ಗ; ಪುಟ: ೧೨+೪೩+೧೭೯; ಬೆಲೆ: ರೂ. ೬-೦೦, ೧೯೬೯.

## ಜೀವನ ಚರಿತ್ರೆ

ಪ್ರಫುಲ್ಲ ಚಂದ್ರರಾಯ್; ಲೇ: ಸುಬ್ರಹ್ಮಣ್ಯಂ ಸೂ. ಪ್ರ: ವಿಜ್ಞಾನ ಪ್ರಕಾಶನ, ಭಕ್ತವತ್ಸಲಂ ನಗರ, ಮದರಾಸು-೨೦; ಪುಟ: ೧೨+೧೭೬; ಆಕಾರ ಕ್ರೌನ್ ಅಷ್ಟದಳ; ಬೆಲೆ: ರೂ. ೩-೫೦, ೧೯೬೮.

## ಚಂದಾದಾರರಲ್ಲಿ ಒಂದು ಸೂಚನೆ

'ಕನ್ನಡ ನುಡಿ' ಪತ್ರಿಕೆಯು ತಮ್ಮ ಕೈಸೇರುತ್ತಿಲ್ಲವೆಂಬ ದೂರು ಅನೇಕ ಚಂದಾದಾರರಿಂದ ಕಚೇರಿಗೆ ಬರುತ್ತಿವೆ. ಸಂಚಿಕೆಯು ಆಯಾ ತಿಂಗಳ ಐದನೇ ತಾರೀಖಿನ ಒಳಗೆ ಮಾನ್ಯ ಗ್ರಾಹಕರ ಕೈಸೇರದಿದ್ದ ಪಕ್ಷದಲ್ಲಿ ಅವರು ಸಂಬಂಧಪಟ್ಟ ಪೋಸ್ಟ್ ಆಫೀಸಿನಲ್ಲಿ ವಿಚಾರಿಸಿ ಅನಂತರ ಪರಿಷತ್ತಿಗೆ ತಿಳಿಸಬೇಕಾಗಿ ಕೋರಿದೆ. ಅಲ್ಲದೆ ತಮ್ಮ ಸರಿಯಾದ ವಿಳಾಸವನ್ನೂ, ವಿಳಾಸದಲ್ಲಿ ಬದಲಾವಣೆಗಳಿದ್ದರೆ, ಅಂತಹ ಬದಲಾದ ವಿಳಾಸವನ್ನೂ ಕೂಡಲೇ ಬರೆದು ತಿಳಿಸಬೇಕಾಗಿ ಕೋರಿದೆ.

ಸಂಪಾದಕ: ಕನ್ನಡ ನುಡಿ

# ಪರಿಷತ್ತಿನ ಸುದ್ದಿಗಳು

## ಕನ್ನಡ ಸಾಹಿತ್ಯ ಪರಿಷತ್ತಿನ ಸಕಲ ಸದಸ್ಯ ಸಭೆಯ ಐವತ್ತೊಂಬತ್ತನೆಯ ವಾರ್ಷಿಕಾಧಿವೇಶನದ ವರದಿ

ಕನ್ನಡ ನುಡಿ ಸಂಪುಟ ೩೨, ಸಂಚಿಕೆ ೪-೫ - ಏಪ್ರಿಲ್-ಮೇ ೧೯೭೯ - ಈ ಸಂಚಿಕೆಯ ೬೦ನೆಯ ಪುಟದಲ್ಲಿ ಪ್ರಕಟವಾಗಿರುವ ಮೇಲಿನ ವರದಿಯಲ್ಲಿ ಬಿಟ್ಟುಹೋಗಿರುವ ಈ ಭಾಗವನ್ನು ಸೇರಿಸಿಕೊಳ್ಳತಕ್ಕದ್ದು :

"ಪರಿಷತ್ತಿನ ಸಕಲ ಸದಸ್ಯರ ೫೨ನೆಯ ಅಧಿವೇಶನದಲ್ಲಿ ೧೯೭೮ರ ಏಪ್ರಿಲ್ ತಿಂಗಳಿನೊಳಗಾಗಿ ಚುನಾವಣೆಗಳನ್ನು ನಡೆಸಬೇಕೆಂದು ಕಾರ್ಯಸಮಿತಿಗೆ ಆದೇಶ ನೀಡಲಾಗಿತ್ತು. ಆದರೆ ಈ ಅವಧಿಯೊಳಗೆ ಚುನಾವಣೆಗಳನ್ನು ನಡೆಸಲು ಸಾಕಷ್ಟು ಕಾಲಾವಕಾಶವಿಲ್ಲದಿದ್ದುದರಿಂದ ನಿಬಂಧನೆಗಳಲ್ಲಿ ಕಾರ್ಯಸಮಿತಿಯ ಅಧಿಕಾರವ್ಯಾಪ್ತಿಗೆ ಒಳಪಟ್ಟಿರುವಂತೆ **ಉಪನಿಬಂಧನೆ ೨ನ್ನು ಪೂರ್ತ** ಉಪನಿಬಂಧನೆಗಳ ಪಟ್ಟಿಯಿಂದ ತೆಗೆದುಹಾಕಿ ದಿನಾಂಕ ೧೧-೫-೧೯೭೮ರಂದು ಚುನಾವಣೆಯನ್ನು ನಡೆಸಬೇಕೆಂದು ಕಾರ್ಯಸಮಿತಿ ಗೊತ್ತುಮಾಡಿತು. ೧೯(೧)ನೆಯ ನಿಬಂಧನೆಯ ಪ್ರಕಾರ ಮೇಲಿನಂತೆ ಮಾರ್ಪಾಟಾದ ಉಪನಿಬಂಧನೆಗಳ ವಿವರವನ್ನು ಸಕಲ ಸದಸ್ಯರ ಸಭೆಗೆ ವರದಿ ಮಾಡಲಾಯಿತು."

## ಸಾಹಿತ್ಯ ಪರೀಕ್ಷೆಗಳು - ೧೯೭೯

ಪರಿಷತ್ತು ೧೯೭೯ರ ದಸರಾ (ಅಕ್ಟೋಬರ್) ರಜಾದಿನಗಳಲ್ಲಿ ನಡೆಸಲಿರುವ ಕನ್ನಡ 'ರತ್ನ' ಮತ್ತು ಕ್ರಿಸ್‌ಮಸ್ (ಡಿಸೆಂಬರ್) ರಜಾ ದಿನಗಳಲ್ಲಿ ನಡೆಸಲಿರುವ 'ಜಾಣ' ಪರೀಕ್ಷೆಗಳಿಗೆ ರಾಜ್ಯದ ವಿವಿಧ ಭಾಗಗಳಲ್ಲಿ ಪರೀಕ್ಷಾ ಕೇಂದ್ರಗಳನ್ನು ಕೊಡುವ ವಿಚಾರ :

(ಅ) ಪ್ರತಿ ಪರೀಕ್ಷೆಗೆ ನಲವತ್ತು ವಿದ್ಯಾರ್ಥಿಗಳಿಗಿಂತ ಹೆಚ್ಚು ಜನ ಅಭ್ಯರ್ಥಿಗಳು ಇದ್ದು ಸಾಮಾನ್ಯವಾಗಿ ಪ್ರೌಢಶಾಲೆ ಇರುವ ಅಥವಾ ಜಿಲ್ಲಾ ಸ್ಥಳಗಳಲ್ಲಿ ಪರೀಕ್ಷೆಗಳನ್ನು ನಡೆಸಲಾಗುವುದು.

(ಆ) ಅಪೇಕ್ಷಾ ಪತ್ರಗಳ ಸ್ವೀಕಾರಕ್ಕೆ ನಿಗದಿಯಾದ ಕೊನೆಯ ದಿನಾಂಕವಾದ ಮೇಲೆ, ಯಾವ ಯಾವ ಸ್ಥಳಗಳ ಎಷ್ಟು ಮಂದಿ ಅಭ್ಯರ್ಥಿಗಳಿಂದ ಆವೇದನ ಪತ್ರಗಳು ಬರುತ್ತವೆಯೋ ಅವುಗಳನ್ನು ನೋಡಿಕೊಂಡು, ಪರೀಕ್ಷಾ ಕೇಂದ್ರವನ್ನು ಗೊತ್ತುಮಾಡಲಾಗುವುದು.

(ಇ) ಕೇಂದ್ರಗಳು ನಿಗದಿಯಾದ ಮೇಲೆ ಅಭ್ಯರ್ಥಿಗಳು ತಮಗೆ ಸಮೀಪವಾಗಿರುವ ಪರೀಕ್ಷಾಕೇಂದ್ರದಲ್ಲಿ ಪರೀಕ್ಷೆಗೆ ಕುಳಿತುಕೊಳ್ಳಬೇಕಾಗುವುದು.

(ಈ) ವ್ಯಾಸಂಗ ಕೇಂದ್ರಗಳ ವ್ಯವಸ್ಥಾಪಕರು, ಅಭ್ಯರ್ಥಿಗಳ ಆವೇದನ ಪತ್ರಗಳೆಲ್ಲವನ್ನೂ ಪರೀಕ್ಷಾ ಶುಲ್ಕದೊಂದಿಗೆ ಈ ಮೊದಲೇ ನಿಯಮಾವಳಿಯಲ್ಲಿ ತಿಳಿಸಿರುವಂತೆ ಸಕಾಲದಲ್ಲಿ ಪರಿಷತ್ತಿಗೆ ಕಳಿಸತಕ್ಕದ್ದು :

(i) 'ರತ್ನ' ಪರೀಕ್ಷೆಗೆ ಆವೇದನ ಪತ್ರಗಳನ್ನು ತಾ|| ೩೦-೮-೧೯೭೯ರೊಳಗೆ ಕಳಿಸತಕ್ಕದ್ದು; ಪರೀಕ್ಷಾ ಶುಲ್ಕ-ಇಪ್ಪತ್ತೈದು ರೂಪಾಯಿಗಳು.

(ii) 'ಜಾಣ' ಪರೀಕ್ಷೆಗೆ ಆವೇದನ ಪತ್ರಗಳನ್ನು ತಾ|| ೩೦-೯-೧೯೭೯ರೊಳಗೆ ಕಳಿಸತಕ್ಕದ್ದು; ಪರೀಕ್ಷಾ ಶುಲ್ಕ-ಹನ್ನೆರಡು ರೂಪಾಯಿಗಳು.

ಹಣವನ್ನು ಬ್ಯಾಂಕ್‌ಡ್ರಾಫ್ಟ್ ಅಥವಾ ಮನಿಆರ್ಡರ್ ಮೂಲಕ ಕಳಿಸತಕ್ಕದ್ದು.

(ಉ) ಆವೇದನ ಪತ್ರಿಕೆಗಳು ಪರಿಷತ್ತಿನಲ್ಲಿ ಸಿಕ್ಕುತ್ತವೆ. ವ್ಯಾಸಂಗ ಕೇಂದ್ರಗಳ ವ್ಯವಸ್ಥಾಪಕರು ಮತ್ತು ವಿದ್ಯಾರ್ಥಿಗಳು ತಮಗೆ ಎಷ್ಟು ಆವೇದನ ಪತ್ರಗಳು ಬೇಕೆಂಬ ವಿಚಾರದಲ್ಲಿ ಕೂಡಲೇ ಪರಿಷತ್ತಿಗೆ ಬರೆದುಕೊಳ್ಳತಕ್ಕದ್ದು.

## ಭಾಷಾವಿಚಾರಗೋಷ್ಠಿ

"ಅಂತರಭಾರತಿ" ಸಮ್ಮೇಳನಕ್ಕೆ ಬೆಂಗಳೂರಿಗೆ ಆಗಮಿಸಿದ್ದ ಭಾರತದ ವಿವಿಧ ಭಾಷೆಯ ಪ್ರತಿನಿಧಿಗಳನ್ನು ದಿನಾಂಕ ೧೦-೬-೧೯೬೯ರ ಸಂಜೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಬರಮಾಡಿಕೊಳ್ಳಲಾಯಿತು. ಸುಮಾರು ೧೫ ಮಂದಿ ಮಹನೀಯರು ಸಭೆಯಲ್ಲಿ ಭಾಗವಹಿಸಿ ತಮ್ಮ ತಮ್ಮ ಭಾಷಾ ಸಾಹಿತ್ಯಗಳನ್ನು ಕುರಿತು ಪರಿಚಯ ಮಾಡಿ ಕೊಟ್ಟರು.

ಅಸಾಮಿ, ಬಂಗಾಳಿ, ಗುಜರಾತಿ, ಹಿಂದೀ, ಕನ್ನಡ, ಇಂಗ್ಲಿಷ್, ಮಲೆಯಾಳಂ, ಮರಾಠಿ, ತೆಲುಗು, ತಮಿಳು, ಉರ್ದು ಮತ್ತು ಒರಿಯ ಈ ಭಾಷೆಗಳನ್ನು ಕುರಿತು ಕ್ರಮವಾಗಿ ಶ್ರೀಗಳಾದ ಬಿ. ಪಿ. ಚಾಲಿಹಾ, ಸೋಮನಾಥ ಡೇ, ಶ್ರೀಮತಿ ನಿರ್ಝರಿ ಬುಚ್, ಜಿ. ಬಿ. ಸುಬ್ರಹ್ಮಣ್ಯಮ್, ಸಿ. ವೀರಣ್ಣ, ಎಸ್. ಗುರುಮೂರ್ತಿ, ಟಿ. ಪಿ. ವಿಶ್ವನಾಥನ್ ನಂಬಿಯಾರ್, ಜಿ. ಎಂ. ಪವಾರ, ಡಾ|| ಎಸ್. ವಿ. ಮಾಧವರಾವ್, ಎನ್. ಶಿವಸುಬ್ರಮಣಿಯನ್, ಮಹಮ್ಮದ್ ಅನೆಸೂರ್ ಹಕ್ ಮತ್ತು ಚಿತ್ತರಂಜನ್ ಮೊಹನ್ತಿ ಮಾತನಾಡಿದರು.

ಡಾ|| ರಂ. ಶ್ರೀ. ಮುಗಳಿಯವರು ಈ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಕಾರ್ಯಕ್ರಮದ ಪ್ರಾರಂಭದಲ್ಲಿ ಭಾರತ ಸರಕಾರದ ಚಲನಚಿತ್ರ ವಿಭಾಗದ ಕನ್ನಡ ವ್ಯಾಖ್ಯಾನಕಾರರಾದ ಶ್ರೀ ಬಿ. ಜಿ. ರಾಮನಾಥ್ ಅವರು ಕನ್ನಡ ಗೀತೆಗಳನ್ನು ಹಾಡಿದರು; ಪರಿಷತ್ತಿನ ಅಧ್ಯಕ್ಷ ಶ್ರೀ ಜಿ. ನಾರಾಯಣ ಅವರು ಎಲ್ಲರಿಗೂ ಸ್ವಾಗತವನ್ನು ಬಯಸಿದರು. ಕಡೆಯಲ್ಲಿ ಶ್ರೀ ಕೆ. ಎನ್. ಶ್ರೀಹರಿಯವರಿಂದ ವಂದನಾರ್ಪಣೆಯಾಗಿ ಪರಿಷದಧ್ಯಕ್ಷರಿಂದ ಅತಿಥಿಗಳೆಲ್ಲರಿಗೂ ಪುಷ್ಪಹಾರಗಳನ್ನರ್ಪಿಸಲಾಯಿತು.

ರಾಷ್ಟ್ರಗೀತೆಯೊಡನೆ ಸಭೆ ಮುಕ್ತಾಯವಾಯಿತು.

## ಪರಿಷತ್ತಿನ ಅಧಿಕಾರಿಗಳ ನೇಮಕ

ಪರಿಷತ್ತಿನ ಅಧ್ಯಕ್ಷ ಶ್ರೀ ಜಿ. ನಾರಾಯಣ ಅವರು ಶ್ರೀ ಅ. ರಾ. ಮಿತ್ರ ಮತ್ತು ಶ್ರೀ ಹಂಪ. ನಾಗರಾಜಯ್ಯ ಇವರುಗಳನ್ನು ಪರಿಷತ್ತಿನ ಗೌರವ ಕಾರ್ಯದರ್ಶಿಗಳನ್ನಾಗಿಯೂ ಶ್ರೀ ಎನ್. ವರದರಾಜನ್ ಅವರನ್ನು ಪರಿಷತ್ತಿನ ಗೌರವ ಕೋಶಾಧಿಕಾರಿಗಳನ್ನಾಗಿಯೂ ಇದೇ ಜೂನ್ ೯ರಂದು ನೇಮಕ ಮಾಡಿದರು. ಈ ಮೂವರು ಮಹನೀಯರೂ ಮೇಲ್ಕಂಡ ದಿನದಿಂದ ಅಧಿಕಾರವನ್ನು ವಹಿಸಿಕೊಂಡು ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ.

## ಸಂತಾಪಸೂಚನೆ:

### ಕಲಾವಿದ ಶ್ರೀ ಎಂ. ವೀರಪ್ಪನವರು

ಬಡಕುಟುಂಬದಲ್ಲಿ ಜನಿಸಿ ಬೊಂಬಾಯಿಯ ಜೆ. ಜೆ. ಆರ್ಟ್ಸ್ ಕಾಲೇಜಿನಲ್ಲಿ ಅಭ್ಯಾಸಮಾಡಿ, ಸ್ವಂತ ಬಾಂಬೆ ಆರ್ಟ್ಸ್ ಸ್ಟುಡಿಯೋದಲ್ಲಿ ಚಿತ್ರನಿರ್ಮಾಪಕರಾಗಿದ್ದು ಚಾಮರಾಜೇಂದ್ರ ಕಲಾಶಾಲೆಯಲ್ಲಿ ಅಧ್ಯಾಪಕರಾಗಿ, ನೂರಾರು ಹೊಸ ಚಿತ್ರಕಲಾಕಾರರನ್ನು ತಯಾರಿಸಿದವರೂ, ಅವರಿಗೆ ಮಾರ್ಗದರ್ಶನ ಮಾಡಿಸಿಕೊಟ್ಟವರೂ, ಪ್ರಮುಖವಾಗಿ ತೈಲವರ್ಣಚಿತ್ರಗಳಲ್ಲಿ ಸುಪ್ರಸಿದ್ಧರಾಗಿದ್ದರೂ, ಶೈಲಿಯಲ್ಲಿ ತೈಲವರ್ಣ ಚಿತ್ರಗಳ ದೃಢತೆಯನ್ನೂ, ಜಲವರ್ಣ ಚಿತ್ರಗಳ ರೇಖೆಯ ಲಾಲಿತ್ಯವನ್ನೂ ಬಳಸಿಕೊಂಡು, ತಮ್ಮದೇ ಆದ ವಿಶೇಷ ಕಲಾಪ್ರೌಢಿಮೆಯನ್ನು ಮೆರೆಸಿ, ಹಳೆಯ-ಹೊಸ ಪಂಥಗಳ ಉತ್ತಮ ಗುಣಗಳನ್ನು ಬೆಸೆದು, ನವೀನ ಕಲಾಮಾರ್ಗವನ್ನು ಪ್ರಚುರಪಡಿಸಿ, ಜನಾನುರಾಗಿಗಳಾಗಿ, ಸುಪ್ರಸಿದ್ಧರಾಗಿದ್ದ ಚಿತ್ರಕಲಾವಿಶಾರದ ಶ್ರೀ ಎಂ. ವೀರಪ್ಪನವರ ನಿಧನದಿಂದ ಕನ್ನಡ ಕಲಾಪ್ರಪಂಚಕ್ಕೂ ಮತ್ತು ನಾಡಿಗೂ ಅಪಾರ ನಷ್ಟವಾಗಿದೆ.

ಶ್ರೀಯುತರ ಆತ್ಮಕ್ಕೆ ಭಗವಂತನು ಶಾಂತಿಯನ್ನೀಯಲೆಂದು ಪರಿಷತ್ತಿನಲ್ಲಿ ಸೇರಿರುವ ಈ ಸಭೆ ಪ್ರಾರ್ಥಿಸುವುದಲ್ಲದೆ ಅವರ ನಿಧನಕ್ಕಾಗಿ ತನ್ನ ಸಂತಾಪವನ್ನು ವ್ಯಕ್ತಪಡಿಸುತ್ತದೆ.

### ಸಂಗೀತ ವಿದ್ವಾನ್ ಶ್ರೀ ಚಿಂತಲಪಳ್ಳಿ ವೆಂಕಟರಾಯರು

ಕರ್ಣಾಟಕ ಸಂಗೀತಕ್ಷೇತ್ರದಲ್ಲಿ ಭೀಷ್ಮಾಚಾರ್ಯರಂತಿದ್ದು, ತೊಂಬತ್ತೈದು ವರುಷಗಳ ತುಂಬು ಜೀವನ ನಡೆಸಿ, ಕರ್ಣಾಟಕ, ಆಂಧ್ರ, ಹಿಂದಿನ ನಿಜಾಮು ಪ್ರಾಂತಗಳಲ್ಲಿ ಸಾವಿರಾರು ಸಂಗೀತ ಕಚೇರಿಗಳಿಂದ ಜನತೆಗೆ ಶುದ್ಧ ಕರ್ಣಾಟಕ ಸಂಗೀತದ ಸೊಬಗನ್ನೂ, ಅದರ ಆಳವನ್ನೂ ಪರಿಚಯಮಾಡಿಕೊಟ್ಟು, ಅನೇಕ ಬಿರುದು ಬಹುಮಾನ

ಗಳನ್ನು ಪಡೆದು, ದೃಢವಾದ ಗಂಡುಶೈಲಿ, ಬಿಕ್ಕಟ್ಟಾದ ಲಯ, ಮನೋಹರವೂ ವಿದ್ವತ್ಪೂರ್ಣವೂ ಆದ ಸ್ವರ ಪ್ರಸ್ತಾರ ಇವುಗಳಿಂದ ಸಂಗೀತ ರಸಿಕರ, ಹಾಗೂ ಅರಮನೆ-ಗುರುಮನೆಗಳ ಮೆಚ್ಚುಗೆಯನ್ನು ಪಡೆದು ಕೀರ್ತಿಶಾಲಿಗಳಾಗಿದ್ದ-ಮೈಸೂರು ಸಂಗೀತ ನಾಟಕ ಅಕಾದಮಿ ಮತ್ತು ಭಾರತ ಸರ್ಕಾರದ ಅಕಾದಮಿಗಳಿಂದ ಬಹುಮಾನಿತರಾಗಿದ್ದ ಶ್ರೀಯುತ ಚಿಂತಲಪಳ್ಳಿ ವೆಂಕಟರಾಯರ ನಿಧನದಿಂದ ಕನ್ನಡ ಸಂಗೀತ ಕಲಾಪ್ರಪಂಚಕ್ಕೆ ಅಪಾರ ನಷ್ಟವುಂಟಾಗಿದೆ.

ಭಗವಂತನು ಅವರ ಆತ್ಮಕ್ಕೆ ಸದ್ಗತಿಯನ್ನೀಯಲೆಂದು ಪ್ರಾರ್ಥಿಸಿ, ಪರಿಷತ್ತಿನಲ್ಲಿ ಸೇರಿರುವ ಈ ಸಭೆ ಅವರ ನಿಧನಕ್ಕೆ ತನ್ನ ಸಂತಾಪವನ್ನು ಸೂಚಿಸುತ್ತದೆ.

## ಗಮಕ ಪ್ರೌಢ ಪರೀಕ್ಷೆಗಳು – ೧೯೬೯

### ಫಲಿತಾಂಶ ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ೧೯೬೯ರ ಮೇ-ಜೂನ್ ಮಾಹೆಯಲ್ಲಿ ನಡೆದ ಗಮಕ ಪ್ರೌಢ ಪರೀಕ್ಷೆಗಳ ಫಲಿತಾಂಶವು ಈ ಕೆಳಗೆ ಕಂಡಂತಿದೆ:

(ಅ) ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದವರ ರಿಜಿಸ್ಟರ್ ನಂಬರುಗಳು: ೨೬, ೪೨, ೫೦, ೫೫, ೫೬ ಮತ್ತು ೫೮ (ಒಟ್ಟು ೬).

(ಆ) ಸಾಮಾನ್ಯ ದರ್ಜೆಯಲ್ಲಿ ತೇರ್ಗಡೆಯಾದವರ ರಿಜಿಸ್ಟರ್ ನಂಬರುಗಳು: ೧, ೨, ೩, ೪, ೫, ೬, ೭, ೧೨, ೧೩, ೧೪, ೧೬, ೨೦, ೨೧, ೨೨, ೨೩, ೨೫, ೨೭, ೨೯, ೩೦, ೩೧, ೩೩, ೩೪, ೩೭, ೩೮, ೩೯, ೪೦, ೪೧, ೪೩, ೪೫, ೪೬, ೪೭, ೪೮, ೪೯, ೫೧, ೫೭ ಮತ್ತು ೫೯ (ಒಟ್ಟು ೩೬).

## ಗಮಕ ಪ್ರವೇಶ ಪರೀಕ್ಷೆಗಳು—೧೯೭೦

೧೯೬೯-೭೦ನೇ ಸಾಲಿನ ಗಮಕ ಪ್ರವೇಶ ತರಗತಿಗಳಿಗೆ ನಿಯಮಿತವಾಗಿರುವ ಪಠ್ಯಪುಸ್ತಕಗಳು ಮತ್ತು ಪಠ್ಯ-ಭಾಗಗಳು: (ವ್ಯಾಸಂಗದ ಅವಧಿ ಆರು ತಿಂಗಳು–೧೯೬೯ನೇ ಜುಲೈ ಲಾಗಾಯಿತು)

**೧. ಕಾವ್ಯಭಾಗ:**

(ಅ) "ಗಮಕ ಪ್ರವೇಶದಾಯಿನಿ" ೧-೫೦
ಪರಿಷತ್ತಿನ ಪ್ರಕಟಣೆ
ಇದರಲ್ಲಿ

(೧) ರನ್ನನ ಗದಾಯುದ್ಧ ಕಥಾಭಾಗದ ಪ್ರಾರಂಭದ ೫ ಪದ್ಯಗಳು ಮತ್ತು ದುರ್ಯೋಧನನ ಕೆಚ್ಚು-ಧರ್ಮರಾಯನ ಬುದ್ಧಿವಾದವನ್ನು ಕುರಿತ ೧೪ ಪದ್ಯಗಳು ಮಾತ್ರ (ಪುಟ ೪೮ರಿಂದ ೫೨)

(೨) ಹರಿಶ್ಚಂದ್ರಕಾವ್ಯಭಾಗದ ಪ್ರಾರಂಭದ ೩ ಪದ್ಯಗಳು – ಹರಿಶ್ಚಂದ್ರನ ಕಾಶೀಕ್ಷೇತ್ರಾಗಮನವನ್ನು ಕುರಿತ ೧೭ ಪದ್ಯಗಳು ಮತ್ತು ಕೊನೆಯ ೨ ಪದ್ಯಗಳು ಮಾತ್ರ (ಪುಟ ೩೭ರಿಂದ ೪೩)

(೩) ಲಲಿತರಗಳೆ – ದೀಕ್ಷಾಬೋಧೆಯ ೬ ಪದ್ಯಗಳು (ಪುಟ ೬೯-೭೦)

(೪) ಸಾಂಗತ್ಯ – ಕರ್ಣಾಟದೇಶ ವರ್ಣನೆಯ ೯ ಪದ್ಯಗಳು (ಪುಟ ೭೩-೭೪)

(ಆ) "ಗಮಕ ಪ್ರಚಾರಬೋಧಿನಿ" ೦-೭೫
ಪರಿಷತ್ತಿನ ಪ್ರಕಟಣೆ

(೫) ಇದರಲ್ಲಿ ಪ್ರಯೋಗ ವಿಭಾಗದಲ್ಲಿ ಕೊಟ್ಟಿರುವ ಶ್ರೀಹರಿಕಥಾಮೃತಸಾರದ ಸೂಚನೆ ಮತ್ತು ಪ್ರಾರಂಭದ ೧೬ ಪದ್ಯಗಳು ಮಾತ್ರ.

[**ಸೂಚನೆ:** ಇಲ್ಲಿ ಕೊಟ್ಟಿರುವ ರಾಗಗಳಲ್ಲಿಯೇ ಹಾಡಬೇಕಾದ ನಿಯಮವೇನಿಲ್ಲ. ವಿದ್ಯಾರ್ಥಿಗಳು ಈ ಮೇಲೆ ಆಯ್ಕೆಮಾಡಿರುವ ಪದ್ಯಭಾಗಗಳನ್ನು ಬಳಕೆಯಲ್ಲಿರುವ ಸುಲಭವಾದ ಹದಿನೈದು ರಾಗಗಳಲ್ಲಿ ಹಾಡುವುದನ್ನು ಅಭ್ಯಾಸ ಮಾಡಿದ್ದರೆ ಸಾಕು – ಇವುಗಳ ಜೊತೆಗೆ ಕವಿ-ಕಾವ್ಯ ವಿಚಾರ, ಕಥಾಸಂದರ್ಭ, ಅರ್ಥ-ತಾತ್ಪರ್ಯ, ವಾಚನಮಾರ್ಗ ಸಂಪ್ರದಾಯ-ಗಮಕ ಕಲೆಯ ಮುಖ್ಯ ಲಕ್ಷಣಗಳು ಇತ್ಯಾದಿ ವಿಷಯಗಳನ್ನು ತಿಳಿದಿರಬೇಕು.]

(ಇ) **ಐಚ್ಛಿಕ ಭಾಗ:**

ಪ್ರಸಿದ್ಧವಾದ ೪ ವಚನಗಳು, ೨ ಹರಿದಾಸರ ಪದಗಳು, ೨ ಶಿವಶರಣರ ಕೃತಿಗಳು ಮತ್ತು

೪ ಆಧುನಿಕ ಗೀತೆಗಳನ್ನು (ಯಾವುದಾದರೂ ಆಗಬಹುದು) ಅಭ್ಯಾಸಮಾಡಿರಬೇಕು.

***೨. ಸಂಗೀತ ಭಾಗ:**

"ಸಂಗೀತಶಾಸ್ತ್ರಸಾರ" ೨-೦೦
ಶ್ರೀ ಎಲ್. ರಾಜಾರಾಯರು
ನಂ. ೪೯, ೪ನೇ ಕ್ರಾಸ್
ನರಸಿಂಹರಾಜ ಕಾಲೊನಿ, ಬೆಂಗಳೂರು-೧೯

***೩. ಗಮಕಕಲೆಯ ಶಾಸ್ತ್ರಭಾಗ:**

"ಕಾವ್ಯಗಾಯನ ಕಲಾಸಂಗ್ರಹ" ೧-೨೫
ಶ್ರೀ ಎಂ. ರಾಘವೇಂದ್ರರಾಯರು
ಪರಿಷತ್ತಿನ ಪ್ರಕಟಣೆ

---

* ಮೇಲ್ಕಂಡ ಪುಸ್ತಕಗಳನ್ನು ಅಧ್ಯಾಪಕರೂ ವಿದ್ಯಾರ್ಥಿಗಳೂ ಪರಾಮರ್ಶಿಸಬಹುದು.

## ಜಾಣ ಪರೀಕ್ಷೆ – ೧೯೬೮

ಮೇಲ್ಕಂಡ ಪರೀಕ್ಷೆಯಲ್ಲಿ ಈ ಕೆಳಗೆ ಕಾಣಿಸಿರುವ ಪರೀಕ್ಷಾ ಕೇಂದ್ರಗಳ ಕೆಳಗೆ ಕೊಟ್ಟಿರುವ ರಿಜಿಸ್ಟರ್ ನಂಬರುಳ್ಳ ವಿದ್ಯಾರ್ಥಿಗಳು ತೇರ್ಗಡೆಯಾಗಿರುತ್ತಾರೆ. ಈ ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು ಯಾರೂ ಇಲ್ಲ.

### ೧. ಇಲಕಲ್ ಕೇಂದ್ರ

(ತೇರ್ಗಡೆಯಾದವರು ಒಟ್ಟು-೧೪)

ಅ) ದ್ವಿತೀಯ ವರ್ಗ: ಯಾರೂ ಇಲ್ಲ.
ಆ) ತೃತೀಯ ವರ್ಗ: ೮, ೧೫, ೧೬, ೧೮, ೧೯, ೨೧, ೨೨, ೨೩, ೨೪, ೨೫, ೨೬, ೨೭, ೨೮ ಮತ್ತು ೩೩.

### ೨. ಕನ್ನೊಳ್ಳಿ ಕೇಂದ್ರ

(ಒಟ್ಟು ತೇರ್ಗಡೆ-೨೫)

ಅ) ದ್ವಿತೀಯ ವರ್ಗ: ೪೬, ೫೯ ಮತ್ತು ೬೦.
ಆ) ತೃತೀಯ ವರ್ಗ: ೩೪, ೩೫, ೩೬, ೩೭, ೩೮, ೩೯, ೪೦, ೪೧, ೪೨, ೪೩, ೪೪, ೪೫, ೪೮, ೫೪, ೫೫, ೫೬, ೫೭, ೫೮, ೬೧, ೬೨, ೬೩ ಮತ್ತು ೬೬.

### ೩. ಕಲಾದಗಿ ಕೇಂದ್ರ

(ಒಟ್ಟು ತೇರ್ಗಡೆ-೩)

ಅ) ದ್ವಿತೀಯ ವರ್ಗ: ಯಾರೂ ಇಲ್ಲ.
ಆ) ತೃತೀಯ ವರ್ಗ: ೮೯, ೯೨ ಮತ್ತು ೯೫.

### ೪. ತಿಕೋಟಾ ಕೇಂದ್ರ

(ಒಟ್ಟು ತೇರ್ಗಡೆ-೫)

ಅ) ದ್ವಿತೀಯ ವರ್ಗ: ಯಾರೂ ಇಲ್ಲ.
ಆ) ತೃತೀಯ ವರ್ಗ: ೧೦೪, ೧೧೧, ೧೨೦, ೧೨೮ ಮತ್ತು ೧೩೫.

### ೫. ತುರಮರಿ ಕೇಂದ್ರ

(ಒಟ್ಟು ತೇರ್ಗಡೆ-೧೦)

ಅ) ದ್ವಿತೀಯ ವರ್ಗ: ಯಾರೂ ಇಲ್ಲ.
ಆ) ತೃತೀಯ ವರ್ಗ: ೧೫೨, ೧೫೪, ೧೫೮, ೧೬೦, ೧೬೧, ೧೬೫, ೧೭೪, ೧೭೮, ೧೭೯ ಮತ್ತು ೧೮೧.

### ೬. ನವಲಗುಂದ ಕೇಂದ್ರ

(ಒಟ್ಟು ತೇರ್ಗಡೆ-೩)

ಅ) ದ್ವಿತೀಯ ವರ್ಗ: ಯಾರೂ ಇಲ್ಲ.
ಆ) ತೃತೀಯ ವರ್ಗ: ೨೧೬, ೨೧೭ ಮತ್ತು ೨೨೯.

### ೭. ಬಬಲೇಶ್ವರ ಕೇಂದ್ರ

(ಒಟ್ಟು ತೇರ್ಗಡೆ-೭)

ಅ) ದ್ವಿತೀಯ ವರ್ಗ: ಯಾರೂ ಇಲ್ಲ.
ಆ) ತೃತೀಯ ವರ್ಗ: ೨೫೦, ೭೫೩, ೨೫೬, ೨೬೨, ೨೬೮, ೨೭೪ ಮತ್ತು ೨೭೬.

### ೮. ಬಸವನ ಬಾಗೇವಾಡಿ ಕೇಂದ್ರ

(ಒಟ್ಟು ತೇರ್ಗಡೆ ಯಾರೂ ಇಲ್ಲ)

ಅ) ದ್ವಿತೀಯ ವರ್ಗ: ಯಾರೂ ಇಲ್ಲ.
ಆ) ತೃತೀಯ ವರ್ಗ: ಯಾರೂ ಇಲ್ಲ.

### ೯. ಬಾಳಗೋಡ ಕೇಂದ್ರ

(ಒಟ್ಟು ತೇರ್ಗಡೆ-ಯಾರೂ ಇಲ್ಲ)

ಅ) ದ್ವಿತೀಯ ವರ್ಗ: ಯಾರೂ ಇಲ್ಲ.
ಆ) ತೃತೀಯ ವರ್ಗ: ಯಾರೂ ಇಲ್ಲ.

### ೧೦. ಬೂದಿಹಾಳ ಕೇಂದ್ರ

(ಒಟ್ಟು ತೇರ್ಗಡೆ-೧)

ಅ) ದ್ವಿತೀಯ ವರ್ಗ : ಯಾರೂ ಇಲ್ಲ.

ಆ) ತೃತೀಯ ವರ್ಗ : ೪೪೩.

### ೧೧. ಬೆಂಗಳೂರು ಕೇಂದ್ರ

(ಒಟ್ಟು ತೇರ್ಗಡೆ-೩)

ಅ) ದ್ವಿತೀಯ ವರ್ಗ : ಯಾರೂ ಇಲ್ಲ.

ಆ) ತೃತೀಯ ವರ್ಗ : ೪೬೭, ೪೬೮ ಮತ್ತು ೪೬೯.

### ೧೨. ಯಲಿವಾಳ ಕೇಂದ್ರ

(ಒಟ್ಟು ತೇರ್ಗಡೆ-ಯಾರೂ ಇಲ್ಲ)

ಅ) ದ್ವಿತೀಯ ವರ್ಗ : ಯಾರೂ ಇಲ್ಲ.

ಆ) ತೃತೀಯ ವರ್ಗ : ಯಾರೂ ಇಲ್ಲ.

### ೧೩. ರೋಣ ಕೇಂದ್ರ

(ಒಟ್ಟು ತೇರ್ಗಡೆ-೧೦)

ಅ) ದ್ವಿತೀಯ ವರ್ಗ : ಯಾರೂ ಇಲ್ಲ.

ಆ) ತೃತೀಯ ವರ್ಗ : ೫೨೨, ೫೨೩, ೫೨೫, ೫೨೬; ೫೨೭, ೫೨೯, ೫೩೫, ೫೩೬, ೫೪೦ ಮತ್ತು ೫೫೧.

### ೧೪. ಶಿರೂರ ಕೇಂದ್ರ

(ಒಟ್ಟು ತೇರ್ಗಡೆ-ಯಾರೂ ಇಲ್ಲ)

ಅ) ದ್ವಿತೀಯ ವರ್ಗ : ಯಾರೂ ಇಲ್ಲ.

ಆ) ತೃತೀಯ ವರ್ಗ : ಯಾರೂ ಇಲ್ಲ.

### ೧೫. ಸಾಲೋಟಗಿ ಕೇಂದ್ರ

(ಒಟ್ಟು ತೇರ್ಗಡೆ-೪)

ಅ) ದ್ವಿತೀಯ ವರ್ಗ : ಯಾರೂ ಇಲ್ಲ.

ಆ) ತೃತೀಯ ವರ್ಗ : ೬೧೦, ೬೧೧, ೬೧೬ ಮತ್ತು ೬೨೫.

### ೧೬. ಹಳೇಶಿಡೇನೂರ ಕೇಂದ್ರ

(ಒಟ್ಟು ತೇರ್ಗಡೆ-೧೫)

ಅ) ದ್ವಿತೀಯ ವರ್ಗ : ಯಾರೂ ಇಲ್ಲ.

ಆ) ತೃತೀಯ ವರ್ಗ : ೬೩೨, ೬೩೩, ೬೩೪, ೬೩೮, ೬೪೧, ೬೫೫, ೬೫೭, ೬೫೮, ೬೬೩, ೬೬೪, ೬೬೭, ೬೭೦, ೬೭೧, ೬೭೨ ಮತ್ತು ೬೮೩.

### ೧೭. ಹಾರ್ಸಿಕಟ್ಟಾ ಕೇಂದ್ರ

(ಒಟ್ಟು ತೇರ್ಗಡೆ-೩)

ಅ) ದ್ವಿತೀಯ ವರ್ಗ : ಯಾರೂ ಇಲ್ಲ.

ಆ) ತೃತೀಯ ವರ್ಗ : ೬೮೫, ೬೮೬ ಮತ್ತು ೭೦೬.

### ೧೮. ಹಾಸನ ಕೇಂದ್ರ

(ಒಟ್ಟು ತೇರ್ಗಡೆ-೭)

ಅ) ದ್ವಿತೀಯ ವರ್ಗ : ೭೧೩ ಮತ್ತು ೭೨೦.

ಆ) ತೃತೀಯ ವರ್ಗ : ೭೦೯, ೭೧೦, ೭೧೧, ೭೧೨ ಮತ್ತು ೭೧೭.

### ೧೯. ಹೊನಗನಹಳ್ಳಿ ಕೇಂದ್ರ

(ಒಟ್ಟು ತೇರ್ಗಡೆ-೩)

ಅ) ದ್ವಿತೀಯ ವರ್ಗ : ಯಾರೂ ಇಲ್ಲ.

ಆ) ತೃತೀಯ ವರ್ಗ : ೭೫೬, ೭೬೭ ಮತ್ತು ೭೯೩.

**ಸೂಚನೆ:** ರಿಜಿಸ್ಟರ್ ನಂಬರು ೬೯, ಹಾಗೂ ೭೮ರ ಕಲಾದಗಿ ಕೇಂದ್ರದ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಉತ್ತೀರ್ಣರಾಗಿಲ್ಲ.

## ಜಾಣ ಪರೀಕ್ಷೆ–೧೯೬೯

### ನಿಯಮಾವಳಿ

೧. ವ್ಯಾಸಂಗ ಕೇಂದ್ರಗಳಿಂದಲೂ ಮತ್ತು ಸ್ವಂತ ವ್ಯಾಸಂಗಿಗಳಿಂದಲೂ ಅಪೇಕ್ಷಾಪತ್ರಗಳನ್ನು ೩೦-೯-೧೯೬೯ನೇ ತಾರೀಖಿನವರೆಗೆ ಸ್ವೀಕರಿಸಲಾಗುವುದು. ಅನಂತರ ಬಂದ ಅಪೇಕ್ಷಾಪತ್ರಗಳನ್ನು ಸ್ವೀಕರಿಸಲಾಗುವುದಿಲ್ಲ.

೨. ವಿದ್ಯಾರ್ಥಿಗಳು ತಾವು ವ್ಯಾಸಂಗಮಾಡಿದ ಕೇಂದ್ರಗಳಲ್ಲಿ ಅಥವಾ ಅದು ಪರೀಕ್ಷಾಕೇಂದ್ರವಾಗದಿದ್ದರೆ ತಮಗೆ ಸಮೀಪವಾಗಿರುವ ಪರೀಕ್ಷಾಕೇಂದ್ರದಲ್ಲಿ ಪರೀಕ್ಷೆಗೆ ಕುಳಿತುಕೊಳ್ಳಬೇಕು. ಒಮ್ಮೆ ಆರಿಸಿಕೊಂಡ ಕೇಂದ್ರವನ್ನು ಬದಲಾಯಿಸಲಾಗುವುದಿಲ್ಲ.

೩. ಕೇಂದ್ರಗಳ ವ್ಯವಸ್ಥಾಪಕರು ತಮ್ಮ ಕೇಂದ್ರದ ಅಪೇಕ್ಷಾ ಪತ್ರಗಳೆಲ್ಲವನ್ನೂ ಒಟ್ಟುಗೂಡಿಸಿ ಅಭ್ಯರ್ಥಿಗಳ ಎರಡು ಪಟ್ಟಿಗಳೊಡನೆ ಕೇಂದ್ರದ ಒಟ್ಟು ಪರೀಕ್ಷಾ ಶುಲ್ಕ ದೊಂದಿಗೆ ೩೦-೯-೧೯೬೯ನೆಯ ತಾರೀಖಿನೊಳಗಾಗಿ ಪರಿಷತ್ತಿಗೆ ತಲಪುವಂತೆ ಕಳುಹಿಸಬೇಕು. ಚೆಕ್ಕು ಗಳನ್ನು ಸ್ವೀಕರಿಸುವುದಿಲ್ಲ. 'ಬ್ಯಾಂಕ್ ಡ್ರಾಫ್ಟ್' ಮೂಲಕ ಬೇಕಾದರೆ ಕಳುಹಿಸಬಹುದು. ಟೆಲಿಗ್ರಾಂ ಮನಿಯಾರ್ಡರನ್ನು ಸ್ವೀಕರಿಸಲಾಗುವುದಿಲ್ಲ.

೪. ಸ್ವಂತ ವ್ಯಾಸಂಗಿಗಳು ತಮ್ಮ ಅಪೇಕ್ಷಾಪತ್ರ ಗಳೊಂದಿಗೆ ಪರೀಕ್ಷಾ ಶುಲ್ಕವನ್ನು 'ಮನಿಆರ್ಡರ್' ಮೂಲಕ ಕಳುಹಿಸಬೇಕು. 'ಎಂ.ಓ' ರಸೀದಿಯನ್ನು ಅಪೇಕ್ಷಾಪತ್ರದೊಂದಿಗೆ ಇರಿಸಬೇಕು. 'ಎಂ.ಓ' ಕೂಪನ್ನುಗಳಲ್ಲಿ ವಿದ್ಯಾರ್ಥಿಗಳು ತಮ್ಮ ಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಹಾಗೆ ಬರೆಯದಿದ್ದಲ್ಲಿ ಅವರ ಅಪೇಕ್ಷಾಪತ್ರಗಳನ್ನು ಸ್ವೀಕರಿಸ ಲಾಗುವುದಿಲ್ಲ. ಅಪೇಕ್ಷಾಪತ್ರಗಳನ್ನು (ರಿಜಿಸ್ಟರ್ಡ್ ಪೋಸ್ಟ್) ಮೂಲಕ ರವಾನಿಸಬೇಕು. ಟಿ.ಎಂ.ಓ ಗಳನ್ನು ಸ್ವೀಕರಿಸಲಾಗುವುದಿಲ್ಲ.

**೫. ಪರೀಕ್ಷಾಶುಲ್ಕ ಹನ್ನೆರಡು ರೂಪಾಯಿಗಳು.**

೬. ಸಾಮಾನ್ಯವಾಗಿ ಡಿಸೆಂಬರ್ ಕೊನೆಯ ವಾರದಲ್ಲಿ ಪರೀಕ್ಷೆಗಳನ್ನು ನಡೆಸಲಾಗುವುದು. ಖಚಿತವಾದ ತಾರೀಖನ್ನು ತಿಳಿಸಲಾಗುವುದು.

೭. ಉತ್ತರ ಪುಸ್ತಕಗಳನ್ನು ಹಿಂದಿರುಗಿಸುವುದಿಲ್ಲ ಮತ್ತು ಎರಡು ಸಲ ಬೆಲೆ ಕಟ್ಟಿಸಲಾಗುವುದಿಲ್ಲ. ಪರೀಕ್ಷೆಯ ಫಲಿತಾಂಶ ಪ್ರಕಟವಾದ ಮೂವತ್ತು ದಿವಸಗಳೊಳ ಗಾಗಿ ಅಂಕಗಳನ್ನು ಎಣಿಸಲು ಶುಲ್ಕ ಎರಡು ರೂಪಾಯಿಗಳು. ಅಂಕಪಟ್ಟಿ ಬೇಕಾದವರು ರೂ. ೧-೫೦ನ್ನು ಕಳುಹಿಸಬೇಕು.

೮. ಪರೀಕ್ಷೆಯ ಫಲಿತಾಂಶದ ನಿರ್ಧಾರದ ವಿಷಯದಲ್ಲಿ ಪರಿಷತ್ತು ಕೈಗೊಳ್ಳುವ ತೀರ್ಮಾನವೇ ಕಡೆಯದು.

೯. ಈ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಪ್ರತಿಯೊಂದು ಪತ್ರಿಕೆಯಲ್ಲಿ ಕನಿಷ್ಠ ಪಕ್ಷ ಮೂವತ್ತೈದು ಅಂಕಗಳನ್ನು ಪಡೆದಿದ್ದು, ಒಟ್ಟು ನಾಲ್ಕು ಪತ್ರಿಕೆಗಳ ಸರಾಸರಿ ನಲವತ್ತು ಅಂಕಗಳನ್ನು ಪಡೆದಿರಬೇಕು. ಫಲಿತಾಂಶ ವನ್ನು ಮೂರು ಶ್ರೇಣಿಗಳಲ್ಲಿ ವಿಂಗಡಿಸಲಾಗುವುದು- (ಅ) ಪ್ರಥಮ ಶ್ರೇಣಿ: ಶೇಕಡ ಅರವತ್ತು ಮತ್ತು ಹೆಚ್ಚು ಅಂಕಗಳು. (ಆ) ದ್ವಿತೀಯ ಶ್ರೇಣಿ: ಶೇಕಡ ಐವತ್ತರಿಂದ ಐವತ್ತೊಂಭತ್ತು ಅಂಕಗಳು. (ಇ) ತೃತೀಯ ಶ್ರೇಣಿ: ಶೇಕಡ ನಲವತ್ತರಿಂದ ನಲವತ್ತೊಂಭತ್ತು ಅಂಕಗಳು.

## ಪಠ್ಯಪುಸ್ತಕಗಳು

**ಪದ್ಯ ಮತ್ತು ನಾಟಕ:** (ಪತ್ರಿಕೆ ೧)

೧. ಕಾವ್ಯ ಸೌರಭ-ಪರಿಷತ್ತಿನ ಪ್ರಕಟಣೆ ೨-೦೦

೨. ಕನ್ನಡ ಬಾವುಟ ,, ೩-೦೦
 i) ಎರಡನೆಯ ತೆನೆ: ಪುಟ ೨೧ರಿಂದ ೩೦ ಮತ್ತು ೪೩ರಿಂದ ೫೩
 ii) ನಾಲ್ಕನೆಯ ತೆನೆ: ಪುಟ ೮೭ರಿಂದ ೧೨೧

೩. ಏಕಾಂತ-ಕೆ. ಎನ್. ಶಿವಪ್ಪ ೧-೫೦
 'ಸಂಜಯ ಪ್ರಕಾಶನ', ಬೆಂಗಳೂರು

೪. ಅಪವಾದ ಮತ್ತು ಇತರ ನಾಟಕಗಳು ೩-೦೦
 ಕೈವಾರ ರಾಜಾರಾವ್
 ಹೆಚ್. ಎನ್. ರಾವ್ ಬ್ರದರ್ಸ್
 ಚಿಕ್ಕಪೇಟೆ, ಬೆಂಗಳೂರು-೨

**ಗದ್ಯ ಮತ್ತು ಪ್ರಬಂಧ:** (ಪತ್ರಿಕೆ ೨)

೧. ಕವಿಹೃದಯ-ಪರಿಷತ್ತಿನ ಪ್ರಕಟಣೆ ೨-೫೦

೨. ಅಜಾತಶತ್ರು-ಹಂಪ. ನಾಗರಾಜಯ್ಯ ೨-೫೦
 ಕಲ್ಲೆ ಶಿವೋತ್ತಮರಾವ್
 ಹಿಂದ್ ವಿದ್ಯಾರ್ಥಿ ಯುವಕ ಸಮ್ಮೇಲ
 ಮಲ್ಲೇಶ್ವರಂ, ಬೆಂಗಳೂರು-೩

೩. ಸಾಹಿತ್ಯ ಮತ್ತು ಜೀವನ ಕಲೆ
 ರಾಳ್ಲಪಲ್ಲಿ ಅನಂತಕೃಷ್ಣಶರ್ಮ

೪. ಸಂಸ್ಕೃತಿ-ಡಿ. ವಿ. ಜಿ. ೨-೦೦
 ಕಾವ್ಯಾಲಯ, ಜಯನಗರ, ಮೈಸೂರು-೪

**ವ್ಯಾಕರಣ, ಛಂದಸ್ಸು ಮತ್ತು ಅಲಂಕಾರ ಶಾಸ್ತ್ರ:** (ಪತ್ರಿಕೆ ೩)

೧. ವ್ಯಾಕರಣ: ಹಳಗನ್ನಡ ವ್ಯಾಕರಣ (ಕನ್ನಡ ಕೈಪಿಡಿಯಲ್ಲಿರುವಂತೆ)

೨. ಛಂದಸ್ಸು: ಗಣಗಳು, ಪ್ರಾಸಗಳು, ವೃತ್ತಗಳು, ಶಾರ್ದೂಲ, ಮತ್ತೇಭ, ಉತ್ಪಲ, ಚಂಪಕ, ಸ್ರಗ್ಧರೆ,

ಮಹಾಸ್ರಗ್ಧರೆ, ಮಾಲಿನಿ, ಕಂದ, ಆರು ಷಟ್ಪದಿಗಳು, ರಗಳೆಗಳು, ಸಾಂಗತ್ಯ, ದ್ವಿಪದಿ, ತ್ರಿಪದಿ, ಸೀಸಪದ್ಯ, ಆಧುನಿಕ ಭಾವಗೀತೆಗಳಲ್ಲಿ ಬರುವ ಛಂದಸ್ಸು.

೩. ಅಲಂಕಾರ : ಶಬ್ದಾಲಂಕಾರ, ಅರ್ಥಾಲಂಕಾರಗಳಲ್ಲಿ ಉಪಮೆ, ರೂಪಕ, ಉತ್ಪ್ರೇಕ್ಷೆ, ಅತಿಶಯೋಕ್ತಿ, ಅರ್ಥಾಂತರನ್ಯಾಸ, ಶ್ಲೇಷೆ, ವಿರೋಧಾಭಾಸ, ರಸ, ಕವಿಸಮಯ, ಕಾವ್ಯಸ್ವರೂಪ, ಕಾವ್ಯದ ಗುಣಗಳು ಮತ್ತು ದೋಷಗಳು.

[ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾದ "ಕನ್ನಡ ಕೈಪಿಡಿ"ಯಲ್ಲಿ ಬರುವ ಭಾಗಗಳನ್ನು ಬೋಧಿಸಬೇಕು]. ಬೆಲೆ : ೩–೫೦

**ಸಾಹಿತ್ಯ ಚರಿತ್ರೆ-ಸಂಸ್ಕೃತಿ** (ಪತ್ರಿಕೆ ೪)

೧. ಕನ್ನಡ ನಾಡಿನ ಚರಿತ್ರೆ, ಭಾಗ ೨ ೨–೭೫
ಪರಿಷತ್ತಿನ ಪ್ರಕಟಣೆ
(ಕರ್ನಾಟಕದ ಧರ್ಮಗಳು)

೨. ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ
ಶ್ರೀ ಎಂ. ಮರಿಯಪ್ಪಭಟ್ಟ
ಭಾರತೀ ಪ್ರಕಾಶನ, ಮೈಸೂರು

ಜೊತೆಗೆ ಈ ಕೆಳಗೆ ಕಾಣಿಸಿರುವ ಕವಿಗಳ ಪರಿಚಯ ಹೊಂದಿರಬೇಕು :

೧. ಪಂಪ, ರನ್ನ, ಒಂದನೇ ನಾಗವರ್ಮ, ನಾಗಚಂದ್ರ, ನಯಸೇನ, ನೇಮಿಚಂದ್ರ, ಜನ್ನ, ಆಂಡಯ್ಯ.

೨. ಬಸವಣ್ಣ, ಮಹಾದೇವಿಯಕ್ಕ, ದೇವರ ದಾಸಿಮಯ್ಯ, ಹರಿಹರ, ರಾಘವಾಂಕ, ನಿಜಗುಣ ಶಿವಯೋಗಿ, ಚಾಮರಸ, ವಿರೂಪಾಕ್ಷ, ಗುಬ್ಬಿ ಮಲ್ಲಣಾರ್ಯ, ಷಡಕ್ಷರಿ, ಸರ್ವಜ್ಞ, ಬಸವಪ್ಪಶಾಸ್ತ್ರಿ

೩. ಕಂತಿ, ದುರ್ಗಸಿಂಹ, ರುದ್ರಭಟ್ಟ, ನಾರಣಪ್ಪ, ಕನಕದಾಸರು, ಪುರಂದರ ದಾಸರು, ಜಗನ್ನಾಥ ದಾಸರು, ಚಿಕ್ಕುಪಾಧ್ಯಾಯ, ಲಕ್ಷ್ಮೀಶ, ಹೊನ್ನಮ್ಮ, ಮುದ್ದಣ.

೪. ನೃಪತುಂಗ, ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ, ಸಾಳ್ವ, ತಿರುಮಲಾರ್ಯ.

೫. ಬಿ. ಎಂ. ಶ್ರೀ., ಗೋವಿಂದ ಪೈ, ಪಂಜೆ ಮಂಗೇಶರಾಯರು, ಆಲೂರು ವೆಂಕಟರಾಯರು, ಆರ್. ನರಸಿಂಹಾಚಾರ್ಯರು.

[ಉಪಾಧ್ಯಾಯರು ಈ ಭಾಗಗಳನ್ನು ಹೇಳಿಕೊಡಬೇಕಾದಾಗ ಡಾ|| ರಂ. ಶ್ರೀ. ಮುಗಳಿ ಅವರ "ಕನ್ನಡ ಸಾಹಿತ್ಯ ಚರಿತ್ರೆ", ಶ್ರೀ ಟಿ. ಎಸ್. ಶಾಮರಾವ್ ಅವರ "ಜನಪ್ರಿಯ ಸಾಹಿತ್ಯ ಚರಿತ್ರೆ", ಶ್ರೀ ಆರ್. ನರಸಿಂಹಾಚಾರ್ಯರ "ಕರ್ನಾಟಕ ಕವಿಚರಿತ್ರೆ", "ಕನ್ನಡ ಕೈಪಿಡಿ ಭಾಗ ೨", ಶ್ರೀ ಆರ್. ವೈ. ಧಾರವಾಡಕರ್ ಅವರ "ಕನ್ನಡ ಭಾಷಾ ಶಾಸ್ತ್ರ" ಮತ್ತು ಡಾ|| ಡಿ. ಎಸ್. ಕರ್ಕಿ ಅವರ "ಛಂದೋವಿಕಾಸ" ಇವುಗಳನ್ನೂ ಆಧಾರವಾಗಿ ಅವಲೋಕನ ಮಾಡಬೇಕು.]

# ರತ್ನ ಪರೀಕ್ಷೆ

## ನಿಯಮಾವಳಿ

೧೯೬೯ರ ದಸರಾ ರಜದಲ್ಲಿ 'ಕನ್ನಡ ರತ್ನ' ಪರೀಕ್ಷೆಯನ್ನು ನಡಸಬೇಕೆಂದು ತೀರ್ಮಾನಿಸಲಾಗಿದೆ. ಇದಕ್ಕೆ ಸರಕಾರದ ಮನ್ನಣೆ ದೊರೆತಿದೆ. ಈ ಮನ್ನಣೆಯಿಂದ ಇಂಥದೇ ಮಟ್ಟಕ್ಕೆ ಉಪಾಧ್ಯಾಯರಾಗಬಹುದೆಂಬ ಅಪ್ಪಣೆ ಬಂದಿಲ್ಲ. ಅಪ್ಪಣೆ ಪಡೆಯಲು ಪ್ರಯತ್ನ ನಡೆಯುತ್ತಿದೆ. ಪರೀಕ್ಷೆಯ ವಿವರಗಳು ಹೀಗಿವೆ :

೧. **ಅಭ್ಯಾಸ ವಿಷಯಗಳು :** (ಅ) ಪದ್ಯ, (ಆ) ಗದ್ಯ, (ಇ) ನಾಟಕ, (ಈ) ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆಯ ಮೂಲತತ್ತ್ವಗಳು, (ಉ) ಹಳಗನ್ನಡ ವ್ಯಾಕರಣ ಮತ್ತು ಭಾಷಾ ಚರಿತ್ರೆ, (ಊ) ಛಂದಸ್ಸು ಮತ್ತು ಅಲಂಕಾರ ಶಾಸ್ತ್ರ, (ಋ) ಸಂಸ್ಕೃತ.

೨. **ಅಭ್ಯಾಸದ ಅವಧಿ:** ೧೯೬೯ರ ಜನವರಿಯಿಂದ ಸೆಪ್ಟೆಂಬರ್ ತಿಂಗಳ ಕೊನೆಯವರೆಗೆ.

೩. **ಪರೀಕ್ಷೆ:** ೧೯೬೯ರ ದಸರಾ ರಜದಲ್ಲಿ ದಿನಾ ಒಂದೊಂದು ಪ್ರಶ್ನಪತ್ರಿಕೆಗೆ ಉತ್ತರ ಬರೆಯಬೇಕು.

೪. **ಪ್ರಶ್ನಪತ್ರಿಕೆ:** ಅಭ್ಯಾಸ ವಿಷಯಗಳು ಒಂದೊಂದಕ್ಕೂ ಒಂದೊಂದು ಪ್ರಶ್ನಪತ್ರಿಕೆ. ಪತ್ರಿಕೆ

ಗಳಿಗೆ ಉತ್ತರ ಬರೆಯಲು ಕಾಲಾವಧಿ ಮೂರು ಗಂಟೆಗಳು. ಒಂದೊಂದು ಪತ್ರಿಕೆಗೂ ನೂರು ಅಂಕಗಳು.

೫. **ಫಲಿತಾಂಶ :** ಸಂಸ್ಕೃತ ಮಾತ್ರ ಮೈಸೂರು ಎಸ್.ಎಸ್.ಎಲ್.ಸಿ. ಮಟ್ಟದ್ದೇ ಆಗಿದ್ದು ತೇರ್ಗಡೆಯಾಗಲು ಕನಿಷ್ಠ ಮೂವತ್ತು ಅಂಕಗಳನ್ನು ಪಡೆಯಬೇಕು. ಕನ್ನಡ ಪತ್ರಿಕೆಗಳಲ್ಲಿ ತೇರ್ಗಡೆಯಾಗಲು ಕನಿಷ್ಠ ಮೂವತ್ತೈದು ಅಂಕಗಳನ್ನು ಪಡೆಯಬೇಕು. ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಮೇಲ್ಕಂಡ ಕನಿಷ್ಠಾಂಕಗಳನ್ನು ಪಡೆದು ಏಳು ಪತ್ರಿಕೆಗಳ ಸರಾಸರಿ ನಲವತ್ತು ಅಂಕಗಳನ್ನು ಪಡೆಯಬೇಕು.

ಫಲಿತಾಂಶವನ್ನು ಮೂರು ಶ್ರೇಣಿಗಳಲ್ಲಿ ವಿಂಗಡಿಸಲಾಗುವುದು.

(ಅ) **ಪ್ರಥಮ ಶ್ರೇಣಿ :** ಶೇಕಡ ಅರವತ್ತು ಮತ್ತು ಹೆಚ್ಚು ಅಂಕಗಳು.

(ಆ) **ದ್ವಿತೀಯ ಶ್ರೇಣಿ :** ಶೇಕಡ ಐವತ್ತರಿಂದ ಐವತ್ತೊಂಭತ್ತು ಅಂಕಗಳು.

(ಇ) **ತೃತೀಯ ಶ್ರೇಣಿ :** ಶೇಕಡ ನಲವತ್ತರಿಂದ ನಲವತ್ತೊಂಭತ್ತು ಅಂಕಗಳು.

[**ಸೂಚನೆ :** ಪರೀಕ್ಷೆಯ ಫಲಿತಾಂಶದ ನಿರ್ಧಾರದ ವಿಷಯದಲ್ಲಿ ಪರಿಷತ್ತು ಕೈಗೊಳ್ಳುವ ತೀರ್ಮಾನವೇ ಕಡೆಯದು.]

೬. **ಪರೀಕ್ಷಾ ಶುಲ್ಕ ಕಟ್ಟಲು ಕೊನೆಯ ತಾರೀಖು :** ಪರೀಕ್ಷಾ ಶುಲ್ಕವನ್ನು ಕಟ್ಟಲು ೩೦-೮-೧೯೬೮ರ ಅಂತ್ಯದವರೆಗೆ ಅವಕಾಶವಿರುತ್ತದೆ.

೭. **ಪ್ರವೇಶಾವಕಾಶ :** (ಅ) ಸಾಹಿತ್ಯ ಪರಿಷತ್ತಿನ ಜಾಣ ಪರೀಕ್ಷೆಯಲ್ಲಿ ತೇರ್ಗಡೆಯಾದವರು, (ಆ) ಮೈಸೂರು ಸರ್ಕಾರದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾದವರು, (ಇ) ಸಂಸ್ಕೃತ ಸಾಹಿತ್ಯ ಪರೀಕ್ಷೆಗೆ ಕುಳಿತು ಇಂಗ್ಲಿಷ್ ಪ್ರಶ್ನಪತ್ರಿಕೆಗೆ ಉತ್ತರ ಬರೆದು ತೇರ್ಗಡೆಯಾಗಿರತಕ್ಕವರು, (ಈ) ಶಾಲೆಗಳಲ್ಲಿ ಮೂರು ವರ್ಷದ ಅಧ್ಯಾಪಕವೃತ್ತಿಯ ಅನುಭವವುಳ್ಳವರು ಮತ್ತು ಮೇಲಿನ ಪರೀಕ್ಷೆಗಳಿಗೆ ಸಮಾನವಾದ ಬೇರೆ ಕನ್ನಡ ಪರೀಕ್ಷೆಗಳಲ್ಲಿ ತೇರ್ಗಡೆಯಾದವರು - ಮೇಲಿನ ಅರ್ಹತೆಯುಳ್ಳ ಯಾರಾದರೂ ಪರೀಕ್ಷೆಗೆ ಕುಳಿತುಕೊಳ್ಳಬಹುದು.

೮. **ಪರೀಕ್ಷಾ ಕೇಂದ್ರ :** ಪರೀಕ್ಷಾ ಕೇಂದ್ರಗಳನ್ನು ಪರಿಷತ್ತು ಅಭ್ಯರ್ಥಿಗಳ ಸಂಖ್ಯೆಯನ್ನು ಗಮನಿಸಿ ನಿರ್ಧರಿಸುತ್ತದೆ. ವ್ಯಾಸಂಗ ಕೇಂದ್ರಗಳು ಎಲ್ಲಿ ಬೇಕಾದರೂ ನಡೆಯಬಹುದು. ನಲವತ್ತು ವಿದ್ಯಾರ್ಥಿಗಳಿಗಿಂತ ಹೆಚ್ಚು ಜನ ಅಭ್ಯರ್ಥಿಗಳು ಇದ್ದರೆ ಅಲ್ಲಿ ಹೊಸ ಕೇಂದ್ರ ತೆರೆಯಲು ಅನುಮತಿ ನೀಡಲಾಗುವುದು. ಸಾಮಾನ್ಯವಾಗಿ ಪ್ರೌಢಶಾಲೆ ಇರುವ ತಾಲ್ಲೂಕುಗಳಲ್ಲಿ ಅಥವಾ ಜಿಲ್ಲಾ ಸ್ಥಳಗಳಲ್ಲಿ ಪರೀಕ್ಷೆ ನಡಸಲಾಗುವುದು.

೯. ಉತ್ತರ ಪುಸ್ತಕಗಳನ್ನು ಯಾವ ಕಾರಣದಿಂದಲೂ ಹಿಂದಿರುಗಿಸುವುದಿಲ್ಲ.

೧೦. ಉತ್ತರ ಪುಸ್ತಕಗಳಿಗೆ ಎರಡು ಸಲ ಬೆಲೆ ಕಟ್ಟಿಸಲಾಗುವುದಿಲ್ಲ.

೧೧. ಅಂಕಗಳನ್ನು ಪುನಃ ಎಣಿಸಲು ಎರಡು ರೂಪಾಯಿಗಳ ಶುಲ್ಕ ಕೊಡಬೇಕು.

೧೨. ಪರೀಕ್ಷೆಯ ಫಲಿತಾಂಶವು ಪ್ರಕಟವಾದ ಮೂವತ್ತು ದಿನಗಳಾದ ಮೇಲೆ ಅಂಕಗಳನ್ನು ಮತ್ತೆ ಎಣಿಸಲು ಅವಕಾಶವಿಲ್ಲ.

೧೩. ಅಂಕಪಟ್ಟಿ (Marks List) ಕಳುಹಿಸಲು ರೂ. ೧-೨೫ನ್ನು ಕೊಡಬೇಕು.

**ಪರೀಕ್ಷಾ ಶುಲ್ಕ : ಇಪ್ಪತ್ತೈದು ರೂಪಾಯಿಗಳು**

## ಪಠ್ಯಪುಸ್ತಕಗಳು

**ಪದ್ಯ ಸಾಹಿತ್ಯ :** (ಪತ್ರಿಕೆ ೧)

೧. ನಳಚಂಪುಸಂಗ್ರಹ ೩-೫೦
ಶ್ರೀ ಜಿ. ವೆಂಕಟಸುಬ್ಬಯ್ಯ
೫೮, ೩೧ನೆಯ ಕ್ರಾಸ್, ೭ನೆಯ ಬ್ಲಾಕ್
ಜಯನಗರ, ಬೆಂಗಳೂರು-೧೧

೨. ರಗಳೆ : ಮಲುಹಣನ ರಗಳೆ—ಹರಿಹರ ೧-೦೦
ಪಂಪಾ ಸಾಹಿತ್ಯ ಪ್ರಕಟನಾಲಯ,
ದಾವಣಗೆರೆ

೩. ಷಟ್ಪದಿ: ಜಯನೃಪಕಾವ್ಯ ಸಂಗ್ರಹ ೨-೫೦
ಶ್ರೀ ಹಂಪ. ನಾಗರಾಜಯ್ಯ
ಹರ್ಷವರ್ಧನ ಪ್ರಕಾಶನ
ಮಲ್ಲೇಶ್ವರಂ, ಬೆಂಗಳೂರು-೩

೪. ಆಧುನಿಕ ಕವನ: ದೀಪದ ಹೆಜ್ಜೆ ೨-೦೦
ಶ್ರೀ ಜಿ. ಎಸ್. ಶಿವರುದ್ರಪ್ಪ
ಜಿ. ಕೆ. ಬ್ರದರ್ಸ್
ಬಸವನಗುಡಿ, ಬೆಂಗಳೂರು-೪

**ಗದ್ಯ ಸಾಹಿತ್ಯ:** (ಪತ್ರಿಕೆ ೨)

೧. ಹಳಗನ್ನಡ: ವಡ್ಡಾರಾಧನೆ ೫-೦೦
(ಸುಕೌಶಲಸ್ವಾಮಿ ಮತ್ತು ವಿದ್ಯುಚ್ಚೋರನ ಕತೆಗಳು-ಎರಡು ಕತೆಗಳು ಮಾತ್ರ)
ಅಥವಾ ಅದ್ಭುತ ರಾಮಾಯಣ
ಶಾರದಾ ಮಂದಿರ, ರಾಮಯ್ಯರ್ ರಸ್ತೆ
ಮೈಸೂರು

೨. ಹೊಸಗನ್ನಡ: ಆಧುನಿಕ ಗದ್ಯಸಾಹಿತ್ಯ ೩-೦೦
(ಭಾಗ ೨)—ಪರಿಷತ್ತಿನ ಪ್ರಕಟನೆ

೩. ವಚನ: ಅಕ್ಕನ ವಚನಗಳು ೪-೦೦
ಶ್ರೀ ಎಲ್. ಬಸವರಾಜು
(ಮೊದಲ ನೂರು ಪುಟಗಳು ಮಾತ್ರ)
ಪ್ರಕಾಶಕರು: ಡಿ. ವಿ. ಕೆ. ಮೂರ್ತಿ
ಮೈಸೂರು

೪. ವಿಮರ್ಶೆ: ಕಾವ್ಯಸಮೀಕ್ಷೆ ೩-೦೦
ಶ್ರೀ ತೀ. ನಂ. ಶ್ರೀ.
ಕಾವ್ಯಾಲಯ, ಮೈಸೂರು-೫

**ನಾಟಕ ಸಾಹಿತ್ಯ:** (ಪತ್ರಿಕೆ ೩)

೧. ಕರ್ಣಾಟಕ ಶಾಕುಂತಲ ನಾಟಕಂ ೩-೦೦
ಶ್ರೀ ಬಸವಪ್ಪ ಶಾಸ್ತ್ರಿಗಳು

೨. ಕವಿಭಿಕ್ಷೆ ೩-೦೦
ಶ್ರೀ ಪರ್ವತವಾಣಿ
ಭಾರತೀ ಪ್ರಕಾಶನ
ಸರಸ್ವತೀಪುರಂ, ಮೈಸೂರು

೩. ಕೀಚಕ ೧-೫೦
ಕೈಲಾಸಂ
(ಕನ್ನಡರೂಪ-ಜಿ. ಪಿ. ರಾಜರತ್ನಂ)
ಹಿಂದ್ ಕಿತಾಬ್ಸ್, ಲಿ.,
ಶೇಷಾದ್ರಿಪುರಂ, ಬೆಂಗಳೂರು-೩

**ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆಯ ಮೂಲತತ್ವಗಳು:** (ಪತ್ರಿಕೆ ೪)

೧. ಕನ್ನಡ ಸಾಹಿತ್ಯ ಚರಿತ್ರೆ ೮-೦೦
ಶ್ರೀ ರಂ. ಶ್ರೀ. ಮುಗಳಿ

೨. ಕಾವ್ಯಸೂತ್ರ ೧೫-೦೦
ಶ್ರೀ ಬಿ. ಎಚ್. ಶ್ರೀಧರ
ಅಥವಾ
ಸಾಹಿತ್ಯ ವಿಮರ್ಶೆಯ ತತ್ವಗಳು ೧-೭೫
ಅನುವಾದಕರು: ಸಿ. ಪಿ. ಕೆ.

**ಕನ್ನಡ ವ್ಯಾಕರಣ ಮತ್ತು ಭಾಷಾ ಚರಿತ್ರೆ:** (ಪತ್ರಿಕೆ ೫)

೧. ಶಬ್ದಮಣಿದರ್ಪಣ ೮-೦೦
(ಮೊದಲನೆಯ ನಾಲ್ಕು ಪ್ರಕರಣಗಳು ಮಾತ್ರ)
ಶ್ರೀ ಡಿ. ಎಲ್. ನರಸಿಂಹಾಚಾರ್
ಶಾರದಾ ಮಂದಿರ
ರಾಮಯ್ಯರ್‌ರಸ್ತೆ, ಮೈಸೂರು

೨. ಕನ್ನಡ ಕೈಪಿಡಿ ೫-೫೦
(ಸಂಪುಟ ೧, ಭಾಗ ೧ ಮತ್ತು ೪)
ಮೈಸೂರು ವಿಶ್ವವಿದ್ಯಾನಿಲಯ

**ಛಂದಸ್ಸು ಮತ್ತು ಅಲಂಕಾರ ಶಾಸ್ತ್ರ:** (ಪತ್ರಿಕೆ ೬)

೧. ಭಾರತೀಯ ಕಾವ್ಯಮೀಮಾಂಸೆ ೪-೭೫
ತೀ. ನಂ. ಶ್ರೀ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨. ಕನ್ನಡ ಕೈಪಿಡಿ ೫-೫೦
(ಸಂಪುಟ ೧, ಭಾಗ ೨ ಮತ್ತು ೩)
ಮೈಸೂರು ವಿಶ್ವವಿದ್ಯಾನಿಲಯ

**ಸಂಸ್ಕೃತ:** (ಪತ್ರಿಕೆ ೭)

೧೯೬೯-೭೦ನೆಯ ಇಸವಿ ಎಂದರೆ ಮಾರ್ಚಿ ೧೯೭೦ರ ಮೈಸೂರು ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ನಿಯಮಿತವಾಗಿರುವ ಪಠ್ಯಪುಸ್ತಕ.

## ಡಾ|| ಮಾಸ್ತಿಯವರಿಗೆ ಕೇಂದ್ರ ಸಾಹಿತ್ಯ ಅಕಾಡಮಿ ಸನ್ಮಾನ

ದಿನಾಂಕ ೨೫-೫-೧೯೬೯ರಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಹಿರಿಯ ಸಾಹಿತಿ ಡಾ|| ಮಾಸ್ತಿಯವರಿಗೆ ಕೇಂದ್ರ ಸಾಹಿತ್ಯ ಅಕಾಡಮಿಯ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಡಾ|| ರಂ. ಶ್ರೀ. ಮುಗಳಿಯವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು. ಉತ್ತರ ಭಾರತದ ರಾಷ್ಟ್ರೀಯ ಪುಸ್ತಕ ಸಂಸ್ಥೆಯ ಅಧ್ಯಕ್ಷ ಡಾ|| ಬಿ. ವಿ. ಕೇಸ್ಕರ್ ಅವರು ಮತ್ತು ದಕ್ಷಿಣದ ಮಧುರೆ ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ|| ಟಿ. ಪಿ. ಮೀನಾಕ್ಷಿ ಸುಂದರಂ ಪಿಳ್ಳೆ ಅವರು ಪರಿಷತ್ತಿನ ಹಿಂದಿನ ಅಧ್ಯಕ್ಷ ಪ್ರೊ|| ಎ. ಎನ್. ಮೂರ್ತಿರಾಯರು ಸಮ್ಮೇಳನಾಧ್ಯಕ್ಷ ಪ್ರೊ|| ವಿ. ಸೀತಾರಾಮಯ್ಯನವರು ಮತ್ತು ಪರಿಷದಧ್ಯಕ್ಷ ಶ್ರೀ ಜಿ. ನಾರಾಯಣ ಅವರೂ ಡಾ|| ಮಾಸ್ತಿಯವರು ಕನ್ನಡಕ್ಕೆ ಸಲ್ಲಿಸಿರುವ ಬಹುಮುಖ ಸೇವೆಯನ್ನು ಪ್ರಶಂಸಿಸಿ ಮಾತನಾಡಿದರು. ಡಾ|| ಮುಗಳಿಯವರು ಮಾಸ್ತಿಯವರ ವ್ಯಕ್ತಿತ್ವದ ಘನತೆಯನ್ನು ಸಭೆಗೆ ತಿಳಿಸಿ ಅಕಾಡಮಿ ಪರವಾಗಿ ಪ್ರಶಸ್ತಿಯನ್ನು ಅರ್ಪಿಸಿ ಹಾರಾರ್ಪಣೆ ಮಾಡಿದರು.

ಪ್ರಾರಂಭದಲ್ಲಿ ಅಕಾಡಮಿಯ ಕಾರ್ಯದರ್ಶಿ ಡಾ|| ಪ್ರಭಾಕರ ಮಾಚ್ವೆಯವರು ಸ್ವಾಗತ ಭಾಷಣ ಮಾಡಿದರು. ಅಕಾಡಮಿಯ ದಕ್ಷಿಣ ಪ್ರಾಂತ್ಯದ ಕಚೇರಿಯ ಕಾರ್ಯದರ್ಶಿ ಡಾ|| ಕೆ. ಎಂ. ಜಾರ್ಜ್ ಅವರು ಕನ್ನಡ ಸಾಹಿತಿಗಳಿಗೆ ಇದುವರೆಗೆ ದೊರೆತ ಈ ವಿಶೇಷ ಪ್ರಶಸ್ತಿಯ ಬಗ್ಗೆ ಮಾತನಾಡಿ ವಂದನಾರ್ಪಣೆ ಮಾಡಿದರು.

### ಡಾ. ಮಾಸ್ತಿಯವರ ಸನ್ಮಾನ ಸಮಾರಂಭದಲ್ಲಿ ಅಧ್ಯಕ್ಷರ ಭಾಷಣ

ಮಾನ್ಯ ಅಧ್ಯಕ್ಷರೆ, ಪೂಜ್ಯ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರೆ, ಶ್ರೀ ಜಾರ್ಜ್‌ರವರೆ, ಶ್ರೀ ವಿ. ಸೀ. ಅವರೇ, ಶ್ರೀ ಎ. ಎನ್. ಮೂರ್ತಿರಾಯರೇ, ಹಿರಿಯರೇ ಮತ್ತು ಸ್ನೇಹಿತರೆ,

ಕನ್ನಡ ಸಾಹಿತ್ಯದಲ್ಲಿ ಒಂದು ಅನರ್ಘ್ಯರತ್ನವಾದ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಗೆ ಭಾರತ ಸಾಹಿತ್ಯ ಅಕಾದಮಿಯವರು ಏರ್ಪಡಿಸಿರುವ ಈ ಪ್ರಶಸ್ತಿ ವಿತರಣ ಸಮಾರಂಭದಲ್ಲಿ ಭಾಗವಹಿಸಲು ನನಗೆ ಅವಕಾಶ ದೊರೆತಿರುವುದು ಒಂದು ಸುಯೋಗವೆಂದು ಭಾವಿಸಿದ್ದೇನೆ. ತಮ್ಮಿಂದ ಪರಿಷದಧ್ಯಕ್ಷನಾಗಿ ಚುನಾಯಿತನಾಗಿ ಬಂದಿರುವುದರಿಂದ ನನಗೆ ಈ ಭಾಗ್ಯ ದೊರಕಿದೆ. ಅದಕ್ಕಾಗಿ ನಿಮಗೂ ಸಾಹಿತ್ಯ ಅಕಾದಮಿಯವರಿಗೂ ನನ್ನ ಕೃತಜ್ಞತೆಗಳನ್ನರ್ಪಿಸುತ್ತೇನೆ. ಅಕಾದಮಿಯ ಯಾವ ಕೆಲಸವನ್ನಾದರೂ ನಾವು ಹೆಮ್ಮೆಯಿಂದ, -ಕೃತಜ್ಞತೆಯಿಂದ, ಮಾಡುತ್ತೇವೆ. ಇದಕ್ಕೆ ಇನ್ನೊಂದು ಕಾರಣವೂ ಉಂಟು, ಡಾ|| ಮಾಸ್ತಿಯವರು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅದನ್ನು ಪ್ರಗತಿಮಾರ್ಗದಲ್ಲಿ ನಡಸಿದವರು; ಮತ್ತು ಸಮ್ಮೇಳನಾಧ್ಯಕ್ಷರಾಗಿದ್ದವರು. ಇಂತಹವರ ಪ್ರಶಸ್ತಿ ಸಮಾರಂಭ ಹೇಗೆ ಸಾಹಿತ್ಯ ಅಕಾದಮಿಯವರದೋ ಹಾಗೆಯೇ ಪರಿಷತ್ತಿನದೂ ಹೌದು.

ಡಾ|| ಮಾಸ್ತಿಯವರ ಸಾಹಿತ್ಯಸೇವೆ ಐವತ್ತು ವರ್ಷಗಳಿಗೆ ಮೀರಿ ನಡೆದಿದೆ; ನಡೆಯುತ್ತಾ ಬಂದಿದೆ. ಅವರು ಸಾಹಿತ್ಯಸೇವೆಯನ್ನು ಪ್ರಾರಂಭಿಸಿದಾಗ ಕನ್ನಡದ ಸ್ಥಿತಿ, ಅದರಲ್ಲೂ ಕನ್ನಡ ಬರಹಗಾರನ ಸ್ಥಿತಿ ಹಾಸ್ಯಾಸ್ಪದವಾಗಿತ್ತು. ಅಂತಹ ಕಾಲದಲ್ಲಿ ಕಹಿ ವಾತಾವರಣವನ್ನು ಎದುರಿಸಿ, ಸ್ವಭಾಷಾ ಪ್ರೇಮವನ್ನು ಮೂಡಿಸಿ, ಕನ್ನಡ ಜನಕ್ಕೆ ಕನ್ನಡದ ಸವಿಯನ್ನು, ಸೊಗಸನ್ನು ಪರಿಚಯ ಮಾಡಿಕೊಟ್ಟವರು ಅವರು. ಮನೆಯ ಮಾತು ತಮಿಳಾದರೂ, ತಮಿಳಿನ ಜೊತೆಗೆ ಇಂಗ್ಲಿಷ್, ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ಉದ್ದಾಮ ಪಾಂಡಿತ್ಯವನ್ನು ಸಂಪಾದಿಸಿದವರು. ಕಾವ್ಯ, ಸಣ್ಣಕತೆ, ಕಾದಂಬರಿ, ವಿಮರ್ಶೆ, ಜೀವನಚರಿತ್ರೆ, ನಾಟಕ ಮುಂತಾದ ಸಾಹಿತ್ಯದ ಎಲ್ಲ ವಿಭಾಗಗಳಲ್ಲಿಯೂ ಉದ್ಗ್ರಂಥಗಳನ್ನು ರಚಿಸಿ, ಕನ್ನಡದ ಸಾಹಿತ್ಯ ಭಂಡಾರವನ್ನು ತುಂಬಿದವರು. ಇಪ್ಪತ್ತೈದು ವರ್ಷಗಳಕಾಲ "ಜೀವನ"ವೆಂಬ ಮಾಸಪತ್ರಿಕೆಯನ್ನು ನಡಸಿ, ತರುಣ ಬರಹಗಾರರಿಗೆ ಮಾರ್ಗದರ್ಶನ ಮಾಡಿಸಿ ಹೊಸಪೀಳಿಗೆಯ ಸಾಹಿತಿಗಳನ್ನು ಬೆಳೆಸಿದವರು. ಶ್ರೀ ಜಯಚಾಮರಾಜ ಒಡೆಯರವರಿಂದ "ರಾಜಸೇವಾಸಕ್ತ" ಎಂಬ ಬಿರುದನ್ನು ಪಡೆದು, ಅರಮನೆ-ಗುರುಮನೆಗಳ ಗೌರವ ಮೆಚ್ಚಿಕೆಗಳನ್ನು ಸಂಪಾದಿಸಿದವರು.

ಡಾ|| ಮಾಸ್ತಿಯವರು ಕವನ, ಸಣ್ಣಕತೆಗಳಿಂದ ತಮ್ಮ ಸಾಹಿತ್ಯಸೇವೆಯನ್ನು ಪ್ರಾರಂಭಿಸಿದರು. ಪ್ರತಿಭಾನ್ವಿತರಾದ ಕವಿಯಾದ್ದರಿಂದ ಅವರ ಕವಿತಾಕೃತಿಗಳು "ಅರುಣ" ಪುಸ್ತಕದಿಂದ ಪ್ರಾರಂಭವಾಗಿ, "ಬಿನ್ನಹ", "ತಾವರೆ", "ಚಲುವು", "ಮಲಾರ" ಮುಂತಾದ ಸಂಕಲನಗಳಿಂದ

(೪೮ನೇ ಪುಟ ನೋಡಿ)

## ಸಂಪಾದಕೀಯ

# ಮೈಸೂರು-ಮಹಾರಾಷ್ಟ್ರ ಗಡಿಸಮಸ್ಯೆ

ಈ ದಿನ ಪ್ರಮುಖವಾಗಿ ಎಲ್ಲ ಕನ್ನಡಿಗರ ಮುಂದಿರುವ ಬೃಹತ್ ಸಮಸ್ಯೆ ಮೈಸೂರು ಮಹಾರಾಷ್ಟ್ರಗಳ ಗಡಿಸಮಸ್ಯೆ. ಈ ಸಮಸ್ಯೆಯ ಪರಿಹಾರಕ್ಕಾಗಿ ಎರಡೂ ಸರ್ಕಾರಗಳ ಸಮ್ಮತಿಯಂತೆ ಮಹಾಜನ ಆಯೋಗವು ಅಂಕಿ ಅಂಶಗಳನ್ನು ಶೇಖರಿಸಿ ತನ್ನ ವರದಿಯನ್ನು ಪ್ರಕಟಿಸಿದೆ. ಈ ವರದಿಯೂ ಕೂಡ ಕನ್ನಡಿಗರಿಗೆ ಪೂರ್ಣವಾದ ನ್ಯಾಯವನ್ನು ದೊರಕಿಸಿ ಕೊಡದಿದ್ದರೂ ಕೊಟ್ಟ ಮಾತನ್ನುಳಿಸಿಕೊಳ್ಳುವುದಕ್ಕಾಗಿ ಮೈಸೂರು ಸರ್ಕಾರ ಈ ವರದಿಯನ್ನೊಪ್ಪಿಕೊಂಡಿದೆ. ಆದರೆ ಮಹಾರಾಷ್ಟ್ರದವರ ಚಾಣಾಕ್ಷತನದಿಂದ ಈ ವರದಿ ಪ್ರಕಟವಾಗಿ ಎರಡು ವರುಷಗಳಾದರೂ ಕೇಂದ್ರಸರ್ಕಾರ ಅದನ್ನು ಅಂಗೀಕಾರ ಮಾಡದೆ ಇದೆ. ಈ ಕಾಲ ವ್ಯವಧಾನವನ್ನು ನೋಡಿದರೆ ಕನ್ನಡಿಗರಿಗೆ ಕೇಂದ್ರ ಸರ್ಕಾರದ ಒಪ್ಪಿಗೆಯ ವಿಷಯದಲ್ಲಿ ಅನುಮಾನ ಬಂದಿದೆ.

ಈ ಸಮಸ್ಯೆಯ ಕೇಂದ್ರ ಬೆಳಗಾವಿನ ಪ್ರದೇಶ. ಅದು ಯಾವ ಪ್ರಾಂತಕ್ಕೆ ಸೇರಬೇಕೆಂಬುದು ಈ ಸಮಸ್ಯೆಯ ಜೀವನಾಡಿ. ಚಾಲುಕ್ಯ, ರಾಷ್ಟ್ರಕೂಟ, ವಿಜಯನಗರ ಸಾಮ್ರಾಜ್ಯಗಳ ಭಾಗವಾಗಿ ಬೆಳಗಾವಿಯು ಬೆಳೆದುಬಂತು. ಬ್ರಿಟಿಷ್ ಆಳ್ವಿಕೆಯಲ್ಲಿ ಅದು ಕರ್ಣಾಟಕದ ಒಂದು ಭಾಗವಾಗಿತ್ತು. ಹೊಸಗನ್ನಡದ ಮೂಲಪುರುಷರಾದ ಡೆಪ್ಯುಟಿ ಚನ್ನಬಸಪ್ಪ, ವೆಂಕಟರಂಗೋಕಟ್ಟಿ, ತುರಮುರಿ ಈ ಸಾಹಿತಿಗಳಿಗೆ ಬೆಳಗಾವಿಯೇ ಕಾರ್ಯಕ್ಷೇತ್ರವಾಗಿತ್ತು. ೧೯೨೫, ೧೯೨೯ ಮತ್ತು ೧೯೫೪ - ಈ ಮೂರು ವರ್ಷಗಳಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಅಲ್ಲಿ ನಡೆದಿದೆ. ೧೯೪೬ರಲ್ಲಿ ಬೆಳಗಾವಿಯಲ್ಲಿ ಸೇರಿದ ಮರಾಠಿ ಸಾಹಿತ್ಯ ಸಮ್ಮೇಳನ ಒಂದು ಪ್ರಕಟನೆಯನ್ನು ಹೊರಡಿಸಿ ಬೆಳಗಾವಿಯು ಕರ್ಣಾಟಕದ ಭಾಗವೆಂದು ಸಾರಿತು. ಹೀಗೆ ಚಾರಿತ್ರಿಕವಾಗಿ ಸಾಹಿತಿಕವಾಗಿ ಸಾಂಸ್ಕೃತಿಕವಾಗಿ ಬೆಳಗಾವಿ ಕರ್ಣಾಟಕದ್ದೇ ಆಗಿರುತ್ತದೆ.

ಆದರೆ ಈಗ ಕೇಂದ್ರ ಸರ್ಕಾರದ ಮಂತ್ರಿಮಂಡಲದಲ್ಲಿ ಮಹಾರಾಷ್ಟ್ರದವರು ಪ್ರಮುಖ ಸ್ಥಾನಗಳಲ್ಲಿರುವುದರಿಂದ ಈ ಎಲ್ಲ ಆಧಾರಗಳನ್ನೂ ಕಡೆಗಣಿಸಿ ಕೇವಲ ದಬ್ಬಾಳಿಕೆಯಿಂದ ಬೆಳಗಾವಿಯನ್ನು ಮಹಾರಾಷ್ಟ್ರ ಪ್ರಾಂತಕ್ಕೆ ಸೇರಿಸಲು ಹೊಂಚುಹಾಕಿದ್ದಾರೆ. ಪಾಟಸ್ಕರ್ ಸೂತ್ರವನ್ನು ಪಠಿಸುತ್ತಿದ್ದಾರೆ. ಶಿವಸೇನೆಯಂತಹ ಚಳುವಳಿಗೆ ಉತ್ತೇಜನ ಕೊಟ್ಟು ಕನ್ನಡಿಗರ ರಕ್ತವನ್ನು ಹರಿಸುತ್ತಿದ್ದಾರೆ. ಈ ದಬ್ಬಾಳಿಕೆಯನ್ನು ಕನ್ನಡಿಗರು - ಹೆಚ್ಚಾಗಿ ಗಡಿಯಲ್ಲಿರುವ ಕನ್ನಡಿಗರು - ಪ್ರತಿಭಟಿಸಬೇಕಾಗಿದೆ. ಎಲ್ಲ ಕನ್ನಡ ಸಂಘ ಸಂಸ್ಥೆಗಳೂ, ಬೃಹತ್ಸಭೆಗಳನ್ನು ನಡೆಸಿ, ನಿರ್ಣಯಗಳನ್ನು ಮಾಡಿ ಕೇಂದ್ರ ಸರ್ಕಾರಕ್ಕೂ ಪ್ರಾಂತಸರ್ಕಾರಗಳಿಗೂ ಕಳುಹಿಸಬೇಕು. ಈ ಸಮಸ್ಯೆಯನ್ನು ಮಹಾಜನ ವರದಿಯಂತೆ ಪರಿಹಾರಮಾಡದಿದ್ದರೆ ಮುಂದೆ ಬರಬಹುದಾದ ಆಂದೋಲನಗಳಿಗೆ ಕೇಂದ್ರಸರ್ಕಾರವೇ ಹೊಣೆಯಾಗಿರುತ್ತದೆಂದು ಸಾರಬೇಕು.

ಈ ಗಡಿಯ ಪ್ರಶ್ನೆ ಕೇವಲ ಬೆಳಗಾವಿಗೆ ಮಾತ್ರ ಸೀಮಿತವಾದದ್ದಲ್ಲ. ಅಚ್ಚಕನ್ನಡದ ಭಾಗಗಳು ನಾಲ್ಕು ದಿಕ್ಕಿನಲ್ಲಿ ಬೇರೆ ಬೇರೆ ಪ್ರಾಂತಗಳಲ್ಲಿ ಸೇರಿಕೊಂಡಿವೆ. ಅವುಗಳನ್ನು ಕೂಡ ಕನ್ನಡ ನಾಡಿನ ಒಂದು ಭಾಗವಾಗಿ ಸೇರಿಸಲು ಬೃಹತ್ಪ್ರಯತ್ನ ನಡೆಯಬೇಕಾಗಿದೆ.

ನಮ್ಮ ಅದೃಷ್ಟದಿಂದ ಮೈಸೂರು ಸರ್ಕಾರವು ಈ ನಮ್ಮ ಎಲ್ಲ ಕನ್ನಡಿಗರ ಧೋರಣೆಯನ್ನೇ ಎತ್ತಿಹಿಡಿದಿದೆ. ನಮ್ಮ ಮುಖ್ಯಮಂತ್ರಿಗಳಾದ ಶ್ರೀ ವೀರೇಂದ್ರ ಪಾಟೀಲರು ಈಚೆಗೆ ಮೈಸೂರಿನಲ್ಲಿ ಇದನ್ನು ತಮ್ಮ ವೀರವಾಕ್ಯಗಳಿಂದ ಖಚಿತಗೊಳಿಸಿದ್ದಾರೆ. ಈಗ ಬರುವ ಜುಲೈ ತಿಂಗಳಿನಲ್ಲಿ ಅಖಿಲ ಭಾರತ ಕಾಂಗ್ರೆಸ್ ಕಮಿಟಿ ಬೆಂಗಳೂರಿನಲ್ಲಿ ಸೇರುವಾಗ ಪರಿಷತ್ತಿನ ಪ್ರತಿನಿಧಿಗಳು ಕೇಂದ್ರದ ಪ್ರಮುಖ ಮಂತ್ರಿಗಳನ್ನೂ ಪ್ರಧಾನ ಮಂತ್ರಿಯವರನ್ನೂ ಕಂಡು ತಕ್ಕ ವಿವರಣೆ ಕೊಟ್ಟು ಮಹಾಜನ ವರದಿಯನ್ನು ಒಪ್ಪುವಂತೆ ತಿಳಿಸುವವರಾಗಿದ್ದಾರೆ.

ಈ ಮೇಲಿನ ಕಾರ್ಯಕ್ರಮಗಳು ಕನ್ನಡಿಗರಿಗೆ ನ್ಯಾಯವನ್ನು ದೊರಕಿಸಿಕೊಡುತ್ತವೆಂಬ ಭರವಸೆಯಲ್ಲಿದ್ದೇವೆ.

(೪೬ನೇ ಪುಟದಿಂದ)

ಬೆಳೆದುವು. ಕನ್ನಡದ ಸಣ್ಣಕತೆಗಳಿಗಂತೂ ಅವರೇ ಪಿತಾಮಹರು. ಆ ಕತೆಗಳಲ್ಲಿ ಬರುವ ಪಾತ್ರಗಳ ಕಷ್ಟ-ಸುಖಗಳಲ್ಲಿ ಓದುಗರು ಆತ್ಮೀಯತೆಯನ್ನು ಪಡೆಯುವಂತೆ ಹೇಳುವ ಸೊಗಸು ಮಾಸ್ತಿಯವರ ವೈಶಿಷ್ಟ್ಯ. ಅವರ ಕತೆಗಳು ನೀತಿಬೋಧಕವಾಗಿಯೂ, ಯುಕ್ತಿಯುಕ್ತವಾಗಿಯೂ, ರಸವತ್ತಾಗಿಯೂ, ಚಿತ್ತಾಕರ್ಷಕವಾಗಿಯೂ, ಲಲಿತವಾದ ಸ್ವಾಭಾವಿಕವಾದ ಭಾಷೆಯಿಂದಲೂ ಕೂಡಿರುವುದಾಗಿದೆ. "ಸುಬ್ಬಣ್ಣ" ಅವರ ಮೇರುಕೃತಿ. ಕವಿಯ ಪ್ರತಿಭೆ ಗದ್ಯಶೈಲಿಯನ್ನು ಮೀರಿಸಿ, ಅವು ಕಥನ ಕವನಗಳಲ್ಲಿ ನಿರರ್ಗಳವಾಗಿ ಹರಿದು, ಅವುಗಳ ಒಂದು ರಾಶಿಯೇ ನಿರ್ಮಾಣವಾದುವು. ಅವರ ಕತೆಗಳಿಗೆ ಪ್ರಪಂಚದ ಅತ್ಯುತ್ತಮ ಸಣ್ಣಕತೆಗಳ ಸ್ಥಾನದಲ್ಲಿ ಅಗ್ರಸ್ಥಾನ ಸಿಗುತ್ತದೆ. ಇವುಗಳ ರುಚಿಯನ್ನು ಓದಿಯೇ ಅನುಭವಿಸಬೇಕು. ಇಂತಹ ಉತ್ಕೃಷ್ಟವಾದ ಸಣ್ಣಕತೆಗಳಿಗೆ ಭಾರತ ಸಾಹಿತ್ಯ ಅಕಾದಮಿಯವರು ಪ್ರಶಸ್ತಿಯನ್ನು ನೀಡಿರುವುದು ಉಚಿತವಾಗಿದೆ.

'ವಿಮರ್ಶೆ' ಎಂಬ ಲೇಖನದಲ್ಲಿ ವಿಮರ್ಶೆಯ ರೀತಿ ನೀತಿಗಳನ್ನು ನಿರೂಪಿಸಿಕೊಟ್ಟು, ಅದಕ್ಕೆ ಉದಾಹರಣೆಯಾಗಿ ಸುಮಾರು ಇಪ್ಪತ್ತು ವಿವಿಧ ಬಗೆಯ ಪುಸ್ತಕಗಳ ವಿಮರ್ಶೆಯನ್ನೂ ಒದಗಿಸಿಕೊಟ್ಟಿದ್ದಾರೆ. ಹತ್ತಾರು ನಾಟಕಗಳನ್ನು ಬರೆದು "ಯಶೋಧರೆ"ಯಂತಹ ನಾಟಕ ರತ್ನವನ್ನು ನೀಡಿದ್ದಾರೆ. ಷೇಕ್ಸ್‌ಪಿಯರ್ ನಾಟಕಗಳ ಸ್ವಾರಸ್ಯವಾದ ಭಾಗಗಳನ್ನು ಕನ್ನಡಿಗರಿಗೆ ಭಾಷಾಂತರಿಸಿಕೊಟ್ಟಿದ್ದಾರೆ. "ಚನ್ನಬಸವನಾಯಕ", "ಚಿಕ್ಕವೀರ ರಾಜೇಂದ್ರ" ಮೊದಲಾದ ವೀರ ಕನ್ನಡಿಗರನ್ನು ಕಾದಂಬರಿಯಾಗಿ ಚಿತ್ರಿಸಿದ್ದಾರೆ. ರವೀಂದ್ರನಾಥ ಠಾಕೂರರು, ರಾಮಕೃಷ್ಣ ಪರಮಹಂಸರು ಇಂತಹ ಆದರ್ಶ ಪುರುಷರ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. ಪುರಂದರದಾಸ-ಕನಕದಾಸರ ಜೀವನವನ್ನು ನಾಟಕೀಯವಾಗಿ ಚಿತ್ರಿಸಿದ್ದಾರೆ. ಉತ್ತಮ ಸಾಹಿತಿಯಾದವನು ಯಾವ ಯಾವ ಬಗೆಗಳಲ್ಲಿ ಸಾಹಿತ್ಯ ಸೇವೆಯನ್ನು ಮಾಡಬಹುದೋ ಅದನ್ನೆಲ್ಲಾ ಉತ್ತಮವಾಗಿ ಆದರ್ಶ ರೀತಿಯಲ್ಲಿ ಮಾಡಿದ್ದಾರೆ.

ನನಗೆ ತೋರುವುದೆಂದರೆ, ಇವುಗಳ ಜೊತೆಗೆ ಇವರ ಮಾಡಿರುವ ವಿಶೇಷ ಸೇವೆ, ಭಾರತದ ಮಹಾಕಾವ್ಯಗಳ ವಿಷಯವಾಗಿ ಬರೆದಿರುವ, ಪಂಡಿತ ಪಾಮರರಿಗೂ, ಆಸ್ತಿಕ-ನಾಸ್ತಿಕರಿಗೂ ದಾರಿ ತೋರುವ ಎರಡು ಪುಸ್ತಕಗಳು "ಆದಿ ಕವಿ ವಾಲ್ಮೀಕಿ" ಮತ್ತು "ಭಾರತ ತೀರ್ಥ" ರಾಮಾಯಣ ಮಹಾಭಾರತ ಮಹಾಕಾವ್ಯಗಳನ್ನು ಓದಿ, ಮೇಲಿಂದಮೇಲೆ ಚಿಂತನೆ ಮಾಡಿ, ಅವುಗಳ ಸಾರವನ್ನು ಹೀರಿ, ಅವುಗಳಿಂದ ಪ್ರಯೋಜನ ಪಡೆಯುವ ಹೊಸ ದೃಷ್ಟಿಕೋನವನ್ನು ನಿರೂಪಿಸಿರುವ ಈ ಎರಡು ಗ್ರಂಥಗಳು ಕೇವಲ ಕನ್ನಡಕ್ಕೆ ಮಾತ್ರವಲ್ಲ, ಪ್ರಪಂಚಕ್ಕೇ ಒಂದು ಮಾರ್ಗವನ್ನು ತೋರುವ ಗ್ರಂಥಗಳು. ಮಾನವ ಜನಾಂಗ ಪಶುಪ್ರವೃತ್ತಿಯನ್ನು ಮೀರಿ ಆದರ್ಶ ಮಾನವರಾಗಿ ಬಾಳಲು ಬೇಕಾದ ಸಾಹಿತ್ಯ, ಸಂಸ್ಕೃತಿ, ನೀತಿ, ತತ್ವಬೋಧೆ-ಎಲ್ಲವೂ ಈ ಪುಸ್ತಕಗಳಲ್ಲಿ ಸಿಗುತ್ತವೆ. ಮಹಾತ್ಮಾ ಗಾಂಧಿಯವರು ತಮ್ಮ "ಜೀವನವೇ ಒಂದು ತೆರೆದ ಪುಸ್ತಕ" ಎಂದು ಹೇಳಿದರು. ಡಾ|| ಮಾಸ್ತಿಯವರು ತಮ್ಮ ಜೀವನ ಚರಿತ್ರೆಯನ್ನು "ಭಾವ" ಎಂಬ ಹೆಸರಿನಿಂದ ತೆರೆದಿಟ್ಟಿದ್ದಾರೆ. ಒಂದು ಹಿರಿಯ ಸುಸಂಸ್ಕೃತ ಜೀವನದ ಚಿತ್ರ, ಆದರ್ಶ ಅಲ್ಲಿ ದೊರಕುತ್ತದೆ.

ಹೀಗೆ ಸುಮಾರು ೧೫,೦೦೦ ಪುಟಗಳಿಗೂ ಮೀರಿದಷ್ಟು ಸಾಹಿತ್ಯ ಡಾ|| ಮಾಸ್ತಿಯವರಿಂದ ರಚಿತವಾಗಿದೆ. ಸಾಗರದಷ್ಟು ಸಾಮಗ್ರಿ ನಮ್ಮ ಕಣ್ಣಮುಂದೆ ಇದೆ. ಯಾರು ಯಾರು ಎಷ್ಟೆಷ್ಟನ್ನು ಅವರ ಕೊಡದಲ್ಲಿ ತುಂಬಿಕೊಂಡು ಅದರ ಪ್ರಯೋಜನ ಪಡೆಯುವರೋ ಅಷ್ಟೇ ಅವರ ಅದೃಷ್ಟ. ಇಂತಹ ಕನ್ನಡದ ವರಪುತ್ರರಾದ ಡಾ|| ಮಾಸ್ತಿಯವರು ಇನ್ನೂ ಬಹುಕಾಲ ನಮ್ಮೊಡನಿದ್ದು ಕನ್ನಡ ಜನತೆಯನ್ನೂ-ಕನ್ನಡ ಸಾಹಿತ್ಯ ಪರಿಷತ್ತನ್ನೂ ಸನ್ಮಾರ್ಗದಲ್ಲಿ ನಡೆಸಲು ಸಲಹೆ ಸೂಚನೆಗಳನ್ನೂ ಕೊಡುತ್ತಾ ಇರಲಿ; ಭಗವಂತನು ಅವರಿಗೆ ಆಯುರಾರೋಗ್ಯ ಐಶ್ವರ್ಯಾದಿಗಳನ್ನು ಕೊಟ್ಟು ಕಾಪಾಡಲೆಂದೂ ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಪರಿಷತ್ತಿನಲ್ಲಿ ಈ ಸಮಾರಂಭವನ್ನು ನಡೆಸಲು ಅವಕಾಶವನ್ನು ದೊರಕಿಸಿಕೊಟ್ಟ ಸಾಹಿತ್ಯ ಅಕಾದಮಿಯವರಿಗೆ ಹಾಗೂ ವೈಯಕ್ತಿಕವಾಗಿ ಶ್ರೀ ಜಾರ್ಜ್ ಅವರಿಗೂ ಮತ್ತೊಮ್ಮೆ ವಂದನೆಗಳನ್ನು ಸಲ್ಲಿಸಿ, ಡಾ|| ಮಾಸ್ತಿಯವರಿಗೆ ಪರಿಷತ್ತಿನ ಹಾಗೂ ನನ್ನ ಶುಭಾಶಯಗಳನ್ನು ಸಲ್ಲಿಸಿ ನನ್ನ ಮಾತನ್ನು ಮುಗಿಸುತ್ತೇನೆ.

---

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ. ಪೈ. |
|---|---|---|
| ೧. | ಕನ್ನಡದ ಬಾವುಟ .... .... | ೩—೦೦ |
| ೨. | ಜೇಮ್ಸ್ ಏಬ್ರಹಾಮ್ ಗಾರ್‌ಫೀಲ್ಡನ ಚರಿತ್ರೆ: ಕ್ಯಾಲಿಕೊ ಪ್ರತಿ | ೧—೫೦ |
| | ನಾಲ್ಕನೆಯ ಮುದ್ರಣ: ಸಾದಾ ಪ್ರತಿ .... | ೧—೦೦ |
| ೩. | ಜ್ಯೋತಿರ್ವಿನೋದಿನಿ .... .... | ೨—೦೦ |
| ೪. | ಕನ್ನಡ ನಾಡಿನ ಚರಿತ್ರೆ: ಭಾಗ ೧ .... .... | ೨—೦೦ |
| | ಭಾಗ ೨ .... .... | ೨—೭೫ |
| | ಭಾಗ ೩ .... .... | ೧—೫೦ |
| ೫. | ಹರಿದಾಸ ಸಾಹಿತ್ಯ: ಇಂಗ್ಲಿಷ್ ಉಪೋದ್ಘಾತದೊಡನೆ .... | ೧೦—೦೦ |
| | ,, ಉಪೋದ್ಘಾತವಿಲ್ಲದ ಪ್ರತಿ .... | ೮—೦೦ |
| ೬. | ಗಾಳಿಯಲ್ಲಿನ ಅಗೋಚರ ಶತ್ರುಗಳು .... .... | ೧—೨೫ |
| ೭. | ನಕ್ಷತ್ರ ದರ್ಶನ .... .... | ೧—೫೦ |
| ೮. | ಹರಿದಾಸ ಕೃತಿಮಂಜರಿ .... .... | ೧—೨೫ |
| ೯. | ಪ್ಲೇಟೋವಿನ ಆದರ್ಶ ರಾಜ್ಯ .... .... | ೧—೩೮ |
| ೧೦. | ಚೇರಮ ಕಾವ್ಯಂ .... .... | ೨—೦೦ |
| ೧೧. | ಕನ್ನಡದ ಅತ್ಯುತ್ತಮ ಸಣ್ಣಕತೆಗಳು: ಮೂರನೆಯ ಸಂಪುಟ .... | ೪—೦೦ |
| ೧೨. | ಕಾದಂಬರಿ ಸಾಮಾನ್ಯ ಮನುಷ್ಯ .... .... | ೧—೦೦ |
| ೧೩. | ಉದ್ಭಟದೇವ ಚರಿತೆ ... .... | ೧—೫೦ |
| ೧೪. | ತ್ರಿಪುರದಹನ ಸಾಂಗತ್ಯ .... .... | ೦—೭೫ |
| ೧೫. | ಗಮಕ ಪ್ರವೇಶದಾಯಿನಿ .... .... | ೧—೫೦ |
| ೧೬. | ಗಮಕ ಪ್ರಚಾರ ಬೋಧಿನಿ .... .... | ೦—೭೫ |
| ೧೭. | ಕಾಳಿದಾಸನ ದೃಷ್ಟಿ-ಸೃಷ್ಟಿ .... .... | ೨—೦೦ |
| ೧೮. | ಹೂಮಾಲೆ .... .... | ೦—೬೩ |
| ೧೯. | ಆಧುನಿಕ ಗದ್ಯಸಾಹಿತ್ಯ: ಭಾಗ ೧ .... .... | ೩—೦೦ |
| | ಭಾಗ ೨ .... .... | ೩—೦೦ |
| ೨೦. | ಸರ್ವೋದಯ .... .... | ೦—೩೨ |
| ೨೧. | ಅರುಂಧತಿ .... .... | ೦—೨೫ |
| ೨೨. | ಕಾವ್ಯಸೌರಭ .... .... | ೨—೦೦ |
| ೨೩. | ವಿಕ್ರಮಾರ್ಜುನ ವಿಜಯ .... .... | ೧—೦೦ |
| ೨೪. | ವಾಚನ ಕಾವ್ಯಮಂಜರಿ .... .... | ೦—೧೯ |
| ೨೫. | ಕರ್ಣ ಕರ್ಣಾಮೃತ .... .... | ೨—೫೦ |

೫ ರೂ.ಗಳಿಗೆ ಕಡಿಮೆಯಿಲ್ಲದೆ ಕೊಳ್ಳುವ ಪುಸ್ತಕ ವ್ಯಾಪಾರಿಗಳಿಗೆ ಶೇ. ೨೫ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು. ಪಠ್ಯಪುಸ್ತಕಗಳಿಗೆ ಶೇ. ೧೫ ಮಾತ್ರ

Reg. No. B. G. 4—June-July 1969

Licensed to Post without pre-payment, Licence No. 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಬೆಂಗಳೂರು-೧೮

ಸಂಪಾದಕ

ಜಿ. ವೆಂಕಟಸುಬ್ಬಯ್ಯ

ಸಂಪಾದಕ ಮಂಡಲಿ

ಶ್ರೀನಿವಾಸರಾವ್ ಕೊರಟಿ

ಆರ್. ರಾಚಪ್ಪ

# ಕನ್ನಡ ನುಡಿ




ಆಗಸ್ಟ್ : ೧೯೬೯

ಸಂಪುಟ ೩೨
ಸಂಚಿಕೆ ೮

ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ,
ಬೆಂಗಳೂರು-೧೮

# ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ-ಕನ್ನಡ ನಿಘಂಟು

## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಲಾಗಿದೆ. ೧೯೭೬ರಲ್ಲಿ ನಿಘಂಟು ಪೂರ್ತಿಯಾಗುವ ನಿರೀಕ್ಷೆ ಇದೆ. ಮೊದಲ ಸಂಪುಟದ ಐದನೆಯ ಸಂಚಿಕೆ ಈಗಾಗಲೇ ಪ್ರಕಟವಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಇದು ಇನ್ನೂ ಹೆಚ್ಚಾಗಬಹುದು. ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿ ಅದನ್ನು ಮುಂಗಡವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ಮುಂಗಡ ಹಣ ನೂರು ರೂಪಾಯಿಗಳನ್ನು ಹತ್ತು ರೂ.ಗೆ ಕಡಿಮೆಯಿಲ್ಲದ ಕಂತುಗಳಲ್ಲಿ ಪಾವತಿ ಮಾಡಬಹುದು. ಆದರೆ ಪೂರ್ತ ಹಣ ಸಂದಾಯವಾಗುವವರೆಗೆ ಸಂಚಿಕೆಗಳನ್ನು ಕಳಿಸಲಾಗುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ ರಿಯಾಯಿತಿಯ ದರದಲ್ಲಿ ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಸಂಪುಟಗಳು ಸಿದ್ಧವಾದಂತೆ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು. ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಈಗ ಹೆಚ್ಚಾಗಿರುವ ಅಂಚೆ ದರದಂತೆ ರಿಜಿಸ್ಟರ್ ಅಂಚೆಯ ಮೂಲಕ ಕಳುಹಿಸುವ ಪ್ರತಿ ಸಂಚಿಕೆಗೂ ಒಂದು ರೂಪಾಯಿನ ಅಂಚೆವೆಚ್ಚ ತಗಲುತ್ತದೆ. ಆದುದರಿಂದ ಗ್ರಾಹಕರು ಮುಂಗಡ ಬೆಲೆಯ ಜೊತೆಗೆ *ಐವತ್ತು ರೂಪಾಯಿಗಳನ್ನು ಅಂಚೆವೆಚ್ಚ ರವಾನೆ ವೆಚ್ಚಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ ತಿಳಿಸಿ ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

ನಿಘಂಟಿನ ಬಿಡಿಸಂಚಿಕೆಗಳನ್ನು ಪ್ರತಿ ಒಂದಕ್ಕೆ ನಾಲ್ಕು ರೂಪಾಯಿಗಳಂತೆ ಪಡೆಯಬಹುದು.

### ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮

ಈ ವಿಳಾಸಕ್ಕೆ ಬ್ಯಾಂಕ್ ಡ್ರಾಫ್ಟ್ ಅಥವಾ ಮನಿಯಾರ್ಡರ್ ಅಥವಾ ನಗದಾಗಿ ಹಣ ಕಳಿಸಿ ಪತ್ರವ್ಯವಹಾರ ಮಾಡಬಹುದು.

---

* ವಿ. ಸೂ :- ಸಂಚಿಕೆಗಳ ರವಾನೆಗೆ ಆವಶ್ಯಕವಾದ ಐವತ್ತು ರೂಪಾಯಿಗಳನ್ನು ಇದುವರೆಗೆ ಸಲ್ಲಿಸದೆ ಇರುವ ಅಥವಾ ಕಡಮೆ ಹಣವನ್ನು ಸಲ್ಲಿಸಿರುವ ಗ್ರಾಹಕರು ಸಂಚಿಕೆಗಳನ್ನು ಪಡೆಯುವ ನಿಶ್ಚಿತೆಗಾಗಿ ಈ ಕೂಡಲೇ ಪೂರ್ತಿ ಹಣವನ್ನು ಸಲ್ಲಿಸಬೇಕಾಗಿ ಕೋರಿದೆ.

# ಕನ್ನಡ ನುಡಿ

'ಕನ್ನಡ ನುಡಿ' ಕರ್ನಾಟಕದ ಗೆಜೆಟಿಯರ್ ಆಗಬೇಕು

—ಬಿ.ಎಂ.ಶ್ರೀ



ಸಂಚಿಕೆ : ೮ ಸಂಪುಟ : ೩೨

ಆಗಸ್ಟ್ ೧೯೬೯



ಈ ಸಂಚಿಕೆಯಲ್ಲಿ . . .



## ಕೈಮುಗಿದ ಕರುಣಾಳು

[ಪೂರ್ಣದೃಷ್ಟಿಗೆ ಬುದ್ಧ, ಬಸವ ಹಾಗೂ ಬಾಪೂಜಿ ಒಂದೇ 'ಸತ್'ನ ಮೂರು ಮುಖಗಳು. ಋತಚಿದ್ವಿನ್ಯಾಸ ಭಗವದ್ ಲೀಲಾವಿಭೂತಿಯ ಅವಿನಾಶಿ ಅಂಗಗಳು. ಅದರ ಸಮ್ಯಕ್ ದರ್ಶನವೇ–'ಕೈಮುಗಿದ ಕರುಣಾಳು'—ಲೇ]



ನಿನ್ನೆದೆಯ ನಂದನಕೆ ಗುಂಡಿಟ್ಟ ಪಾತಕಿಗೂ
ಕೈಮುಗಿದ ಕರುಣಾಳು ನಿನಗೆ ಮಣಿವೆ।
ನಮ್ಮೆದೆಯ ನಂಜೀಂಟ ನೀಲಕಂಠನೆ ಆಗಿ
ಲೋಕ ಸಂರಕ್ಷಿಸಿದ ನಿನ್ನ ನೆನೆವೆ॥

ವರುಷ ಶತ-ಶತಕಕೂ ಹಿಂದೊಮ್ಮೆ ನೀನಂದು
'ಬುದ್ಧ'ನೆಂಬಭಿಧಾನ ತಳೆದು ಬಂದೆ।
ನಮ್ಮೊಡನೆ ನಡೆ–ನಡೆದು ಶಾಂತಿ–ಸಹನೆಯ ನುಡಿದು
ಲೋಕ ಜೀವನಕಂದು ನೆಮ್ಮದಿಯ ತಂದೆ॥

ಸಿದ್ಧ–ಬುದ್ಧನೆ ನೀನು ಬಸವದೇವನೆ ಆಗಿ
ಬಾಂದಳದ ಬೆಳಕಾಗಿ ಬುವಿಗೆ ಇಳಿದೆ।
ಜಾತಿ–ಮತ, ಕುಲ-ಧರ್ಮ ಕುರುಡುಕಟ್ಟಳೆ ಕಳೆದು
ಮನುಜಲೋಕಕೆ ಮುಕ್ತಿ–ಮಾರ್ಗ ತೆರೆದೆ॥

ಬುದ್ಧ–ಬಸವನೆ ನೀನು ಮತ್ತೊಮ್ಮೆ ಮೈದಳೆದು
ಬಾಪೂಜಿ ರೂಪದಲಿ ಅವತರಿಸಿ ಇಂದು।
ಬೆಳೆಸಿ ನಮ್ಮಯ ಬದುಕ; ಕಳೆದೆ ವಿಶ್ವದ ತವಕ
ಉಳಿಯೆ ಅಟಿಯದೆ ಸೃಷ್ಟಿ ಇಂದು ಮುಂದು॥



ಕೆ. ಆರ್. ಗಣೇಶರಾವ್

# ದನ - ಕರು

## ಜನಪದ ಸಂಗ್ರಹ

•

ಬಂಡಿಗೂಡಿದೆತ್ತು ಬಾಗಿಲಿಗೆ ಬಂದಾವ
ಸೆರಗೀಲೆ ಧೂಳ ಕೊಡವೇನೆ | ಹಾಲ್ಯಾ ನಿನಗೆ
ನೀಲಾದಾರುತಿಯ ಬೆಳಗೇನೆ ॥ ೧ ॥

ದನಬರುವ ಹೊತ್ತಿನ್ಯಾಗ ಧರ್ಮದ ಮನಿಗ್ಹೋದೆ
ಕರು ಬಂದು ಕಾಲ ತುಳಿದಾವ | ತಮ್ಮನ
ಮಗ ಬಂದು ಸೆರಗ ಹಿಡಿದಾನ ॥ ೨ ॥

ಹಟ್ಟೇಲಿ ಆರೆಮ್ಮೆ ಕೊಟ್ಗೇಲಿ ಮೂರೆಮ್ಮಿ
ಕೊಟ್ಟಾರೆ ಕೊಡಿರೋ ನನಗೊಂದು | ಎಮ್ಮಿಯು
ಹುಟ್ಟೇದೆ ನಿಮ್ಮ ಮನಿಯಾಗ ॥ ೩ ॥

ಅಳುತಿದ್ದ ತಂಗಿಗೆ ನಗುತ ಎಮ್ಮಿಯು ಕೊಟ್ಟು
ಮೇಲೊಂದು ಮಾತು ತಾ ನುಡಿದ | ತಂಗೆಮ್ಮ
ಮಡದಿಗೊಪ್ಪಿಸದೆ ಹೊಡೆದೀನಿ ॥ ೪ ॥

ಕರಿ ಎತ್ತು ಕಾಮಣ್ಣ ಬಿಳಿ ಎತ್ತು ಭೀಮಣ್ಣ
ನಮ್ಮಣ್ಣನ ಎತ್ತು ಶಿವಲಿಂಗ | ಬಂದರೆ
ನಮ್ಮೂರ ನೆಲವು ನಡುಗೀತು ॥ ೫ ॥

ಹಾಸು ಬಂಡಿಯ ಮ್ಯಾಲೆ ಹಾದುಹೋದವರ್ಯಾರೋ
ಪಾದ ಮೂಡ್ಯಾವ ರವಿ-ರವಿ | ಬಸವಣ್ಣ
ಈಗ ಹೋಗ್ಯಾನೇನೋ ಜಳಕಾಕ ॥ ೬ ॥

ನೀರಡಿಸಿ ನಿನ್ನ್ಯೋರಿ ನೀಲಗುಂದ ಬಿದ್ದಾವ
ಯಾರು ಕೂಗಿದರು ತಿರುಗಾವು | ನನ ತಮ್ಮ
ತೋರ ನಿನ ಬಾಯ ಕಿರುದನಿ ॥ ೭ ॥

ಮಾಗಿಯ ಹೊಡದೆತ್ತು ಬಾಗಿಲಿಗೆ ಬಂದಾವೆ
ಆರ ನನ ಮನಿಯ ಬಲವಂತ | ನಮ್ಮಪ್ಪನ
ಆರಂಭದೆತ್ತು ಹದಿನಾರು ॥ ೮ ॥

ಬಂಗಾರ ಬಳಿಬೇಡಿ ಬಾಗಿಲಿಗೆ ನಿಂತೀನಿ
ಹೊಡವೆಂಟೆತ್ತು ತರುಬೀನಿ | ನಮ್ಮಣ್ಣ
ಬಂಗಾರ ಬಳಿಗೆ ಕಬೂಲಾದ ॥ ೯ ॥

ಆತಳಕೆ ಕರುಬಿಟ್ಟು ನಾಲ್ಕು ದಿಕ್ಕಿಗೆ ನೋಡಿ
ಗೋಪೆಮ್ಮ ತಾಯಿ ತೋರಿ ಬಿಡೇ | ಈ ಮನಿಗೆ
ಗೋಪಾಲಕೃಷ್ಣ ಉಣಬಂದ ॥ ೧೦ ॥

•

ಕೆ. ವಿರೂಪಾಕ್ಷಗೌಡ

■ ನೀಲತ್ತಹಳ್ಳಿ ಕಸ್ತೂರಿ

(ಹಿಂದಿನ ಸಂಚಿಕೆಯಿಂದ ಮುಂದುವರಿದುದು)

ಮೊದಲ ಮಾತೇ ಪ್ರೇಮವನ್ನು ಕುರಿತದ್ದು. ಪ್ರವಾದಿ ಹೇಳುವ ಪ್ರೇಮ ಎಂಥದು? ಸುಖ ಸಂತೋಷ ಮಾತ್ರ ಒದಗಿಸುವ ದೇಹ ಪ್ರೇಮವೆ? ಪ್ರೇಮ ಸುಖವನ್ನು ಕೊಡಬಹುದು. ಅದಕ್ಕೂ ಮಿಗಿಲಾಗಿ ಸುಖದ ತ್ಯಾಗವನ್ನು ಬಯಸಬಹುದು. ನಮ್ಮ ಎಷ್ಟೋ ಕನಸುಗಳನ್ನೆಲ್ಲ ಬಿರುಗಾಳಿಯಂತೆ ನಾಶಮಾಡಿಬಿಡಬಹುದು. ನಮ್ಮನ್ನೆತ್ತಿಕೊಂಡಾಗ ಅದು ನಮ್ಮ ಪಕ್ಕೆಗಳನ್ನು ಗಾಯಗೊಳಿಸಬಹುದು. ಆದರೂ ನಾವು ಪ್ರೇಮದ ದಾರಿ ಬಿಡಬಾರದು. ಎರಡನೆಯ ಮಾತಿಲ್ಲದೆ ಅದನ್ನು ಅನುಸರಿಸಬೇಕು. ರೈತನು ತೆನೆ ಕುಯಿದು ಒಕ್ಕಿ ಕಾಳನ್ನು ಬೇರ್ಪಡಿಸಿ, ಅದನ್ನು ಹಸನು ಮಾಡಿ, ಬೀಸಿ ಹಿಟ್ಟುಮಾಡಿ, ನೀರು ಬೆರಸಿ ಕಲಸಿ ನಾದಿ ರೊಟ್ಟಿ ಮಾಡುತ್ತಾನೆ. ಅಂತೆಯೆ ಈ ಪ್ರೇಮವೂ ನಮ್ಮನ್ನು ಹಸನುಮಾಡಿ ನಮ್ಮ ಅಹಂಕಾರದ ಕೊಳೆ ತೆಗೆದು ತನ್ನ ದಿವ್ಯಾಗ್ನಿಯಲ್ಲಿ ಬೇಯಿಸಿ, ಪರಮಾತ್ಮನ ದಿವ್ಯ ಭೋಜನಕ್ಕೆ ನೈವೇದ್ಯವಾಗಿ ಮಾಡುತ್ತದೆ. ನಾವು ನಂಬಿ ಪ್ರೇಮಕ್ಕೆ ನಮ್ಮನ್ನು ಅರ್ಪಿಸಿಕೊಂಡರೆ ಸಾಕು. ಅದು ತಾನಾಗಿಯೇ ನಮ್ಮನ್ನು ಶುದ್ಧಿಗೊಳಿಸುತ್ತದೆ. "ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂದು ಭಗವಂತ ಅರ್ಜುನನಿಗೆ ಶರಣಾಗತಿ ಯೋಗ ಹೇಳಲಿಲ್ಲವೆ? ಇದಕ್ಕೆ ಹಿಂದೆಗೆದು ನಮ್ಮತನವನ್ನೇ ನಂಬಿ ನಿಂತರೆ ನಿಲ್ಲಬಹುದು. ಪ್ರೇಮದ ಸುಖವನ್ನು ಭೋಗವನ್ನು ಬಯಸಿ ನಿಲ್ಲಬಹುದು. ಅವರಿಗೆ ಅದು ಸಿಕ್ಕೀತು. ಆದರೆ ಆನಂದ ಸಿಗಲಾರದು. ಸುಖ ದುಃಖದ ದ್ವಂದ್ವಗಳಲ್ಲಿ ತೊಡಕಿದವನಿಗೆ ಆನಂದವೆಲ್ಲಿ? ನೆಲವನ್ನು ಬಿಟ್ಟು ಮೇಲೆ ಹಾರುವುದಿಲ್ಲ ಎನ್ನುವವನಿಗೆ ಆಕಾಶಯಾನದ ಆನಂದ ಹೇಗೆ ಲಭ್ಯ? ಪ್ರೇಮಕ್ಕೆ ಗುರಿ ತನ್ನ ಸಾರ್ಥಕ್ಯವೇ, ಬೇರೇನು? ಪ್ರೇಮಮಯನಾದವನಿಗೆ ಆಸೆ ಏನಾದರೂ ಇದ್ದರೆ ಎಂಥಾದಾಗಿರಬೇಕು? ಪ್ರೇಮದ ನೋವನ್ನು ನಲವಿನಂತೆಯೆ ಅನುಭವಿಸುವುದು. ಬಾಳಿನ ಮುಂಜಾನೆ, ಮಧ್ಯಾಹ್ನ, ಸಂಜೆ ಹಾಗೂ ರಾತ್ರಿ, ಸದಾ ಅದೇ ಭಾವನೆ ತುಂಬಿರಬೇಕು. ಕೊನೆಗೆ ರಾತ್ರಿ ಮಲಗುವಾಗ ಹೃದಯದಲ್ಲಿ ತನ್ನ ಪ್ರೇಮಕ್ಕೊಂದು ಪ್ರಾರ್ಥನೆ. ತುಟಿಯ ಮೇಲೆ ಅದರದೇ ಧ್ಯಾನದ ನುಡಿ! ಪ್ರವಾದಿ ಕಂಡುಕೊಂಡ ಪ್ರೇಮದ ಚಿತ್ರ ಇದು.

ಪ್ರೇಮವಾದಮೇಲೆ ಜನ ಮದುವೆ ಬಯಸಿಯಾರು. ಮದುವೆ ತಾನೆ ಏನು? ಎರಡು ಕಾಯಗಳ ಕೂಟವೇ? ಅಲ್ಲ. ಎರಡು ಹೃದಯಗಳ ಮಿಲನ. ಎರಡು ಹೃದಯಗಳು ಬೇರೆ ಬೇರೆಯಾಗಿಯೇ ಇದ್ದರೂ ಒಂದೇ ಶ್ರುತಿ ಮಿಡಿಯುವುದು, ತಂಬೂರಿಯ ಹಾಗೆ. ಮದುವೆ ಎಂದ ಮಾತ್ರಕ್ಕೆ ಒಬ್ಬ ವ್ಯಕ್ತಿ ತನ್ನನ್ನೇ ತಾನು ಮರೆತು ಇನ್ನೊಬ್ಬನಲ್ಲಿ ಲೀನವಾಗಿಬಿಡುವುದು ಎಂದೇ? ಹಾಗಲ್ಲ ಎನ್ನುತ್ತಾನೆ ಪ್ರವಾದಿ. ಎರಡು ವ್ಯಕ್ತಿಗಳೂ ಸಮೀಪದಲ್ಲಿರಬೇಕು. ಆದರೆ ನಡುವೆ ಸ್ವರ್ಗದ ಗಾಳಿ ಆಡುತ್ತಿರುವಂತಿರಬೇಕು. ಒಟ್ಟಿಗೆ ನಿಂತಿರಬೇಕು. ದೇಗುಲದ ಕಂಬಗಳ ಹಾಗೆ. ಒಂದು ಮರದ ನೆರಳಲ್ಲಿ ಇನ್ನೊಂದು ಬೆಳೆಯಲಾರದು. ಅಂತೆಯೆ ಎರಡು ವ್ಯಕ್ತಿಗಳೂ ಪರಸ್ಪರ ಬೆಳೆಯಲು ಅವಕಾಶವಿರಬೇಕು.

ಮದುವೆಯ ಮುಂದಿನದು ಮಕ್ಕಳು. ಮಕ್ಕಳು ಎಂದರೆ ಏನು? ನಮ್ಮ ಸೃಷ್ಟಿಯೆ? ಅವು ಹುಟ್ಟುವುದು ನಮ್ಮ ಮೂಲಕವಾದರೂ ನಮ್ಮಿಂದ ಅಲ್ಲ. ಜೀವನದ ಹಂಬಲದ ಬಾಲಬಾಲೆಯರು ಮಕ್ಕಳು. ಅವರ ಶರೀರವನ್ನು ನಾವು ಬೆಳಸಿಯೇವು ಆತ್ಮಗಳನ್ನಲ್ಲ, ಏಕೆಂದರೆ ಅವರ ಆತ್ಮ ಭವಿಷ್ಯದ ಮನೆಯಲ್ಲಿ ಬೆಳೆಯುತ್ತವೆ. ಆ ಮನೆಗೆ ನಾವು ಹೋಗಲಾರೆವು. ಬಾಳು ಮುಂದೆಮುಂದೆ ಹರಿಯುತ್ತದೆ. ಹಿಂದಕ್ಕೆ ನಡೆಯದು. ಇದನ್ನು ಮೀರಿದ ಒಂದು ಮಾತು ಹೇಳುತ್ತಾನೆ ಪ್ರವಾದಿ. ತಾಯಿತಂದೆಯರನ್ನೇ ಬಿಲ್ಲುಮಾಡಿ, ಅದರಿಂದ ವಿಧಾತ ತನ್ನ ಗುರಿಯ ಕಡೆ ಹೊಡೆಯುವ ಬಾಣಗಳೇ ಮಕ್ಕಳು. ಅನಂತರ ಹಾದಿಯಲ್ಲಿ ತನ್ನ ಗುರಿಗೊಂಡು ಬಿಲ್ಲನ್ನು ಬಲವಾಗಿ ಬಾಗಿಸಿ ಬಾಣಗಳನ್ನು ಚಿಮ್ಮಿಸುತ್ತಾನೆ. ಆನಂದದಿಂದ ಬಾಗುವುದು ತಂದೆತಾಯಿಯರ ಕರ್ತವ್ಯ! ಬಾಳಿನ ಹೊಳೆ ಹೀಗೆ ಹರಿಯಬೇಕು.

ಬದುಕಿನಲ್ಲಿ ದಾನಕ್ಕೆ ಇರುವ ಸ್ಥಾನ ಮುಖ್ಯ. "ಕೊಟ್ಟು ಬದುಕು" ಎನ್ನುವುದೇ ಬಾಳಿನ ಸೂತ್ರ. ಇದೇ ಈ ಯುಗದ ಮಂತ್ರವಾಗಿದೆ. ಈ ದಾನತಾನೆ ಹೇಗಿರಬೇಕು? ನಮ್ಮಲ್ಲಿರುವುದನ್ನು ಕೊಟ್ಟುಬಿಟ್ಟರೆ ನಾವು ಕೊಟ್ಟದ್ದೇನು ಮಹಾ? ನಮ್ಮನ್ನೇ ನಾವಿತ್ತಾಗಲೇ ನಿಜವಾದ ದಾನವಾದೀತು. ಕೆಲವರು ಹೆಸರಿನ ಆಸೆಗಾಗಿ ತಮ್ಮ ಸಿರಿಯ

ಸ್ವಲ್ಪವನ್ನು ಕೊಡುತ್ತಾರೆ. ಅವರ ಆ ಒಳ ಆಸೆಯಿಂದ ದಾನ ಅಪರಿಪೂರ್ಣವಾಗುತ್ತದೆ. ಕೆಲವರು ತಮ್ಮಲ್ಲಿರುವುದನ್ನೆಲ್ಲ ಕೊಟ್ಟುಬಿಡುತ್ತಾರೆ. ಇವರು ಬಾಳಿನಲ್ಲಿ, ಬಾಳಿನ ಸಮೃದ್ಧಿಯಲ್ಲಿ ನಂಬಿಕೆ ಉಳ್ಳವರು, ಅವರ ಸಿರಿ ಎಂದಿಗೂ ಕರಗದು. ಆನಂದದಿಂದ ಕೊಡುತ್ತಾರೆ ಕೆಲವರು. ಆನಂದವೇ ಅದರ ಪ್ರತಿಫಲ! ಸಂಕಟದಿಂದ ಕೊಡುವವರೂ ಉಂಟು. ಸಂಕಟವೇ ಅಂಥವರ ದೀಕ್ಷೆ! ಕೆಲವರು ದಾನದಲ್ಲಿ ಸುಖಪಡರು. ದುಃಖವನ್ನೂ ಪಡರು. ಅದನ್ನು ಅರಸಲೂ ಹೋಗರು. ಅವರ ದಾನ ಕಾಡಿನಲ್ಲಿ ಅರಳಿ ತನ್ನ ಪರಿಮಳವನ್ನು ತಾನಾಗಿಯೇ ಸುತ್ತ ಬೀಸುವ ನನಸುಮದ ಹಾಗೆ. ಅವರ ಕೊಡುಗೈಗಳಲ್ಲಿ ದೇವರೇ ಮಾತನಾಡುತ್ತಾನೆ. ಅವರ ಕಣ್ಣುಗಳಿಂದ ದೇವರೇ ನಸುನಗುತ್ತಾನೆ. ನಮ್ಮಲ್ಲಿರುವುದೆಲ್ಲ ಕೊಡುವುದಕ್ಕೇ. ಎಂದಾದರೂ ಒಂದು ದಿನ ಎಲ್ಲವನ್ನೂ ಕೊಟ್ಟೇ ನಾವು ಹೋಗಬೇಕು. ಎಂದಿಗಾದರೂ ಏಕೆ ಕಾಯಬೇಕು. ಇಂದೇ ಕೊಡಿ. ಕೊಡುವ ಆನಂದ ನಿಮ್ಮದಾದೀತು! "ದಾನಕ್ಕೆ ಪಾತ್ರನಾದವನು ಬೇಕು" ಎಂದಾರು ಜನ. ತೋಟದ ಮರ ಹಾಗೆಂದೀತೇ? ರೊಪ್ಪದ ಕುರಿ ಹಾಗೆಂದೀತೇ? ತಾವು ಉಳಿಯಲೆಂದೇ ಅವು ದಾನವೀಯುತ್ತವೆ. ತನ್ನಲ್ಲೆ ಕೂಡಿಟ್ಟುಕೊಳ್ಳುವುದು ವಿನಾಶದ ಹಾದಿ. ಬಾಳಿನ ಸಾಗರದಲ್ಲಿ ನೀರು ಕುಡಿಯಲು ಅರ್ಹನಾಗಿರುವವನು ನಿಮ್ಮ ಹೊಳೆಯಲ್ಲಿ ಕುಡಿಯಲು ಅನರ್ಹನೇ? ದಾನಿಯ ಯೋಗ್ಯತೆ ನಮಗಿರಬೇಕು! ಅಷ್ಟೆ. ದಾನಕೊಡುವ ನಿಮಿತ್ತಮಾತ್ರಕ್ಕೆ ಸಾಕ್ಷಿಗಳು ಮಾತ್ರ. ಇಲ್ಲಿ ವಿನೋಬಾ ಅವರ ಬಾಲ್ಯದ ಒಂದು ಕತೆಯನ್ನು ನೆನೆಸಿಕೊಳ್ಳಬಹುದು. ಬಾಗಿಲಿಗೆ ಭಿಕ್ಷಕ್ಕೆ ಬಂದವನನ್ನು ಕುರಿತು ವಿನೋಬಾ" "ಇವನಿಗೇನು ಧಾಡಿ! ಗಟ್ಟಿಮುಟ್ಟಾಗಿದಾನೆ. ಎಲ್ಲಾದರೂ ಕೂಲಿ ಮಾಡಲಿ" ಎಂದರಂತೆ, ಅವರ ತಾಯಿ "ಹಾಗಲ್ಲಪ್ಪ ಅವನು ಹೇಗಿದ್ದರೆ ನಮಗೇನು? ಕೊಡುವುದು ನಮ್ಮ ಧರ್ಮ. ಈ ಭಿಕ್ಷುಕ ರೂಪದಲ್ಲಿ ಭಗವಂತನೇ ಬಂದು ಕೇಳುತ್ತಿರಬಹುದು. ಯಾರು ಬಲ್ಲರು" ಎಂದರಂತೆ. ಕೊಡುವ ಯೋಗ್ಯತೆ ನಮ್ಮದಾಗಿರಬೇಕು. ಕೊಳ್ಳುವವನದನ್ನು ಕಟ್ಟಿಕೊಂಡು ನಮಗೇನು? ಏಕೆಂದರೆ ಗೀತೆ ಹೇಳಿದೆ: "ಕೊಲ್ಲುವವನು ನಾನೇ, ಕೊಲ್ಲಿಸಿಕೊಳ್ಳುವವನೂ ನಾನೇ. ಅರ್ಜುನ, ನೀನು ನಿಮಿತ್ತಮಾತ್ರ." ಅಂತೆಯೆ ಬಾಳೆಲ್ಲ, ಕೊಡಲು ನಾವು ಯಾರು, ಕೊಳ್ಳಲು ಅವನು ಯಾರು? ನಾವೆಲ್ಲ ನಿಮಿತ್ತ ಮಾತ್ರ. ನಿಜವಾದ ತರ್ಕ ಬೇರೆ.

ಬಾಳಿನಲ್ಲಿ ಕರ್ಮ ಬಹು ಮುಖ್ಯ. ಅದಿಲ್ಲದೆ ಬಾಳು ನಡೆಯುವುದೆಂತು? ಕರ್ಮ ಮಾಡುವುದಿಲ್ಲ ಎಂದರೆ ಬಾಳಿನ ಯಾತ್ರೆಯಿಂದ ದೂರವಿರುವೆ ಎಂದ ಹಾಗೆ. ಬಾಳು ಅನಂತದ ಕಡೆಗೆ ಗಾಂಭೀರ್ಯದಿಂದ, ನಮ್ರತೆಯಿಂದ ಮೆರವಣಿಗೆ ಸಾಗಿದೆ. ಅದರಲ್ಲಿ ನಾವು ಪಾಲುಗೊಳ್ಳಬೇಕು ಎಂದರೆ ಕರ್ಮ ಮಾಡಲೇಬೇಕು. ಕರ್ಮ-ಕೆಲಸ ಒಂದು ಶಾಪ, ದೇಹಶ್ರಮ ಒಂದು ದುರದೃಷ್ಟ ಎನ್ನುವುದು ರೂಢಿಯಾಗಿದೆ. ಆದರೆ ಅದು ತಪ್ಪು. ಕರ್ಮ-ಶ್ರಮ ಮಾಡುವುದೆಂದರೆ ಜಗತ್ತಿನ ಹೊಂಗನಸನ್ನು ನನಸುಮಾಡುವುದರಲ್ಲಿ ನಮ್ಮ ಪಾಲಿನ ಕರ್ತವ್ಯ ಮಾಡಿದಂತೆ. ಕರ್ಮ ನಿರತನಾದವನು ಜೀವನದ ಪ್ರೇಮಿ ಕರ್ಮದ ಮೂಲಕ ಜೀವವನ್ನು ಪ್ರೀತಿಸುವುದೆಂದರೆ ಜೀವನದ ರಹಸ್ಯವನ್ನರಿತಂತೆ. ಬಾಳು ದುಃಖಮಯ, ಕತ್ತಲು ಎನ್ನುವುದುಂಟು. ಬೇಸರ ಆದಾಗ ನಾವೆಲ್ಲ ಹೀಗೆನ್ನುತ್ತೇವೆ. ಹಿರಿಯಾಸೆ ಆಕಾಂಕ್ಷೆಗಳಿಲ್ಲದೆ ಬಾಳು ನಿಜಕ್ಕೂ ಕತ್ತಲೆಯೆ. ಆಸೆ ಆಕಾಂಕ್ಷೆ ಜ್ಞಾನರಹಿತವಾದರೆ ಕುರುಡೇ. ಜ್ಞಾನವೂ ಕರ್ಮದಿಂದ ದೂರವಾದರೆ ವ್ಯರ್ಥವಾಗುತ್ತದೆ. ಅಲ್ಲದೆ ಕರ್ಮವೂ ಪ್ರೇಮರಹಿತವಾದರೆ ಬರಡಾಗುತ್ತದೆ. ಪ್ರೇಮದಿಂದ ಕರ್ಮ ಮಾಡಿದಾಗ, ಪರಸ್ಪರವಾಗಿ ನಮ್ಮೊಳಗೂ ಮತ್ತು ನಮಗೂ ದೇವನಿಗೂ ಸಂಬಂಧ ಬೆಳೆಯುತ್ತದೆ. ಇಲ್ಲಿ ಭಗವದ್ಗೀತೆಯ ಕರ್ಮಯೋಗವನ್ನು ನೆನೆದುಕೊಳ್ಳಬಹುದು. ಕರ್ಮದ ಗಾಳಿಗೆ ವಿಕರ್ಮದ ಎಣ್ಣೆ ಹಾಕಿದರೆ ಗಾಲಿ ಸರಾಗವಾಗಿ ಉರುಳುತ್ತದೆ. ಪ್ರೇಮಮಯ ಕರ್ಮ ಎಂದರೇನು? ಮಾಡುವ ಕೆಲಸದಲ್ಲೆಲ್ಲ ನಮ್ಮ ಆತ್ಮವನ್ನು ಮಿಲನಗೊಳಿಸಿಮಾಡುವುದು. ಹೃದಯದ ಎಳೆಗಳಿಂದ ಬಟ್ಟೆಯನ್ನು ನೇದಹಾಗೆ. ಆ ಬಟ್ಟೆಯನ್ನು ನಮ್ಮ ಪ್ರೀತಿ ಪಾತ್ರರು ಉಡಬೇಕು. ಮಾಡಿದ ಅಡಿಗೆ ದಿವ್ಯವಾಗಿರಬೇಕು. ಏಕೆಂದರೆ ಅದು ಭಗವಂತನಿಗೆ ಅರ್ಪಿತವಾಗಬೇಕು. ಅಂತೆಯೆ ಎಲ್ಲ ಕರ್ಮವೂ ಈಶ್ವರಾರ್ಪಣವಾಗಬೇಕು. ಆದ್ದರಿಂದ ಅದರಲ್ಲಿ ಕಿಂಚಿತ್ತೂ ಲೋಪದೋಷ ಇರಬಾರದು. ಇದು ದಿವ್ಯ ಕರ್ಮ. ಗೀತೆಯ ಅಕರ್ಮವೂ ಇಂಥದೇ ತಾನೇ? ಕರ್ಮವೇ ಪ್ರೇಮದ ಆವಿರ್ಭಾವ. ಪ್ರೇಮದಿಂದ ಕೆಲಸಮಾಡಲು ಅಸಾಧ್ಯವಾದರೆ ಅಂಥ ಕರ್ಮದಿಂದಲೇ ದೂರವಿರುವುದೊಳ್ಳಿತು. ದೇಗುಲದ ಮುಂದೆ ಕುಳಿತು ಭಿಕ್ಷೆಬೇಡುವುದೇ ಶ್ರದ್ಧೆಯಿಲ್ಲದ ನಿರಾಸಕ್ತ ಕರ್ಮಕ್ಕಿಂತ ಮೇಲು ಎನ್ನುತ್ತಾನೆ ಪ್ರವಾದಿ. ಬೇಸರದಿಂದ ಮಾಡಿದ ಅನ್ನ ಹೇಗೆ ರುಚಿಯಾದೀತು? ಪ್ರೇಮವಿಲ್ಲದೆ ಹಾಡಿದ ಗಾನ ಗಂಧರ್ವ ಗಾನವಾದರೂ ಏನು? ಬರಿಯ

ನಾದ ಮಾತ್ರವಾದೀತು! ಕರ್ಮಯೋಗದ ಈ ಚಿತ್ರವನ್ನು ಇಲ್ಲಿ ಪ್ರವಾದಿ ಕೊಡುತ್ತಾನೆ.

ಸುಖ ದುಃಖಗಳು ಬಾಳಿನ ಎರಡು ಮುಖಗಳು. ಸೊಗ ಚಿಮ್ಮುವ ಚಿಲುಮೆಯಿಂದಲೇ ಕಣ್ಣೀರೂ ಚಿಮ್ಮುತ್ತದೆ. ದುಃಖ ನಮ್ಮನ್ನು ಆಳವಾಗಿ ಕೊರೆದು ಸುಖ ತುಂಬಲು ಎಡೆಮಾಡುತ್ತದೆ. ಅಮೃತ ತುಂಬುವ ಪಾತ್ರೆ ಕುಲುಮೆಯಲ್ಲಿ ಬೇಯಲಿಲ್ಲವೇ? ಗಾನದಿಂದ ಆತ್ಮತೃಪ್ತಿ ನೀಡುವ ಕೊಳಲು ಮೊಳೆಗಳಿಂದ ಕೊರೆದ ಬಿದಿರು ಅಲ್ಲವೇ? ಸುಖ ದುಃಖ ಬೇರೆ ಬೇರೆ ಅಲ್ಲ. ಒಂದರಲ್ಲೊಂದಿದೆ. ಒಂದು ನಮ್ಮೊಡನೆ ಇದ್ದಾಗ ಇನ್ನೊಂದು ಮುಂದೆ ಕಾದಿದೆ ಎನ್ನುವುದನ್ನು ಮರೆಯಲಾಗದು.

ಹೀಗೆ ಬಾಳಿನ ಯಾವುದೇ ಮುಖವಾಗಲಿ ಪ್ರವಾದಿ ನೋಡುವ ದೃಷ್ಟಿಯೇ ಬೇರೆ. ಆತ ಉಳಿದವರೊಡನೆ ಲೋಕದಲ್ಲೆ ಇದ್ದರೂ ಅವರಿಂದ ಭಿನ್ನ. ತಾವರೆ ಎಲೆಯ ಮೇಲಣ ಹನಿಯಂತೆ, ಉಳಿದ ವಿಷಯಗಳ ಬಗ್ಗೆಯೂ ಇದೇ ಮಾತೇ, ಇದೇ ಧ್ವನಿಯೇ. ಮನೆಯಾಗಲಿ ಉಡುಗೆಯಾಗಲಿ, ಕಾಲ, ನ್ಯಾಯ, ನೀತಿ, ಊಟ ತಿಂಡಿ ಯಾವುದೇ ಆಗಲಿ, ಪ್ರವಾದಿ ನಮ್ಮನ್ನು ನೆಲದಿಂದ ಬಾನಿಗೆ ಕೊಂಡೊಯ್ಯುತ್ತಾನೆ.

ಮನೆಯನ್ನು ಕಟ್ಟಿಕೊಳ್ಳುವುದೇಕೆ? ಯಾವುದು ನಿಜವಾದ ಮನೆ? ಮನೆಯನ್ನು ಕೇವಲ ಐಹಿಕ ಭೋಗದಾವಾಸವಾಗಿಟ್ಟುಕೊಳ್ಳಬೇಕೆ? ಭೋಗದ ಕೈ ರೇಸಿಮೆ ಎಳೆಯಂತೆ. ಆದರೆ ಹೃದಯ ಕಬ್ಬಿಣ. ಅತಿಥಿಯಂತೆ ಮನೆಗೆ ಬಂದು, ದಿನ ಕಳೆದಂತೆ ತಾನೇ ಮನೆಯೊಡೆಯನಾಗಿ ಬಿಡುತ್ತದೆ. ಭೋಗದಾಸೆ ಆತ್ಮದ ಹತ್ಯೆಮಾಡಿ ಅದರ ಸಮಾಧಿ ಮಾಡುತ್ತದೆ. "ಇದಕ್ಕೆಡೆ ಕೊಡಬೇಡಿ, ತಮ್ಮಂದಿರೇ" ಎನ್ನುತ್ತಾನೆ ಪ್ರವಾದಿ.

ಕೊಡುವ-ಕೊಳ್ಳುವ ವ್ಯಾಪಾರವನ್ನು ಕುರಿತು ಪ್ರವಾದಿಯ ಮಾತಿದು: ವ್ಯಾಪಾರಿಗಳು ಭೂಮಿತಾಯಿ ನೀಡುವ ಸಿರಿಯನ್ನು ಹಂಚುವ, ಅದಲು ಬದಲುಮಾಡುವ ವ್ಯವಸ್ಥೆಗೆ ಕಾರಣರು. ಈ ವ್ಯವಸ್ಥೆ ಪ್ರೇಮಮಯ, ನ್ಯಾಯಸಮ್ಮತ ಆಗಿರಬೇಕು, ಇಲ್ಲವಾದರೆ ಇದರಿಂದ ಕೆಲವರ ದುರಾಸೆ ಬೆಳೆದೀತು. ಕೆಲವರ ಹಸಿವು ಹೆಚ್ಚೀತು. ದಿನದ ವ್ಯಾಪಾರ ಮುಗಿಸಿದಾಗ ಪೇಟೆಯಲ್ಲಿ ಯಾರೂ ಬರಿಗೈಯಿಂದ ಹೋಗುವಂತಾಗಬಾರದು. ಏಕೆಂದರೆ, ಪ್ರತಿಯೊಬ್ಬನೂ ಪ್ರತಿ ದಲಿತನೂ ತೃಪ್ತಿಯಾಗುವವರೆಗೆ ಪರಮಾತ್ಮನಿಗೆ ವಿರಾಮವೆಂತು ಸಾಧ್ಯ?

ತಪ್ಪು-ಒಪ್ಪು ಮಾನವನ ಜೀವನದಲ್ಲಿ ನಡೆದೇ ನಡೆಯುತ್ತದಲ್ಲ-ಯಾರೊಬ್ಬರೂ ಪೂರ್ತಿ ತಪ್ಪೇ ಮಾಡುವವರಲ್ಲ, ಪೂರ್ತಿ ಒಳಿತೇ ಮಾಡುವವರಲ್ಲ. ನಮ್ಮ ಮನಸ್ಸು ಅತ್ತಿತ್ತ ಚಲಿಸಿದಾಗ ತಪ್ಪೇ ಮಾಡುತ್ತೇವೆ. ಆ ತಪ್ಪಿಗೆ ನಾವು ದೇಗುಲದ ಬಾಗಿಲಲ್ಲಿ ಕ್ಷಮೆಗಾಗಿ ಕಾದು ನಿಲ್ಲಲೇಬೇಕು. ನಮ್ಮಲ್ಲಿ ದೈವತ್ವವೂ ಇದೆ, ಮನುಷ್ಯತ್ವವೂ ಎಷ್ಟೋ ಇದೆ, ಅಮಾನುಷತನವೂ ಇಲ್ಲದಿಲ್ಲ. ನಮ್ಮ ತಪ್ಪು ನೆಪ್ಪುಗಳು, ತಪ್ಪಿಗೆ ಶಿಕ್ಷೆ, ಇವೆಲ್ಲ ಮನುಷ್ಯನಿಗೆ ಸಂಬಂಧಿಸಿದೆ. ತಪ್ಪು ಮಾಡುವವನಾದರೂ ಯಾರು? ನಮ್ಮಿಂದ ಬೇರೆಯೇ? ಬಾಳಿನ ಈ ದೊಡ್ಡ ಯಾತ್ರೆಯಲ್ಲಿ ಮೆರವಣಿಗೆಯಲ್ಲಿ ಒಬ್ಬ ಬಿದ್ದಾನು, ಒಬ್ಬ ಎದ್ದಾನು. ಆದರೆ ಅವರೂ ನಮ್ಮವರೇ, ಇನ್ನೊಬ್ಬರ ತಪ್ಪು ನೆಪ್ಪುಗಳನ್ನು ವಿಮರ್ಶಿಸುವಾಗ ಇದನ್ನು ಮರೆಯಲಾಗದು. ಬಿದ್ದವನೊಬ್ಬ, ಎಡವಿದವನೊಬ್ಬ, ಹಿಂದಲವರಿಗೆ ಮಾರ್ಗದರ್ಶಿಯಾದಾನು. ಎಚ್ಚರ ನೀಡಿಯಾನು! "ಇಗೋ, ಇಲ್ಲಿ ಕಲ್ಲಿದೆ, ನಾನೆಡವಿದೆ. ನೀವು ಎಚ್ಚರವಾಗಿರಿ" ಎಂದು ತೋರಿಯಾನು.

ಮನುಷ್ಯನಿಗೆ ಸ್ವಾತಂತ್ರ್ಯ ಅಮೂಲ್ಯವಸ್ತು. ಅದಕ್ಕಾಗಿಯೇ ಜಗತ್ತಿನಲ್ಲಿ ಎಷ್ಟು ಕ್ರಾಂತಿ ನಡೆದಿಲ್ಲ! ಎಷ್ಟು ಹೋರಾಟ, ಎಷ್ಟು ನೋವು ಸಂಕಟ ಆಗಿಲ್ಲ! ಎಷ್ಟು ಜನ ರಕ್ತ ಬಸಿದಿಲ್ಲ! ಎಷ್ಟೋ ದೇಶಗಳು ಸ್ವಾತಂತ್ರ್ಯವನ್ನು ಅನುಭವಿಸುತ್ತಿವೆ. ಸ್ವಾತಂತ್ರ್ಯ ಈ ಯುಗದ ಇನ್ನೊಂದು ಮಂತ್ರವಾಗಿದೆ. ಆದರೆ ಇದೇನು ವಿಚಿತ್ರ; ಲೋಕ ಹುಟ್ಟಿದಾಗಿನಿಂದ ಈ ಸ್ವಾತಂತ್ರ್ಯದ ಹಂಬಲ ಇದ್ದೇ ಇದೆ. ಸ್ವಾತಂತ್ರ್ಯಕ್ಕಾಗಿ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ವೈಯಕ್ತಿಕ ಸ್ವಾತಂತ್ರ್ಯಕ್ಕಾಗಿ ಮಾನವ ಹಾತೊರೆಯುತ್ತಿದ್ದಾನೆ. ಎಲ್ಲ ಬಗೆಯ ಸ್ವಾತಂತ್ರ್ಯವೂ ಸಿಕ್ಕೀತು. ನಮ್ಮೆದುರಿಗೇ ಜಗತ್ತಿನ ಎಷ್ಟೋ ರಾಜ್ಯಗಳಲ್ಲಿ ಈ ಸ್ವಾತಂತ್ರ್ಯಗಳೆಲ್ಲ ಇವೆ. ಆದರೆ ಮತ್ತೆ ಏಕೆ ಈ ಪ್ರಶ್ನೆ? ಮಾನವ ನಿಜವಾಗಿ ಸ್ವತಂತ್ರನೇ? ನಾವು ಕಾಣುವ ಈ ಸ್ವಾತಂತ್ರ್ಯವೆಲ್ಲ ಬರೀ ಕೋರಿಕೆ. ನಿಜವಾಗಿ ಮಾನವನಿಗೆ ಆತ್ಮಸ್ವಾತಂತ್ರ್ಯವಿದೆಯೆ? ಈ ಪ್ರಶ್ನೆಗೆ ಉತ್ತರವೆಂತು? ಹಗಲೂ ರಾತ್ರಿ ಇಡೀ ಜೀವನ ಪರ್ಯಂತ, ಬಾಳಿನ ದ್ವಂದ್ವಗಳಲ್ಲಿ, ಐಹಿಕ ಆಸೆ ಆಕಾಂಕ್ಷೆಗಳಲ್ಲಿ ರಾಗ ದ್ವೇಷಗಳಲ್ಲಿ ಮುಳುಗಿರುವವನಿಗೆ ಆತ್ಮ ಸ್ವಾತಂತ್ರ್ಯವೆಲ್ಲಿ? ಪ್ರವಾದಿ ಎನ್ನುತ್ತಾನೆ-ಇಂದೆಲ್ಲ ಬಾಳ ಮುಗಿಲುಗಳು ನಮ್ಮೆದೆಯ ಸುತ್ತ ಮುಸುಕಿದ್ದರೂ ಚಿತ್ತ ಆತ್ಮ ಅವುಗಳಿಂದ ಮೇಲೆದ್ದು ಎಲ್ಲ ಬಂಧನಗಳನ್ನೂ ಕಡಿದು ನಿರಾಳವಾಗಿ ನಿಂತಾಗ, ಆಗ ನಾವು ಸ್ವತಂತ್ರರಾದೇವು! ನಿಜವಾಗಿ ನೋಡಿದರೆ, ನಾವು ಯಾವುದನ್ನು ಸ್ವಾತಂತ್ರ್ಯ ಎಂದು ಭ್ರಮಿಸಿರುವೆವೊ ಅದೇ

ದೊಡ್ಡ ಬಂಧನ, ಕಣ್ಣು ಮೋಹಿಸುವಂತೆ ಹೊಳೆಯುವ ಸ್ವರ್ಣಬಂಧನ.

ನೋವಿಲ್ಲದೆ ಬಾಳೆಲ್ಲಿ? ನೋವೇ ಬಾಳಿನ ಒಂದು ಅಖಂಡ ಸೂತ್ರ ಎನ್ನುತ್ತಾರೆ ಎನಿತೋ ಮಂದಿ. ಬೆಂಕಿಯಲ್ಲಿ ಪುಟಕೊಟ್ಟರೆ ಬಂಗಾರ ಹೊಳೆದೀತು. ಬಾಳಿನ ಕುಲುಮೆಯಲ್ಲಿ ಸಂಕಟದ ಅಗ್ನಿಯಲ್ಲಿ ಹೊಕ್ಕು ಬಂದರೇನೆ ನಾವು ಶುದ್ಧರಾದೇವು. ಆದರೆ ಸಂಕಟದ ಹೊತ್ತಿನಲ್ಲಿ ನಾವು ಧೃತಿಗೆಡಬಾರದು. ಯಾವುದೂ ಶಾಶ್ವತವಲ್ಲ. If winter comes can spring be far behind? ಎನ್ನುತ್ತಾನೆ ಒಬ್ಬ ಕವಿ. ಕೊರೆಯುವ ಚಳಿಗಾಲ ಮುಗಿದ ಮೇಲೆ ತಾನೆ ನಲವಿನ ಸುಗ್ಗಿಯಾರಂಭ! ಹೀಗೆ ಎಲ್ಲವೂ ಒಳತಿಗೇ! ನೋವು ನಲಿವುಗಳನ್ನು ಈ ಕಣ್ಣಿನಿಂದ ಕಂಡರೆ, ನೋವೂ ನಲವಿನಂತೆಯೆ ಅನ್ನಿಸೀತು. ನಿಸರ್ಗದ ಋತುಗಳನ್ನು ಹೇಗೆ ಸ್ವಾಗತಿಸಿ ಅನುಭವಿಸುವೆವೊ ಅಂತೆಯೆ ಹೃದಯದ ಸುಖ ದುಃಖಗಳ ಈ ವಸಂತ ಶಿಶಿರಗಳನ್ನೂ ಅನುಭವಿಸಿಯೇವು! ರೋಗ ಗುಣವಾಗಲು ಔಷಧ ಕುಡಿಯಬೇಡವೇ? ಔಷಧ ಕಹಿಯೆಂದು ಬಿಡಲಾದೀತೆ? ನೋವೂ ಅಂತೇ. ಈ ಕಹಿ ಔಷಧವಿತ್ತು ನಮ್ಮ ರೋಗಿಷ್ಟ ಬಾಳನ್ನು ವಾಸಿಮಾಡುತ್ತಾನೆ ಮಹಾ ವೈದ್ಯ. ಅವನನ್ನು ನಂಬಬೇಕು. ಔಷಧವನ್ನು ತಾಳ್ಮೆಯಿಂದ ಶಾಂತಿಯಿಂದ ಕುಡಿಯಬೇಕು. ಔಷಧಿಯೀಯುವ ವೈದ್ಯನ ಕೈ ಅವ್ಯಕ್ತ ಅನಂತದ ಪ್ರೇಮಹಸ್ತ. ಔಷಧಿ ನಮ್ಮ ಬಾಯಿಗೆ ಕಹಿಯಾದರೂ ಅದು ಅನಂತದ ಪ್ರೇಮಬಾಷ್ಪ!

ಜ್ಞಾನ ಅಪಾರವಾದುದು. ಸಾಗರದಂತೆ ಅನಂತ. ಅದನ್ನಳೆಯಲಾಗದು, ತೂಗಲಾರದು. "ನಾನು ಒಂದು ಸತ್ಯವನ್ನು ಕಂಡೆ" ಎನ್ನಬೇಕು. ಜ್ಞಾನಪೂರ್ಣವಾದ ಆತ್ಮ ಸಾವಿರ ದಳದ ಕಮಲದಂತೆ ಅರಳುತ್ತದೆ. ಜ್ಞಾನಕ್ಕೆ ಗುರು ಬೇಡವೇ, ಎಂಥ ಗುರುಬೇಕು? ಗುರು ತಾನೆ ಎಷ್ಟು ಜ್ಞಾನ ಕೊಡಬಲ್ಲ? ನಮ್ಮಲ್ಲಿ ಸುಪ್ತವಾಗಿರುವ ಚೇತನವನ್ನುಳಿದು ಬೇರೆ ಏನು ಜ್ಞಾನವನ್ನೀಯಬಲ್ಲ ಗುರು? ಗುರು ಎನಿಸಿಕೊಂಡ ಎನಿತೋ ಜನ ತೋರುವ ದಾರಿ ಅವರು ನಡೆದು ಬಂದುದು. ತೋರುವುದು ಅವರ ದೃಷ್ಟಿ. ನಿಜವಾದ ಗುರು ಶಿಷ್ಯನಿಗೆ, ಅವನದೇ ಮನಸ್ಸಿನ, ಹೃದಯದ ಹೊಸಿಲೆಡೆಗೆ ದಾರಿ ತೋರಿಯಾನು ಒಬ್ಬನ ರೆಕ್ಕೆ ಇನ್ನೊಬ್ಬನಿಗೆ ಹಾರಲು ಸಾಧನವಾಗಲಾರದು. ತನ್ನ ರೆಕ್ಕೆಯನ್ನು ತಾನೇ ಬೆಳೆಸಿಕೊಳ್ಳಬೇಕು. ಆತ್ಮದಿಂದಲೇ ಆತ್ಮದ ಉದ್ಧಾರ, 'ಉದ್ಧರೇದಾತ್ಮನಾತ್ಮಾನಂ' ಭಗವಾನ್ ಬುದ್ಧನೂ ಇದನ್ನೇ ಹೇಳುತ್ತಾನೆ.

ಮಾತಿಲ್ಲದೆ ಮಾನವನೆಲ್ಲಿ? ಆದರೆ ನಾವಾಡುವ ಮಾತೆಲ್ಲ ಸರಿಯೆ? ನಮ್ಮ ಹೃದಯವನ್ನೆಲ್ಲ ಮನಸವನ್ನೆಲ್ಲ ಮಾತಿನಲ್ಲಿ ಬಿಚ್ಚಿ ಹೇಳಲು ಸಾಧ್ಯವೆ? ಚಿಂತನ ನಿಂತಾಗ ಮಾತು ಹೊರಡುತ್ತದೆ ಎನ್ನುತ್ತಾನೆ ಪ್ರವಾದಿ. ಹೃದಯದ ಪ್ರಶಾಂತ ಏಕಾಂತತೆಯಲ್ಲಿ ಇರುವುದು ನಮಗೆ ಅಸಾಧ್ಯವಾದಾಗ ಮಾತಿನ ಹವ್ಯಾಸಕ್ಕೆ ತೊಡಗುತ್ತೇವೆ. ಮಾತಿನಲ್ಲಿ ನಮ್ಮ ಎಷ್ಟೋ ಚಿಂತನ ಹುಡಿಯಾಗುತ್ತದೆ. ಚಿಂತನ ಆಗಸದ ಹಕ್ಕಿ. ಅದನ್ನು ಮಾತಿನ ಪಂಜರದಲ್ಲಿಟ್ಟಾಗ ರೆಕ್ಕೆ ಬಿಚ್ಚೀತು. ಹಾರಲಾದೀತೇ? ನಾವು ಪರಸ್ಪರ ಮಾತಾಡುವಾಗ, ನಮ್ಮ ಹೃದಯ ಜೊತೆಯವನ ಹೃದಯದೊಂದಿಗೆ ಮಾತಾಡಲಿ. ಅಂತಾದರೆ ಮಾತ್ರ ನಮ್ಮೆದೆಯ ಭಾವನೆ ಅವನೆದೆಯಲ್ಲಿ ಉಳಿದೀತು. ಹೊರಗಣ ಶಬ್ದ ಮರೆತರೂ ಕುಡಿದ ಮಧುವಿನ ಬಣ್ಣವಾಗಲಿ; ಅದನ್ನು ತುಂಬಿದ್ದ ಪಾತ್ರೆಯಾಗಲಿ ಮರೆತು ಹೋದರೂ ಮಧುವಿನ ರುಚಿ ಎಷ್ಟೋ ಕಾಲ ನೆನಪಿನಲ್ಲಿರುವುದಿಲ್ಲವೆ? ಅಂತೆಯೆ ಈ ತೆರದ ಹೃದಯದ ಮಾತುಕತೆ!

ಪ್ರಾರ್ಥನೆಗೆ ನಮ್ಮ ಬಾಳಿನಲ್ಲಿ ಮುಖ್ಯ ಸ್ಥಾನವಿದೆ. ಅದರಿಂದ ಎಷ್ಟು ಜನ ಅಲೌಕಿಕ ಆನಂದ ಹಿತ ಕಂಡಿಲ್ಲ! ಗಾಂಧೀಜಿ ಹೇಳಿದರು: "ದೇಹಕ್ಕೆ ಅನ್ನವಿದ್ದಹಾಗೆ ಆತ್ಮಕ್ಕೆ ಪ್ರಾರ್ಥನೆ." "ಈ ಜಗತ್ತು ಕನಸಿನಲ್ಲೂ ಕಾಣದಷ್ಟು ಫಲಕಾರಿ ಪ್ರಾರ್ಥನೆ" More things are wrought by prayer than this world dreams of ಎನ್ನುತ್ತಾನೆ ಟೆನಿಸನ್. ಸಹಜವಾಗಿ ನಾವು ಪ್ರಾರ್ಥನೆ ಮಾಡುವುದು ನಮಗೆ ತೊಂದರೆ ಆದಾಗ. ಸಂಕಟ ಬಂದಾಗ ತಾನೆ ವೆಂಕಟರಮಣನ ಯೋಚನೆ? ಅದು ಸಾಲದು, ನಮ್ಮ ಸುಖದಲ್ಲೂ ಸಮೃದ್ಧಿಯಲ್ಲೂ ಪ್ರಾರ್ಥನೆಮಾಡಬೇಕು ಎನ್ನುತ್ತಾನೆ ಪ್ರವಾದಿ. ಪ್ರಾರ್ಥನೆ ಮಾಡುವುದು ತಾನೆ ಏನು? ಅನಂತದಲ್ಲಿ ನಮ್ಮನ್ನು ಲೀನಗೊಳಿಸುವುದು? ಕಡಲ ನೀರು ಆವಿಯಾಗಿ ಮೇಲೆದ್ದು ಮುಗಿಲಿನಲ್ಲಿ ಮಿಲನವಾಗುವಂತೆ, ಪ್ರಾರ್ಥನೆಯ ಸಮಯದಲ್ಲಿ ಹೀಗೆ ಮೇಲೇರಿದ ನಮ್ಮ ಆತ್ಮ, ಅಂತೆಯೆ ಮೇಲೇರಿ ಬರುವ ಇತರರ ಆತ್ಮಗಳೊಡನೆ ಒಂದಾದೀತು. ನಮ್ಮ ಪ್ರಾರ್ಥನೆ ಇಂಥ ಆನಂದಕ್ಕಾಗಿ, ಮಧುರ ಮಿಲನಕ್ಕಾಗಿ ಆಗಲಿ. ನಮ್ಮ ಪ್ರಾರ್ಥನೆಗೆ ಬೇರೆ ಏನು ಗುರಿಬೇಕು? "ಈ ವಸ್ತು ಬೇಕು, ಆ ವಸ್ತು ಬೇಕು" ಎನ್ನುವುದೇ ಭಗವಂತನೆದುರಿಗೆ? ಬಾಲ ಧ್ರುವ ರಾಜ್ಯಗಳಿಸಲೆಂದೇ ತಪಸ್ಸು ಮಾಡಿದರೂ ಭಗವಂತ ಬಂದು ವರ ನೀಡಿದಾಗ ಏನು ಬೇಡಿದ? ಆತನ ಮನ ತುಂಬಿತ್ತು. ಪರಮಾತ್ಮನ ದರ್ಶನವೇ ಲಭಿಸಿದ ಮೇಲೆ ಬೇರೆ ಇನ್ನಾವ ಆಸೆ ಸಲ್ಲಬೇಕು? "ಏನೂ ಬೇಡ" ಎಂದ. ಅಂತಹ ಮಧುರ

ಮಂಗಲ ಪವಿತ್ರ ಗಳಿಗೆಗಾಗಿ ಪ್ರಾರ್ಥನೆ ಮಾಡಬೇಕು. ಪ್ರಾರ್ಥನೆ ಎಂಥದಿರಬೇಕು? ಯಾರು ಕಲಿಸಿಯಾರು ಇದನ್ನು? ಅಡವಿಯ, ಬೆಟ್ಟದ, ಕಡಲಿನ ಪ್ರಾರ್ಥನೆ ಕಲಿಸ ಲಾದೀತೆ? ರಾತ್ರಿಯ ಪ್ರಶಾಂತತೆಯಲ್ಲಿ ಅವುಗಳಿಗೆ ದನಿ ಗೊಟ್ಟರೆ ಕೇಳಿಸೀತು: ದೇವಾ, ನಮ್ಮೊಳಗಿನ ಮನಸ್ಸು ನೀನೇ, ಚಿಂತೆಯೂ ನೀನೇ, ನಿನ್ನದೇ ಹಂಬಲ, ನೀನೇ ಹಂಬಲ, ಹಗಲು ರಾತ್ರಿಗಳೂ ನೀನೇ, ಅವುಗಳನ್ನು ಕಾಣುವ ನಮ್ಮ ಆಕಾಂಕ್ಷೆಯೂ ನೀನೇ. ಯಾವುದನ್ನೂ ನಾವು ಬೇಡೆವು. ನಮಗಿಂತ ಮೊದಲೇ ನಿನಗೆ ತಿಳಿದಿದೆ. ನಮ್ಮ ಅಗತ್ಯಗಳೆಲ್ಲ. ನೀನೆ ನಮ್ಮ ಅಗತ್ಯ. ಅದನ್ನು ಪೂರೈಸುವ ನೀನು ನಿನ್ನನ್ನೇ ನಮಗೀಯುತ್ತಿರುವೆ. ಎಲ್ಲವೂ "ನೀನೇ ನೀನೇ." ನಿನಗೆ ಶರಣಾಗುವುದೊಂದೇ ನನ್ನ ಕೆಲಸ, ಉಳಿದೆಲ್ಲ ನಿನ್ನದೇ."

ಸುಖಕ್ಕೆ ಹಾತೊರೆಯದವರು ಯಾರು? ಯಾವುದು ಸುಖ? ಆದರಲ್ಲಿ ಸರಿ ತಪ್ಪು ಉಂಟೇ? ಹಾಗಾದರೆ ಯಾವುದು ಸರಿ, ಯಾವುದು ತಪ್ಪು? ಬಯಸಿದರೆ ಎಂಥ ಸುಖ ಬಯಸಬೇಕು? ಇದಕ್ಕೆ ಉತ್ತರವಾಗಿ ಪ್ರವಾದಿ ಬನದೆಡೆಗೆ, ಪುಷ್ಪೋದ್ಯಾನದೆಡೆಗೆ ಕೈ ತೋರುತ್ತಾನೆ. "ಅಲ್ಲಿ ನೋಡು, ಹೂವಿನ ಜೇನನ್ನು ಸಂಗ್ರಹಿಸುವುದು ದುಂಬಿಗೆ ಸುಖ, ಹೂವಿಗೆ ತನ್ನ ಜೇನೀವುದೇ ಸುಖ. ಏಕೆಂದರೆ ದುಂಬಿಯ ಪಾಲಿಗೆ ಹೂ ಬಾಳಿನ ಚಿಲುಮೆ, ಹೂವಿಗೆ ದುಂಬಿ ಪ್ರೇಮದೂತ. ಹೂ ದುಂಬಿ ಎರಡಕ್ಕೂ ಸುಖ ವೀಯುವುದು ಒಂದು ಆಗತ್ಯ, ಒಂದು ಆನಂದ! ನಮ್ಮ ಸುಖದಲ್ಲಿ ನಾವಿಂತೆಯೆ ಇರಬೇಕು.

ಚೆಲುವಿಲ್ಲದ ಬಾಳು ಬರಡು, ಚೆಲುವೇ ಸತ್ಯ ಎನ್ನಲಿಲ್ಲವೆ ಕೀಟ್ಸ್ ಕವಿ? ಸತ್ಯವೇ ಸೌಂದರ್ಯ ಎಂದವರು ಎಷ್ಟೋ ಮಹಾನುಭಾವರುಂಟು. ಸತ್ಯದಲ್ಲಿ ಸೌಂದರ್ಯವನ್ನು ಸೌಂದರ್ಯದಲ್ಲಿ ಸತ್ಯವನ್ನೂ ಕಾಣುವ ಕಣ್ಣು ಸಾಧಾರಣ, ಚರ್ಮದ ಕಣ್ಣಲ್ಲ, ಒಳಗಿನ ಹೃದಯದ ಕಣ್ಣದು. ಸೌಂದರ್ಯ ಎಂದರೆ ನಾನಾ ಜನ ನಾನಾ ವಿವರಣೆ ಯಿತ್ತಾರು. ಉದಯಾಸ್ತಗಳು, ನಿಸರ್ಗದ ವಿವಿಧ ವ್ಯಾಪಾರ ಗಳು, ಋತುಗಳ ರಿಂಗಣ, ಇನ್ನೂ ಎಷ್ಟೋ. ಆದರೆ ಇವೆಲ್ಲ ಸೌಂದರ್ಯದ ಒಂದೊಂದು ಮುಖ ಅಷ್ಟೇ, ಅತೃಪ್ತ ಬಯಕೆಗಳು. ಸೌಂದರ್ಯ ಬಯಕೆ ಮಾತ್ರವೇ? ಅಲ್ಲ, ಅದೇ ಒಂದು ಆನಂದ, ಅದು ನೀರಿಗಾಗಿ ತೆರದ ಬಾಯಲ್ಲ, ಮುಂಚಾಚಿದ ಬರಿಗೈಯಲ್ಲ, ಅದು ಜ್ಯೋತಿರ್ಮಯ ಹೃದಯ, ಮಂತ್ರಮುಗ್ಧ ಆತ್ಮ, ಬಾಳು ತನ್ನ ಪವಿತ್ರ ಮುಖವನ್ನು ತೋರಿದಾಗ ಅದೇ ಸೌಂದರ್ಯ.

ಧರ್ಮದ ಹಾಯಿ ಇಲ್ಲದಿದ್ದರೆ ಬಾಳಿನ ದೋಣಿ ಗುರಿ ಮುಟ್ಟುವುದು ಅಸಾಧ್ಯ. ಧರ್ಮ ಬಾಳಿನ ಚುಕ್ಕಾಣಿ. ಆದರೆ ಧರ್ಮ ಎಂಬುದೇನು? ಜೀವನದಿಂದ ವಿಶಿಷ್ಟ, ವಿಭಿನ್ನವಾದುದೇ? ಅದು ಹೇಗೆ? ಬಾಳೇ ಧರ್ಮಮಯ. ಪ್ರತಿಯೊಂದು ಕೃತಿಯೂ ಯೋಚನೆಯೂ ಎಲ್ಲವೂ ಧರ್ಮ ಬದ್ಧವಾಗಿಲ್ಲದೆ ಇದ್ದರೆ ಬೇರೆ "ಧರ್ಮ" ಎಂದು ಚಿಂತಿಸಿದರೆ ಏನು ಪ್ರಯೋಜನ? ಧರ್ಮದಿಂದ ಶ್ರದ್ಧೆಯನ್ನು ಬೇರ್ಪಡಿಸುವುದಾದರೂ ಹೇಗೆ? ಇದುವರೆಗೆ ಹೇಳಿದುದೆಲ್ಲ ಧರ್ಮವಲ್ಲದೆ ಬೇರೇನು? ದಿನದ ಗಂಟೆಗಳಲ್ಲಿ "ಇಷ್ಟು ನನಗೆ, ಇಷ್ಟು ದೇವರಿಗೆ, ಇಷ್ಟು ನನ್ನ ಆತ್ಮದ ಸಲುವಾಗಿ, ಇನ್ನಷ್ಟು ನನ್ನ ದೇಹಕ್ಕಾಗಿ." ಎಂದು ವಿಾಸಲುಮಾಡಿ ವೇಳಾಪಟ್ಟಿ ಮಾಡುವುದೇ? ಎಲ್ಲ ಕಾಲದಲ್ಲೂ ಧರ್ಮದ ಉಸಿರೇ ಆಡುತ್ತಿರಬೇಕು. ನಾಲ್ಕು ಜನ ಬಂದಾಗ, ಎಲ್ಲಿ ಯಾದರೂ ಹೋದಾಗ, ಸಭೆ ಸಮಾರಂಭಗಳಿಗೆ ಹೋಗು ವಾಗ ತೊಡಲು ಉತ್ತಮ ವಸ್ತ್ರಗಳನ್ನಿಡುವ ಹಾಗೆ, ನೀತಿಯ ಮುಸುಕನ್ನೂ ಕೆಲವೇ ಸಂದರ್ಭಗಳಿಗಾಗಿ ಇಟ್ಟಿದ್ದರೆ, ಅಂಥವನು ಬೆತ್ತಲೆಯಾಗಿರುವುದೇ ಲೇಸು, ಈ ಬೂಟಾಟಿಕೆಯೇಕೆ? ಪೂಜೆ ಎನ್ನುವುದನ್ನು ತೆಗೆಯಲು ಹಾಗೂ ಮುಚ್ಚಲು ಅನುಕೂಲವಿರುವಂತಹ ಕಿಟಕಿ ಮಾಡಿ ಕೊಂಡವನು, ಹಗಲು ರಾತ್ರಿ ಸದಾ ತೆರೆದೇ ಇರುವ ಕಿಟಕಿ ಗಳುಳ್ಳ ತನ್ನ ಆತ್ಮದ ಮನೆಯನ್ನು ಕಾಣದ ಕುರುಡ! ಬಾಳೇ ದೇಗುಲ. ಅದೇ ಧರ್ಮ. ಅದರಲ್ಲಿ ನಮ್ಮ ಪಾಲಿಗೆ ಏನೇನು ಬಂದಿದೆಯೋ ಅನುಸರಿಸುವ. ನೇಗಿಲಾಗಲಿ, ಮಗ್ಗವಾಗಲಿ ಕುಲುಮೆಯಾಗಲಿ ಕೊನೆಗೆ ಗಾನದ ವಾದ್ಯವೇ ಆಗಲಿ. ಅದನ್ನೇ ಕೊಂಡೊಯ್ಯುವ. ದೇವರನ್ನ ಬಾಳಿನಲ್ಲಿ ಅದರ ಅನಂತ ನಿತ್ಯ ಕರ್ಮಗಳಲ್ಲಿ ಕಾಣದೆ ಇನ್ನೆಲ್ಲಿ ಕಾಣುವುದು? ಕಣ್ತೆರೆದು ನೋಡಿ. ಅಲ್ಲಿ ಮಕ್ಕಳೊಂದಿಗೆ ಆಡುತ್ತಿಲ್ಲವೆ ಭಗವಂತ? ಅತ್ತ ಆಗಸದತ್ತ ನೋಡಿ, ಮುಗಿಲಾಗಿ ಓಡುತ್ತಿಲ್ಲವೆ? ಮಿಂಚಿನ ಕೈ ಚಾಚುತ್ತ ಮಳೆಯಾಗಿ ಅವತರಿಸುತ್ತಲಿಲ್ಲವೆ ಭಗವಂತ? ಅದೇ ಅಲ್ಲಿ ಹೂಗಳಲ್ಲಿ ನಗುತ್ತಿದ್ದಾನೆ. ಮರ ಗಿಡಗಳ ರೆಂಬೆ ಗಳ ಕೈಬೀಸುತ್ತಿದ್ದಾನೆ! ಹೀಗೆ ಸೃಷ್ಟಿಯಲ್ಲಿ ಬಾಳಿನಲ್ಲಿ ಧರ್ಮದ ಆವಿರ್ಭಾವವಾಗದೆ ಇದ್ದರೆ ಎಷ್ಟು ಯಾತ್ರೆ ಮಾಡಿದರೇನು? ಎಷ್ಟು ತಪಸ್ಸು ಮಾಡಿದರೇನು, ಎಷ್ಟು ಶುಕ್ರವಾರ ಎಷ್ಟು ಭಾನುವಾರ ಪ್ರಾರ್ಥನೆ ಸಲ್ಲಿಸಿದರೂ ಏನು? ಸರ್ವಾಂತರ್ಯಾಮಿಯಾದವನನ್ನು ಹೀಗೆ ಬಾಳಿನಲ್ಲೆ ಕಂಡುಕೊಳ್ಳುವ ಈ ಅಂತರ್‌ದೃಷ್ಟಿ ಪ್ರವಾದಿಗೆ ತಾನೆ ಸಾಧ್ಯ?

ಇನ್ನುಳಿದಿರುವುದು ಅಂತಿಮ ಘಟ್ಟಮಾತ್ರ – ಸಾವು? ಸಾವು ಏನು? ಬಾಳಿನಿಂದ ಭಿನ್ನವೇ? ಹೊನಲಿಗೆ ಕಡಲಿದ್ದಂತೆ ಬಾಳಿಗೆ ಸಾವು? ಸಾವಿಗೆ ಹೆದರುವುದು ಏಕೆ? ಯಾರಿಗೆ ಹೆದರಿಕೆ? ಯಾರು ಈ ಕೊನೆ ಮುಟ್ಟಲು ಬಾಳನ್ನೆಲ್ಲ ಸಾಧನೆಯನ್ನಾಗಿ ಮಾಡಿಕೊಂಡಿರರೋ ಅವರು ಹೆದರಿಯಾರು!

ಹೀಗೆ ಪ್ರವಾದಿ ಬಾಳಿನ ಸಮಗ್ರ ಸಮೀಕ್ಷೆ ಮಾಡುತ್ತಾನೆ. ಇನ್ನು ಆತ ಹೊರಡಬೇಕು ತನ್ನನ್ನು ಕರೆದೊಯ್ಯಲು ಬಂದಿದ್ದ ದೋಣಿಯತ್ತ ತೆರಳುತ್ತಾನೆ. ದೋಣಿ ಏರಿ ಮತ್ತೊಮ್ಮೆ ತನ್ನವರತ್ತ ನೋಡುತ್ತಾನೆ.

ಅವನಿನ್ನು ಹೊರಡಬೇಕು. ಅವನದು ನಿರಂತರ ಯಾತ್ರೆ. ಅವನಿಗೆ ಮುಂಜಾನೆ ಎಲ್ಲಿ? ಸಂಜೆಯೆಲ್ಲಿ? ಭೂಮಿ ವಿರಮಿಸುವಾಗಲೂ ಅಂಥವರು ನಡೆದೇ ನಡೆಯುತ್ತಿರುತ್ತಾರೆ. ಏಕೆಂದರೆ ಪ್ರವಾದಿ ಸತ್ಯದರ್ಶಕ. ಸತ್ಯಕ್ಕೆ ಚ್ಯುತಿಯೆಲ್ಲಿ? ಅದು ನಿರಂತರವಾಗಿ ಸಾಗುತ್ತದೆ. ಅಂತಹವರು ಗಿಡದ ಬೀಜದಂತೆ. ಬೀಜ ಬಲಿತಾಗ, ಗಾಳಿ ಬೀಸಿ ಅದನ್ನು ಕೊಂಡೊಯ್ದು ಅತ್ತಿತ್ತ ಚೆಲ್ಲುತ್ತದೆ, ಮತ್ತೆ ಗಿಡ ಬೆಳೆಯಲೆಂದು, ಅಂತೇ ಪ್ರವಾದಿಯೂ. ಅವನೆದೆ ಪಕ್ವವಾದಾಗ ಸತ್ಯದ ಬೀಜದ ಪ್ರಸಾರವಾಗುತ್ತದೆ.

ಪ್ರವಾದಿ ಇಲ್ಲಿ ಇದ್ದುದು ಕೆಲ ಕಾಲ. ಅವನ ಮಾತು ಸ್ವಲ್ಪವೇ. ಆದರೆ ಜನರ ಕಿವಿಗಳಲ್ಲಿ ಅವನ ಮಾತು ಕ್ಷೀಣಿಸಿದಾಗ ಅವನ ವಾತ್ಸಲ್ಯ ಮಸಕಾದಾಗ ಆತ ಮತ್ತೆ ಅವತರಿಸುತ್ತಾನೆ.

ಮುಂಜಾನೆ ಮರೆಯಾಗುವ ಮಂಜು ಮೇಲೇರಿ ಒಟ್ಟಾಗಿ ಮೋಡವಾಗಿ ಮತ್ತೆ ಮಳೆಯಾಗಿ ಸುರಿಯುತ್ತದೆ. ಸತ್ಯದರ್ಶನನೂ ಅಂತೆಯೆ. ಬಾಳಿನಲ್ಲಿ ಅವನ ಅಗತ್ಯ ಹೆಚ್ಚಾದಾಗ, ಜನದೆದೆಯಲ್ಲಿ ಪ್ರೀತಿಯ ಹಂಬಲ ಹೆಚ್ಚಾದಾಗ, ಆ ಹಂಬಲವೇ ಒಟ್ಟಾಗಿ ಘನೀಭೂತವಾದೀತು. ಅದರ ಪ್ರತೀಕವಾಗಿಯೇ ಮತ್ತೆ ಲೋಕದಲ್ಲಿ ಸತ್ಯವಂತನ ಅವತಾರವಾದೀತು. ಕಾಲಕಾಲದ ದೇಶದೇಶದ ಅಗತ್ಯಕ್ಕೆ ಅನುಗುಣವಾಗಿ ಆ ಕಾಲದ ಆ ದೇಶದ ಹಂಬಲವನ್ನು ಆಕಾಂಕ್ಷೆಗಳನ್ನು ಪೂರಯಿಸುವ ಮಹಾತ್ಮ ಹುಟ್ಟಿಯಾನು.

ಎಲ್ಲರಲ್ಲಿರುವ ದಿವ್ಯವನ್ನೂ ಅನಂತವನ್ನೂ ಕಂಡಿದಾನೆ ಪ್ರವಾದಿ. ಲೋಕವೆಲ್ಲ ಸೃಷ್ಟಿಯೆಲ್ಲ ಯಾರ ಮೈಯಲ್ಲಿ ಅಡಕವಾಗಿದೆಯೋ ಯಾರ ಕೆಲ ಕೆಲ ಭಾಗಗಳಾಗಿದೆಯೊ ಅಂತಹ ವಿರಾಡ್ರೂಪಿ ಪುರುಷನ ದರ್ಶನವಾಗುತ್ತಿದೆ ಅವನಿಗೆ. ಆ ಪುರುಷನ ಅನಂತತೆಯ ಅಂಶಗಳೆಂದೇ ನಾವೂ ಅನಂತರು. ಅಂತೆಯೆ ಪ್ರವಾದಿಗೆ ಜನರ ಮೇಲೆ ಪ್ರೇಮ. ಪ್ರೇಮಕ್ಕೆ ಎಟುಕದ ವೈಶಾಲ್ಯವಾದರೂ ಯಾವುದು? ನಮ್ಮಲ್ಲಿನ ಆ ವಿರಾಡ್ರೂಪಿ ದೊಡ್ಡ ಹಣ್ಣಿನ ಮರದಂತೆ ಅವನ ಶಕ್ತಿ ನಮ್ಮನ್ನು ಬಾಗಿಸುತ್ತದೆ. ಅವನ ಸೌರಭ ನಮ್ಮನ್ನು ಆಕಾಶಕ್ಕೆತ್ತುತ್ತದೆ. ಅವನ ನಿತ್ಯತೆಯಲ್ಲಿ ನಮಗೂ ಸಾವಿಲ್ಲ.

ಇಷ್ಟೆಲ್ಲ ಹೇಳುವ ಪ್ರವಾದಿಯ ನಮ್ರತೆ ತಾನೇ ಎಂಥದು? ಆತ ಜನಮಾನಸದಲ್ಲಿ ಲೋಕದಲ್ಲಿ ದೇವರನ್ನು ಕಾಣುತ್ತಾನೆ. ಎಷ್ಟೋ ಜ್ಞಾನಿಗಳು ಜನ್ಮವೆತ್ತಿ ಜ್ಞಾನವಿತ್ತಿದ್ದಾರೆ ಲೋಕಕ್ಕೆ. ಆದರೆ ಈ ಪ್ರವಾದಿ ಜ್ಞಾನ ಪಡೆಯಲು ಬಂದಿದೇನೆ ಎನ್ನುತ್ತಾನೆ. ಅದಕ್ಕಿಂತ ಹೆಚ್ಚಿನದನ್ನು ಕಂಡುಕೊಂಡಿದಾನೆ. ಲೋಕದಲ್ಲಿ ಜನದ ಹೃದಯದಲ್ಲಿ ಪ್ರಜ್ವಲಿಸುವ ಪರಮಾತ್ಮನ ಜ್ಯೋತಿಯನ್ನು ಕಂಡಿದಾನೆ. ಈ ಕಾರಣದಿಂದ ಆತ ಜನರಿಗೆಲ್ಲ ತನ್ನ ಕೃತಜ್ಞತೆ ಮೆಚ್ಚುಗೆ ತಿಳಿಸುತ್ತಾನೆ. ಜ್ಞಾನ ತಿಳಿಸಬಂದ ಅವನಿಗೇ ಜ್ಞಾನ ಸಿಕ್ಕಿತು. ನೀರು ಕುಡಿಯ ಬಂದವನಿಗೆ ಬಾಳಿನ ಹೊಳೆ ತಾನೇ ಕುಡಿಸೀತು. ಜನರ ನಡುವೆ ನಡೆಸಿದ ಬಾಳುವೆಯನ್ನು ಸ್ಮರಿಸಿಕೊಳ್ಳುತ್ತಾನೆ. ಆತ ಅವರ ಭಿಕ್ಷೆಗೆ ಕೈನೀಡಲಿಲ್ಲ. ಆಸರೆಗೆ ಮನಸೋಲಲಿಲ್ಲ. ಅಡವಿಯ ಬೋರೆ ಹಣ್ಣೆ ಅವನಿಗಾಹಾರ. ದೇಗುಲದ ಅಂಗಳ ನಿದ್ರಾಸ್ಥಾನ. ತಾವು ನೀಡುವುದನ್ನು ಸ್ವೀಕರಿಸದ ಈ ಪ್ರವಾದಿಯನ್ನು ಜನ ಅಹಂಕಾರಿ, ಅತಿ ಸಂಕೋಚದವನು, ಎಂದಾರು. ಆದರೆ ಅವರೆಲ್ಲರ ಪ್ರೇಮವೇ ಅವನ ಬಾಳಿಗಾಸರೆ. ಈ ದೊಡ್ಡ ಕೊಡುಗೆಯನ್ನು ಅಳೆಯುವವರಾರು? ಕೊಟ್ಟವರಿಗೇ ತಿಳಿಯದು. ಅದೂ ಸರಿಯೆ! ನಮ್ಮ ದಯೆಯನ್ನು ನಾವೇ ಅಳೆದರೆ ಅದು ಕಲ್ಲಾದೀತು. ನಮ್ಮ ಸತ್ಕೃತಿಗಳನ್ನು ನಾವೇ ಮೆಚ್ಚಿಕೊಳ್ಳಲೆಳಸಿದರೆ ಆ ಮೆಚ್ಚುಗೆಯೇ ಶಾಪದ ನಾಂದಿಯಾದೀತು. ಒಂದು ಕೈ ಕೊಟ್ಟದ್ದು ಇನ್ನೊಂದಕ್ಕೆ ತಿಳಿಯದಿರಲಿ ಎನ್ನುವುದಿಲ್ಲವೇ ನಮ್ಮಲ್ಲಿ?

ಕೆಲವರೆಂದಾರು: "ಇವನೇನು ನಮ್ಮೊಡನೆ ಮಾತೇ ಆಡ, ನಮ್ಮೊಂದಿಗೆ ಬಾಳುವುದೇ ಇಲ್ಲ. ಎಲ್ಲೋ ದೂರ ಇದಾನೆ. ಮೇಲೆ ಇದಾನೆ. ಗುಡ್ಡವೇರಿ ನಮ್ಮತ್ತ ಕೆಳಗೆ ನೋಡುತ್ತಾನೆ" ಎಂದು. ಬಾಳಿನ ಸಮೀಕ್ಷೆ ಮಾಡಲೆಳಸುವವನು ಮೇಲೆತಾನೆ ಇರಬೇಕು. ನಿರ್ಲಿಪ್ತನಾಗಿರದೆ ಬಾಳಿನ ಹೊಳೆಯಲ್ಲಿ ಮುಳುಗಿದವನಿಗೆ ಈ ದೃಷ್ಟಿ ಬರುವುದೆಂತು? ಬೆಟ್ಟವೇರಿ ನಿಂತಾಗ ತಾನೆ ಕೆಳಗಣ ಬಯಲೆಲ್ಲ ಪೂರ್ಣವಾಗಿ ಕಂಡೀತು? ಹೃದಯ ದೂರವಿದ್ದರೂ ಮನಸ್ಸು ಹತ್ತಿರವಿದ್ದರೆ ಆಗದೆ? ಅದೇ ತಾನೆ ಒಲವಿನ ಪರೀಕ್ಷೆ. ವಿರಹದಲ್ಲಿ ಹಂಬಲ, ಪ್ರೀತಿ ಇಲ್ಲದೆ ಹೋದರೆ ಸಾಮೀಪ್ಯದಲ್ಲಿ ಸಮ್ಮಿಲನದಲ್ಲಿ ಹೇಗೆ ಇದ್ದೀತು? ಇದ್ದರೂ ದೃಢವೇ? ನಿಜವೆ?

ಕೆಲವರು "ಇದೇನು ಈ ಅವಸ್ಥೆ, ಅಸಾಧ್ಯವಾದುದರ ಸಾಧನೆ? ಕಾಣದುದನ್ನು ಕೈಗೆಟುಕದುದನ್ನು ಕಾಣಲು ಎಟುಕಿಸಿಕೊಳ್ಳಲು ಹೋಗುವ ಸಾಹಸ, ಬಿಸಿಲುಗುದುರೆಯ ಸವಾರಿ? ಈ ಹುಚ್ಚೆಲ್ಲ ಬಿಟ್ಟು ನಮ್ಮಂತೆಯೆ ಇರಬಾರದೆ" ಎಂದಾರು. ಪಾಪ! ಅವರಿಗೇನು ಗೊತ್ತು ಪ್ರವಾದಿ ಅರಸುತ್ತಿರುವುದು ಅವರೆದೆಗಳ ಲೋಕದಲ್ಲಿ ಹುದುಗಿರುವ ನೋವು ನಲವುಗಳ ರಹಸ್ಯವನ್ನು ಎಂದು? ಈ ಅನ್ವೇಷಣೆಯಲ್ಲಿ ಪ್ರವಾದಿ ತನ್ನ ಅನ್ವೇಷಣೆಗೂ ತೊಡಗಿಯೇ ಇದಾನೆ. ಆತನೂ ಲೋಕದ ಭಾಗ ತಾನೆ, ಅನಂತದ ಪ್ರತಿಬಿಂಬ ತಾನೆ. ಲೋಕವನ್ನು ಅನಂತವನ್ನು ಅರಸ ಹೊರಟವನು ತನ್ನಲ್ಲೆ ತನ್ನ ಗುರಿಯನ್ನು ಕಾಣುತ್ತಿದಾನೆ. ಆತ್ಮ ಸಂಶೋಧನೆಯಾಗಿದೆ. ಇದೇ ಆಧಾರದ ಮೇಲೆಯೆ ಆತ ಜನರ ಆತ್ಮದಲ್ಲಿ ಅಮರತೆಯನ್ನು ಅನಂತತೆಯನ್ನು ಕಂಡುಕೊಂಡಿದಾನೆ. ಕೇವಲ ನೆಲದ ಮೇಲೆ ಮಿಲಮಿಲ ಓಡಾಡುವ ಜೀವಿ ಮಾತ್ರವಲ್ಲ, ಗಗನ ವಿಹಾರ ಮಾಡಬಲ್ಲ ಆತ್ಮಪಕ್ಷಿಯನ್ನು ಕಂಡುಕೊಂಡಿದಾನೆ.

ಇವೆಲ್ಲ ಅಸ್ಪಷ್ಟವಾಗಿ ಕಂಡೀತು, ಅದು ಹಾಗೆಯೆ. ಜೀವನದ ಉಗಮವೆಲ್ಲ ಅಸ್ಪಷ್ಟತೆಯಲ್ಲೆ. ಅಸ್ಪಷ್ಟರೂಪದಿಂದ ಸ್ಪಷ್ಟಕ್ಕೆ ವಿಕಾಸ ಹೊಂದುವುದು ಸೃಷ್ಟಿ ನಿಯಮ. ವೈಜ್ಞಾನಿಕ ತತ್ವರೀತಿಯಲ್ಲೂ ಜಗತ್ತಿನ ಜೀವದ ಸೃಷ್ಟಿ ಹೀಗೆ ತಾನೆ; ಬ್ರಹ್ಮಾಂಡಗಳು ಏನೊ ಆವಿಯ ಅಲೆಯಲೆಗಳಾಗಿ ತೇಲುತ್ತಿದ್ದು ಬರುಬರುತ್ತ ಉಂಡುಂಡೆಗಳಾಗಿ ಗೋಳಗಳಾಗಿ ವಿವಿಧ ನಕ್ಷತ್ರ ಗ್ರಹಗಳು ಆದುವಲ್ಲವೆ? ಜೀವದ ಆರಂಭವೂ ಅಸ್ಪಷ್ಟವಾದ (ನಮ್ಮ ಸ್ಪಷ್ಟತೆಗೆ ಹೋಲಿಸಿದರೆ) ಅವಿರ್ಭಾವದಿಂದಲ್ಲವೆ? ಅದರಿಂದ ವಿಕಾಸಹೊಂದಿ, ಈಗ ಸೃಷ್ಟಿ ಅನೇಕ ರೂಪಗಳಲ್ಲಿ ಕಾಣುತ್ತಿದೆ. ಈಗಲೂ ಅಸ್ಪಷ್ಟ ಧಾತುಗಳಿಂದ, ಅವುಗಳ ಕ್ರಿಯೆಗಳಿಂದ ಸ್ಪಷ್ಟಾಕಾರದ ಪ್ರಾಣಿಗಳು ಉಂಟಾಗುವುದಿಲ್ಲವೆ? ಅಂತೆಯೆ ಅಸ್ಪಷ್ಟತೆಯೇ ಬಾಳಿನ ಉಗಮ, ಆದಿ. ಆದರೆ ಅಂತ್ಯವಲ್ಲ. ಹಾಗೆಯೆ ಪ್ರವಾದಿಯೂ ಅವನ ಮಾತೂ ಅಸ್ಪಷ್ಟವಾಗಿ ತೋರಿದರೆ ಮುಂದಿನ ವಿಕಾಸದ ಮುನ್ಸೂಚನೆ. ಮನೋವಿಕಾಸವೆ ಆಗಲಿ, ಆತ್ಮವಿಕಾಸವಾಗಲಿ ಇದೇ ಅದರ ಮುಂಬೆಳಗು.

ಒಂದು ಮಾತು ನೆನಪಿನಲ್ಲಿಡಬೇಕು. ನಮ್ಮಲ್ಲಿ ಯಾವುದು ಅಶಕ್ತ ಎಂದು ಭಾವಿಸುವೆವೊ ಅದೇ ಸರ್ವಶಕ್ತವಿರಬಹುದು. ನಮ್ಮ ಸರ್ವಸ್ವವಾದ ನಮ್ಮ ಉಸಿರು ಏನು ಶಕ್ತಿಯುತ? ನಮ್ಮ ಎಲ್ಲ ಬೆಳವಣಿಗೆಗೆ ಕೆಲಸಕಾರ್ಯಗಳಿಗೆ ನಿರ್ಮಾಣಗಳಿಗೆ ಕಾರಣವಾದ ನಮ್ಮ ವಿಚಾರ, ನಮ್ಮ ಕನಸು ಶಕ್ತಿಯುತವಲ್ಲವೇ? ಕಣ್ಣು ತೆರೆದು ನೋಡಬೇಕು. ಕಿವಿಬಿಚ್ಚಿ ಕನಸಿನ ತೆರೆಗಳ ನಾದ ಕೇಳಬೇಕು. ಹಾಗೆ ನೋಡುವವರೆಷ್ಟು ಮಂದಿ? ಕೇಳುವವರಾರು? ಆದರೆ ಹಾಗೆಂದು ನಾವು ನಿರಾಶರಾಗಬೇಕಾಗಿಲ್ಲ. ಪ್ರವಾದಿ ಭರವಸೆ ಹೇಳುತ್ತಾನೆ. ನಿಮ್ಮ ಕಣ್ಣನ್ನು ಮುಚ್ಚಿರುವ ಕೈಯೇ ಅದನ್ನು ತೆರೆಯುತ್ತದೆ. ನಮ್ಮ ಕಿವಿಗೆ ಮಣ್ಣು ತುಂಬಿರುವ ಕೈಯೇ ಅದನ್ನು ತೆಗೆದುಹಾಕುತ್ತದೆ. ಆಗ ಕಣ್ಣು ಕಂಡೀತು, ಕಿವಿ ಕೇಳೀತು. ನಮ್ಮ ಕುರುಡಿಗಾಗಲಿ, ಕಿವುಡಿಗಾಗಲಿ ನಾವು ಹಲುಬಬಾರದು; ಬೆಳಕೆಂತೊ ಕತ್ತಲೆಯೂ ಅಂತೆ ಪೂಜ್ಯವೇ, ಎರಡೂ ಆತನ ಸೃಷ್ಟಿ. ದಿನ ಮುಗಿಯುತ್ತದೆ. ಇನ್ನು ತಡಮಾಡಲಾಗದು. ಪ್ರವಾದಿ ಜನರಿಗೆ ನಮಸ್ಕಾರ ಹೇಳುತ್ತಾನೆ. ಕಮಲ ಮುಚ್ಚಿಕೊಳ್ಳುತ್ತದೆ, ನಾಳೆ ಅರಳಲು ಇಂದು ಬಾಳೂ ಕೊನೆಗೊಳ್ಳುತ್ತಿದೆ. ಇಲ್ಲಿ ಪಡೆದ ಸಂಸ್ಕಾರ ಉಳಿಸಿಕೊಳ್ಳೋಣ. ನಮ್ಮ ಮಹಾಯಾತ್ರೆಗೆ ಆ ಪಾಥೇಯ ಸಾಲದಾದರೆ ಮತ್ತೆ ನಾಳೆ ಬರೋಣ. ಇನ್ನೊಂದು ಬಾಳುವೆಯಲ್ಲಿ ಕೈಚಾಚಿ ಬಿಡೋಣ. ಕೊಡುವವನು ಅವನು. ಮತ್ತೆ ಪ್ರವಾದಿ ಬಂದಾನು. ಅವನ ಸತ್ಯಾಕಾಂಕ್ಷೆ ಮತ್ತೆ ಘನಿಸಿ ರೂಪ ತಳೆದೀತು. ಒಂದು ಗಳಿಗೆ ವಿರಾಮವಾದಮೇಲೆ ಮತ್ತೆ ಒಬ್ಬ ತಾಯಿ ಅವನನ್ನು ಧರಿಸಿ ಜನ್ಮವಿತ್ತಾಳು! "ಸಂಭವಾಮಿ ಯುಗೇ ಯುಗೇ".

ಪ್ರವಾದಿ ಕೈ ಬೀಸಿದ. ದೋಣಿಯ ಲಂಗರು ಕಿತ್ತರು–ಹುಟ್ಟು ಆಡಿತು. ಹಾಯಿ ಬಿಚ್ಚಿತು. ದೋಣಿ ಅನಂತ ಸಾಗರದಲೆಗಳ ಮೇಲೆ ತೇಲುತ್ತ ಹೊರಟಿತು. ದಡದಲ್ಲಿ ನಿಂತ ಜನ ಒಕ್ಕೊರಲಿನಿಂದ ಕೈ ಚಾಚಿ ಹಲುಬಿದರು, ಅವರ ದನಿಯನ್ನು ಕಡಲಿನಲೆಗಳು ಹೊತ್ತುಕೊಂಡೊಯ್ದವು. ಅವರ ಜೀವದ ಜೀವವಾಗಿದ್ದ ಪ್ರವಾದಿಯೆಡೆಗೊ ಏನೊ! ಅನುಭವಿಯಾಗಿದ್ದಾಕೆ ಮಾತ್ರ ಶಾಂತಳಾಗಿ ದೋಣಿ ದೃಷ್ಟಿ ಮೀರುವವರೆಗೂ ನೋಡುತ್ತಿದಾಳೆ. ಜನವೆಲ್ಲ ಊರಿಗೆ ಮರಳಿತು. ಈಗ ಆಕೆ ಒಬ್ಬಳೇ ಕಡಲ ತಡಿಯಲ್ಲಿ ನಿಂತಿದಾಳೆ. ಎದೆ ಮತ್ತೆ ಮತ್ತೆ ಪ್ರವಾದಿಯ ಮಾತನ್ನು ನೆನಪುಮಾಡಿಕೊಳ್ಳುತ್ತದೆ. "ಒಂದೇ ಗಳಿಗೆ, ಒಂದು ಗಳಿಗೆ ವಿರಮಿಸಿದ ಮೇಲೆ ಮತ್ತೆ ಒಬ್ಬ ತಾಯಿ ನನ್ನನ್ನು ಧರಿಸಿ ಜನ್ಮವಿತ್ತಾಳು" ದೋಣಿಯತ್ತಣಿಂದ ಬರುತ್ತಿರುವ ಕಡಲಲೆಗಳೂ ಇದೇ ಸಂದೇಶವನ್ನೇ ಮತ್ತೆ ಮತ್ತೆ ತಂದು ಆಕೆಗೆ ಮುಟ್ಟಿಸಿದುವೇನೊ!

# ಉತ್ತುಂಗ ಸಾಹಿತಿ ಉತ್ತಂಗಿ

■ ಎಸ್. ಆರ್. ಗುಂಜಾಳ

(೧೯೬೯ನೇ ಜನವರಿ ಸಂಚಿಕೆಯಿಂದ ಮುಂದುವರಿದುದು)

## ಶ್ರೀ ಉತ್ತಂಗಿಯುವರ ಪ್ರಕಟಿತ ಗ್ರಂಥಗಳು

೧. ಉಪದೇಶಕರಾಗಿದ್ದ ಉತ್ತಂಗಿಯುವರು ಸಾಹಿತ್ಯ ಪ್ರಪಂಚದಲ್ಲಿ ಪ್ರವೇಶಿಸಿದ್ದು '**ಬನಾರಸಕ್ಕೆ ಬೆತ್ಲೆಹೆಮಿನ ವಿನಂತಿ**' ಎಂಬ ಏಸುಕ್ರಿಸ್ತನ ಭವ್ಯ ದಿವ್ಯ ಜೀವನವನ್ನು ಸಾರವತ್ತಾಗಿ ಚಿತ್ರಿಸುವ, ೧೯೨೧ರಲ್ಲಿ ಪ್ರಕಟಿಸಿದ ಈ ಪುಟ್ಟ ಪುಸ್ತಕದೊಂದಿಗೆ. ಏಸುಕ್ರಿಸ್ತನ ವಿಷಯದಲ್ಲಿದ್ದ ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ಪಂಡಿತರೆಲ್ಲರ ಶಂಕೆ, ತರ್ಕ, ವಾದ, ಹಳೆ-ಹೊಸ ಊಹಾಪೋಹಗಳನ್ನೆಲ್ಲ ಆಳವಾಗಿ ಅಭ್ಯಸಿಸಿ ೧೯೧೮ನೆಯ ಡಿಸೆಂಬರ ೨೮ರಂದು ರಾಣಿಬೆನ್ನೂರಿನಲ್ಲಿ ಕೂಡಿದ ವಿದ್ಯಾವಂತ ಹಿಂದು ಜನರಿಗೆ ಮನಂಬುಗುವಂತೆ ಶಾಸ್ತ್ರೀಯ ದೃಷ್ಟಿಯಿಂದ ಕ್ರಿಸ್ತನ ಜೀವನ ಚರಿತ್ರೆಯನ್ನು ವಿವರಿಸಿ ಹೇಳಿದ ಉಪನ್ಯಾಸದ ಸಂಗ್ರಹವೇ ಈ ಪುಟ್ಟ ಪುಸ್ತಕವಾಗಿ ಪ್ರಕಟವಾಗಿದೆ; ಪೃಥಃಕರಣ ಪದ್ಧತಿ (Analytical Method)ಯಿಂದ ಆತನ ಜೀವನವನ್ನು ಹಿಂಜಿ ಹಿಂಜಿ ಹಂಜಿಯನ್ನಾಗಿಮಾಡಿ, ಏಕೀಕರಣ ಪದ್ಧತಿ (Synthetic Method)ಯಿಂದ ನೂತು ನಯವಾದ, ಶುಭ್ರವಾದ, ಅತ್ಯುತ್ಕೃಷ್ಟ ಬಟ್ಟೆಯಾಗುವಂತೆ ನೆಯ್ದಿದ್ದಾರೆ. 'ಕರಿಯು ಕನ್ನಡಿಯೊಳಡಗಿದಂತೆ' ಕ್ರಿಸ್ತನ ಅತ್ಯದ್ಭುತ ಜೀವನಸಾರವೆಲ್ಲ ಮಡುಗಟ್ಟಿ ಈ ಚಿಕ್ಕ ಹೊತ್ತಿಗೆಯಲ್ಲಿ ನಿಂತಿದೆ.

೨. ಸಾವಿರಾರು ವರುಷಗಳಿಂದ ಪರದಾಸ್ಯದಲ್ಲಿ ತೊಳಲಾಡುತ್ತಿರುವ ಹಿಂದು ದೇಶದ ಉದ್ಧಾರವನ್ನು ಮಾಡಬೇಕಾದರೆ ಜಾತೀಯತೆಯ ನಿರ್ಮೂಲನವೇ ಯೋಗ್ಯ ಚಿಕಿತ್ಸೆಯೆಂದು ಕಂಡುಹಿಡಿದು, ಅದರ ಉಚ್ಚಾಟನೆಗೆ ಮಾಡತಕ್ಕ ಉಪಾಯುಗಳನ್ನು ಸೂಚಿಸಿ, ವಿಚಾರವಂತರಾದ ಹಿಂದು ಪಂಡಿತ ಪಾಮರರಿಗೆಲ್ಲ ತಿಳಿಯುವಂತೆ, ಹಿಂದು ಧರ್ಮದ ಸಕಲ ಧಾರ್ಮಿಕ ಗ್ರಂಥಗಳನ್ನೂ ಐತಿಹಾಸಿಕ ಗ್ರಂಥಗಳನ್ನೂ ಶಿಲಾಶಾಸನಗಳನ್ನೂ ಅವಲೋಕಿಸಿ ಬರೆದ "**ಹಿಂದು ಸಮಾಜದ ಹಿತಚಿಂತಕ**"ಎಂಬ ಶ್ರೇಷ್ಠ ಗ್ರಂಥವು ಅವರ ಎರಡನೆಯ ಸಾಹಿತ್ಯ ಕೃತಿಯಾಗಿದೆ. "ಜಾತಿ ಸಂಬಂಧವಾಗಿ ನಮ್ಮ ಹಿಂದು ದೇಶದಲ್ಲಿರುವಷ್ಟು ಅಭಿಮಾನವು ಒಂದು ವೇಳೆ ಲೋಕದಲ್ಲೆಲ್ಲಿಯೂ ದೊರೆಯುಲಾರದು. ಇತರ ರಾಷ್ಟ್ರಗಳಲ್ಲಿ ದೇಶಕ್ಕೋಸ್ಕರ ಪ್ರಾಣಕೊಡುವವರು ದೊರಕುವರು . . . ಅದು ಕಾರಣ ನಮ್ಮ ದೇಶದಲ್ಲಿ ಜಾತಿ ಸಂಬಂಧವಾಗಿ ಹರಿಯುತ್ತಿರುವ ಅಭಿಮಾನದ ಪ್ರವಾಹವನ್ನು ಒಮ್ಮೆ ರಾಷ್ಟ್ರದ ಕಡೆದೆ ತಿರುಗಿಸಿದರೆ ಕಲ್ಪನಾತೀತವಾದ ಲಾಭ ಉಂಟಾಗುವಂತಿರುವದು."[1]

ಈ ಉದ್ದೇಶದಿಂದಲೇ ಬಹು ಪರಿಶ್ರಮ ಪಟ್ಟು ಈ ಪುಸ್ತಕವನ್ನು ಶ್ರೀ ಉತ್ತಂಗಿಯುವರು ಬರೆದಿದ್ದಾರೆ. ತನ್ಮೂಲಕ ಹಿಂದು ಸಮಾಜ ಸುಧಾರಕರಿಗೆಲ್ಲ ಅತ್ಯಮೂಲ್ಯವಾದ ಸಲಹೆಗಳನ್ನಿತ್ತಿದ್ದಾರೆ. "ಸ್ವರಾಜ್ಯ ಪ್ರಾಪ್ತಿಗಾಗಿ ನಮಗೆ ೧೦ ವರುಷಗಳು ಬೇಕಾದರೆ ಇದಕ್ಕೆ ವಿಘ್ನವಾಗಿರುವ ಜಾತಿ ದುರಭಿಮಾನವು ದೇಶದಿಂದ ಲೋಪವಾಗುವದಕ್ಕೆ ೧೦೦ ವರ್ಷಗಳು ಬೇಕಾಗುವವು. ಅದರಿಂದ ಯತಾರ್ಥ ಸುಧಾರಕರೆಲ್ಲರೂ ಒಂದು ಕಡೆಯಿಂದ ರಾಜಕೀಯ ದೃಷ್ಟಿಯಿಂದಲೂ ಮತ್ತೊಂದು ಕಡೆಯಿಂದ ಸಾಮಾಜಿಕ ದೃಷ್ಟಿಯಿಂದಲೂ ಎರಡರಷ್ಟು ಕೆಲಸಗಳನ್ನು ಮಾಡಬೇಕಾಗಿದೆ. ಇಂತಹ ಸಮಯದಲ್ಲಿ ಇಂತಹದೊಂದು ಗ್ರಂಥವು ನಮ್ಮ ಹಿಂದು ಸಮಾಜ ಸುಧಾರಕರ ಕೈಯಲ್ಲಿ ಬಿದ್ದರೆ ಅವರಿಗೆ ಸಮಯೋಚಿತ ಸಹಾಯವು ದೊರೆತು, ಅವರು ವಹಿಸಿಕೊಂಡ ಕೆಲಸವು ಹೆಚ್ಚು ಸ್ಫೂರ್ತಿಯಿಂದ ಜರಗುವದೆಂದು ಈ ತರದ ಲೇಖನಗಳನ್ನು ಕೈಕೊಂಡಿರುವೆವು"[2] ಎಂದು ತಮ್ಮ ಉದ್ದೇಶವನ್ನು ಹೇಳಿರುವರಲ್ಲದೆ "ಯಾವನೊಬ್ಬನು ಜನದಲ್ಲಿ ಜಾತ್ಯಾಭಿಮಾನವನ್ನು ಬಿಡದಿದ್ದರೂ ಮನದಲ್ಲಿ ಯಾದರೂ ಬಿಟ್ಟು ನಡೆದರೆ ತಮ್ಮ ಶ್ರಮ ಸಾರ್ಥಕವೆಂದೂ

1 ಹಿಂದು ಸಮಾಜದ ಹಿತಚಿಂತಕ ಪುಟ ೨೯

2 ಹಿಂದು ಸ. ಸು. ಪುಟ ೧೦

ಅನಾವಶ್ಯಕವಾದ ಇಂತಹ ದುರಭಿಮಾನದಿಂದ ಛಿನ್ನ ವಿಚ್ಛಿನ್ನವಾಗಿ ಹೋಗಿರುವ ನಮ್ಮ ಋಗ್ವೇದ ಪುರಾಣ ಪುರುಷನ ತಲೆ, ಬಾಹು, ತೊಡೆ, ಪಾದಗಳು ನಮ್ಮ ದೇಶಕ್ಕೆ ಬಂದೊದಗಿರುವ ಅತ್ಯಂತ ಭಯಂಕರವಾದ ಕಂಟಕವಾಗಿದ್ದು ಅವು ಜಾತಿ ನಿರ್ಮೂಲನವೆಂಬ ಸಂಜೀವನ ಕಡ್ಡಿಯಿಂದ ತಿರುಗಿ ಕೂಡಿಕೊಂಡು, ಒಂದೇ ಶರೀರದೊಳಗಿನ ಅವಯವಗಳಂತೆ, ಸರ್ವಪಂಥಗಳು ದೇಶೋನ್ನತಿಗಾಗಿ ಐಕ್ಯದಿಂದ ಕೆಲಸಮಾಡುವದನ್ನು ಕಣ್ಣುತುಂಬ ನೋಡಿ ಆನಂದ ಪಡುವ ಸಮಯವನ್ನು ಈಶ್ವರನು ಬೇಗನೆ ಬರಮಾಡಲೆಂದೂ"[3] ಇಂದಿಗೆ ಕಾಲು ಶತಮಾನದ ಹಿಂದೆ ಪ್ರಾರ್ಥಿಸಿದ ಹಿಂದು ಸಮಾಜದ ಹಿತಚಿಂತಕರಾದ ಉತ್ತುಂಗಿಯವರು ಇಬ್ಭಾಗವಾಗಿರುವ ಇಂದಿನ ಭಾರತಾಂಬೆಯನ್ನೂ ಕೇಂದ್ರ ಹಾಗೂ ಪ್ರಾಂತೀಯ ಸರಕಾರಗಳಲ್ಲಿ ಭಾರತಾಂಬೆಯ ಮಕ್ಕಳೆಲ್ಲ ಜಾತಿಯ ದುರಭಿಮಾನದಿಂದ ಕೊಬ್ಬಿದವರಾಗಿ ಅಧಿಕಾರಲಾಲಸೆಯಿಂದ ಪ್ರಾಣಿಗಳಂತೆ ಕಚ್ಚಾಡುತ್ತಿರುವದನ್ನೂ ನೋಡಿ ಅನೇಕ ಸಾರೆ ನಮ್ಮೆದುರು ಕಳಕಳಿಯಿಂದ ಕಣ್ಣೀರುದುರಿಸಿದ್ದುಂಟು. ರಾಷ್ಟ್ರೀಯತ್ವವನ್ನು (Nationality) ಹುಟ್ಟಿಸಬೇಕೆಂದು ಪ್ರಯತ್ನಿಸುತ್ತಿರುವ ದಿಲ್ಲಿಯ ಸಾಹಿತ್ಯ ಅಕಾದಮಿಯವರು ಈ ಗ್ರಂಥವನ್ನು ಭಾರತೀಯ ಎಲ್ಲ ಭಾಷೆಗಳಲ್ಲಿ ಭಾಷಾಂತರಿಸಿ ಪ್ರಕಟಿಸಿ ಪ್ರತಿಯೊಬ್ಬ ಭಾರತೀಯನೂ ಓದುವಂತೆ ಉಚಿತವಾಗಿ ಹಂಚಿದರೆ ಅವರು ತಮ್ಮ ಉದ್ದೇಶದ ಬಹುಭಾಗವನ್ನು ಸಾಧಿಸಿದಂತಾಗುವದೆಂದು ನಾವಿಲ್ಲಿ ಕೈ ಎತ್ತಿ ಹೇಳಬಯಸುತ್ತೇವೆ.

೩. "**ಮಕ್ಕಳ ಶಿಕ್ಷಣ ಪಟ**" ಉತ್ತುಂಗಿಯವರ ಮೂರನೆಯ ಪ್ರಕಟನೆ. ಭಾರತೀಯ ಮಕ್ಕಳು ಶಿಕ್ಷಣವನ್ನು ಪಡೆಯಬೇಕಾದರೆ ಪಡುವ ಪಡಿಪಾಟಲನ್ನು ವರ್ಣಿಸತೀರದು. ತನ್ನ ವಯಸ್ಸಿನ ೨೫ ವರ್ಷಗಳನ್ನು ಆತನು ವಿದ್ಯಾರ್ಜನೆಯಲ್ಲಿಯೇ ಕಳೆಯಬೇಕಾಗುತ್ತದೆ. ಭಾರತದ ಪ್ರತಿಯೊಬ್ಬನ ಸರಾಸರಿ ವಯಸ್ಸು ೨೬ ಎಂದು ಸಂಖ್ಯಾಶಾಸ್ತ್ರಜ್ಞರ ಅಭಿಪ್ರಾಯ. ಇದನ್ನು ನೋಡಿದರೆ ಇಷ್ಟು ಶ್ರಮವಹಿಸಿ ಗಳಿಸಿದ ಭಾರತದ ಮಕ್ಕಳ ವಿದ್ಯೆಯ ವಿಷಯದಲ್ಲಿ ಉತ್ತುಂಗಿಯವರು ನಮ್ಮೆದುರು ಹೀಗೆ ಹೇಳಿದ್ದುಂಟು: (The modern education in India can create cleaver men but not honest men) "ಭಾರತದ ಇಂದಿನ ಶಿಕ್ಷಣವು ಚತುರರಾದ ಮಾನವರನ್ನು ನಿರ್ಮಿಸಬಹುದು; ಆದರೆ ಪ್ರಾಮಾಣಿಕರಾದ ಮನುಷ್ಯರನ್ನು ಹುಟ್ಟಿಸಲಾರದು." ಅಂತೆಯೇ ತಿರುಪೆಯ ಓದಿಗೆ ಶರಣು ಹೊಡೆದ ಉತ್ತುಂಗಿಯವರು ಮುಂದಿನ ಭಾರತದ ಪೀಳಿಗೆಯ ಏಳ್ಗೆಯನ್ನು ಚಿಂತಿಸಿ ಅತ್ಯಲ್ಪಾವಧಿಯಲ್ಲಿ ಅಧಿಕ ಜ್ಞಾನವಂತರಾಗಿ ಬಹುಕಾಲ ಮಕ್ಕಳು ಬಾಳಬೇಕೆಂದು ಈ 'ಮಕ್ಕಳ ಶಿಕ್ಷಣ ಪಟ'ವನ್ನು ಹೊರಡಿಸಿದ್ದಾರೆ. "೮-೧೦ ವರ್ಷ ವಯಸ್ಸಿನ ಒಬ್ಬ ಕನ್ನಡ ಬಲ್ಲ ವಿದ್ಯಾರ್ಥಿಯನ್ನು ನನ್ನ ಕಡೆಗೆ ಕೇವಲ ೬ ತಿಂಗಳುಗಳ ವರೆಗೆ ಕೊಟ್ಟರೆ ಆತನು ಆಂಗ್ಲ ಭಾಷೆಯನ್ನು ಸರಿಯಾಗಿ ಬರೆದು ಓದುವದಕ್ಕೂ ಅರ್ಥೈಸಿ ಮಾತಾಡಲಿಕ್ಕೆ ಕಲಿಸಬಲ್ಲೆ" ಎಂದೂ ಅವರು ಹೇಳುತ್ತಿದ್ದರು.

೪. '**ನಾರಾಯಣ ವಾಮನ ತಿಲಕರ ಜೀವನ ಚರಿತ್ರೆ**' ಉತ್ತುಂಗಿಯವರ ಮಹತ್ವದ ಗ್ರಂಥ. ಶ್ರೀ ಜೆ. ಸಿ. ವಿನ್ಸ್ಲೋ ಎಂಬ ಮಹನೀಯರು ಬರೆದ ಆಂಗ್ಲ ಗ್ರಂಥದ ಅನುವಾದವಿದು. ಇದನ್ನು ಆದಿಯಿಂದ ಅಂತ್ಯದ ವರೆಗೆ ಓದಿದರೂ ಎಲ್ಲಿಯೂ ಇದು ಭಾಷಾಂತರ ಗ್ರಂಥವೆನಿಸುವುದಿಲ್ಲ. ಟಳಕು-ಪಳಕು ಇಂಗ್ಲಿಷ ಭಾಷಾಭ್ಯಾಸ ಮಾಡಿ ಹಂಡಬಂಡ ಕನ್ನಡದಲ್ಲಿ ಇಂಗ್ಲಿಷ ಗ್ರಂಥಗಳನ್ನು ಭಾಷಾಂತರ ಮಾಡುತ್ತಿರುವ ಇಂದಿನ ಅನೇಕ ಕನ್ನಡ ಸಾಹಿತಿಗಳು ಯೋಗ್ಯ ಭಾಷಾಂತರಕಾರರೆನಿಸಿಕೊಳ್ಳಬೇಕೆಂಬಾಸೆಯಿದ್ದರೆ ಈ ಅನುವಾದ ಗ್ರಂಥವನ್ನು ಓದಿ ನೋಡಬೇಕು. ಮೂಲಗ್ರಂಥದೊಂದಿಗೆ ಹೋಲಿಸಿ ಹೊಂದಿಸಿ ನೋಡಬೇಕು. ಆಗ ಉತ್ತುಂಗಿಯವರ ದ್ವಿಭಾಷಾ ಪಾಂಡಿತ್ಯದ ಅರಿವಾಗುತ್ತದೆ. ಹದವರಿತು ಬರೆಯಬಲ್ಲ ಪಳಗಿದ ಅವರ ಕೈಯ ಮಹಿಮೆ ಕಂಡುಬರುತ್ತದೆ.

"ತಿಲಕರು ಪಂಡಿತರು, ಕ್ರಾಂತಿಕಾರಕ ವಿಚಾರದವರು, ವಿಮರ್ಶಾತ್ಮಕ ಬುದ್ಧಿಯುಳ್ಳವರು. ಅಂಧಶ್ರದ್ಧೆಯಿಂದ ಯಾವುದನ್ನೂ ಶ್ರೇಷ್ಠ ಇಲ್ಲವೆ ಕನಿಷ್ಠವೆಂದು ಅಭಿಪ್ರಾಯ ಕೊಡದೆ ಅದನ್ನು ತಮ್ಮ ಬುದ್ಧಿಯ ಒರೆಗಲ್ಲಿಗೆ ಹಚ್ಚಿ ತಿಕ್ಕಿ, ಆಮೇಲೆ ಹೃದಯಕ್ಕೆ ಒಪ್ಪಿಗೆಯಾದಾಗ ಮಾತ್ರ ನಂಬುವವರು."[4]

ಕ್ರಿಸ್ತ ಭಕ್ತರಾದ ತಿಲಕರು "ವಿಶೇಷತಃ ಅಸ್ಪೃಶ್ಯವರ್ಗದವರ ಸಂಸರ್ಗದಲ್ಲಿರುತ್ತಿದ್ದು ಅವರ ಭಾವಿಸ್ಥಿತಿಯನ್ನು ಕುರಿತು ಯಾವಾಗಲೂ ಚಿಂತಿಸುತ್ತಿದ್ದದ್ದೇ ಇವರು ಸ್ವರಾಜ್ಯವನ್ನು ತಡೆದು ಕೊಡಬೇಕೆಂದು ಕೋರುವದಕ್ಕೆ ಮುಖ್ಯ ಕಾರಣವಾಗಿರಬೇಕೆಂದು ಹೇಳಬೇಕು. (ಯಾಕೆಂದರೆ) ದೇಶವು ಸಾಮಾಜಿಕ ದೃಷ್ಟಿಯಿಂದಲೂ ನೈತಿಕದೃಷ್ಟಿ

---

3 ಹಿಂದು ಸ. ಸು. ಪುಟ ೧೦-೧೧

4 ನಾರಾಯಣ ವಾಮನ ತಿಲಕರ ಜೀವನ ಚರಿತ್ರೆ ಪುಟ ೨೨-೨೪

ಯಿಂದಲೂ ಪೂರ್ವಸಿದ್ಧತೆಯನ್ನು ಹೊಂದುವ ಮುಂಚಿತವಾಗಿ ಸ್ವರಾಜ್ಯವು ಕೊಡಲ್ಪಟ್ಟರೆ ಇಂತಹವರ ಗತಿ ಏನಾದೀತೆಂದು ಇವರು ಯಾವಾಗಲೂ ಭಯಪಡುತ್ತಿದ್ದರು."[5]

ತಿಲಕರು ಅಸ್ಪೃಶ್ಯತಾ ನಿವಾರಣೆಯನ್ನು ಮಾಡಲು ತಮ್ಮ ಜೀವಾಂತ್ಯದವರೆಗೆ ಹೋರಾಡಿದರು. ಭಾರತದ ಸ್ವಾತಂತ್ರ್ಯವನ್ನು ಗಳಿಸುವದಕ್ಕೆ ಅವಸರಪಡದೆ ಸಿಗುವ ಸ್ವಾತಂತ್ರ್ಯವನ್ನು ಸರಿಯಾಗಿ ತೂಗಿಸಿಕೊಂಡು ಹೋಗಲಿಕ್ಕೆ ಯೋಗ್ಯರೂ ಪ್ರಾಮಾಣಿಕರೂ ಸ್ವಾರ್ಥತ್ಯಾಗಶೀಲರೂ ಸತ್ಯನಿಷ್ಠರೂ ಸ್ವಾವಲಂಬಿಗಳೂ ಆಗುವಂತೆ ಪೂರ್ವಭಾವಿಯಾಗಿ ಭಾರತೀಯರೆಲ್ಲರಿಗೆ ತಕ್ಕ ಶಿಕ್ಷಣ ಕೊಡತಕ್ಕದ್ದೆಂದು ತಿಲಕರ ಮನದ ಬಲವಾದ ಬಯಕೆಯಾಗಿತ್ತು. ಈ ಬಯಕೆಯ ಸಿದ್ಧಿಗಾಗಿ ಅವರು ಜೀವಾಂತ್ಯದವರೆಗೆ ಹೋರಾಡಿದರು.

"ತಿಲಕರು ಮಹಾತ್ಮಾ ಗಾಂಧಿಯವರನ್ನು ಅತ್ಯಾಶ್ಚರ್ಯದಿಂದಲೂ ಪ್ರೇಮದಿಂದಲೂ ಕಾಣುತ್ತಿದ್ದು, ಮಹಾತ್ಮರೆಂಬ ಬಿರುದಿಗೆ ಇವರು ನಿಜವಾಗಿ ಯೋಗ್ಯರಾಗಿದ್ದಾರೆಂದು ಅವರ ಗುಣಗಾನ ಮಾಡುತ್ತಿದ್ದರು."[6]

ಒಟ್ಟಿನಲ್ಲಿ ಈ ಗ್ರಂಥದಲ್ಲಿ ಹೇಳಲ್ಪಟ್ಟ ತಿಲಕರ ಸ್ವಭಾವದ ಗುಣಗಳು ಶ್ರೀ ಪೂಜ್ಯ ಉತ್ತಂಗಿಯವರ ಸ್ವಭಾವ ಗುಣಗಳಿಗೆ ತುಂಬ ಹೊಂದಿಕೊಳ್ಳುತ್ತವೆಂದು ಇದನ್ನು ಓದಿದ ಅವರ ನಿಕಟವರ್ತಿಗಳೆಲ್ಲರಿಗೂ ತಟ್ಟನೆ ಹೊಳೆಯದಿರಲಾರದು.

೫. ವಿಲಾಯತಿಯ ಮಿಶನರಿಗಳಾದ ರೆ|| ಜೆ. ಜೆ. ವುರ್ನರ ಎಂಬವರಿಗೆ ಶ್ರೀ ಉತ್ತಂಗಿಯವರು ಒಮ್ಮೆ ಕನ್ನಡ ಕಲಿಸುವ ಪ್ರಸಂಗ ಬಿತ್ತು. ಸರ್ವಜ್ಞನ ಪದ್ಯಗಳನ್ನು ಅರ್ಥೈಸಿ ಅವರಿಗೆ ವಿವರಿಸುತ್ತಿರುವಾಗ ವುರ್ನರ ಸಾಹೇಬರು ಸರ್ವಜ್ಞನ ಜಾತಿ-ಮೂರ್ತಿ ಪೂಜೆಗಳ ಖಂಡನ, ವಿಶ್ವಪ್ರೇಮ, ಸತ್ಯನಿಷ್ಠುರತೆ, ಮಹೋನ್ನತ ವಿಚಾರ ಮುಂತಾದವುಗಳನ್ನು ನೋಡಿ ಕ್ರೈಸ್ತಧರ್ಮದ ಪರಿಣಾಮ ಈತನ ಮೇಲೆ ಆಗಿರಬೇಕೆಂದು ಅಭಿಪ್ರಾಯ ಪಟ್ಟರಲ್ಲದೆ ಆತನ ಪೂರ್ವಾಪರ ಜೀವನ ಚರಿತ್ರೆಯನ್ನು ತಿಳಿಸಬೇಕೆಂದು ಕುತೂಹಲದಿಂದ ಕೇಳಿದರು. ಆ ವೇಳೆಯಲ್ಲಿ ಸರ್ವಜ್ಞನ ವಿಷಯಕ್ಕೆ ಅಲ್ಪಜ್ಞರಾಗಿದ್ದ ಉತ್ತಂಗಿಯವರು ನಿರ್ವಾಹವಿಲ್ಲದೆ ಸರ್ವಜ್ಞನ ಸಾಕ್ಷಾತ್ಕಾರಕ್ಕಾಗಿ ಕಂಕಣಬದ್ಧರಾಗಬೇಕಾಯಿತು. ಸರ್ವಜ್ಞನ ವಚನಗಳನ್ನು ಸಾದ್ಯಂತವಾಗಿ ಓದತೊಡಗಿದರು. ಓದಿದಂತೆಲ್ಲ ತಲೆ ತಿರುಕನಾದ ಸರ್ವಜ್ಞನ ವಿಚಾರಗಳೆಲ್ಲ ತಿರುಳುಗನ್ನಡ ತಿರುಕರಾದ ಉತ್ತಂಗಿಯವರಿಗೆ ಷಡ್ರಸಪೂರಿತವಾದ ಮೃಷ್ಟಾನ್ನದಂತೆ ರುಚಿಸಹತ್ತಿದವು. ಆಗ ಅವರಿಗೆ ಒಂದು ವಿಚಾರ ಹೀಗೆ ಹೊಳೆಯಿತು: "ವೇಷಮಾತ್ರದಿಂದ ದೇಶಭಕ್ತರೆನಿಸಿಕೊಂಡು, ನುಡಿಯಲ್ಲಿ ಮಾತ್ರ ಸಮಾಜಗಳ ಐಕ್ಯಕ್ಕೂ ದೇಶೋನ್ನತಿಗೂ ಪೇಚಾಡುತ್ತಿರುವ ಅನೇಕ ದೇಶಸೇವಕರಿಗಿಂತ ಸರ್ವಜ್ಞನಂತಹನೊಬ್ಬನು ಒಮ್ಮೆ ನಮ್ಮ ಕರ್ನಾಟಕದ ಪೀಠವನ್ನಲಂಕರಿಸಲನುವಾಯಿತೆಂದರೆ, ಹೇಳಲಾರದಷ್ಟು ಪ್ರಯೋಜನವಾಗಬಹುದೆಂದು ನನ್ನ ಅಲ್ಪಬುದ್ಧಿಗೆ ತೋರಿದ್ದರಿಂದ ಹೇಗಾದರೂ ಅವನ ಗ್ರಂಥಶೋಧನೆಗೆ ಕೈಹಾಕಿದ್ದೇನೆ. ಅದನ್ನು ಆದಷ್ಟು ಪೂರ್ಣತೆಗೆ ಒಯ್ಯಬೇಕೆಂಬ ಯೋಚನೆಯಂಕುರಿಸಿ, ಕವಿಯ ವಿಚಾರಗಳು, ಓದುವವರಿಗೆ ತಟ್ಟನೆ ಹೊಳೆಯುವಂತೆ ಗ್ರಂಥವನ್ನು ವಿಷಯಾನುಕ್ರಮವಾಗಿ ವ್ಯವಸ್ಥೆಗೊಳಿಸಲೆತ್ನಿಸಲು, ಅದನ್ನು ಸಮೂಲ ಹೊಸದಾಗಿಯೇ ಬರೆಯುವ ಪ್ರಸಂಗ ಬಂತು. ಅಂತೂ ಇಂತೂ ನಮಾಜ ಮಾಡಹೋಗಿ, ಮಸೀದೆಯೇ ಕೊರಳಿಗೆ ಬಿದ್ದಂತಾಯಿತು. ಇಪ್ಪತ್ತು ಪ್ರತಿಗಳಲ್ಲಿರುವ ಸುಮಾರು ಎರಡು ಸಾವಿರ (೨೦೦೦) ವಚನಗಳನ್ನು ವರ್ಗೀಕರಿಸಬೇಕಾದರೆ, ಅವುಗಳನ್ನು ನಾಲ್ವತ್ತು ಸಾವಿರ ಸಲ (೪೦,೦೦೦) ಓದುವ ಪ್ರಸಂಗಬಿತ್ತು. ಇದರಿಂದ ನನ್ನ ಜ್ಞಾನ ತಂತುಗಳು ಬಲಹೀನವಾಗಿ ಜನರ ಮುಖದ ಗುರುತು ಸಿಗದಷ್ಟು ಮಂದಾಯಿತು. ಇದೇ ಕಾಲಕ್ಕೆ ಹೃತ್ಕ್ರಿಯೆಯು ನಿಂತುಹೋಗಿ, ನನ್ನ ತಂದೆಯವರು ತೀರಿಕೊಂಡರು. ಇದರಿಂದ ನನಗೆ ಸಿಡಿಲು ಬಡಿದಂತಾಗಿ, ನಾನು ಕಠಿಣ ಅಸ್ವಾಸ್ಥ್ಯಕ್ಕೊಳಗಾದೆ. ಆರು ತಿಂಗಳು ಚಿಕಿತ್ಸೆಹೊಂದಿದರೂ ಗುಣಮುಖ ತೋರಲಿಲ್ಲ. ನಾನು ಮರಣಕ್ಕೆ ತುತ್ತಾಗುವದು ನಿಶ್ಚಯವೆಂದು ತಿಳಿದ ಕಾಲದಲ್ಲಿ ನನಗೆಷ್ಟು ಸಂಕಟವಾಗಿರಬಹುದೆಂಬುದನ್ನು ಸಹೃದಯರು ತಿಳಿಯಬಹುದು. ನಾನು ಹಾಸಿಗೆಯ ಮೇಲೆ ಹೊರಳುತ್ತಿರುವಾಗೆಲ್ಲ ಸಾಯಬೇಕಲ್ಲ ಎಂಬುದು ಎಷ್ಟು ಮಾತ್ರವೂ ನನ್ನನ್ನು ಕಾಡದೆ, ಕೈಕೊಂಡ ಕೆಲಸವು ವ್ಯರ್ಥವಾಯಿತಲ್ಲ ಎಂಬ ಚಿಂತೆಯೊಂದೇ ನನ್ನಲ್ಲಿ ಕೊರೆಯುತ್ತಿತ್ತು. ಆ ಸಮಯದಲ್ಲಿ ನಾನು ಈಶ್ವರನನ್ನು ಕುರಿತು ಪ್ರಾರ್ಥಿಸಿದ್ದೇನೆಂದರೆ "ಸರ್ವಜ್ಞನೇ, ಸರ್ವರ ಹೃದಯಾಂತರಂಗವನ್ನು ಅರಿತವನೆ! ನಾನು ಈ ಕಾರ್ಯವನ್ನು ಸ್ವಾರ್ಥ, ಸ್ವಪ್ರತಿಷ್ಠೆಗೋಸ್ಕರ ಕೈಕೊಂಡಿರುವವನಾದರೆ, ಅದನ್ನು ಇಲ್ಲಿಗೇ ನಿಲ್ಲಿಸಿಬಿಡು. ಸರ್ವಜ್ಞನ ಸೇವೆ, ದೇಶಸೇವೆ ಮತ್ತು ನಿನ್ನ ಉಪಾಸನೆಯೆಂದು ನಾನು ಕೈಕೊಂಡವನ್ನಾದರೆ, ಅಲ್ಪನಾದ

5 ನಾರಾಯಣ ವಾಮನ ತಿಲಕರ ಜೀವನ ಚರಿತ್ರೆ ಪುಟ ೭೫.
6 ನಾರಾಯಣ ವಾಮನ ತಿಲಕರ ಜೀವನ ಚರಿತ್ರೆ, ಪುಟ ೭೪.

ನನ್ನಿಂದ ಈ ಸೇವೆಯನ್ನು ಮಾಡಿಸಿಕೊಳ್ಳಲು ನೀನು ಇಷ್ಟಪಟ್ಟರೆ ನನ್ನನ್ನು ಇನ್ನೂ ಕೆಲ ದಿವಸ ಉಳಿಸು."[7]

ದೇವರಿಗೆ ಮೊರೆ ಕೇಳಿಸಿತು. ಉತ್ತಂಗಿಯವರು ಉಳಿದರು. ತರುವಾಯ ಆರು ವರುಷ ಕೆಲಸಮಾಡಿದರು. ಹಣದ ತೊಂದರೆಯಿಂದ **"ಸರ್ವಜ್ಞ ವಚನಗಳು"** ಗ್ರಂಥ ಹೊರಬೀಳಲು ಮತ್ತೆ ಮೂರು ವರ್ಷಗಳು ಹಿಡಿದವು. ಅಂತೂ ಕರ್ನಾಟಕದ ಮೃಗೇಂದ್ರನಾದ ಸರ್ವಜ್ಞನು ಗರ್ಜಿಸುತ್ತ ಹೊರಬಿದ್ದನು. ಎಲ್ಲ ಕಾವ್ಯಕ್ಕೆ 'ಕಾವ್ಯದೇವಿ' ಎಂದು ಹೆಣ್ಣುರೂಪಕೊಟ್ಟಿದ್ದರೆ 'ಕಾವ್ಯಪುರುಷ'ನೆಂದು ಗಂಡುರೂಪಕೊಟ್ಟ ಗಂಡು ಕವಿಯೆಂದರೆ ಸರ್ವಜ್ಞನೆಂದು ಹೇಳಬಹುದು.

"ಸರ್ವಜ್ಞನು ಮಾಡಿದ ರೀತಿಯಾದರೂ ಎಂತಹದು? ಮಹಾಕಾವ್ಯದ ಶೈಲಿಯೇ? ಚಂಪೂಕಾವ್ಯದ ಸರಣಿಯೇ? ಪಂಡಿತರ ಭಾಷೆಯೇ? ಅಲ್ಲ, ಕವಿತೆಯು ಅಲ್ಲವೇ ಅಲ್ಲ. ಬರಿಯ ವಚನಗಳು, ಕೇಳುವವನನ್ನು ಅಥವಾ ಓದುವವನನ್ನು ರೇಗಿಸುತ್ತವೆ, ಇರಿಯುತ್ತವೆ, ಎಬ್ಬಿಸುತ್ತವೆ, ಆನಂದ ಸ್ವರೂಪವನ್ನು ತೋರಿಸಿಕೊಡುತ್ತವೆ, ನೇರವಾಗಿ ಹೃದಯವನ್ನು ಮುಟ್ಟುತ್ತವೆ. ಅಂತಹ ದೈವೀಶಕ್ತಿಯುಂಟೇ ವಚನಗಳಿಗೆ!!!

"ಬೈಯುತ್ತ ಬೈಯುತ್ತ ನಗಿಸುವರೆಷ್ಟು ಮಂದಿ? ನಗಿಸುತ್ತ ನಗಿಸುತ್ತ ಕಣ್ಣೀರು ಹರಿಸುವರೆಷ್ಟು ಮಂದಿ? ಕನ್ನಡ ನಾಡಿನಲ್ಲಂತೂ ಯಾವ ಕ್ಷೇತ್ರದಲ್ಲಿ ಹುಡುಕಿನೋಡಿದರೂ ಸರ್ವಜ್ಞನಿಗೆ ಸಮಾನರು ಸಿಗುವದು ಬಹಳ ದುರ್ಲಭ . . .

"ಇಂದು ನಮ್ಮೆಲ್ಲರ ಆಸೆಯಾದರೂ ಏನು? ಆದರ್ಶವಾದರೂ ಏನು? ಸುಖಸಾಧನೆಯಲ್ಲವೆ? ಸರ್ವಜ್ಞನು ಹಂಗಿನಾ ಹಾಲಿಗಿಂತಂಬಲಿಯ ತಿಳಿ ಲೇಸು ಎಂದು ಹಾಡಿದ ವೀರ! ಸುಖದಿ ತಾನಿದ್ದುದೇ ರಾಜ್ಯ ಎಂಬ ರಾಷ್ಟ್ರಗೀತೆಯಿಂದ ಪಾಂಚಜನ್ಯವನ್ನು ಎತ್ತಿ ಊದಿದ ಕ್ರಾಂತಿಕಾರರ ಆಚಾರ್ಯ ಪುರುಷ! ಇಂದಿನ ತರುಣ ಲೋಕಕ್ಕೆ ಅನೇಕ ವಿಧವಾಗಿ ಸಮಾಧಾನವನ್ನೂ ಶಾಂತಿಯನ್ನೂ ಕೊಡಬಲ್ಲವರು ಸರ್ವಜ್ಞನಿಂದನ್ಯರಿಲ್ಲ."[8]

ಇಂತಹ ಸರ್ವಜ್ಞನನ್ನು ಸಾಕ್ಷಾತ್ಕರಿಸಿಕೊಂಡ ಉತ್ತಂಗಿಯವರು ಎಂತಹವರಿರಬೇಕು! "ಸರ್ವಜ್ಞನು ನನ್ನನ್ನು ಪ್ರಸಿದ್ಧಪಡಿಸಿದನೋ ಅಥವಾ ನಾನು ಸರ್ವಜ್ಞನನ್ನು ಪ್ರಸಿದ್ಧಿಪಡಿಸಿದನೋ ಎಂಬುದು ನನಗಿನ್ನು ಒಡೆಯಲಾರದ ಒಗಟಾಗಿಯೇ ಉಳಿದಿದೆ" ಎಂದು ಅವರು ಸರ್ವಜ್ಞನ ಪ್ರಸ್ತಾಪವನ್ನೆತ್ತಿದಾಗ ಅನೇಕ ಸಾರಿ ಹೇಳಿದ್ದುಂಟು. ಇಂತಹ ಉದ್ದಾಮ ಉತ್ತಂಗಿಯವರನ್ನು ಏನೆಂದು ಹಾಡಿ ಹರಿಸೋಣ?

"ಕನ್ನಡಕ್ಕೆ ಸರ್ವಜ್ಞಕವಿಯನೊದವಿಸಿಕೊಟ್ಟ ಹಿರಿಜೀವ ಕನ್ನಡದ ಸೌಭಾಗ್ಯವದು ಸತ್ಯ. ಕಾಲಗೆ ಒಪ್ಪಿರಲು ಅದರ ಹಿರಿಮೆಯನಿನ್ನು ಕನ್ನಡರು ಒಪ್ಪದೇನಿರುವರೇ?"[9]

೬. ಉತ್ತಂಗಿಯವರು ಕನ್ನಡಾಭಿಮಾನಿಗಳಷ್ಟೇ ಅಲ್ಲ; ಮೇಲಾದ ದೇಶಾಭಿಮಾನಿಗಳು. ಅವರದು ವಿಶಾಲವಾದ ದೃಷ್ಟಿಯಷ್ಟೇ ಅಲ್ಲ, ವಿಶ್ವದೃಷ್ಟಿ. ವಿಶ್ವಮಾನವರೆಲ್ಲರೂ ಅಣ್ಣತಮ್ಮಂದಿರೆಂದೂ ಪ್ರತಿಯೊಬ್ಬರೂ ಸಪ್ರೇಮದಿಂದ ಸಮಾನಸ್ಕಂದರಾಗಿ ಹಸನಾಗಿ ಬಾಳಬೇಕೆಂಬುದು ಅವರ ಜೀವನ ದುಸಿರಾಗಿತ್ತು. ಏಕೈಕ ಮಂತ್ರವಾಗಿತ್ತು. ಈ ಮಂತ್ರವನ್ನು ತಮ್ಮ ನಡೆ ನುಡಿಗಳಿಂದ ಪ್ರತ್ಯಕ್ಷ ತೋರಿಸಿಕೊಟ್ಟಿದ್ದಾರೆ. ತಾವು ಬರೆದ ಗ್ರಂಥಗಳಲ್ಲೆಲ್ಲ ಭಾರತದ ಏಳ್ಗೆಯ ಕುರಿತು–ಭಾರತೀಯರಲ್ಲಿರುವ ಕುಂದುಕೊರತೆಗಳನ್ನು ನೀಗಿ, ವಿಶ್ವಮಾನವರಾಗುವ ಬಗೆಯನ್ನು ಕುರಿತು ಒಂದಿಲ್ಲೊಂದು ರೀತಿಯಲ್ಲಿ ವಿವೇಚಿಸಿದ್ದಾರೆ; ಪರಿಹಾರವನ್ನು ಹುಡುಕಿ ಹೇಳಿದ್ದಾರೆ.

ಭಾರತಮಾತೆಯ ಉದ್ಧಾರದ ಮೊದಲನೆಯ ಮಹತ್ವದ ಹೆಜ್ಜೆಯೆಂದರೆ ಅಸ್ಪೃಶ್ಯತಾ ನಿವಾರಣೆ. ಹೊಲೆಯರ ಉದ್ಧಾರದ ಹೊರತು ಭಾರತದ ಉದ್ಧಾರವು ಅಸಾಧ್ಯವೆಂದೂ ಭಾರತಕ್ಕೆ ದೊರೆತ ಸ್ವಾತಂತ್ರ್ಯವು ಬಹುದಿನಗಳ ವರೆಗೆ ಬದುಕಿ ಚೆನ್ನಾಗಿ ಬಾಳಬೇಕೆಂದಿದ್ದರೆ ಭಾರತೀಯ ಸಮಾಜ ಸುಧಾರಕರು ಪಂಚಮರ ಉದ್ಧಾರವನ್ನು ಅತ್ಯವಶ್ಯವಾಗಿ ಎಲ್ಲಕ್ಕೂ ಮೊದಲು ಮಾಡತಕ್ಕದ್ದೆಂದೂ ಅವರ ಸ್ಪಷ್ಟ ಅಭಿಪ್ರಾಯವೂ ನಂಬಿಗೆಯೂ ಆಗಿತ್ತು. ಹಿಂದುಳಿದವರನ್ನು ಬಂಧುಗಳೆಂದು ಬಗೆದು ಮುಂದುವರಿದವರು ಪ್ರೇಮದಿಂದ ಅಪ್ಪಿ ಎತ್ತಿಕೊಳ್ಳದೆ ಹೋದರೆ ಪರದೇಶದವರಿಗೆ ಯುದ್ಧ ಮಾಡಬೇಡಿರೆಂದು ಬುದ್ಧಿಹೇಳ ಹೊರಟ ಇಂದಿನ ಭಾರತೀಯ ಶಾಂತಿದೂತರೆನಿಸಿಕೊಂಡ ರಾಜಕೀಯ ಮುತ್ಸದ್ದಿಗಳು ಹಾಸ್ಯಾಸ್ಪದಕ್ಕೀಡಾಗುವದರಲ್ಲಿ ಎಳ್ಳಷ್ಟೂ ಸಂಶಯವಿಲ್ಲವೆಂದು ಉತ್ತಂಗಿಯವರ ಅಭಿಪ್ರಾಯವಾಗಿತ್ತು. "ನೀನು ನಿನ್ನ ಕಣ್ಣಿನಲ್ಲಿರುವ ತೊಲೆಯನ್ನು ಯೋಚಿಸದೆ ನಿನ್ನ ಸೋದರನ ಕಣ್ಣಿನಲ್ಲಿರುವ ರವೆಯನ್ನು ಯೋಚಿಸುವ

---

7 ಸರ್ವಜ್ಞ ವಚನಗಳು–ಗ್ರಂಥಕರ್ತನ ಎರಡು ನುಡಿಗಳು, ಪುಟ ೧೦–೧೧.

8 ಸರ್ವಜ್ಞ ವಚನಗಳು–(ಜೀವಿನಾವೃತ್ತಿ) ತಿರುಮಲ ತಾತಾಚಾರ್ಯ ಶರ್ಮ ಅವರ ಮುನ್ನುಡಿ, ಪುಟ ೯–೧೦.

9 ಬೆಟಗೇರಿ ಕೃಷ್ಣಶರ್ಮರಿಂದ.

ದೇಕೆ? ನೀನು ನಿನ್ನ ಸಹೋದರನಿಗೆ ನಿನ್ನ ಕಣ್ಣಿನೊಳಗಿಂದ ರವೆಯನ್ನು ತೆಗೆಯುತ್ತೇನೆ ಬಾ ಎಂದು ಹೇಳುವದು ಹೇಗೆ? ನಿನ್ನ ಕಣ್ಣಿನಲ್ಲಿ ತೊಲೆಯಿದೆಯಲ್ಲ ಕಪಟಿಯೇ, ಮೊದಲು ನಿನ್ನ ಕಣ್ಣಿನೊಳಗಿಂದ ತೊಲೆಯನ್ನು ತೆಗೆದು ಹಾಕಿಕೊ; ಆಮೇಲೆ ನಿನ್ನ ಸಹೋದರನ ಕಣ್ಣಿನೊಳಗಿಂದ ರವೆಯನ್ನು ತೆಗೆಯುವದಕ್ಕೆ ಚೆನ್ನಾಗಿ ಕಾಣಿಸುವದು."[10] ಎಂಬ ಕ್ರಿಸ್ತನ ವಚನ ಉತ್ತಂಗಿಯವರ ದೃಷ್ಟಿಯಾಗಿತ್ತು.

ಅಂತೆಯೇ ಅವರ ದೃಷ್ಟಿಯಲ್ಲಿ ಭಾರತ ದೇಶದ ಮಾರ್ಟಿನ ಲ್ಯೂಥರನೆಂದು ಕಂಡ "ಅಂತರಂಗ ಶುದ್ಧಿ ಬಹಿರಂಗ ಶುದ್ಧಿ" ಗಳಿಗಾಗಿ ದೇಹ ಸವೆಯಿಸಿ ಕಾರ್ಯಾಚರಣೆಯಲ್ಲಿ ತಂದ, ಭಕ್ತಿಭಂಡಾರಿ ಬಸವಣ್ಣನವರ ತತ್ವಗಳ ಮುಖಾಂತರ ಪಂಚಮರ ಉದ್ಧಾರವನ್ನು ಅದೆಷ್ಟು ಸುಲಭದಲ್ಲಿ ಮಾಡಬಹುದೆಂಬುದನ್ನು **"ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ"** ಎಂಬ ಗ್ರಂಥದಲ್ಲಿ ಉತ್ತಂಗಿಯವರು ಬಹು ಮಾರ್ಮಿಕವಾಗಿ ವಿವೇಚಿಸಿದ್ದಾರೆ. ಅಸ್ಪೃಶ್ಯತಾ ನಿವಾರಣೆಯ ಕಾರ್ಯವು ಭಾರತದಲ್ಲಿ ಅದೆಷ್ಟು ಗುರುತರವಾಗಿದೆಯೆಂಬುದನ್ನೂ ಅದಕ್ಕಾಗಿ ಅಹೋರಾತ್ರಿ ಹೋರಾಡುತ್ತಿದ್ದ ಮಹಾತ್ಮ ಗಾಂಧಿಯವರ ಸ್ಥಿತಿ ಏನಾಗಬಹುದೆಂಬುದನ್ನೂ ಮುಂಚಿತವಾಗಿ ಮನದಂದು, ೧೯೩೩ ರಲ್ಲಿ ಪ್ರಕಟಿಸಿ ಮಾಜಿ ಮಂತ್ರಿಗಳಾದ ಶ್ರೀ ಕೆ. ಎಫ್. ಪಾಟೀಲರ ಇಂಗ್ಲಿಷ್ ಮುನ್ನುಡಿಯೊಂದಿಗೆ ಮಹಾತ್ಮಾ ಗಾಂಧಿಯವರ ಅಪ್ಪಣೆ ಪಡೆದು ಅವರಿಗೇ ಅರ್ಪಿಸಲ್ಪಟ್ಟ ಈ ಗ್ರಂಥದ ಕೆಳಗಿನ ಅವತರಣಿಕೆಯನ್ನು ಓದಿದರೆ ಉತ್ತಂಗಿಯವರು ಎಂತಹ ದಾರ್ಶನಿಕ ವ್ಯಕ್ತಿಗಳೆಂದು ಒಮ್ಮೆಲೆ ತಿಳಿದುಬರುವದು.

"ಅಸ್ಪೃಶ್ಯತಾ ನಿವಾರಣೆಯು ಇತರರಿಗೆ ಉಪದೇಶ ಮಾಡುವದಕ್ಕೆ ಬಹು ಸುಲಭ. ಆದರೆ ಅದನ್ನು ಸ್ವತಃ ಕೃತಿಯಿಂದ ಮಾಡಿತೋರಿಸುವದು ಬಹು ಕಠಿಣವಾಗಿದೆ. ಈ ಸಂಗತಿಯು ಬಾಹ್ಯಡಂಭಾಚಾರಿಗಳಾದ ದೇಶಭಕ್ತರಿಗಂತೂ ಅನುಭವಕ್ಕೆ ಬಂದ ಮಾತಾಗಿದೆ. ಅನೇಕರು ಅಸ್ಪೃಶ್ಯತಾ ನಿವಾರಣೆಯ ತತ್ವವನ್ನು ಸದ್ಯದ ವಾತಾವರಣಕ್ಕನುಗುಣವಾಗಿ ಬಾಯಿಯಿಂದ ಬೇಕಾದಷ್ಟು ಶ್ಲಾಘಿಸಬಹುದು. ಅವಶ್ಯಬಿದ್ದರೆ, ದೂರ ನಿಂತು ಸಹಾನುಭೂತಿಯನ್ನು ತೋರಿಸಲೂ ಬಹುದು. ಆದನ್ನು ಕಾರ್ಯ್ಯಾರ್ಥವಾಗಿ ಮಾಡುವ ಪ್ರಸಂಗವು ಮೈಮೇಲೆ ಬಂದಕೂಡಲೇ ಅನೇಕಾವರ್ತಿ ಹಿಂಜರಿದು, ಹೋಳಾಗಿ ಹೋಗುವದಕ್ಕೆ ಪ್ರಯತ್ನಿಸುವರು. ಪಂಚಮರ ಉದ್ಧಾರದ ವಿನಃ ನಮಗೆ ಬಿಡುಗಡೆಯಾಗುವಂತಿಲ್ಲವೆಂದೂ ಅವರನ್ನುಳಿದು ಬಿಡುಗಡೆ ಹೊಂದಿದ ಸ್ವಾತಂತ್ರ್ಯವು ಬಹುದಿನ ಬಾಳದೆಂದೂ ನಮಗೆ ತಿಳಿದಿದ್ದರೂ ಇದರಂತೆ ವರ್ತಿಸುವವರು ಎಲ್ಲಿಯೋ ಲಕ್ಷಕೊಬ್ಬರು. ಅಸ್ಪೃಶ್ಯರನ್ನು ಉದ್ಧಾರಮಾಡುವದಕ್ಕೆ ಹೋಗಿ, ಸ್ಪೃಶ್ಯರು ಅನೇಕಾವರ್ತಿ ಸ್ವಸಮಾಜಕ್ಕೂ ದೇಶಕ್ಕೂ ಹೊರತಾಗಬೇಕಾಗುವದು. ಇದಕ್ಕೆ ಮಹಾತ್ಮಾಗಾಂಧೀಜಿಯವರ ಜೀವನ ಚರಿತ್ರೆಯು ಉತ್ತಮ ನಿದರ್ಶನವಾಗಿದೆ. ಇವರು ಒಂದು ಕಡೆಯಲ್ಲಿ ಅಸ್ಪೃಶ್ಯರಿಗುಂಟಾಗಿರುವ ಅಧೋಗತಿಯನ್ನೂ ಮತ್ತೊಂದು ಕಡೆಯಲ್ಲಿ ಇದಕ್ಕೆ ವಿರೋಧವಾಗಿ ಹೋರಾಡುತ್ತಿರುವ ಸನಾತನವಾದಿಗಳ ಭ್ರಾಂತಿ, ದುರಭಿಮಾನಗಳನ್ನೂ ತಿಳಿದು, ತಳಮಳಗೊಂಡು, ಇವುಗಳನ್ನು ಹೋಗಲಾಡಿಸುವದಕ್ಕೆ ಪದೇ ಪದೇ ಉಪವಾಸಗಳನ್ನು ಕೈಕೊಳ್ಳುತ್ತಿರುವದು, ಪ್ರತಿಯೊಬ್ಬ ಭಾರತೀಯನಿಗೂ ಕೈಯೊಳಗಿನ ಕನ್ನಡಿಯಂತಿದೆ. ರಾಷ್ಟ್ರೋದ್ಧಾರಕ್ಕಾಗಿ ಹೂಡಿರುವ ಈ ಶಾಂತಿ ಯುದ್ಧದಲ್ಲಿ ಅವರ ಪ್ರಾಣವು ವಿದೇಶಿಯರಿಗಿಂತಲೂ ಸ್ವದೇಶಿಯರ ಕೈಯಲ್ಲಿಯೇ ಹೋಗುವ ಸಂಭವವಿದೆ."[11]

"ಜ್ಞಾನವೇ ಕ್ರಿಯೆ, ಕ್ರಿಯೆಯೇ ಜ್ಞಾನ" ಎಂಬ ಮಾತನ್ನು ಜೀವನದಲ್ಲಿ ಅಳವಡಿಸಿಕೊಂಡ ಪಾಂಡಿತ್ಯಾನುಭಾವಗಳಿಂದೊಡಗೂಡಿದ ಪೂಜ್ಯ ಉತ್ತಂಗಿಯವರಂತಹ ಸಾಹಿತಿಗಳನ್ನು ನಮ್ಮ ಇಂದಿನ ಕನ್ನಡ ಸಾಹಿತಿಗಳಲ್ಲಿ ಕಾಣುವದು ವಿರಳ.

೭. ಆದಿತ್ಯವಾರಕ್ಕೊಮ್ಮೆ ಯೇಸುವಿನ ಪ್ರಾರ್ಥನೆ, ಕೀರ್ತನೆಗಳಿಗಾಗಿ ಎಲ್ಲ ಕ್ರೈಸ್ತ ಬಂಧುಗಳು ಚರ್ಚಿಗೆ ಬರುವಂತೆ ನಡುವಾರದಲ್ಲಿ ನಡೆಯುವ ಬುಧವಾರದ ಆರಾಧನೆಗೆ ಏಕೆ ಬರುವದಿಲ್ಲವೆಂಬ ಆಕ್ಷೇಪ ಹುಬ್ಬಳ್ಳಿಯ ಕ್ರೈಸ್ತ ಬೋಧಕ-ಸೇವಕರಲ್ಲಿ ಉಂಟಾಯಿತು. ಆಗ ಉತ್ತಂಗಿಯವರು ಆ ದಿನದ ಆರಾಧನೆಯನ್ನು ನಾನು ನಡೆಸುವೆನೆಂದು ಒಪ್ಪಿಕೊಂಡು, ಆರಾಧನೆಯ ಅನಂತರ ಸಾಧು ಸುಂದರ ಸಿಂಗರ ಅನುಭಾವವನ್ನು ಕುರಿತು ಭಾಷಣವನ್ನು ಇಟ್ಟುಕೊಂಡರು. ಮೊದಲನೆಯ ವಾರದ ಇವರ ಭಾಷಣಕ್ಕೆ ಕೂಡಿದವರು ಸ್ವಲ್ಪ ಜನರಿರಬಹುದು. ಆದರೆ ಈ ರೀತಿ ಭಾಷಣಗಳನ್ನು ಪ್ರಾರಂಭಿಸಿದ ಒಂದೆರಡು ವಾರಗಳಲ್ಲಿಯೇ ಚರ್ಚಿನಲ್ಲಿ ಕಾಲಿಡಲು ಜಾಗವಿಲ್ಲದಷ್ಟು ಜನ

---

10 ಹೊಸ ಒಡಂಬಡಿಕೆ, ಮತ್ತಾಯ ೭

11 ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ. ಮುನ್ನುಡಿ ಪುಟ ೬-೮.

ಕೂಡಿದರು. ನಮಾಜ ಮಾಡಹೋಗಿ ಮಸೂತಿ ಕೊರಳಲ್ಲಿ ಬಿತ್ತು ಎಂಬಂತೆ ಆರಾಧನೆಗೆ ಜನರನ್ನು ಕೂಡಿಸಹೋಗಿ, ಕೂಡಿದ ಆ ಬಹುಜನರ ಒತ್ತಾಯಕ್ಕಾಗಿ ಸಿಂಗರ ಅನುಭವ ಸಾರದ ತಮ್ಮ ಭಾಷಣಗಳನ್ನು ಸುಮಾರು ಎರಡು ವರುಷ ಗಳ ವರೆಗೆ ಅವ್ಯಾಹತವಾಗಿ ಹೇಳುತ್ತ ಹೋಗಬೇಕಾಯಿತು. ಈ ಭಾಷಣಗಳ ಸಾರವನ್ನೆಲ್ಲ ಸಂಗ್ರಹಿಸಿ "**ಸಾಧು ಸುಂದರ ಸಿಂಗರ ಅನುಭವಸಾರ** ಇಲ್ಲವೆ **ದೃಷ್ಟಾಂತ ದರ್ಶಣ**" ಎಂಬ ಎರಡು ಸಾವಿರ ಪುಟಗಳುಳ್ಳ ಒಂದು ಕೈಬರಹದ ಪ್ರತಿಯನ್ನು ಸಿದ್ಧಪಡಿಸಿದರು. ಸಿಂಗರವರ ಬಗೆಗೆ ಆಂಗ್ಲಭಾಷೆಯಲ್ಲಿ ಬರೆಯಲ್ಪಟ್ಟಿದ್ದ ೧೩ ಗ್ರಂಥಗಳನ್ನು ಅವಲೋಕಿಸಿ, ಅವುಗಳಲ್ಲಿ ಬರುವ ಸುಮಾರು ೫೦೦ ದೃಷ್ಟಾಂತಗಳನ್ನು ೧೨ ಅಧ್ಯಾಯಗಳಾಗಿ ವಿಭಾಗಿಸಿ ಹಂಚಿ ಒಂದೊಂದು ಭಾಗವನ್ನೂ ಸುಂದರವಾಗಿ ಹೆಣೆದು ಪ್ರತಿ ಯೊಂದು ದೃಷ್ಟಾಂತಕ್ಕೆ ಪೂರ್ವ ಪೀಠಿಕೆಯಾಗಿ ತಮ್ಮದೇ ಆದ ತಾತ್ವಿಕ ವಿವೇಚನಾಯುಕ್ತ ವಿವರವನ್ನು ಬರೆದು ತಯಾರಿಸಿದ್ದ ಗ್ರಂಥವಿದು. ಈ ಬೃಹದ್ ಗ್ರಂಥದ ಅರ್ಧ ಭಾಗವೇ ೨೦೮ ದೃಷ್ಟಾಂತಗಳಿಂದೊಡಗೂಡಿ ಎರಡು ಪುಸ್ತಕಗಳಾಗಿ ಪ್ರಕಟವಾಗಿದೆ. ಉಳಿದರ್ಧಭಾಗದ ಕೈಬರಹದ ಪ್ರತಿ ಕಳೆದುಹೋಗಿದೆ. ಅದು ಕನ್ನಡಿಗರ ದುರ್ದೈವ.

ತಮ್ಮದೇ ಆದ ಉಪದೇಶ ಪದ್ಧತಿಗೆ ಸ್ವಸಮಾಜದವರಿಂದ ನಿಂದೆಗೊಳಗಾದ ಉತ್ತಂಗಿಯವರು ಮಿಶನ ಅಧ್ಯಕ್ಷರಾದ ಮಿಶನರಿಯವರ ಆಜ್ಞಾಪತ್ರಕ್ಕೆ– "ನನ್ನಂತೆ ನೀವೂ ಬಾಸೆಲ ಮಿಶನ್ನಿನ ಸೇವಕರಲ್ಲೊಬ್ಬರೆಂಬುದನ್ನು ನೀವೆಂದಿಗೂ ಮರೆಯಲಾಗದು. ಕ್ರಿಸ್ತನಲ್ಲಿರುವ ಸತ್ಯವನ್ನು ಸಾರಿ ಹೇಳುವದೇ ಉಭಯತರ ಕರ್ತವ್ಯವಾಗಿದೆ. ಇದನ್ನು ಸಾಂಗಗೊಳಿಸುವದರಲ್ಲಿ, ವಿದೇಶೀಯರಾದ ತಮಗೆಷ್ಟು ಉಪದೇಶ ಸ್ವಾತಂತ್ರ್ಯವಿದೆಯೋ, ಅದಕ್ಕೂ ಹೆಚ್ಚಿನ ಸ್ವಾತಂತ್ರ್ಯವು ಈ ದೇಶದವನಾದ ನನಗಿದೆಯೆಂದು ತಮಗೆ ಕಂಠೋಕ್ತವಾಗಿ ಅರಿಕೆಮಾಡಿಕೊಳ್ಳುತ್ತೇನೆ. ನಮ್ಮಿಬ್ಬರ ಉಪದೇಶ ವಿಧಾನಗಳಲ್ಲಿ ವ್ಯತ್ಯಾಸವಿರಬಹುದು"[12] ಎಂದು ಸ್ಪಷ್ಟನಾಗಿ ಉತ್ತರಿಸಿದ್ದಾರೆ. ಹೀಗೆ ಉಪದೇಶ ವಿಧಾನದಲ್ಲಿ ವ್ಯತ್ಯಾಸವನ್ನಿಟ್ಟುಕೊಂಡು "ಹೆಚ್ಚಿನ ಸ್ವಾತಂತ್ರ್ಯವಹಿಸಿ ಭಾರತೀಯ ಎಲ್ಲ ಧರ್ಮದವರಿಗೂ ಸುಲಭದಲ್ಲಿ ಕ್ರೈಸ್ತ ಧರ್ಮ ತತ್ವಗಳು ತಿಳಿದು ಮನಕ್ಕೊಪ್ಪಿಗೆಯಾಗುವಂತೆ "**ದೃಷ್ಟಾಂತ ದರ್ಶಣ ೧-೨**" ಈ ಎರಡು ಗ್ರಂಥಗಳನ್ನು ಬರೆದಿದ್ದಾರೆ. ಆದಿ ಕ್ರೈಸ್ತ ಸಭೆಯಲ್ಲಿ ಅಗ್ರಗಣ್ಯನಾದ ಶ್ರೀ ಸಂತಪೌಲನಂತೆ ಭಾರತದ ಪೌಲನೆಂದು ಪ್ರಸಿದ್ಧನಾದ ಸಾಧು ಸುಂದರ ಸಿಂಗರ "ದೃಷ್ಟಾಂತ ದರ್ಪಣ" ಎಂಬೀ ಗ್ರಂಥವು ಕ್ರೈಸ್ತ ಬೋಧಕರು, ಕ್ರೈಸ್ತ ಉಪದೇಶಕರು, ಕ್ರೈಸ್ತ ಸೇವಕರು, ಮಿಶನರಿಗಳು ಮುಂತಾದವರಿಗೆ ಮಾತ್ರ ವಲ್ಲದೆ ಕ್ರೈಸ್ತ ಅನುಭವ ತತ್ವಗಳನ್ನು ತಿಳಿಯಬೇಕೆಂದು ಅಪೇಕ್ಷಿಸುವ ಅನ್ಯಮತೀಯರಿಗೂ ಬಹು ಉಪಯುಕ್ತ ವಾಗಿದೆ."

12 ಪೂ. ಉ. ಜೀವನ ಚರಿತ್ರೆ, ಪುಟ ೪೯.

---

## ಚಂದಾದಾರರಲ್ಲಿ ಒಂದು ಸೂಚನೆ

'ಕನ್ನಡ ನುಡಿ' ಪತ್ರಿಕೆಯು ತಮ್ಮ ಕೈಸೇರುತ್ತಿಲ್ಲವೆಂಬ ದೂರು ಅನೇಕ ಚಂದಾದಾರರಿಂದ ಕಚೇರಿಗೆ ಬರುತ್ತಿವೆ. ಸಂಚಿಕೆಯು ಆಯಾ ತಿಂಗಳ ಐದನೇ ತಾರೀಖಿನ ಒಳಗೆ ಮಾನ್ಯ ಗ್ರಾಹಕರ ಕೈಸೇರದಿದ್ದ ಪಕ್ಷದಲ್ಲಿ ಅವರು ಸಂಬಂಧಪಟ್ಟ ಪೋಸ್ಟ್ ಆಫೀಸಿನಲ್ಲಿ ವಿಚಾರಿಸಿ ಅನಂತರ ಪರಿಷತ್ತಿಗೆ ತಿಳಿಸಬೇಕಾಗಿ ಕೋರಿದೆ. ಅಲ್ಲದೆ ತಮ್ಮ ಸರಿಯಾದ ವಿಳಾಸವನ್ನೂ, ವಿಳಾಸದಲ್ಲಿ ಬದಲಾವಣೆಗಳಿದ್ದರೆ, ಅಂತಹ ಬದಲಾದ ವಿಳಾಸವನ್ನೂ ಕೂಡಲೇ ಬರೆದು ತಿಳಿಸಬೇಕಾಗಿ ಕೋರಿದೆ.

ಸಂಪಾದಕ: ಕನ್ನಡ ನುಡಿ

# ಕನ್ನಡ ನಾಡು, ಕನ್ನಡ ಭಾಷೆ ಮತ್ತು ಸಂಸ್ಕೃತಿ

■ ತಿ. ತಾ. ಶರ್ಮ

**೯ನೇ ಶತಮಾನದಲ್ಲೇ ಗಡಿ ಸಮಸ್ಯೆ ಇತ್ತೋ?**

"At the time of the Chālukyā's the Kuntala Dēs'a was bounded on the north by the Narmadā, on the south by the Thungabhadra, on the west by the Arabean sea and on the east by the Gōdāvarī and the Eastern Ghats. Its capitals were Nasik and Kalyaṇa at different periods.*"

ಚಾಳುಕ್ಯರ ಆಳ್ವಿಕೆಯ ಕಾಲದಲ್ಲಿ ಕುಂತಲ ದೇಶದ ಸೀಮಾ ರೇಖೆಗಳು ಈ ರೀತಿಯಾಗಿದ್ದುವು.

ಉತ್ತರಕ್ಕೆ — ನರ್ಮದಾ ನದಿ
ದಕ್ಷಿಣಕ್ಕೆ — ತುಂಗಭದ್ರಾ
ಪಶ್ಚಿಮಕ್ಕೆ — ಅರಬ ಸಮುದ್ರ

ಪೂರ್ವಕ್ಕೆ — ಗೋದಾವರೀ, ಪೂರ್ವಘಟ್ಟಗಳು. ಬೇರೆ ಬೇರೆ ಕಾಲದಲ್ಲಿ ಕುಂತಳ ದೇಶದ ರಾಜಧಾನಿಗಳು ನಾಸಿಕ್, ಕಲ್ಯಾಣ, ಹೀಗೆ ಬೇರೆ ಬೇರೆಯಾಗಿದ್ದುವು.

ಈ "ಶಬ್ದಚಿತ್ರ"ವನ್ನು ಸ್ಪಷ್ಟಪಡಿಸುವುದಕ್ಕಾಗಿ ಈಗಲಾದರೂ ಇದನ್ನು ಆಧಾರ ಮಾಡಿಕೊಂಡು, "ರೇಖಾ ಚಿತ್ರ" ಒಂದನ್ನು – ನಕ್ಷೆ – ಒಂದನ್ನು ಯಾರಾದರೂ ಸಿದ್ಧಗೊಳಿಸಿದರೆ ಅಧ್ಯಯನೋತ್ಸುಕರಾಗಿರುವ ವಿದ್ಯಾರ್ಥಿಗಳಿಗೆ ಬಹಳ ಉಪಕಾರವಾಗುತ್ತದೆ.*

ಇದರೊಂದಿಗೆ "ಕವಿರಾಜ ಮಾರ್ಗ"ಕಾರ ಸೂಚಿಸಿರುವ ಉತ್ತರ – ದಕ್ಷಿಣಗಳ ಸೀಮಾ ರೇಖೆಗಳನ್ನೂ ತೋರಿಸುವ "ರೇಖಾಚಿತ್ರ"ವೊಂದರ ಅವಶ್ಯಕತೆ ಇದೆ. ಪೂರ್ವ – ಪಶ್ಚಿಮ ಗಡಿಗಳನ್ನು ಆತ ಏತಕ್ಕೆ ಸೂಚಿಸಲಿಲ್ಲವೋ ಊಹಿಸುವುದು ಸುಲಭವಲ್ಲ. ಆದರೂ ಪಶ್ಚಿಮದಲ್ಲಿ ಅರಬ ಸಮುದ್ರ, ಪೂರ್ವದಲ್ಲಿ ಘಟ್ಟಗಳು "ನಾವು ಈ ದಿಕ್ಕುಗಳ ಗಡಿಪಾಲಕರು" ಎಂದು ಸಾರುತ್ತಿರುವಾಗ, ಅದನ್ನು ಮತ್ತೆ ಹೇಳುವುದರ ಅವಶ್ಯಕತೆಯೇನೆಂದವನು ಭಾವಿಸಿದ್ದರೂ ಇರಬಹುದು. ದಕ್ಷಿಣೋತ್ತರ ಗಡಿಗಳನ್ನೆತ್ತಿ ಸೂಚಿಸಲು ಕಾರಣ ಒಂದು ವೇಳೆ ಕ್ರಿ. ಶ. ಒಂಬತ್ತನೆಯ ಶತಮಾನದಲ್ಲೆ "ಗಡಿ ಸಮಸ್ಯೆ" ತಲೆ ಹಾಕಿತ್ತೋ, ಏನೋ?

**ಈ "ಪರಂಗ ಕಪಿತನ" ಯಾರು?**

ಕಾರವಾರ ತಾಲ್ಲೂಕಿನ ಭಟಕಲ್ ಪೇಠೆಯ ಕೈಕಿಣಿ ಪಾರ್ಶ್ವನಾಥ ಬಸ್ತಿಯಲ್ಲೊಂದು ವೀರಗಲ್ಲಿದೆ.

"ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ
ಶ್ರೀ ವೀರಪ್ರತಾಪ ಕೃಷ್ಣರಾಯ ಮಹಾರಾಯರ
ವಿಜಯ ಸಾ ಮ್ರಾಜ್ಯಾಭ್ಯುದಯದಲ್ಲೂ ಶ್ರೀ
ಮನ್ಮಹಾಮಂಡಲೇಸ್ವರಂ ಯಿಂಮಡಿ ದೇವ
ರಾಯ ವೊಡೆಯರು ನಗಿರೆರಾಜ್ಯ, ಹಯಿವೆ,
ತುಳು, ಕೊಂಕಣ, ಮುಂತಾದ ರಾಜ್ಯವನು
ಪ್ರತಿಪಾಲಿಸುತ್ತಿದಂದಿನ ಸಕವರುಸ
೧೪೪೩ನೆಯ ವಿಷುಸಂವತ್ಸರದ ಫಾಲ್ಗುಣ
ಬಹುಳ ೩ಲೂ ಶ್ರೀಮನ್ಮಹಾಮಂಡಲೇಸ್ವರಂ
ಯಿಂಮಡಿ ದೇವರಾಯರು ತಂಮ ಸಮಸ್ತ
ಯೆರಡಕೋಲ ಬಳಿ ಸಮಸ್ತ ವೀರ ಪರಿ
ವಾರಾಸಯವಾಗಿ **ಗೋವಯ ಪರಂಗದ
ಕಪಿತನ** ಮೇಲೆ ದಂಡು . . ."

ಹೊರಡಿಸಿ, ಶತ್ರುಗಳು ಮಾಡಗೋವೆಯಲ್ಲಿ ತಾಕಲು, ಉಭಯ ಸೈನ್ಯಗಳಿಗೂ ಯುದ್ಧ ಮೊದಲಾಯಿತು. ಈ ಹೋರಾಟದಲ್ಲಿ ನಗಿರೆ ರಾಜ್ಯದ ಪರವಾಗಿ ತಮ್ಮಿನಾಯಕ

---

* Indian Antiquary; vol. XXII, p. 182

* ಕನ್ನಡ ನಾಡಿನ ಗಡಿಗಳನ್ನು ಕುರಿತು ಯಾವ ಹಿನ್ನೆಲೆಯ ತಿಳಿವಳಿಕೆಯೂ ಇಲ್ಲದ ಕಲಹಪ್ರಿಯರಿಗೂ ಪ್ರಯೋಜನವಾದೀತು.

ನೆಂಬ ಮಹಾವೀರನು ಅಪೂರ್ವ ಪರಾಕ್ರಮದಿಂದ ಹೋರಾಡಿ

" ಕುದುರೆಯನಿಱಿದು, ಅಳುಗಳ
ನಿಱಿದು, ಆ ದಳದ ಬಲುವ ಮುಱಿದು,
. . . ದಣಾಯಕಗಳನು ತ್ರುಪ್ತಿಬಡಿಸಿ,
ಯಿಱಿದು, ಯಿಱಿಯಿಸಿಕೊಂಡು, ಯೆರಡು
ದಳದೊಳಗೆ ಕೀರ್ತಿನಡದು, ರಣ ಕಡಿತನಾಗಿ,
ಷೋಣಿತದಿಂ ತನುವೋಕುಳಿಯನಾಡಿ, ಆ
ತಂಮಿ ನಾಯಕನು ವೀರಸ್ವರ್ಗ್ಗನೆಯಿದಿದನು "

ಮಹಾಮಂಡಲೇಶ್ವರ ಇಮ್ಮಡಿ ದೇವರಾಯ "ಗೋವಯ ಪರಂಗ ಕಪಿತನ ಮೇಲೆ" ಬಿದ್ದು, ಅವನ ಸೈನ್ಯದೊಂದಿಗೆ ಹೋರಾಡಿದ. "ಪರಂಗ ಕಪಿತನ" ಅಂದರೇನು? Captain of the Franks or Europeans ಇರಬಹುದೆ? ಹದಿನಾರನೆಯ ಶತಮಾನದ ವೇಳೆಗಾಗಲೇ ಗೋವೆಯಲ್ಲಿ ಪೋರ್ಚುಗೀಸರು ನೆಲೆಸಿ, ಪಟ್ಟಭದ್ರರಾಗಿದ್ದರು. Portugese Captain "ಪರಂಗಿ ಕಪಿತನ" ಎಂಬ ತದ್ಭವವಾಗಿರಬಹುದೆ? "ಕಪ್ತಾನ" ಎಂಬ ರೂಪ ಸಾಮಾನ್ಯವಾಗಿ ಈಗ ಬಳಕೆಯಲ್ಲಿದೆ. ವಿಜಯನಗರದ ಕೃಷ್ಣದೇವರಾಯನ ಆಳ್ವಿಕೆಯ ಕಾಲದ "ಮಡಗೋವೆ"ಯ ಬಳಿ ನಡೆದ ಈ ಯುದ್ಧದ ವಿವರಗಳನ್ನು ಸಂಶೋಧಕರು ಹುಡುಕಿ, ಹೊರತೆಗೆಯಬೇಕು.

ಅದೇ ಭಟಕಲ್ಲಿನ ಪಾರ್ಶ್ವನಾಥ ಬಸ್ತಿಯಲ್ಲೊಂದು * ವೀರಗಲ್ಲಿದೆ. ವಿಜಯನಗರದ ವೀರಪ್ರತಾಪ ಅಚ್ಯುತರಾಯ ಮಹಾರಾಯನ ಆಳ್ವಿಕೆಯಲ್ಲಿ ಮಹಾಮಂಡಲೇಶ್ವರ ದೇವರಸ ಒಡೆಯರ ಸೊಸೆ ಚೆಂನಾದೇವಿ ಹಾಡುವಳಿ ಬಟಕಳ ಮುಂತಾದ ರಾಜ್ಯವನು ಪ್ರತಿಪಾಲಿಸುತ್ತಿದ್ದ ಕಾಲದಲ್ಲಿ (ಕ್ರಿ. ಶ. ೧೫೪೨) ಇರಿಸಿದ ವೀರಗಲ್ಲಿದು.

" ಬಟಕಳಕೆ ಪರಂಗದ ಕಪಿತಾ ಮೆರೆ ಮುತಿಗೆ
ನಿಕ್ಕಿ ಸುಟ್ಟು ಸೂರಿಱಿದೀ ಅರಮನೆ
ಯ ದಂಡಿಗೆ ಬಂದಕ ಹೋಗುವಲ್ಲಿ "

ಎಂಬುದಾಗಿ ಶಾಸನದ ೪ನೆ ಪಾದದಲ್ಲಿ ಹೇಳಿದೆ. ೬ನೆಯ ಪಾದದಲ್ಲಿ "ತಾಗುವಾಗ ಬಾಗಿಲಿ ಪರಂಗದವರ ಇಱಿದು ಯಿರಿಸಿಕೊಂಡು" ಎಂಕಪ ನಾಯಕರು ಸ್ವರ್ಗಸ್ಥರಾದರೆಂದು ಹೇಳಲಾಗಿದೆ.

ಇನ್ನೊಂದು * ಶಾಸನದಲ್ಲಿ (ಅದೇ ಸ್ಥಳ) ಅದೇ ಎಂಕಪ್ಪ ನಾಯಕನು "ಪರಂಗದವರ ರಾಜಕಾರ್ಯದಲ್ಲಿ ನಂಮ ಅರಮನೆಯ ಬಾಗಿಲಲ್ಲಿ "ಯಿಱಿದು ಯಿರಿಸಿಕೊಂಡ"ನೆಂದು ಹೇಳಲಾಗಿದೆ. ಪೋರ್ಚುಗೀಸರ ಕಪ್ತಾನನ ಹೆಸರನ್ನೇನಾದರೂ "ಮೆರೆ" ಎಂಬುದರಲ್ಲಿ ಸೂಚಿಸಿರಬಹುದೆ?

## "ನಡೆವಳಿ", "ಅರ್ಥಪರಿಛೇದ", "ಮೂಲಪರಿಛೇದ"

ಮೇಲಿನ ಈ ಮೂರು ಮಾತುಗಳಿಗೆ ನಿಕರವಾದ ಅರ್ಥವನ್ನು ನಿಶ್ಚಯ ಮಾಡಬೇಕಾಗಿದೆ. ಹೊನ್ನಾವರ ತಾಲ್ಲೂಕು * ತಲಕೋಡಿನ ವಿಷ್ಣು ದೇವಾಲಯದ, ೧೧-೧೨ನೆ ಶತಮಾನದ ಕನ್ನಡ ಶಾಸನದಲ್ಲಿ

" ಈ ಪೊಂಗೆ ನಡೆವಳಿಯ ಬಿತ್ತಿ ಮೂಗಣ್ಣುಗ
ದ ಮೂಡ ಪದಿನಯ್ದು "

ಬತ್ತವನ್ನು ಸಲ್ಲಿಸುವುದೆಂದು ಹೇಳಿದೆ. "ಬಿತ್ತಿ" ಎಂಬ ಕ್ರಿಯಾಪದವನ್ನು ಗಮನಿಸಬೇಕು. ಮೈಸೂರು ದೇಶದ ಅನೇಕ ಕಡೆ ಶಾಸನಗಳಲ್ಲಿ "ಬೀಜವರಿ", "ಬಿತ್ತುವರಿ" ಎಂಬ ಮಾತುಗಳು ಬರುತ್ತವೆ.

ಸಿರಾಳಿಯ ಕೇಶವ-ನಾರಾಯಣ ದೇವಾಲಯದ * ಶಾಸನದಲ್ಲಿ

" ಕಿಱು ಶಿವಕೇಷವ ಹೆಬರನ ಮಂಚಣ್ಣ
ಹೆಬರ ತಂಮಂ ಆಯ ಮದುಸುದನ
ಕೇಶವನ ಕಯಲಿ ಅರ್ಥ ಪರಿಛೇದ ಕೊಟು
ಮೂಲ ಪರಿಛೇದ ಎಱೆಯಿಸಿ ಕೊಂಡ "

ಎಂಬುದಾಗಿ ಹೇಳಿದೆ. ವಿದ್ಯಾರತ್ನ ಪಂಚಮುಖಿಯವರು "ಅರ್ಥ ಪರಿಛೇದ" ಎಂದರೆ ಕೊಂಡ ಭೂಮಿಯ ಬೆಲೆಯೆಂದೂ, "ಮೂಲ ಪರಿಛೇದ" ಎಂದರೆ ಕೊಂಡ ಭೂಮಿಯ ಅಥವಾ ಜಮೀನಿನ ಹಕ್ಕುದಾರಿ ಅಥವಾ ಮಾಲಿಕತನವೆಂದೂ, ಸೂಚಿಸಿದ್ದಾರೆ. "ಅರ್ಥ", "ಮೂಲ" ಎಂಬ ವಿಶೇಷಣಗಳನ್ನುಳಿದು "ಪರಿಛೇದ" ಎಂಬ ಮಾತಿನ ಅರ್ಥ ಸ್ಪಷ್ಟವಾಗಿಲ್ಲ. ವಿಭಾಗ (dividing), ಪಕ್ಷಪಾತ (discriminating), ತೀರ್ಮಾನ (judgement) ಹೀಗೆ ಈ ಮಾತನ್ನು ಅನೇಕ ಅರ್ಥಗಳಲ್ಲಿ, ಸಂದರ್ಭಗಳಲ್ಲಿ, ಬಳಸಲಾಗಿದೆ.

---

* No. 12-13. Karnataka Inscription vol. III Part 1

* Karnataka Inscriptions Vol. III p.1. No. 1

* Karnataka Inscriptions Vol. 1. p.1. No. 3

**ಕೊಡಗು, ಕುಡುಗುನಾಡು, ಕೊಡಗೂಸು**

ಕರ್ನಾಟಕ ದೇಶದಲ್ಲಿ ಕೊಡಗು ರಾಜ್ಯವೊಂದಿತ್ತು; ಈಗಲೂ ಅದೊಂದು ಜಿಲ್ಲೆಯಾಗಿದೆ. ಅದಕ್ಕೊಂದು ಇತಿಹಾಸವಿದೆ.

ಅನೇಕ ಕನ್ನಡ ಶಾಸನಗಳಲ್ಲಿ "ಕೊಡಗಿಯ ಮಾನ್ಯ" ಎಂಬ ಮಾತು ಕಂಡುಬರುತ್ತದೆ. "ರಕ್ತ ಕೊಡಗಿ" ಎಂಬ ಮಾತಿಗೂ ಕಡಿಮೆ ಇಲ್ಲ. "ಕೊಡಗಿ" ಅಂದರೆ ಮಾನ್ಯ ಅಥವಾ ಸರ್ವಮಾನ್ಯ ಎಂಬ ಅರ್ಥವಾಗುತ್ತದೆ. ಯಾವನಾದರೊಬ್ಬ ವೀರ, ಸೇವಕ, ತನ್ನೊಡೆಯನ ಸಲುವಾಗಿ ಪ್ರಾಣವನ್ನು ಕೊಟ್ಟಾಗ, ಜೀವತೆತ್ತವನಲ್ಲಿ ಅನುಗ್ರಹ ತೋರಿಸಲು, ಒಡೆಯ, ಅವನ ಸಮೀಪ ಬಂಧುಗಳಿಗೆ ಭೂದಾನ ಮಾಡುತ್ತಾನೆ. ಅದಕ್ಕೆ "ರಕ್ತ ಕೊಡಗಿ" ಎಂದು ಹೆಸರು. 'ರಕ್ತ ಕೊಡಗಿ'ಗೆ ಸಂಬಂದಪಟ್ಟಂತೆ ನೂರಾರು ಶಾಸನಗಳಿವೆ.

ಮೈಸೂರು ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ೬೧ನೆಯ ಶಾಸನದಲ್ಲಿ "ಕುಡುಗುನಾಡ ಮುಂನೂಱ" ಎಂಬದಾಗಿ ಹೇಳಿದೆ. "ಕೊಡಗು" ಮತ್ತು "ಕುಡುಗುನಾಡು" ಒಂದೇ ಆಗಿರಲು ಸಾಧ್ಯವಿಲ್ಲ.

ಅದೇ ಗುಂಡ್ಲುಪೇಟೆ ತಾಲ್ಲೂಕಿನ[1] ೧೦೩ನೇ ಶಾಸನದಲ್ಲಿ "ಕೊಡಗೆ ದೆಱೆ" ಎಂಬ ಮಾತಿದೆ. ಗುಂಡ್ಲುಪೇಟೆ[2] ೧೨೭ನೆ ಶಾಸನದಲ್ಲಿ "ಕೊಡಸೋಗೆ* ಎಂಬ ಮಾತಿದೆ. "ಕೊಡಗೂಸು" ಎಂಬುದು ಶಾಸನಗಳಲ್ಲಿದೆ, ಸಾಹಿತ್ಯ ಕೃತಿಗಳಲ್ಲಿದೆ. ಇವೆರಡು ಸಂದರ್ಭಗಳಲ್ಲೂ "ಕೊಡ" ಎಂಬ ಮಾತಿಗೇನರ್ಥವಿರಬಹುದು?

ನಾಗಮಂಗಲದ[3] ೧೦೭ನೆಯ ಶಾಸನದಲ್ಲಿ "ಹೊಲತಿಯ ತಂಮ ಕೊಡಗಿಯ ದೇವರಿಗೆ ಕ್ಷೀರಧಾರೆಯ ನೆರೆದರು" ಎಂದು ಹೇಳಿದೆ. ಕೊಡಗಿಯ ದೇವರ ಲಕ್ಷಣವಾದರೂ ಏನು?

"ಪ್ರಭು ಕೊಡಗೆ", "ಸೇನಬೋವನ ಕೊಡಗಿ", "ಗವುಡು ಕೊಡಗೆ" ಯ ಉದಾಹರಣೆಗಳಿಗೆ ಲೆಕ್ಕವೇ ಇಲ್ಲ. ಯಳಂದೂರು[4] ೧೭೩ನೆಯ ಶಾಸನದಲ್ಲಿ "ಕೊಡಗೆಯ ಮನೆ" ಯ ಮಾತು ಬರುತ್ತದೆ.

---

(1) (2) Epigraphica Carnatika Vol. XIV
(3) (4) Epigraphica Carnatika Vol. XIV

**ದುರ್ಭೋಜನ!**

| | |
|---|---|
| Crank Case | ಕ್ರೆಂಕಿನ ಗೂಡು |
| Distributer Cap | ಡಿಸ್ಟ್ರಿಬ್ಯೂಟರ್ ಟೊಪ್ಪಿ |
| Gas generator | ಗೇಸ್ ಉತ್ಪಾದಕ |
| High speed jet | ವೇಗ ಜಟ್ಟು |
| Idle jet | ನಿಧಾನ ಜಟ್ಟು |
| Main jet | ಮುಖ್ಯ ಜಟ್ಟು |
| Piston ring | ಪಿಸ್ಟನ್ ಉಂಗರ |
| Poppet valve | ದಂಟು ವಾಲ್ವು |
| Sleeve valve | ಕವಚ ವಾಲ್ವು |
| Spring back | ಸ್ಪ್ರಿಂಗ್ ಬೆನ್ನು |

ಮಿತ್ರರೊಬ್ಬರು ಕಷ್ಟಪಟ್ಟು ನೂರು ಶಬ್ದಗಳ ಪಟ್ಟಿ ಮಾಡಿ ಕಳುಹಿಸಿ, "ಇಂತಹ ಭಾಷಾಂತರದಿಂದೇನು ಪ್ರಯೋಜನ"ವೆಂದು ನನ್ನನ್ನು ಕೇಳಿದರು. ಆ ಪಟ್ಟಿಯಿಂದೆತ್ತಿ ಹತ್ತು ಶಬ್ದಗಳನ್ನು ಕೊಟ್ಟಿದ್ದೇನೆ. ಆ ಮಿತ್ರನಿಗೆ "ನಿಮ್ಮ ಶಬ್ದಶತಕವನ್ನು ನೋಡಿದೆ. "ಆಚಾರ್‍ರೆ! ನಿಮಗೆ ಕಷ್ಟ, ನಮಗೆ ದುರ್ಭೋಜನ" ಎಂಬ ನಾಣ್ನುಡಿ ನೆನಪಿಗೆ ಬರುತ್ತದೆ" ಎಂದು ಪ್ರತ್ಯುತ್ತರ ಕೊಟ್ಟೆ.

**ಭಾಷಾ ಮರ್ಯಾದೆ ಎಂಬುದೊಂದಿದೆ**

ಲೋಕಮಾನ್ಯ ಬಾಲಗಂಗಾಧರ ತಿಲಕರು ಸ್ವರ್ಗಸ್ಥರಾದರು. ಒಂದೂರಲ್ಲಿ ಸಾರ್ವಜನಿಕರೆಲ್ಲ ಸಭೆ ಸೇರಿದರು. ಮಾನ್ಯ ಗೃಹಸ್ಥರೊಬ್ಬರು "Lokamanya departed; let us follow him" ಅಂದರು. ತಕ್ಷಣ ಇನ್ನೊಬ್ಬರೆದ್ದು.

"ಲೋಕಮಾನ್ಯರು ಇಹಲೋಕ ತ್ಯಜಿಸಿದರು;
ನಾವೆಲ್ಲ ಅವರನ್ನು ಹಿಂಬಾಲಿಸೋಣ"

ಎಂದು ಕನ್ನಡದಲ್ಲಿ ಹೇಳಿದರು. ಸಭಿಕರಲ್ಲೊಬ್ಬರು

"ಏನಪ್ಪಾ! ಈ ಮಹಾನುಭಾವ ನಮ್ಮನ್ನೆಲ್ಲ
ಇಹಲೋಕ ತ್ಯಜಿಸಿರೆಂದು ಹೇಳುತ್ತಿದ್ದಾನಲ್ಲ"

ಅಂದರು! ಭಾಷಾಂತರದಲ್ಲಿ ತಪ್ಪಿಲ್ಲವಾದರೂ ಭಾಷಾ ಮರ್ಯಾದೆ ತಪ್ಪಿದರೆ ಆಗುವ ಪ್ರಮಾದಕ್ಕಿದು ಉದಾಹರಣೆ.

ಇದೇ ಗುಂಪಿಗೆ ಸೇರಿದ್ದೆ ಇನ್ನೊಂದು ಉದಾಹರಣೆ: "They will not take it lying" ಎಂಬುದನ್ನೊಬ್ಬರು "ಅವರು ಇದನ್ನು ಮಲಗಿಕೊಂಡು ತೆಗೆದುಕೊಳ್ಳುವುದಿಲ್ಲ" ಎಂದು ಕನ್ನಡಕ್ಕಿಳಿಸಿದರು! ಎಷ್ಟು ಮರ್ಯಾದೆಯಿಂದ ಕೂಡಿದೆ ನೋಡಿ! ಎಲ್ಲವನ್ನೂ ಮೀರಿಸಿದ್ದು ಇದು. "Mahatmaji saw His Majesty in his loin cloth" ಮಹಾತ್ಮಜಿಯವರು ಚಕ್ರವರ್ತಿಗಳನ್ನು ತಮ್ಮ ದಟ್ಟಿಯಲ್ಲಿ ಕಂಡರು!

# 'ಮುಮ್ಮುೞಬ್ಬಣಬ್ಬೆ'ಯೋ 'ಮುಮ್ಮುವಬ್ಬಣಬ್ಬೆ'ಯೋ ?

■ ಡಾ|| ಜಿ. ಎಸ್. ಗಾಯಿ

ಇತ್ತೀಚೆಗೆ ಪ್ರಕಟವಾದ 'ಪ್ರಬುದ್ಧ ಕರ್ಣಾಟಕ'ದ ಕೀಲಕ ಸಂವತ್ಸರದ ಪುಷ್ಯ ಸಂಚಿಕೆಯಲ್ಲಿ (ಸಂಪುಟ ೫೦, ಸಂಚಿಕೆ ೪, ಪುಟ ೧೧೫—೧೧೭) ಪಂಪನ ತಮ್ಮ ಜಿನವಲ್ಲಭನ ಶಿಲಾಶಾಸನವನ್ನು ಕುರಿತು ಬರೆದ ನನ್ನ ಲೇಖನದಲ್ಲಿ ಜಿನವಲ್ಲಭನ ತಾಯಿಯನ್ನು ವರ್ಣಿಸುವ ಮೂಲ ಪಾಠವು 'ಮುಮ್ಮುೞಬ್ಬಣಬ್ಬೆ' ಎಂದು ಇರುತ್ತದೆಂದೂ ಡಾ. ವೆಂಕಟರಮಣಯ್ಯನವರು ಓದಿರುವ 'ಮುಮ್ಮು[ಂ*]ವಬ್ಬಣಬ್ಬೆ' ಎಂಬ ಪಾಠವು ಸರಿಯಲ್ಲವೆಂದೂ ಹೇಳಿರುವೆನು. ಆದರೆ 'ಕನ್ನಡ ನುಡಿ'ಯ ೧೯೬೯ನೆಯ ಏಪ್ರಿಲ್-ಮೇ ತಿಂಗಳ ಸಂಚಿಕೆಯಲ್ಲಿ ಡಾ. ದೇಸಾಯಿ ಅವರು ಈ ವಿಷಯವನ್ನು ಕುರಿತು ಪ್ರಕಟಿಸಿದ ತಮ್ಮ ಲೇಖನದಲ್ಲಿ ಮೂಲಪಾಠವು 'ಮುಮ್ಮುವಬ್ಬಣಬ್ಬೆ' ಎಂದು ಮಾತ್ರ ಇರುತ್ತದೆ 'ಮುಮ್ಮುೞಬ್ಬಣಬ್ಬೆ' ಎಂದು ಸರ್ವತಃ ಇಲ್ಲ ಎಂಬುದಾಗಿ ಬರೆದಿದ್ದಾರೆ ಮತ್ತು ತಮ್ಮ ಅಭಿಪ್ರಾಯವನ್ನು ಸಮರ್ಥಿಸುವುದಕ್ಕಾಗಿ 'ವಬ್ಬಣಬ್ಬೆ' ಅಕ್ಷರಗಳ ಚಿತ್ರವನ್ನೂ ಹಾಗೂ ಸಮಸ್ಯಾತ್ಮಕ ಅಕ್ಷರಗಳಾದ 'ವ'ಕಾರಕ್ಕೂ 'ೞ' ಕಾರಕ್ಕೂ ಇರುವ ವ್ಯತ್ಯಾಸವನ್ನು ಎತ್ತಿ ತೋರಿಸುವುದಕ್ಕಾಗಿ ಅದೇ ಶಾಸನದಲ್ಲಿರುವ 'ಕಳಾಳಾಪ' ಎಂಬ ಶಬ್ದದ ಅಕ್ಷರಗಳ ಚಿತ್ರವನ್ನೂ ತಮ್ಮ ಲೇಖನದ ಜೊತೆಗೆ ಪ್ರಸಿದ್ಧಪಡಿಸಿದ್ದಾರೆ. ಆದರೆ ಈ ಚಿತ್ರಗಳು ಮೂಲ ಅಕ್ಷರಗಳ ಯಥಾವತ್ತಾದ ಛಾಯಾಚಿತ್ರಗಳಾಗಿರದೆ (photograph) ಕೈಯಿಂದ ಪ್ರತಿಮಾಡಿದ (eye-copy) ಅಕ್ಷರಗಳ ಚಿತ್ರಗಳೆಂದು ತಿಳಿಯುತ್ತದೆ. ಅವರು ಕೊಟ್ಟಿರುವ ಈ ಚಿತ್ರದಲ್ಲಿಯ 'ವಬ್ಬಣಬ್ಬೆ' ಶಬ್ದದ ಎರಡೂ 'ಬ'ಕಾರಗಳ ಒತ್ತಕ್ಷರಗಳ ಬಲರೇಖೆಯು ಮೇಲ್ಗಡೆ ಇರುವ 'ಬ'ಅಕ್ಷರದಿಂದ ತುಸು ಅಂತರದಲ್ಲಿದೆ. ಆದರೆ ಮೂಲದಲ್ಲಿ ಈ ರೇಖೆಯು ಮೇಲಿನ 'ಬ' ಅಕ್ಷರಗಳಿಗೆ ಹೊಂದಿಕೊಂಡಿರುತ್ತದೆ ಮತ್ತು 'ವ'ಕಾರದ ಕೆಳಗಡೆ ಒಂದು ಚಿಕ್ಕ ಗೆರೆಯು ಇರುತ್ತದೆಂದು ಲೇಖಕರು ಬರೆದಿದ್ದು ಆ ಗೆರೆಯು ಇಲ್ಲಿಯ ಚಿತ್ರದಲ್ಲಿ ಕಾಣುವದಿಲ್ಲ. ಆದುದರಿಂದ ಈ ಚಿತ್ರಗಳಲ್ಲಿರುವ ಅಕ್ಷರಗಳು ಮೂಲ ಅಕ್ಷರಗಳ ಯಥಾವತ್ತಾದ ಛಾಯಾಚಿತ್ರಗಳ ಪ್ರತಿಗಳಾಗಿರದೆ ಕೈಯಿಂದ ತಿದ್ದಿ ಬರೆದ ಅಕ್ಷರಗಳ ಚಿತ್ರಗಳೆಂದೂ ಅವು ಪ್ರಮಾಣಭೂತವಲ್ಲವೆಂದೂ ಹೇಳಬೇಕಾಗುತ್ತದೆ.

ಮೇಲೆ ಉದಾಹರಿಸಿದ ನನ್ನ ಲೇಖನದಲ್ಲಿ ಹೇಳಿದಂತೆ ಶಾಸನವಿದ್ದ ಸ್ಥಳಕ್ಕೆ ನಾನು ಸ್ವತಃ ಭೇಟಿಯಿತ್ತು ಸಂಬಂಧಿಸಿದ ಅಕ್ಷರಗಳ ಮೂಲಪಾಠವನ್ನು ಬಂಡೆಗಲ್ಲಿನ ಮೇಲೆಯೇ (*in situ*) ಪರೀಕ್ಷಿಸಿರುವೆನು. ಹಾಗೂ ಈ ಶಾಸನದ ಶುದ್ಧವಾದ ಸಮಾಧಾನಕರವಾದ ಪಡಿಯಚ್ಚನ್ನು (impression) ತಯಾರಿಸಿಕೊಂಡು ಬಂದಿರುವೆನು.[೧] ಅದರ ಸಹಾಯದಿಂದ ತೆಗೆದಿರುವ ಸಂಬಂಧಪಟ್ಟ ಮೂಲ ಅಕ್ಷರಗಳ ಯಥಾವತ್ತಾದ ಛಾಯಾಚಿತ್ರಗಳನ್ನು (photograph) ಇಲ್ಲಿ ಕೊಡಲಾಗಿದೆ. ಅದರಲ್ಲಿ ಮೊದಲನೆಯ ಅಕ್ಷರವು 'ವ' ಕಾರವಾಗಿರದೆ 'ೞ' ಕಾರವೆಂಬುದು ಸ್ಪಷ್ಟವಿದೆ.



೧



೨

೧ ಆಂಧ್ರ ಪ್ರದೇಶ ಸರ್ಕಾರದ ಪುರಾತತ್ತ್ವ ಶಾಖೆಯವರು ತಯಾರಿಸಿದ ಈ ಶಾಸನದ ಪಡಿಯಚ್ಚುಗಳು ಅಷ್ಟು ಸಮಾಧಾನಕರವಿಲ್ಲವೆಂದು ಹೇಳಬಹುದು. ಆ ಶಾಖೆಯ ಮುಖ್ಯಾಧಿಕಾರಿಗಳು ಒಂದು ಪಡಿಯಚ್ಚನ್ನು ಸುಮಾರು ಎರಡು ವರ್ಷಗಳಷ್ಟು ಹಿಂದೆಯೇ ನನಗೆ ಕಳುಹಿಸಿಕೊಟ್ಟಿದ್ದರು.

ಮತ್ತು ಈ 'ಳ' ಕಾರದ ಕೆಳಗಡೆ ಇರುವುದು ಕಲ್ಲಿನಲ್ಲಿರುವ ಗೆರೆಯಾಗಿರದೆ 'ಳ' ಅಕ್ಷರದ ಕೆಳಭಾಗದ ಕೊಕ್ಕೆ (loop) ಎಂಬುದು ಸ್ಪಷ್ಟವಾಗಿ ಕಾಣಿಸುತ್ತದೆ. ಹಾಗೂ 'ವ' ಅಕ್ಷರದಲ್ಲಿರಬೇಕಾದ ಬಲಗಡೆಯ ರೇಖೆಯು ಈ ಅಕ್ಷರದಲ್ಲಿ ಕಾಣಿಸುವುದಿಲ್ಲ. ಶಾಸನದಲ್ಲಿ ಬೇರೆ ಕಡೆಗೆ ಇರುವ 'ವ' ಅಕ್ಷರಗಳನ್ನು ಪರೀಕ್ಷಿಸುವ ಸೌಕರ್ಯಕ್ಕಾಗಿ ಆ ಅಕ್ಷರಗಳಿರುವ ಒಂದು ಭಾಗದ ಯಥಾವತ್ತಾದ ಛಾಯಾಚಿತ್ರವನ್ನೂ (photograph) ಇಲ್ಲಿ ಕೊಡಲಾಗಿದೆ. ಆದುದರಿಂದ ಸಮಸ್ಯಾತ್ಮಕವಾದ ಅಕ್ಷರವು 'ಳ' ಕಾರವೆಂದೇ ನಿರ್ಧಾರವಾಗಿ ಹೇಳಬಹುದು ಮತ್ತು ಮೂಲಪಾಠವನ್ನು 'ಮಮ್ಮರ್ಳಬ್ಬಣಬ್ಬೆ' ಎಂದೇ ಓದಬೇಕು.[೨] ಅಂದರೆ ಪಂಪ-ಜಿನವಲ್ಲಭರ ತಾಯಿಯಾದ ಅಬ್ಬಣಬ್ಬೆಯು ಅಣ್ಣಿಗೆಜೆಯ ಜೋಯಿಸ ಸಿಂಘನ ಮೊಮ್ಮಗಳಾಗಿದ್ದಳೆಂದು ತಿಳಿಯಬೇಕು.[೩]

---

೨ 'ಮಮ್ಮರ್ನವಬ್ಬಣಬ್ಬೆ' ಎಂಬ ರೂಪವು ಕನ್ನಡ ವ್ಯಾಕರಣದ ದೃಷ್ಟಿಯಿಂದಲೂ ಸಾಧುವಲ್ಲ. ಡಾ. ದೇಸಾಯಿ ಅವರು 'ಮಮ್ಮರ್ಂ + ಅಬ್ಬಣಬ್ಬೆ' ಎಂಬ ಎರಡು ಪದಗಳು ಸಂಧಿಯಾಗಿ 'ಮಮ್ಮರ್ನವಬ್ಬಣಬ್ಬೆ' ಆಗಿದೆಯೆಂದೂ ಈ ಕನ್ನಡ ಸಂಧಿಯನ್ನು ಡಾ. ವೆಂಕಟರಮಣಯ್ಯನವರು ಗುರುತಿಸಲಿಲ್ಲವೆಂದೂ ಬರೆದಿದ್ದಾರೆ. ಆದರೆ 'ಮಮ್ಮರ್' ಎಂಬ ಪುಲ್ಲಿಂಗ ಶಬ್ದದ ಪ್ರಾತಿಪದಿಕ ರೂಪವು 'ಮಮ್ಮರ್ನ್' ಎಂದಿದ್ದು ಅದಕ್ಕೆ ಸ್ವರಾದಿಯಾದ ಅಬ್ಬಣಬ್ಬೆ ಪದವನ್ನು ಸೇರಿಸಿದರೆ 'ಮಮ್ಮರ್ನಬ್ಬಣಬ್ಬೆ' ಎಂದಾಗಬೇಕೇ ಹೊರತು 'ಮಮ್ಮರ್ನವಬ್ಬಣಬ್ಬೆ' ಎಂದಾಗುವದಿಲ್ಲ.

೩ ಇತ್ತೀಚೆಗೆ ಮೈಸೂರಿಗೆ ಭೇಟಿಯಿತ್ತ ಕೇಂದ್ರ ಸರ್ಕಾರದ ಶಾಸನ ಶಾಖೆಯ ಮುಖ್ಯಾಧಿಕಾರಿಯಾಗಿ ನಿವೃತ್ತರಾದ ಶ್ರೀ ಲಕ್ಷ್ಮೀನಾರಾಯಣರಾಯರು ಸಹ ಸಂಬಂಧಿಸಿದ ಅಕ್ಷರಗಳ ಪಡಿಯಚ್ಚನ್ನೂ ಛಾಯಾಚಿತ್ರಗಳನ್ನೂ ಪರೀಕ್ಷಿಸಿ ಸಮಸ್ಯಾತ್ಮಕ ಅಕ್ಷರವು 'ಳ' ಎಂಬುದರಲ್ಲಿ ಸಂದೇಹವಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ.

---

# ಸರ್ವೇಶ್ವರನ ವಚನಗಳು

ಒಡೆಯಲು
ಖಂಡುಗ ಹಾಲಿಗಾದರೂ ಹನಿಯೊಂದೆ ಸಾಕು ಹುಳಿ
ಸಾಯಲು
ಜಗಜಟ್ಟಿಗಾದರೂ ತೊಟ್ಟೊಂದೆ ಸಾಕು ವಿಷ
ಸತ್ಪುರುಷನ ಇರಿಯಲು ಮಾತೊಂದೆ ಸಾಕು, ಸರ್ವೇಶ್ವರ

ಬೆಳೆಯಲು
ಎಮ್ಮೆಯ ಹಾಲು ಕುಡಿದಾಕ್ಷಣಕೇ
ಎಮ್ಮೆಯ ಮಕ್ಕಳಲ್ಲ ನಾವು
ಅರಿಯಲು
ಇಂಗ್ಲಿಷ್ ಓದಿದಾಕ್ಷಣಕೇ
ಇಂಗ್ಲಿಷ್‌ನ ಗುಲಾಮರಲ್ಲ ನಾವು
ಅಂಧಾನುಕರಣೆಯ ಹೋಗಲಾಡಿಸೋ ಸರ್ವೇಶ್ವರ

ಜೀವದಾನವ ಮಾಡಿದ ತಾಯಿತಂದೆಗಳಿಗೆ ಮಣಿಸು
ಈರೇಳು ಲೋಕವಾಳುವ ನಿನ್ನಡಿಗಳಿಗೆ ಮಣಿಸು
ಅಧಿಕಾರದ ಮದವೇರಿದ ನರಕೀಟಗಳಿಗೆ ಮಣಿಸದಿರು, ಸರ್ವೇಶ್ವರ.

•

ಡಿ. ಲಿಂಗಯ್ಯ

# ಸಾಂಗತ್ಯದ ಲಕ್ಷಣ ಹಾಗೂ ಭಾವಸೌಲ್ಯ

■ ಬಂ. ರಂ. ಸರ್ನೊಕದ್ದಂ

ಅಕ್ಕ ತಂಗಿಯರಲ್ಲಿರುವ ಸಾಮ್ಯವೇ ತ್ರಿಪದಿ-ಸಾಂಗತ್ಯಗಳಲ್ಲಿದೆ. ಸಾಂಗತ್ಯವು ತ್ರಿಪದಿಯಂತೆ ಅಂಶಗಣಾನ್ವಿತವಾದ ಕನ್ನಡ ಛಂದೋಬಂಧ. ಸುಂದರ ಸುಕೋಮಲ ಭಾವಗಳನ್ನು ಚಿತ್ತರಿಸುವ ಈ ಬಂಧದ ಹೆಸರನ್ನು ನಾಗವರ್ಮನು ಹೇಳದಿರುವುದು ಅಚ್ಚರಿ! ನಾಗವರ್ಮನು ಕರ್ನಾಟಕ ವಿಷಯ ಜಾತಿಗಳನ್ನು ಹೇಳಿ ಸಾಂಗತ್ಯದ ಮಾತನ್ನೇ ಎತ್ತಿಲ್ಲ! ಸಾಂಗತ್ಯವು ಅವನ ಕಾಲಕ್ಕೆ ಬಳಕೆಯಲ್ಲಿರದೇ ಅನಂತರ ಜನಪ್ರಿಯವಾದ ಮಟ್ಟಾಗಿರಬೇಕು.

**ಲಕ್ಷಣ :**

ನಾಗವರ್ಮನು ಛಂದೋಂಬುಧಿಯಲ್ಲಿ ಎಲ್ಲ ಛಂಧೋ ಪ್ರಭೇದಗಳನ್ನು ಲಕ್ಷ್ಯ-ಲಕ್ಷಣ ಸಮನ್ವಯದೊಂದಿಗೆ ವಿವರಿಸಿದ್ದಾನೆ. ಅವನ ಹಾಗೆ ಸಾಂಗತ್ಯದ ಲಕ್ಷ್ಯ-ಲಕ್ಷಣವನ್ನು ಹೀಗೆ ವಿವರಿಸಬಹುದು :

" ಹಿರಿಚರಣಕೆ ನಾಲ್ಕು ಕಿರಿಚರಣಕೆರಡು
ಸರಸೀಜೋದರಗಣ ಮುಂದೆ
ಕಿರಿಚರಣಾಂತಕೆ ಬರೆ ಬೊಮ್ಮಗಣವೊಂದೆ
ಅರಿ ಸಖಿ ಸಾಂಗತ್ಯವೆಂದೆ "

ಈ ಮೇಲಿನ ಪದ್ಯದ ಗಣಯೋಜನೆಯನ್ನು ಹೀಗೆ ವಿವರಿಸಬಹುದು :

ವಿ : ವಿ : ವಿ : ವಿ
ವಿ : ವಿ : ಬ್ರ
ವಿ : ವಿ : ವಿ : ವಿ
ವಿ : ವಿ : ಬ್ರ

ಮೇಲಿನ ಗಣನಿರ್ಬಂಧವನ್ನು ಕೆಲವು ಕವಿಗಳು ಮೀರಿದ್ದಾರೆ. ಬ್ರಹ್ಮಗಣದ ಸ್ಥಾನದಲ್ಲಿ ವಿಷ್ಣುಗಣವನ್ನು ವಿಷ್ಣುವಿನ ಸ್ಥಾನದಲ್ಲಿ ಬ್ರಹ್ಮಗಣವನ್ನು ಬಳಸಿದ್ದಾರೆ. ಹದಿಬದೆಯ ಧರ್ಮದ "ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ" ಎಂಬ ಪದ್ಯದಲ್ಲಿ ಆದಿ ವಿಷ್ಣುಗಣಕ್ಕೆ ಬದಲಾಗಿ ಬ್ರಹ್ಮಗಣದ ಪ್ರಯೋಗವಿದೆ. ಹೀಗೆ ಹಲವಾರು ಪದ್ಯಗಳನ್ನು ಉದಾಹರಿಸಬಹುದಾಗಿದೆ.

ಹೀಗೆ ಹಲವು ಕವಿಗಳು ನಿಯಮವನ್ನು ಉಲ್ಲಂಘಿಸಿರುವದರಿಂದಲೋ ಏನೋ ಉಗ್ರಾಣ ಮಂಗೇಶರಾಯರು ಸಾಂಗತ್ಯದ ಲಕ್ಷಣವನ್ನು ಕುರಿತು "ಸಾಂಗತ್ಯವು ನಿಯಮಗಳಿಗೊಳಗಾಗದ ಒಂದು ಮಟ್ಟಾಗಿದ್ದು ಅದಕ್ಕೆ ತಾಳವೇ ಮುಖ್ಯವಾಗಿ ಮಾತ್ರೆಗಳ ತೊಡಕೇ ಇಲ್ಲವಾದ್ದರಿಂದ ನೀರು ಹರಿಯುವಂತೆಯೂ, ತಂಗಾಳಿ ತೀಡುವಂತೆಯೂ ತಡೆಯಿಲ್ಲದೆ ಬರೆಯುವುದಕ್ಕೆ ಅನುಕೂಲವಾಗಿ ಕವಿಗೆ ಒಂದು ಹೆದ್ದಾರಿಯಾಗಿ ಪರಿಣಮಿಸಿತು" ಎಂದು ಅಭಿಪ್ರಾಯಪಟ್ಟಿದ್ದಾರೆ.

ಆಧುನಿಕ ಕನ್ನಡ ಕವಿಗಳ ಕೈಯಲ್ಲಿ ಅಂಶಗಣಾನ್ವಿತವಾದ ಸಾಂಗತ್ಯವು ಮಾತ್ರಾಗಣಕ್ಕೆ ತಿರುಗಿರುವದನ್ನು ಕಾಣಬಹುದು (ಆಧುನಿಕ ಕವಿಗಳ ಕೈಯಲ್ಲಿ ತ್ರಿಪದಿಯೂ ಮಾತ್ರಾಗಣಕ್ಕೆ ತಿರುಗತೊಡಗಿದೆ) ಮಾತ್ರಾಗಣದ ಸಾಂಗತ್ಯದ ಗಣಯೋಜನೆ ಹೀಗಿದೆ :

೫ : ೫ : ೫. ೫
೫ : ೫. ೩
೫ : ೫ : ೫. ೫.
೫ : ೫ : ೩

ಉದಾಹರಣೆಗಾಗಿ ಕೆ. ಎಸ್. ನರಸಿಂಹಸ್ವಾಮಿಯವರ ಒಂದು ಪದ್ಯವನ್ನು ನೋಡಬಹುದು :

" ಬಳೆಗಾರ ಚನ್ನಯ್ಯ ಬಾಗಿಲಿಗೆ ಬಂದಿಹನು
ಒಳಗೆ ಬರಲಪ್ಪಣೆಯೆ ದೊರೆಯೆ
ನವಿಲೂರ ಮನೆಯಿಂದ ನುಡಿಯೊಂದ ತಂದಿಹೆನು
ಬಳೆಯ ತೊಡಿಸುವದಿಲ್ಲ ನಿಮಗೆ "

**ಭಾವ ಮೌಲ್ಯ :**

ಮೃದು ಮತ್ತು ಕೋಮಲ ಭಾವಗಳನ್ನು ಸಾಂಗತ್ಯವು ಸುಂದರವಾಗಿ ಚಿತ್ರಿಸಬಲ್ಲದು. ಈ ಬಗ್ಗೆ ಡಾ|| ಡಿ.ಎಸ್.

ಕರ್ಕಿಯವರು "ಸಾಂಗತ್ಯದ ಮುಖ್ಯಲಕ್ಷಣ ಸೌಕುಮಾರ್ಯ. ಮೃದುಭಾವವನ್ನು ಬಳ್ಳಿಯಂತೆ ಬಳಕಿಸುವ ಇಂತಹ ಇನ್ನೊಂದು ಬಂಧ ಕನ್ನಡ ಛಂದಸ್ಸಿನಲ್ಲಿ ಇರಲಿಕ್ಕಿಲ್ಲ. ತರಲ ತರಲವಾಗಿ, ವಿರಲ ವಿರಲವಾಗಿ ಅದರಲ್ಲಿ ವಿವರಗಳನ್ನು ಬಿಡಿಸಿ ತೋರಿಸಬಹುದು. ಸಾಂಗತ್ಯದ ಸೀಮೆಯಲ್ಲಿ ಅರಳಿದ ಚಿತ್ರಗಳು ಬೆಳುದಿಂಗಳಲ್ಲಿ ಬರೆದ ರಂಗವಲ್ಲಿಯನ್ನು ನೆನಪಿಗೆ ತರುತ್ತವೆ" ಎಂದು ಸುಂದರವಾಗಿ ಹೇಳಿದ್ದಾರೆ. ಸಾಂಗತ್ಯದ ಸೌಂದರ್ಯ ಸೌಕುಮಾರ್ಯಗಳನ್ನು ಸಾಂಗತ್ಯದಲ್ಲಿಯೇ ಸುಳುಹುಗಾಣಿಸಿದರೆ ಇನ್ನೂ ಚನ್ನಲ್ಲವೆ?

"ಅಂಗನೆಯರು ಕೂಡಿ ಸಾಂಗತ್ಯ ಪಾಡಲು
ಜೇಂಗೊಡ ಸುರಿದಂತೆ ಕೆಳದಿ
ತಿಂಗಳ ಬೆಳಕಲ್ಲಿ ಅಂಗನೆಯೊಡಸಿರೆ
ತಂಗಾಳಿ ಸುಳಿದಂತೆ ಕೆಲದಿ."

---

## ಬೆಳಗಿನಲ್ಲಿ

•

ಹಚ್ಚನ ಪಚ್ಚನ ಪೈರುಗಳಲ್ಲಿ
ಬೆಚ್ಚನೆ ಎದೆ ಕಣ್ಮುಚ್ಚುವುದಲ್ಲಿ
ರಾಗದ ಅಮೃತದಾಗರವಲ್ಲಿ
ಕೇಳಿದ ಕವಿಯೆದೆ ತನ್ಮಯದಲ್ಲಿ.

ಹೇಳುವುದೇನಿದೆ ಕೇಳಲಿಕಿಲ್ಲಿ
ಪ್ರಶ್ನೆಗಳೆಲ್ಲವು ಸೊನ್ನೆಗೆ ಇಲ್ಲಿ
ಬಾಳಿನ ಸುಖಗಳೆ ಈ ಬೆಳಗಲ್ಲಿ
ಮೈದೋರಿವೆ ಈ ಪರಿಪರಿಯಲ್ಲಿ :

ಹಕ್ಕಿಗಳುಲಿಗಳು, ಕೋಕಿಲಧ್ವನಿಗಳು
ಮುತ್ತಿನ ಹನಿಗಳು ತಾವರೆ ಹೂಗಳು
ಕಾಡಿನ ಸುಂದರ ತಾಣಗಳು
ಮೈಮರೆಯುವ ಆ ಶೃಂಗಗಳು.

•

ಚಂದ್ರಶೇಖ ರತಾಳ್ಕ

# ಬಿ. ವೆಂಕಟಾಚಾರ್ಯರ ಅನುಕ್ತ ಕೃತಿಗಳು

■ ಎಸ್. ಶಿವಣ್ಣ

| ಕೃತಿ | ಮೊದಲ ಪ್ರಕಟಣೆ | ಪ್ರಕಾರ | ಮೂಲ | ವಿಷಯ |
|---|---|---|---|---|
| ೧ | ೨ | ೩ | ೪ | ೫ |
| ಅತ್ತಿಗೆ | | | ನಾಗೇಂದ್ರನಾಥ ಚಟ್ಟೋಪಾಧ್ಯಾಯ | |
| ಅಹಲ್ಯಾಬಾಯಿ | ೧೮೯೯ | | | |
| ಉನ್ನತಿ | ? | ? | ? | ೦-೦-೬ |
| ಉನ್ಮಾದಿನಿ | ೧೯೦೧ | | | |
| ಉಪವಾಸ | ೧೯೧೮ (ದ್ವಿ) | | | |
| ಕನ್ನಡ ಐದನೆಯ ಪುಸ್ತಕ | ೧೯೨೭ | | | |
| ಕ್ಷತ್ರಿಯ ರಮಣಿ | ೧೯೦೨ (ತೃ) | | | |
| ಕೋಹಿನುರು | ೧೯೦೫ | | | |
| | ೧೯೩೦ (ಚ) | | | |
| ಗ್ರಾಮ್ಯಕಥಾ | ? | ? | ? | ೦-೦-೬ |
| ಚಿತ್ರವಿಚಿತ್ರಾವಳಿ | ೧೯೧೪ | | | |
| ದಾಡಿಯ ಹೇಳಿಕೆ | ೧೯೧೩ | | | |
| ದೇಶಭಾಷೋನ್ನತಿಯ ಆವಶ್ಯಕತೆ | ೧೯೦೧ | | | ೦-೧-೦ |
| ದೊಣ್ಣೆಯ ಹೇಳಿಕೆ | | ಸಣ್ಣಕತೆ | ಸುಧೀಂದ್ರನಾಥ ಠಾಕೂರ | |
| ಪದ್ಯಸಾರ (ಭಾಗ ೨) | ೧೯೧೩ | ಕಾವ್ಯ | | |
| ಭರತ ಖಂಡದಲ್ಲಿ ವಿದುಷಿಯರಾಗಿದ್ದ ರಮಣೀಯರು | | | | III-೪೬೭ |
| ಮಾಧವೀಲತಾ | ೧೮೯೩ | | | |
| | ೧೯೦೧ | | | |
| ಯುಗಳ ಪ್ರದೀಪ | | | | III-೪೬೭ |
| ರಮಾಬಾಯಿ | ೧೯೧೯ (ದ್ವಿ) | | | |
| ರಾಮೇಶ್ವರನ ಅದೃಷ್ಟ | ೧೯೧೯ (ತೃ) | | | |
| ಶರಣಾಗತ | | | | III-೨೨೩ |
| ಶಾಂತ(ಭಾಗ-೨) | ೧೯೨೨ | | | |

ದ್ವಿ-ದ್ವಿತೀಯ ಮುದ್ರಣ, ತೃ-ತೃತೀಯ ಮುದ್ರಣ, ಚ-ಚತುರ್ಥ ಮುದ್ರಣ.

| ೧ | ೨ | ೩ | ೪ | ೫ |
|---|---|---|---|---|
| ಸಾಧನೆ | ೧೯೧೧<br>೧೯೪೮ (ದ್ವಿ) | | | |
| ಯೂಟಿಲಿಟಿ (ಅಥವಾ ಉದರ ದರ್ಶನ) | ? | ? | ? | ೦-೦-೬ |
| ಹಿಂದುಗಳ ಮನುಷ್ಯತ್ವ | | | | III-೪೬೮ |

## ಕೃತಿಗಳ ಹೆಸರಿನಲ್ಲಿನ ವ್ಯತ್ಯಾಸಗಳು

| ಕರ್ಣಾಟಕ ಕವಿಚರಿತೆ ಇ. | .... | ಕನ್ನಡನುಡಿ |
|---|---|---|
| ೧) ಇಂದಿ**ರಾ** | .... | ಇಂದಿ**ರೆ** |
| ೨) ಕಪಾಲಕುಂಡ**ಲಾ** | .... | ಕಪಾಲ ಕುಂಡ**ಲ** |
| ೩) ಚಿರತ್ನ . . . | .... | ಚಿದ್ರತ್ನ . . . |
| ೪) ದೇಶಾಂತರ . . . **ಉಪನಿವೇಶಗಳು** | .... | ದೇಶಾಂತರ . . . **ಪುರುಷರು** |
| ೫) ನೀಲಾಗೀ**ತೆ** | .... | ನೀಲಾಗೀ**ತ** |
| ೬) ಪ್ರಾಚೀನ ಮತ್ತು ನವೀನ ಸ್ತ್ರೀಪುರುಷರು | .... | ಪ್ರಾಚೀನ ಮತ್ತು ನವೀನ**ಕಾಲದ** ಸ್ತ್ರೀ ಪುರುಷರು |
| ೭) ರಜ**ನಿ** | .... | ರಜ**ನೀ** |
| ೮) ರಾ**ಜ**ಸ್ಥಾನದ . . . | .... | ರಾ**ಜಾ**ಸ್ಥಾನದ . . . |
| ೯) ಲೋಕೈಕ ಚತುರ**ನ ಕಥೆ** | .... | ಲೋಕೈಕ ಚತುರ |
| ೧೦) ಶಾಕುಂತ**ಲ ಕಥೆ** | .... | ಶಾಕುಂತ**ಳಾ** |
| ೧೧) ಸ್ತ್ರೀಶಿಕ್ಷೆಯ **ಸಮಸ್ಯೆ** | .... | ಸ್ತ್ರೀ ಶಿಕ್ಷೆಯ **ರಹಸ್ಯ** |
| ೧೨) ಸುಶಿಕ್ಷಿತ**ರೆಂಬ** ಸಭ್ಯರಾದ . . . | .... | ಸುಶಿಕ್ಷಿತ ಸಭ್ಯರಾದ . . . |

---

ಪರಿಷತ್ತಿನ ಸರಸ್ವತೀ ಗ್ರಂಥಭಂಡಾರಕ್ಕೆ ಶ್ರೀ ವೈ. ಎಂ. ನರಸಿಂಹಮೂರ್ತಿ, ೩, ಶ್ರೀರಾಮಮಂದಿರಂ ರಸ್ತೆ, ಬಸವನಗುಡಿ, ಬೆಂಗಳೂರು-೪. ಅವರು ೨೩ ಅಮೂಲ್ಯವಾದ ಪುಸ್ತಕಗಳನ್ನು ದಾನಮಾಡಿರುತ್ತಾರೆ. ಈ ಉಪಕಾರಕ್ಕೆ ಪರಿಷತ್ತು ಅವರಿಗೆ ತುಂಬ ಕೃತಜ್ಞವಾಗಿದೆ.

# ವಿಮರ್ಶನರಂಗ

'ಸವಿತಾ' ಕಾದಂಬರಿ : ಲೇಖಕರು : ನಾಡಿಗೇರ ಕೃಷ್ಣರಾಯ; ಸುದರ್ಶನ ಪ್ರಕಟನೆ; ಪುಟ ೧೮೦; ಬೆಲೆ : ೨-೫೦.

ತಮ್ಮ ನಗೆಬರಹಗಳ ಮೂಲಕ ನಗೆಯ ಹೊನಲನ್ನೇ ಉಕ್ಕಿಸಬಲ್ಲ ಅನುಭವೀ ಲೇಖಕರಾದ ಶ್ರೀ ನಾಡಿಗೇರರು "ಸವಿತಾ" ಕಾದಂಬರಿಯಲ್ಲಿ ಹೆಣ್ಣೊಬ್ಬಳ ಬದುಕಿನಲ್ಲಿ ಪ್ರೀತಿ-ತ್ಯಾಗಗಳಿಗೆ ಸಂಬಂಧಿಸಿದಂತೆ ಎರಡು ಮಹೋನ್ನತ ಆಕಾಂಕ್ಷೆಗಳನ್ನು ಕುರಿತು ವಿವೇಚಿಸಿದ್ದಾರೆ. ಬಾಲ್ಯದಿಂದಲೂ ಡಾಕ್ಟರಾಗುವ ಹಂಬಲದಿಂದ ಕಡುಬಡತನ, ಅನಾನುಕೂಲತೆಗಳಿದ್ದರೂ ಹಲವರ ಸಹಕಾರ ಸಹಾಯಗಳಿಂದ ತನ್ನ ಈ ಪ್ರಥಮ ಆಕಾಂಕ್ಷೆಯನ್ನು ಈಡೇರಿಸಿಕೊಂಡು ವಿಜೇತಳಾದ ಡಾ|| ಸವಿತಾ ತಾನು ಪ್ರೀತಿಸಿದ ಏಕಮಾತ್ರ ವ್ಯಕ್ತಿ ರಂಗನಾಥನನ್ನು ವಿವಾಹವಾಗಲು ಅಸಮರ್ಥಳಾಗುತ್ತಾಳೆ. ಆದರೆ ತಾನು ಪ್ರೀತಿಸಿದವನ ಪತ್ನಿಯ ಜೀವವನ್ನೇ ತಾನು ಉಳಿಸಬೇಕಾಗಿ ಬಂದಾಗ, (ಅವಳನ್ನು ಉಳಿಸದೆ ರಂಗನಾಥನನ್ನು ಪಡೆಯುವ ಸಂಭವವಿದ್ದರೂ) ನಿಸ್ವಾರ್ಥತೆಗೆ ಬೆಲೆ ನೀಡಿ ಕರ್ತವ್ಯ ದೃಷ್ಟಿಯಿಂದ ರಂಗನಾಥನ ಹೆಂಡತಿ ರಮಾಳನ್ನು ಬದುಕಿಸಿ, ತಾನು ಸೋತು ಗೆಲ್ಲುತ್ತಾಳೆ. ಹೆಣ್ಣಿನ ನಿಸ್ವಾರ್ಥ ಮುಖದ, ಕರ್ತವ್ಯನಿಷ್ಠೆಯ ಈ ಮುಖದ ಪರಿಚಯ ಇಲ್ಲಿ ದೊರೆಯುತ್ತದೆ.

ನಾಡಿಗೇರರ ಸರಳ ಶೈಲಿ ಅಡೆತಡೆಯಿಲ್ಲದೆ ನೇರಸಾಗುತ್ತದೆ. ಅಷ್ಟೇ ವೇಗವಾಗಿ ಕತೆಯೂ ಮುಂದುವರೆಯುತ್ತದೆ. ಮೊದಲನೆಯ ಅಧ್ಯಾಯ ಮುಗಿದು ಎರಡನೆಯದು ಪ್ರಾರಂಭಿಸಿದಾಗ ಎಂಟು ವರ್ಷದ ಹುಡುಗ, ಐದುವರ್ಷದ ಹುಡುಗಿಯರು (ಸಿನೆಮಾಗಳಲ್ಲಿ ಇದ್ದಕ್ಕಿದ್ದಂತೆ ಬೆಳೆದು ಬಿಡುವ ?) ಇಂಜನಿಯರಿಂಗ್ ಮತ್ತು ಎಸ್. ಎಸ್. ಎಲ್. ಸಿ. ಓದುತ್ತಿರುವ ಯುವಕ-ಯುವತಿಯರಾಗಿರುತ್ತಾರೆಂಬುದು ಮತ್ತು ಪುಟ ೧೫೪ರಲ್ಲಿ ಸವಿತಾಳ ತಾಯಿ ಸತ್ತಿರುತ್ತಾಳೆ ಎಂಬುದು ಓದುಗನಿಗೆ ಸ್ವಲ್ಪ ಅಚ್ಚರಿ ತರುತ್ತದೆ. ತಾನು ಪ್ರೀತಿಸಿದ ಏಕೈಕ ವ್ಯಕ್ತಿಯಾದ ರಂಗನಾಥನ ವಿವಾಹ ಬೇರೊಬ್ಬಳೊಡನೆ ನಿಶ್ಚಿತವಾದಾಗಲೂ, ಅವಳ ಮನಸ್ಸಿನಲ್ಲಿ ನಡೆಯಬಹುದಾದ ಘರ್ಷಣೆಯನ್ನು ನಾಲ್ಕೇ ಸಾಲುಗಳಲ್ಲಿ (ಪುಟ ೧೨೭) ಮುಗಿಸದೆ ಹೆಚ್ಚು ಚಿತ್ರಿಸಿದ್ದರೆ ಸನ್ನಿವೇಶ ಕಳೆಕಟ್ಟುತ್ತಿತ್ತು. ಹಾಗೆಯೇ ರಂಗನಾಥನ ದೌರ್ಬಲ್ಯ ಸಹಜವೆ ಎಂಬ ಪ್ರಶ್ನೆಯೂ ಮೂಡುತ್ತದೆ. ಸವಿತಾಳ ಮನೆಯ ಸ್ಥಿತಿಗತಿಗಳ ಚಿತ್ರಣ, ಶ್ಯಾಮನ ವರ್ತನೆಗಳಲ್ಲಿ ಕೃತಕತೆಯ ಅಂಶವೇ ಹೆಚ್ಚೆನ್ನಿಸುತ್ತದೆ.

ಒಟ್ಟಿನಲ್ಲಿ ಇದೊಂದು ರಂಜನೀಯ ಕಾದಂಬರಿಯೆನ್ನಬಹುದು.

**ಚಿಟ್ಟೆಯಾಗಿ ಹಾರಿತು** (ಸಣ್ಣ ಕತೆಗಳ ಸಂಕಲನ) ಬರೆದವರು : ಎಂ. ಸಿ. ಪದ್ಮಾ ; ಪ್ರಕಾಶಕರು : ಶಾರದ ಮಂದಿರ, ರಾಮಯ್ಯರ್ ರಸ್ತೆ, ಮೈಸೂರು-೩. ಬೆಲೆ: ಸಾಧಾರಣ ಪ್ರತಿ ೩-೦೦ ಕ್ಯಾಲಿಕೊ ಪ್ರತಿ ರೂ. ೫-೦೦.

ಈ ಕಥಾ ಸಂಕಲನದಲ್ಲಿ ಲೇಖಕಿಯರು ಸ್ತ್ರೀಯರ ಮತ್ತು ಮಕ್ಕಳ ಅನೇಕ ಮಾನಸಿಕ ಹೊಯ್ದಾಟಗಳನ್ನು ಚಿತ್ರಿಸಿದ್ದಾರೆ. ತನ್ನ ಹದಿಮೂರನೆ ವಯಸ್ಸಿನಲ್ಲಿ ಆದ ಅತ್ಯಾಚಾರದಿಂದ ಹೆದರಿ ಕಂಗಾಲಾಗಿದ್ದ ರಮಾಳ ಚಿತ್ರ, ಹಾಗೂ ತನ್ನ ಗಂಡ ಕುಳ್ಳಾಗಿದ್ದು ತಾನು ಎತ್ತರವಾಗಿದ್ದುದರಿಂದ ಎಲ್ಲರ ಅವಹೇಳನಕ್ಕೆ ಗುರಿಯಾಗಿ, ಪ್ರೀತಿಸುವ ಗಂಡನಿದ್ದೂ, ಸುಖಜೀವನದ ಎಲ್ಲ ಸೌಕರ್ಯಗಳಿದ್ದರೂ ಸಹ ಮೊದಲ ಪ್ರಸವ ಕಾಲದಲ್ಲೇ ಅಸು ನೀಗಿದ ಇಜ್ಜೋಡಿನ ಸಾತು. ತಾನು ಪ್ರೀತಿಸಿದ ಬೆಕ್ಕು ಶೀಲಾಳನ್ನು ಅಚಾತುರ್ಯದಿಂದ ಕೊಂದ ಗಂಡನ ಬಗ್ಗೆ ಜಿಗುಪ್ಸೆ ಹೊಂದಿ, ಬೆಕ್ಕನ್ನು ಕೊಂದ ಪಾಪ ಏಳೇಳು ಜನ್ಮಕ್ಕೂ ಹೋಗಲ್ಲಾ ಎಂದು ಪಶ್ಚಾತ್ತಾಪದಿಂದ ಕುದಿದ ನರ್ಮದಾ ನೇಣು ಹಾಕಿಕೊಂಡು ಸತ್ತು ಶೀಲಾಳನ್ನು ಸೇರುತ್ತಾಳೆ. ಹುಡುಗ ರಾಮು ಕೆಂಪು ಬಸ್ಸನ್ನು ಕಂಡು ತಾನು ಅದರಲ್ಲಿ ಹೋಗಬಾರದೆ ಎಂದು ಅನೇಕ ದಿನಗಳು ಹಂಬಲಿಸಿ ಕೊನೆಗೆ ಅವನ ಆಸೆ ನೆರವೇರುವ ಸಂದರ್ಭದಲ್ಲಿ ಆಗ ಬಸ್ಸು ಅವನಷ್ಟೇ ಎತ್ತರದ ಹುಡುಗನ ಪ್ರಾಣವನ್ನು ತೆಗೆದಾಗ ಆ ಬಸ್ಸು ರಾಕ್ಷಸನಂತೆ ಅನಿಸಿದಾಗ ಅಚ್ಚರಿಯಿಲ್ಲ. ಕಳ್ಳನೆಂದರೆ ಕಪ್ಪಾಗಿ ಕೈಯಲ್ಲಿ ಚೂರಿ ಹಿಡಿದು ಜನರನ್ನು ಹಿಂಸಿಸುವನು ಎಂದು ತಿಳಿದಿದ್ದ ಮಕ್ಕಳಿಗೆ, ತಮ್ಮಂತೆಯೇ ಇರುವ ತಮ್ಮ ಅಣ್ಣನೂ ಒಬ್ಬ ಕಳ್ಳನೆಂದು ತಿಳಿದಾಗ, ಕಳ್ಳ ತಮ್ಮ ಅಣ್ಣ ತಮ್ಮ ಯಾರು ಬೇಕಾದರೂ ಆಗಬಹುದು ಎಂದುಕೊಂಡರು.

ಲೇಖಕಿಯರ ಬರವಣಿಗೆ ಹೃದಯಸ್ಪರ್ಶಿಯಾಗಿದೆ. ಇದು ಹದಿಮೂರು ಕತೆಗಳ ಉತ್ತಮ ಸಂಕಲನ.

**ಸುಮನಾ**

# ಸ್ವೀ ಕಾ ರ

## ಜೀವನ ಚರಿತ್ರೆ

ರಂಗದರ್ಶನ; ಲೇ: ಡಾ|| ವಸಂತ ದೇಸಾಯಿ; ಪ್ರ: ಶ್ರೀ ಮುತಾಲಿಕ ರಂಗಣ್ಣ ಷಷ್ಟ್ಯಬ್ಧಿ ಸತ್ಕಾರ ಸಮಿತಿ, ಧಾರವಾಡ; ಪುಟ: ೧೫+೧೨೨; ಆಕಾರ: ಕ್ರೌನ್ ಅಷ್ಟ ದಳ; ಬೆಲೆ: ರೂ. ೨-೦೦, ೧೯೬೯.

ಪ್ರಭುಯೋಗಿ ಅಚ್ಯುತರು; ಲೇ.: ಸ್ವಾಮಿ ಜಯ ತೀರ್ಥ; ಪ್ರ: ಅಚ್ಯುತಾಶ್ರಮ, ಉರವಕೊಂಡ, ಅನಂತಪುರ ಜಿಲ್ಲೆ; ಪುಟ: ೨+೯೭; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೦೦, ೧೯೬೮.

ಗಾಂಧಿ-ತಿಲಕ್; ಲೇ: ಬಸವಯ್ಯ ಮತ್ತು ರಾಮ ಸ್ವಾಮಿ ಅಯ್ಯಂಗಾರ್ ಕೆ. ಟಿ.; ಪ್ರ: ಮೋಹನ ಪ್ರಕಾ ಶನ, ಕೃಷ್ಣ ಮೂರ್ತಿ ಪುರಂ, ಮೈಸೂರು-೪; ಪುಟ: ೧೨+೨೧೬; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೪-೫೦, ೧೯೬೮.

## ತತ್ವ

ಕಾಯ ಕಲ್ಪ ಮತ್ತು ಮುಕ್ತಿ ಸಾಧನೆ; ಲೇ: ಸ್ವಾಮಿ ಜಯತೀರ್ಥ; ಪ್ರ: ಶ್ರೀ ಅಚ್ಯುತ ತತ್ವ ಸೇವಾ ಸಮಿತಿ; ಉರವಕೊಂಡ; ಪುಟ: ೬+೧೧೬; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧೯೬೯.

ಅಚ್ಚುತ ತತ್ವ ದರ್ಶನ; ಲೇ: ಸ್ವಾಮಿ ಜಯತೀರ್ಥ; ಪ್ರ: ಅಚ್ಯುತಾಶ್ರಮ, ಉರವಕೊಂಡ, ಅನಂತಪುರ ಜಿಲ್ಲೆ; ಪುಟ: ೫೧; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೦೦, ೧೯೬೧.

ಶ್ರೀ ಗುರುಕೃಪೆ; ಲೇ: ಗಂಗಾಧರ ಶಾಸ್ತ್ರಿ ಬಿ.; ಪ್ರ: ಶ್ರೀ ಕೆ. ವಿ. ಕುಮಾರಸ್ವಾಮಿ, ಪಿ. ಎಲ್. ಟಿ. ಆಫೀಸರು; ಬೆಂಗಳೂರು; ಪುಟ: ೧೦+೩೯; ಆಕಾರ: ಕ್ರೌನ್ ಅಷ್ಟ ದಳ, ಬೆಲೆ: ೦-೭೫, ೧೯೬೭.

## ಮಾಸಿಕ, ತ್ರೈಮಾಸಿಕ ಸಂಚಿಕೆಗಳು

ಪ್ರಜ್ಞೆ ೨, ೩, ೪ ಸಂಚಿಕೆಗಳು; ದ್ವೈಮಾಸಿಕ ಸಂಕಲನ; ಸಂಪಾದಕ: ಮಾಧವಕುಲಕರ್ಣಿ; ಪ್ರ: ಪ್ರಜ್ಞೆ ಕಾರ್ಯಾ ಲಯ, ವೆಂಕಟೇಶನಿವಾಸ, ನ್ಯೂ ಎಕ್ಸ್‌ಟೆನ್ಷನ್, ಗದಗ-೧; ಪುಟಗಳು: ೬೮, ೬೫, ೭೬; ಬೆಲೆ: ರೂ. ೬-೦೦ ವಾರ್ಷಿಕ ಚಂದಾ, ೧೯೬೮.

ಅಚ್ಯುತ ಪ್ರಭ; (ತ್ರೈಮಾಸಿಕ ಪತ್ರಿಕೆ); ಸಂಪಾದಕ: ರಾಮಣ್ಣ, ನೇಮಕಲ್ಲು; ಪ್ರ: ಅಚ್ಚುತಾಶ್ರಮ, ಉರವ ಕೊಂಡ, ಅನಂತಪುರ ಜಿಲ್ಲೆ; ಪುಟ: ४೯; ಬೆಲೆ: ರೂ. ೪-೦೦ ವಾರ್ಷಿಕಚಂದಾ, ೧೯೬೯.

ಗುರುಕುಲ (ಮಾಸಪತ್ರಿಕೆ); ಸಂಪಾದಕ: ಉಜ್ಜನಪ್ಪ, ಜಿ. ಎಸ್.; ಪ್ರ: ಗುರುಕುಲ ಪ್ರಕಾಶನ, ಶ್ರೀ ಬೃಹನ್ಮಠ ಪ್ರೌಢಶಾಲೆ, ಚಿತ್ರದುರ್ಗ; ಪುಟ: ೮೦; ಬೆಲೆ: ರೂ. ೬-೫೦ ವಾರ್ಷಿಕ ಚಂದಾ, ೧೯೬೯.

ಕರ್ಣಾಟಕ ಸಂಘ ದೂರವಾಣಿನಗರ; (ವಾರ್ಷಿಕ ಸಂಚಿಕೆ) ಕರ್ಣಾಟಕ ಸಂಘ ದೂರವಾಣಿ ನಗರ, ಬೆಂಗ ಳೂರು-೧೬; ಪುಟ: ೫೨; ಬೆಲೆ: ರೂ. ೧೯೬೯.

## ಇತರ ಪುಸ್ತಕಗಳು

ಉಪಾಯನ ಕೃತಿ ಕರಂಡ; ಲೇ: ಕಾಶಿವಿಶ್ವನಾಥಶೆಟ್ಟಿ; ಪ್ರ: ಕುವೆಂಪು ಸನ್ಮಾನ ಸಮಿತಿ, ಚಿಕ್ಕಮಗಳೂರು; ಪುಟ; ೨೬೬; ೧೯೬೯.

ಕೊಪ್ಪರಿಗೆ ಚಿನ್ನ; ಲೇ: ಭಾರತಿಸುತ; ಪ್ರ: ಮೋಹನ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು-೪; ಪುಟ: ೩೪; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೦-೭೫, ೧೯೬೭.

ಶ್ರೀ ವೈಷ್ಣವ ದರ್ಶನ, ಸತ್ಸಂಪ್ರದಾಯನಿಷ್ಠೆ ಮತ್ತು ಶ್ರೀ ವೇದಾಂತಾಚಾರ್ಯರು; ಲೇ: ಶ್ರೀನಿವಾಸಯ್ಯಂ ಗಾರ್; ಪ್ರ: "ಪದ್ಮಾಲಯ", ಬಂಧುಗಳು ಮತ್ತು ಶ್ರೀ ರಾಮಾನುಜ ಧರ್ಮ ಪ್ರಚಾರ ಸಂಘ, ಮೈಸೂರು ಶಾಖೆ, ಶ್ರೀ ಗೋದಾಮಂದಿರ, ಮಲ್ಲೇಶ್ವರಂ, ಬೆಂಗ ಳೂರು-೩; ಪುಟ: ೨೦+೨; ಬೆಲೆ: ರೂ. ೦-೫೦, ೧೯೬೯.

ಹಿಂದೂ ದತ್ತು ಸ್ವೀಕಾರ, ಜೀವನಾಂಶ ಮತ್ತು ಪೋಷಣೆ; ಲೇ: ರಾಮರಾವ್, ಎಂ. ಎಸ್.; ಪ್ರ: ಮೋಹನ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು-೪: ಪುಟ: ೩೬; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೦-೭೫, ೧೯೬೮.



# ಪರಿಷತ್ತಿನ ಸುದ್ದಿಗಳು

## ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿ

೧೯೬೪ನೇ ಮೇ ೧೧ರಲ್ಲಿ ಪರಿಷದಧ್ಯಕ್ಷರ ಚುನಾವಣೆ ನಡೆದು ಶ್ರೀ ಜಿ. ನಾರಾಯಣ ಅವರು ಅಧ್ಯಕ್ಷರಾಗಿ ಚುನಾಯಿತರಾಗಿ ಆ ದಿನವೇ ಅಧಿಕಾರ ವಹಿಸಿಕೊಂಡರು. ಅಧ್ಯಕ್ಷರು ನಾಮಕರಣಮಾಡಿಕೊಂಡ ಇಬ್ಬರು ಗೌರವ ಕಾರ್ಯದರ್ಶಿಗಳಾದ ಶ್ರೀ ಅ. ರಾ. ಮಿತ್ರ ಮತ್ತು ಶ್ರೀ ಹಂಪ ನಾಗರಾಜಯ್ಯ ಮತ್ತು ಗೌರವ ಕೋಶಾಧಿಕಾರಿಗಳಾದ ಶ್ರೀ ಎನ್. ವರದರಾಜನ್ ಇವರುಗಳು ಜೂನ್ ೯ರಂದು ಅಧಿಕಾರ ವಹಿಸಿಕೊಂಡರು. ಜೂನ್ ತಿಂಗಳಿನಲ್ಲಿ ಯಾವ ಯಾವ ಜಿಲ್ಲೆಗಳಲ್ಲಿ ಐವತ್ತು ಮಂದಿಗಿಂತ ಹೆಚ್ಚುಮಂದಿ ಸದಸ್ಯರಿರುವರೋ ಆ ಜಿಲ್ಲೆಗಳಲ್ಲಿ ಪ್ರತಿನಿಧಿಗಳ ಚುನಾವಣೆ ನಡೆದು ಸದಸ್ಯರ ಆಯ್ಕೆ ನಡೆದುವು. ಹಾಗೆ ಐವತ್ತು ಮಂದಿ ಸದಸ್ಯರಿಲ್ಲದಿದ್ದ ಜಿಲ್ಲೆಗಳ ಜಿಲ್ಲಾ ಪ್ರತಿನಿಧಿಗಳನ್ನೂ, ಸದಸ್ಯಸಂಸ್ಥೆಯ ಪ್ರತಿನಿಧಿಗಳನ್ನೂ, ಒಬ್ಬ ಹೊರನಾಡ ಕನ್ನಡಿಗರ ಪ್ರತಿನಿಧಿಯನ್ನೂ ಮತ್ತು ವಿಶೇಷ ನಾಮಕರಣ ಪ್ರತಿನಿಧಿಗಳಿಬ್ಬರನ್ನೂ, ನಿಬಂಧನೆಗನುಸಾರವಾಗಿ ಅಧ್ಯಕ್ಷರು ನಾಮಕರಣ ಮಾಡಿದರು. ಅಧ್ಯಕ್ಷರ ಪ್ರಾರ್ಥನೆಯಂತೆ ಬೆಂಗಳೂರು ಮೈಸೂರು ಕರ್ಣಾಟಕ ವಿಶ್ವವಿದ್ಯಾನಿಲಯಗಳವರು ತಮ್ಮ ಪ್ರತಿನಿಧಿಗಳ ಹೆಸರುಗಳನ್ನು ಸೂಚಿಸಿದ್ದಾರೆ. ಮೈಸೂರು ಸಂಸ್ಥಾನದ ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಗಳು ಸಮಿತಿಯಲ್ಲಿರಲು ಒಪ್ಪಿಗೆಯನ್ನು ಸೂಚಿಸಿದ್ದಾರೆ. ಪರಿಷತ್ತಿನ ಹಿಂದಿನ ಅಧ್ಯಕ್ಷರೂ ಕೂಡ ನಿಯಮಗಳಂತೆ ಈ ಸಮಿತಿಯಲ್ಲಿರುತ್ತಾರೆ. ಹೀಗೆ ವ್ಯವಸ್ಥಿತವಾಗಿ ನಿಯಾಮಕವಾದ ಕಾರ್ಯಸಮಿತಿಯ ಸದಸ್ಯರ ಹೆಸರುಗಳು ಈ ಕೆಳಗಿನಂತೆ ಇರುತ್ತವೆ :

ಅ. ಅಧ್ಯಕ್ಷರು

(೧) ಶ್ರೀ ಜಿ. ನಾರಾಯಣ

ಆ. ಕಾರ್ಯದರ್ಶಿಗಳು

(೨) ಶ್ರೀ ಅ. ರಾ. ಮಿತ್ರ

(೩) ಶ್ರೀ ಹಂಪ. ನಾಗರಾಜಯ್ಯ

ಇ. ಕೋಶಾಧಿಕಾರಿ

(೪) ಶ್ರೀ ಎನ್. ವರದರಾಜನ್

ಈ. ಜಿಲ್ಲಾ ಪ್ರತಿನಿಧಿಗಳು ಮತ್ತು ಜಿಲ್ಲೆಯ ಹೆಸರು :

(೫) ಡಾ|| ಎಸ್. ರಾಮಕೃಷ್ಣ ಅವರು, ರಾಯಚೂರು

(೬) ಶ್ರೀ ತವಗ ಭೀಮಸೇನರಾಯರು, ಗುಲ್ಬರ್ಗ

(೭) ಶ್ರೀ ಎನ್. ಎಸ್. ಹೆಗ್ಗಡೆಯವರು, ಉತ್ತರ ಕನ್ನಡ

(೮) ಶ್ರೀ ಆರ್. ಎಸ್. ಆರಾಧ್ಯ ಅವರು, ತುಮಕೂರು

(೯) ಶ್ರೀ ಕೆ. ಕಾಶೀನಾಥ ಶಾಸ್ತ್ರಿಗಳು, ಕೋಲಾರ

(೧೦) ಶ್ರೀ ಕಾ. ನಾ. ಶ್ರೀನಿವಾಸ್ ಅವರು, ಚಿತ್ರದುರ್ಗ

(೧೧) ಶ್ರೀ ಎಚ್. ಬಿ. ಜ್ವಾಲನಯ್ಯನವರು, ಹಾಸನ

(೧೨) ಶ್ರೀ ಮಿರ್ಜಿ ಅಣ್ಣಾರಾಯರು, ಬೆಳಗಾಂ

(೧೩) ಶ್ರೀ ಸಮೇತನಹಳ್ಳಿ ರಾಮರಾಯರು, ಮಂಡ್ಯ

(೧೪) ಶ್ರೀ ಸಂಗಮನಾಥ ಜಿ. ಹಂಡಿ ಅವರು, ಬಿಜಾಪುರ

(೧೫) ಶ್ರೀ ಎಚ್. ಎಂ. ಶಂಕರನಾರಾಯಣ ರಾಯರು, ಮೈಸೂರು

(೧೬) ಶ್ರೀ ಎಸ್. ಕೆ. ಮಹಾಬಲರಾಯರು ಚಿಕ್ಕಮಗಳೂರು

(೧೭) ಶ್ರೀ ಇದಿನಬ್ಬ ಅವರು, ದಕ್ಷಿಣ ಕನ್ನಡ

(೧೮) ಶ್ರೀ ಕೆ. ವಿರೂಪಾಕ್ಷಗೌಡರು, ಬಳ್ಳಾರಿ

(೧೯) ಶ್ರೀ ಸರ್ಜಾ ಚಂದ್ರಶೇಖರಯ್ಯ, ಶಿವಮೊಗ್ಗ

(೨೦) ಶ್ರೀ ಡಿ. ಜೆ. ಪದ್ಮನಾಭ, ಕೊಡಗು

(೨೧) ಎಂ. ಎಸ್. ಸುಂಕಾಪುರ, ಧಾರವಾಡ

(೨೨) ಶ್ರೀ ಹನುಮಂತಪ್ಪ, ಬೀದರ್

(೨೩) ಶ್ರೀ ಎಚ್. ಎಸ್. ಸೀತಾರಾಂ, ಬೆಂಗಳೂರು

(೨೪) ಶ್ರೀ ಅ. ನ. ಕೃಷ್ಣರಾಯರು, ಬೆಂಗಳೂರು ನಗರ

(೨೫) ಶ್ರೀಮತಿ ಕೆ. ಟಿ. ಬನಶಂಕರಮ್ಮನವರು, ಬೆಂಗಳೂರು ನಗರ

(೨೬) ಶ್ರೀ ಎಂ. ಫಜ್ಲುಲ್ ಹಸನ್ ಅವರು, ಬೆಂಗಳೂರು ನಗರ

ಉ. ವಿದ್ಯಾಧಿಕಾರಿಗಳು

(೨೭) ಶ್ರೀ ಎಸ್. ವಿ. ಜೇವೂರ್, ಮೈಸೂರು ಸರ್ಕಾರದ ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಗಳು

ಊ. ವಿಶ್ವವಿದ್ಯಾನಿಲಯದ ಪ್ರತಿನಿಧಿಗಳು

(೨೮) ಡಾ|| ಆರ್. ಎಸ್. ಮುಗಳಿಯವರು, ಬೆಂಗಳೂರು ವಿಶ್ವವಿದ್ಯಾನಿಲಯ

(೨೯) ಡಾ|| ದೇ. ಜವರೇಗೌಡರು, ಮೈಸೂರು ವಿಶ್ವವಿದ್ಯಾನಿಲಯ

(೩೦) ಪ್ರೊ|| ಆರ್. ವೈ. ಧಾರವಾಡಕರ್, ಕರ್ಣಾಟಕ ವಿಶ್ವವಿದ್ಯಾನಿಲಯ

ಋ. ಪತ್ರಿಕಾ ಸಂಘದ ಅಧ್ಯಕ್ಷರು

(೩೧) ಶ್ರೀ ಬಿ. ವಿ. ವೈಕುಂಠರಾಜು, ಮೈಸೂರು ಪತ್ರಿಕಾ ಸಂಘದ ಅಧ್ಯಕ್ಷರು

ೠ. ಸದಸ್ಯಸಂಸ್ಥೆಯ ಪ್ರತಿನಿಧಿ

(೩೨) ಶ್ರೀ ಜಿ. ಕೆ. ಸತ್ಯ, ಭಾರತೀಯ ಕನ್ನಡಿಗರ ಸಂಘ, ಬೆಂಗಳೂರು

ಎ. ಹೊರನಾಡ ಕನ್ನಡಿಗರ ಪ್ರತಿನಿಧಿ

(೩೩) ಶ್ರೀ ಕೆ. ಬಿ. ಪೂರ್ವಾಚಾರ್ಯ, ಸೊಲ್ಲಾಪುರ

ಏ. ವಿಶೇಷ ನಾಮಕರಣ ಪ್ರತಿನಿಧಿಗಳು

(೩೪) ಡಾ|| ಎಚ್. ನರಸಿಂಹಯ್ಯ, ನ್ಯಾಷನಲ್ ಕಾಲೇಜು, ಬೆಂಗಳೂರು

(೩೫) ಶ್ರೀಮತಿ ಎಸ್. ಪ್ರಮೀಳಾ, ಅಡ್ವೊಕೇಟ್, ಬೆಂಗಳೂರು

ಐ. ಪರಿಷತ್ತಿನ ಹಿಂದಿನ ಅಧ್ಯಕ್ಷರು

(೩೬) ಪ್ರೊ. ಜಿ. ವೆಂಕಟಸುಬ್ಬಯ್ಯನವರು

## ಕಾರ್ಯಸಮಿತಿ ಸಭೆ :

ಹೊಸದಾಗಿ ರಚಿತವಾಗಿರುವ ಕಾರ್ಯಸಮಿತಿಯ ಸಭೆ ದಿನಾಂಕ ೩-೮-೧೯೬೯ನೆಯ ಭಾನುವಾರ ಬೆಳಗ್ಗೆ ೧೦ ಗಂಟೆಗೆ ಸೇರುವುದಾಗಿದೆ. ಅದೇ ಸಂಜೆ ೪ ಗಂಟೆಗೆ ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ ಕಾರ್ಯಕ್ರಮದ ಉದ್ಘಾಟನಾ ಸಮಾರಂಭವನ್ನು ನೆರವೇರಿಸಲು ಏರ್ಪಾಟು ಮಾಡಿದೆ.

## ಗಡಿಸಮಸ್ಯೆ – ಮಹಾಜನ ವರದಿಯ ಬಗ್ಗೆ ಪರಿಷತ್ತಿನ ನಿಯೋಗ

ಅಖಿಲ ಭಾರತ ಕಾಂಗ್ರೆಸ್ ಕಮಿಟಿ ಬೆಂಗಳೂರಿನಲ್ಲಿ ಸೇರಿದ್ದ ಅವಕಾಶವನ್ನು ಉಪಯೋಗಿಸಿಕೊಂಡು, ದಿನಾಂಕ ೧೧-೭-೧೯೬೯ರಂದು ಪರಿಷದಧ್ಯಕ್ಷ ಶ್ರೀ ಜಿ. ನಾರಾಯಣ ಅವರ ನೇತೃತ್ವದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ನಿಯೋಗವು ಕೇಂದ್ರ ಸರ್ಕಾರದ ಪ್ರಧಾನಮಂತ್ರಿಯವರಾದ ಶ್ರೀಮತಿ ಇಂದಿರಾ ಗಾಂಧಿಯವರನ್ನು ಕಂಡು, ಮಹಾಜನ ವರದಿಯನ್ನು ಒಪ್ಪಿಕೊಳ್ಳುವ ಆವಶ್ಯಕತೆಯನ್ನು ವಿವರಿಸಿ ಆ ಸಂಬಂಧವಾಗಿ ಒಂದು ಮನವಿಯನ್ನು ಸಲ್ಲಿಸಿತು. ಪ್ರಧಾನ ಮಂತ್ರಿಯವರು ಮನವಿಯನ್ನು ಸಹಾನುಭೂತಿ

ಯಿಂದ ಪರಿಶೀಲಿಸಿ ತಕ್ಕ ಕಾರ್ಯಕ್ರಮ ತೆಗೆದುಕೊಳ್ಳುವುದಾಗಿ ಆಶ್ವಾಸನೆ ಕೊಟ್ಟರು. ಈ ನಿಯೋಗದಲ್ಲಿ ಪ್ರೊ|| ಜಿ. ವೆಂಕಟಸುಬ್ಬಯ್ಯನವರು, ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು, ಶ್ರೀ ತಿ. ತಾ. ಶರ್ಮರವರು ಮತ್ತು ಶ್ರೀ ಶ್ರೀನಿವಾಸ ರಾವ್ ಮಂಗಳವೇಡೆ ಅವರು ಸೇರಿದ್ದರು.

## ಮನವಿಯ ಮುಖ್ಯಾಂಶಗಳು

ಮೈಸೂರು ಮಹಾರಾಷ್ಟ್ರ ಗಡಿ ವಿವಾದದ ಪರಿಶೀಲನೆಗಾಗಿ ಭಾರತದ ಕೇಂದ್ರ ಸರ್ಕಾರವು, ಮೈಸೂರು ಮತ್ತು ಮಹಾರಾಷ್ಟ್ರ ಸರ್ಕಾರಗಳ ಒಪ್ಪಿಗೆ ಪಡೆದು, ಮಹಾಜನ ನಿಯೋಗವನ್ನು ರಚಿಸಿತು. ಶ್ರೀ ಮಹಾಜನ್ ಅವರು ತಮ್ಮ ನಿರ್ಣಯವನ್ನು ಆಗಸ್ಟ್ ೧೯೬೭ ರಲ್ಲಿ ಕೇಂದ್ರ ಸರ್ಕಾರಕ್ಕೆ ಒಪ್ಪಿಸಿದರು. ಹೀಗೆ ವರದಿಯೊಪ್ಪಿಸಿದ ಎರಡು ವರ್ಷಗಳು ಕಳೆಯುತ್ತಾ ಬಂದಿದ್ದರೂ ಕೇಂದ್ರ ಸರ್ಕಾರ ಅದನ್ನು ಕಾರ್ಯಗತ ಮಾಡಲು ತಕ್ಕ ಕಾರ್ಯಕ್ರಮಗಳನ್ನು ತೆಗೆದುಕೊಂಡಿಲ್ಲ. ಈ ನಿಧಾನ ಮತ್ತು ಮಹಾರಾಷ್ಟ್ರದ ಮತ್ತು ಹೊರಗಿನ ಜವಾಬ್ದಾರಿಯುತರಾದ ನಾಯಕರ ಹೇಳಿಕೆಗಳಿಂದ ವರದಿಯು ಕಾರ್ಯಗತವಾಗುವ ಬಗ್ಗೆ ಅನುಮಾನಕ್ಕೆ ಆಸ್ಪದವಾಗಿದೆ. ಕನ್ನಡಿಗರ ಪರವಾಗಿ ಕನ್ನಡ ಸಾಹಿತ್ಯ ಪರಿಷತ್ತು ಈ ನಿಧಾನದ ಬಗ್ಗೆ ತನ್ನ ತೀವ್ರ ಕಳವಳವನ್ನು ವ್ಯಕ್ತಪಡಿಸುವುದಲ್ಲದೆ, ಕೇಂದ್ರ ಸರ್ಕಾರವು ಈ ಮಹಾಜನ ವರದಿಯನ್ನು ಕಾರ್ಯಗತ ಮಾಡಲು ಈ ಕೂಡಲೇ ಆವಶ್ಯಕವಾದ ಕ್ರಮವನ್ನು ತೆಗೆದುಕೊಳ್ಳಬೇಕೆಂದು ಆಗ್ರಹ ಪೂರ್ವಕವಾಗಿ ವಿನಂತಿಸಿಕೊಳ್ಳುತ್ತದೆ.

ಈ ಮಹಾಜನ ವರದಿಯನ್ನು ಕಾರ್ಯಗತ ಮಾಡುವುದರಿಂದಲೇ ಕನ್ನಡಿಗರಿಗೆ ಸಂಪೂರ್ಣ ನ್ಯಾಯ ದೊರಕಿಸಿ ಕೊಟ್ಟಂತಾಗುವುದಿಲ್ಲವೆಂಬುದು ಪರಿಷತ್ತಿನ ಅಭಿಪ್ರಾಯವಾಗಿದೆ. ಭಾಷಾ ದೃಷ್ಟಿಯಿಂದಲೂ ಸಾಂಸ್ಕೃತಿಯ ದೃಷ್ಟಿಯಿಂದಲೂ ಮೈಸೂರಿನಲ್ಲಿರುವ ಕನ್ನಡಿಗರೊಡನೆ ಒಂದುಗೂಡಬೇಕಾದ ಬಹುಮಂದಿ ಕನ್ನಡಿಗರು ಉತ್ತರದ ಸೊಲ್ಲಾಪುರದಲ್ಲಿಯೂ ದಕ್ಷಿಣದ ಕಾಸರಗೋಡಿನಲ್ಲಿಯೂ ಮತ್ತು ಮಹಾರಾಷ್ಟ್ರ, ಆಂಧ್ರ, ಮದರಾಸು ಮತ್ತು ಕೇರಳ ಪ್ರಾಂತಗಳಿಗೆ ಸೇರಿದ ಮೈಸೂರಿನ ಗಡಿ ಪ್ರಾಂತದ ಅನೇಕ ಪಟ್ಟಣಗಳಲ್ಲಿಯೂ ಇದ್ದು ಮೈಸೂರಿನ ಹೊರಗಡೆ ಇರುತ್ತಾರೆ. ಈ ಪ್ರದೇಶಗಳನ್ನು ಮೈಸೂರಿಗೆ ಬದಲಾಯಿಸುವ ಬಗ್ಗೆ ತಕ್ಕ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕಾಗಿರುತ್ತದೆ. ಆದರೂ ಈಗಿನ ಪ್ರಸಕ್ತ ಅನಿಶ್ಚಿತ ಸ್ಥಿತಿ ಕೊನೆಗಾಣಬೇಕೆಂಬುದು ಸಾಹಿತ್ಯ ಪರಿಷತ್ತಿನ ಉದ್ದೇಶವಾಗಿದೆ.

ಮೈಸೂರು ಸರ್ಕಾರದವರು ಮಹಾಜನ ವರದಿಯನ್ನು ಒಪ್ಪಿಕೊಂಡು ಅದನ್ನು ಕೂಡಲೇ ಕಾರ್ಯಗತ ಮಾಡಬೇಕೆಂದು ಒತ್ತಾಯಪಡಿಸುತ್ತಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಮೈಸೂರು ಸರ್ಕಾರದ ಈ ನಿಲುವನ್ನು ಸಂಪೂರ್ಣವಾಗಿ ಅನುಮೋದಿಸುತ್ತದೆ.

ನ್ಯಾಯ ಮತ್ತು ಸಮಾನತೆಯ ದೃಷ್ಟಿಯಿಂದಲೂ, ಮನಸ್ಸಿನ ಆತಂಕದ ದುಷ್ಪರಿಣಾಮಗಳನ್ನು ನಿವಾರಿಸುವ ದೃಷ್ಟಿಯಿಂದಲೂ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರತಿನಿಧಿಗಳ ಈ ನಿಯೋಗವು ಮಹಾಜನ ವರದಿಯನ್ನು ಶೀಘ್ರವಾಗಿ ಕಾರ್ಯಗತ ಮಾಡಬೇಕಾದ ಆವಶ್ಯಕತೆಯನ್ನು ಕೇಂದ್ರ ಸರ್ಕಾರಕ್ಕೆ ಗಮನಕ್ಕೆ ತಂದು ಒತ್ತಾಯಪಡಿಸುವುದಲ್ಲದೆ ಕೇಂದ್ರದ ಪ್ರಧಾನ ಮಂತ್ರಿಗಳೂ, ಉಪ ಪ್ರಧಾನ ಮಂತ್ರಿಗಳೂ, ಮತ್ತು ಗೃಹ ಮಂತ್ರಿಗಳೂ ಈ ದಿಶೆಯಲ್ಲಿ ಆವಶ್ಯಕವಾದ ಕ್ರಮವನ್ನು ಈ ಕೂಡಲೇ ತೆಗೆದುಕೊಳ್ಳಬೇಕೆಂದು ಆಗ್ರಹ ಪೂರ್ವಕವಾಗಿ ವಿನಂತಿಸಿಕೊಳ್ಳುತ್ತದೆ.

## ಶ್ರೀ ಸೌಮ್ಯನಾಮ ಸಂವತ್ಸರದ ಸಾಹಿತ್ಯೋತ್ಸವ

ಸೌಮ್ಯನಾಮ ಸಂವತ್ಸರದ ಸಾಹಿತ್ಯೋತ್ಸವವು ದಿನಾಂಕ ೧೭-೭-೧೯೬೯ರಿಂದ ೨೦-೭-೧೯೬೯ರ ವರೆಗೆ

ನಾಲ್ಕು ದಿನಗಳ ಪರ್ಯಂತ ಶ್ರೀ ಕೃಷ್ಣರಾಜ ಪರಿಷನ್ಮಂದಿರ ದಲ್ಲಿ ವಿಜೃಂಭಣೆಯಿಂದ ನಡೆಯಿತು.

ದಿನಾಂಕ ೧೭ರಂದು ಶ್ರೀ ಹಂಪ. ನಾಗರಾಜಯ್ಯನವರು ಸ್ವಾಗತವನ್ನು ಕೋರಿ ನಾಲ್ಕು ದಿವಸಗಳ ಕಾರ್ಯಕ್ರಮದ ರೂಪರೇಖೆಗಳನ್ನು ವಿವರಿಸಿದರು. ಪರಿಷದಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ಸಮಾರಂಭದ ಉದ್ಘಾಟನೆ ಯನ್ನು ನೆರವೇರಿಸುತ್ತಾ ಈಗ್ಗೆ ೩೫ ವರ್ಷಗಳ ಹಿಂದೆಯೇ ಆರಂಭವಾದ ಈ ಸಾಹಿತ್ಯೋತ್ಸವದ ಅಂದಿನ ವೈಭವವನ್ನು ಸ್ಮರಿಸಿಕೊಂಡು ಇದನ್ನು ಆರಂಭಿಸಿದ ಹಿರಿಯರ ಉದ್ದೇಶಕ್ಕೆ ಚ್ಯುತಿಬಾರದಂತೆ ಈ ಉತ್ಸವವನ್ನು ಮುಂದುವರೆಸಿಕೊಂಡು ಹೋಗಬೇಕಾದ ಅಗತ್ಯವನ್ನು ತಿಳಿಯಪಡಿಸಿದರು. ಈ ವರ್ಷದ ಉತ್ಸವವು ಕಾಲಮಿಾರಿ ನಡೆದುದಕ್ಕೆ ವಿಷಾದಿಸಿ ಮುಂದಿನ ವರ್ಷದಿಂದ ಸಕಾಲಕ್ಕೆ ನಡೆಸಲಾಗುವುದೆಂದೂ ಈ ಉತ್ಸವದ ಕಾರ್ಯಕ್ರಮವು ಪರಿಷತ್ತಿನಲ್ಲಿಯೇ ಅಲ್ಲದೆ ಇಡೀ ಕರ್ಣಾಟಕದಲ್ಲಿ ನಡೆಯುವಂತಾಗಬೇಕೆಂದೂ ಸೂಚಿಸಿದರು. ನ್ಯಾಷನಲ್ ಕಾಲೇಜಿನ ಪ್ರಿನ್ಸಿಪಾಲರಾದ ಡಾ|| ಎಚ್. ನರಸಿಂಹಯ್ಯನವರು ಉತ್ಸವದ ಅಧ್ಯಕ್ಷತೆ ಯನ್ನು ವಹಿಸಿದ್ದರು. ಸೆಂಟ್ರಲ್ ಕಾಲೇಜಿನ ಪ್ರಾಧ್ಯಾಪಕ ಡಾ|| ಪಾ. ಸುಂ. ವೆಂಕಟಸ್ವಾಮಿಶೆಟ್ಟರು "ಚಂದ್ರಲೋಕ ಯಾತ್ರೆ" ಎಂಬ ವಿಷಯವಾಗಿ ಪ್ರಸ್ತುತ ವಿಚಾರವು ಮನ ಮುಟ್ಟುವಂತೆ ಉಪನ್ಯಾಸ ಮಾಡಿದರು. ಕಾರ್ಯಕ್ರಮದ ಕಡೆಯಲ್ಲಿ ಮನರಂಜನೆಗಾಗಿ ಶಶಿಕಲಾವಿದರಿಂದ "ಖೋಟಾ ಪೈಸೆ" ಎಂಬ ನಾಟಕ ಅಭಿನಯಿಸಲ್ಪಟ್ಟಿತು.

ಅನಂತರ ಶ್ರೀ ಅ. ರಾ. ಮಿತ್ರ ಅವರು ಉತ್ಸವದಲ್ಲಿ ಪಾಲ್ಗೊಂಡು ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿ ಕೊಟ್ಟವರೆಲ್ಲರಿಗೂ, ಸಭಿಕರಿಗೂ ಪರಿಷತ್ತಿನ ಕೃತಜ್ಞತೆ ಯನ್ನು ಸಲ್ಲಿಸಿ ವಂದನಾರ್ಪಣೆ ಮಾಡಿದರು.

* * * *

ಎರಡನೆಯ ದಿನ ಲೇಬರ್ ಕಮಿಷನರ್ ಶ್ರೀ ಎಚ್. ಎಲ್. ನಾಗೇಗೌಡರ ಅಧ್ಯಕ್ಷತೆಯಲ್ಲಿ ಇ. ಎಂ. ಎಸ್. ಟೀಚರ್ಸ್ ಕಾಲೇಜಿನ ಪ್ರಾಧ್ಯಾಪಕರಾದ ಶ್ರೀ ಎಂ. ರಾಜೀವ ಅವರು "ಬರ್ನಾರ್ಡ್‌ಷಾರ ನಾಟಕಗಳು" ಎಂಬ ವಿಷಯವಾಗಿಯೂ ಮಾರಾಟ ತೆರಿಗೆ ಅಪಲೇಟ್ ಟ್ರಿಬ್ಯೂನಲ್ ಅಧ್ಯಕ್ಷರಾದ ಶ್ರೀ ಕೋ. ಚೆನ್ನಬಸಪ್ಪನವರು "ಕುವೆಂಪು ಅವರ ನಾಟಕಗಳು" ಎಂಬ ವಿಷಯ ವಾಗಿಯೂ ಉಪನ್ಯಾಸ ಮಾಡಿದರು. ಮನರಂಜನೆಯ ಕಾರ್ಯಕ್ರಮದಲ್ಲಿ ಸುಂದರ ನೃತ್ಯಕಲಾವಿದರಿಂದ ಭರತನಾಟ್ಯವನ್ನೇರ್ಪಡಿಸಿತ್ತು.

* * * *

ಮೂರನೆಯ ದಿನ ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ, ಡಾ|| ಜಿ. ಎಸ್. ಶಿವರುದ್ರಪ್ಪನವರ ಅಧ್ಯಕ್ಷತೆ ಯಲ್ಲಿ ಕವಿಗೋಷ್ಠಿ ನಡೆಯಿತು. ಗೋಷ್ಠಿಯಲ್ಲಿ ಶ್ರೀಗಳಾದ ಜಿ. ಎಸ್. ಸಿದ್ಧಲಿಂಗಯ್ಯ, ಕೆ. ಎನ್. ಶಿವಪ್ಪ, ಆರ್. ಜಿ. ಕುಲಕರ್ಣಿ, ಹ. ವೆಂ. ನಾಗರಾಜರಾವ್, ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ, ಕೋಣಂದೂರು ಲಿಂಗಪ್ಪ, ಡಿ. ಲಿಂಗಯ್ಯ, ಕೆ. ಪಿ. ಶಿವಲಿಂಗಯ್ಯ, ಕೆ. ಎಸ್. ಸೂಲಿಬೆಲೆ ಮತ್ತು ಶ್ರೀಮತಿ ಎಲ್. ಜಿ. ಸುಮಿತ್ರ—ಇವರು ಗಳು ಭಾಗವಹಿಸಿದ್ದರು.

ಸಮಾರಂಭದ ಕೊನೆಯ ದಿನ ಮಹಿಳಾ ಕಾರ್ಯ ಕ್ರಮವನ್ನೇರ್ಪಡಿಸಿತ್ತು. ಮಹಾರಾಣಿಯವರ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀಮತಿ ಎಚ್. ಎಂ. ಪಾರ್ವತಮ್ಮ ನವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀಮತಿ ಚಿ. ನ. ಮಂಗಳಾ ಅವರು "ಕನ್ನಡಕ್ಕೊಂದು ಯೋಜನೆ" ಎಂಬ ವಿಷಯವನ್ನು ಕುರಿತು ವಿಚಾರಪೂರ್ಣ ವಾದ ಭಾಷಣ ಮಾಡಿದರು. ಐ. ಟಿ. ಐ. ಅಭಿಮಾನಿ ಬಳಗದವರಿಂದ "ಬೆಂಬಿಡದ ಭೂತ" ಎಂಬ ನಾಟಕವನ್ನು ಅಭಿನಯಿಸಿದರು.

(೩೨ನೆಯ ಪುಟ ನೋಡಿ)

ಸಂಪಾದಕೀಯ

# ಪರಿಷತ್ತಿಗೊಂದು ತ್ರೈವಾರ್ಷಿಕ ಯೋಜನೆ

ಈಗ ಐವತ್ಮೂರು ವರ್ಷಗಳಿಂದ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ರಾಜ್ಯ ನಿರ್ಮಾಣವಾಗುವುದಕ್ಕೂ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಪ್ರಚಾರ ಉನ್ನತಿಗೂ ದುಡಿದಿದೆ. ಪರಿಣಾಮವಾಗಿ ಕನ್ನಡ ರಾಜ್ಯಸ್ಥಾಪನೆಯಾಗಿ, ಜನರಲ್ಲಿ ಸಾಹಿತ್ಯ ಸಂಸ್ಕೃತಿಗಳಲ್ಲಿ ಆಸಕ್ತಿ, ನೂತನ ಗ್ರಂಥಗಳಲ್ಲಿ ವಾಚನಾಭಿರುಚಿ, ಭಾಷೆಯ ಬಗ್ಗೆ ಹೆಮ್ಮೆ, ಅಭಿಮಾನ – ಇವು ಅಧಿಕವಾಗಿವೆ. ಈ ಸಮಯದಲ್ಲಿ ಸಾಹಿತ್ಯ ಪರಿಷತ್ತಿನಂಥ ಪ್ರಭಾವಯುತವಾದ ಸಂಸ್ಥೆಯು ನಾಡಿನ ಸಾಂಸ್ಕೃತಿಕ ವಾತಾವರಣವನ್ನು ಕ್ರಿಯಾಮುಖವಾಗಿ ಮಾಡಲು, ಹೊಸದಾಗಿ ಒಂದು ಕಾರ್ಯಕ್ರಮವನ್ನು ರೂಪಿಸಲು ಪ್ರಯತ್ನ ಮಾಡಿದೆ. ಈ ಕಾರ್ಯವನ್ನು ಕನ್ನಡ ರಾಜ್ಯದ ಎಲ್ಲ ಜಿಲ್ಲೆಗಳಿಗೂ ಮತ್ತು ಹೊರನಾಡ ಕನ್ನಡಿಗರು ವಾಸಿಸುತ್ತಿರುವ ಪ್ರದೇಶಗಳಿಗೂ ಹರಡಬೇಕೆಂಬುದು ಈಗಿನ ಪದಾಧಿಕಾರಿಗಳ ಮತ್ತು ಸದಸ್ಯರ ಅಭಿಪ್ರಾಯವಾಗಿದೆ.

ಪರಿಷತ್ತಿನ ಗ್ರಂಥಭಂಡಾರ ವಾಚನಾಲಯಗಳು ಸಾರ್ವಜನಿಕರಿಗೂ ಪ್ರೌಢ ವ್ಯಾಸಂಗಿಗಳಿಗೂ ಹೆಚ್ಚು ಉಪಯೋಗವಾಗುವಂತೆ ವ್ಯವಸ್ಥೆಗೊಳಬೇಕು. ಪರಿಷತ್ಪತ್ರಿಕೆಯಲ್ಲಿ ವಿದ್ವತ್ಪೂರ್ಣವಾದ ಲೇಖನಗಳನ್ನು ಪ್ರಕಟಿಸುವುದು, "ಕನ್ನಡನುಡಿ" ಯನ್ನು ಪಕ್ಷಪತ್ರಿಕೆಯಾಗಿ ಮಾಡಿ ನಾಡಿನ ಸಾಹಿತ್ಯ ಸಂಸ್ಕೃತಿಗಳ ಸುದ್ದಿಗಳನ್ನೊಳಗೊಂಡ ಪರಿಷತ್ತಿನ ಪ್ರಚಾರ ಪತ್ರಿಕೆಯಾಗುವಂತೆ ಬದಲಾಯಿಸುವುದು, ಪ್ರಾಚೀನ ಗ್ರಂಥಗಳ ಪುನರ್ಮುದ್ರಣ, ಶಾಸ್ತ್ರ ಸಾಹಿತ್ಯ ಕಲೆ ಮೊದಲಾದ ನಾನಾ ವಿಷಯಗಳನ್ನು ಕುರಿತ ಗ್ರಂಥಗಳ ಪ್ರಕಟನೆ, ಐತಿಹಾಸಿಕ ಸಂಶೋಧನಾ ಶಾಖೆಯ ಸ್ಥಾಪನೆ, ಜಿಲ್ಲಾ ಶಾಖೆಗಳ ಮೂಲಕ ಜಿಲ್ಲೆಗಳಲ್ಲೂ ಬೆಂಗಳೂರಿನಲ್ಲೂ ದತ್ತಿ ಉಪನ್ಯಾಸಗಳು, ಪ್ರಚಾರೋಪನ್ಯಾಸಗಳು, ಜಿಲ್ಲಾ ಸಮ್ಮೇಳನ, ಸಾಹಿತ್ಯೋತ್ಸವಗಳು, ರಾಜ್ಯೋತ್ಸವಗಳು ಮುಂತಾದ ಸಾಹಿತ್ಯ ಪರವಾದ ಕಾರ್ಯಕ್ರಮಗಳನ್ನು ನಡೆಸುವುದು. ಇದಕ್ಕೆ ಹೊಂದಿಕೊಂಡಂತೆ ಇತರ ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳಿಗೂ ಪ್ರೋತ್ಸಾಹ ಕೊಡುವುದು––ಇದು ಈ ಯೋಜನೆಯ ಉದ್ದೇಶ.

ಈ ಯೋಜನೆಯ ಉದ್ಘಾಟನೆಯನ್ನು ಮಾನ್ಯ ವಿದ್ಯಾಮಂತ್ರಿಗಳಾದ ಶ್ರೀ ಕೆ. ವಿ. ಶಂಕರಗೌಡ ಅವರ ಅಧ್ಯಕ್ಷತೆಯಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಡಾ|| ವಿ. ಕೃ. ಗೋಕಾಕರವರು ದಿನಾಂಕ ೩-೮-೧೯೬೯ರಂದು ಪರಿಷತ್ತಿನಲ್ಲಿ ನಡೆಸಿಕೊಡುತ್ತಾರೆ. ಅನಂತರ ಸದಸ್ಯರ ಮತ್ತು ಸಾರ್ವಜನಿಕರ ಸಲಹೆ ಸೂಚನೆಗಳನ್ನು ಪಡೆದು ಅದರ ಖಚಿತ ರೂಪರೇಖೆಗಳನ್ನು ನಿಷ್ಕರ್ಷೆ ಮಾಡಿ ನವೆಂಬರ್ ತಿಂಗಳ ಪ್ರಾರಂಭದಿಂದ ಅದನ್ನು ಕಾರ್ಯಗತ ಮಾಡಲಾಗುತ್ತದೆ.

ನಾಡಿನ ಭವಿಷ್ಯದ ದೃಷ್ಟಿಯಿಂದ ಪರಿಷತ್ತು ಕೈಗೊಂಡಿರುವ ಈ ಯೋಜನೆಯು ಸಫಲವಾಗಬೇಕಾದರೆ ಅಧಿಕವಾದ ಧನಸಹಾಯ ಮತ್ತು ಜನರ ಸಹಕಾರ ಇವು ಅತ್ಯಗತ್ಯ. ಪರಿಷತ್ತು ತಾನು ಕೈಗೊಂಡಿರುವ ಈ ಕಾರ್ಯಕ್ರಮಕ್ಕೆ ಬೇಕಾಗುವ ಧನ ಜನ ಬಲ ಖಂಡಿತವಾಗಿಯೂ ಒಂದುಗೂಡುತ್ತದೆಂಬ ನಂಬಿಕೆಯನ್ನು ಹೊಂದಿದೆ. ಕನ್ನಡಿಗರು ಈ ನಿರೀಕ್ಷೆಯನ್ನು ಪೂರೈಸಬೇಕಾಗಿ "ನುಡಿ" ಅಪೇಕ್ಷಿಸುತ್ತದೆ.

(೩೦ನೆಯ ಪುಟದಿಂದ)

## ಪರಿಷತ್ತಿನ ಆಶ್ರಯದಲ್ಲಿ ನಡೆದ ಹೊರಗಿನ ಕಾರ್ಯಕ್ರಮ

### ಕೈಲಾಸಂ ಸಾಹಿತ್ಯ ಸೇವೆ

ದಿನಾಂಕ ೨೭-೭-೧೯೬೯ರಂದು ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದಲ್ಲಿ "ದಿವಂಗತ ತ್ಯಾಗರಾಜ ಪರಮಶಿವ ಕೈಲಾಸಂ ಅವರ ಸಾಹಿತ್ಯ ಸೇವೆ"ಯನ್ನು ಕುರಿತು ಶ್ರೀ ಜಿ. ಪಿ. ರಾಜರತ್ನಂ ಅವರು ಉಪನ್ಯಾಸ ಮಾಡಿದರು. ಇದು ಗಾಂಧಿ ಸಾಹಿತ್ಯ ಸಂಘದಲ್ಲಿ ನಡೆದ ಕವಿಕೃತಿ ಸ್ಮರಣೆ-ಉಪನ್ಯಾಸಮಾಲೆಯ ೨೫ನೆಯ ಕಾರ್ಯಕ್ರಮ.

### ೧೯೬೯ರ ಗಮಕ ತರಗತಿಗಳು

೧೯೬೯ರ ಸಾಲಿನಲ್ಲಿ ಈ ಕೆಳಗೆ ಕಂಡ ಸ್ಥಳಗಳಲ್ಲಿ ಮತ್ತು ಬೋಧಕರ ನೇತೃತ್ವದಲ್ಲಿ ಗಮಕ ಪ್ರವೇಶ ತರಗತಿಗಳನ್ನು ನಡಸಲು ತೀರ್ಮಾನಿಸಲಾಗಿದೆ. ಈ ತರಗತಿಗಳು ಕೆಲವು ಸ್ಥಳಗಳಲ್ಲಿ ೧-೭-೧೯೬೯ರಂದೂ ಇನ್ನೂ ಕೆಲವು ಸ್ಥಳಗಳಲ್ಲಿ ೧೫-೭-೧೯೬೯ರಂದೂ ಪ್ರಾರಂಭವಾಗಿವೆ.

೧) ಮೈಸೂರು :
ಶ್ರೀಮತಿ ಎಂ. ಎಸ್. ಜಯಮ್ಮನವರು

೨) ಬಳ್ಳಾರಿ :
ಶ್ರೀ ಆರ್. ರಾಮಾಶಾಸ್ತ್ರಿಗಳವರು

೩) ದಾವಣಗೆರೆ :
ಶ್ರೀ ನಂ. ಅಶ್ವತ್ಥನಾರಾಯಣ ಅವರು

೪) ಹಾಸನ :
ಶ್ರೀ ಎಚ್. ಎಸ್. ಗೋಪಾಲಕೃಷ್ಣ ಅವರು

**ಬೆಂಗಳೂರಿನಲ್ಲಿ—**

೫) ಮಲ್ಲೇಶ್ವರ :
ಶ್ರೀ ಎಚ್. ಎಂ. ರಾಮಾರಾಧ್ಯರು

೬) ದೂರ್ವಾಣಿನಗರ :
ಶ್ರೀ ಜಿ. ಎ. ಅನಂತಪದ್ಮನಾಭಯ್ಯನವರು

೭) ರಾಜಾಜಿನಗರ :
ಶ್ರೀಮತಿ ಅನ್ನಪೂರ್ಣಮ್ಮ ರಘುಪತಿ ಶಾಸ್ತ್ರಿಗಳು

೮) ಗವೀಪುರ ಗುಟ್ಟಹಳ್ಳಿ :
ಶ್ರೀಮತಿ ಎಂ. ವಿ. ಜಯಲಕ್ಷಮ್ಮನವರು

೯) ಬ್ಯಾಟರಾಯನಪುರ :
ಶ್ರೀ ಎಂ. ಆರ್. ರಾಮಕೃಷ್ಣ ಅವರು

೧೦) ಕನ್ನಡ ಸಾಹಿತ್ಯ ಪರಿಷತ್ತು :
ಶ್ರೀ ಎಂ. ರಾಘವೇಂದ್ರರಾಯರು
(೧-೮-೧೯೬೯ರಿಂದ ಪ್ರಾರಂಭವಾಗುವುದು)

---



## ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ. ಪೈ. |
|---|---|---|
| ೧. | ಕನ್ನಡದ ಬಾವುಟ .... .... | ೩—೦೦ |
| ೨. | ಜೇಮ್ಸ್ ಏಬ್ರಹಾಮ್ ಗಾರ್ಫೀಲ್ಡನ ಚರಿತ್ರೆ: ಕ್ಯಾಲಿಕೊ ಪ್ರತಿ | ೧—೫೦ |
| | ನಾಲ್ಕನೆಯ ಮುದ್ರಣ: ಸಾದಾ ಪ್ರತಿ .... | ೧—೦೦ |
| ೩. | ಜ್ಯೋತಿರ್ವಿನೋದಿನಿ .... .... | ೨—೦೦ |
| ೪. | ಕನ್ನಡ ನಾಡಿನ ಚರಿತ್ರೆ: ಭಾಗ ೧ .... .... | ೨—೦೦ |
| | ಭಾಗ ೨ .... .... | ೨—೭೫ |
| | ಭಾಗ ೩ .... .... | ೧—೫೦ |
| ೫. | ಹರಿದಾಸ ಸಾಹಿತ್ಯ: ಇಂಗ್ಲಿಷ್ ಉಪೋದ್ಘಾತದೊಡನೆ .... | ೧೦—೦೦ |
| | ,, ಉಪೋದ್ಘಾತವಿಲ್ಲದ ಪ್ರತಿ .... | ೮—೦೦ |
| ೬. | ಗಾಳಿಯಲ್ಲಿನ ಅಗೋಚರ ಶತ್ರುಗಳು .... .... | ೧—೨೫ |
| ೭. | ನಕ್ಷತ್ರ ದರ್ಶನ .... .... | ೧—೫೦ |
| ೮. | ಹರಿದಾಸ ಕೃತಿಮಂಜರಿ .... .... | ೧—೨೫ |
| ೯. | ಪ್ಲೇಟೋವಿನ ಆದರ್ಶ ರಾಜ್ಯ .... .... | ೧—೩೮ |
| ೧೦. | ಜೇಮಿನಿ ಕಾವ್ಯಂ .... .... | ೨—೦೦ |
| ೧೧. | ಕನ್ನಡದ ಅತ್ಯುತ್ತಮ ಸಣ್ಣ ಕತೆಗಳು: ಮೂರನೆಯ ಸಂಪುಟ .... | ೪—೦೦ |
| ೧೨. | ಕಾದಂಬರಿ ಸಾಮಾನ್ಯ ಮನುಷ್ಯ .... .... | ೧—೦೦ |
| ೧೩. | ಉದ್ಭಟದೇವ ಚರಿತೆ ... .... | ೧—೫೦ |
| ೧೪. | ತ್ರಿಪುರದಹನ ಸಾಂಗತ್ಯ .... .... | ೦—೭೫ |
| ೧೫. | ಗಮಕ ಪ್ರವೇಶದಾಯಿನಿ .... .... | ೧—೫೦ |
| ೧೬. | ಗಮಕ ಪ್ರಚಾರ ಬೋಧಿನಿ .... .... | ೦—೭೫ |
| ೧೭. | ಕಾಳಿದಾಸನ ದೃಷ್ಟಿ-ಸೃಷ್ಟಿ .... .... | ೨—೦೦ |
| ೧೮. | ಹೂಮಾಲೆ .... .... | ೦—೬೩ |
| ೧೯. | ಆಧುನಿಕ ಗದ್ಯಸಾಹಿತ್ಯ: ಭಾಗ ೧ .... .... | ೩—೦೦ |
| | ಭಾಗ ೨ .... .... | ೩—೦೦ |
| ೨೦. | ಸರ್ವೋದಯ .... .... | ೦—೩೨ |
| ೨೧. | ಅರುಂಧತಿ .... .... | ೦—೨೫ |
| ೨೨. | ಕಾವ್ಯಸೌರಭ .... .... | ೨—೦೦ |
| ೨೩. | ವಿಕ್ರಮಾರ್ಜುನ ವಿಜಯ .... .... | ೧—೦೦ |
| ೨೪. | ವಾಚನ ಕಾವ್ಯಮಂಜರಿ .... .... | ೦—೧೯ |
| ೨೫. | ಕರ್ಣ ಕರ್ಣಾಮೃತ .... .... | ೨—೫೦ |

೫ ರೂ.ಗಳಿಗೆ ಕಡಿಮೆಯಿಲ್ಲದೆ ಕೊಳ್ಳುವ ಪುಸ್ತಕ ವ್ಯಾಪಾರಿಗಳಿಗೆ ಶೇ. ೨೫ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು. ಪಠ್ಯಪುಸ್ತಕಗಳಿಗೆ ಶೇ. ೧೫ ಮಾತ್ರ

Reg. No. B. G. 4—August 1969

Licensed to Post without pre-payment, Licence No. 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಬೆಂಗಳೂರು-೧೮

## ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ. ಪೈ. |
|---|---|---|
| ೧. | ಕನ್ನಡದ ಬಾವುಟ .... .... | ೩—೦೦ |
| ೨. | ಜೇಮ್ಸ್ ಏಬ್ರಹಾಮ್ ಗಾರ್‌ಫೀಲ್ಡನ ಚರಿತ್ರೆ: ಕ್ಯಾಲಿಕೊ ಪ್ರತಿ | ೧—೫೦ |
| | ನಾಲ್ಕನೆಯ ಮುದ್ರಣ: ಸಾದಾ ಪ್ರತಿ .... | ೧—೨೦ |
| ೩. | ಜ್ಯೋತಿರ್ವಿನೋದಿನಿ .... .... | ೨—೦೦ |
| ೪. | ಕನ್ನಡ ನಾಡಿನ ಚರಿತ್ರೆ: ಭಾಗ ೧ .... .... | ೨—೦೦ |
| | ಭಾಗ ೨ .... .... | ೨—೭೫ |
| | ಭಾಗ ೩ .... .... | ೨—೦೦ |
| ೫. | ಹರಿದಾಸ ಸಾಹಿತ್ಯ: ಇಂಗ್ಲಿಷ್ ಉಪೋದ್ಘಾತದೊಡನೆ .... | ೧೦—೦೦ |
| | ,, ಉಪೋದ್ಘಾತವಿಲ್ಲದ ಪ್ರತಿ .... | ೮—೦೦ |
| ೬. | ಗಾಳಿಯಲ್ಲಿನ ಅಗೋಚರ ಶತ್ರುಗಳು .... .... | ೧—೨೫ |
| ೭. | ನಕ್ಷತ್ರ ದರ್ಶನ .... .... | ೧—೫೦ |
| ೮. | ಹರಿದಾಸ ಕೃತಿಮಂಜರಿ .... .... | ೧—೨೫ |
| ೯. | ಪ್ಲೇಟೋವಿನ ಆದರ್ಶ ರಾಜ್ಯ .... .... | ೧—೩೮ |
| ೧೦. | ಚೇರಮ ಕಾವ್ಯಂ .... .... | ೨—೦೦ |
| ೧೧. | ಕನ್ನಡದ ಅತ್ಯುತ್ತಮ ಸಣ್ಣಕತೆಗಳು: ಮೂರನೆಯ ಸಂಪುಟ .... | ೪—೦೦ |
| ೧೨. | ಕಾದಂಬರಿ ಸಾಮಾನ್ಯ ಮನುಷ್ಯ .... .... | ೧—೦೦ |
| ೧೩. | ಉದ್ಭಟದೇವ ಚರಿತೆ ... .... | ೧—೫೦ |
| ೧೪. | ತ್ರಿಪುರದಹನ ಸಾಂಗತ್ಯ .... .... | ೦—೭೫ |
| ೧೫. | ಗಮಕ ಪ್ರವೇಶದಾಯಿನಿ .... .... | ೧—೫೦ |
| ೧೬. | ಗಮಕ ಪ್ರಚಾರ ಬೋಧಿನಿ .... .... | ೦—೭೫ |
| ೧೭. | ಕಾಳಿದಾಸನ ದೃಷ್ಟಿ-ಸೃಷ್ಟಿ .... .... | ೨—೦೦ |
| ೧೮. | ಹೂಮಾಲೆ .... .... | ೦—೬೩ |
| ೧೯. | ಆಧುನಿಕ ಗದ್ಯಸಾಹಿತ್ಯ: ಭಾಗ ೧ .... .... | ೩—೦೦ |
| | ಭಾಗ ೨ .... .... | ೩—೦೦ |
| ೨೦. | ಸರ್ವೋದಯ .... .... | ೦—೩೨ |
| ೨೧. | ಅರುಂಧತಿ .... .... | ೦—೨೫ |
| ೨೨. | ಕಾವ್ಯಸೌರಭ .... .... | ೨—೦೦ |
| ೨೩. | ವಾಚನ ಕಾವ್ಯಮಂಜರಿ .... .... | ೦—೧೯ |
| ೨೪. | ಕರ್ಣ ಕರ್ಣಾಮೃತ .... .... | ೨—೫೦ |
| ೨೫. | ಕವಿಹೃದಯ .... .... | ೨—೫೦ |
| ೨೬. | ಚಂದ್ರಹಾಸೋಪಾಖ್ಯಾನ .... .... | ೧—೭೫ |

೫ ರೂ.ಗಳಿಗೆ ಕಡಿಮೆಯಿಲ್ಲದೆ ಕೊಳ್ಳುವ ಪುಸ್ತಕ ವ್ಯಾಪಾರಿಗಳಿಗೆ ಶೇ. ೨೫ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು. ಪತ್ರಪುಸ್ತಕಗಳಿಗೆ ಶೇ. ೧೫ ಮಾತ್ರ

# ಕನ್ನಡ ನುಡಿ

'ಕನ್ನಡ ನುಡಿ' ಕರ್ಣಾಟಕದ ಗೆಜೆಟಿಯರ್ ಆಗಬೇಕು

—ಬಿ.ಎಂ.ಶ್ರೀ



ಸಂಚಿಕೆ : ೯          ಸಂಪುಟ : ೩೨

ಸೆಪ್ಟೆಂಬರ್ ೧೯೬೯

•

## ಈ ಸಂಚಿಕೆಯಲ್ಲಿ . . .



# ಯಾರೇನು ಮಾಡುವರು ?

•

ನಿನ್ನದೇ ತಪ್ಪೆಂದು ನಾ ಹೇಗೆ ಹೇಳುವುದು
ನೀನೇನು ಹೊಣೆಯಲ್ಲ ನನ್ನ ವಿಧಿಗೆ
ನಿನ್ನ ಕೊಳಲಿನ ದನಿಯು ಕಿವಿಯಿತ್ತು ಆಲಿಸಿದೆ
ತರುತಿತ್ತು ಅದೆ ತೃಪ್ತಿ ನನ್ನ ಎದೆಗೆ.

ತಿಳಿದೆಯೋ ತಿಳಿಯದೆಯೋ ನಾನು ನಿನ್ನವಳಾದೆ
ಹಿಂದುಮುಂದುಗಳನ್ನು ನೋಡದೇನೆ
ಮಬ್ಬು ತುಂಬಿದ ಎದೆಗೆ ನಗೆಯ ಬೆಳಕನು ತಂದೆ
ನನ್ನ ದುಸ್ಥಿತಿಯನೀ ಕಾಣದೇನೆ.

ಕೃಷ್ಣ ನಿನಗೆಷ್ಟೊಂದು ಹತ್ತಿರದ ಜನರಿಹರು
ಆ ಒಂದು ಭಾಗ್ಯವೂ ಇಲ್ಲ ನನಗೆ
ಒಮ್ಮೊಮ್ಮೆ ಇರುಳಿನಲಿ ಹಿಂದಿನದು ನೆನಪಾಗೆ
ರೆಪ್ಪೆಮುಚ್ಚುವುದಿಲ್ಲ ಹಗಲವರೆಗೆ.

ಎಳೆತನದಿ ಕಟ್ಟಿದ್ದೆ ಆಸೆಗೋಪುರಗಳನು
ಬೆಳಗು ಬಾನಿನ ಕೆಂಪು ಹೊಳಪಬಳಿದು
ರಾಧೆಯೀ ಆಸೆಗಳು ಎಲ್ಲವೂ ಬುಡಮೇಲು
ಕುರುಡಾದೆ ವಿಫಲತೆಯ ಮಬ್ಬತುಳಿದು.

ಅಳುತಲೇ ನಾನಿದ್ದೆ ಒಂಟಿ ದೆವ್ವದ ರೀತಿ
ಎಲ್ಲಿಂದಲೋ ಬಂದೆ ನನ್ನ ಕಡೆಗೆ
ಮರುಗಿ ಸಾಂತ್ವನಗೊಳಿಸಿ ನಗೆಯ ಬೆಳಕನು ತಂದೆ
ಹೊಸತು ಚೇತನವಿತ್ತೆ ನನ್ನ ಎದೆಗೆ.

ನನ್ನ ಕೈ ಬಿಡಲೆಂದು ನೀನೀಗ ನಿರ್ಧರಿಸೆ
ಬದುಕ ಬಲ್ಲೆನೆ ನಾನು ಹೇಳು ನೀನು
'ರಾಧೆ ರಾಧೇ' ಎಂದು ಜೇನಾಗಿ ನುಡಿದಲ್ಲ
ನೀನು ತೋರಿದ ಪ್ರೇಮ ಮಿಥ್ಯವೇನು ?

ನಿನ್ನಿಚ್ಛೆ ಬಂದಂತೆ ನೀ ನಡೆಯೆ ಅಡೆಯಿಲ್ಲ
ನಿನ್ನ ಮನಸಿಗೆ ನೋವ ತರುವುದಿಲ್ಲ
ಯಾರೇನು ಮಾಡುವರು ನನ್ನ ವಿಧಿ ಹೀಗಿರಲು
ಒಡೆದ ಹೃದಯದ ಅಳಲು ಮುಗಿಯಲಿಲ್ಲ.

•

ಸು. ರುದ್ರಮೂರ್ತಿ ಶಾಸ್ತ್ರಿ

# ಕಟ್ಟೆಯ ಬಸವೇಶ್ವರನ ವಚನಗಳು



### ದೇವರಿಗೆ ನಾಮಕರಣ

ವಿಶ್ವದ ಸ್ಥಾವರಜಂಗಮವೆಲ್ಲ ತಾನೆಯಾದ ಕಾರಣ ದೇವರಿಗೆ ನಾಮಕರಣ ಮಾಡಲು ಬಾರದು! ಅಂಕಿತ ನಾಮ ಅಂಟದು! ಅನ್ವರ್ಥನಾಮ ಅನ್ವಯಿಸದು! ರೂಢ ನಾಮ ರೂಢಿಸದು! ಗಾಢನಾಮ ಗಮಿಸದು! ಸಹಸ್ರ ನಾಮ ಸಾಲದು! ಸಂಸ್ಕೃತನಾಮ ಸಾರದು! ಆದೊಡೆಯು ವಿಧಿ ಇಲ್ಲದೆ "ಅದು" ಎಂದು ಕರೆದರು ಹಿಂದಿನವರು ಸೂಕ್ಷ್ಮದಿ! ನಾನಿಂದು "ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರಾ" ಎಂದು ಕರೆದೆನು ಸ್ಥೂಲದಿ!

### ದರ್ಶಿಯಾಗಬೇಕು

ಸತ್ಯವ ಅರಿಯಲು ಮಾನವ ದರ್ಶಿಯಾಗಬೇಕು! ಬ್ರಹ್ಮಾಂಡದ ಸತ್ಯವ ಅರಿಯಲು ದೂರದರ್ಶಿಯಾಗಬೇಕು! ಪಿಂಡಾಂಡದ ಸತ್ಯವ ಅರಿಯಲು ಸೂಕ್ಷ್ಮದರ್ಶಿಯಾಗಬೇಕು! ದೂರ ಸೂಕ್ಷ್ಮಗಳ ದರ್ಶಿಯಾಗದೆ ಸಾರಪೂರ್ಣ ಸತ್ಯವ-ಅರಿಯಲು ಬಾರದು-ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನ!

### ಅಷ್ಟ ಮಹಾ ಅನಿಷ್ಟಗಳು

ನೀತಿಯಿಲ್ಲದ ರಾಜಕ, ಕಾಯಕವಿಲ್ಲದ ಜೀವನ, ಶೀಲವಿಲ್ಲದ ಶಿಕ್ಷಣ, ವಿವೇಕವಿಲ್ಲದ ವಿಜ್ಞಾನ, ನ್ಯಾಯವಿಲ್ಲದ ವಾಣಿಜ್ಯ, ತ್ಯಾಗವಿಲ್ಲದ ಭೋಗ, ಸತ್ಯವಿಲ್ಲದ ಪೂಜೆ, ದಯೆಯಿಲ್ಲದ ಧರ್ಮ-ಇಂತಿವು ಅಷ್ಟ ಮಹಾ ಅನಿಷ್ಟಗಳೆಂಬುದ ಎಷ್ಟು ಬೇಗ ಅರಿಯೆ ಅಷ್ಟು ಒಳಿತು ಮಾನವನ ಶ್ರೇಷ್ಠ ಇರುವಿಕೆಗೆ-ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ!

### ಮಹಾಬಲ

ಸರಸ್ವತಿಗೆ ಲಕ್ಷ್ಮಿಯ ಬಲಬೇಕು! ಲಕ್ಷ್ಮಿಗೆ ಸರಸ್ವತಿಯ ಬಲ ಬೇಕು! ಇಬ್ಬರಿಗೂ ಪಾರ್ವತಿಯ ಬಲ ಬೇಕು! ಇಂತೀಪರಿಯಲ್ಲಿ ಸರಸ್ವತಿ ಲಕ್ಷ್ಮೀ ಪಾರ್ವತಿಯರ ತ್ರಿವಿಧ ಬಲಗಳು ಏಕವಾಗಿ ದಾಸೋಹದಲ್ಲಿ ಪರಿಣಾಮಗೊಂಡರೆ ಅದೇ ಮಹಾಬಲ-ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ!

### ಚಿಂತೆಗಳ ಪರಿಹರಿಸುವ ಚಿಂತೆ

ಕೃತಯುಗದಲ್ಲಿ ಅಶನದ ಚಿಂತೆ! ತ್ರೇತಾಯುಗದಲ್ಲಿ ವಸನದ ಚಿಂತೆ! ದ್ವಾಪರಯುಗದಲ್ಲಿ ವಸತಿಯ ಚಿಂತೆ! ಕಲಿಯುಗದಲ್ಲಿ ವಿಮೆಯ ಚಿಂತೆ! ಇಂತಪ್ಪ ಹಲವು ಚಿಂತೆಗಳ ಪರಿಹರಿಸುವ ಕಾಯಕ ದಾಸೋಹಗಳ ಚಿಂತೆ ಎಂದಿಗೆ ಉಂಟು - ಹೇಳಾ - ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರಾ?

### ಭಕ್ತಿಯೋಗದ ಪರಿಣಾಮ

ಶಾಪವದು ಅನುಗ್ರಹವಪ್ಪುದು! ಕೋಪವದು ಅನುಕಂಪವಪ್ಪುದು! ದಾರಿದ್ರ್ಯವದು ಸಂಪದವಪ್ಪುದು! ದುಃಖವದು ಸಂತೋಷವಪ್ಪುದು! ಕಷ್ಟವದು ಸುಖವಪ್ಪುದು! ನಷ್ಟವದು ಲಾಭವಪ್ಪುದು! ಸೋಲದು ಗೆಲುವಪ್ಪುದು! ಬೀಳದು ಮೇಲಪ್ಪುದು! ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ ಭಕ್ತಿಯೋಗದ ಪರಿಣಾಮವಾಗಿ!



ಕಟ್ಟೆಯ ಬಸವೇಶ್ವರ

# ಶ್ರೇಷ್ಠ ನ್ಯಾಯಮೂರ್ತಿ ದಿ. ಹೊಂಬೇಗೌಡರ ವ್ಯಕ್ತಿತ್ವ

■ ನ್ಯಾಯಮೂರ್ತಿ ಟಿ. ಕೆ. ತುಕೋಳ್

"ಕರ್ತವ್ಯ ನಿಷ್ಠೆಯೇ ಭಗವಂತನ ಸರ್ವಶ್ರೇಷ್ಠ ಪೂಜೆ"
—ಸ್ವಾಮಿ ವಿವೇಕಾನಂದ

ಆಗಸ್ಟ್ ದಿನಾಂಕ ೧ರಂದು ಬೆಳಿಗ್ಗೆ ೭ ಘಂಟೆಯ ಸುಮಾರಿಗೆ ಫೋನು ಕರೆ ಬಂತು. ಒಬ್ಬ ಪರಿಚಯದವರಿಂದ ಬಂದ ಕರೆ. "ಶ್ರೇಷ್ಠ ನ್ಯಾಯಮೂರ್ತಿ ಹೊಂಬೇಗೌಡರು ಬೆಳಗಿನ ಜಾವದಲ್ಲಿ ಹೊರಟು ಹೋದರಂತೆ, ಹೌದೇ ?" ಎಂದು ಕೇಳಿದರು. ಆ ಬಗ್ಗೆ ಅಲ್ಲಿಯವರೆಗೆ ಏನೂ ಅರಿಯದಿದ್ದ ನನಗೆ ಒಂದು ಆಘಾತವಾಯಿತು. ಧ್ವನಿಯಲ್ಲಿ ಒಂದು ಕಂಪನ, ಹೃದಯದಲ್ಲಿ ತಳಮಳ. "ನನಗೆ ಗೊತ್ತಿಲ್ಲ, ನಿಮಗೆ ಹೇಳಿದವರು ಯಾರು?" ಅಂತ ಕೇಳಿದ್ದಕ್ಕೆ ಆ ಗೃಹಸ್ಥರು ಕ್ಷಮಾಯಾಚಕ ಸ್ವರದಲ್ಲಿ, "ಯಾರೋ ಹೇಳಿದರು, ಅದು ತಪ್ಪೋ ಒಪ್ಪೋ ತಿಳಿದುಕೊಳ್ಳೋಣ ಎಂದು ನಿಮ್ಮನ್ನ ಕೇಳಿದೆ; ತೊಂದರೆ ಕೊಟ್ಟದ್ದಕ್ಕಾಗಿ ಕ್ಷಮಿಸಿ. ನಿಮಗೆ ನಿಶ್ಚಿತ ಏನಾದರೂ ತಿಳಿದರೆ ನನಗೆ ಬೇಗ ತಿಳಿಸಲು ಮರೆಯಬೇಡಿ" ಅಂತ ಹೇಳಿ ಫೋನು ಕೆಳಗಿಟ್ಟರು. ನನಗೆ ಏನೂ ತೋಚದಂತಾಗಿ ಕೊಂಚ ಕಾಲ ಸುಮ್ಮನೆ ಕುಳಿತೆ; ಒಳ್ಳೆ ಸುದ್ದಿಯಾಗಿದ್ದರೆ ಯಾರು ಬೇಕಾದವರನ್ನು ಕೇಳಬಹುದಿತ್ತು. ಯೋಚಿಸುತ್ತಿದ್ದಂತೆಯೇ, "ಮುಖ್ಯ ನ್ಯಾಯಾಧೀಶರು ನಿದ್ರೆಯಲ್ಲಿಯೇ ಬೆಳಗಿನ ಜಾವದಲ್ಲಿ ಮರಣವನ್ನಪ್ಪಿದರು" ಎಂದು ಅವರ ಮನೆಯಿಂದಲೇ ಫೋನು ಬಂತು. ಆಮೇಲೆ ಇಬ್ಬರು ಮೂವರು ಸಹೋದ್ಯೋಗಿಗಳಿಂದ ಬಂದ ಕರೆಗಳು ಆ ಸುದ್ದಿಯನ್ನು ಪುಷ್ಟೀಕರಿಸಿದವು.

ಅವಸರದಿಂದ ಅವರ ಮನೆಗೆ ಹೋದಾಗ, ಅನೇಕ ಪ್ರತಿಷ್ಠಿತ ನಾಗರಿಕರಾಗಲೇ ಅಲ್ಲಿ ನೆರೆದಿದ್ದರು. ಮನೆಯ ಅಂಗಣ, ಹೊರಗಿನ ರಾಜರಸ್ತೆ ಜನತೆಯಿಂದ ತುಂಬಿ ಹೋಗಿತ್ತು. ಅವರ ಮನೆಯಲ್ಲಿ ಪ್ರವೇಶಿಸಿದೊಡನೆಯೇ ಹಜಾರದಲ್ಲಿ ಒಂದು ಮಂಚದ ಮೇಲೆ ಅವರ ಪಾರ್ಥಿವ ಶರೀರವನ್ನು ಮಲಗಿಸಲಾಗಿತ್ತು. ಆಪಾದ ಮುಖದವರೆಗೆ ಶರೀರವು ಪುಷ್ಪಗಳಿಂದ ಆಚ್ಛಾದಿತವಾಗಿತ್ತು. ಅವರು ಸುಖನಿದ್ರೆಯಲ್ಲಿ ಮಲಗಿರುವಂತೆ ಭಾಸವಾಗುತ್ತಿತ್ತು. ಅವರ ಮುಖ ಮಂದಸ್ಮಿತತೆಯ ಶಾಂತತೆಯಿಂದ ಕೂಡಿ ನೋಡಿದವರ ಹೃದಯದಲ್ಲಿ ತನ್ನ ಗಂಭೀರತೆಯಿಂದಲೇ ದುಃಖದ ಅಲೆಗಳನ್ನು ಎಬ್ಬಿಸುತ್ತಿತ್ತು. ಜೀವನದ ಒಳ್ಳೇತನವು ಸಾವಿನಲ್ಲಿ ತೇಲಿಬಂದಂತೆ ಭಾಸವಾಗುತ್ತಿತ್ತು.

ಸಂಜೆಯ ಸ್ಮಶಾನ ಯಾತ್ರೆ ಸ್ಮರಣೀಯ ಪ್ರಸಂಗವಾಗಿತ್ತು. ನೆರೆದ ಜನಸಮೂಹ ಅವರ ಜನಪ್ರಿಯತೆಯ ಸೂಚಕವಾಗಿತ್ತು.

ನಾನು ಅವರನ್ನು ಮೊದಲು ಕಂಡದ್ದು ೧೯೫೭ನೆಯ ಜನವರಿಯಲ್ಲಿ. ಆಗಲೇ ಅವರು ನೂತನ ಕನ್ನಡ ರಾಜ್ಯದಲ್ಲಿ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿದ್ದರು. ನನ್ನೊಡನೆ ಹಸನ್ಮುಖದಿಂದ ಮಾತಾಡಿದರು. ಯೋಗಕ್ಷೇಮವನ್ನು ವಿಚಾರಿಸಿದರು. ಪುಣೆಯಲ್ಲಿ ಕಾನೂನು ವಿದ್ಯಾಲಯದಲ್ಲಿ ಅವರು ಅಭ್ಯಾಸ ಮಾಡುತ್ತಿದ್ದಾಗ ಫರ್ಗ್ಯೂಸನ್ ಕಾಲೇಜಿನಲ್ಲಿಯೂ, ಕರ್ನಾಟಕ ಸಂಘದಲ್ಲಿಯೂ ನನ್ನ ಭಾಷಣ ಪಾಠ ಪ್ರವಚನಗಳನ್ನು ಕೇಳಿದ್ದೆನೆಂದು ಆತ್ಮೀಯ ಭಾವನೆಯಿಂದ ಹೇಳಿದರು. ಆಗಲೇ ಅವರಲ್ಲಿದ್ದ ವಿದ್ಯಾಭಿಮಾನ, ಸೌಜನ್ಯ ಸ್ನೇಹಭಾವಗಳ ಕಲ್ಪನೆ ನನಗೆ ಬಂತು. ನನ್ನೊಡನೆ ಒಳ್ಳೇ ಉತ್ಸಾಹದಿಂದ ವಿಶ್ವಾಸದ ಮಾತುಗಳನ್ನಾಡಿದರು. ಮುಂದೆ ೧೯೬೨ರಲ್ಲಿ ನಾನು ಅವರ ಸಹೋದ್ಯೋಗಿಯಾದಾಗ ಅದೇ ಅಭಿಮಾನ ಆದರಗಳಿಂದ ಕಾಣುತ್ತಿದ್ದರು. ಅವರು ೧೯೬೪ನೇ ಜನವರಿಯಲ್ಲಿ ಮುಖ್ಯ ನ್ಯಾಯಾಧೀಶರಾದ ಮೇಲೆಯೂ, ತಮ್ಮ ಸಹೋದ್ಯೋಗಿಗಳನ್ನು ಯಾವಾಗಲೂ ವಿಶ್ವಾಸ ಗೌರವಗಳಿಂದ ಕಾಣುತ್ತಿದ್ದರು. ಉಚ್ಚ ನ್ಯಾಯಾಲಯದ ಆಡಳಿತೆಯಲ್ಲಿ ಕ್ರಮ ವಿಭಾಗದ ತತ್ತ್ವ

ದಂತೆ, ಎಲ್ಲರ ಸಹಕಾರ ಪಡೆದು, ನ್ಯಾಯಾಲಯದ ಬಗ್ಗೆ ಅಭಿಮಾನ, ಶ್ರದ್ಧೆ ಮತ್ತು ಆಸಕ್ತಿ ಸಾರ್ವಜನಿಕರಲ್ಲಿ ಸಹ ಹುಟ್ಟುವಂತೆ ಯತ್ನಿಸಿದರು. ಯಾವ ಕೆಲಸದ ಬಗ್ಗೆ ನಾವು ಅವರನ್ನು ಕಂಡರೂ ಕೂಡ, ಅವರು ಹಸನ್ಮುಖದಿಂದ ಆತ್ಮೀಯತೆಯಿಂದ ವಿಶ್ವಾಸದ ಮಾತುಗಳನ್ನೇ ಆಡುತ್ತಿದ್ದರು. ಸಜ್ಜನತೆಯಂತೆ ಸ್ನೇಹವೂ ಅವರ ವ್ಯಕ್ತಿತ್ವದ ಗುಟ್ಟಾಗಿತ್ತು.

ಶ್ರೀ ಹೊಂಬೇಗೌಡರು ೧೯೧೦ನೇ ಸಾಲಿನ ಜುಲೈ ತಿಂಗಳ, ದಿನಾಂಕ ೧೮ರಂದು ರೈತ ಮನೆತನದಲ್ಲಿ ಹುಟ್ಟಿದರು. ಇವರ ಹುಟ್ಟೂರು, ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿನ ಮಾರ್ಗೋನಹಳ್ಳಿ. ಸಿರಿವಂತ ಮನೆತನ, ದೊಡ್ಡ ಕುಟುಂಬ. ಹಳ್ಳಿಯಲ್ಲಿ ಹುಟ್ಟಿದರೂ, ಇವರು ಮಾಧ್ಯಮಿಕ ಶಿಕ್ಷಣವನ್ನು ಮೈಸೂರಲ್ಲಿ ಮುಗಿಸಿ, ಉಚ್ಚ ಶಿಕ್ಷಣಕ್ಕಾಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜನ್ನು ಸೇರಿದರು. ವಿಜ್ಞಾನದ ವಿದ್ಯಾರ್ಥಿಯಾದರೂ, ಕನ್ನಡ ಸಂಸ್ಕೃತ ಭಾಷೆಗಳಲ್ಲಿ ತುಂಬಾ ಜಾಣರು. ಕಾಳಿದಾಸ, ಭವಭೂತಿಗಳ ಕಾವ್ಯ, ನಾಟಕಗಳನ್ನು ಎಷ್ಟು ಆಸಕ್ತಿಯಿಂದ ಪುಲಕಿತ ಭಾವನೆಯಿಂದ ಓದುತ್ತಿದ್ದರೋ, ಹಾಗೆಯೇ ಪಂಪ ಹೊನ್ನ ರನ್ನರ ಕಾವ್ಯಗಳನ್ನೂ ಓದುತ್ತಿದ್ದರು. ಅವರಲ್ಲಿದ್ದ ಉಭಯ ಭಾಷಾಭಿರುಚಿಯೇ ಅವರ ಜೀವನದುದ್ದಕ್ಕೂ ಕಾವ್ಯಾಭ್ಯಾಸಕ್ಕೆ ಸ್ಫೂರ್ತಿಯನ್ನು ಕೊಟ್ಟಿತ್ತು. ಅವರ ಜ್ಞಾಪಕಶಕ್ತಿ ಅಗಾಧವಾದದ್ದು.

ಸೆಂಟ್ರಲ್ ಕಾಲೇಜಿನಲ್ಲಿ ಅವರು ಭೌತ ವಿಜ್ಞಾನ, ರಸಾಯನ ವಿಜ್ಞಾನ ಮತ್ತು ಜೀವ ವಿಜ್ಞಾನ ಇವುಗಳಲ್ಲಿ ಒಳ್ಳೇ ಪಾಂಡಿತ್ಯವನ್ನು ದೊರಕಿಸಿದರು. ಸಹಾಧ್ಯಾಯಿಗಳಲ್ಲಿ ಒಳ್ಳೇ ಮೇಲ್ಮೆಯನ್ನು ಪಡೆದರು. ಪರೀಕ್ಷೆಗಳಲ್ಲಿ ಉಚ್ಚ ವರ್ಗ ಸಂಪಾದಿಸಿ, ಶಿಕ್ಷಕರ ಮನ್ನಣೆ ಅಭಿಮಾನಗಳಿಗೆ ಪಾತ್ರರಾಗಿದ್ದರು. ವಿದ್ಯಾಲಯದ ಚರ್ಚಾ ಸಂಘದ ಕಾರ್ಯ ಕಲಾಪಗಳಲ್ಲಿ ಉತ್ಸಾಹದಿಂದ ಭಾಗ ವಹಿಸುತ್ತಿದ್ದರು. ಭಾಷಣ ಸ್ಪರ್ಧೆಗಳಲ್ಲಿ ಒಳ್ಳೇ ಕನ್ನಡ ವಾಗ್ಮಿಗಳೆಂದು ಅನೇಕ ಬಹುಮಾನಗಳನ್ನು ಪಡೆದಿದ್ದರು. ಭಿನ್ನ ಕ್ಷೇತ್ರಗಳಲ್ಲಿ ಹೆಸರು ಗಳಿಸಿದ ಅನೇಕ ಸಹಾಧ್ಯಾಯಿಗಳಿಗಿಂತ ಇವರ ಪಾಂಡಿತ್ಯ ಉಚ್ಚವಾಗಿತ್ತು.

"ಪ್ರಯತ್ನ ವ್ಯಕ್ತಿ ಶೀಲವಾದರೆ, ಭವಿತವ್ಯ ದೈವಾಧೀನ" ಎಂಬ ಮಾತಿಗೆ ಇವರ ಜೀವನವು ಒಂದು ನಿದರ್ಶನ. ಬಿ.ಯಸ್‌ಸಿ., ಪದವಿಯನ್ನು ಪಡೆದು, ಮನೆ ಹಿರಿಯರ ಪ್ರಭಾವಕ್ಕೆ ಒಳಗಾಗಿ ವೈದ್ಯಕೀಯ ವಿದ್ಯಾಲಯವನ್ನು ಪ್ರವೇಶಿಸಿದರು. ತಿಂಗಳೊಪ್ಪತ್ತಿನಲ್ಲಿ, ಆ ವಿದ್ಯಾಲಯಕ್ಕೆ ಶರಣುಹೊಡೆದು, ಪುಣೆ ಪಟ್ಟಣಕ್ಕೆ ಕಾನೂನು ಅಭ್ಯಾಸಮಾಡಲು ೧೯೩೦ರಲ್ಲಿ ಓಡಿದರು. ಆಗ ನಾನು ಅದೇ ವಿದ್ಯಾಲಯದಲ್ಲಿ ಓದುತ್ತಿದ್ದೆ. ನಾನು ೧೯೩೧ರಲ್ಲಿ ಫರ್ಗ್ಯೂಶನ್ ಕಾಲೇಜಿನ ಪ್ರಾಧ್ಯಾಪಕನಾಗಿ ಸೇರಿದಾಗ, ಅಲ್ಲಿಯ ಕರ್ಣಾಟಕ ಸಂಘದ ಚಟುವಟಿಕೆಗಳು ತುಂಬಾ ಆಕರ್ಷಿತವಾಗಿರುತ್ತಿದ್ದವು. ಶ್ರೀ ಹೊಂಬೇಗೌಡರೂ ಆ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಆಗ ಮೈಸೂರು ಕರ್ಣಾಟಕದಿಂದ ಕಾನೂನು ಅಭ್ಯಾಸಕ್ಕಾಗಿ ಸುಮಾರು ೭೦–೮೦ ವಿದ್ಯಾರ್ಥಿಗಳು ಇರುತ್ತಿದ್ದರು. ಅವರೆಲ್ಲ ಉತ್ಸಾಹಿ ತರುಣರು; ಶ್ರೀಮಂತರು.

ಅವರು ೧೯೩೩ನೇ ಸಾಲಿನಲ್ಲಿ ಎಲ್.ಎಲ್.ಬಿ. ಪದವಿ ಪಡೆದು ಮೈಸೂರಿನಲ್ಲಿ ಆಗ ಶ್ರೇಷ್ಠ ನ್ಯಾಯವಾದಿಗಳೆಂದು ಹೆಸರುಗಳಿಸಿದ ಶ್ರೀ ಹೆಚ್. ಸಿ. ದಾಸಪ್ಪನವರ ಆಶ್ರಯದಲ್ಲಿ ವಕೀಲಿಯನ್ನು ಆರಂಭಿಸಿದರು. ಆ ಕಾಲದಿಂದ ಅವರು ಮುಖ್ಯ ನ್ಯಾಯಮೂರ್ತಿಗಳಾಗುವವರೆಗೆ ಭಾಗ್ಯದೇವತೆಯೇ ಅವರ ಪ್ರಗತಿಯ ರಕ್ಷಕಳಾಗಿದ್ದಳೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ನಾಲ್ಕಾರು ವರ್ಷಗಳಲ್ಲಿಯೇ ವಕೀಲಿ ವ್ಯವಸಾಯದಲ್ಲಿ ಸಾಕಷ್ಟು ಅನುಭವ ಮತ್ತು ಪ್ರತಿಷ್ಠೆಯನ್ನು ಗಳಿಸಿದರು. ಆಗ ಸರಕಾರದವರು ಅವರನ್ನು ಪಬ್ಲಿಕ್ ಪ್ರಾಸಿಕ್ಯೂಟರ ಹುದ್ದೆಗೆ ನೇಮಿಸಿದರು. ಆ ಏಳು ವರ್ಷಗಳ ಅವಧಿಯಲ್ಲಿ ಅವರು ಗಳಿಸಿದ ದಂಡ ನ್ಯಾಯಶಾಸ್ತ್ರ (Criminal Law) ದ ಅನುಭವವೇ ಅವರು ನ್ಯಾಯಾಧೀಶರಾದಾಗ ಅವರ ಕೀರ್ತಿಗೆ ಬಹುತರ ಸಹಾಯಕವಾಗಿರಬೇಕು. ತಾವು ಸರಕಾರೀ ವಕೀಲರೆಂದು ಮುಂದುವರೆದರೆ, ತಮ್ಮ ಸಹಾಯಕರಾದ ಕಿರಿಯರಿಗೆ ಕೆಲಸ ಮಾಡುವ ಆಸ್ಪದ ದೊರೆಯುವದಿಲ್ಲವೆಂದು ತಾವಾಗಿಯೇ ಆ ಹುದ್ದೆಯನ್ನು ಬಿಟ್ಟುಕೊಟ್ಟರು. ಇದಕ್ಕೆ ಅವರ ಉದಾರ ಭಾವನೆ, ಉದ್ಯೋಗದಲ್ಲಿ ಕಿರಿಯರ ಬಗ್ಗೆ ಇದ್ದ ಕಳಕಳಿಯೇ ಕಾರಣ.

ಇದೇ ಕಾಲದಲ್ಲಿ ಅವರು ಆಗಿನ ಮೈಸೂರು ಸಂಸ್ಥಾನದ ಪ್ರಾತಿನಿಧಿಕ ಸಂಸ್ಥೆಯ ಸದಸ್ಯರಾಗಿ ಒಳ್ಳೆ ಸಾರ್ವಜನಿಕ ಸೇವೆಯನ್ನು ಸಲ್ಲಿಸಿದರು. ಹಳ್ಳಿ ಜೀವನದಲ್ಲಿ ರೈತರ ಕಷ್ಟ ನಷ್ಟಗಳನ್ನು ಕಣ್ಣಾರೆ ಕಂಡಿದ್ದರು; ಸಾಮಾನ್ಯರ ಸಮಸ್ಯೆ

ಗಳನ್ನು ತಿಳಿದುಕೊಂಡಿದ್ದರು. ಒಳ್ಳೇ ವಾಗ್ಮಿಗಳಾದ್ದರಿಂದ, ಆಡಳಿತದ ಕುಂದುಕೊರತೆ ಮತ್ತು ಸಾರ್ವಜನಿಕರ ಬೇಡಿಕೆಗಳ ಚರ್ಚೆಗಳಲ್ಲಿ ಆಸ್ತೆಯಿಂದ ಭಾಗವಹಿಸುತ್ತಿದ್ದರು.

ಇದೂ ಅಲ್ಲದೆ ಮೈಸೂರು ವಿಶ್ವವಿದ್ಯಾಲಯದಲ್ಲಿ ಸೆನೇಟಿನ ಸದಸ್ಯರಾಗಿ ಕೆಲವು ವರ್ಷ ದುಡಿದರು.

ಹೀಗೆ ವಿವಿಧ ಕ್ಷೇತ್ರಗಳಲ್ಲಿ ಅವರಿಗೆ ದೊರೆತ ಅನುಭವ ಅವರ ವ್ಯಕ್ತಿತ್ವಕ್ಕೆ ಹೊಸ ಮೆರಗು ತಂದಿರಬೇಕು. ಸಂಸ್ಥಾನ ಸರಕಾರದವರು ಅವರನ್ನು ಲೋಕ ಸೇವಾ ಸಮಿತಿಗೆ ಏಕಮೇವ ಸದಸ್ಯರೆಂದು ಫೆಬ್ರವರಿ ೧೯೪೭ರಲ್ಲಿ ನೇಮಿಸಿದರು. ಆಗ ಅವರ ಹೊಣೆ ತುಂಬಾ ಹೆಚ್ಚಾಗಿರಲು ಸಾಕು, ಅವರು ತಮ್ಮ ಬುದ್ಧಿ ಚಾತುರ್ಯ ಚಾಣಾಕ್ಷತೆಯಿಂದ ಸಮಾಜದ ಮತ್ತು ಸರಕಾರದ ಮನ್ನಣೆಗೆ ಪಾತ್ರರಾದರು. ಸಂಸ್ಥಾನದಲ್ಲಿ ಹಿಂದುಳಿದವರ ಮತ್ತು ಹರಿಜನ ಗಿರಿಜನರ ಕಲ್ಯಾಣ ಸಾಧಿಸಲು ತುಂಬಾ ಹೆಣಗಿದರು. ವ್ಯಕ್ತಿಯ ಯೋಗ್ಯತೆಗೆ ತಕ್ಕಂತೆ ಅಂಥ ಅಭ್ಯರ್ಥಿಗಳನ್ನು ಬೇರೆ ಬೇರೆ ಹುದ್ದೆಗಳಿಗೆ ಅರ್ಹರೆಂದು ಶಿಫಾರಸು ಮಾಡುತ್ತಿದ್ದರು. ಅವರ ನಾಲ್ಕು ವರ್ಷಗಳ ಅಧಿಕಾರಾವಧಿಯಲ್ಲಿ ಹಿಂದುಳಿದ ವರ್ಗದವರಿಗೆ ಹೆಚ್ಚು ಪ್ರೋತ್ಸಾಹ ದೊರೆಯಿತು. ಅವರಿಂದ ಉಪಕೃತರಾದ ಅನೇಕ ವ್ಯಕ್ತಿಗಳು ಈಗಲೂ ನಮ್ಮರಾಜ್ಯದಲ್ಲಿ ದೊಡ್ಡ ಅಧಿಕಾರಿಗಳಾಗಿದ್ದಾರೆ.

ಲೋಕ ಸೇವಾ ಆಯೋಗದ ಸದಸ್ಯರಿರುವಾಗಲೇ ೧೯೫೧ನೇ ಸಾಲಿನ ಮೇ ತಿಂಗಳಲ್ಲಿ ಅವರು ಜಿಲ್ಲಾ ನ್ಯಾಯಾಧೀಶರಾದರು. ವ್ಯವಹಾರ ಜ್ಞಾನ, ಕಾನೂನು ಪಾಂಡಿತ್ಯ ಮತ್ತು ಜನಜೀವನದ ಪರಿಚಯ ಅವರ ನ್ಯಾಯ ನಿರ್ಣಯ ಶಕ್ತಿಗೆ ಪುಷ್ಟಿ ಕೊಟ್ಟವು. ಅವರು ದಿವಾಣಿ ಮತ್ತು ಫೌಜುದಾರಿ (Criminal) ಮೊಕದ್ದಮೆಗಳನ್ನು ಜಾಣತನದಿಂದ ಮತ್ತು ಅನಾವಶ್ಯಕ ವಿಲಂಬಕ್ಕೆ ಎಡೆಗೊಡದೆ ಮುಗಿಸಿ ಬಿಡುತ್ತಿದ್ದರು. ವಕೀಲರನ್ನು ಮತ್ತು ಕಕ್ಷಿಗಾರರನ್ನು ಸೌಜನ್ಯದಿಂದ ಕಾಣುತ್ತಿದ್ದರು. ಸಮತೌಲಿಕ ಚರ್ಚೆ, ಸಾಕ್ಷ್ಯವಿನ್ಯಾಸ ಮತ್ತು ಯೋಗ್ಯ ಕಾನೂನು ವಿಶದೀಕರಣ ಇವು ಅವರ ತೀರ್ಪುಗಳ ವಿಶಿಷ್ಟ ಲಕ್ಷಣಗಳಾಗಿದ್ದವು.

ದಿ|| ಹೊಂಬೇಗೌಡರು ನಾಲ್ಕೈದು ವರ್ಷಗಳಲ್ಲಿಯೇ ಉತ್ತಮ ನ್ಯಾಯಾಧೀಶರೆಂದು ಹೆಸರುಗಳಿಸಿದರು. ೧೯೫೫ನೇ ಸಾಲಿನ ಜೂನ್ ತಿಂಗಳಲ್ಲಿ ಅವರು ಶ್ರೇಷ್ಠ ನ್ಯಾಯಾಲಯದ ಪೀಠವನ್ನೇರಿದರು. ಪ್ರಭಾವಿತ ವ್ಯಕ್ತಿತ್ವ, ನಿರ್ಭೀತ ಸ್ವಭಾವ, ಸ್ವತಂತ್ರ ಪ್ರವೃತ್ತಿ ಮತ್ತು ಸದಸದ್ವಿವೇಕ ಬುದ್ಧಿಯುಕ್ತಿ ನ್ಯಾಯನೀತಿ ಇವು ಅವರ ನ್ಯಾಯನೀತಿ ಪದ್ಧತಿಯ ತಳಹದಿಯಾಗಿದ್ದವು. ಸರಸ ಶೈಲಿ ಮತ್ತು ಸರಳ ತರ್ಕ ಅವರ ತೀರ್ಪುಗಳಲ್ಲಿ ಉಸಿರಾಗಿದ್ದುವು. ಅವರ ಅನೇಕ ತೀರ್ಪುಗಳು ನ್ಯಾಯಾಲಯಗಳ ಸಾಹಿತ್ಯದಲ್ಲಿ ತಮ್ಮದೇ ಆದ ಸ್ಥಾನಮನ್ನಣೆಗಳನ್ನು ಪಡೆದಿವೆ.

ಸುಮಾರು ಎಂಟು ವರುಷಗಳ ಕಾಲ ನ್ಯಾಯಮೂರ್ತಿಗಳಾಗಿ ಸೇವೆ ಸಲ್ಲಿಸಿ, ಅವರು ೧೯೬೪ನೇ ಸಾಲಿನ ಜನವರಿ ತಿಂಗಳ ದಿನಾಂಕ ೨೦ರಂದು ಮುಖ್ಯ ನ್ಯಾಯಮೂರ್ತಿಯಾಗಿ ನೇಮಿಸಲ್ಪಟ್ಟರು. ಆ ಮೊದಲೇ ಅವರು ಸಕಲ ಕ್ಷೇತ್ರಗಳಿಗೆ ಸಂಬಂಧಪಟ್ಟ ಶಾಸನಗಳ ಪರಿಣತಿ ಪಡೆದು ಸಮರ್ಥ ನ್ಯಾಯಾಧೀಶರೆಂದು ಹೆಸರುಗಳಿಸಿದ್ದರು. ಅಸದೃಶವಾದ ಸಹನ ಶೀಲತೆ, ಸೂಕ್ಷ್ಮಗ್ರಹಣ ಶಕ್ತಿ ಮತ್ತು ವಿಶ್ಲೇಷಣಾಯುಕ್ತ ವಿವೇಚನೆ ಇವು ಅವರ ತೀರ್ಪುಗಳಿಗೆ ಶೋಭೆಯನ್ನು ತಂದಿದ್ದವು. ಪ್ರಜಾಸತ್ತಾತ್ಮಕ ರಾಜ್ಯ ಪದ್ಧತಿಯ ಉಚ್ಚ ನ್ಯಾಯಾಲಯಗಳಲ್ಲಿಯ ನ್ಯಾಯಮೂರ್ತಿಗಳ ಹೊಣೆಯನ್ನು ಅವರು ಚೆನ್ನಾಗಿ ಅರಿತಿದ್ದರು. ಅಲ್ಲದೆ ಕೆಳಗಿನ ನ್ಯಾಯಾಲಯಗಳಲ್ಲಿ ಕಾರ್ಯಮಾಡುವ ನ್ಯಾಯಾಧೀಶರನ್ನು ಯಾವಾಗಲೂ ವಿಶ್ವಾಸದಿಂದ ಕಾಣುತ್ತಿದ್ದರು. ಅವರ ಕಷ್ಟನಷ್ಟಗಳ ಪರಿಹಾರಕ್ಕಾಗಿ ಸಾಧ್ಯವಿದ್ದ ಸಹಾಯಕೊಡಲು ಹಿಂಜರಿಯುತ್ತಿರಲಿಲ್ಲ; ಅದರಂತೆಯೇ ಅವರ ನಡವಳಿಕೆಯಲ್ಲಿಕಂಡುಬಂದ ಲೋಪದೋಷಗಳನ್ನು ಸ್ಪಷ್ಟವಾಗಿ ತಿಳಿಸಿಬಿಡುತ್ತಿದ್ದರು. ಅಪ್ರಮಾಣಿಕತೆ, ಕಾರ್ಯಶಿಥಿಲತೆ ಮತ್ತು ಯೋಗ್ಯತೆಗೆ ಕುಂದು ತರಬಹುದಾದ ರೀತಿನೀತಿಗಳನ್ನು ಯಾರಲ್ಲಿ ಕಂಡರೂ ನಿರ್ಭೀತಿಯಿಂದ ಅವರಿಗೆ ತಿಳಿಸಿ ಮೆಚ್ಚಿನ ಜೀವನಮಾರ್ಗ ಅನುಸರಿಸಲು ಉಪದೇಶಿಸುತ್ತಿದ್ದರು. ರಾಜ್ಯದಲ್ಲಿ ಕಾರ್ಯಮಾಡುತ್ತಿದ್ದ ಎಲ್ಲ ನ್ಯಾಯಾಧೀಶರ ಬಗ್ಗೆ ಅವರಿಗಿದ್ದ ತಿಳಿವು ನಮ್ಮಲ್ಲಿ ಅಚ್ಚರಿಯನ್ನುಂಟುಮಾಡುವಂತಹದಿತ್ತು.

ರಾಜ್ಯದ ಮುಖ್ಯ ನ್ಯಾಯಮೂರ್ತಿಗಳೆಂದು ಅಧಿಕಾರ ಸ್ವೀಕರಿಸುವ ಮುನ್ನ ಅವರಾಡಿದ ಮಾತುಗಳು ಅವರ ಆಶೆ ಅಭಿಲಾಷೆಗಳ ಮೇಲೆ ಸಾಕಷ್ಟು ಬೆಳಕನ್ನು ಬೀರುವವು. ಅವರು ನುಡಿದದ್ದು; "ಈ ಶ್ರೇಷ್ಠ ನ್ಯಾಯಾಲಯದ

ಮುಖ್ಯ ನ್ಯಾಯಮೂರ್ತಿಯೆಂದು ನನ್ನ ಮೇಲಿರುವ ಹೊಣೆ ತುಂಬಾ ಭಾರವಾಗಿದೆ ಎಂಬುದರ ಅರಿವು ನನಗೆ ಚೆನ್ನಾಗಿದೆ. ಪರಮಾತ್ಮನು ಈ ಕಾರ್ಯವನ್ನು ನನ್ನ ಪಾಲಿಗೆ ಕೊಟ್ಟಿದ್ದಾನೆ. ಮತ್ತು ನನ್ನ ಕರ್ತವ್ಯಗಳನ್ನು ಯೋಗ್ಯರೀತಿಯಿಂದ ನಿರ್ವಹಿಸಲು ಅಂದರೆ ಅವನ ಕಾರ್ಯವನ್ನು ಪೂರೈಸಲು ಅವಶ್ಯವಾದ ಶಕ್ತಿ ಮತ್ತು ಪ್ರಜ್ಞೆ-ವಿವೇಕಗಳನ್ನು ದಯಪಾಲಿಸುವನೆಂಬುದರಲ್ಲಿ ನನ್ನಲ್ಲಿ ಯಾವ ಸಂದೇಹವೂ ಇಲ್ಲ. ನ್ಯಾಯಾಂಗದ ಸ್ವಾತಂತ್ರ್ಯತೆಯನ್ನು ಕಾಯ್ದುಕೊಂಡು, ಅದರ ಘನತೆ ಗೌರವಗಳನ್ನು ಎತ್ತಿಹಿಡಿದು ನನ್ನ ನಾಮಾಂಕಿತ ಪೂರ್ವಾಧಿಕಾರಿಗಳು ನಿರ್ಮಿಸಿದ ಉದಾತ್ತ ಸಂಪ್ರದಾಯಗಳನ್ನು ಪಾಲಿಸಿಕೊಂಡು ಹೋಗುತ್ತೇನೆಂದು ನಿಮಗೆಲ್ಲ ಭರವಸೆ ಮಾತ್ರ ಕೊಡಬಲ್ಲೆನು. ಭಾರವಾದ ನನ್ನ ಕರ್ತವ್ಯಗಳನ್ನು ನಿರ್ವಹಿಸುವುದರಲ್ಲಿ ನನ್ನ ಮಾನ್ಯ ಸಹೋದ್ಯೋಗಿಗಳು ಹೃತ್ಪೂರ್ವಕವಾದ ಸಹಕಾರವನ್ನು ಯಥೇಷ್ಟವಾಗಿ ಸತತ ನೀಡುವರೆಂದು ನನಗೆ ವಿಶ್ವಾಸವಿದೆ." ಈ ವಿಶ್ವಾಸದ ವಚನವನ್ನು ತಮ್ಮ ಅಧಿಕಾರಾವಧಿಯಲ್ಲಿ ಯಶಸ್ವಿಯಾಗಿ ಪಾಲಿಸಿದರೆಂದು ಹೇಳಲು ಯಾವ ಅಭ್ಯಂತರವಿಲ್ಲ.

ಮೇಲೆ ಉದ್ಧರಿಸಿದ ಅವರ ಭಾಷಣದಿಂದ ಅವರು ದೇವರಲ್ಲಿ ಅಚಲ ಶ್ರದ್ಧೆಯುಳ್ಳವರಾಗಿದ್ದರೆಂದು ಸ್ಪಷ್ಟವಾಗುತ್ತದೆ. ವರ್ಷದಲ್ಲಿ ಕನಿಷ್ಟ ಆರೆಂಟು ಸಾರಿಯಾದರೂ ತಿರುಪತಿಗೆ ಹೋಗಿ ಬರುತ್ತಿದ್ದರು. ನಾಲ್ಕೈದು ವರ್ಷಗಳ ಹಿಂದೆ ಶಿವಮೊಗ್ಗೆ ಜಿಲ್ಲೆಯಲ್ಲಿರುವ ಹೊಂಬುಜ ಮಠದ ಶ್ರೀ ದೇವೇಂದ್ರ ಕೀರ್ತಿ ಭಟ್ಟಾರಕರವರು ಶ್ರೀ ಹೊಂಬೇಗೌಡರನ್ನು ವಾರ್ಷಿಕ ರಥೋತ್ಸವದ ಕಾಲಕ್ಕೆ ಮುಖ್ಯ ಅತಿಥಿಗಳೆಂದು ಆಹ್ವಾನಿಸಿದ್ದರು. ಅವರನ್ನು ಹಿಂಬಾಲಿಸುವ ಯೋಗ ನನಗೆ ದೊರಕಿತ್ತು. ಶ್ರೀ ಪದ್ಮಾವತಿ ಅಮ್ಮನವರ ಪೂಜೆಯ ಕಾಲದಲ್ಲಿ ಅವರು ವ್ಯಕ್ತಪಡಿಸಿದ ಅನನ್ಯ ಭಕ್ತಿ, ನಿಶ್ಚಲ ಭಾವ ಮತ್ತು ಸಂಜೆಯ ಸಭೆಯಲ್ಲಿ ಆಡಿದ ಮಾತುಗಳು ಅವರ ಧಾರ್ಮಿಕ ಶ್ರದ್ಧೆ-ಆಚರಣೆಗಳ ಪ್ರತಿಧ್ವನಿಯಾಗಿದ್ದವು.

ಅವರು ಸಾಹಿತಿಗಳಾಗದಿದ್ದರೂ, ಹಳೇ ಮತ್ತು ಹೊಸ ಸಾಹಿತ್ಯದಲ್ಲಿಯ ಉದ್ದಾಮ ಗ್ರಂಥಗಳನ್ನು ವಿದ್ಯಾರ್ಥಿಯಾಗಿದ್ದಾಗಲೇ ಓದಿಕೊಂಡಿದ್ದರೆಂದು ಮೇಲೆ ಉಲ್ಲೇಖಿಸಿದ್ದೇನೆ. ನ್ಯಾಯಮೂರ್ತಿಗಳಾದ ಮೇಲೂ, ಪಂಪ, ಹೊನ್ನ, ರನ್ನ, ಲಕ್ಷ್ಮೀಶ ಮತ್ತು ಕುಮಾರವ್ಯಾಸ ಇವರ ಕಾವ್ಯಗಳನ್ನು ಬಿಡುವು ದೊರೆತಾಗ ಓದುತ್ತಿದ್ದರು; ಓದಿಸುತ್ತಿದ್ದರು. ಗಮಕ ಕಲೆಯ ಪುರಸ್ಕೃತರಾಗಿದ್ದರು. ಕುಮಾರವ್ಯಾಸ ಭಾರತ, ರಾಮಾಯಣ ಮತ್ತು ಭಗವದ್ಗೀತೆಗಳ ಕಾವ್ಯಪಠಣ ಪ್ರವಚನಗಳು ಸಾರ್ವಜನಿಕವಾಗಿ ನಡೆದಲ್ಲಿ, ಹೋಗಿ ಕೇಳಿ ಆನಂದಪಡುತ್ತಿದ್ದರು. ರಾಷ್ಟ್ರಕವಿ ಕುವೆಂಪುರವರ "ರಾಮಾಯಣ ದರ್ಶನ"ದ ಆರಾಧಕರಾಗಿದ್ದರು. ಅದರಲ್ಲಿಯ ರಸಮಯವಾದ, ಬೋಧಪ್ರದವಾದ ಮತ್ತು ಕಾವ್ಯಭರಿತವಾದ ಅನೇಕ ಪದ್ಯಗಳು ಅವರಿಗೆ ಕಂಠಪಾಠವಾಗಿದ್ದವು. ಅವರ ಸ್ಮರಣ ಶಕ್ತಿಯು ಅವರಿಗೆ ತುಂಬಾ ಸಹಾಯಕವಾಗಿತ್ತು. ಸುಮಾರು ಮೂರು ನಾಲ್ಕು ವರ್ಷಗಳ ಕೆಳಗೆ ತುಮಕೂರಿನಲ್ಲಿ ಒಕ್ಕಲಿಗರ ವಿದ್ಯಾರ್ಥಿ ನಿಲಯದಲ್ಲಿ, ಕುವೆಂಪುರವರ ಭಾವಚಿತ್ರದ ಅನಾವರಣ ಸಮಾರಂಭಕ್ಕಾಗಿ ನಾವಿಬ್ಬರೂ ಹೋಗಿದ್ದೆವು. ಶ್ರೀ ಪುಟ್ಟಪ್ಪನವರ ಕಾವ್ಯ ತೇಜಸ್ಸನ್ನು ಪಳಗಿದ ವಿಮರ್ಶಕರಂತೆ ವರ್ಣಿಸಿ, ವರ್ಣನೆಗೆ ಪೋಷಕವಾದ ಅನೇಕ ಪದ್ಯಭಾಗಗಳನ್ನು "ರಾಮಾಯಣ ದರ್ಶನ"ದಿಂದ ಮುಖೋದ್ಗತವಾಗಿ ಹಾಡಿ ತೋರಿಸಿದಾಗ, ಅವರ ಸಾಹಿತ್ಯೋಪಾಸನೆ ಮತ್ತು ಆಳ ಅಭ್ಯಾಸ ನನ್ನಲ್ಲಿ ಆನಂದ ಅಚ್ಚರಿಗಳನ್ನುಂಟುಮಾಡಿದವು. ಅವರಲ್ಲಿ ಆಗ ಕಂಡ ರಸಿಕತ್ವಕ್ಕಾಗಿ ನಾನು ಬೆರಗಾದೆ.

ವೈಯಕ್ತಿಕ ಜೀವನದಲ್ಲಿ ಅವರು ಗಳಿಸಿದ ಮಿತ್ರರ ಸಂಖ್ಯೆ ಅಪಾರವೆಂದೇ ಹೇಳಬೇಕು. ಸ್ಥೈರಣೆ, ತಾಳ್ಮೆ, ವಾತ್ಸಲ್ಯಗಳು ಸ್ನೇಹದ ತಳಹದಿ; ಗುಣಗ್ರಾಹ್ಯತೆಯೂ ಅದರ ಇನ್ನೊಂದು ಮುಖ. ಸ್ನೇಹದಲ್ಲಿ ಕೀಳು ಮೇಲೆಂಬ ಭಾವನೆಗೆ ಎಡೆಗೊಡುತ್ತಿರಲಿಲ್ಲ. ಜೀವನದ ಎಲ್ಲ ಮಟ್ಟಗಳಲ್ಲಿಯೂ, "ಅವರು ನನ್ನ ಸ್ನೇಹಿತರು" ಎಂದು ಹೇಳಿಕೊಳ್ಳುವ ಸಜ್ಜನರು ಅನೇಕರಿದ್ದಾರೆ. ಸ್ನೇಹ ಜೀವನದ ಅಮೂಲ್ಯ ಸಂಪತ್ತೆಂದು ಅವರು ಭಾವಿಸಿರಬೇಕು. ಆದರಾತಿಥ್ಯಕ್ಕೆ ಅವರು ಹೆಸರಾಗಿದ್ದರು.

ಅವರು ಉದಾರ ಜೀವಿಗಳು. ಅವರ ವಾಸ ವಿಲ್ಸನ್ ಗಾರ್ಡನದಲ್ಲಿ. ಅಲ್ಲಿಯ ಧಾರ್ಮಿಕ, ಶೈಕ್ಷಣಿಕ, ಸಾಹಿತಿಕ ಮತ್ತು ಸಾಮಾಜಿಕ ಜೀವನದಲ್ಲಿ ಅವರ ಪಾತ್ರ ಮಹತ್ತರವಾದದ್ದು. ಕಳೆದ ಹತ್ತು ಹದಿನೈದು ವರ್ಷಗಳಲ್ಲಿ ನಗರದ ಆ ಭಾಗದಲ್ಲಿ ನಿರ್ಮಿತವಾದ ಎಲ್ಲ ಸಂಸ್ಥೆಗಳೂ ಅವರ ಪ್ರತ್ಯಕ್ಷ ಅಪ್ರತ್ಯಕ್ಷ ಸಹಕಾರ, ಸಹಾನುಭೂತಿ, ಸಹಾಯ, ಪ್ರೋತ್ಸಾಹ ಪಡೆದಿವೆ. ಒಂದು ರೀತಿಯಿಂದ ಅಲ್ಲಿಯ

ಪ್ರಗತಿಪರ ಸಂಸ್ಥೆಗಳು ದಿವಂಗತರ ಜೀವನದ ಪ್ರತೀಕಗಳಾಗಿವೆ. ಅನೇಕ ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಸ್ಥೆಗಳು ಅವರ ವಿಶಾಲ ಹೃದಯದ ಉದಾರತನವನ್ನು ಅನುಭವಿಸಿವೆ.

ಅವರ ಅಧಿರಾಕಾವಧಿಯಲ್ಲಿ ಸರಕಾರದವರೊಡನೆ ಇದ್ದ ಸಂಬಂಧ ಅನುಕರಣೀಯವಾಗಿತ್ತು. ನ್ಯಾಯದಾನ ಕಾರ್ಯದಲ್ಲಿ ನಿಷ್ಪಕ್ಷಪಾತ್ರರಾಗಿದ್ದು, ಆಡಳತೆಯ ಕಲ್ಯಾಣಕ್ಕಾಗಿ ಸರಕಾರದಿಂದ ಅವಶ್ಯವಿದ್ದ ಧನಸಹಾಯವನ್ನು ದೊರಕಿಸುತ್ತಿದ್ದರು. ರಾಜ್ಯದಲ್ಲಿ ಅನೇಕ ಕೋರ್ಟುಗಳಿಗಾಗಿ ಹೊಸ ಹೊಸ ಕಟ್ಟಡಗಳನ್ನು ಕಟ್ಟಿಸಿದರು. ಹೊಸ ಕೋರ್ಟುಗಳಿಗೆ ಅವಶ್ಯವಾದ ಶಾಸನ ಗ್ರಂಥಗಳನ್ನು ಪೂರೈಸಿದರು. ಅವರ ಕಾರ್ಯಕ್ಷಮತೆ ಮತ್ತು ನಿಯಮಿತತನ ಅನುಕರಣೀಯವಾಗಿದ್ದವು. ಸುಮಾರು ಎರಡು ಮೂರು ವರ್ಷಗಳ ಕೆಳಗೆ ಕೆಲವು ತಿಂಗಳು ಅವರ ಆರೋಗ್ಯ ಸರಿಯಾಗಿರಲಿಲ್ಲ. ವೈದ್ಯರು ವಿಶ್ರಾಂತಿ ಹೊಂದಲೂ ಮೇಲಂತಸ್ತು ಏರದಿರಲೂ ಸಲಹೆ ಮಾಡಿದರು. ಆ ಸಲಹೆಗನುಸಾರ ರಜೆ ಪಡೆದು ವಿಶ್ರಾಂತಿ ಹೊಂದಬಹುದಿತ್ತು. ಹಾಗೆ ಮಾಡದೆ, ನೆಲ ಅಂತಸ್ತಿನ ಮೇಲೆಯೇ ಕೆಲವು ಬದಲಾವಣೆ ಮಾಡಿಸಿ, ತಮ್ಮ ಕೋರ್ಟಿನ ಕೆಲಸ ಅಲ್ಲಿಯೇ ಮಾಡುತ್ತಿದ್ದರು.

ದಿ|| ಹೊಂಬೇಗೌಡರು ವಿವಿಧ ಕ್ಷೇತ್ರಗಳಲ್ಲಿ ಹೆಸರು ಗಳಿಸಿದರು. ಅವರ ಜೀವನವು ವೈವಿಧ್ಯಪೂರ್ಣವಾಗಿತ್ತು. ತಮ್ಮ ಕಾರ್ಯಕ್ಷಮತೆ, ಸಭ್ಯತೆ ಮತ್ತು ಔದಾರ್ಯಗಳಿಂದ ಅವರು ತಮ್ಮ ಆದರ್ಶಗಳನ್ನು ಸಾಧಿಸಲು ಹೆಣಗಿದರು. ಮರಣದ ಹಿಂದಿನ ದಿವಸ ಕೂಡ ತಮ್ಮ ಮುಂದಿದ್ದ ಎಲ್ಲ ವ್ಯಾಜ್ಯಗಳನ್ನು ಮುಗಿಸಿ, ಕೋರ್ಟಿನಲ್ಲಿಯೇ ನಾಲ್ಕು ನಿರ್ಣಯಗಳನ್ನು ಲಘು ಲೇಖಕನಿಗೆ ಹೇಳಿ ಬರೆಯಿಸಿದರು. ಅವರ ಕರ್ತವ್ಯನಿಷ್ಠೆಯು ಪರಿಪೂರ್ಣವಾಗಿತ್ತು. ಅದಕ್ಕಿಂತಲೂ ಹೆಚ್ಚಾಗಿ, ಅನೇಕರ ಜೀವನಗಳಲ್ಲಿ ಹೊಸ ಬೆಳಕು-ಆನಂದ ತಂದುಕೊಟ್ಟರು. ವ್ಯಕ್ತಿಯ ಜೀವನದಲ್ಲಿ ಸಾಧಿಸಬಹುದಾದ ಶ್ರೇಯಸ್ಸು. ಇದಕ್ಕಿಂತಲೂ ಶ್ರೇಷ್ಠವಾದದ್ದು ಯಾವುದಿದೆ?

---

## ಸರ್ವೇಶ್ವರನ ವಚನಗಳು

■

ಹುಟ್ಟುಕುರುಡ ಧೃತರಾಷ್ಟ್ರ
ಕಣ್ಣಿದ್ದೂ ಕುರುಡಿ ಗಾಂಧಾರಿ
ನಮ್ಮದು ಗಾಂಧಾರಿ ಸಂತಾನ

* * *

ಅರಿವು ಬೆಳಗುವುದು ದೊಡ್ಡದಲ್ಲ
ಮರೆವು ಅಮರವುದು ದೊಡ್ಡದಲ್ಲ
ಅರಿವು ಮರೆವುಗಳ ತಾರತಮ್ಯ ಮೂಡುವುದು
ಅತಿ ದೊಡ್ಡದು ಸರ್ವೇಶ್ವರ

■

ಡಿ. ಲಿಂಗಯ್ಯ

# ನಮಸ್ಕಾರ

•

ಉಟ್ಟು ತೊಟ್ಟಿಲ್ಲ
ಚಳಿಗಾಳಿ ಮಳೆ ಬಿಸಿಲು ತಟ್ಟಿಲ್ಲ,
ವಿಂಧ್ಯಗಿರಿ ಬಯಲ ಸಿದ್ಧ,
ತೊಡೆದು ಭೋಗದ ಆಸೆ
ಇಹದ ಪಿಪಾಸೆ
ಸಿದ್ಧಶಿಲೆ, ಭೂಮಿ ಆಕಾಶದುದ್ದ ನಿಲವು.

ಅರೆಬಿಟ್ಟ ಕಣ್ಣಿನಂಚಿನಲಿ
ವಿಶ್ವಶಾಂತಿಯ ಸಂಚು ;
' ಣಮೋ ಅರುಹಂತ '
ಏರಲಿ ಲೋಕ ಹಂತ ಹಂತ
ಜಿನತತ್ವ ಮುಕ್ತಿಪಂಥ.
ಹುಣ್ಣಿಮೆ ಚಂದ್ರನ ವದನ ;
' ಣಮೋ ಸಿದ್ಧ '
ಕಳೆ ಇಹದ ಪ್ರಾರಬ್ಧ.
ಉದಯರವಿ ರಶ್ಮಿಯಲಿ
ಚಿಂದುಟಿಯ ನಗುವರಳಿ ;
' ಣಮೋ ಆಚಾರ್ಯ '
ಸಮ್ಯಕ್ ಚರಿತದಾರ್ಯ.
ಮುಂಗುರುಳ ಸುರುಳಿಯಲಿ
ನೆನಪು ಮರುಕಳಿಸಿ ;
' ಣಮೋ ಉಪಾಧ್ಯಾಯ '
ಇದು ಮೊದಲ ಅಧ್ಯಾಯ ;
ಅಡಿಯಿಂದ ಹಬ್ಬಿರುವ ಹೂವಬಳ್ಳಿ
ಬ್ರಹ್ಮಾಂಡಕೆ ಹತ್ತಿರುವ ಕಾಮುಕಳ್ಳಿ;
ಹತ್ತಿಯೂ ಹತ್ತದಂತೆ,
ಕಿತ್ತೊಗೆದೆ, ' ಸಮ್ಯಕ್ ದರ್ಶನ 'ದಲ್ಲಿ
ನಮಸ್ಕಾರ ನಿನಗೆ ' ಸರ್ವಸಾಧುಗಳಿಗೆ.'

ಪಂಚ ಪರಮೇಷ್ಠಿ
ಜಿನಮಂತ್ರ ಗಾಯಿತ್ರಿ
ಗೊಮ್ಮಟನ ತಪದಲ್ಲಿ
ಮುಕ್ತವಾಯಿತು ಧರಿತ್ರಿ.

ಚಾವುಂಡರಾಯನ ಕೀರ್ತಿ
ಈ ಭವ್ಯಮೂರ್ತಿ,
ಬೆಳಗೊಳದ ಬಾಹುಬಲಿ ಗೊಮ್ಮಟ
ಕರ್ನಾಟ ಶಿಲ್ಪಕಲೆಗಿದು ಕಿರೀಟ ;
ಇಗೋ ನಮಸ್ಕಾರ,
ಜಿನವಾಣಿಯ ಆವಿಷ್ಕಾರ
ಕವಿಮನದ ಪುರಸ್ಕಾರ.

•

ಸತ್ಯನಾರಾಯಣರಾವ್ ಅಣತಿ

# ಉತ್ತುಂಗ ಸಾಹಿತಿ ಉತ್ತಂಗಿ

■ ಎಸ್. ಆರ್. ಗುಂಜಾಳ

(೧೯೬೯ನೇ ಆಗಸ್ಟ್ ಸಂಚಿಕೆಯಿಂದ ಮುಂದುವರಿದುದು)

ಉತ್ತಂಗಿಯವರ ಪಾಶ್ಚಾತ್ಯ, ಪೌರ್ವಾತ್ಯ ತತ್ವಜ್ಞಾನಗಳ ಆಳವಾದ ಪಾಂಡಿತ್ಯವನ್ನೂ ಅನುಭವವನ್ನೂ ಕ್ರೈಸ್ತ ಶ್ರದ್ಧೆ – ನಿಷ್ಠೆಗಳನ್ನೂ ಸ್ಪಷ್ಟವಾಗಿ ಕಾಣಬೇಕೆಂದಿದ್ದರೆ **"ದೃಷ್ಟಾಂತ ದರ್ಪಣ"**ದ ಎರಡೂ ಭಾಗಗಳಲ್ಲಿ ಬರುವ (೧) ದೇವರು (೨) ಪಾಪ (೩) ಪಶ್ಚಾತ್ತಾಪ (೪) ಸೃಷ್ಟಿಯೂ ಸತ್ಯವೇದವೂ (೫) ರಕ್ಷಕನೂ ರಕ್ಷಣೆಯೂ ಎಂಬ ಐದು ವಿಷಯಗಳ ವಿವರವಾದ ವಿವೇಚನೆಯನ್ನು ಸೂಕ್ಷ್ಮವಾಗಿ ಶಾಂತಚಿತ್ತದಿಂದ ಓದಬೇಕು. ಅವರ ಶೈಲಿ ಎಷ್ಟು ಸುಂದರವಾಗಿದೆ! ಪಾಂಡಿತ್ಯ ಎಷ್ಟು ಉನ್ನತವಾಗಿದೆ! ಅನುಭಾವವೆಷ್ಟು ಸರಳವಾಗಿದೆ! ಎಂಬುದನ್ನು ಸ್ವತಃ ಅನುಭವಿಸಿ ಅರಿಯಬೇಕು.

"ದೇವರು ಇದ್ದಾನೋ? ಜಗತ್ತು ಹೇಗೆ ಹುಟ್ಟಿತು? ಜೀವ ಎಲ್ಲಿಂದ? ಪಾಪವು ಹೇಗೆ ಬಂತು?" ಮುಂತಾದ ಪ್ರಶ್ನೆಗಳು ಹಳೆಯ ಸಮಸ್ಯೆಗಳಾಗಿದ್ದರೂ ಪ್ರತಿಯೊಂದು ಯುಗದಲ್ಲಿ ಅವು ಹೊಸ ರೀತಿಯಿಂದ ವಿಚಾರಿಸಲ್ಪಡುತ್ತವೆ. ಶಾಸ್ತ್ರೀಯವಾದ ಈ ಯುಗದಲ್ಲಂತೂ ಅವು ವಿಶೇಷ ಕ್ರಾಂತಿಯನ್ನುಂಟುಮಾಡಿವೆಯೆಂದು ಹೇಳಬೇಕು. ಈ ತರದ ಸಮಸ್ಯೆಗಳಲ್ಲಿ ತಲೆಹಾಕುವ ವಿದ್ವಾಂಸರಿಗೆ ತಜ್ಞರೆಂದು ಹೆಸರು. ಇಂತಹ ಸಮಸ್ಯೆಗಳನ್ನು ಬಿಡಿಸುವುದಕ್ಕಾಗಿ ಜ್ಞಾನಿಗಳು ಪ್ರಾಚೀನ ಕಾಲದಿಂದಲೇ ಪರಿಶ್ರಮಪಟ್ಟಿದ್ದಾರೆಂದು ಇತಿಹಾಸದಿಂದ ತಿಳಿದುಬರುತ್ತಿದೆ. ಅಂದರೆ ಈ ವಿಷಯದಲ್ಲಿ ಯಾವ ದೇಶದ ಜ್ಞಾನಿಗಳಿಂದಲೂ ವಿಶೇಷ ಪ್ರಗತಿಯಾಗಿಲ್ಲವೆಂದು ಹೇಳಬೇಕಾಗುತ್ತದೆ. ವಿಚಾರಿಸುವ ಪದ್ಧತಿಯಲ್ಲಿ ಭೇದವು ಕಂಡುಬಂದರೂ ಇವರೆಲ್ಲರ ಮುಂದಿರುವ ಪ್ರಶ್ನೆಗಳು ಒಂದೇ ತರದವುಗಳಾಗಿದ್ದು ಸಾಮಾನ್ಯವಾಗಿ ಉತ್ತರವೂ ಒಂದೇಯಾಗಿದೆ. ಅದು **"ತಿಳಿಯುವುದಿಲ್ಲ"** ಎಂಬುದೇ. ಜ್ಞಾನಿಗಳ ಊಹಾಪೋಹಗಳು, ಅವರು ಪ್ರಯೋಗಿಸಿರುವ ಶಬ್ದಶೈಲಿ ವಿಚಾರಸರಣಿ, ರೂಪಕಗಳು, ಬೇರೆ ಬೇರೆಯಾಗಿದ್ದರೂ ವಸ್ತುಗಳು ತಿಳಿಯದೆ ಇರುವುದರಿಂದ ಎಲ್ಲರೂ ಆ ಸಮಸ್ಯೆಗಳ ಸುತ್ತಲೇ ಸುಳಿದಾಡುತ್ತಿರುವರೆಂದು ಹೇಳಬೇಕು.

ಇಂತಹ ಜ್ಞಾನಿಗಳನ್ನು ಗಾಣತಿರುಗುವ ಎತ್ತಿನ ಸಮಾನ ಮಾಡಬಹುದು. ಗಾಣದೆತ್ತಿನ ಕಣ್ಣುಗಳು ಕಟ್ಟಲ್ಪಟ್ಟಿದ್ದು ಅದು ಹಗಲೆಲ್ಲ ಗಾಣದ ಸುತ್ತಲೂ ತಿರುಗುತ್ತ ಇರುತ್ತದೆ. ಒಂದೊಂದು ಹೆಜ್ಜೆಯನ್ನಿಡುತ್ತ ಅದು ಎಡೆಬಿಡದೆ ಗಾಣದ ಸುತ್ತಲೂ ಸಾಗುತ್ತಿರುವುದರಿಂದ ಬಹುದೂರ ಹೋದಂತೆ ಅದಕ್ಕೆ ಅನಿಸಿದರೂ ಸಾಯಂಕಾಲವಾದ ಮೇಲೆ ಅದರ ಕಣ್ಣುಬಿಟ್ಟರೆ ಅದು ತನ್ನ ಸ್ಥಳಬಿಟ್ಟು ಒಂದು ನೂಲು ಸಹ ಈಚೆ ಆಚೆ ಹೋಗಲಿಲ್ಲವೆಂದು ಅದಕ್ಕೆ ತಿಳಿದುಬರುವುದು. ತತ್ವಜ್ಞರ ಹಾಡಾದರೂ ಹೀಗೆಯೇ ಇರುತ್ತದೆ. ಇವರು ಎಷ್ಟೋ ಶತಮಾನಗಳಿಂದ ತಾತ್ವಿಕ ಸಮಸ್ಯೆಗಳನ್ನು ಕುರಿತು ನೂರಾರು ಗ್ರಂಥಗಳನ್ನು ಬರೆದು, ವಿಚಾರದಲ್ಲಿ ಬಹುದೂರ ಹೋದವರಂತೆ ಕಂಡರೂ ಮೊದಲಿದ್ದ ಸ್ಥಳದಲ್ಲಿಯೇ ಇದ್ದಾರೆಂದು ಹೇಳಬೇಕಾಗುತ್ತದೆ. ಯಾಕೆಂದರೆ ಅವರ ವಿಚಾರ ಗತಿಯು ಗಾಣದೆತ್ತಿನಂತೆ ಸಮಸ್ಯೆಗಳ ಸುತ್ತಲೂ ವರ್ತುಲಾಕಾರವಾಗಿಯೇ ತಿರುಗುತ್ತಿರುವುದು. ಹೀಗಾಗಿ ನಾವು ಆಶ್ಚರ್ಯಪಡುವುದು ಅವರು ಕೊಟ್ಟ ಉತ್ತರಕ್ಕಲ್ಲ; ಅವರು ಪಟ್ಟ ಪ್ರಯಾಸಕ್ಕಾಗಿಯೇ . . .[22]

ಹೀಗಿದ್ದರೂ ಈ ಅವತರಣಿಕೆಯ ಆದಿಯಲ್ಲಿ ಮೂಡಿದ ಪ್ರಶ್ನೆಗಳಿಗೆ ಸರ್ವದೃಷ್ಟಿಯಿಂದ ಸಮಾಧಾನಕರವಾದ ಉತ್ತರಗಳನ್ನು ಪಡೆಯಬೇಕೆನ್ನುವವರು ಈ ಗ್ರಂಥ [ಎರಡೂ ಭಾಗ]ವನ್ನು ಓದಬೇಕು. ಅಲ್ಲದೆ ಬುದ್ಧಿಯಿಂದಾಗುವ [Reason] ಕೇಡನ್ನೂ ಅನುಭಾವದಿಂದಾಗುವ [Mystic Experience] ಲಾಭವನ್ನೂ ಉತ್ತಂಗಿಯವರು ತಮ್ಮ ಜೀವನದ ಪ್ರತ್ಯಕ್ಷಾನುಭವದ ಮೂಲಕ ಕಂಡುಂಡು ಬರೆದ ಅತ್ಯಮೌಲ್ಯ ಗ್ರಂಥಗಳಿವಾಗಿವೆಯೆಂದು ಹೇಳ

---

22. ದೃಷ್ಟಾಂತ ದರ್ಪಣ, ಭಾಗ ೧ ಪುಟ ೧೦-೧೧-೧೨

ಬಹುದು. "ಹೃದಯಕ್ಕೆ ದೇವರನ್ನು ನೋಡುವ ಕಣ್ಣುಂಟು. ಆದರೆ ಕಂಡದ್ದನ್ನು ತಿಳಿಸಿ ಹೇಳುವ ಬಾಯಿಯಿಲ್ಲ. ಬುದ್ಧಿಗೆ [Reason] ಬಾಯಿಯುಂಟು. ಆದರೆ ದೇವರನ್ನು ನೋಡಲು ಅದಕ್ಕೆ ಕಣ್ಣಿಲ್ಲ. ಹೀಗಾಗಿ ಹೃದಯ ಕಂಡದ್ದನ್ನು ಬುದ್ಧಿಯು ಹೇಳುವುದನ್ನು ಹೃದಯವು ನಂಬದು. ಈ ಉಭಯತರ ನಿರ್ಣಯದಲ್ಲಿ ಭೇದ ಬುದ್ಧಿಯುಂಟಾಗುವುದಕ್ಕೆ ಇದೇ ಕಾರಣ. ಒಂದು ಇನ್ನೊಂದರ ಕೊರತೆಯನ್ನರಿತು ದೈನ್ಯದಿಂದ ಪರಸ್ಪರ ಸಹಕಾರ ಮಾಡಿದರೆ ಸತ್ಯವು ಇಬ್ಬರಿಗೂ ಏಕಪ್ರಕಾರವಾಗಿ ಹೊಳೆಯುವುದು. ಬುದ್ಧಿಯು ಕುರುಡನಾದರೆ ಅನುಭವವು ಮೂಕನಾಗಿದೆ. ಹೀಗಾಗಿ ಬುದ್ಧಿಯು ಹೇಗೆ ಕುಂದುಕೊರತೆಯುಳ್ಳದ್ದೋ ಹಾಗೆಯೇ ಅನುಭವವೂ ಕೊರತೆಯುಳ್ಳದ್ದಾಗಿದೆ. ಹೀಗಿದ್ದರೂ ದೇವರ ವಿಷಯದಲ್ಲಿ ಹೃದಯವು ಒಂದು ಹೆಜ್ಜೆ ಮುಂದೆ ಹೋಗುತ್ತದೆ. ಇವರೀರ್ವರ ಐಕ್ಯದಲ್ಲಿಯೇ ಸತ್ಯದ ತಿಳಿವಳಿಕೆಯು ನೆಲೆಯಾಗಿದೆ." [24]

೮. ಗಹನವಾದ ತತ್ವಾನುಭವಗಳನ್ನು ಹೇಗಾದರೂ ಅರಿತರೂ ಅರಿಯಬಹುದು ; ಆದರೆ ಅರಿತು ಈ ರೀತಿ ಸುಲಭದಲ್ಲಿ ತಿಳಿಸಿ ಹೇಳುವುದು ಸಾಮಾನ್ಯರ ಕೆಲಸವೇ ? "ಪ್ರಿಯನು ಪ್ರೇಯಸಿಯ ಭಾಷೆಯನ್ನು ಕಲಿಯುವಂತೆ ನಾನು ಸರ್ವಜ್ಞನಿಗಾಗಿ, ಕನ್ನಡವನ್ನು ಕಲಿತೆ. ಕನ್ನಡ ವ್ಯಾಕರಣ, ಛಂದಸ್ಸು, ಕಾವ್ಯ, ಅಲಂಕಾರ ಮುಂತಾದ ಶಾಸ್ತ್ರ ಗ್ರಂಥಗಳನ್ನು ಓದಿದ್ದು ಸರ್ವಜ್ಞನ ಕಾರ್ಯವನ್ನು ಕೈಕೊಂಡನಂತರ. ನಾನು ವೀರಶೈವ ಧರ್ಮವನ್ನು ಅರಿತುಕೊಳ್ಳಲೆತ್ನಿಸಿದ್ದು ಸವಜ್ಞನಿಗಾಗಿಯೇ."[25] ಹೀಗೆ ಲಿಂಗಾಯತ ಧರ್ಮವನ್ನು ಅರಿಯುತ್ತಿರುವಾಗ "ಅನುಭಾವಿಗಳೆಲ್ಲರೂ ಒಂದಿಲ್ಲೊಂದು ರೀತಿಯಿಂದ ಮಿಶನರಿಗಳಾಗಿರುವಂತೆ"ಯೂ "ವಚನ ಶಾಸ್ತ್ರದಲ್ಲಿ ಈ ತರದ ವಿಚಾರಗಳು ಧಾರಾಳವಾಗಿ ದೊರೆಯುವವೆಂತ"ಲೂ ಉತ್ತಂಗಿಯವರ ಅನುಭವಕ್ಕೆ ಬಂತು. ಆಗ ನವೋತ್ಸಾಹದಿಂದ ವಚನಕಾರರ ವಚನಗಳಲ್ಲಿಯ ಅನುಭಾವ ಸಾರವನ್ನೇ ಕುಡಿದು ಆನಂದಪಟ್ಟರು. ಆ ಆನಂದವನ್ನು ಇತರ ಕನ್ನಡ ಬಂಧುಗಳೂ ಅನುಭವಿಸಲೆಂದು "**ಮೋಳಿಗೆಯ ಮಾರಯ್ಯ ಮತ್ತು ರಾಣಿ ಮಹಾದೇವಿಯವರ ವಚನಗಳು**" ಮತ್ತು "**ಆದಯ್ಯನ ವಚನಗಳು**" ಎಂಬೆರಡು ವಚನಗಳ ಸಂಶೋಧಕ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದರು.

ಈ ಎರಡು ಗ್ರಂಥಗಳನ್ನು ಅವಲೋಕಿಸಿದರೆ ಉತ್ತಂಗಿಯವರು ಶಿವಶರಣರ ವಚನಾಮೃತ ಸಾಗರದಲ್ಲಿ ಎಷ್ಟು ಸಹಜವಾಗಿ, ಸಂತತವಾಗಿ ಬೇಸರಿಲ್ಲದೆ ಈಸಬಲ್ಲರೆಂಬುದನ್ನು ಅರಿಯುತ್ತೇವೆ. ಲಿಂಗಾಯತ ಧರ್ಮದ ಷಟ್‌ಸ್ಥಲ ಕಟ್ಟಿಗನುಸಾರವಾಗಿ ಅಲ್ಲಲ್ಲೇ ಚಲ್ಲುವರಿದು ಬಿದ್ದ ವಚನಗಳನ್ನು ಹೇಗೆ ವರ್ಗೀಕರಿಸಬೇಕೆಂಬುದನ್ನು ಅನುಭಾವಿಗಳಾದ ಪೂಜ್ಯ ಚನ್ನಪ್ಪನವರಿಗೇ ಸಾಧ್ಯವೆಂದು ಈ ಎರಡು ವಚನ ಸಂಕಲನ ಗ್ರಂಥಗಳಿಂದ ಅರಿಯಬಹುದಾಗಿದೆ. "ಮಾರಯ್ಯನ ಈ ವಚನ ಗ್ರಂಥವನ್ನು ಸಂಪೂರ್ಣ ಸಂಗ್ರಹಕ್ಕಾಗಿ ಒಮ್ಮೆ, ವರ್ಗೀಕರಣಕ್ಕಾಗಿ ಮತ್ತೊಮ್ಮೆ, ಶುದ್ಧ ಪ್ರತಿಗಾಗಿ ತಿರುಗೊಮ್ಮೆ ಹೀಗೆ ನಾಲ್ಕು ಸಲ ಪ್ರತಿ ಮಾಡಬೇಕಾಯಿತು. ಹೀಗೆ ೧೯೪೪ರಲ್ಲಿ ಪ್ರಾರಂಭವಾದ ಕಾರ್ಯವು ಮುಗಿಯುವುದಕ್ಕೆ ಸುಮಾರು ಆರುವರುಷ ಬೇಕಾದರೆ"[26] "ಬೇಗನೆ ಮುಗಿಯಬಹುದೆಂದು ನೆನಿಸಿಕೊಂಡ ಈ (ಆದಯ್ಯನ ವಚನ ಸಂಗ್ರಹ) ಕಾರ್ಯವು ಕೊನೆಗಾಣುವುದಕ್ಕೆ ನಾಲ್ಕು ವರ್ಷಗಳು ಬೇಕಾದವು"[27] ಇಂತಹ ಶ್ರಮದ ಕಾರ್ಯ ಮಾಡಲು ಉತ್ತಂಗಿಯವರೇ ಸಮರ್ಥರು !

ಈವರೆಗೆ ದೊರೆತ ಸುಮಾರು ೨೫೦ ವಚನಕಾರರ ಅಲ್ಲಲ್ಲಿ ಸಿಗುವ ವಚನಗಳೆಲ್ಲವನ್ನೂ ಉತ್ತಂಗಿಯವರು ಸಂಶೋಧಿಸಿ ಸಂಗ್ರಹಿಸಿದಂತೆ, ಸಂಗ್ರಹಿಸಿ ಪ್ರಕಟಿಸಿದರೆ ಕನ್ನಡ ನಾಡಿನ ಇಂದಿನ ಮುಂದಿನ ಅನುಭಾವಿಗಳಿಗೆ ೧೨ನೆಯ ಶತಮಾನದಲ್ಲಿ ಅಟ್ಟು ಘಟ್ಟಿಗೊಳಿಸಿಟ್ಟ ಅಮೃತರಸದಾಹಾರ ದೊರೆತಂತಾಗುತ್ತದೆ. ಇತಿಹಾಸ - ಪ್ರಬಂಧ - ನಾಟಕ - ಕಥೆ - ಕಾದಂಬರಿ - ಕವನಕಾರರಿಗೆಲ್ಲ ತಮ್ಮ ಕೃತಿಗಳನ್ನು ಕುದುರಿಸಿಕೊಳ್ಳಲು ವಿಪುಲ ಸಾಮುಗ್ರಿ ದೊರೆತಂತಾಗುತ್ತವೆ. ಹೀಗೆ ಅನುಭಾವದ ನೆಲಗಟ್ಟಿನಮೇಲೆ ಕಟ್ಟಲ್ಪಟ್ಟ ಸಾಹಿತ್ಯ ಜನಜೀವನವನ್ನು ಅರಳಿಸಿ, ಬಾಳನ್ನು ಬೆಳಗಬಲ್ಲದೆಂದು ಉತ್ತಂಗಿಯವರ ಅಭಿಪ್ರಾಯ. ಈ ದಿಶೆಯಲ್ಲಿ ಮುಂದಿನ ಕನ್ನಡ ಸಾಹಿತಿಗಳು ಮುನ್ನಡೆಯಬಲ್ಲರೇ ?

೯. ಪೂಜ್ಯ ಚನ್ನಪ್ಪನವರು ಮೇಲೆ ಹೇಳಿದಂತೆ ಶಿವಶರಣರ ವಚನಾಮೃತ ಸಾಗರದಲ್ಲಿ ಎಷ್ಟು ಸಹಜವಾಗಿ ಈಸಬಲ್ಲರೋ ಅಷ್ಟೇ ಸಹಜವಾಗಿ ಮುಳುಗಿ ಅತ್ಯಮೌಲ್ಯವಾದ

---

23. ದೃಷ್ಟಾಂತ ದರ್ಪಣ, ಭಾಗ ೧, ಪುಟ ೧೦-೧೧-೧೨
24. ದೃಷ್ಟಾಂತ ದರ್ಪಣ, ಭಾಗ ೧, ಪುಟ ೩೦
25. ಉ. ಜೀ. ಚರಿತ್ರೆ, ಪುಟ ೩೨
26. ಮೋಳಿಗೆ ಮಾರಯ್ಯ ಹಾಗೂ ರಾಣಿ ಮಹಾದೇವಿ ವಚನಗಳು, ಮುನ್ನುಡಿ, ಪುಟ ೯-೧೦
27. ಆದಯ್ಯನ ವಚನಗಳು, ಮುನ್ನುಡಿ, ಪುಟ ೧೩

ಮುತ್ತುರತ್ನಗಳನ್ನು ಹುಡುಕಿ ತೆಗೆಯಬಲ್ಲರೆಂಬುದಕ್ಕೆ ಅವರಿಂದ ಸಂಶೋಧಿಸಲ್ಪಟ್ಟ **"ಅನುಭವ ಮಂಟಪದ ಐತಿಹಾಸಿಕ ಕತೆ"** ಹಾಗೂ **"ಸಿದ್ಧರಾಮ ಸಾಹಿತ್ಯ ಸಂಗ್ರಹ"** ಎಂಬೆರಡು ಗ್ರಂಥಗಳು ಬಲವಾದ ಸಾಕ್ಷಿಯನ್ನೀಯುತ್ತವೆ. "ಶಿಲೆಯ ಮೇಲೆ ಬರೆದದ್ದು ಮಾತ್ರ ಸತ್ಯ, ಉಳಿದದ್ದೆಲ್ಲ ಅಸತ್ಯವೆಂದು ಹೇಳಲಾಗದು. ಸತ್ಯವು ನಿತ್ಯವಾಗಿರುವುದರಿಂದ ಅದನ್ನು ಶಿಲೆಯಮೇಲೆ ಬರೆದರೂ ಎಲೆಯಮೇಲೆ ಬರೆದರೂ ತ್ರಿಕಾಲಬಾಧಿತವಾಗಿಯೇ ಉಳಿಯುತ್ತಿದೆ. ಹೀಗಾಗಿ ಅಂಕಿತಗಳು ಶಿಲಾಶಾಸನದಷ್ಟೇ ಬೆಲೆಯುಳ್ಳವುಗಳಾಗಿವೆಯೆಂದು ಗ್ರಹಿಸಬಹುದು"[28] ಇದು ಉತ್ತಂಗಿಯವರ ಯಾವುದೊಂದು ವಿಷಯವನ್ನು ಕಾಣುವ ಗುಣೈಕ ದೃಷ್ಟಿ; ಸತ್ಯ ದೃಷ್ಟಿ!

(ಅ) ಪಂಡಿತರೊಬ್ಬರು ಲಿಂಗಾಯತ ಧರ್ಮ ಹಾಗೂ ಸಾಹಿತ್ಯ ಗ್ರಂಥಗಳೆಲ್ಲವನ್ನವಲೋಕಿಸಿ ೧೨ನೆಯ ಶತಮಾನದಲ್ಲಿ ಬಸವಣ್ಣನವರಿಂದ ಕಲ್ಯಾಣ ಪಟ್ಟಣದಲ್ಲಿ ಅನುಭವ ಮಂಟಪವು ಸ್ಥಾಪಿಸಲ್ಪಟ್ಟಿತೆಂಬ ತಿಳುವಳಿಕೆಯು ಐತಿಹಾಸಿಕ ಆಧಾರಗಳಿಗೆ ನಿಲುಕದ ಗಾಳಿಗೋಪುರವೆಂಬಾಶಯದ ಲೇಖನಗಳನ್ನು ಜಯಂತಿ ಮಾಸಪತ್ರಿಕೆಯಲ್ಲಿ ಪ್ರಕಟಿಸಿದರು. ಹೀಗೆ ಪ್ರಕಟಿಸಿ "ಅವರು ಎರಡು ಮಹತ್ವದ ಕಾರ್ಯಗಳನ್ನು ಮಾಡಿದ್ದಾರೆಂದು ಹೇಳಬಹುದು. (೧) ಅನುಭವ ಮಂಟಪದ ಐತಿಹಾಸಿಕತೆಯನ್ನು ಅಲ್ಲಗಳೆದುದು. ಇದ್ದುದನ್ನು ಇಲ್ಲದ ಹಾಗೆ ಮಾಡಿದ ಕಾರ್ಯ (೨) ಸಿದ್ಧಿನಾಥ ಪಂಥವನ್ನು ವೀರಶೈವರಲ್ಲಿಗಣಿಸಿ, ನಾದ, ಶೂನ್ಯ ಮುಂತಾದ ಪದಗಳಿಗೆ ಪಂಜಾಬಿ ಪುಸ್ತಕದಿಂದ ಅರ್ಥಮಾಡಿ ಅದು ಕನ್ನಡದಲ್ಲಿದ್ದಂತೆ ತೋರಿಸಿದ್ದು; ಇದು ಇಲ್ಲದುದನ್ನು ಇದ್ದ ಹಾಗೆ ಮಾಡಿದ ಇನ್ನೊಂದು ಕಾರ್ಯ"[29]–ಎಂದು ಆ ಪಂಡಿತರಲ್ಲಿಯೂ ಮಹತ್ವದ ಕಾರ್ಯಗಳನ್ನು ಕಂಡಿದ್ದಾರೆ ಉತ್ತಂಗಿಯವರು!

ಒಂದೇ ಮಾತಿನಲ್ಲಿ ಹೇಳುವುದಾದರೆ ಲಿಂಗಾಯತ ಧರ್ಮದ ಯಾವ ಗ್ರಂಥಗಳಲ್ಲಿ ಅನುಭವ ಮಂಟಪದ ಸುದ್ದಿಯಿಲ್ಲವೆಂದು ವಾದಿಸಿದ್ದ ಅವರಿಗೆ ಅದೇ ಗ್ರಂಥಗಳಲ್ಲಿ ಅನುಭವ ಮಂಟಪ ಅಸ್ತಿತ್ವವನ್ನು ಪೂಜ್ಯ ಚನ್ನಪ್ಪನವರು ತೋರಿಸಿರುವರು. ಹನ್ನೆರಡನೆಯ ಶತಮಾನದಲ್ಲಿ ಸ್ಥಾಪಿಸಲ್ಪಟ್ಟು ಕಾಲಾಂತರದಲ್ಲಿ ಕಾಲಗರ್ಭದಲ್ಲಿ ಹುಗಿದುಹೋದ ಅನುಭವ ಮಂಟಪವನ್ನು ಪುನಃ ೨೦ನೆಯ ಶತಮಾನದಲ್ಲಿ ಹುಡುಕಿ ತೆಗೆದು ಥಳಥಳಿಸುವಂತೆ ಮಾಡಿದ ಶ್ರೇಯಸ್ಸು ಕ್ರಿಸ್ತಾನುಭಾವಿಗಳಾದ ಉತ್ತಂಗಿಯವರಿಗೇ ಸಲ್ಲತಕ್ಕದ್ದು.

"ಬಸವಣ್ಣನವರು ಅನುಸರಿಸುತ್ತಿದ್ದ ಶಿವಾನುಭವ ಮಂಟಪದ ಧರ್ಮವು ಪೂರ್ವಾಶ್ರಯಗಳನ್ನು ಸಂಪೂರ್ಣವಾಗಿ ಹರಿದೊಗೆದು ನೂತನ ತರದ ಬಾಂಧವ್ಯವನ್ನು ಬಳಕೆಯಲ್ಲಿ ತರುವದಾಗಿತ್ತು. ಇದು ಅಂಗ ಸಂಬಂಧವನ್ನು ಬಿಟ್ಟು ಲಿಂಗ ಸಂಬಂಧವನ್ನು ಕ್ರಿಯೆಯಲ್ಲಿ ತರುವುದಕ್ಕೆ ಸತತ ಪ್ರಯತ್ನಿಸುತ್ತಿದ್ದ ಒಂದು ದಿವ್ಯ ವ್ಯಕ್ತಿಯ ಶಕ್ತಿ."[30] "ಬಸವಣ್ಣನವರು ತಾವು ವ್ಯವಸ್ಥೆಗೊಳಿಸಿದ ಶಿವಾನುಭವ ಮಂಟಪ ಸಂಸ್ಥೆಯಲ್ಲಿ ಅಪ್ಪ, ಅಯ್ಯ, ಅಣ್ಣ, ಅಕ್ಕ, ಅಮ್ಮ, ಅವ್ವ ಮುಂತಾದ ಕಕ್ಕುಲತೆಯಿಂದ ತುಂಬಿ ಹೊರಸೂಸುವ ಹೊಸ ಅರ್ಥದ ಹೊಸ ಶಬ್ದಗಳಿಗೆ ವಿಶೇಷಾರ್ಥವನ್ನಿಟ್ಟು ಅವುಗಳನ್ನು ಹೊಸದಾಗಿ ಪ್ರಯೋಗದಲ್ಲಿ ತಂದರು. ಈ ಶಬ್ದಗಳು ಕನ್ನಡ ಭಾಷೆ ಹುಟ್ಟಿದಾಗ ಹುಟ್ಟಿದವುಗಳಾಗಿದ್ದರೂ ಮೀಸಲಾದ ಈ ಅರ್ಥವು ಬಸವಣ್ಣನವರಿಗಿಂತ ಮುಂಚೆ ಹಿಂದೂ ದೇಶದಲ್ಲಿ ಬಹುಶಃ ಬಳಕೆಯಲ್ಲಿ ಬಂದಿರಲಿಲ್ಲ. ಈ ಪದಗಳು ಅನುಭವ ಮಂಟಪಕ್ಕಾಗಿಯೇ ಇವು ಮೀಸಲಾಗಿ ಇಡಲ್ಪಟ್ಟವುಗಳೆಂದೂ ಹೇಳಿದರೆ ಅತ್ಯುಕ್ತಿಯಾಗದು. ವಿಶ್ವಬಾಂಧವ್ಯವನ್ನು ವ್ಯಕ್ತಿಗೊಳಿಸುವ ಹಾಗೂ ವಿಶಿಷ್ಟವಾದ ಅರ್ಥವುಳ್ಳ ಈ ಕನ್ನಡ ಪದಗಳನ್ನು ಪ್ರಯೋಗಕ್ಕೆ ತಂದ ಯಶಸ್ಸು ಬಸವಣ್ಣನವರಿಗೂ ಅವರಿಂದ ಸ್ಥಾಪಿತವಾದ ಅನುಭವ ಮಂಟಪಕ್ಕೂ ಸಲ್ಲತಕ್ಕುದಾಗಿದೆ.

"ಅನುಭವ ಮಂಟಪದಲ್ಲಿ ಕರಿಗೂದಲುಳ್ಳವರನ್ನು ಅಣ್ಣ ಅಕ್ಕಗಳೆಂತಲೂ ನರೆಗೂದಲುಳ್ಳವರನ್ನು ಅಪ್ಪ, ತಂದೆ, ಅಯ್ಯ, ಅವ್ವ, ಅಮ್ಮ ಎಂತಲೂ ಕರೆದಂತೆ ಕಾಣುತ್ತದೆ. ಶಿವಾನುಭವ ಮಂಟಪದಲ್ಲಿ **"ತಮ್ಮ"** ಗಳಾಗಲಿ, **"ತಂಗಿ"** ಗಳಾಗಲಿ ಇರುವುದಿಲ್ಲ. ಇದು ಬಸವಣ್ಣನವರಿಂದ ಸ್ಥಾಪಿತವಾದ ಆ ಶಿವಾನುಭವ ಮಂಟಪದ ವೈಶಿಷ್ಟ್ಯವೆಂದೇ ಹೇಳಬೇಕು"[31] "ಈ ಸಂಗತಿಯಿಂದ ಶಿವಾನುಭವ ಮಂಟಪವು ಹಿಂದೂ ದೇಶದಲ್ಲಿ ವಿಶ್ವಬಾಂಧವ್ಯವನ್ನುಂಟುಮಾಡುವುದಕ್ಕಾಗಿ ಹೊರಟ ಒಂದು ಹೊಸ ಸಂಸ್ಥೆಯಾಗಿದ್ದು ಅದು ಹಳೆಯ ಶಬ್ದಗಳನ್ನು ಹೊಸರೀತಿಯಲ್ಲಿ ಯೋಜಿಸಿ ಹೊಸ ಸಮಾಜದ ಮೂಲಕ ಅವುಗಳನ್ನು ಪ್ರಯೋಗದಲ್ಲಿ ತಂದಂತೆ ತಿಳಿದುಬರುತ್ತದೆ. ಶಿವಾನುಭವ ಮಂಟಪವು ಹಿಂದೂ

28. ಅನುಭವ ಮಂಟಪದ ಐತಿಹಾಸಿಕತೆ, ಪೀಠಿಕೆ ಪುಟ ೧
29. ಅನುಭವ ಮಂಟಪದ ಐತಿಹಾಸಿಕತೆ, ಪುಟ ೧೫
30. ಅನುಭವ ಮಂಟಪದ ಐತಿಹಾಸಿಕತೆ, ಪುಟ ೪೪
31. ಅನುಭವ ಮಂಟಪದ ಐತಿಹಾಸಿಕತೆ, ಪುಟ ೪೫

ದೇಶದಲ್ಲಿ ಮಾಡಿದ ಈ ಅಸದೃಶ ಕಾರ್ಯವು ಅದರ ಇತಿಹಾಸವನ್ನು ಶಾಶ್ವತಗೊಳಿಸಿ ಅದನ್ನು ಕಹಳೆಯ ಧ್ವನಿಯಿಂದ ಸಾರುತ್ತಿದೆ. ೧೨ನೆಯ ಶತಮಾನದಿಂದ ಈವರೆಗೆ ಪ್ರತಿಯೊಬ್ಬ ವೀರಶೈವನ ನಾಮಾಂತದಲ್ಲಿ ಬೆಳಗುತ್ತಿರುವ ಅಣ್ಣ, ಅಪ್ಪ ಎಂಬ ಪ್ರೇಮಭಾವದ ಪದಗಳು ಆ ಶಿವಾನುಭವ ಮಂಟಪದ ಅಸ್ತಿತ್ವವನ್ನು ಆಚಂದ್ರಾರ್ಕವಾಗಿ ಮಾಡಿವೆ. ಇವು ಅದರ ಇತಿಹಾಸವನ್ನು ಇಂದಿನವರೆಗೆ ಉಳಿಸಿರುವ ಶ್ರೇಷ್ಠವಾದ ಕುರುಹುಗಳೆಂದೇ ಹೇಳಬೇಕು. ಇಂದಿನ ವೀರಶೈವ ಸಮಾಜದಲ್ಲಿ ಯಾರು, ಇನ್ನೂ ಅಣ್ಣ, ಅಪ್ಪ, ಅಕ್ಕ, ಅವ್ವ ಎಂಬ ಅಂತಿಮ ಅಭಿಧಾನಗಳೊಡನೆ ತಮ್ಮ ನಾಮಾಂಕಿತಗಳನ್ನು ಅಲಂಕರಿಸಿಕೊಂಡಿರುವರೋ ಅವರು ಬಸವಣ್ಣನವರ ಕಾಲದಲ್ಲಿ ೧೨ನೆಯ ಶತಮಾನದಲ್ಲಿ ಕಲ್ಯಾಣ ಪಟ್ಟಣದಲ್ಲಿ ಪರಮ ಪ್ರಭಾವದಿಂದ ಮೆರೆಯುತ್ತಿದ್ದ ಆ ಅನುಭವ ಮಂಟಪದ ಐತಿಹ್ಯವನ್ನು ಸ್ಪಷ್ಟವಾದ ಅಕ್ಷರಗಳಿಂದ ಹೊತ್ತು ನಿಂತುಕೊಂಡಿರುವ ಸಜೀವ ಶಿಲಾಶಾಸನಗಳಲ್ಲವೆ ? "[32]

"This institution reminds one of the early councils of Ashoka, or the Sangam of the Tamilians, or the Parliament of Religions of Janaka of upanishadic days or the later Parliament of Religions of Akbar but unlike these it inverted the order of procedure of theory and practice of religion. In short, this movement may be said some what unique in the religious history of India."[33]

ಇಂತು ಉತ್ತಂಗಿಯವರಿಂದ ಅನೇಕ ಮಹತ್ತರವಾದ ವಿಷಯಗಳು ಬಯಲಿಗೆ ಬಂದವು. ಮಹೋನ್ನತ ವ್ಯಕ್ತಿಗಳು ಕನ್ನಡ ಸಾಹಿತ್ಯದಲ್ಲಿ ಮೂಡಿ ಬಂದರು. ಇದು ಅವರು ಪ್ರಕಟ ಮಾಡಿದ ಗ್ರಂಥಗಳಿಂದ ತಿಳಿಯುವ ವಿಷಯ. ಆದರೆ ಇವರ ಸಿದ್ಧಹಸ್ತದಿಂದ ಬರೆಯಲ್ಪಟ್ಟ ಇನ್ನೂ ಕೆಲವು ಗ್ರಂಥಗಳು ಅಚ್ಚಿನ ಮನೆಯನ್ನು ಕಾಣದೇ ಗೆದ್ದಲುಗಳಿಗೆ ಭೋಜನವಾಗಿ ಉಳಿದಿವೆ. ಅವರ ಒಡನಾಟದಿಂದ ಅವರಲ್ಲಿ ಕಂಡುಬಂದ ಕೆಲವು ಅಪ್ರಕಟಿತ ಗ್ರಂಥಗಳ ಪರಿಚಯವನ್ನಿಲ್ಲಿ ಮಾಡಿಕೊಡುವೆವು.

(ಮುಂದುವರೆಯುವುದು)

---

32. ಅನುಭವ ಮಂಟಪದ ಐತಿಹಾಸಿಕತೆ, ಪುಟ ೪೭

33. ಉತ್ತಂಗಿಯವರು ಬರೆದ Anubhava Mantap ಆಂಗ್ಲ ಗ್ರಂಥ, ಪುಟ ೩೨

---

" ತುಂಬಿದುದು ತುಳುಕದು ನೋಡಾ !
ನಂಬಿದುದು ಸಂದೇಹಿಸದು ನೋಡಾ !
ಒಲಿದುದು ಓಸರಿಸದು ನೋಡಾ !
ನೆರೆಯರಿದುದು ಮರೆಯದು ನೋಡಾ !
ಚೆನ್ನಮಲ್ಲಿಕಾರ್ಜುನಯ್ಯ, ನೀನೊಲಿದ ಶರಣಂಗೆ
ನಿಸ್ಸೀಮ ಸುಖ ನೋಡಯ್ಯ."

# ಗಂಗಾಧರಂ ಶಾಸನ— ಒಂದು ಟಿಪ್ಪಣಿ

■ ಪಾ. ವೆಂ. ಆಚಾರ್ಯ

ಗಂಗಾಧರಂ ಶಾಸನದ ಶೋಧವಾದ ಮೇಲೆ ಪಂಪನ ವಂಶವೃಕ್ಷದ ಬಗ್ಗೆ 'ಕನ್ನಡ ನುಡಿ'ಯಲ್ಲಿ ನಡೆದ ಚರ್ಚೆಯನ್ನು ನೋಡುತ್ತಿದ್ದೇನೆ. ಅದರಲ್ಲಿ ನನ್ನ ದನಿಯನ್ನು ಕೂಡಿಸುವ ಉದ್ದೇಶ ನನ್ನದಲ್ಲ. ಆದರೆ ಅಲ್ಲಿ ಬಂದ "ಮರ್ಮ" ಶಬ್ದದ ಬಗ್ಗೆ ಸ್ವಲ್ಪ ಜಿಜ್ಞಾಸೆ ನನಗೆ ಉಂಟಾಗಿದೆ.

"ಮರ್ಮ" ಎಂಬುದು "ಮೊಮ್ಮಗ"ನನ್ನು ಸೂಚಿಸುತ್ತದೆಂಬುದನ್ನು ಗೃಹೀತವಾಗಿಟ್ಟುಕೊಂಡು ಚರ್ಚೆ ನಡೆದಿದೆ. ಪಂಪಭಾರತದಲ್ಲಿ ಬಂದ ಪಂಪನ ವಂಶವೃಕ್ಷದ ಬೆಳಕಿನಲ್ಲಿ ಈ ಅರ್ಥ ಅನಿವಾರ್ಯವೆಂದೊಪ್ಪಬೇಕು. ಆದರೂ "ಮೊಮ್ಮಗ" ಎಂಬರ್ಥದಲ್ಲಿ "ಮರ್ಮ" ಪದವನ್ನು ಕನ್ನಡದಲ್ಲಿ ಕಾಣುವುದು ಇದೇ ಮೊದಲು. ಪಂಪ ಕೂಡ "ಮೊಮ್ಮ"ನೆನ್ನುತ್ತಾನೆ ಹೊರತು "ಮರ್ಮ"ನೆಂದಲ್ಲ. ಕಿಟ್ಟೆಲ್ ಕೋಶದಲ್ಲಿಯೂ "ಮರ್ಮ"ಕ್ಕೆ ಈ ಅರ್ಥ ಕಾಣಿಸುವುದಿಲ್ಲ.

"ಮೊಮ್ಮ" ಎನ್ನುವುದು "ಮೊಮ್ಮಗ"ದ ಅಂತ್ಯ ವರ್ಣಪಾತದಿಂದ ಸಿದ್ಧಿಸಿದ ಪದವೆಂಬುದು ಸ್ಪಷ್ಟವೇ ಇದೆ. ಕಿಟ್ಟೆಲ್ಲರು ಅದಕ್ಕೆ "ಮುಂಮಗ" ಎಂದು ನಿಷ್ಪತ್ತಿ ಹೇಳುತ್ತಾರೆ. "ಮರ್ಮ" ರೂಪದ ಶೋಧದಿಂದ ಈ ನಿಷ್ಪತ್ತಿ ವಿವಾದಾಸ್ಪದವಾಗಿ ಪರಿಣಮಿಸುತ್ತದೆ.

ದ್ರಾವಿಡ ಭಾಷೆಗಳಲ್ಲಿ ಬಹುಶಃ ತೆಲುಗಿನಲ್ಲಿ ಹೊರತು ಮೊಮ್ಮಗಕ್ಕೆ ಅದೇ ಅರ್ಥದ ಜ್ಞಾತಿ ಪದ ಸಿಕ್ಕುವುದಿಲ್ಲ. ಶ್ರೀರಾಮಕೃಷ್ಣಯ್ಯನವರು ಪ್ರಕಟಿಸಿದ ದ್ರಾವಿಡ ಭಾಷಾ ಜ್ಞಾತಿ ಪದಕೋಶದಲ್ಲಿಯೂ ನನಗದು ಕಾಣಿಸಲಿಲ್ಲ. ಆದರೆ ನನ್ನ ಮಾತೃಭಾಷೆ ತುಳುವಿನಲ್ಲಿ ಬೇರೊಂದು ಸಂಬಂಧವಾಚಿ ರೂಪದಲ್ಲಿ "ಮರ್ಮ" ಶಬ್ದವೇ ಇದೆ. "ಮರ್ಮಾಯೆ" ಎಂದರೆ ಅಳಿಯ; "ಮರ್ಮಾಳ್" ಎಂದರೆ ಸೊಸೆ. "ಆಯೆ", "ಆಳ್" ಎಂಬವು "ಅವನು", "ಅವಳು" ಎಂಬರ್ಥ ಕೊಡುತ್ತವೆ. ಈ ಶಬ್ದಕ್ಕೆ ಅದೇ ಅರ್ಥದ ಜ್ಞಾತಿ ಪದಗಳು ತಮಿಳು, ಮಲೆಯಾಳ ಎರಡರಲ್ಲಿಯೂ ಇವೆಯೆಂದು ನನ್ನ ಆಯಾ ಭಾಷಾ ಮಿತ್ರರಿಂದ ತಿಳಿಯಿತು. ಅಲ್ಲಿ ಅವು "ಮಱುಮಗನ್", "ಮಱುಮಗಳ್" ಎಂದಿವೆ. ಈ ಪದಗಳು ಆ ಭಾಷೆಗಳಲ್ಲಿ ಸೋದರಳಿಯ (– ಸೊಸೆ), ಮಗಳ ಗಂಡ (ಮಗನ ಹೆಂಡತಿ) ಎರಡು ಅರ್ಥಗಳಲ್ಲಿ ನಡೆಯುತ್ತವೆ. (ತುಳುವಿನಲ್ಲಿ ಮಾತ್ರ ಸೋದರಳಿಯನಿಗೆ "ಅರುವದ"ನೆಂಬ ಬೇರೊಂದು ಪದ ಬಳಕೆಯಲ್ಲುಂಟು). ತೆಲುಗಿನಲ್ಲಿ "ಮೊಮ್ಮಗ" ಎಂಬರ್ಥದಲ್ಲಿ "ಮನಮಡು" ಎಂಬ ಪದ ಇದಯಂತೆ. ಅದು ಬಹುಶಃ ನಮ್ಮ "ಮೊಮ್ಮ"ನಂತೆ ಅಂತ್ಯ ವರ್ಣಪಾತದಿಂದ ಉಂಟಾಗಿರಬಹುದು.

ಹೀಗೆ "ಮರ್ಮ" ಶಬ್ದದ ಬೆಳಕಿನಲ್ಲಿ "ಮೊಮ್ಮ" ಪದ ಮಱುಮಗ> ಮರ್ಮ<> ಮರ್ಮ> ಮಮ್ಮ> ಮೊಮ್ಮ ಈ ಶ್ರೇಣಿಯಿಂದ ವಿಕೃತಿ ಹೊಂದಿರಬೇಕು. "ಮಱು" ಶಬ್ದಕ್ಕೆ "ಬೇರೊಂದು", "ಅನಂತರದ್ದು" ಇತ್ಯಾದಿ ಅರ್ಥಚ್ಛಾಯೆಗಳುಂಟಷ್ಟೇ. ತುಳು, ಮಲೆಯಾಳ, ತಮಿಳುಗಳಲ್ಲಿ ಪ್ರಧಾನವಾಗಿ ಅಕ್ಕ ಅಥವಾ ತಂಗಿಯ ಮಗನನ್ನು ಬೇರೊಂದು ಬಗೆಯಲ್ಲಿ ಮಗ ಎಂಬರ್ಥವನ್ನು ಸೂಚಿಸಲು "ಮಱುಮಗ" ಶಬ್ದ ಉಪಯೋಗವಾದರೆ ಕನ್ನಡ, ತೆಲುಗುಗಳಲ್ಲಿ ಅದು ಮಗನ(ಳ) ಮಗನನ್ನು ಸೂಚಿಸಲು ಬಳಕೆಗೆ ಬಂದಿರಬಹುದು; ಅಥವಾ ಮೂಲತಃ ಒಂದೇ ಅರ್ಥವನ್ನು ಸೂಚಿಸುತ್ತಿದ್ದ ಈ ಪದ ಕಾಲಾಂತರದಲ್ಲಿ ಕನ್ನಡ, ತೆಲುಗುಗಳಲ್ಲಿ ಅರ್ಥಾಂತರ ಹೊಂದಿತೇನೋ. ತುಳುವಿನಲ್ಲಿ "ಮಱುಮಗ" ಎಂಬುದು "ಮಱುಮಗೆ" ಆಗುತ್ತದೆ. ಅಂತ್ಯ"ಗ"ಕಾರ "ಅ"ಕಾರದಲ್ಲಿ ಪರಿಣಮಿಸಿ "ಮಱುಮಅಯೆ"> ಮರ್ಮಾಯೆ; ಮಱುಮಗಳ್> ಮಱುಮಅಳ್> ಮರ್ಮಾಳ್ ಹೀಗೆ ವಿಕೃತಿ ಹೊಂದಿರಬೇಕು. ಅಥವಾ ಕನ್ನಡದಲ್ಲಿ ಆದಂತೆ ಅಂತ್ಯ"ಗ" ಲೋಪವೇ ಆಗಿ "ಮರ್ಮ" ಉಳಿದು ಪ್ರತ್ಯಯ "ಎ" ಹಾಗೂ ಸ್ತ್ರೀ ಪ್ರತ್ಯಯ "ಳ್" ಸೇರಿ "ಮರ್ಮಯೆ", "ಮರ್ಮಳ್" ರೂಪಗಳುಂಟಾಗಿ ಮುಂದೆ ಭ್ರಮ ಮೂಲಕ "ಯೆ", "ಳ್" ಪ್ರತ್ಯಯಗಳು "ಅಯೆ", "ಆಳ್" ಆಗಿ ಸೇರಿರಬಹುದು.

ಅದೇನೇ ಇರಲಿ, "ಮೊಮ್ಮ" ಶಬ್ದದ ಮೂಲ ರೂಪ "ಮರ್ಮ"ವಿರಬೇಕು. ಅದು "ಮಱುಮಗ"ದ ಖಿಲ ರೂಪವಿರಬೇಕು ಹೊರತು "ಮುಂಮಗ"ದ್ದಲ್ಲ.

# ರಾಯಚೂರು

## (ನಾಮ ಜಿಜ್ಞಾಸೆ)

■ ಡಾ|| ಪಾಂಡುರಂಗರಾವ ದೇಸಾಯಿ

ನಾ ಮೂಲಂ ಲಿಖ್ಯತೇ ಕಿಂಚಿತ್ |
ವಿನಾಧಾರಂ ಚ ನೋಚ್ಯತೇ ||

### ೧. ಚಾರಿತ್ರಿಕ ಹಿನ್ನೆಲೆ

ಇಂದಿನ ಮೈಸೂರು ಅಥವಾ ಕರ್ನಾಟಕ ರಾಜ್ಯದಲ್ಲಿ ಗಣ್ಯ ನಗರವೆನಿಸಿದೆ ರಾಯಚೂರು. ಜಿಲ್ಲೆಯ ಮುಖ್ಯ ಸ್ಥಳವಾಗಿ ಹಲವು ವಿಧದಿಂದ ಪ್ರವರ್ಧಮಾನವಾಗುತ್ತಿದೆ. ಸಕೃದ್ ದರ್ಶನಕ್ಕೂ ಪರ್ವತಸಮುದಾಯದಿಂದ ಪರಿವೇಷ್ಟಿತವಾಗಿ ಪ್ರಾಕೃತಿಕ ಭದ್ರತೆಯನ್ನು ಹೊಂದಿದೆ.

ಚರಿತ್ರೆಯ ಭೂಮಿಕೆಯಲ್ಲಿಯೂ ಪ್ರಾಮುಖ್ಯತೆಯನ್ನು ಅನುಭವಿಸಿದ ಮಹಾನಗರಿ ಇದು. ಇಲ್ಲಿ ಹಲವಾರು ಶಾಸನಗಳಿದ್ದು ಅವೆಲ್ಲವೂ ವ್ಯವಸ್ಥಿತವಾಗಿ ಇತಿಹಾಸಜ್ಞರಿಂದ ಪರಿಶೋಧನಗೊಂಡಿಲ್ಲ. ಪ್ರಾದೇಶಿಕ ವಿಚಾರದಿಂದ ಇಣುಕು ನೋಟವನ್ನು ಬೀರಿದರೆ ಕರ್ನಾಟಕದಲ್ಲಿ ಲಭ್ಯವಾದ, ಅತ್ಯಂತ ಪ್ರಾಚೀನ ಶಾಸನಗಳೆಂದು ಪರಿಗಣಿಸಲಾದ, ಅಶೋಕ ಚಕ್ರವರ್ತಿಯ ಆರು ಧರ್ಮಲಿಪಿಗಳಲ್ಲಿ ಮೂರು, ಎಂದರೆ ಸರಿಯರ್ಧದಷ್ಟು, ರಾಯಚೂರು ಜಿಲ್ಲೆಯಲ್ಲಿ ಇವೆ. ಅವುಗಳಲ್ಲಿ ಮಸ್ಕಿಯ ಧರ್ಮಶಾಸನವು ಅಮೋಘ ಚಾರಿತ್ರಿಕ ಪ್ರಕಾಶವನ್ನು ನೀಡಿ ಪ್ರಥಮಸ್ಥಾನದ ಅರ್ಹತೆಯನ್ನು ಪಡೆದಿದೆ. ಇದರಿಂದ ಈ ನಾಡಿನ ಹೆಸರು ಅಜರಾಮರವಾಯಿತು. ಇವುಗಳಿಂದ ಈ ಪ್ರಾಂತವು ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿಯೆ ಗಣ್ಯತೆಯನ್ನು ಪಡೆದಿತ್ತು ಎಂದು ಊಹಿಸಬಹುದಾಗಿದೆ. ಈ ಮೇಲ್ಮೆ ಮುಂದೆ ಚರಿತ್ರೆಯ ಉದ್ದಕ್ಕೂ ಪ್ರಕಟವಾಗಿ ನಿಂತಿದೆ.

ಅಲ್ಲಲ್ಲಿ ಕಂಡುಹಿಡಿದ ಶಾಸನಗಳನ್ನು ಅವಲೋಕಿಸಿದರೆ ಏಳರಿಂದ ಹದಿಮೂರನೆಯ ಶತಮಾನಗಳಲ್ಲಿ ಈ ನಾಡು ಮತ್ತು ರಾಯಚೂರು ದುರ್ಗವು ಬಾದಾಮಿಯ ಚಾಲುಕ್ಯರ, ರಾಷ್ಟ್ರಕೂಟರ, ಕಲ್ಯಾಣದ ಚಾಲುಕ್ಯರ, ಯಾದವರ ಆಳಿಕೆಗಳಿಗೆ ಅಂಕಿತವಾಗಿತ್ತು ಎಂದು ವೇದ್ಯವಾಗುತ್ತದೆ. ದಕ್ಷಿಣದ ಮಹತ್ವಾಕಾಂಕ್ಷೆ ಹೊಯ್ಸಳ ನರೇಂದ್ರ ವಿಷ್ಣುವರ್ಧನನು ತನ್ನ ಉತ್ತರ ದಿಗ್ವಿಜಯದಲ್ಲಿ ಜಯಿಸಿದ ಹಲವು ದುರ್ಗಗಳಲ್ಲಿ ರಾಯಚೂರು ದುರ್ಗವು ಒಂದಾಗಿತ್ತು. ಮುಂದೆ ಕನ್ನಡ ರಾಜ್ಯಶಕ್ತಿ ಆತಂಕಗೊಂಡಕಾಲದಲ್ಲಿ ವರಂಗಲ್ಲ ಕಾಕತೀಯರ ಜಯಪತಾಕೆ ರಾಯಚೂರು ದುರ್ಗದಮೇಲೆ ಸ್ವಲ್ಪ ಸಮಯ ಹಾರಾಡಿತು. ಅನಂತರ ದಿಲ್ಲಿಯ ಸುಲ್ತಾನರ ಪ್ರಚಂಡ ಆಕ್ರಮಣ ಪ್ರವಾಹದಲ್ಲಿ ಆಂಧ್ರ ಪ್ರಭುತ್ವವು ಇಲ್ಲಿಂದ ಕೊಚ್ಚಿಕೊಂಡು ಹೋಯಿತು.

ಹದಿನಾಲ್ಕನೆಯ ಶತಮಾನದ ಪ್ರಥಮಾರ್ಧದಲ್ಲಿ, ವಿಜಯನಗರ ರಾಜ್ಯಸ್ಥಾಪನೆಯಾದ ತರುಣದಲ್ಲಿ ಮತ್ತು ಕಲಬುರ್ಗಿಯ ಬಹಮನಿ ರಾಜ್ಯವು ಪ್ರಬಲಿಸುವ ಪೂರ್ವದಲ್ಲಿ, ರಾಯಚೂರು ಪ್ರದೇಶವು ವಿಜಯನಗರದ ಶಾಸನಕ್ಕೆ ಒಳಪಟ್ಟಿತ್ತು. ಅಂತೆಯೆ ಮುಂದೆ ಸುಮಾರು ಎರಡೂ ಕಾಲು ಶತಮಾನಗಳವರೆಗೆ ವಿಜಯ ನಗರವು ಮುದಗಲ್ ಸಮೇತ ರಾಯಚೂರ ಮೇಲಿನ ಸ್ವಾಮಿತ್ವವು ತನ್ನದೆಂದು ಸಾಧಿಸುತ್ತ ಬಹಮನಿ ಅರಸರೊಂದಿಗೆ ಹಠದಿಂದ ಹೋರಾಡಿತು. ಈ ಸನ್ನಿವೇಶದಲ್ಲಿ ಕೃಷ್ಣದೇವರಾಯನು ೧೫೨೦ ರಲ್ಲಿ ಸಂಪಾದಿಸಿದ ರಾಯಚೂರ ವಿಜಯವು, ಮುಂದೆ ಆತನು ಕಲಬುರ್ಗಿಯವರೆಗೆ ಮಾಡಿದ ದಂಡಯಾತ್ರೆಯೂ ಚಾರಿತ್ರಿಕ ದೃಷ್ಟಿಯಿಂದ ಚಿರಸ್ಮರಣೀಯ ಸನ್ನಿವೇಶಗಳಾಗಿವೆ. ಹದಿನಾರನೆಯ ಶತಮಾನದ ಉತ್ತರಾರ್ಧದಿಂದ ಇಪ್ಪತ್ತನೆಯ ಶತಮಾನದ ಉತ್ತರಾರ್ಧದವರೆಗೆ ಸುಮಾರು ನಾಲ್ಕು ನೂರು ಸಂವತ್ಸರಗಳ ಸುದೀರ್ಘ ಅವಧಿಯಲ್ಲಿ ಮುಸಲ್ಮಾನರ ಕೃಪಾಛತ್ರದಲ್ಲಿ ಈ ನಗರವು ಬಾಳಿತು. ಈ ಅವಧಿಯಲ್ಲಿ ಹರಿದಾಸರ ಸಾತ್ವಿಕ ಭಕ್ತಿ ಸಂಪ್ರದಾಯವು ಈ ಭಾಗದಲ್ಲಿ ಊರ್ಜಿತವಾಯಿತು.

## ೨. ನಾಮದ ನಿಷ್ಪತ್ತಿ

ಇತಿಹಾಸದ ಈ ಹಿನ್ನೆಲೆಯಲ್ಲಿ ರಾಯಚೂರು ಎಂಬ ಹೆಸರಿನ ಮೂಲ ಮತ್ತು ಸ್ಥಿತ್ಯಂತರಗಳನ್ನು ಪರಾಮರ್ಶಿಸುವ. ಈ ನಗರ ನಾಮದ ಉತ್ಪತ್ತಿಯನ್ನು ಕುರಿತು ಈಚೆಗೆ ಕೆಲವರಲ್ಲಿ ಅಸಮರ್ಪಕ ಊಹೆಗಳು ಹುಟ್ಟಿ ಅವು ಪ್ರಚಾರವಾಗುತ್ತಿರುವ ಕಾರಣದಿಂದ ಈ ವಿಷಯ ಜಿಜ್ಞಾಸೆ ಆವಶ್ಯಕವೆನಿಸಿದೆ.

ಇಲ್ಲಿ ಕೆಲವರು ಪ್ರಶ್ನಿಸಬಹುದು. ಹೆಸರಿನಲ್ಲಿ ಏನಿದೆ? ಹೆಸರಿಗೇಕೆ ಇಷ್ಟು ಗೌರವ? ಅದಕ್ಕೆ ಉತ್ತರ: ಹೆಸರಿನಲ್ಲಿ ಏನಿಲ್ಲ? ಹೆಸರಿನಲ್ಲಿ ಎಲ್ಲವೂ ಇದೆ. ವ್ಯಕ್ತಿಯ, ವಸ್ತುವಿನ ಇಲ್ಲವೆ ಸ್ಥಳದ ಹೆಸರಿಗೆ ಆಳವಾದ, ವಿಸ್ತೃತವಾದ ಚಾರಿತ್ರಿಕ ಹಿನ್ನೆಲೆ ಇದೆ, ಐತಿಹಾಸಿಕ ಆವರಣವಿದೆ, ಸಂಸ್ಕೃತಿಯ ಭವ್ಯಪರಂಪರೆ ಇದೆ. ಇದನ್ನು ವಿಮರ್ಶಿಸಿ ನೋಡಿದರೆ ಒಂದೊಂದು ಹೆಸರಿನ ಹಿಂದೆ ಒಂದೊಂದು ಚಿಕ್ಕ ವಿಶ್ವವೇ ಅಡಗಿದ್ದ ಸಂಗತಿ ಪ್ರಕಟವಾಗುತ್ತದೆ. ಹೆಸರಿನ ರಹಸ್ಯವನ್ನು ಪೂರ್ತಿಯಾಗಿ ಅರಿತರೆ ಸಮೃದ್ಧ ಜ್ಞಾನ ಭಾಂಡಾರದ ಒಂದೊಂದು ಬಾಗಿಲು ತೆರೆದಂತೆ ಅನುಭವವು ಬರುತ್ತದೆ ಹಲವು ಸಂದರ್ಭಗಳಲ್ಲಿ. ಹೆಸರನ್ನು ಉಪೇಕ್ಷಿಸಿದರೆ ಅದರ ಫಲ ದುರ್ಗತಿ. ಇದಕ್ಕೆ ಈ ಮುಂದೆ ವಿವರಿಸಿದಂತೆ ರಾಯಚೂರಿನ ಉದಾಹರಣೆಯೇ ಸಾಕು.

ನನ್ನ ಸ್ಥೂಲ ಅವಲೋಕನದಲ್ಲಿ ಹನ್ನೆರಡನೆಯ ಶತಮಾನದ ಪೂರ್ವದ ಕನ್ನಡ ಶಾಸನಗಳಲ್ಲಿ ರಾಯಚೂರಿನ ಸ್ಪಷ್ಟ ನಿರ್ದೇಶವು ದೊರೆತಂತೆ ಜ್ಞಾಪಕವಿಲ್ಲ. ಇನ್ನೂ ಸೂಕ್ಷ್ಮವಾಗಿ ಹುಡುಕಾಡಿದರೆ ಅದು ದೊರೆಯಬಹುದು. ಹೊಯ್ಸಳ ವಿಷ್ಣುವರ್ಧನ ರಾಜನು ತುಂಗಭದ್ರೆಯ ಉತ್ತರ ಪ್ರದೇಶದಲ್ಲಿ ದಿಗ್ವಿಜಯ ಮಾಡಿ, ಜಯಿಸಿದ ದುರ್ಗಗಳಲ್ಲಿ ರಾಯಚೂರು ಸಮಾವೇಶಗೊಂಡಿತ್ತು ಎಂದು ಮೇಲೆ ಸೂಚಿಸಿದ್ದೇನೆ. ಶಾಸನಗಳಲ್ಲಿ ಬರುವ ಇಂಥ ನಿರ್ದೇಶಗಳಲ್ಲಿ ಕೆಲವು ಹೀಗೆ:

೧. ಹಾಸನ ಜಿಲ್ಲೆಯ ಬೇಲೂರು ೧೯೩ ಅಂಕದ ಶಾಸನವು ವಿಷ್ಣುವರ್ಧನನು ಅಣ್ಣಿಗೇರಿ, ಬಳ್ಳಾರಿ, ರಾಚವೂರ್, ಹಾನಗಲ್, ಬನವಾಸಿ, ಹಲಸಿ, ಹುಲಿಗೆರೆ (ಲಕ್ಷ್ಮೇಶ್ವರ) ಮತ್ತು ಬೆಳ್ವಲದ ಬೇರೆ ಭಾಗಗಳನ್ನು ಸೂರೆಗೊಂಡನೆಂದು ವರ್ಣಿಸುತ್ತದೆ. ಈ ವಿವರಗಳು ವಿಷ್ಣುವರ್ಧನನ ಮಗ ಒಂದನೆಯ ಸೋಮೇಶ್ವರನ ಕ್ರಿ. ಶ. ೧೧೬೦ರ ಶಾಸನದಲ್ಲಿ ಉಕ್ತವಾಗಿದೆ.

೨. ಮೈಸೂರು ಜಿಲ್ಲೆಯ ನಾಗಮಂಗಲ ೭೦ ಅಂಕದ ಶಾಸನವು ವಿಷ್ಣುವರ್ಧನನ ಸಮರಾಟೋಪದಿಂದ ಬನವಾಸಿ, ವಿರಾಟನಗರ (ಹಾನಗಲ್), ಬಳ್ಳಾರಿ, ಕುಮ್ಮಟ (ಗಂಗಾವತಿ ತಾಲೂಕ), ಪೆರ್ಮನ ರಾಚವೂರ್, ಮುದುಗನೂರ್, ಮೊದಲಾದ ಅಸಂಖ್ಯಾತ ದುರ್ಗಗಳು ಭಗ್ನವಾದವೆಂದು ಪ್ರಶಂಸಿಸುತ್ತದೆ. ಈ ಶಾಸನವು ವಿಷ್ಣುವರ್ಧನನ ಮೊಮ್ಮಗ ಇಮ್ಮಡಿ ವೀರ ಬಲ್ಲಾಳನ ಆಳಿಕೆಯದು. ಇದರ ಕಾಲ ಕ್ರಿ.ಶ. ೧೧೭೮.

೩. ಹಾಸನ ಜಿಲ್ಲೆಯ ಬೇಲೂರು ೧೩೭ ಅಂಕದ ಶಾಸನವು ವಿಷ್ಣುವರ್ಧನನು ಉಚ್ಚಂಗಿ, ಬಳ್ಳಾರಿ, ಬೆಳ್ವಲ ನಾಡಿನ ರಾಚನೂರ್, ಮುದುಗನೂರ್, ಮುಂತಾದ ನಗರಗಳನ್ನು ಗೆದ್ದನೆಂದು ಸಾರುತ್ತದೆ. ಈ ಶಾಸನವು ವಿಷ್ಣುವರ್ಧನನ ಮೊಮ್ಮಗ ಇಮ್ಮಡಿ ವೀರಬಲ್ಲಾಳನ ಆಳಿಕೆಯದು. ಇದರ ಕಾಲ ಕ್ರಿ. ಶ. ೧೧೮೨.

ಮೇಲೆ ಉದ್ಧರಿಸಿದ ಶಾಸನಗಳಲ್ಲಿ ನಿರ್ದಿಷ್ಟವಾದ ರಾಚವೂರ್, ಪೆರ್ಮನ ರಾಚವೂರ್ ಇಲ್ಲವೆ ರಾಚನೂರ್ ಎಂಬುದು ಇಂದಿನ ರಾಯಚೂರು ಎಂಬ ವಿಷಯವು ವರ್ಣನೆಯ ಕ್ರಮ, ಸ್ಥಳಗಳ ಆವರಣ ಮತ್ತು ಪ್ರಾದೇಶಿಕ ವಿವರಗಳಿಂದ ಸ್ಫುಟವಾಗುತ್ತದೆ. ಮೂರನೆಯ ಶಾಸನದಲ್ಲಿ ಅದು ಬೆಳ್ವಲನಾಡಿಗೆ ಸೇರಿತ್ತು ಎಂದು ಹೇಳಿದೆ. ಎರಡನೆಯ ಮತ್ತು ಮೂರನೆಯ ಶಾಸನಗಳಲ್ಲಿ ಬರುವ 'ಮುದುಗನೂರ್' ಇಂದಿನ ಕೊಪ್ಪಳದ ಬಳಿಯ ಮಾದಿನೂರ್ ಎಂಬ ಸಂಗತಿ ಈ ಗ್ರಾಮದ ಶಾಸನಗಳಿಂದ ಖಚಿತವಾಗುತ್ತದೆ. ಬಳ್ಳಾರಿಯಂತೂ ಮೂರೂ ಶಾಸನಗಳಲ್ಲಿ ಉಕ್ತವಾಗಿದೆ. ಈ ಊರಿಗೆ 'ಪೆರ್ಮನ ರಾಚವೂರ್' ಎಂದು ವಿಶಿಷ್ಟ ಹೆಸರು ಇದ್ದಂತೆ ಎರಡನೆಯ ಶಾಸನದಿಂದ ವ್ಯಕ್ತವಾಗುತ್ತದೆ. ಪೆರ್ಮನೆಂಬ ರಾಜನು ಇಲ್ಲವೆ ಪ್ರಮುಖ ನಾಯಕನ ಸಂಬಂಧದಿಂದ ಈ ವಿಶೇಷ ಹೆಸರು ಉಂಟಾಗಿದ್ದಂತೆ ತೋರುತ್ತದೆ.

ರಾಚವೂರ್ ಹೆಸರಿನಲ್ಲಿ ಮುಖ್ಯಪದ ರಾಚ. ಇದು ರಾಜ ಎಂಬುದರ ತದ್ಭವ. ರಾಜ-ರಾಚ ಎಂದಾಗುವದಕ್ಕೆ ಸಾಕಷ್ಟು ಉದಾಹರಣೆಗಳಿವೆ: ರಾಜಮಲ್ಲ-ರಾಚಮಲ್ಲ, ರಾಜರಸ-ರಾಚರಸ; ಈಚೆಗೆ ರಾಚಯ್ಯ, ರಾಚಪ್ಪ, ರಾಚಣ್ಣ, ರಾಚವ್ವ, ಇತ್ಯಾದಿ.

ರಾಜ-ಊರ್, ರಾಜವೂರ್, ರಾಚವೂರ್ ಎಂದಾಯಿತು. ಈ ಪರಿವರ್ತನಕ್ರಮದಲ್ಲಿ ಮುಂದಿನ ಕುಗ್ಗಿದ

ರೂಪ 'ರಾಚೂರು'. ಇದಕ್ಕೆ ಶಾಸನಾಧಾರಗಳಿವೆ.

ರಾಯಚೂರಿನ ಕೋಟೆಯ ಗೋಡೆಯ ಮೇಲೆ ಕೆತ್ತಿದ, ಕ್ರಿ. ಶ. ೧೨೯೪ ವರ್ಷದ ಕಾಕತೀಯ ಪ್ರಾಂತಾಧಿಪತಿ ಗೋನಗನ್ನಯ ರೆಡ್ಡಿಯ ಶಾಸನದಲ್ಲಿ ಈ ಊರನ್ನು 'ರಾಚೂರು' ಎಂದು ಹೆಸರಿಸಿದೆ. ಈ ರಾಚೂರು ಸಾಂಗೋಪಾಂಗವಾಗಿ ಮುಂದಿನ ಶತಮಾನಗಳಲ್ಲಿ ನಡೆದು ಕೊಂಡು ಹೋಯಿತು ಎನ್ನುವುದಕ್ಕೆ, ರಾಯಚೂರು ಜಿಲ್ಲೆಯ ನೆರೆಯಲ್ಲಿ ಅಲಂಪೂರು ಗ್ರಾಮದ ಕನ್ನಡ ಶಾಸನ ಗಳು ಆಧಾರವಾಗಿವೆ. ಉದಾಹರಣೆಯಾಗಿ, ಅಲಂಪೂರಿನ ಕ್ರಿ. ಶ. ೧೫೨೧ ಮಿತಿಯ ಎರಡು ಶಾಸನಗಳಲ್ಲಿ ವಿಜಯ ನಗರದ ಕೃಷ್ಣದೇವರಾಯನ ಉತ್ತರ ದಿಗ್ವಿಜಯದ ಘಟನೆ ಯನ್ನು ನಿರೂಪಿಸುವ ಸಂದರ್ಭದಲ್ಲಿ,

**"ಉತ್ತರಾದಿ ರಾಚಕಾರ್ಯದ ದಿಗ್ವಿಜಯ ದಿಂದ ರಾಚೂರನು ಸಾಧಿಸಿ"**

ಎಂಬ ವಾಕ್ಯವು ಬರುತ್ತದೆ. ಇಲ್ಲಿ 'ರಾಜಕಾರ್ಯ' ಎನ್ನುವದಕ್ಕೆ 'ರಾಚಕಾರ್ಯ' ಎಂಬ ಪದದ ಬಳಕೆ-ಗಮನಾರ್ಹವಾಗಿದೆ.

ಈ 'ರಾಚೂರು' ಹೆಸರು ಶಿಥಿಲವಾಗಿ, ಇಂದಿನ ರಾಯ ಚೂರು ಹೇಗಾಯಿತು, ಎಂದಾಯಿತು, ಎಂದು ಖಚಿತ ವಾಗಿ ಹೇಳಲು ಇನ್ನೂ ಸಂಶೋಧನೆ ನಡೆಯಬೇಕು. ಈ ಪರಿವರ್ತನೆ ಬಹುಶಃ ಕಳೆದ ಒಂದೆರಡು ಶತಮಾನಗಳಲ್ಲಿ ನಡೆದಿರಬಹುದು. ಅದರಲ್ಲಿ ತೆಲುಗಿನ ಕೈವಾಡವೂ ಇದ್ದಿರ ಬಹುದು. ರಾಯಚೂರು ಪದದಲ್ಲಿಯ ಯಕಾರವು ರಾಜ-ರಾಯ ಎಂಬ ಪ್ರಾಕೃತ ರೂಪ ನಿಷ್ಪತ್ತಿ ಎಂದು ಗ್ರಹಿಸು ವುದಕ್ಕಿಂತ ಉಚ್ಚಾರ ಸೌಕರ್ಯಕ್ಕಾಗಿ ರಾಚೂರು ಪದದಲ್ಲಿ ಉಂಟಾದ ಯಕಾರಾಗಮವೆಂದು ಹೇಳಿದರೆ ಸರಿ ಆದೀತು. ಏಕೆಂದರೆ ರಾಚೂರು ಎಂಬಲ್ಲಿ ರಾಜಪದದ ಅಸ್ತಿತ್ವವು ಇದ್ದೇ ಇದೆ. ರಾಯಚೂರನ್ನು ರಾಯಿಚೂರೆಂದು ಕೆಲ ವರು ಉಚ್ಚರಿಸುವರು, ಬರೆಯುವರು.

ಈ ಆಧುನಿಕ ರಾಯಚೂರು, ರಾಯಿಚೂರು ರೂಪಗಳು ಈ ಗ್ರಾಮನಾಮದ ಘನತೆಯ ಪೂರ್ವೇತಿಹಾಸದ ಮೇಲೆ ಕಪ್ಪುತೆರೆಯನ್ನು ಎಳೆದು ಅದರ ಮೂಲವನ್ನು ಕಂಡು ಹಿಡಿಯಲು ದಿಗ್‌ಭ್ರಮೆಯನ್ನು ಉಂಟುಮಾಡಿವೆ. ರಾಯ ಚೂರು ಆಂಧ್ರದ ಗಡಿಗೆ ಸನಿಹದಲ್ಲಿದೆ. ರಾಯಚೂರಿನಲ್ಲಿ ತೆಲುಗು ಮಾತನಾಡುವವರ ಸಂಖ್ಯೆ ಬೆಳೆದಿದೆ. ಇದ ರಿಂದಾಗಿ ರಾಯಚೂರು ತೆಲುಗು ಮೂಲದ ಹೆಸರು ಎಂಬ ತಿಳಿವಳಿಕೆ ಹಲವರಲ್ಲಿ ಮನೆಮಾಡಿಕೊಂಡಿದೆ.

ಈ ತಿಳಿವಳಿಕೆಯಂತೆ ಈ ಹೆಸರು ತೆಲುಗಿನ 'ರಾಯಿ' ಎಂದರೆ ಕಲ್ಲು ಮತ್ತು 'ಚೂರು' ಎಂದರೆ ಚೂರು. ಈ ಪದಗಳ ಹೊಂದಿಕೆಯಿಂದ ಹುಟ್ಟಿದೆ. ತೆಲುಗಿನ ಪ್ರಾಬ ಲ್ಯದ ಜೊತೆಗೆ, ರಾಯಚೂರಿನ ಶಿಲಾಮಯ ಪ್ರಾಕೃತಿಕ ಆವರಣವು ಈ ಊಹೆಗೆ ಬೆಂಬಲ ನೀಡಿದಂತೆ ತೋರುತ್ತದೆ.

ಇದು ಸಾಮಾನ್ಯ ಜನರ ಹಗುರ ಓಟದ ತಿಳಿವಳಿಕೆ. ಇಂಥ ಸುಲಭ ತಿಳಿವಳಿಕೆಗೆ ವಿಚಾರಶೀಲರು, ವಿದ್ವಾಂಸರು ಮಾರುಹೋಗಲಾರರು. ಮಾರು ಹೋದರೆ ಅದು ತಪ್ಪು ತಿಳಿವಳಿಕೆಯ ಪ್ರಭಾವದ ದ್ಯೋತಕವಷ್ಟೆ. ಈಚೆಗೆ ಪ್ರಕಟ ವಾದ ಒಂದು ಸಾಹಿತ್ಯ ಗ್ರಂಥದಲ್ಲಿ ಮಾನ್ಯ ಲೇಖಕ ಮಿತ್ರರು ಈ ವಿಷಯದಲ್ಲಿ ಹೀಗೆ ಅಭಿಪ್ರಾಯ ವ್ಯಕ್ತ ಮಾಡಿರುವರು :

> "ಭೌಗೋಲಿಕ ಪರಿಸ್ಥಿತಿಯನ್ನು ನೋಡಿದರೆ, ರಾಯಚೂರು ಆಂಧ್ರ-ಕರ್ನಾಟಕಗಳ ಗಡಿನಾಡು. ರಾಯಚೂರಿನಿಂದ ಪೂರ್ವಕ್ಕೆ ಎರಡು ಮೈಲಿಗಳಲ್ಲಿ ಆಡುವ ಮಾತು ತೆಲುಗು. ಅಲ್ಲಿಯವರೆಗೆ ಕನ್ನಡವು ಅರ್ಥವಾಗುವುದಿಲ್ಲ. ಸ್ವತಃ ರಾಯಚೂರ್ ಶಬ್ದವನ್ನು ವಿಭಜಿಸಿದರೂ ಈ ಅಂಶವು ವ್ಯಕ್ತವಾಗುವದು. (ರಾಯಿ=ಕಲ್ಲು, ಚೂರು=ಚೂರು)."

ಮೇಲೆ ವಿವರಿಸಿದಂತೆ, ಇಂಥ ತಿಳಿವಳಿಕೆಗೆ, ನಿಷ್ಪತ್ತಿಗೆ ಕಿಂಚಿತ್ತಾದರೂ ಚರಿತ್ರೆಯ ಆಧಾರವಿಲ್ಲ. ಅದು ಪ್ರಬಲ ಐತಿಹಾಸಿಕ ಪ್ರಮಾಣದಿಂದ, ಶಾಸನಗಳ ಸಾಕ್ಷ್ಯದಿಂದ ಪೋಷಿತವಾಗುವುದಿಲ್ಲ. ಕೇವಲ ಕಲ್ಪನೆಯ ಮೇಲೆ ನಿಂತಿರುವುದರಿಂದ ಸಂಶೋಧಕನ ದೃಷ್ಟಿಪಾತದಿಂದ ಕುಸಿದು ಬೀಳುತ್ತದೆ.

ಇದುವರೆಗಿನ ವಿವೇಚನೆಯಿಂದ ರಾಯಚೂರಿನ ಮೂಲವು 'ರಾಜ-ಊರ್' ಎಂಬ ವಿಷಯ ಸ್ಪಷ್ಟವಾಗು ತ್ತದೆ. ಈ ಹೆಸರು ಎಷ್ಟೊಂದು ಅನ್ವರ್ಥಕವಾಗಿದೆ, ಎನ್ನುವುದಕ್ಕೆ ಶತಕಾನುಶತಕಗಳಿಂದ ಬಂದ ಅದರ ಐತಿಹಾಸಿಕ ಪರಂಪರೆ, ಚರಿತ್ರೆಯ ಘನತೆ ಆಧಾರಭೂತ ವಾಗಿವೆ. ನಮ್ಮಲ್ಲಿ ರಾಜರುಗಳಿಗೆ, ಅರಸುಗ್ರಾಮ ಗಳಿಗೇನೂ ಕೊರತೆ ಇಲ್ಲ. ಆದರೆ ಈ 'ರಾಜ-ಊರ್' ನಿಜವಾಗಿ ಖ್ಯಾತಿವೆತ್ತ ರಾಜನಗರ.

ವಿಜ್ಞಾನಕ್ಕೂ ಸಾಮಾನ್ಯ ಜ್ಞಾನಕ್ಕೂ ಮಹದಂತರ ವಿದೆ. ಇಲ್ಲಿ ಶಾಸನ ಪ್ರಮಾಣದಿಂದ ಸಿದ್ಧವಾದ ರಾಯ ಚೂರಿನ ಪೂರ್ವನಾಮ 'ರಾಜ-ಊರಿ'ನ ಮೇಲ್ಮೆ? ಎಲ್ಲಿ ಸಂತೆಯ ಮಾತಿನ 'ಕಲ್ಲಿನ ಚೂರು' ಎಂಬ ಅದರ ವಿಕೃತ ರೂಪಾಂತರ? ಒಂದು ನಾಗರಿಕ ಮಹಿಮಾನ್ವಿತ; ಇನ್ನೊಂದು ಅನಾಗರಿಕ ಆ ಭಾ ಸ ಪೂ ರಿ ತ! ಬಾಳ್ ಸಂಶೋಧನಂ!

---

### ಗ್ರಂಥ-ಸಂದರ್ಭಗಳು


1. Epigraphica Carnatica, Vols IV and V.

2. A corpus of Inscriptions in the Kannada Districts of Hyderabad (Ed. By P. B. Desai), No. 11.

3. Select Stone Inscriptions of Andhra Pradesh (Ed. by P. B. Desai). Nos. 3 and 4.

4. Hyderabad Archaeological Report, 1935–36, pp. ff.

5. South Indian Inscriptions. Vol. IV, No. 789.

6. ಕರ್ನಾಟಕ ಸಂಘ, ರಾಯಚೂರು, ಬೆಳ್ಳಿಯ ಹಬ್ಬದ ವಿಶೇಷ ಸಂಚಿಕೆ, ೧೯೬೩.

7. ಸರಸ್ವತೀ ತತ್ವ (ಮಿಂಚಿನಬಳ್ಳಿ ಪ್ರಕಾಶನ, ೧೯೬೮), ಪುಟ ೧೭೫.


---

## ದಾಸವಾಳ ?

ದಾಸವಾಳದ ಹೂವೇ, ಹೆಸರೇಕೆ ಹೀಗಿಹುದು ?
ದಾಸಿ ಯಾರಿಗೆ? ಎಲ್ಲಿ ನಿನ್ನ ದಣಿಯು ?
"ಹೆಸರಲೇನಿದೆ? ಮಹಾ!" ಎಂದು ಮೂಗನು ಮುರಿವೆ
ಕುಬೇರಪ್ಪಗೆ ಕೂಲಿ ದುಡಿತ ದಿನವೂ!

ಕತ್ತರಿಸಿ ಚಿತ್ತಾರದಂತೆ ದುಂಡಿಸಳು, ನಯ,
ಗಂಟೆ ರೂಪದಿ ಯಾರನೆಚ್ಚರಿಸುವೆ ?
"ಹದ್ದು ಬಾಳುವ ನೂರು ವರ್ಷದಾ ಜೀವನಕೆ
ಸಾಟಿ ಎಂಬರು ನಿನ್ನ ಒಂದು ದಿನವೆ."

ನಕ್ಕು ಸುಖಿಸುವಿಯೇನೋ ಮುಡಿದವಳ ದಾಸ್ಯಕ್ಕೆ
ತಂದವರ ತಂತ್ರಕ್ಕೆ, ಒಗೆದ ಬಲಿಗೆ ?

ನಿರ್ಲಿಪ್ತ ಶರಣೆಯೊಲು ಇದ್ದು ಇಲ್ಲದ ತೆರದಿ
ಬೀಳಬಹುದೇ ಹೀಗೆ ಮಡಿಯ ಮುಡಿಗೆ ?

ಕಳಚದೆಯೆ ತುಂಬನ್ನು, ಮರದಿ ನೆರೆ-ಬೇಕೆನುವ
ವಾರಗಟ್ಟಲೆ ಇರುವ ಹೂವು ಹೂವೆ ?
ಹಾರಕ್ಕೆ ಆಹಾರವಾಗಿ ಒತ್ತಾಯದಲಿ,
ಸೂಜಿದಾರದ ಹೆಣಿಕೆ ಸಣ್ಣ ನೋವೇ ?

ಹಸು ಮಕ್ಕಳಾ ಜಡೆಗೆ, ಬುಡದ ಮಡಿ-ಉಡಿಗೆ
ಬಿದ್ದು ಸಮ-ಸುಖಪಡುವ ಸ್ಥಿತ ಪ್ರಜ್ಞಳೆ,
ವಿಷಯ ವಾಸನೆ ಗೆದ್ದು, ರಾಜ ಭೋಗವನೊದ್ದ
ಅಕ್ಕಮಹದೇವಿಗೆ ನೀ ಶಿಷ್ಯಳೇ ?

•

ಕೆ. ವಿರೂಪಾಕ್ಷಗೌಡ

# ಕನ್ನಡ ನಾಡು, ಕನ್ನಡ ಭಾಷೆ ಮತ್ತು ಸಂಸ್ಕೃತಿ

■ ತಿ. ತಾ. ಶರ್ಮ

## ಕನ್ನಡ ಜ್ಞಾನಬೋಧಕವು ೧೮೬೧

ಇದು ಕನ್ನಡ ಮಾಸಪತ್ರಿಕೆ; ಇದರ ಮೊದಲನೆಯ ಸಂಚಿಕೆ ಹೊರಟದ್ದು ೧೮೬೧ನೆಯ ವರ್ಷದ ನವೆಂಬರ್ ತಿಂಗಳಲ್ಲಿ. ಈ ಪತ್ರಿಕೆಯು ಬೆಳಗಾಂವಿಯಲ್ಲಿ ಸ್ಥಾಪಿತವಾದ "ಕನ್ನಡ ಭಾಷೆಯಲ್ಲಿ ಪುಸ್ತಕ ಪ್ರಸಿದ್ಧ ಮಾಡುವ ಮಂಡಲಿ"ಯ ಆಶ್ರಯದಲ್ಲಿ ಅದರ ಅಪ್ಪಣೆಯ ಪ್ರಕಾರ ಪ್ರಕಟಿಸಲ್ಪಟ್ಟಿತು. ಧಾರವಾಡದ ಗೋವಿಂದ ಪ್ರಭಾಕರ ಜೋಶಿಯವರ "ಸನ್ಮಾರ್ಗ ದರ್ಶಕ ಛಾಪಖಾನೆ"ಯಲ್ಲಿ ಮುದ್ರಿಸಲ್ಪಟ್ಟಿತು. ಕಲ್ಲಚ್ಚಿನ ಪತ್ರಿಕೆಯ ಮೊದಲನೆಯ ಸಂಚಿಕೆಯ ಮೂಲ ಹೇಗಿತ್ತೆಂಬುದನ್ನು ತೋರಿಸಲು, ಮಾದರಿಗಾಗಿ ಎರಡು ಚಿತ್ರಗಳನ್ನು ಇಲ್ಲಿ ಕೊಡಲಾಗಿದೆ.



ವಿದ್ಯುಲ್ಲಾಸ್ತ್ರವು.



The Canarese Magazine

ಕನ್ನಡ ಜ್ಞಾನಬೋಧಕವು.

ಈ ಪತ್ರಿಕೆಯ ಎರಡನೆಯ ಸಂಚಿಕೆಯಲ್ಲಿ ಕೊಟ್ಟಿರುವ "ಪ್ರಕಟನೆ"ಯನ್ನಿಲ್ಲಿ ಎತ್ತಿಕೊಡಲಾಗಿದೆ.

"ಮುಂಬಯಿ ಯಿಲಾಖೆಯೊಳಗೆ ಇರುವ ಕನ್ನಡು ಮಾತಾಡುವ ಜನರೊಳಗೆ ಇಂಗ್ರಜಿ ಭಾಷೆಯನ್ನು

---

* ಈ ಪತ್ರಿಕೆಯ ಒಂಬತ್ತು ಸಂಚಿಕೆಗಳ ಮೂಲ ಪ್ರತಿಗಳನ್ನು ನನಗೆ ಕೊಟ್ಟು ಉಪಕಾರ ಮಾಡಿದವರು ನನ್ನ ಮಿತ್ರ ಶ್ರೀಮಾನ್ ವೆ. ಮು. ಜೋಶಿಯವರು.

ಕಲಿತವರು ಅನೇಕರು ಇಲ್ಲ; ಆದರೆ ಮಹಾರಾಷ್ಟ್ರ ಮತ್ತು ಗುಜರಾಥಿ ಮಾತಾಡುವವರೊಳಗೆ ನೋಡಲಿಕ್ಕೆ ಕೂತರೆ ಯಷ್ಟೋ ಜನರು ಇಂಗ್ರಜಿ ಭಾಷೆಯ ಅಭ್ಯಾಸ ಚನ್ನಾಗಿ ಮಾಡಿ ತಂಮ ಸ್ವಭಾಷೆಯೊಳಗೆ ಉಪಯುಕ್ತವಾದ ವಿಷಯಗಳ ಮೇಲೆ ಅನೇಕ ಗ್ರಂಥಗಳನ್ನು ಬರಿದವರು ಇದ್ದಾರೆ. ಆದರೆ ಇನ್ನುವರಿಗೂ ಕನ್ನಡು ಮಾತನಾಡುವ ಜನರೊಳಗೆ ಹೇಳಸಿಕೊಂಬುವಷ್ಟು ಶ್ಯಾಹಣೆರು ಯಾರು ಆಗಿಲ್ಲ. ಮತ್ತು ಇದೇ ಕಾರಣದಿಂದಲೆ ಇನ್ನೂ ತನಕ ಕನ್ನಡು ಭಾಷೆಯೊಳಗೆ ಬಹಳ ಗ್ರಂಥಗಳು ಆಗಿಲ್ಲ. ಆದರ ದೆಸೆಯಿಂದ ಇತ್ತಕಡಿಯಿಂದ ೧೦ ಮಂದಿಯನ್ನು ಪುಣೆ ಪಾಠಶಾಲೆಯೊಳಗೆ ಕಳುಹಿಸಿ, ತಿಂಗಳುತಿಂಗಳಿಗೆ ಪಗಾರು ಕೊಟ್ಟು, ಇಂಗ್ರಜಿ ವಿದ್ಯವಂನು ಚನ್ನಾಗಿ ಕಲಿಸಿ, ಅವರಿಗೆ ದೊಡ್ಡ ದೊಡ್ಡ ಕೆಲಸಗಳನ್ನು ಕೊಡಬೇಕೆಂದು ಸರಕಾರ ದವರ ಮನಸ್ಸಿನಲ್ಲಿ ಅದೆ. ಆದರ ದೆಸೆಯಿಂದ ಕನ್ನಡು ಮಾತನಾಡುವ ಜನರೊಳಗೆ ೧೬ ರಿಂದ ೧೯ ವರ್ಷದ ತನಕ ವಯಸಿನವರು, ವೊಳ್ಳೆ ಪ್ರಕೃತಿಯವರಿದ್ದು, ಪುಣೆಕ್ಕೆ ಹೋಗಿ ಅಭ್ಯಾಸ ಮಾಡಬೇಕೆಂದು ಮನಸ್ಸುಳ್ಳವರು ತಂಮ ತಮ್ಮ ಹೆಸರು, ವಯ, ಜಾತಿ, ಇವೆಲ್ಲ ಬರಿದು ಬೆಳಗಾವಿಯ ಡೆಪುಟಿ ಯೆಜ್ಯುಕೇಶನಲ್ ಇನ್‌ಸ್ಪೆಕ್ಟರಾದ ಮಹದೇವ ವಾಸುದೇವರ ಕಡಿಗೆ, ಇಲ್ಲವೆ ದಕ್ಷಿಣ ಭಾಗದ ಇನ್‌ಸ್ಪೆಕ್ಟ ರಾದ ಕ್ಯಾಪಟನ ಲೆಸ್ಟರ್ ಸಾಹೇಬರ ಕಡಿಗೆ ಕಳುಹಿಸಿ ಕೊಡಬೇಕು. ಮತ್ತು ತಂಮ ಅರ್ಜಿಯ ಸಂಗಡ ತಾವು ಕಲಿತ ಸಾಲಿ ಪಂಡೋಜಿಯವರ ಕಡಿಯಿಂದ ಚಲುನಡತಿಯ ವಿಷಯಕ್ಕೆ ಸರಟಫಿಕೆಟ ಸಹ ಕಳುಹಿಸಬೇಕು. ಅಂದರೆ ಅವರೊಳಗೆ ಬುದ್ಧಿವಂತರಾಗಿರುವ ೧೦ ಮಂದಿಯನ್ನು ನೇಮಿಸಿ ಪಗಾರು ಠರಾವು ಮಾಡಿ, ಪುಣೆಕ್ಕೆ ಕಳುಹಿಸಿ ಕೊಡುವರು. ಅಲ್ಲಿ ಅವರು ಹೋಗಿ ಪಾಠಶಾಲೆಯೊಳಗೆ ಅಭ್ಯಾಸ ಚಲುಮಾಡಲಿಕ್ಕೆ ಹತ್ತಿದರೆ ಮುಂದೆ ಅವರಿಗೆ ಇಡಲ್ಪಡುವದು. ಇದರ ವಿಷಯಕ್ಕೆ ಹೆಚ್ಚಿಗೆ ಮಜಕೂರು ತಿಳಿದುಕೊಳ್ಳುವುದಕ್ಕೆ ಮನಸ್ಸುಳ್ಳವರು ಸದರ ಗ್ರಹಸ್ಥರಿಗೆ ಅರ್ಜಿ ಮಾಡಬೇಕು.

(ಸಹಿ) ಕ್ಯಾಪಟನ್ ಲೆಸ್ಟರ
ತಾ ೭ ಡಿಶೆಂಬರ ೧೮೬೧ ಯೆಜುಕೇಷನಲ್ ಇನ್‌ಸ್ಪೆಕ್ಟರ್
ಸ್ವಾರಿ ಮುಕ್ಕಾಮ ಸೊಲ್ಲಾಪೂರ ದಕ್ಷಿಣ ಭಾಗ

ನೂರೆಂಟು ವರ್ಷಗಳ ಹಿಂದೆ ಮುಂಬಯಿ ಪ್ರಾಂತ್ಯದ ಕನ್ನಡ ಮಾತನಾಡುವ ಜನರ ಸ್ಥಿತಿ ಎಷ್ಟು ಹೀನವಾಗಿತ್ತೆಂಬುದು ಈ ಪ್ರಕಟನೆಯಿಂದ ಗೊತ್ತಾಗುತ್ತದೆ.

## ಎಲ್ಲ ಭಾಷೆಗಳ ಮೂಲ ಭಾಷೆ ಯಾವುದು?

ಕೊಂಚ ಕಾಲದ ಹಿಂದೆ "ಅಖಿಲ ಭಾರತ ಭಾಷಾ ಸಮ್ಮೇಳನ"ವೊಂದು ತಿರುಚ್ಚಿಯಲ್ಲಿ ನಡೆಯಿತು. ವಿದ್ವಾಂಸರನೇಕರಲ್ಲಿ ಬರೆದು ತಂದ ಪ್ರಬಂಧಗಳನ್ನು ಓದಿದರು. ಇನ್ನು ಕೆಲವರು ಟಿಪ್ಪಣಿಗಳ ಸಹಾಯದಿಂದ ಆಶು ಭಾಷಣಗಳನ್ನು ಮಾಡಿದರು. ಲೇಖನ-ಭಾಷಣಗಳ ಅಭಿಪ್ರಾಯಗಳು, ಅನುಮಾನಗಳು, ಮೇಲ್ಮಟ್ಟದಲ್ಲಿ ಚರ್ಚೆಗಳಾದುವು. ಇಂತಹ ಸಮ್ಮೇಳನಗಳ ಕಾರ್ಯಕಲಾಪಗಳೊಂದೂ ದೇಶಭಾಷಾ ಪತ್ರಿಕೆಗಳಲ್ಲಿ ಪ್ರಕಟವಾಗುವುದಿಲ್ಲ. ಸಮ್ಮೇಳನ ವ್ಯವಸ್ಥಾಪಕರಾಗಲಿ, ವಿದ್ವಾಂಸರೇ ಆಗಲಿ, ತಾವು ಮಾಡಿದ ಭಾಷಣಗಳ ಒಂದೆರಡು ವಚನಗಳೋ, ವಾಕ್ಯಗಳೊ, ಆಂಗ್ಲ ಪತ್ರಿಕೆಗಳಲ್ಲಿ ಬಂದರೆ "ಧನ್ಯೋಸ್ಮಿ" ಅಂದುಕೊಳ್ಳುತ್ತಾರೆ!

ಮೇಲಿನ ಸಮ್ಮೇಳನದಲ್ಲಿ ಶಿಶಿರಕುಮಾರ ಮಿತ್ರರು "ಭಾರತದ ಭಾಷೆಗಳ ಹುಟ್ಟು" ಎಂಬ ತಮ್ಮ ಪ್ರಬಂಧವನ್ನೋದಿದರು. ಮಾನವ ಈ ಭೂಗ್ರಹದ ಮೇಲೆ ಅವತಾರ ಮಾಡಿದಾಗ, ಅವನು ಮಾತನಾಡುತ್ತಿದ್ದನೋ, ಇಲ್ಲವೋ; ಅವನ ನಿತ್ಯ ಜೀವನವೆಂತಹುದೋ; ಒಂದೂ ಗೊತ್ತಿಲ್ಲ. ಮಹರ್ಷಿ ಅರವಿಂದಘೋಷರು ಹಲವಂಶಗಳನ್ನು ಕುರಿತು* "The origin of the Aryan Speech" ಎಂಬ ಲೇಖನದಲ್ಲಿ ವಿವರಿಸಿದ್ದಾರೆ. ಅವರ ಋಗ್ವೇದಾಧ್ಯಯನ, ಸಂಶೋಧನೆಗಳು ಸಹ ಭಾರತದ ನಾನಾ ಭಾಷೆಗಳ ಹುಟ್ಟಿನ ಗುಟ್ಟಿನ ಕಡೆ ವಾಚಕರ ಗಮನವನ್ನೆಳೆಯುತ್ತವೆ.

ಒಂದು ಕಾಲದಲ್ಲಿ ಭಾರತದಲ್ಲಿ ಜನರು (Proto-Sanskrit) ಅತ್ಯಂತ ಪ್ರಾಚೀನ ಅಥವಾ ಮೂಲಸಂಸ್ಕೃತ ಮಾತನ್ನಾಡುತ್ತಿದ್ದರು. ಅವರು ಯಾರು? ಅವರು ಸಿಂಧು ಕಣಿವೆಯ ಮೂಲನಾಗರಿಕತೆಯ ಜನರಿರಬೇಕು. ಅವರಿಂದ ಸಿಂಧು ನಾಗರಿಕತೆ ಹುಟ್ಟಿರಬೇಕು. ಇದರಿಂದಲೇ ಮೆಸೊಪೊಟೇಮಿಯ, ಈಜಿಪ್ಟ್, ನಾಗರಿಕತೆಗಳೂ ಹುಟ್ಟಿರಬೇಕು. ಡಾ|| ಟಿ. ಎನ್. ರಾಮಚಂದ್ರರವರು ಸಿಂಧು ಕಣಿವೆಯಲ್ಲಿ ದೊರೆತ ಹಲವು ಮುದ್ರೆಗಳಲ್ಲಿ † ಋಗ್ವೇದ ಮಂತ್ರಗಳನ್ನು ಕಂಡುಕೊಂಡಿದ್ದಾರೆ. § ಆಸಿಯಾಖಂಡದ ಎಲ್ಲ ನಾಗರಿಕತೆ

---

* Sri Aravindo Circle Annual, 1952 and "on the Vēda" pp. 43-45

† Oliver L. Reister, Darsana quarterly Vol. I No. 3. p. 291.

§ Madras Museum Lectures, 1950

ಗಳ ಮೂಲವೂ ಈ ನಾಗರಿಕತೆಯೇ ಎಂಬುದವರ ಮತ. ಸಂಶೋಧಕರಿಗೆ ಇಲ್ಲಿ ವಿಶೇಷ ಕೆಲಸ ಮಾಡಲು ಅವಕಾಶವಿದೆ.

ಈ ಹಿನ್ನೆಲೆಯಲ್ಲಿ ವಿಚಾರ ಮಾಡುವಾಗ ಭಾರತದ ಎಲ್ಲ ಭಾಷೆಗಳ ಸಾಂಸ್ಕೃತಿಕ ಮೂಲವೂ ಒಂದೇ ಎಂದು ಕಂಡು ಬರುತ್ತದೆ. ಆದರೆ ಪ್ರಾಂತ್ಯ ಭಾಷೆಗಳಾಗಿ, ಪ್ರತ್ಯೇಕ ವ್ಯಕ್ತಿತ್ವ ಪಡೆಯಲೇನು ಕಾರಣ ಅಥವಾ ಕಾರಣಗಳೆಂಬುದಕ್ಕೆ ಸೂಚನೆಗಳಿನ್ನೂ ಸ್ಪಷ್ಟವಾಗಿಲ್ಲ. ಕನ್ನಡ ಭಾಷೆಯ ಮೂಲವನ್ನು ನಿಕರವಾಗಿ ತಿಳಿಯಬೇಕು. ತುಳು, ಕೊಡಗ, ಕೊಡವ, ಬಡಗ, ಕೋಲ—ಭಾಷೆಗಳ ಅಧ್ಯಯನವಾಗಬೇಕು. ಪ್ರಾಕೃತ ಭಾಷಾಧ್ಯಯನ ಶಾಸ್ತ್ರೀಯವಾಗಿ ಆಗಬೇಕು.

### ಸ್ವದೇಶ-ಸ್ವಭಾಷೆ ಒಂದನ್ನು ಬಿಟ್ಟು ಇನ್ನೊಂದಿಲ್ಲ

ಬಿ. ವೆಂಕಟಾಚಾರ್ಯರ ಹೆಸರನ್ನು ಕೇಳದ ಕನ್ನಡಿಗನು ಯಾವನಾದರಿದ್ದರೆ ಅವನನ್ನು "ನಿರ್ಭಾಗ್ಯ ದಾಮೋದರ" ಎಂದು ಕರೆಯಲೇಬೇಕು. ವೆಂಕಟಾಚಾರ್ಯರು ಬಂಕಿಂಚಂದ್ರರ "ಆನಂದಮಠ ಮತ್ತು ಸ್ವದೇಶಪ್ರೇಮ" ಎಂಬ ಪ್ರಬಂಧವನ್ನು ಬರೆದು ಅದನ್ನು ಈ ವಚನದಿಂದ ಮುಗಿಸಿದ್ದಾರೆ.

"ಜನರಲ್ಲಿ ಸ್ವದೇಶಪ್ರೇಮವೂ, ಸ್ವದೇಶಭಾವವೂ, ಹುಟ್ಟಿ ಅವು ಕಾರ್ಯದಲ್ಲಿ ಪರಿಣಮಿಸಬೇಕಾದರೆ, ಮೊದಲು ದೇಶಭಾಷೋನ್ನತಿಯ ಕಡೆ ಎಲ್ಲರೂ ದೃಷ್ಟಿಯನ್ನು ಕೊಡಬೇಕು. ಪ್ರಕೃತ ಬಂಗಾಳದಲ್ಲಿ ಪ್ರಚಾರಗೊಂಡಿರುವ ಸ್ವದೇಶದ ಭಾವಕ್ಕೆ ಬಂಕಿಂಬಾಬುಯವರು ಮೂಲಕಾರಣರಾಗಿದ್ದಾರೆ. ಇಂಗ್ಲಿಷನ್ನು ಕಲಿತು ಕರ್ತವ್ಯ ಕಾರ್ಯವನ್ನು ಮರೆತಿದ್ದವರನ್ನು ಎಚ್ಚರಗೊಳಿಸುವುದಕ್ಕಾಗಿ ಬಂಕಿಮಬಾಬುಯವರು ಆನಂದಮಠ, ಸೀತಾರಾಮ, ಚಂದ್ರಶೇಖರ, ಚೌಧುರಾಣಿ, ಎಂಬಿವೇ ಮುಂತಾದ ಗ್ರಂಥಗಳನ್ನು ರಚಿಸಿದರು. ಆ ಗ್ರಂಥಗಳ ಲಕ್ಷಾಂತರ ಪ್ರತಿಗಳು ಪ್ರಚಾರವಾದಬಳಿಕ ಅಲ್ಲಿಯ ಜನರು ಪ್ರಕೃತ ಕಣ್ದೆರೆದಿದ್ದಾರೆ. ಸ್ವದೇಶ ಭಾವವು ಅವರಲ್ಲಿರುವಂತೆ ಅಷ್ಟೊಂದು ದೃಢವಾಗಿ ನಮ್ಮವರ ಹೃದಯದಲ್ಲಿ ನಾಟಿರಲಾರದು. ಅಂಥಾ ಗ್ರಂಥಗಳು ನಮ್ಮಲ್ಲಿ ಹುಟ್ಟಲಿಲ್ಲ. ಅದೇ ಗ್ರಂಥಗಳು ಕನ್ನಡದಲ್ಲಿದ್ದರೂ ಅವುಗಳನ್ನೋದಿರುವವರು ಕಡಿಮೆ. ದೇಶಭಾಷೆಯು ಸ್ವದೇಶೀಭಾವದಿಂದ ಪೂರ್ಣವಾಗದಿದ್ದರೆ ದೇಶಕ್ಕೆ ಮಂಗಳವಾಗದು. ನಮ್ಮ ನಡೆನುಡಿಗಳೆಲ್ಲಾ ಟೊಪ್ಪಿಗೆ ಮಾರುವವನನ್ನೂ, ಮಂಗಗಳನ್ನೂ, ಕುರಿತು ಹೇಳುವ ಕಥೆಯಾಗಿರುವುದು."

ಕಾದಂಬರಿಕಾರ ವೆಂಕಟಾಚಾರ್ಯರು ಮೊಟ್ಟಮೊದಲನೆಯ ವಿಶ್ವಸಂಗ್ರಾಮ ಕಾಲಕ್ಕೆ ಮೊದಲೇ ಹೇಳಿದ ಮಾತಿದು !

**"ದೇಶಭಾಷೆಯು ಸ್ವದೇಶೀಭಾವದಿಂದ**
**ಪೂರ್ಣವಾಗದಿದ್ದರೆ ದೇಶಕ್ಕೆ ಮಂಗಳವಾಗದು."**

---

### ಮಾತುಗಳಿವೆ ಅಭಿಮಾನವಿಲ್ಲ

ವಿಧಾನಸೌಧದಲ್ಲಿ ಕೂತು ಕಡತಗಳನ್ನು ತಿರುವಿ ಹಾಕುವವರದು "ಕನ್ನಡದಲ್ಲಿ ಸರಿಯಾದ ಮಾತುಗಳಿಲ್ಲ" ಎಂಬುದೊಂದೇ ಪಲ್ಲವಿ. ಇದು ಅವರ ಅಜ್ಞಾನದ ಫಲವಲ್ಲವಾದರೂ ಅಪರಿಚಯದ ಫಲ. ಈಗಾಗಲೇ ಹತ್ತುಹದಿನೈದು ಸಾವಿರಕ್ಕೆ ಮೀರಿ ಕನ್ನಡ ಶಿಲಾಶಾಸನಗಳು ಪ್ರಕಟವಾಗಿವೆ. ಆ ಸಾಹಿತ್ಯಾವಲೋಕನ ಮಾಡಿದರೆ ಸಾಕು, ಆಡಳಿತದ ನಾನಾ ಶಾಖೆಗಳಿಗೆ ಉಪಯೋಗವಾಗುವ ಸರಿಯಾದ ಮಾತುಗಳು ಸಿಗುತ್ತವೆ. ಕಂದಾಯ, ತೆರಿಗೆ, ಸುಂಕ—ಇತ್ಯಾದಿಗಳಿಗೆ ಸಂಬಂಧಪಟ್ಟ ಮಾತುಗಳು ಅಸಂಖ್ಯಾತವಾಗಿವೆ ; ಅರ್ಥವಾದರೋ ಸಂಶಯಕ್ಕಾಸ್ಪದ ಕೊಡದಂತಿದೆ. ಮಾತುಗಳಾದರೋ ಸೂಟಿಯಾಗಿವೆ. ನೋಡಿ :

| | |
|---|---|
| ಕಾಡಾರಂಬ | ಜಾತಿಕೂಟ |
| ಕೆಂಪುನೂಲು | ಸಮಯಾಚಾರ |
| ಕೆರೆಬಂದಿ | ಹೊರಾದಾಯ |
| ಕಾಣಿಕೆ | ಶೀಗೆ |
| ಕಬ್ಬಿಣಪೊನ್ನು | ಪತಂಗಪೊಪ್ಪಲಿ |
| ಕರಗಪಡಿ | ನಿವೇಶನ |
| ಗಿಡಗಾವಲು | ಸೊಪ್ಪಿನತೋಟ |
| ಮನೆಪಟ್ಟಿ | ತಿಪ್ಪೆಹಳ್ಳ |
| ಮಳಿಗೆ | ಸಿದ್ಧಾಯ |
| ಮದ್ದಿಕೆ | ಬಿತ್ತುವಟ್ಟ |
| ಮಡ್ಡಿ | ಬಾಲತೆರೆ |
| ಉಪ್ಪಿನಮೋಳೆ | ಆಯ |
| ಮಗ್ಗೆ | ಸಂತೆಸುಂಕ |
| ಈಚಲುಪೈರು | ಬಿರಾಡ |
| ಪುರವರ್ಗ | ಹೊಗೆಪಣ |
| ಯೇರುಕಾಣಿಕೆ | ಜಜರಿಪೈರು |
| ಬೇಡಿಕೆ | ಕಟ್ಟಿಕಾಲುವೆ |

ಆಲೆಪೊಮ್ಮು ನೀರುವಳಿ
ಹತ್ತಿಪೊಮ್ಮು
ಮಾರ್ಗ

**ಪಾತ್ರದ ಸಿರಿಯುತಿ; ಹಾಡುವ ಕಾಮುವೆ**

ಬಳ್ಳಾರಿಯ ಜಿಲ್ಲೆ, ಹ ರ ಪ ನ ಹ ಳ್ಳಿ ಯ ತಾಲ್ಲೂಕು, ಬಾಗಳಿ ಗ್ರಾಮದಲ್ಲಿ ಕಲ್ಲೇಶ್ವರ ದೇವಾಲಯವಿದೆ. ಆ ದೇವಾಲಯದ ದಕ್ಷಿಣ ಭಾಗದಲ್ಲೊಂದು ನಟ್ಟು ಕಲ್ಲಿದೆ; ಆ ಕಲ್ಲು ಹಲಗೆಯಲ್ಲಿ ಒಂದು * ಶಾಸನವಿದೆ; ಅದು ಹುಟ್ಟಿದುದು ಕ್ರಿ. ಶ. ೧೦೩೮ರಲ್ಲಿ; ಚಾಳುಕ್ಯ ಇಮ್ಮಡಿ ಜಗದೇಕಮಲ್ಲನ ಕಾಲದಲ್ಲಿ. ಆ ಶಾಸನದ ಈ ಭಾಗವನ್ನು ನೋಡಿ:

"ಹಾಡುವ ಕಾಮುವೆ ನಾಗವೆಯ ಮಗಳುಂ. ಶ್ರೀಕಲಿದೇವರ ತೊತ್ತು ಪಾತ್ರದ ಸಿರಿಯವೆ; ಕಲ್ಲಕೇರಿಯ ತನ್ನ ಮನೆಯ ನಾ ದೇವರಿಗೆ ಕೊಟ್ಟು, ಆ ಮನೆಯೊಳಗೆ ತಾನುಂ, ತನ್ನ ವಂಶಜರಾರಿರ್ದೊಡಂ, ಆಚಂದ್ರಾರ್ಕತಾರಂಬರಂ ದೇವರ ನಂದಾದೀವಿಗೆಗೆ ವರ್ಷಂಪ್ರತಿ ಪಣವೆರಡುಂ ಕೊಟ್ಟು ಮನೆಯೊಳಗೆ ಸುಖದಿನಿಪ್ಪುದು"

ಇದಕ್ಕೆ ಟೀಕೆ ಟಿಪ್ಪಣಿ ಬೇಕಿಲ್ಲ. ಹನ್ನೊಂದನೆಯ ಶತಮಾನದಲ್ಲಿ ನಾಗವೆಯ ಮಗಳು ಕಾಮುವೆ "ಹಾಡುವ"ವಳಾಗಿ ಕೀರ್ತಿ ಗಳಿಸಿದ್ದಳು. ಸಿರಿಯವೆ ರಂಗಭೂಮಿ ಪ್ರವೇಶಮಾಡಿ, ತನ್ನ ಕಲಾಕೌಶಲವನ್ನು ಶ್ರೀ ಕಲಿದೇವರಿಗೆ ಮುಡುಪು ಮಾಡಿದ್ದಳು.

* No. 89, South Indian Inscriptions, Vol. IX part I

---

## ರಿಸರ್ವ್ ಬ್ಯಾಂಕ್ ಕನ್ನಡ ಸಂಘ

ಬೆಂಗಳೂರಿನ ರಿಸರ್ವ್ ಬ್ಯಾಂಕ್ ಕನ್ನಡಾಭಿಮಾನಿ ನೌಕರರು ಶ್ರೀ ಸೂ. ಸುಬ್ರಹ್ಮಣ್ಯಂ ಅವರ ನೇತೃತ್ವದಲ್ಲಿ ದಿನಾಂಕ ೨-೮-೧೯೬೯ರಂದು ಸಭೆ ಸೇರಿ, "ರಿಸರ್ವ್ ಬ್ಯಾಂಕ್ ಕನ್ನಡ ಸಂಘ"ವನ್ನು ಸ್ಥಾಪಿಸಿ, ಅದರ ನಿಯಮಾವಳಿಗಳನ್ನೂ ಧ್ಯೇಯೋದ್ದೇಶಗಳನ್ನೂ ನಿರೂಪಿಸಿ, ಅವುಗಳನ್ನು ಕಾರ್ಯರೂಪಕ್ಕೆ ತರಲು ಹನ್ನೊಂದು ಸದಸ್ಯರುಳ್ಳ ಸ್ಥಾಯಿ ಕಾರ್ಯಕಾರಿ ಸಮಿತಿಯೊಂದನ್ನು ರಚಿಸಿತು. ಸಾಹಿತ್ಯೋತ್ಸವ, ಗ್ರಂಥ ಭಂಡಾರ, ಪುಸ್ತಕ ಪ್ರಕಟಣೆ, ಕನ್ನಡ ಭಾಷೆಯಲ್ಲಿ ತರಗತಿಗಳು ಮೊದಲಾದ ಸಾಹಿತ್ಯಕ ಸಾಂಸ್ಕೃತಿಕ ಕಾರ್ಯಕ್ರಮಗಳು ಸಂಘದ ಧ್ಯೇಯಗಳಲ್ಲಿ ಸೇರಿವೆ. ಅಂದಿನ ಸಭೆಯ ಅಧ್ಯಕ್ಷತೆಯನ್ನು ಶ್ರೀ ಸಿ. ಎಚ್. ನಾರಾಯಣ ಅವರು ವಹಿಸಿದ್ದು, ಶ್ರೀ ಪುಟ್ಟೂರಾಯರು ವಂದನೆ ಸಲ್ಲಿಸಿದರು.

# ವಿಮರ್ಶನರಂಗ

**ಬಡವರ ತಿರುಪತಿ—ವರಪುರಿ ಕ್ಷೇತ್ರ:** ಲೇಖಕರು, ಶ್ರೀ ಬಳಗೆರೆ ಸುಂದರಶರ್ಮ; ಪ್ರಕಾಶಕರು: ಶ್ರೀ ಬ. ನ. ಸುಂದರರಾವ್, ನಂ. ೪೫, ನರಸಿಂಹನಿಲಯ, ೩೮ನೇ ಕ್ರಾಸ್, ಜಯನಗರ, ಬೆಂಗಳೂರು ೧೧. ಆಕಾರ: ಕಿರೀಟ ಅಷ್ಟದಳ, ಪುಟಗಳು ೫೮; ಬೆಲೆ ೬೦ ಪೈಸೆ.

ಬೆಂಗಳೂರಿಗೆ ಕೇವಲ ೧೨ ಮೈಲಿಗಳ ದೂರದಲ್ಲಿರುವ ವರಪುರಿ ಅರ್ಥಾತ್ ವರ್ತೂರಿನ ಕ್ಷೇತ್ರ ಮಹಿಮೆ ಮತ್ತು ಇತಿಹಾಸವನ್ನು ಈ ಪುಸ್ತಕದಲ್ಲಿ ಬರೆಯಲಾಗಿದೆ. ವರ್ತೂರಿನ ಶ್ರೀ ಚೆನ್ನಕೇಶವಸ್ವಾಮಿಯ ದೇವಾಲಯದ ಜೀರ್ಣೋದ್ಧಾರ, ಆ ಸ್ವಾಮಿಯ ಮಹಿಮೆಗಳು ಹಾಗೂ ದೇವಾಲಯದ ಇತರ ವಿವರಗಳು ಈ ಪುಸ್ತಕದಲ್ಲಿ ಅಡಗಿವೆ. ಜೊತೆಗೆ ಅನೇಕ ಆಧಾರಗಳಿಂದ ಸಂಗ್ರಹಿಸಿ ಬರೆದಿರುವ ಇತಿಹಾಸವೂ ಸೇರಿದೆ. ಇವಲ್ಲದೆ 'ವನವಿಹಾರಿ'ಯವರ ಹಾಗೂ ಖ್ಯಾತಕವಿ ಶ್ರೀ ಎಸ್.ಜಿ.ನರಸಿಂಹಯ್ಯನವರ ಭಕ್ತಿಗೀತೆಗಳನ್ನೂ ಈ ಪುಸ್ತಕದಲ್ಲಿ ಸೇರಿಸಿರುವುದರಿಂದ ಪುಸ್ತಕದ ಶೋಭೆ ಹೆಚ್ಚಿ ಭಕ್ತಿರಸಪ್ರಬೋದಕವೂ ಆಗಿದೆ. ಆಗಮತಿಲಕ ವಿದ್ವಾನ್ ಶ್ರೀ ತಲಕಾಡುಕೃಷ್ಣದೀಕ್ಷಿತರ ಆಶೀರ್ವಾದಪೂರ್ವಕ ಮುನ್ನುಡಿ, ಡಾ|| ಕೆ. ಎಸ್. ನಾಗರಾಜನ್, ಶ್ರೀ ಬಿ. ವೆಂಕಟೇಶಶಾಸ್ತ್ರಿ, ಶ್ರೀ ಜೀರಿಗೆಕಟ್ಟೆ ಬಸವಪ್ಪ ಹಾಗೂ ವಿದ್ಯಾಸಚಿವರಾದ ಶ್ರೀ ಕೆ. ವಿ. ಶಂಕರಗೌಡರ ಸಂದೇಶಗಳು ಪುಸ್ತಕಕ್ಕೆ ಮತ್ತಷ್ಟು ಕಳೆಕೊಟ್ಟವೆ. ಹಾಗೂ ಪುಸ್ತಕದ ಹಿರಿಮೆಯನ್ನು ಸಾರುತ್ತವೆ. ಪುಸ್ತಕದ ಮುದ್ರಣ ಅಂದವಾಗಿದೆ. ಬೆಲೆಯೂ ಸಹ ಸಾಮಾನ್ಯರ ಕೈಗೆಟಕುವಂತಿದ್ದು ಸಾಮಾನ್ಯರೂ ಸಹ ಈ ಪುಸ್ತಕವನ್ನು ಕೊಂಡು ಓದಲು ಸಾಧ್ಯವಿದೆ. ಕಡಿಮೆ ಬೆಲೆಗೆ ಉತ್ತಮ ಸಾಹಿತ್ಯವನ್ನು ಕನ್ನಡಿಗರಿಗೆ ಒದಗಿಸುತ್ತಿರುವ ಪ್ರಕಾಶಕರಾದ ಶ್ರೀ ಬ. ನ. ಸುಂದರರಾಯರು ಸ್ತುತ್ಯರ್ಹವಾಗಿರುವುದಲ್ಲದೆ ಲೇಖಕರ ಶ್ರಮವೂ ಸಾರ್ಥಕವೆನಿಸಿದೆ. ಜನತೆಯಲ್ಲಿ ದೈವಭಕ್ತಿಯೇ ಅಭಾವವಾಗುತ್ತಿರುವ ಈ ಕಾಲದಲ್ಲಿ ಇಂತಹ ಭಕ್ತಿರಸದ ಗ್ರಂಥಗಳ ಅವಶ್ಯಕತೆ ಬಹಳವಾಗಿದೆ. ಲೇಖಕರು ಇಂತಹ ಅನೇಕ ಗ್ರಂಥಗಳನ್ನು ಕನ್ನಡಿಗರಿಗೆ ಒದಗಿಸಲೆಂಬುದು ನಮ್ಮ ಹಾರ್ದಿಕ ಹಾರೈಕೆ.

* * *

**ಭಕ್ತಿಗೀತಗಳು—**ಲೇಖಕರು: ಡಾ|| ವಸಂತದೇಸಾಯಿ; ಪ್ರಕಾಶಕರು: ಶ್ರೀ ಮುತಾಲಿಕ ರಂಗಣ್ಣ ಷಷ್ಟ್ಯಬ್ಧಿ ಸತ್ಕಾರ ಸಮಿತಿ, ಧಾರವಾಡ. ಆಕಾರ: ಕಿರೀಟ ಅಷ್ಟದಳ, ಪುಟಗಳು: ೬೦; ಬೆಲೆ ೧-೦೦.

ಶ್ರೀಮಂತ್ರಾಲಯ ಕ್ಷೇತ್ರದ ರಾಘವೇಂದ್ರಸ್ವಾಮಿಗಳನ್ನು ಕುರಿತು ಡಾ|| ವಸಂತದೇಸಾಯಿಯವರು ಅಪಾರ ಭಕ್ತಿಯಿಂದ ಈ ಭಕ್ತಿಗೀತೆಗಳನ್ನು ರಚಿಸಿದ್ದಾರೆ. ಭಕ್ತಿಗೀತೆಗಳು ಹರಿದಾಸರ ಪದ್ಯಗಳ ಧಾಟಿಯಲ್ಲೇ ಇದ್ದು, ರಾಗ-ತಾಳಗಳನ್ನೊಳಗೊಂಡಿರುವುದರಿಂದ ಹಾಡಲು ಯೋಗ್ಯವಾಗಿದೆ. ಭಾಷೆ, ಶೈಲಿ, ವಿಷಯ ಪ್ರತಿಪಾದನೆಯ ರೀತಿ ಬಹಳ ಉತ್ತಮ ಮಟ್ಟದಲ್ಲಿವೆ. ಲೇಖಕರು ತಮ್ಮ ತಂದೆಯಾದ ಶ್ರೀ ರಂಗನಾಥ ಮುತಾಲಿಕ ದೇಸಾಯಿಯವರ ಷಷ್ಟ್ಯಬ್ಧಿ ಪೂರ್ತಿ ಸಮಾರಂಭದ ಶುಭ ಸಂದರ್ಭದಲ್ಲಿ ರಚಿಸಿ ಅರ್ಪಿಸಿರುವ ಗ್ರಂಥವಿದು. ಶ್ರೀ ಬೆಟಗೇರಿ ಕೃಷ್ಣಶರ್ಮರವರು ಅಂದವಾದ ಮುನ್ನುಡಿ ಇತ್ತಿದ್ದಾರೆ. ಪುಸ್ತಕದ ಮುದ್ರಣ ಅಂದವಾಗಿದೆ. ಡಾ|| ದೇಸಾಯಿಯವರಿಂದ ಇಂಥ ಭಕ್ತಿರಸ ಗ್ರಂಥಗಳು ಇನ್ನೂ ಹೆಚ್ಚು ಹೆಚ್ಚು ರಚಿಸಲ್ಪಟ್ಟು, ಭಕ್ತಿರಸದ ಪ್ರಚಾರವಾಗಲೆಂದು ನಮ್ಮ ಹಾರೈಕೆ.

* * *

**ರಂಗದರ್ಶನ—**ಸಂಪಾದಕರು: ಡಾ|| ವಸಂತದೇಸಾಯಿ; ಪ್ರಕಾಶಕರು: ಶ್ರೀ ಮುತಾಲಿಕ ರಂಗಣ್ಣ ಷಷ್ಟ್ಯಬ್ಧಿ ಸತ್ಕಾರ ಸಮಿತಿ, ಧಾರವಾಡ; ಆಕಾರ: ಕಿರೀಟ ಅಷ್ಟದಳ; ೧೨೨ ಪುಟಗಳು; ಬೆಲೆ ೨-೦೦.

ಧಾರವಾಡದ ಶ್ರೀ ಮುತಾಲಿಕ ದೇಸಾಯಿ ರಂಗಣ್ಣನವರು ಉಜ್ವಲ ಕನ್ನಡಾಭಿಮಾನಿಗಳು. ಅಲ್ಲದೆ ರಾಷ್ಟ್ರೀಯ ಜೀವನದ ಅನೇಕ ಚಟುವಟಿಕೆಗಳಲ್ಲಿ ಭಾಗವಹಿಸಿ ನಾಡುನುಡಿಗಳಿಗೆ ಸೇವೆ ಸಲ್ಲಿಸಿದ್ದಾರೆ. ತಮ್ಮ ಸ್ವಗ್ರಾಮವಾದ ನರೇಂದ್ರ ಗ್ರಾಮದ ಏಳಿಗೆಗೆ ಬಹುವಾಗಿ ಶ್ರಮಿಸಿದ್ದಾರೆ. ಹಲವಾರು ಸಂಘಸಂಸ್ಥೆಗಳ ಸ್ಥಾಪನೆಗೆ ಕಾರಣರಾಗಿದ್ದಾರೆ. ಇದೇ ೧೯೬೯ನೇ ಮೇ ತಿಂಗಳನಲ್ಲಿ ಇವರಿಗೆ ಅರವತ್ತು ವರ್ಷಗಳು ತುಂಬಿದ ಶುಭಸಂದರ್ಭದಲ್ಲಿ ಪ್ರಕೃತ ಗ್ರಂಥವು ಪ್ರಕಟವಾಗಿದೆ. ಇವರ ಜ್ಯೇಷ್ಠ ಪುತ್ರರಾದ ಡಾ|| ವಸಂತದೇಸಾಯಿಯವರೇ ಈ ಗ್ರಂಥದ ಪ್ರಕಟಣಾ ಜವಾಬ್ದಾರಿಯನ್ನು ಹೊತ್ತಿದ್ದಾರೆ. ಗ್ರಂಥದಲ್ಲಿ ಶ್ರೀ ರಂಗಣ್ಣನವರ ಪುತ್ರಿಯರಾದ ಶ್ರೀಮತಿ ಶಾಂತಾಪೋತದಾರ ಬಿ.ಎ., ಬಿ. ಇಡಿ., ಕುಮಾರಿ ಸುಶೀಲಾ ಮುತಾಲಿಕ ದೇಸಾಯಿ, ಮೊಮ್ಮಗಳಾದ ಕುಮಾರಿ ಚಿ|| ಪಾಲ್ಗುಣಿ ದೇಸಾಯಿ ಬರ

ದಿರುವ ಲೇಖನಗಳು ಬಹಳ ಸೊಗಸಾಗಿವೆ. ಹಾಗೂ ಅವರ ಗೆಳೆಯರಾದ ಶ್ರೀ ಶ್ರೀನಿವಾಸರಾವ್ ಮಂಗಳವೇಡೆ, ಶ್ರೀ ಬ. ನ. ಸುಂದರರಾವ್, ಶ್ರೀ ಫಜ್ಲುಲ್ ಹಸನ್‌ರವರ ವಿಚಾರಪೂರಿತ ಲೇಖನಗಳಿವೆ. ಇಷ್ಟೇ ಅಲ್ಲದೆ ಮಧ್ವ ಸಿದ್ಧಾಂತವನ್ನು ಕುರಿತು ಡಾ|| ವರದರಾಜ ಉಮರ್ಜಿ ಎಂ.ಎ., ಪಿ. ಎಚ್‌ಡಿ. ಯವರು ವಿದ್ವತ್ಪೂರ್ಣ ಲೇಖನವೂ ಮಾಧ್ಯಮಿಕ ಶಾಲಾ ಗ್ರಂಥಾಲಯಗಳನ್ನು ಕುರಿತು ಶ್ರೀ ವೈ. ವೈ. ಎಡತ್ರಾವಿಯವರೂ ಲೇಖನವನ್ನು ಬರೆದಿದ್ದಾರೆ. ಇವುಗಳಲ್ಲದೆ ಈ ಗ್ರಂಥದಲ್ಲಿ ಶ್ರೀ ರಂಗಣ್ಣನವರ ವಂಶಾವಳಿ, ಅವರ ಜೀವನದ ಮುಖ್ಯಘಟನೆಗಳು, ಅವರ ಬಳಗದ ಬಳ್ಳಿ, ಅವರ ನುಡಿಮುತ್ತುಗಳು ಸೇರಿವೆ. ಅಂದವಾಗಿ ರೂಪುಗೊಂಡಿರುವ ಈ ಗ್ರಂಥವು ಡಾ|| ವಸಂತದೇಸಾಯಿಯವರ ಪಿತೃಭಕ್ತಿಗೆ ಸಾಕ್ಷಿಯೆಂಬಂತಿದೆ.

ಶ್ರೀ ರಂಗಣ್ಣನವರಂತಹ ಹಿರಿಯ ವ್ಯಕ್ತಿಗಳ ಪರಿಚಯವನ್ನು ಹೊರಹೊಮ್ಮುತ್ತಿರುವ 'ರಂಗದರ್ಶನ' ಒಂದು ಮೇಲ್ಪಂಕ್ತಿಯಾಗಿದೆ. ಇಂತಹ ಕೃತಿಗಳು ಕನ್ನಡದಲ್ಲಿ ಹೆಚ್ಚು ಹೆಚ್ಚಾಗಿ ಹೊರಬಂದು ನಾಡಿನ ಅಜ್ಞಾತ ಧುರೀಣರ ಪರಿಚಯವು ನಾಡಿಗೆ ಆಗಬೇಕು. ಶ್ರೀ ರಂಗಣ್ಣನವರಿಗೆ ಭಗವಂತನು ಆಯುರಾರೋಗ್ಯಗಳನ್ನು ಕರುಣಿಸಲೆಂದು ನಮ್ಮ ಹಾರೈಕೆ.

**ಬ. ನ. ಸುಂದರರಾಯ**

* * *

**ಜಾಣಗೆಲ್ಲುತ್ತಾನೆ**—(ಮಕ್ಕಳ ಪುಸ್ತಕ) ಲೇ : ಕುಮಾರ ವೆಂಕಣ್ಣ : ಪ್ರಕಾಶಕರು : ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ, ನಿಯಮಿತ, ಚಾಮರಾಜಪೇಟೆ, ಬೆಂಗಳೂರು-೧೮. ಪುಟಗಳು ೨೯ ; ಬೆಲೆ ೧-೦೦.

ನಾಲ್ಕು ಕಥೆಗಳಿಂದ ಕೂಡಿದ ೨೮ ಪುಟಗಳ ಸಾಹಿತ್ಯ ಕಾಣಿಕೆ ಇದು. ಕನ್ನಡದ ಮಕ್ಕಳಿಗೆ ಮೊದಲನೆಯ ಕಥೆಯ ಔಚಿತ್ಯ ಮತ್ತು ಶುಚಿ ಗೌಣವಾಗಿದೆ. ಉಳಿದ ಕಥೆಗಳು ಎಂದಿನಂತೆ ಸಾಂಪ್ರದಾಯಿಕ. ಪುಟಗಳ ಸಂಖ್ಯೆಯಿಂದ ಹೇಳಿದರೂ ಪುಸ್ತಕದ ಬೆಲೆ ಹೆಚ್ಚಾಯಿತು.

ಕೇವಲ "ಅಡುಗೂಲಜ್ಜಿ"ಯ ಮಕ್ಕಳ ಸಾಹಿತ್ಯಕ್ಕಿಂತ ವೈಜ್ಞಾನಿಕ ವಿಷಯಗಳನ್ನು ಕುರಿತ ಬಾಲ ಸಾಹಿತ್ಯವನ್ನು ಪ್ರಕಟಿಸುವುದರತ್ತ ಈ ಸಂಸ್ಥೆ ಗಮನ ನೀಡುವುದೆಂದು ಆಶಿಸಲಾಗಿದೆ. ಹತ್ತುಜನ ಸಾಮಾನ್ಯ ಪ್ರಕಾಶಕರಿಗೆ ಮಾರ್ಗದರ್ಶಕವಾಗುವಂತೆ ಈ ಸಂಸ್ಥೆ ಕನ್ನಡ ಪುಸ್ತಕಗಳನ್ನು ತರಲೆಂದು ಸಾರ್ವಜನಿಕರೂ ಸಾಹಿತ್ಯಪ್ರಿಯರೂ ನಿರೀಕ್ಷಿಸುವುದು ತಪ್ಪಲ್ಲವೆಂಬುದು ಸರಿಯಷ್ಟೆ ?

**ಸಾಹಿತ್ಯಪ್ರಿಯ**

**ಸಂಯೋಜಕ ಶಕ್ತಿ**—ಲೇಖಕರು : ಡಾ|| ಬಿ.ಜಿ.ಜ್ಯೋತಿ ; ಪ್ರಕಾಶಕರು : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮. ಪುಟಗಳು ೫೧, ಬೆಲೆ ೭೫ ಪೈಸೆ.

ಪ್ರಸ್ತುತ ಹೊತ್ತಗೆಯಲ್ಲಿ ಲೇಖಕರು ಶಕ್ತಿಯ ಒಂದು ಸ್ವರೂಪದ ವಿವೇಚನೆ ನಡಸಿದ್ದಾರೆ. ಮುಖ್ಯವಾಗಿ ಅದು ಸೌರಶಕ್ತಿ ಮತ್ತು ಸಂಯೋಜಕ ಶಕ್ತಿಗಳನ್ನು ಕುರಿತುದಾಗಿದೆ.

ಅಣು ಎನ್ನುವುದಕ್ಕೆ ಅವರಿತ್ತಿರುವ ನಿರೂಪಣೆಯೆಂದರೆ, "ಮುಂದೆ ವಿಭಾಗಿಸಲು ಅಸಾಧ್ಯವಾದ ಮೂಲಧಾತುವಿನ ಅತಿ ಸಣ್ಣ ಕಣ" ಎಂದು (ಪುಟ ೮). ಇದನ್ನು ಪರಮಾಣು ಎಂದು ಕರೆಯುವುದು ವಾಡಿಕೆಯಾಗಿದೆ. ಇಂದು "Molecule" ಎನ್ನುವುದಕ್ಕೆ 'ಅಣು' ಎನ್ನುವ ಅರ್ಥದಲ್ಲಿ ಬಳಸಲಾಗುತ್ತಿದೆ ಎಂಬುದನ್ನು ಲೇಖಕರು ಗಮನಿಸಿದಂತೆ ಕಂಡುಬರುವುದಿಲ್ಲ. "Self Instaining Process" ಎನ್ನುವುದಕ್ಕೆ "ನಿರಂತರವಾಗಿ ನಡೆಯಬೇಕಾದ ವಿಧಾನ" ಎಂದಿರುವುದು ಸರಿಯಾದ ಅರ್ಥ ಸೂಚಿಸುವುದಿಲ್ಲ. "Ignition" ಎನುವುದಕ್ಕೆ 'ಜ್ವಲನ' ಎನ್ನುವ ಪದ ಉತ್ತಮವೆಂದು ತೋರುತ್ತದೆ. ಹಾಗೆಯೇ "Isotope"ಗೆ 'ಸಮಸ್ಥಾನಿ' ಎನ್ನುವ ಪದ ಬಳಕೆಯಲ್ಲಿದೆ.

ವೈಜ್ಞಾನಿಕ ಕ್ರಿಯೆ, ಪ್ರಕ್ರಿಯೆಗಳಿಗೆ ಪರಿಚಿತ ಉದಾಹರಣೆಗಳಿಂದ ಸಾಮ್ಯ ತೋರಿಸುವುದು ಸರಳ ಶೈಲಿಯ ಒಂದು ರೂಪ. ಅಂಥ ಪ್ರಯತ್ನ ಇಲ್ಲಿ ಸಾಕಷ್ಟು ನಡೆದಿಲ್ಲ. ಚಿತ್ರಗಳಿಲ್ಲರುವುದು ಈ ಕೃತಿಯ ಮತ್ತೊಂದು ಕೊರತೆ.

ಆದರೂ ಶ್ರೀಯುತರದು ಸ್ತುತ್ಯ ಪ್ರಯತ್ನವೆನ್ನಬಹುದು. ಏಕೆಂದರೆ, ಆರಿಸಿಕೊಂಡ ವಸ್ತುವಿನಲ್ಲಿ ವೈಜ್ಞಾನಿಕ ನಿಷ್ಠೆಯಿರುವುದು ಸ್ವಯಂವೇದ್ಯವಾಗಿದೆ.

**ಸೂ. ಸು.**

* * *

**ಬಯಕೆ**—ಲೇಖಕರು : ಪುಲಿಕೇಶಿ ; ಪ್ರಕಾಶಕರು : ವಾಗ್ವಿಲಾಸ ಪ್ರಕಾಶನ ; ಪುಟ ಹದಿನಾರು.

"ಹೃದಯತರಂಗ"ದಿಂದ ಪರಿಚಿತರಾದ 'ಪುಲಿಕೇಶಿ' 'ಬಯಕೆ'ಯನ್ನು ಕನ್ನಡಿಗರಿಗೆ ನೀಡಿದ್ದಾರೆ. ಇದರಲ್ಲಿ ಹದಿಮೂರು ಕವನಗಳಿವೆ. ಎಲ್ಲವೂ ಇಂಗ್ಲಿಷ್ ಕವನಗಳ ಭಾವಾನುವಾದ. ಆಚಾರ್ಯ "ಶ್ರೀ"ಯವರ "ಇಂಗ್ಲಿಷ್ ಗೀತಗಳು" ಕೃತಿಯಿಂದ ಉತ್ತೇಜಿತರಾದ ಕವಿಗಳು ಆ ಮಟ್ಟದ ಭಾಷಾಂತರ ತರಲಾಗದಿದ್ದರೂ ಪ್ರಯತ್ನಪಟ್ಟು ಮೂಲದ ಸೌಂದರ್ಯ ಉಳಿಸಲು ಹೆಣಗಿದ್ದಾರೆ. ಈ ಸಂಗ್ರಹದಲ್ಲಿ ಓದುಗರ ಮನಸೆಳೆಯುವ ಕವನಗಳು ಅಂದರೆ

'ಭಿಕ್ಷುಕಿ'; 'ಕಿರುದುಂಬಿ' 'ನೌಕಾಧಿಪತಿಯ ಮಗಳು' ಈ ಅನುವಾದಗಳಲ್ಲಿನ ಗಣವಿನ್ಯಾಸ ಮೆಚ್ಚತಕ್ಕುದ್ದು, ಲಯಗತಿ ತಲೆದೂಗಿಸುತ್ತದೆ. ಸಹಜತೆ ಇದೆ.

ಇನ್ನುಳಿದ ಕವನಗಳಲ್ಲಿ ಕೃತಕತೆ ಸ್ಪಷ್ಟವಾಗಿ ಕಾಣುತ್ತದೆ. ಕೆಲವೊಂದು ಕಡೆ ಮೂಲದ ಭಾವಕ್ಕೂ ಭಾಷಾಂತರಕ್ಕೂ ವ್ಯತ್ಯಾಸವಿದೆ. ಉದಾಹರಣೆಗೆ: 'ಬಯಕೆ' ಕವನ ಒಂದು ಸಾಲು ಈ ರೀತಿ ಇದೆ. "ದಡದಲ್ಲಿ ಮರವುಳ್ಳ ತಿರುವಿನಾ ನದಿಯೊಂದು" ಅದರ ಇಂಗ್ಲಿಷ್ ಮೂಲ "A willowy brook, that turns a mill" ಎಂದಿದೆ. 'ಭಿಕ್ಷುಕ' ಕವನ ಕೊನೆ ಭಾಗ—

ಮಕ್ಕಳೆಲ್ಲ ಸುಯ್ದರಾಗ
ಮುಗಿಯಿತೆಲ್ಲ ಹಿಗ್ಗು ತುಂಬಿ
ತರುತಲಿದ್ದ ಅವರ ಮಾತು
"ಆದರವರು ಏಕೊ ಏನೊ
ಅರಿಯಲಿಲ್ಲ; ಮೊದಲಿಗಿಂತ
ಹೆಚ್ಚು ಕೋಪ ಪಡೆದವರು"

ಎಂದಿದೆ. ಅದರ ಮೂಲ:

"And yet they felt, they knew not why,
More glad than they had done before"

ಇವುಗಳಲ್ಲಿನ ವ್ಯತ್ಯಾಸವನ್ನು ಓದುಗ ಗಮನಿಸದಿರಲಾರ.

"ಅಲೆಯುವ ಗಾಯಕರು" ಕವನದ ಮೊದಲೆರಡು ಸಾಲುಗಳ ಅನುವಾದ ಸ್ಪಷ್ಟವಿಲ್ಲ. ಕೆಲವೊಂದು ಕಡೆ 'ಪಿಡಿದಾವಗಂ' 'ಮೇಣ್' ಈ ರೀತಿಯ ಪ್ರಯೋಗಗಳು ಕೃತಿಯ ಸತ್ವವನ್ನು ಕುಗ್ಗಿಸಿವೆ. ನಿರೀಕ್ಷಿಸಿದ ಮಟ್ಟಕ್ಕೆ ಈ ಕಾರ್ಯ ಯಶಸ್ವಿಯಾಗಿಲ್ಲ.

*                    "                    *

**ಶಿವೋಪಾಸನಾ ವಿವೇಕ—ಲೇಖಕರು:** ಶ್ರೀ॥ಷ॥ಬ್ರಂ॥ಸ್ವಾಮಿ ವೀರಭದ್ರ ಶಿವಾಚಾರ್ಯರು; ಪ್ರ. ಪರಮಾರ್ಥಧಾಮ, ಬೃಹನ್ಮಠ ಹಲಗೂರು. ಬೆಲೆ: ೨-೫೦ ಪೈಸೆ; ಪುಟಗಳು ಸುಮಾರು ಎರಡು ನೂರು.

ತಪೋಭೂಮಿಯೆನಿಸಿದ ಬೃಹನ್ಮಠದ ಶ್ರೀ ಷ॥ ಬ್ರಂ॥ ವೀರಭದ್ರಾಚಾರ್ಯರು "ಶಿವೋಪಾಸನಾ ವಿವೇಕ"ದ ಕರ್ತೃಗಳು. ಈ ಕೃತಿಯಲ್ಲಿ ಮಾನವನ ಅಸ್ತಿತ್ವ; ಅವನ ಗುರಿ, ಅದರ ಸಾಧನೆಗೆ ನೆರವಾಗುವ ಧರ್ಮ ಯಾವುದೆಂಬಂಶವನ್ನು ಸ್ಪಷ್ಟಗೊಳಿಸಲಾಗಿದೆ. ಬುದ್ಧಿ ಜೀವಿಯಾದ ಮಾನವನು ನಾನು ಯಾರು? ಬಂದುದೆಲ್ಲಿಂದ? ಹೋಗುವುದೆಲ್ಲಿಗೆ; ಜೀವನದಲ್ಲಿ ಸುಖ-ದುಃಖ; ಸಾವು ನೋವುಗಳೇಕೆ ಎಂಬ ವಿಚಾರಕ್ಕೆ ಒಳಗಾಗಿ ಚಿಂತನಶೀಲನೆನಿಸಿ, ಈ ಬಾಳಿನಿಂದ ಬಿಡುಗಡೆ ಪಡೆಯಲು ಹವಣಿಸಬೇಕು. ಮಾನವನನ್ನು ಮಹಾನುಭಾವವನ್ನಾಗಿಸುವ ಕಾರ್ಯ ವೀರಶೈವ ಶಿವದೀಕ್ಷೆಯಿಂದ ಲಭಿಸುತ್ತದೆ ಎಂಬಂಶಗಳು ಶ್ರೀಗಳವರು; ಆಗಮ-ಉಪನಿಷತ್ತು; ಸಿದ್ಧಾಂತ ಶಿಖಾಮಣಿ; ಬ್ರಹ್ಮಸೂತ್ರ, ಭಗವದ್ಗೀತೆ, ಪುರಾಣ, ಕಾವ್ಯಗಳ ಆಧಾರದ ಮೇಲೆ ಸ್ಪಷ್ಟಗೊಳಿಸಿದ್ದಾರೆ.

ಈ ಕೃತಿಯಲ್ಲಿ ಎಂಟು ಪ್ರಕರಣಗಳಿದ್ದು ಮೊದಲನೆ ಪ್ರಕರಣದಲ್ಲಿ ಪ್ರತಿಮನುಷ್ಯನೂ ಅಕಲುಷಿತದೇವಪ್ರೇಮದ ಮೂಲಕವೇ ಆತ್ಮಶಕ್ತಿಯನ್ನೂ ಮನಶ್ಶಕ್ತಿಯನ್ನೂ ಉತ್ಥಾನಗೊಳಿಸಿಕೊಳ್ಳಬೇಕೆಂಬ ಅಂಶವನ್ನು ನಿರೂಪಿಸಿದ್ದಾರೆ. ಹಾಗೆಯೆ, ಶಿವದೀಕ್ಷೆಯ ಮಹಿಮೆಯೂ ಅಲ್ಲಿ ಬಂದಿದೆ. ಎರಡು ಮೂರು ನಾಲ್ಕನೆ ಪ್ರಕರಣಗಳಲ್ಲಿ ವಿಭೂತಿ, ರುದ್ರಾಕ್ಷಿ, ಶಿವಮಂತ್ರಗಳ ಅರ್ಥವಿವರಣೆ, ಮಹತ್ತ್ವ, ಪ್ರಾಮುಖ್ಯತೆಗಳ ಬಗೆಗೆ ಆಧಾರಪೂರ್ಣ ವಿಚಾರಗಳಿವೆ. ಐದನೇ ಪ್ರಕರಣದಲ್ಲಿ ಲಿಂಗ-ಶರೀರ ವಿಜ್ಞಾನಕ್ಕೆ ಸಂಬಂಧಪಟ್ಟ ವಿಚಾರಗಳಿವೆ. ವೀರಶೈವ ಧರ್ಮದ ಸಿದ್ಧಾಂತ ಆತ್ಮೋನ್ನತಿ, ರಾಷ್ಟ್ರೋನ್ನತಿ, ಸರ್ವಶಾಂತಿ; ಸುಖ-ದುಃಖಗಳಿಗೆ ತಾನೇ ಕಾರಣಕರ್ತನೆಂದು ತಿಳಿದು ವರ್ತಿಸುವುದು ಹೇಗೆಂಬ ವಿಚಾರವನ್ನು ಮಂಡಿಸಿದ್ದಾರೆ. ಆರನೇ ಪ್ರಕರಣವು ಶಿವಪ್ರಸಾದ, ಗುರುಲಿಂಗ-ಜಂಗಮಗಳ ಏಕೋಭಾವಗಳ ವಿಚಾರಲಹರಿಯನ್ನು ತಿಳಿಸುತ್ತದೆ. ಕೆಲವು ಕಡೆ ವೈಜ್ಞಾನಿಕ ವಿವೇಚನೆಯಿಂದ ಇದರ ಬೆಲೆ ಹೆಚ್ಚಿದೆ.

ಈ ಕೃತಿಯಲ್ಲಿ "ಧರ್ಮ ಮಾನವನ ಪ್ರಾಣ, ಮಾನವನು ತನ್ನ ಜೀವಮಾನವನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳುವುದಕ್ಕೆ ಚಿತ್ತಶಾಂತಿ ಧರ್ಮವೇ ಇಡೀ ಕಾರಣ" ಎಂಬಂಶ ಸ್ಪಷ್ಟವಾಗಿ ಚಿತ್ರಿತವಾಗಿದೆ. ಇದರ ಭಾಷೆ ಸರಳ-ಸುಂದರ-ನಿರರ್ಗಳ. ಈ ಕೃತಿ ಆದರಣೀಯ-ಸಂಗ್ರಹ ಯೋಗ್ಯ.

ಆರ್. ರಾಚಪ್ಪ

# ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮



## ತ್ರೈವಾರ್ಷಿಕ ಯೋಜನೆ

ಭಾರತರತ್ನ ಸರ್. ಎಂ. ವಿಶ್ವೇಶ್ವರಯ್ಯನವರ ಕನಸಿನ ಫಲವಾಗಿ ಮತ್ತು ಕನ್ನಡದ ಉದ್ದಾಮ ಸಾಹಿತಿಗಳ ಸತತ ಪ್ರಯತ್ನಗಳಿಂದಾಗಿ ರೂಪುಗೊಂಡ ಕನ್ನಡ ಸಾಹಿತ್ಯ ಪರಿಷತ್ತು ಕಳೆದ ಐವತ್ತನಾಲ್ಕು ವರ್ಷಗಳಿಂದ ಕರ್ಣಾಟಕದ ಪ್ರಬಲ ಸಾಂಸ್ಕೃತಿಕ ಕೇಂದ್ರವಾಗಿ ಬೆಳೆದಿದೆ. ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳ ಅಭಿವೃದ್ಧಿ ಮತ್ತು ಈ ಮೂಲಕವಾಗಿ ಭಾರತದ ಹಿತಚಿಂತನೆ—ಇವೇ ಪರಿಷತ್ತಿನ ಮುಖ್ಯ ಉದ್ದೇಶಗಳಾಗಿವೆ.

ಈ ಗುರಿಯ ಸಾಧನೆಗಾಗಿ ಮತ್ತು ಇಂದಿನ ಅಗತ್ಯಗಳಿಗೆ ಅನುಗುಣವಾಗಿ ಪರಿಷತ್ತಿನ ಚಟುವಟಿಕೆಗಳನ್ನು ಕನ್ನಡ ನಾಡಿನ ಎಲ್ಲೆಡೆಗಳಲ್ಲೂ ವಿಸ್ತರಿಸಲು ಒಂದು ನಿರ್ದಿಷ್ಟ ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕಾಗಿದೆ. ಅದರಂತೆ ಒಂದು ತ್ರೈವಾರ್ಷಿಕ ಯೋಜನೆಯ ಕರಡು ಪ್ರತಿಯನ್ನು ಪರಿಷತ್ತಿನ ಅಂಗರಚನೆಗೆ ಹೊಂದುವಂತೆ ಸಿದ್ಧಪಡಿಸಿ ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತರಲಾಗಿದೆ. ಇದರ ಬಗೆಗೆ ನಾಡುನುಡಿಗಳ ಅಭಿಮಾನಿಗಳಿಂದ ಬರುವ ಸೂಕ್ತ ಸಲಹೆಗಳಿಗೆ ಸ್ವಾಗತವಿದೆ. ಸಲಹೆಗಾರರು ಇದೇ ಸೆಪ್ಟೆಂಬರ್ ೧೫ರೊಳಗೆ ತಮ್ಮ ಅಭಿಪ್ರಾಯಗಳನ್ನು ಬರೆದು ತಿಳಿಸಬೇಕೆಂದು ಪರಿಷತ್ತು ಪ್ರಾರ್ಥಿಸುತ್ತದೆ. ಈ ಎಲ್ಲ ಸಲಹೆಗಳ ಸಹಾಯದಿಂದ ಪರಿಷ್ಕೃತ ಯೋಜನೆಯನ್ನು ಸಿದ್ಧಪಡಿಸಿ ಪ್ರಕಟಿಸಲಾಗುವುದು. ಈ ತ್ರೈವಾರ್ಷಿಕ ಯೋಜನೆ ೧೯೬೯ನೇ ನವೆಂಬರ್ ಎರಡನೇ ವಾರದಿಂದ ಕಾರ್ಯರೂಪಕ್ಕೆ ಬರುತ್ತದೆ.

ಈ ದಿಸೆಯಲ್ಲಿ ಸರಕಾರ, ವಿಶ್ವವಿದ್ಯಾನಿಲಯಗಳು ಮತ್ತು ಸಾರ್ವಜನಿಕರ ನೆರವನ್ನು ಕನ್ನಡ ಸಾಹಿತ್ಯ ಪರಿಷತ್ತು ಕೋರುತ್ತದೆ.

ಈ ತ್ರೈವಾರ್ಷಿಕ ಯೋಜನೆಯ ರೂಪರೇಖೆಗಳನ್ನು ಕೆಳಗೆ ಕೊಡಲಾಗಿದೆ.

### ೧. ಜಿಲ್ಲಾ ಶಾಖೆಗಳ ಸ್ಥಾಪನೆ

ಕರ್ನಾಟಕದಲ್ಲಿ ೧೯ ಜಿಲ್ಲಾ ಕೇಂದ್ರಗಳಿವೆ. ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿಯೂ ಕನ್ನಡ ಸಾಹಿತ್ಯ ಪರಿಷತ್ತಿನ ಶಾಖೆಗಳನ್ನು ಸ್ಥಾಪಿಸಿ ಒಳನಾಡಿನಲ್ಲಿ ಹೊಸಚೈತನ್ಯವನ್ನು ಮೂಡಿಸಬೇಕು. ಪ್ರತಿಯೊಂದು ಜಿಲ್ಲೆಯೂ ಒಂದು ಸ್ವಯಂಪೂರ್ಣ ಶಾಖೆಯಂತೆ ಕೆಲಸಮಾಡಬೇಕು. ಕನ್ನಡ ಸಾಹಿತ್ಯ ಪರಿಷತ್ತಿನ ಮೂಲ ಉದ್ದೇಶಗಳನ್ನು ಆಯಾ ಜಿಲ್ಲೆಗಳಲ್ಲಿ ವ್ಯಾಪಕವಾಗಿ ಸಾಧ್ಯಗೊಳಿಸುವ ಹೊಣೆ ಈ ಜಿಲ್ಲಾ ಕೇಂದ್ರಗಳದು. ಸದ್ಯದಲ್ಲಿ ಆಯಾ ಜಿಲ್ಲಾ ಕೇಂದ್ರಗಳಲ್ಲಿ ವ್ಯವಸ್ಥಿತವಾಗಿ ಕೆಲಸ ಮಾಡುತ್ತಿರುವ ಸಾಹಿತ್ಯ ಸಂಘಗಳ ಮೂಲಕ ಈ ಕೆಲಸವನ್ನು ನೆರವೇರಿಸತಕ್ಕದ್ದು.

### ೨. ಸುವರ್ಣಮಹೋತ್ಸವ

ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವವನ್ನು ೧೯೭೦ನೇ ಡಿಸೆಂಬರ್ ತಿಂಗಳಿನಲ್ಲಿ ವೈಭವದಿಂದ ನಡೆಸತಕ್ಕದ್ದು. ಇದೇ ಸಂದರ್ಭದಲ್ಲಿ ಸಾಹಿತ್ಯ ಸಮ್ಮೇಳನವನ್ನು ನಡೆಸುವುದು.

### ೩. ಕಟ್ಟಡಗಳು

ಸದ್ಯದಲ್ಲಿ ಪರಿಷತ್ತಿನ ದೈನಂದಿನ ಕೆಲಸಕಾರ್ಯಗಳಿಗೇ ಸ್ಥಳಾಭಾವವಿರುವುದರಿಂದ ನಿಘಂಟು ಕಚೇರಿಗೆ ಸೇರಿದಂತೆ ಉತ್ತರಭಾಗದಲ್ಲಿ ಎರಡಂತಸ್ತಿನ ಕಟ್ಟಡವೊಂದನ್ನು ನಿರ್ಮಿಸತಕ್ಕದ್ದು. ಪರಿಷತ್ತಿನ ಸುವರ್ಣಮಹೋತ್ಸವದ ಜ್ಞಾಪಕಾರ್ಥವಾಗಿ ಪರಿಷತ್ತಿನ ದಕ್ಷಿಣ ಭಾಗದ ನಿವೇಶನದಲ್ಲಿ ಮೂರು ಅಂತಸ್ತಿನ ಭವ್ಯಮಂದಿರವನ್ನು ಕಟ್ಟಿಸತಕ್ಕದ್ದು. ಅಲ್ಲದೆ ಈಗಿನ ಕಟ್ಟಡದಲ್ಲಿರುವ ಉಪನ್ಯಾಸ ಮಂದಿರ ಮತ್ತು ರಂಗಮಂಟಪಗಳ ಸೌಕರ್ಯವನ್ನು ಹೆಚ್ಚಿಸತಕ್ಕದ್ದು. ಈಗಿನ ಪರಿಷತ್ತಿನ ಕಟ್ಟಡದ ಮೇಲೆ ಮೊದಲನೆಯ ಅಂತಸ್ತನ್ನು ಕಟ್ಟುವ ವಿಚಾರವನ್ನು ಪರಿಶೀಲಿಸತಕ್ಕದ್ದು.

## ೪. ಲಾಂಛನ

ಕನ್ನಡ ನಾಡು ನುಡಿಯ ಬಗೆಗೆ ವಿಶೇಷ ಅಭಿಮಾನ ಮೂಡಿಸುವ ಸಾಧನವಾಗಿ ಒಂದು ಸೂಕ್ತ ಲಾಂಛನಮುದ್ರೆಯನ್ನು ರೂಪಿಸಿ ಪ್ರಚುರಗೊಳಿಸತಕ್ಕದ್ದು.

## ೫. ಪರಿಷತ್ತಿನ ಪತ್ರಿಕೆಗಳು

ಕನ್ನಡ ಸಾಹಿತ್ಯ ಪರಿಷತ್ತು ಈಗ ಪ್ರಕಟಿಸುತ್ತಿರುವ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯನ್ನು ಸುಧಾರಿಸಿ ಅದರಲ್ಲಿ ವಿದ್ವತ್ಪೂರ್ಣವಾದ ಲೇಖನಗಳನ್ನು ಪ್ರಕಟಿಸತಕ್ಕದ್ದು. ಅಪೂರ್ವವಾದ ಪ್ರಾಚೀನ ಕೃತಿಗಳ ಐತಿಹಾಸಿಕ, ಕೈಫಿಯತ್, ಬಖೈರ್, ಜಾನಪದಗೀತೆ ಮುಂತಾದವುಗಳ ಪ್ರಕಟನೆಗೂ ಅದರಲ್ಲಿ ಅವಕಾಶ ಮಾಡಿಕೊಳ್ಳತಕ್ಕದ್ದು.

'ಕನ್ನಡ ನುಡಿ' ಮಾಸಪತ್ರಿಕೆಯನ್ನು ಪಕ್ಷಪತ್ರಿಕೆಯನ್ನಾಗಿ ಬದಲಾಯಿಸಿ ನಾಡಿನ ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆಗಳನ್ನೂ ಪರಿಷತ್ತಿನ ಸುದ್ದಿ ಸುತ್ತೋಲೆ ಪ್ರಕಟನೆಗಳನ್ನೂ ಕನ್ನಡ ಸಂಘ ಸಂಸ್ಥೆಗಳ ಚಟುವಟಿಕೆಗಳನ್ನೂ ಇದರಲ್ಲಿ ಪ್ರಕಟಿಸಬೇಕು. ಒಟ್ಟಿನಲ್ಲಿ ಕನ್ನಡ ನುಡಿ ಕನ್ನಡ ಸಾಹಿತ್ಯ ಪರಿಷತ್ತಿನ ವಾಙ್ಮುಖವಾಗಬೇಕು. ಅದರಲ್ಲಿ ಕನ್ನಡ ಪುಸ್ತಕಗಳ ಸ್ವೀಕಾರ ಮತ್ತು ಪರಿಚಯವನ್ನು ಮಾಡಿಕೊಡತಕ್ಕದ್ದು.

ಈ ಎರಡು ಪತ್ರಿಕೆಗಳಿಗೂ ಪ್ರತ್ಯೇಕ ಸಂಪಾದಕ ಮಂಡಲಿಗಳು ಇರತಕ್ಕದ್ದು.

## ೬. ಪ್ರಕಟನೆಗಳು

ಪ್ರಾಚೀನ ಗ್ರಂಥಗಳನ್ನೂ ಪುನರ್ ಮುದ್ರಣ ಅಗತ್ಯವಾಗಿ ಆಗಬೇಕಾದ ಗ್ರಂಥಗಳನ್ನೂ ಪ್ರಕಟಿಸುವ ಕಾರ್ಯ ಕೈಗೊಳ್ಳುವುದಲ್ಲದೆ ಶಾಸ್ತ್ರ ಸಾಹಿತ್ಯ ಕಲೆ ವಿಜ್ಞಾನ ಮೊದಲಾದ ನಾನಾ ವಿಷಯಗಳನ್ನು ಕುರಿತ ಗ್ರಂಥಗಳನ್ನೂ ಭಾಷಾಂತರ ಕೃತಿಗಳನ್ನೂ ಪ್ರಕಟಿಸಬೇಕು. ಈ ಮೂರು ವರ್ಷಗಳ ಅವಧಿಯಲ್ಲಿ ಒಂದು ನೂರು ಪುಸ್ತಕಗಳನ್ನಾದರೂ ಹೊರತರಬೇಕು.

ಈ ಪ್ರಕಟನಾ ವಿಭಾಗಕ್ಕೆ ಪ್ರತ್ಯೇಕ ಸಂಪಾದಕ ಮಂಡಳಿ ಇರತಕ್ಕದ್ದು.

## ೭. ಗ್ರಂಥಭಂಡಾರ ಮತ್ತು ವಾಚನಾಲಯಗಳ ಸುಧಾರಣೆ

ಕನ್ನಡ ಗ್ರಂಥಗಳನ್ನು ಆಧುನಿಕ ಗ್ರಂಥಭಂಡಾರ ಶಾಸ್ತ್ರಕ್ಕೆ ಅನುಗುಣವಾಗಿ ವರ್ಗೀಕರಿಸಿ ಸಾರ್ವಜನಿಕರಿಗೆ, ಪ್ರೌಢವ್ಯಾಸಂಗಿಗಳಿಗೆ, ಸಂಶೋಧಕರಿಗೆ ಅನುಕೂಲವಾಗುವಂತೆ ಪುನರ್ವ್ಯವಸ್ಥೆಗೊಳಿಸತಕ್ಕದ್ದು. ಕನ್ನಡದ ಎಲ್ಲ ಗ್ರಂಥಗಳೂ ಪರಿಷತ್ತಿನ ಪುಸ್ತಕ ಭಂಡಾರದಲ್ಲಿ ದೊರೆಯುವಂತೆ ಏರ್ಪಾಟು ಮಾಡತಕ್ಕದ್ದು.

ಕನ್ನಡದಲ್ಲಿ ಪ್ರಕಟವಾಗುವ ಎಲ್ಲ ಪತ್ರಿಕೆಗಳನ್ನು ಪರಿಷತ್ತಿನ ವಾಚನಾಲಯಕ್ಕೆ ತರಿಸಿಕೊಳ್ಳುವುದಲ್ಲದೆ ವಾಚನಾಲಯಕ್ಕೆ ಅಗತ್ಯವಾದ ಇತರ ಸೌಲಭ್ಯಗಳನ್ನೂ ಸಾಧ್ಯವಾದಮಟ್ಟಿಗೆ ಒದಗಿಸತಕ್ಕದ್ದು.

## ೮. ಕನ್ನಡ—ಕನ್ನಡ ನಿಘಂಟು

ಕನ್ನಡ—ಕನ್ನಡ ನಿಘಂಟುವಿನ ಕಾರ್ಯ ತಡವಾಗದಂತೆಯೂ ಕನಿಷ್ಠ ಪಕ್ಷ ೩ ತಿಂಗಳಿಗೆ ಒಂದು ಸಂಚಿಕೆ ಹೊರಬರುವಂತೆಯೂ ಮುಂದಿನ ವರ್ಷದಲ್ಲಿ ಮೊದಲನೆಯ ಸಂಪುಟದ ಬಿಡುಗಡೆಯಾಗುವಂತೆಯೂ ಅಗತ್ಯವಾದ ಎಲ್ಲ ಕಾರ್ಯಗಳನ್ನೂ ಕೈಗೊಳ್ಳತಕ್ಕದ್ದು.

## ೯. ಐತಿಹಾಸಿಕ ಸಂಶೋಧನೆ

ಒಂದು ಅಧ್ಯಯನ—ಸಂಶೋಧನಾ ಕಾರ್ಯ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಮೇಲ್ಮಟ್ಟದಲ್ಲಿ ನಡೆಯಬೇಕು. ಸಂಶೋಧನಾಕಾರ್ಯದಲ್ಲಿ ಆಸಕ್ತರಾದವರಿಗೆ ಇಲ್ಲಿ ಮಾರ್ಗದರ್ಶನ ಸಿಕ್ಕಬೇಕು. ಈ ಶಾಖೆಗಳಿಗೆ ಓಲೆಗರಿಗಳು, ತಾಮ್ರ ಶಾಸನಗಳು, ಪ್ರಾಚೀನ ತಾಮ್ರಪಟಗಳು ಇವೇ ಮೊದಲಾದ ಉಪಕರಣಗಳನ್ನು ಸಂಗ್ರಹಮಾಡಿ ಒದಗಿಸತಕ್ಕದ್ದು.

ಇವಕ್ಕಾಗಿ ಒಂದು ಉಪಸಮಿತಿಯನ್ನು ನೇಮಿಸತಕ್ಕದ್ದು.

## ೧೦. ದತ್ತಿ (ನಿಧಿಗಳು) - ಉಪನ್ಯಾಸ

ಈಗ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ೧೬ ದತ್ತಿಗಳಿವೆ. ನಾಡಿನ ಎಲ್ಲೆಡೆಗಳಿಂದಲೂ ಇನ್ನೂ ಹೆಚ್ಚಿನ ದತ್ತಿಗಳನ್ನು ಪಡೆಯಲು ಪ್ರಯತ್ನಿಸಬೇಕು. ದತ್ತಿ ಉಪನ್ಯಾಸಗಳನ್ನು ಬೆಂಗಳೂರು ನಗರದಲ್ಲೇ ಅಲ್ಲದೆ ಇತರ ಜಿಲ್ಲೆಗಳಲ್ಲೂ ಏರ್ಪ

ಡಿಸಬೇಕು. ದತ್ತಿ ಉಪನ್ಯಾಸಗಳನ್ನು ನೀಡುವವರು ಮೊದಲೇ ಉಪನ್ಯಾಸದ ಹಸ್ತಪ್ರತಿಯನ್ನು ಪರಿಷತ್ತಿಗೆ ಕೊಡಬೇಕು. ದತ್ತಿ ಉಪನ್ಯಾಸಗಳು ದತ್ತಿ ನೀಡಿದವರ ಉದ್ದೇಶಕ್ಕೆ ಅನುಗುಣವಾಗಿರಬೇಕು. ಸಾಧ್ಯವಾದಮಟ್ಟಿಗೆ ಈ ಉಪನ್ಯಾಸಗಳನ್ನು ಪ್ರಕಟಿಸತಕ್ಕದ್ದು.

### ೧೧. ಪ್ರಚಾರೋಪನ್ಯಾಸಗಳು

ಪರಿಷನ್ಮಂದಿರದಲ್ಲಲ್ಲದೆ ಬೆಂಗಳೂರಿನ ಇತರ ಭಾಗಗಳಲ್ಲೂ ಮತ್ತು ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲೂ ಬೇರೆ ಬೇರೆ ಸಂಘ ಸಂಸ್ಥೆಗಳ ಸಹಕಾರದಿಂದ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸತಕ್ಕದ್ದು.

### ೧೨. ಸಮ್ಮೇಳನ ಮತ್ತು ಸಾಹಿತ್ಯೋತ್ಸವಗಳು

(ಅ) ಕನ್ನಡ ಸಾಹಿತ್ಯಪರಿಷತ್ತು ಈಗ ನಡೆಸುತ್ತಿರುವ ಸಾಹಿತ್ಯ ಸಮ್ಮೇಳನವಲ್ಲದೆ ಪ್ರತಿ ಜಿಲ್ಲೆಯಲ್ಲೂ ವರ್ಷಕ್ಕೊಮ್ಮೆ ಜಿಲ್ಲಾ ಸಾಹಿತ್ಯ ಸಮ್ಮೇಳನವನ್ನು ನಡೆಸುವ ವ್ಯವಸ್ಥೆ ಮಾಡತಕ್ಕದ್ದು.

ಮೇ ತಿಂಗಳಿನಲ್ಲಿ ವಿಶೇಷ ಸಾಹಿತ್ಯೋತ್ಸವವನ್ನು ಪರಿಷನ್ಮಂದಿರದಲ್ಲೇ ಅಲ್ಲದೆ ಬೆಂಗಳೂರಿನ ಬೇರೆ ಬೇರೆ ಭಾಗಗಳಲ್ಲೂ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿಯೂ ಏರ್ಪಡಿಸತಕ್ಕದ್ದು. ಈ ವಿಶೇಷ ಸಾಹಿತ್ಯೋತ್ಸವದ ಅಂಗವಾಗಿ ಸಾಹಿತ್ಯ ಸಂಗೀತ, ನೃತ್ಯ ಕಲೆ, ನಾಟಕ ಯಕ್ಷಗಾನ ಕೋಲಾಟ ಸ್ಪರ್ಧೆಗಳು ಮುಂತಾದ ಸಾಂಸ್ಕೃತಿಕವಾದ ಇತರ ಕಾರ್ಯಕ್ರಮಗಳನ್ನು ವ್ಯವಸ್ಥೆಮಾಡಿ ಸಾಮಾನ್ಯ ಜನರಿಗೂ ಉಪಯುಕ್ತವಾಗುವಂತೆ ನೋಡಿಕೊಳ್ಳಬೇಕು. ಇದೇ ಸಂದರ್ಭದಲ್ಲಿ ಕಲಾಪ್ರದರ್ಶನ ಚಲನಚಿತ್ರ ಪ್ರದರ್ಶನ ಪುಸ್ತಕ ಪ್ರದರ್ಶನಗಳನ್ನು ಮನರಂಜನೆ ಕಾರ್ಯಗಳನ್ನು ಏರ್ಪಡಿಸಿ ಎಲ್ಲ ವರ್ಗದ ಜನರೂ ಇದರಲ್ಲಿ ವಿಶೇಷ ಆಸ್ಥೆ ವಹಿಸುವಂತೆ ಮಾಡಬೇಕು. ವಿವಿಧ ಗೋಷ್ಠಿಗಳನ್ನೂ ಸಭೆ—ಸಮ್ಮೇಳನಗಳನ್ನೂ ಜೊತೆಗೆ ಏರ್ಪಡಿಸಿ ಸಾಹಿತಿಗಳೂ ವಿದ್ಯಾರ್ಥಿಗಳು ಕಾರ್ಮಿಕರೂ ರೈತರೂ ವರ್ತಕರೂ ಮಹಿಳೆಯರೂ ಸಮಾಜದ ಅಧಿಕಾರಿಗಳೂ ಸಚಿವರೂ ಸಕಲ ವರ್ಗದವರೂ ಕನ್ನಡ ಸಾಹಿತ್ಯ ಪರಿಷತ್ತಿನ ಉದ್ದೇಶ, ಕಾರ್ಯಸಾಧನೆಯಲ್ಲಿ ಆಸಕ್ತರಾಗುವಂತೆ ಮಾಡತಕ್ಕದ್ದು.

(ಆ) ನವೆಂಬರ್ ತಿಂಗಳಲ್ಲಿ ಕನ್ನಡ ರಾಜ್ಯೋತ್ಸವವನ್ನು ವೈಭವಯುತವಾಗಿ ಬೆಂಗಳೂರು ಮತ್ತು ನಾಡಿನ ಎಲ್ಲ ಜಿಲ್ಲೆಗಳಲ್ಲೂ ನಡೆಸಬೇಕು. ಈ ಸಮಯದಲ್ಲಿ ಬೋಧಪ್ರದವೂ ದೇಶಭಕ್ತಿಪ್ರದವೂ ಮತ್ತು ಸ್ಫೂರ್ತಿದಾಯಕವೂ ಆದ ಕಾರ್ಯಕ್ರಮಗಳನ್ನು ಕೈಗೊಳ್ಳುವುದಲ್ಲದೆ ಮನರಂಜನೆ ಕಾರ್ಯಕ್ರಮಗಳನ್ನೂ ನಡೆಸತಕ್ಕದ್ದು.

### ೧೩. ಪರಿಷತ್ತಿನ ಪರೀಕ್ಷೆಗಳು

ಪರಿಷತ್ತು ಕಾವ, ಜಾಣ ಮತ್ತು ರತ್ನ ಎಂಬ ಸಾಹಿತ್ಯ ಪರೀಕ್ಷೆಗಳನ್ನೂ ಗಮಕ ಪ್ರವೇಶ ಗಮಕ ಪ್ರೌಢ ಎಂಬ ಕಾವ್ಯಗಾಯನ ಪರೀಕ್ಷೆಗಳನ್ನೂ ನಡೆಸುತ್ತಿದೆ. ಈ ಪರೀಕ್ಷೆಗಳು ಕರ್ನಾಟಕದ ಎಲ್ಲ ಭಾಗಗಳಲ್ಲೂ ನಡೆಯುವಂತೆ ವ್ಯವಸ್ಥೆ ಮಾಡತಕ್ಕದ್ದು. ಶಿಕ್ಷಣ ಮತ್ತು ಪರೀಕ್ಷೆಯ ಮಟ್ಟಗಳನ್ನು ಹೆಚ್ಚಿಸಲು ಅಗತ್ಯವಾದ ಎಲ್ಲ ಪ್ರಯತ್ನಗಳನ್ನೂ ಮಾಡತಕ್ಕದ್ದು.

### ೧೪. ಕೇಂದ್ರ ಪ್ರಾಂತ ಸರ್ಕಾರಗಳು ಮತ್ತು ವಿಶ್ವವಿದ್ಯಾನಿಲಯಗಳೊಡನೆ ಸಹಕಾರ

ಕೇಂದ್ರ ಮತ್ತು ಪ್ರಾಂತ ಸರ್ಕಾರಗಳು ಮತ್ತು ವಿಶ್ವವಿದ್ಯಾನಿಲಯಗಳು, ಸಾಹಿತ್ಯ ಮತ್ತು ಸಂಸ್ಕೃತಿ ಪೋಷಣ ಮತ್ತು ಪ್ರೋತ್ಸಾಹಕ್ಕೆ ಸಂಬಂಧಪಟ್ಟಂತೆ ಕೈಗೊಂಡಿರುವ ಯೋಜನೆಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ಗಮನಕ್ಕೆ ತಂದುಕೊಂಡು ಆ ಕಾರ್ಯಕ್ರಮಗಳಲ್ಲಿ ತಾನೂ ಭಾಗಿಯಾಗಿ ಕೆಲಸಮಾಡಲು ಆಯಾ ಸರ್ಕಾರ ವಿಶ್ವವಿದ್ಯಾನಿಲಯಗಳಿಂದ ಎಲ್ಲಾ ಬಗೆಯ ಸಹಾಯ ಸಹಕಾರಗಳನ್ನು ಪಡೆಯತಕ್ಕದ್ದು.

### ೧೫. ಕನ್ನಡಕ್ಕೆ ಮನ್ನಣೆ

ಪ್ರಭುತ್ವ, ನ್ಯಾಯಶಾಖೆ ಮತ್ತು ಶಿಕ್ಷಣ ಈ ಮೂರೂ ಅಂಗಗಳ ಎಲ್ಲ ಹಂತಗಳಲ್ಲೂ ಕನ್ನಡವೇ ಆಡಳಿತ ಮತ್ತು ಮಾಧ್ಯಮ ಭಾಷೆಯಾಗಬೇಕೆಂದೂ ಇದಕ್ಕೆ ಸಲ್ಲಬೇಕಾದ ಪ್ರತಿಷ್ಠಿತ ಸ್ಥಾನವನ್ನು ಸಲ್ಲಿಸಬೇಕೆಂದೂ ಇದನ್ನು ಸರಕಾರ ತನ್ನ ನೀತಿಯೆಂದು ಘೋಷಿಸಿ ಕೂಡಲೇ ಈ ನೀತಿಯನ್ನು ಅನುಷ್ಠಾನಕ್ಕೆ ತರತಕ್ಕದ್ದೆಂದೂ ಕನ್ನಡ ಸಾಹಿತ್ಯ ಪರಿಷತ್ತು ಮೈಸೂರು ಸರಕಾರದ ಮೇಲೆ ಒತ್ತಾಯ ತರ

ಬೇಕು. ಈ ದಿಶೆಯಲ್ಲಿ ಸಾರ್ವಜನಿಕಾಭಿಪ್ರಾಯವನ್ನು ರೂಢಿಸಿ ಅದನ್ನು ಬಲಪಡಿಸಲು ತಕ್ಕ ಕಾರ್ಯಕ್ರಮವನ್ನು ಕೈಕೊಳ್ಳತಕ್ಕದ್ದು.

**೧೬. ರಾಜಧಾನಿಯಲ್ಲಿ ಕನ್ನಡದ ಅಭಿಮಾನವನ್ನು ಬೆಳಸುವುದು**

ಕನ್ನಡ ರಾಜಧಾನಿಯಾದ ಬೆಂಗಳೂರು ನಗರದಲ್ಲಿ ರಾಜ್ಯ ಭಾಷೆಯಾದ ಕನ್ನಡಕ್ಕೆ ಸಲ್ಲಬೇಕಾದ ಮನ್ನಣೆ ಮರ್ಯಾದೆಗಳನ್ನು ಸಲ್ಲಿಸುವಂತೆ ಮಾಡುವುದಕ್ಕೂ ನಗರದಲ್ಲಿ ನೆಲೆಸಿರುವ ಇತರ ಭಾಷೆಗಳವರು ಕನ್ನಡವನ್ನು ಕಲಿಯುವಂತೆ ಮಾಡಲು ತಕ್ಕ ಕಾರ್ಯಕ್ರಮಗಳನ್ನು ಕೈಕೊಳ್ಳುವುದಕ್ಕೂ ಕನ್ನಡ ನಾಡು ನುಡಿ ಸಂಸ್ಕೃತಿ ಇವೇ ಮೊದಲಾದ ಎಲ್ಲ ವಿಚಾರಗಳಲ್ಲೂ ಶ್ರದ್ಧಾಸಕ್ತಿ ಅಭಿಮಾನಗಳು ಹುಟ್ಟುವಂತಹ ವಾತಾವರಣವನ್ನು ಕಲ್ಪಿಸುವುದಕ್ಕೂ ತಕ್ಕ ಕಾರ್ಯಕ್ರಮಗಳನ್ನು ಕೈಗೊಳ್ಳತಕ್ಕದ್ದು.

**೧೭. ಹೊರನಾಡ ಕನ್ನಡಿಗರೊಡನೆ ನಿಕಟ ಸಂಪರ್ಕ**

ಹೊರನಾಡ ಕನ್ನಡಿಗರು ಯಾವ ಪ್ರಾಂತದಲ್ಲೇ ಇರಲಿ ಅವರು ತಾವು ನೆಲಸಿರುವ ಪ್ರಾಂತಭಾಷೆಯಲ್ಲಿ ಆಸಕ್ತಿ ಅಭಿಮಾನಗಳನ್ನು ಬೆಳೆಸಿಕೊಳ್ಳಬೇಕೆಂದೂ ಜೊತೆಗೆ ಕನ್ನಡ ನಾಡ ನುಡಿಗಳನ್ನು ಕುರಿತು ಅಭಿಮಾನವನ್ನು ಬೆಳೆಸಿಕೊಳ್ಳುವುದು ಮಾತ್ರವಲ್ಲದೆ ಕನ್ನಡ ಭಾಷೆ ಸಾಹಿತ್ಯ ಕಲೆ ಇತ್ಯಾದಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿಕೊಳ್ಳಲು ನೆರವಾಗತಕ್ಕದ್ದು.

**೧೮. ಸಾಹಿತ್ಯಪರಿಷತ್ತಿನ ಸದಸ್ಯ ಸಂಪತ್ತನ್ನು ಹೆಚ್ಚಿಸುವುದು**

ಪ್ರತಿವರ್ಷವೂ ಜನವರಿ ಎರಡನೇ ವಾರದಲ್ಲಿ ರಾಜ್ಯದ ಎಲ್ಲ ಕಡೆಗಳಲ್ಲೂ ಕನ್ನಡ ಸಾಹಿತ್ಯ ಪರಷತ್ತಿಗೆ ಸಾಮಾನ್ಯ ಸದಸ್ಯರನ್ನೂ ಆಜೀವ ಸದಸ್ಯರನ್ನೂ ಸೇರಿಸುವ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ನೆರವೇರಿಸತಕ್ಕದ್ದು.

ಅಲ್ಲದೆ ಪರಿಷತ್ತಿನ ಉದ್ದೇಶಗಳನ್ನು ಸಫಲಗೊಳಿಸುವುದಕ್ಕಾಗಿ ಭಾಷಾಪ್ರೇಮಿಗಳೂ ದೇಶಪ್ರೇಮಿಗಳೂ ಆದ ಶ್ರೀಮಂತ ದಾನಿಗಳ ಕಡೆಯಿಂದ ದತ್ತಿಗಳನ್ನು ಪಡೆಯುವ ಪ್ರಯತ್ನ ಮಾಡತಕ್ಕದ್ದು.

**೧೯. ಗ್ರಂಥಸೂಚಿ**

ಪ್ರತಿವರ್ಷವೂ ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ ಒಂದು ದಿಕ್ಸೂಚಿಯ ಗ್ರಂಥ ಪ್ರಕಟವಾಗಬೇಕು. ಅದರಲ್ಲಿ ಆಯಾ ವರ್ಷದಲ್ಲಿ ಪ್ರಕಟವಾದ ಗ್ರಂಥ, ವಿಷಯ, ಬರೆದ ಲೇಖಕರು, ಮತ್ತು ಬರೆದ ತಿರುಳು ಇತ್ಯಾದಿ ವಿವರಗಳನ್ನು ಕೊಡತಕ್ಕದ್ದು ಮತ್ತು ಕನ್ನಡ ಭಾಷೆ ಸಾಹಿತ್ಯ ಇತಿಹಾಸ ಇತ್ಯಾದಿ ಕ್ಷೇತ್ರಗಳಲ್ಲಿ ಹಿಂದಿನ ವರ್ಷ ಏನು ಪ್ರಗತಿಯನ್ನು ಸಾಧಿಸಲಾಗಿದೆ ಎಂಬುದರ ಬಗೆಗೆ ಸಂಕ್ಷಿಪ್ತ ಲೇಖನಗಳು ಪ್ರಕಟವಾಗಬೇಕು.

**೨೦. ಧನ ಸಂಗ್ರಹ**

ಈ ಯೋಜನೆಯ ನಾನಾ ಕಾರ್ಯಕ್ರಮಗಳಿಗಾಗಿ ಸುಮಾರು ೧೫ ಲಕ್ಷ ರೂಪಾಯಿಗಳು ಬೇಕಾಗುವುದೆಂದು ಅಂದಾಜು ಮಾಡಲಾಗಿದೆ. ಈ ಹಣವನ್ನು ಕೇಂದ್ರ ಸರಕಾರ, ರಾಜ್ಯ ಸರ್ಕಾರ, ವಿಶ್ವವಿದ್ಯಾನಿಲಯಗಳು ಮತ್ತು ದಾನಿಗಳು ಇತರ ಸ್ಥಳೀಯ ಸಂಸ್ಥೆಗಳು, ಬ್ಯಾಂಕುಗಳು, ಸಹಕಾರೀ ಸಂಸ್ಥೆಗಳು ಇವರ ಮೂಲಕವಾಗಿ ಸಂಗ್ರಹ ಮಾಡತಕ್ಕದ್ದು.



# ಪರಿಷತ್ತಿನ ಸುದ್ದಿಗಳು

### ಪರಿಷತ್ತಿನ ಕಾರ್ಯಸಮಿತಿಯ ಸಭೆ

ಪರಿಷತ್ತಿನ ನೂತನ ಅಂಗರಚನೆಯ ಪ್ರಕಾರ ದಿನಾಂಕ ೩-೮-೧೯೭೪ರಂದು ಪ್ರಾತಃಕಾಲ ೧೦ ಘಂಟೆಗೆ ಪರಿಷನ್ಮಂದಿರದಲ್ಲಿ ಕಾರ್ಯಕಾರಿ ಸಮಿತಿಯ ಸಭೆಯು ಮೊದಲ ಬಾರಿಗೆ ಸೇರಿದ್ದಿತು.

* * *

### ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ ಕಾರ್ಯಕ್ರಮದ ಉದ್ಘಾಟನೋತ್ಸವ

ದಿನಾಂಕ ೩-೮-೧೯೭೪ರಂದು ಸಂಜೆ ೪ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ ಕಾರ್ಯಕ್ರಮದ ಉದ್ಘಾಟನೋತ್ಸವವನ್ನು ಏರ್ಪಡಿಸಲಾಗಿತ್ತು.

ಕೈವಾರ ಸೋದರಿಯರಿಂದ ಪ್ರಾರ್ಥನೆಯಾದನಂತರ ಕಾರ್ಯಕ್ರಮ ಆರಂಭವಾಯಿತು.

ಪರಿಷತ್ತಿನ ಗೌರವ ಕಾರ್ಯದರ್ಶಿ ಶ್ರೀ ಅ. ರಾ. ಮಿತ್ರ ಅವರು ಅತಿಥಿಗಳಿಗೂ ಸಭೆಗೆ ಆಗಮಿಸಿದ್ದ ಮಹನೀಯರೆಲ್ಲರಿಗೂ ಸ್ವಾಗತವನ್ನು ಬಯಸಿದರು. ಪರಿಷತ್ತಿನ ನೂತನ ಅಂಗರಚನೆಯ ಪ್ರಕಾರ ರೂಪಿತವಾಗಿರುವ ಕಾರ್ಯಸಮಿತಿ ಇದೇ ದಿನ ಪ್ರಾತಃಕಾಲ ೧೦ ಗಂಟೆಗೆ ಪರಿಷನ್ಮಂದಿರದಲ್ಲಿ ಮೊದಲ ಬಾರಿಗೆ ಸಮಾವೇಶಗೊಂಡಿದ್ದಿತು. ಈ ಸಂದರ್ಭದಲ್ಲಿ ಕಾರ್ಯಸಮಿತಿ ಸದಸ್ಯರನ್ನು ಸಭೆಗೆ ಬರಮಾಡಿಕೊಳ್ಳಲಾಗಿತ್ತು. ಅವರುಗಳೆಲ್ಲರನ್ನೂ ಗೌರವ ಕಾರ್ಯದರ್ಶಿ ಶ್ರೀ ಹಂಪ. ನಾಗರಾಜಯ್ಯನವರು ಸಭೆಗೆ ಪರಿಚಯ ಮಾಡಿಕೊಟ್ಟರು.

ಅನಂತರ ಪರಿಷದಧ್ಯಕ್ಷ ಶ್ರೀ ಜಿ. ನಾರಾಯಣ ಅವರು ಪರಿಷತ್ತಿನ ಸರ್ವತೋಮುಖ ಪ್ರಗತಿಯ ಬಗೆಗೆ ಇನ್ನು ಮೂರು ವರ್ಷಗಳಲ್ಲಿ ಕೈಗೊಳ್ಳಬಹುದಾದ ಕಾರ್ಯಕಲಾಪಗಳನ್ನು ಕುರಿತ ಯೋಜನೆಯ ಪರಿಚಯವನ್ನು ಸಭೆಗೆ ಮಾಡಿಕೊಟ್ಟರು. (ಯೋಜನೆಯ ಕರಡು ಪ್ರತಿಯನ್ನು ಪುಟ ೩೫ರಲ್ಲಿ ಕೊಡಲಾಗಿದೆ.) ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ|| ವಿ. ಕೃ. ಗೋಕಾಕ್ ಅವರು "ತ್ರೈವಾರ್ಷಿಕ ಯೋಜನೆ"ಗೆ ಪೂರ್ಣ ಯಶಸ್ಸನ್ನು ಕೋರಿ ವಿಜ್ಞಾನ ಸಾಹಿತ್ಯ ರಚನೆ ಮತ್ತು ಪ್ರಚಾರಕ್ಕೆ ಪರಿಷತ್ತು ವಿಶೇಷ ಗಮನಕೊಟ್ಟು ಇದಕ್ಕಾಗಿ ಪ್ರತ್ಯೇಕ ಶಾಖೆಯೊಂದನ್ನು ಸ್ಥಾಪಿಸಬೇಕೆಂದು ಸೂಚಿಸಿ ಯೋಜನೆಯನ್ನು ಉದ್ಘಾಟಿಸಿದರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ರಾಜ್ಯದ ವಿದ್ಯಾಸಚಿವ ಶ್ರೀ ಕೆ.ವಿ. ಶಂಕರಗೌಡರು ಪರಿಷತ್ತು ಹಾಕಿಕೊಂಡಿರುವ ತ್ರೈವಾರ್ಷಿಕ ಯೋಜನೆ ಪರಿಣಾಮಕಾರಿಯಾಗಿ ಜಾರಿಗೆ ಬಂದು ಶ್ರೀಸಾಮಾನ್ಯನ ಕಲ್ಯಾಣಕ್ಕೆ ನೆರವಾದರೆ, ಸರಕಾರವು ಹೆಚ್ಚು ಹಣ ಸಹಾಯ ನೀಡಲು ಹಿಂಜರಿಯಲಾರದು ಎಂದು ಭರವಸೆ ನೀಡಿ, ನಿಘಂಟಿನ ಕಾರ್ಯ ಬೇಗ ಮುಂದುವರಿಯಲೆಂದು ಸಲಹೆ ಮಾಡಿದರು. ಕೊನೆಯಲ್ಲಿ ಕಾರ್ಯಸಮಿತಿ ಸದಸ್ಯೆ ಶ್ರೀಮತಿ ಕೆ. ಟಿ. ಬನಶಂಕರಮ್ಮನವರು ವಂದನಾರ್ಪಣೆ ಮಾಡಿದರು.

* * *

### ಪರಿಷತ್ತಿನಲ್ಲಿ ಸ್ವಾತಂತ್ರ್ಯೋತ್ಸವ ದಿನಾಚರಣೆ

ದಿನಾಂಕ ೧೫-೮-೧೯೭೪ರಂದು ಪರಿಷನ್ಮಂದಿರದಲ್ಲಿ ಭಾರತದ ಸ್ವಾತಂತ್ರ್ಯೋತ್ಸವ ದಿನಾಚರಣೆಯನ್ನು ಆಚರಿಸಲಾಯಿತು. ಈ ಸಮಾರಂಭದ ಅಧ್ಯಕ್ಷತೆಯನ್ನು ರಾಜ್ಯದ ಸಾರಿಗೆ ಕಮಿಷನರಾದ ಶ್ರೀಮಾನ್ ಸಿದ್ಧಯ್ಯ ಪುರಾಣಿಕ ಅವರು ವಹಿಸಿದ್ದರು. ಶ್ರೀಮಾನ್ ಕೆ. ಸಂಪದ್ಗಿರಿರಾಯರು ಮುಖ್ಯ ಅತಿಥಿಗಳಾಗಿ ದಯಮಾಡಿಸಿ ಉಪನ್ಯಾಸ ಮಾಡಿದರು. ಮನರಂಜನೆಯ ಕಾರ್ಯಕ್ರಮವಾಗಿ ಪಂಡಿತ ಶ್ರೀ ಎಚ್. ಎಂ. ರಾಮಾರಾಧ್ಯರು ಮತ್ತು ವೃಂದದವರಿಂದ ಗಮಕರೂಪಕವನ್ನೇರ್ಪಡಿಸಿತ್ತು.

ಮೊದಲು ಗೌರವ ಕಾರ್ಯದರ್ಶಿಗಳಾದ ಶ್ರೀ ಹಂಪ ನಾಗರಾಜಯ್ಯನವರು ಅತಿಥಿಗಳನ್ನು ಸಭೆಗೆ ಪರಿಚಯ ಮಾಡಿಕೊಟ್ಟು ಸ್ವಾಗತವನ್ನು ಬಯಸಿದರು. ಅನಂತರ ಶ್ರೀ ಅ. ರಾ. ಮಿತ್ರ ಅವರು ಕಾರ್ಯಕ್ರಮದಲ್ಲಿ ಭಾಗ ವಹಿಸಿದ ಮಹನೀಯರೆಲ್ಲರಿಗೂ ಪರಿಷತ್ತಿನ ಕೃತಜ್ಞತೆ ಗಳನ್ನರ್ಪಿಸಿ ವಂದನಾರ್ಪಣೆ ಮಾಡಿದರು.

ಸ್ವಾತಂತ್ರ್ಯೋತ್ಸವದ ಅಂಗವಾಗಿ ಪರಿಷತ್ತಿನ ಹೊರ ಆವರಣದಲ್ಲಿ ಸಸಿನೆಡುವ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಶ್ರೀಗಳಾದ ತಿ. ತಾ. ಶರ್ಮರು, ಕೆ. ಸಂಪದ್ಗಿರಿರಾಯರು, ಬೀಚಿಯವರು, ಡಾ|| ರಂ. ಶ್ರೀ. ಮುಗಳಿಯವರು, ಸಿದ್ಧಯ್ಯ ಪುರಾಣಿಕರು, ಕೋ. ಚೆನ್ನಬಸಪ್ಪನವರು, ಜಿ. ವೆಂಕಟೇಶಯ್ಯನವರು ಮುಂತಾದ ಮಹನೀಯರಿಂದ ಸಸಿಗಳನ್ನು ನಡಿಸಲಾಯಿತು.

* * *

## ಪರಿಷತ್ತಿನ ಆಶ್ರಯದಲ್ಲಿ ನಡೆದ ಹೊರಗಿನ ಕಾರ್ಯಕ್ರಮ

ದಿನಾಂಕ ೧೦-೮-೧೯೭೯ರಂದು ರಾಜಾಜಿನಗರದ ಸಪ್ತರ್ಷಿಧಾಮದಲ್ಲಿ ಶ್ರೀ 'ಕೆ.ಎಸ್. ನರಸಿಂಹಸ್ವಾಮಿ ಅವರ ಕೃತಿಗಳು', ಎಂಬ ವಿಷಯವಾಗಿ ಉಪನ್ಯಾಸವನ್ನೇರ್ಪಡಿಸಿತ್ತು. ಡಾ|| ಜಿ. ಎಸ್. ಶಿವರುದ್ರಪ್ಪನವರು ಶ್ರೀ ಕೆ. ಎಸ್. ನ. ಅವರ ಪ್ರಣಯ ಗೀತೆಗಳನ್ನು ಕುರಿತು, ಶ್ರೀ ಜಿ. ಎಸ್. ಸಿದ್ಧಲಿಂಗಯ್ಯನವರು ಅವರ ಕಾವ್ಯಗಳನ್ನು ಕುರಿತು ಉಪನ್ಯಾಸ ಮಾಡಿದರು. ಶ್ರೀ ಎಸ್. ಶ್ರೀಶೈಲಂ ಮತ್ತು ಕಡಬ ಸುಬ್ರಹ್ಮಣ್ಯಂ ಇವರುಗಳು ಶ್ರೀ ಕೆ. ಎಸ್. ನರಸಿಂಹ ಸ್ವಾಮಿಗಳ ಕವನಗಳನ್ನು ವಾಚನಮಾಡಿದರು.

---

## ತಿಳಿವಳಿಕೆ

ನವರಾತ್ರಿ ಕಾಲದಲ್ಲಿ ವಿಶ್ವವಿದ್ಯಾನಿಲಯದ ಪರೀಕ್ಷೆಗಳು ಬರುವ ಕಾರಣದಿಂದಲೂ ಸಾರ್ವಜನಿಕರ ಮತ್ತು ಸಂಘ ಸಂಸ್ಥೆಗಳ ಅಪೇಕ್ಷೆಯಂತೆಯೂ ಕನ್ನಡ ಸಾಹಿತ್ಯ ಪರಿಷತ್ತಿನ 'ರತ್ನ' ಪರೀಕ್ಷೆಯನ್ನು ೧೯೭೯ನೆಯ ಅಕ್ಟೋಬರ್ ತಿಂಗಳಿನ ದಸರಾ ರಜದಲ್ಲಿ ನಡೆಸುವ ಬದಲು, ಇದೇ ವರ್ಷ ಡಿಸೆಂಬರ್ ತಿಂಗಳಿನ ಕ್ರಿಸ್‌ಮಸ್ ರಜಾ ದಿವಸಗಳಲ್ಲಿ ನಡೆಸುವಂತೆ ಏರ್ಪಡಿಸಲಾಗಿದೆ. ಈ ಪರೀಕ್ಷೆಗೆ ಶುಲ್ಕವನ್ನು ಕಟ್ಟಲು ೩೦-೯-೧೯೭೯ರ ವರೆಗೆ ಅವಕಾಶವನ್ನು ಕೊಡಲಾಗಿದೆ.

ಅ. ರಾ. ಮಿತ್ರ
ಹಂಪ. ನಾಗರಾಜಯ್ಯ
ಗೌರವ ಕಾರ್ಯದರ್ಶಿಗಳು

---

# ದಿವಂಗತ ಹೊಂಬೇಗೌಡರು

ಕಳೆದ ತಿಂಗಳು ಕಣ್ಮರೆಯಾದ ಕನ್ನಡ ನಾಡಿನ ಹಿರಿಯ ಪುತ್ರರಾದ ಹೊಂಬೇಗೌಡರ ನಿಧನ ಕನ್ನಡ ಸಾಹಿತ್ಯ ಪರಿಷತ್ತಿಗೂ ಒಂದು ದೊಡ್ಡ ನಷ್ಟವಾಗಿದೆ. ಮೈಸೂರು ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿ ಹೊಂಬೇಗೌಡರು ಸಲ್ಲಿಸಿದ ಸೇವೆಯ ಮಾತು ಹಾಗಿರಲಿ; ಅವರು ಕನ್ನಡ ನಾಡುನುಡಿಗಳ ಪರಮ ಆರಾಧಕರಾಗಿದ್ದ ವಿಷಯ ಅವಿಸ್ಮರಣೀಯವಾದುದಾಗಿತ್ತು. ಹೊಂಬೇಗೌಡರು ಹೋದಬಂದ ಕಡೆಯಲ್ಲೆಲ್ಲಾ ಕನ್ನಡದ ಕಹಳೆಯನ್ನೇ ಮೊಳಗಿಸಿದ್ದರೆಂಬುದನ್ನು ನಾವೆಲ್ಲ ಕೃತಜ್ಞತೆಯಿಂದ ನೆನೆಸಿಕೊಳ್ಳಬೇಕು.

ಹೊಂಬೇಗೌಡರು ೧೦-೧೦-೧೯೧೦ರಂದು ಟಿ. ನರಸೀಪುರ ತಾಲ್ಲೂಕಿಗೆ ಸೇರಿದ ಮಾರ್ಗೋನಹಳ್ಳಿಯ ಒಕ್ಕಲಿಗರ ಕುಟುಂಬದಲ್ಲಿ ಹುಟ್ಟಿದರು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಪದವೀಧರರಾದಮೇಲೆ ಪುಣೆಯಲ್ಲಿ ಕಾನೂನುಶಾಸ್ತ್ರ ಪದವಿ ಪಡೆದರು. ದಿವಂಗತ ಶ್ರೀ ಹೆಚ್. ಸಿ. ದಾಸಪ್ಪನವರ ಹತ್ತಿರ ವಕೀಲ ವೃತ್ತಿ ಆರಂಭಿಸಿದರು. ಪ್ರಜಾಪ್ರತಿನಿಧಿಸಭಾ ಸದಸ್ಯರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ಟಿನ ಸದಸ್ಯರಾಗಿ, ಸಾರ್ವಜನಿಕ ಸೇವಾ ಆಯೋಗದ ಅಧ್ಯಕ್ಷರಾಗಿ, ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಮತ್ತು ವರಿಷ್ಠ ನ್ಯಾಯಾಲಯದ ಶ್ರೇಷ್ಠ ನ್ಯಾಯಮೂರ್ತಿಗಳಾಗಿ ಹೊಂಬೇಗೌಡರು ಮಾಡಿದ ಕಾರ್ಯ ಚಿರಸ್ಮರಣೀಯವಾಗಿದೆ.

ಹೊಂಬೇಗೌಡರು ಕೃತಿರಚನೆ ಮಾಡದಿದ್ದರೂ ಸಾಹಿತ್ಯಾರಾಧಕರಾಗಿದ್ದರು. ಕನ್ನಡ ಸಾಹಿತ್ಯದಲ್ಲಿ ವಿಶೇಷವಾದ ಪರಿಶ್ರಮವಿತ್ತು. ಮಹಾಕವಿ ಪದ್ಮಭೂಷಣ ಡಾ|| ಕುವೆಂಪುರವರ ಜಗದ್‌ಭವ್ಯ ಮೇರುಕೃತಿ 'ಶ್ರೀರಾಮಾಯಣದರ್ಶನಂ ಮಹಾಕಾವ್ಯ'ದ ಪರಮಭಕ್ತರೆಂದು ಹೊಂಬೇಗೌಡರು ಪ್ರಸಿದ್ಧರಾಗಿದ್ದರು. ಆ ಕಾವ್ಯದ ನೂರಾರು ಸಾಲುಗಳನ್ನು ಲೀಲಾಜಾಲವಾಗಿ ಹೊಂಬೇಗೌಡರು ಉದಾಹರಿಸುತ್ತಿದ್ದರು. ರಾಷ್ಟ್ರಕವಿ ಕುವೆಂಪುರವರ ಸ್ನೇಹ ಸಂಪರ್ಕ ಸಾನ್ನಿಧ್ಯಗಳ ಫಲವಾಗಿ ಹೊಂಬೇಗೌಡರು ಕನ್ನಡದ ಕಟ್ಟಾಳುವಾಗಿದ್ದರು. ಕನ್ನಡವೇ ಶಿಕ್ಷಣದ ಎಲ್ಲ ಹಂತಗಳಲ್ಲೂ ಬೋಧನ ಮಾಧ್ಯಮವಾಗಬೇಕೆಂದೂ, ಆಡಳಿತ ಎಲ್ಲೆಡೆಯಲ್ಲೂ ಬಳಕೆಯಾಗಬೇಕೆಂದೂ ಅವರು ಬಲವಾಗಿ ಪ್ರತಿಪಾದಿಸುತ್ತಿದ್ದರು. ಅಷ್ಟೇ ಅಲ್ಲದೆ ಇನ್ನೂ ಒಂದು ಹೆಜ್ಜೆ ಮುಂದೆಹೋಗಿ ಕನ್ನಡವೇ ನ್ಯಾಯಾಲಯದ ಭಾಷೆಯಾಗಬೇಕೆಂದೂ ಅವರು ಸಾರುತ್ತಿದ್ದರು. ಕನ್ನಡಕ್ಕೆ ಇನ್ನೂ ಹೆಚ್ಚಿನ ಸೇವೆ ಸಲ್ಲಿಸುತ್ತಿದ್ದ ಹೊಂಬೇಗೌಡರ ಆಕಸ್ಮಿಕ ನಿಧನದಿಂದ ಕರ್ನಾಟಕ ತನ್ನ ಸುಪುತ್ರನೊಬ್ಬನನ್ನು ಕಳೆದುಕೊಂಡಂತಾಗಿದೆ. ಹೊಂಬೇಗೌಡರ ಸಾವಿಗೆ ಅಪಾರ ಸಂತಾಪವನ್ನು ಸೂಚಿಸುತ್ತಾ ಅವರ ಆತ್ಮ ಸದ್ಗತಿ ಪಡೆಯಲೆಂದು ಕೋರುತ್ತೇವೆ.

# ಸ್ವೀಕಾರ

**ಕಾದಂಬರಿ**

ಕುಂಕುಮ ಶೋಭಿನಿ; ಲೇ: ಶ್ರೀಮತಿ ಪ್ರೇಮಾಭಟ್; ಪ್ರ: ಗುರುಪ್ರಸಾದ, ೮೪೫, ೪ನೇ ಮೈನ್ ರಸ್ತೆ, ಹೊಸ ಹಳ್ಳಿ ಬಡಾವಣೆ, ಬೆಂಗಳೂರು-೨೩; ಪುಟ: ೧೫೨; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೪-೦೦, ೧೯೬೮.

ಸುದರ್ಶನ; ಲೇ: ಆನಂದಕಂದ; ಪ್ರ: ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು-೫; ಪುಟ: v. ೧೪೦; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೩-೦೦; ೧೯೬೮.

**ಜೀವನ ಚರಿತ್ರೆ**

ಸಾರಸ್ವತ ಆರಾಧನೆ; ಲೇ: ಸುಂದರೇಶನ್, ಚ.; ಪ್ರ: ಭವತಾರಿಣಿ, ೫೨, ಚೌಳುಬೀದಿ, ಬೆಂಗಳೂರು-೨; ಪುಟ: ೩೧, ರೂ. ೦-೫೦, ೧೯೬೯.

**ಕವನ**

ಕನ್ನಡ ಡಿಂಡಿಮ; ಲೇ: ಕುವೆಂಪು; ಪ್ರ: ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು-೫; ಪುಟ: ೫೫, ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೫೦, ೧೯೬೮.

ಹೇಮಾವತಿ; ಲೇ: 'ಹರಿಹರಪ್ರಿಯ'; ಪ್ರ: ಹೊಳಲಿ ಎಸ್. ವೆಂಕಟವಿಶ್ವನಾಥ, ಮನಮೋಹನ ಸದನ, ಗದ್ದೇ ಹೊಸೂರು, ಮಂದಗೆರೆ ಅಂಚೆ, ಮೈಸೂರು-ಅರಸೀಕೆರೆ ರೈಲ್ವೆ ಲೈನ್, ಪುಟ: ೩೦; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೦೦, ೧೯೬೮.

ವಿಚಾರತರಂಗ; ಲೇ: ಹುಣಶ್ಯಾಳ, ಡಾ. ಎಸ್. ಎಂ.; ಪ್ರ: ಬಿ. ಎಂ. ವೀರೇಶ್ವರಶಾಸ್ತ್ರಿ, ಅಮರವಾಣಿ ಮುದ್ರಣಾಲಯ, ರಾಯಚೂರು; ಪುಟ: ೧೪+೯೨; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೦೦, ೧೯೬೯.

**ಇತರ ಪುಸ್ತಕಗಳು**

ಹಿಂದೂ ವಿವಾಹ ಮತ್ತು ವಿಚ್ಛೇದನ; ಲೇ: ರಾಮ ರಾವ್, ಎಂ. ಎಸ್; ಪ್ರ: ಮೋಹನ ಪ್ರಕಾಶನ, ಕೃಷ್ಣ ಮೂರ್ತಿಪುರಂ, ಮೈಸೂರು-೪; ಪುಟ: ೩೭; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೦-೭೫, ೧೯೬೮.

ಸಚಿತ್ರ ಗಾಂಧಿ ಕತೆ; ಲೇ: ಸಾವಂತ, ಎಸ್. ಡಿ; ಪ್ರ: ಭಾರತ ಸರಕಾರದ ಸಮಾಚಾರ ಮತ್ತು ಪ್ರಸಾರ ಸಚಿವಾಲಯದ ಪ್ರಕಾಶನ ವಿಭಾಗದ ಮುಖ್ಯಾಧಿಕಾರಿಗಳು, ಪಾಟಿಯಾಲ ಹೌಸ್, ನವದೆಹಲಿ-೧; ಪುಟ: ೪೭; ಬೆಲೆ: ರೂ. ೨-೫೦.

ನೆಗಳ್ದ ಶಿರಿಗನ್ನಡಂ ನಲ್ಲೆ; ಲೇ: ಗಂಗಾಧರಶಾಸ್ತ್ರಿ, ಬಿ; ಪ್ರ: ಲೇಖಕರು, ನಂ. ೧೧೦, ಗೌರಿಶಂಕರ ನಿಲಯ, ಹೊಸ ಬಡಾವಣೆ, ವಿದ್ಯಾರಣ್ಯಪುರಂ, ಮೈಸೂರು-೪; ಪುಟ: ೫+೩+೨+೪೬; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೦೦, ೧೯೬೭.

ಸುಲಭಯೋಗ ಮುಕ್ತಾಹಾರವೆಂಬ ವೈದ್ಯಶಾಸ್ತ್ರವು; ಲೇ: ಶ್ರೀರಾಮ ವಿಠಲಕವಿ; ಪ್ರ: ಡಾ|| ಆರ್. ಕೆ. ಹಾನಗಲ್ಲ, ನಾರಾಯಣಪುರ ಓಣಿ, ಧಾರವಾಡ-೧; ಪುಟ: ೨೯೨; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೬-೪೦, ೧೯೬೯.

ವಚನ ಕನ್ನಡ ದೇವೀ ಮಹಾತ್ಮೆ ಮತ್ತು ದೇವೀ ಸಹಸ್ರ ನಾಮಾವಳಿ; ಲೇ: ಗಂಗಾಧರಶಾಸ್ತ್ರಿ ಬಿ.; ಪುಟ: ೨+೧೧೬; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೦೦, ೧೯೬೯.

ಅರಸೀಕೆರೆ ಬೆಡಗು; ಲೇ: ರಮೇಶ್, ಹೆಚ್. ಬಿ; ಪ್ರ: ಜಿ. ಎಸ್. ಶಿವಲಿಂಗಪ್ಪ, ಅಧ್ಯಾಪಕರು, ಪುರಪ್ರೌಢ ಶಾಲೆ, ಅರಸೀಕೆರೆ; ಪುಟ: ೩೮; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೦-೭೫, ೧೯೬೮.

ಭಕ್ತಗೀತಗಳು; ಲೇ: ಡಾ|| ವಸಂತದೇಸಾಯಿ; ಪ್ರ: ಶ್ರೀ ಮುತಾಲಿಕ ರಂಗಣ್ಣ ಷಷ್ಟ್ಯಬ್ಧಿ ಸತ್ಕಾರ ಸಮಿತಿ, ಧಾರವಾಡ; ಪುಟ: ೧೦+೬೦; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೦೦, ೧೯೬೯.

ಗಾಂಧಿ ಶತದಲ; ಲೇ: ಲಿಂಗಣ್ಣ ಸಿಂಪಿ; ಪ್ರ: ಅರವಿಂದ ಗ್ರಂಥಾಲಯ, ಚಡಚಣ, ವಿಜಾಪುರ ಜಿಲ್ಲೆ; ಪುಟ: ೪+೧೨೧+೬; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೧-೫೦, ೧೯೬೯.

ಪಂಡಿತ ದೀನದಯಾಳ ಉಪಾಧ್ಯಾಯರ ವಿಚಾರ ರಶ್ಮಿ; ಪ್ರ: ರಾಷ್ಟ್ರೋತ್ಥಾನ ಸಾಹಿತ್ಯ, ಗವೀಪುರ ಮಾರ್ಗ, ಕೆಂಪೇಗೌಡನಗರ, ಬೆಂಗಳೂರು-೧೯; ಪುಟ: ೫+೧೪೩; ಆಕಾರ: ಕ್ರೌನ್ ಅಷ್ಟದಳ; ಬೆಲೆ: ರೂ. ೨-೫೦, ೧೯೬೯.

# ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ-ಕನ್ನಡ ನಿಘಂಟು

## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಲಾಗಿದೆ. ೧೯೭೩ರಲ್ಲಿ ನಿಘಂಟು ಪೂರ್ತಿಯಾಗುವ ನಿರೀಕ್ಷೆ ಇದೆ. ಮೊದಲ ಸಂಪುಟದ ಐದನೆಯ ಸಂಚಿಕೆ ಈಗಾಗಲೇ ಪ್ರಕಟವಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಇದು ಇನ್ನೂ ಹೆಚ್ಚಾಗಬಹುದು. ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿ ಅದನ್ನು ಮುಂಗಡ ವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ಮುಂಗಡ ಹಣ ನೂರು ರೂಪಾಯಿಗಳನ್ನು ಹತ್ತು ರೂ.ಗೆ ಕಡಿಮೆಯಿಲ್ಲದ ಕಂತುಗಳಲ್ಲಿ ಪಾವತಿ ಮಾಡ ಬಹುದು. ಆದರೆ ಪೂರ್ತ ಹಣ ಸಂದಾಯವಾಗುವವರೆಗೆ ಸಂಚಿಕೆಗಳನ್ನು ಕಳಿಸಲಾಗುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ **ರಿಯಾಯಿತಿಯ ದರದಲ್ಲಿ** ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಸಂಪುಟಗಳು ಸಿದ್ಧವಾದಂತೆ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು. ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಈಗ ಹೆಚ್ಚಾಗಿರುವ ಅಂಚೆ ದರದಂತೆ ರಿಜಿಸ್ಟರ್ ಅಂಚೆಯ ಮೂಲಕ ಕಳುಹಿಸುವ ಪ್ರತಿ ಸಂಚಿಕೆಗೂ ಒಂದು ರೂಪಾಯಿನ ಅಂಚೆವೆಚ್ಚ ತಗಲುತ್ತದೆ. ಆದುದರಿಂದ ಗ್ರಾಹಕರು ಮುಂಗಡ ಬೆಲೆಯ ಜೊತೆಗೆ *ಐವತ್ತು ರೂಪಾಯಿಗಳನ್ನು ಅಂಚೆವೆಚ್ಚ ರವಾನೆ ವೆಚ್ಚಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ **ತಿಳಿಸಿ** ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

ನಿಘಂಟಿನ ಬಿಡಿಸಂಚಿಕೆಗಳನ್ನು ಪ್ರತಿ ಒಂದಕ್ಕೆ **ನಾಲ್ಕು** ರೂಪಾಯಿಗಳಂತೆ ಪಡೆಯಬಹುದು.

### ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮

ಈ ವಿಳಾಸಕ್ಕೆ ಬ್ಯಾಂಕ್ ಡ್ರಾಫ್ಟ್ ಅಥವಾ ಮನಿಯಾರ್ಡರ್ ಅಥವಾ ನಗದಾಗಿ ಹಣ ಕಳಿಸಿ ಪತ್ರವ್ಯವಹಾರ ಮಾಡಬಹುದು.

---

* ವಿ. ಸೂ :– ಸಂಚಿಕೆಗಳ ರವಾನೆಗೆ ಅವಶ್ಯಕವಾದ ಐವತ್ತು ರೂಪಾಯಿಗಳನ್ನು ಇದುವರೆಗೆ ಸಲ್ಲಿಸದೆ ಇರುವ ಅಥವಾ ಕಡಮೆ ಹಣವನ್ನು ಸಲ್ಲಿಸಿರುವ ಗ್ರಾಹಕರು ಸಂಚಿಕೆಗಳನ್ನು ಪಡೆಯುವ ನಿಶ್ಚಿತತೆಗಾಗಿ ಈ ಕೂಡಲೇ ಪೂರ್ತಿ ಹಣವನ್ನು ಸಲ್ಲಿಸಬೇಕಾಗಿ ಕೋರಿದೆ.

Reg. No. B. G. 4—September 1969

Licensed to Post without pre-payment. Licence No. 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಬೆಂಗಳೂರು-೧೮

# ಕನ್ನಡ ನುಡಿ



ಅಕ್ಟೋಬರ್: ೧೯೬೯

ಸಂಪುಟ ೩೨
ಸಂಚಿಕೆ ೧೦

ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ,
ಬೆಂಗಳೂರು-೧೮

# ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಗಳು

| | | ರೂ. ಪೈ. |
|---|---|---|
| ೧. | ಕನ್ನಡದ ಬಾವುಟ .... .... | ೩—೦೦ |
| ೨. | ಜೇಮ್ಸ್ ಏಬ್ರಹಾಮ್ ಗಾರ್‌ಫೀಲ್ಡನ ಚರಿತ್ರೆ: ಕ್ಯಾಲಿಕೊ ಪ್ರತಿ | ೧—೫೦ |
| | ನಾಲ್ಕನೆಯ ಮುದ್ರಣ: ಸಾದಾ ಪ್ರತಿ .... | ೧—೨೦ |
| ೩. | ಜ್ಯೋತಿರ್ವಿನೋದಿನಿ .... .... | ೨—೦೦ |
| ೪. | ಕನ್ನಡ ನಾಡಿನ ಚರಿತ್ರೆ: ಭಾಗ ೧ .... .... | ೨—೦೦ |
| | ಭಾಗ ೨ .... .... | ೨—೭೫ |
| | ಭಾಗ ೩ .... .... | ೨—೦೦ |
| ೫. | ಹರಿದಾಸ ಸಾಹಿತ್ಯ: ಇಂಗ್ಲಿಷ್ ಉಪೋದ್ಘಾತದೊಡನೆ .... | ೧೦—೦೦ |
| | ,, ಉಪೋದ್ಘಾತವಿಲ್ಲದ ಪ್ರತಿ .... | ೮—೦೦ |
| ೬. | ಗಾಳಿಯಲ್ಲಿನ ಅಗೋಚರ ಶತ್ರುಗಳು .... .... | ೧—೨೫ |
| ೭. | ನಕ್ಷತ್ರ ದರ್ಶನ .... .... | ೧—೫೦ |
| ೮. | ಹರಿದಾಸ ಕೃತಿಮಂಜರಿ .... .... | ೧—೨೫ |
| ೯. | ಪ್ಲೇಟೋವಿನ ಆದರ್ಶ ರಾಜ್ಯ .... .... | ೧—೩೮ |
| ೧೦. | ಚೇರಮ ಕಾವ್ಯಂ .... .... | ೨—೦೦ |
| ೧೧. | ಕನ್ನಡದ ಅತ್ಯುತ್ತಮ ಸಣ್ಣಕತೆಗಳು: ಮೂರನೆಯ ಸಂಪುಟ .... | ೪—೦೦ |
| ೧೨. | ಕಾದಂಬರಿ ಸಾಮಾನ್ಯ ಮನುಷ್ಯ .... .... | ೧—೦೦ |
| ೧೩. | ಉದ್ಭಟದೇವ ಚರಿತೆ .... .... | ೧—೫೦ |
| ೧೪. | ತ್ರಿಪುರದಹನ ಸಾಂಗತ್ಯ .... .... | ೦—೭೫ |
| ೧೫. | ಗಮಕ ಪ್ರವೇಶದಾಯಿನಿ .... .... | ೧—೫೦ |
| ೧೬. | ಗಮಕ ಪ್ರಚಾರ ಬೋಧಿನಿ .... .... | ೦—೭೫ |
| ೧೭. | ಕಾಳಿದಾಸನ ದೃಷ್ಟಿ-ಸೃಷ್ಟಿ .... .... | ೨—೦೦ |
| ೧೮. | ಹೂಮಾಲೆ .... .... | ೦—೬೩ |
| ೧೯. | ಆಧುನಿಕ ಗದ್ಯಸಾಹಿತ್ಯ: ಭಾಗ ೧ .... .... | ೩—೦೦ |
| | ಭಾಗ ೨ .... .... | ೩—೦೦ |
| ೨೦. | ಸರ್ವೋದಯ .... .... | ೦—೩೨ |
| ೨೧. | ಅರುಂಧತಿ .... .... | ೦—೨೫ |
| ೨೨. | ಕಾವ್ಯಸೌರಭ .... .... | ೨—೦೦ |
| ೨೩. | ವಾಚನ ಕಾವ್ಯಮಂಜರಿ .... .... | ೦—೧೯ |
| ೨೪. | ಕರ್ಣ ಕರ್ಣಾಮೃತ .... .... | ೨—೫೦ |
| ೨೫. | ಕವಿಹೃದಯ .... .... | ೨—೫೦ |
| ೨೬. | ಚಂದ್ರಹಾಸೋಪಾಖ್ಯಾನ .... .... | ೧—೭೫ |

೫ ರೂ.ಗಳಿಗೆ ಕಡಿಮೆಯಿಲ್ಲದೆ ಕೊಳ್ಳುವ ಪುಸ್ತಕ ವ್ಯಾಪಾರಿಗಳಿಗೆ ಶೇ. ೨೫ರಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು. ಪಠ್ಯಪುಸ್ತಕಗಳಿಗೆ ಶೇ. ೧೫ ಮಾತ್ರ

# ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು–೧೮

## ಸಕಲ ಸದಸ್ಯರ ವಿಶೇಷ ಸಭೆಯ ತಿಳಿವಳಿಕೆಪತ್ರ

**ಕನ್ನಡ ಸಾಹಿತ್ಯ ಪರಿಷತ್ತಿನ ಸಕಲ ಸದಸ್ಯರ ವಿಶೇಷ ಸಭೆಯ ಅಧಿವೇಶನವು**

೧೯೬೯ನೆಯ ಅಕ್ಟೋಬರ್ ೨೬ನೆಯ ತಾರೀಖು ಭಾನುವಾರ

ಬೆಳಗ್ಗೆ ೯ ಗಂಟೆಗೆ

ಪರಿಷದಧ್ಯಕ್ಷರಾದ

**ಶ್ರೀಮಾನ್ ಜಿ. ನಾರಾಯಣ ಅವರ**

ಅಧ್ಯಕ್ಷತೆಯಲ್ಲಿ

ಶ್ರೀ ಕೃಷ್ಣರಾಜ ಪರಿಷನ್ಮಂದಿರದ ಸಭಾಂಗಣದಲ್ಲಿ ನಡೆಯುತ್ತದೆ.

ತಾವು ಸಕಾಲಕ್ಕೆ ದಯಮಾಡಿಸಬೇಕಾಗಿ ಪ್ರಾರ್ಥನೆ.

ಅ. ರಾ. ಮಿತ್ರ

ತಾ॥ ೩೦–೯–೧೯೬೯

ಹಂಪ. ನಾಗರಾಜಯ್ಯ

ಗೌರವ ಕಾರ್ಯದರ್ಶಿಗಳು

ಕಾರ್ಯಸೂಚಿ:

**ಪರಿಷತ್ತಿನ ತ್ರೈವಾರ್ಷಿಕ ಯೋಜನೆ**

# ಕನ್ನಡ ನುಡಿ

'ಕನ್ನಡ ನುಡಿ' ಕರ್ನಾಟಕದ ಗೆಜೆಟಿಯರ್ ಆಗಬೇಕು

—ಬಿ.ಎಂ.ಶ್ರೀ



ಸಂಚಿಕೆ : ೧೦ ಸಂಪುಟ : ೩೨

ಅಕ್ಟೋಬರ್ ೧೯೬೯

•

ಈ ಸಂಚಿಕೆಯಲ್ಲಿ . . .



# ನಿನ್ನ ಬರವನು ಬಯಸಿ

•

ನಿನ್ನ ಬರವನು ಬಯಸಿ ಕಾದಿಹೆನು ಹೇ ಪ್ರಭುವೆ
ಬರಲಾರೆಯ ಎನ್ನ ಮುರುಕುಗುಡಿಸಲಿಗೆ ॥

ನೀ ಬರುವ ಹಾದಿಯಲಿ ಬಯಕೆ ಮಲ್ಲಿಗೆ ಹಾಸಿ
ಬಗೆಯಭಾವನೆ ಚಿಗುರ ತೋರಣವ ಕಟ್ಟಿ
ಉಸಿರ ಕುಡಿದೀಪವನು ನೇಹದಿಂದಳವಡಿಸಿ
ಒಲುಮೆಯಾರೋಗಣೆಯ ಅನುಗೊಳಿಸಿ ಕಾದಿಹೆನು ॥

ಬಾಳಿನುದ್ದಕು ಆಯ್ದ ಕಂಬನಿಯ ಮುತ್ತುಗಳ
ವೇದನೆಯ ಸೂತ್ರದಲಿ ಕೋದಿರುವೆನು
ಬಾಳಬುಟ್ಟಿಯ ಹೊತ್ತು ಕಲ್‌ಮುಳ್ಳುಗಳನೆಡವಿ
ಅನುಭವದ ಹಣ್ಣುಗಳ ಸವಿನೋಡಿ ತಂದಿಹೆನು ॥

ದೂರದಲಿ ಕೇಳುತಿದೆ ಕಾಲಕಿಂಕಿಣಿ ನಾದ
ನಿನ್ನ ಮುರಲೀ ಉಲಿತ ತೇಲಿಬರುತಿಹುದು
ಮೆಲ್ಲೆಲರು ನಿನ್ನ ಮೈ ಕಸ್ತೂರಿ ಪರಿಮಳವ
ಎತ್ತಲೂ ಬೀರುತಿದೆ ನಿನ್ನ ಕಾಣೆನು ಇನ್ನು ॥

ಹೊತ್ತು ನೆತ್ತಿಗೆ ಬಂತು ಕತ್ತಲೆಯು ದೂರಿಲ್ಲ
ನಾಲಗೆಯು ಬತ್ತುತಿದೆ ಕಾಲು ತತ್ತರಿಸುತಿದೆ
ಬೆಳಕು ಹರಿಮುನ್ನವೇ ನಾನಿಂತು ಕಾದಿಹೆನು
ಹೊತ್ತು ಮುಳುಗುವ ಮುನ್ನ ಇತ್ತ ಬಾರೋ ಪ್ರಭುವೇ ॥

•

ರಾಮಚಂದ್ರ ಶರ್ಮ ತ್ಯಾಗಲಿ

# ಕಂದನ ಕೊರಗು

•

ಕಷ್ಟ ಕಾರ್ಪಣ್ಯಗಳ ನೂಕಿ ಕನ್ನಡ ತಾಯಿ
ಇನ್ನೆಂದು ಬಾಳುವೆನೊ ನಿನ್ನ ಮಡಿಲಲ್ಲಿ,
ನೆಲೆಗಾಣದವನೆಂಬ ಭಾವನೆಯ ಕಳೆದಾಚೆ
ನಲಿದಾಡುವೆನೆ ತಾಯ ಕಾರುಣ್ಯದಲ್ಲಿ.

ಜೋಗುಳದ ಲಾಲಿಯಲೆ ಕನ್ನಡದ ನುಡಿಗಲಿತೆ
ಮಧುರವಾಣಿಯ ನುಲಿಸಿ ತೋರಿದೆನು ಲೀಲೆ
ನಿನ್ನೆದೆಯ ಮಮಕಾರ ಬಗೆದುಂಬಿ ಸವಿಸವಿದು
ಎಳವೆಯನು ಸವೆಸಿದೆನು ತವಹುಡಿಯ ಮೇಲೆ.

ಹಿಂದೊಮ್ಮೆ ನೀನು ಮೈಗೂಡಿ ಬಂದ ಕಾಲದಲಿ
ಕಡೆಗುಳಿದು ಕೊರಗುತ್ತ ಬಿಡುತಿಹೆನು ಬಾಯಿ
ಇಂದಿಗೂ ಮುಗಿದಿಲ್ಲ ಎನ್ನ ಹೃದಯದ ಅಳಲು
ಸಂತಾಪ ಸಂಕ್ಲೇಶ ಕೊನೆಗೊಳದೆ ತಾಯಿ.

ಹೆತ್ತೊಡಲ ವಾತ್ಸಲ್ಯ ಇಂಗಿಹೋಯಿತೆ ಜನನಿ
ಯಾಕಾರೆ ತನುಜನನು ಮರೆತಿರುವೆ ಹೇಳು ?
ಇತಿಹಾಸ ಶೌರ್ಯವದು ನನಗಿಂದು ಬೇಕಿಲ್ಲ
ಇಂದಿನಳುಕಿಗೆ, ಮೌನ ಸರಿಕಾಣ್ಬದೇಳು.

'ಎಲ್ಲಾದರು ಇರು ಎಂತಾದರು ಇರು' ಎಂದಿರಿ ;
ಎನಿತು ದಿನ ಈ ನೋವ ನುಂಗಲೀ ನಾನು.
ದುರ್ದೆಸೆಯ ಹೋಮದಲಿ ಬಲಿಕೊಡುವ ಕಾಮದಲಿ,
ಹೆಣಗಾಡುವರ ಮುಂದೆ ತಲೆಬಾಗಲೇನು ?

ಕಟ್ಟುನಿಟ್ಟಿನ ರೇಷೆ ರೋಷಿ ಬಿಗಿಯುವ ಭಾಷೆ
ಬಾಳದೋಣಿಯ ಮುಗುಚಬಹ ಸಂವರ್ತನ
ಸಿಕ್ಕಿ ತೊಳಲುವ ಜೀವ ಬಿಕ್ಕಿ ಬಳಲುವ ಭಾವ
ಕ್ರಂದನವ ಕೇಳಿಸದೆ ತಬ್ಬಿಕೋ ಕಂದನ !

ನ್ಯಾಯ ನೆಚ್ಚುವ ಬಲವ ಕಾಣಲಾರೆನು ಇಲ್ಲಿ :
ತಾಳ ತಪ್ಪಿದ ತಂತಿ ಬೇರ್ಪಟ್ಟ ಬಾಳು ;
ಚೇತನೆಯ ಹೊಂಗನಸ ಮೂಡುತಿರೆ ಬಾಳಿನಲಿ
ಮುತ್ತಿ ಬರುವದು ಸೇನೆ ; ನೆನಸೆಲ್ಲ ಹಾಳು.

ತಾಳಲಾರೆನು ತಾಯಿ ಹೇಳಲಾರೆನು ತಾಪ
ಎಡರುಗಳ ಹೊರೆಯಲ್ಲಿ ಬೆಂದಿಹುದು ಜೀವ ;
ಮಡಿದವರ ಮನೆಯಲ್ಲಿ ಕಲೆತು ಸಾಂತ್ವನಗೊಳಿಪ
ಜನನುಡಿಗೆ ಹಿಂಗೀತೆ ಮನದಾಳ ನೋವ.

'ಆವು ಅಟ್ಟದ ಮೇಲೆ ಕರುವು ಬೆಟ್ಟದ ಮೇಲೆ'
ಬೆಟ್ಟಗಾತ್ರದ ದುಗುಡ ತಾಯ್ ಮಕ್ಕಳಲ್ಲಿ
ಮಾತೆ ಮಗುವಿನ ನೊಂದ ಪರಿಯನ್ನು ಪರಿಕಿಸಿದ
ಸತ್ಯಾತ್ಮ ನುಡಿಗಿಂದು ಜಯದ ಬಲವೆಲ್ಲ ?

ಮಗುವು ಅತ್ತರೆ ತಾಯಿ ಕಣ್ಣೀರ ತೊಡೆದಾಳು
ತಾಯಿ ಶೋಕಿಸೆ ಮಗುವು ಗತಿಗಾಣ್ಬುದೆಂತು ?
ಹಿಂದೆ ತೋರಿದ ಶೌರ್ಯ ಸಾಹಸದ ಕಥೆ ನಾವು
ಬಿಸಿಯುಸಿರಿನಲಿ ನೆನಹಿ ಉಸುರುವುದು ಬಂತು.

ಹೆತ್ತ ದಿನವೇ ಕತ್ತು ಹಿಸುಕಬಾರದೆ ತಾಯಿ
ಅಳಿದ ನೋವಿನ ಶೋಕ ಮೂರು ದಿನ ಅಲ್ತೆ !
ನಡೆಗಲಿಸಿ ನುಡಿಗಲಿಸಿ ಹೆರರ ಒಡಲಿಗೆ ನೂಕಿ
ಮೌನ ಮ್ಲಾನದೊಳೇಕೆ ಕೊರಗುತ್ತ ಕುಳಿತೆ ?

•

ಮಾ. ಮಿ. ಎಸ್.

# ಜಾಮಿಯಾಕ್ಕೆ ಮರಳಿ ಬಂದರು

■ ಎಜಾಸುದ್ದೀನ್ ಫಿರೋಜ್

"ಪ್ರಾಣ ಹೋದರೂ ವಚನವನ್ನು ಹೋಗಲು ಬಿಡಬಾರದು." ಈ ಆದರ್ಶವನ್ನು ಕಲಿಯುಗದಲ್ಲಿಯೂ ಸಹ ಡಾ|| ಜಾಕಿರ್ ಹುಸೇನ್‌ರವರು ಪಾಲಿಸಿದರು. ಅವರ ವಚನಗಳು ದೃಢವಾಗಿರುತ್ತಿದ್ದುವು. ಕಡೆಯವರೆಗೂ ಅವರು ನುಡಿದ ಹಾಗೆ ನಡೆಯುತ್ತಿದ್ದರು. ಕೆಲವು ದಿನಗಳ ಹಿಂದಿನ ಮಾತು. ಜಾಮಿಯಾ ಮಿಲಿಯಾದ ಒಬ್ಬ ಅಧ್ಯಾಪಕರು ಭಾವವಿಹ್ವಲ ಸ್ವರದಲ್ಲಿ ಜಾಕೀರರಿಗೆ ಹೇಳಿದ್ದರು. 'ಜಾಮಿಯಾ'ದವರು ನಿಮ್ಮ ಮೇಲೆ ಕುಪಿತರಾಗಿದ್ದಾರೆ. ನೀವು ಜಾಮಿಯಾಕ್ಕೆ ಬರುವುದೇ ಇಲ್ಲವೆಂದು." ಇದು ಕೇವಲ ಒಬ್ಬ ವ್ಯಕ್ತಿಯ ಆಕ್ಷೇಪಣೆ ಆಗಿರಲಿಲ್ಲ. ಇದು ಸಂಪೂರ್ಣ ಜಾಮಿಯಾದ ಚೀತ್ಕಾರವಿತ್ತು. ಅದರ ಆತ್ಮದ ಆರ್ತನಾದವಾಗಿತ್ತು. ಇದರಲ್ಲಿ ದೊರೆಯೂ ಇತ್ತು, ಸ್ನೇಹವೂ ಇತ್ತು. ಇದನ್ನು ಕೇಳಿ ಡಾಕ್ಟರ್ ಸಾಹೇಬರು ತಮ್ಮನ್ನು ತಾವೇ ಮರೆತು ಭಾವನೆಯ ಸಾಗರದಲ್ಲಿ ಮುಳುಗಿದರು. ಅವರ ಪ್ರತಿಭಾನ್ವಿತ ಕಣ್ಣುಗಳ ಮೇಲೆ ರೆಪ್ಪೆಯ ಪರದೆ ಬಿದ್ದಿತು. ವಾತಾವರಣ ಗಂಭೀರವಾಯಿತು . . . ಮತ್ತೆ ಅವರ ತುಟಿಗಳು ಅಲುಗಾಡಿದವು. ನೋವಿನಿಂದ ತುಂಬಿದ ದೀರ್ಘವಾಣಿ ಹೊರಬಂದಿತು. ". . . ಹೋಗಿ ಜಾಮಿಯಾದವರಿಗೆ ತಿಳಿಸಿಬಿಡಿ . . . ನಾನು ಬರುತ್ತೇನೆ. . . ನಿಜಕ್ಕೂ ಜಾಮಿಯಾಕ್ಕೆ ಬರುತ್ತೇನೆ . . . ಪದವಿಯ ಭಾರವನ್ನೆಸೆದು ಬರುತ್ತೇನೆ. ... ಅವಧಿಯ ಬಂಧನವನ್ನು ಮುರಿದು ಬರುತ್ತೇನೆ."

ಪದವಿ ಮತ್ತು ಸ್ಥಾನದ ಮೋಹವನ್ನು ತ್ಯಜಿಸುವುದು ಎಷ್ಟೊಂದು ಕಠಿಣ! ಜಾಕೀರ್ ಹುಸೇನರು ತಮ್ಮ ಈ ವಚನವನ್ನು ಅಷ್ಟೇ ದೃಢತೆಯಿಂದ ಪೂರೈಸುವರೆಂದು ಯಾರು ತಾನೆ ಯೋಚಿಸಿದ್ದರು! ಆದರೆ ಅವರು ನುಡಿದ ಹಾಗೆ ನಡೆದು ತೋರಿಸಿದರು. ರಾಷ್ಟ್ರಪತಿ ಭವನದಲ್ಲಿದ್ದ ಈ ಬಂಧಿತಪಕ್ಷಿ ಬಂಧನದಿಂದ ನರಳುತ್ತಿತ್ತು. ಸ್ವಚ್ಛಂದ ವಾತಾವರಣಕ್ಕಾಗಿ ಹಾತೊರೆಯುತ್ತಿತ್ತು. ಜಾಕೀರರು ಈ ಬಂಧನದಿಂದ ತಮ್ಮ ಶರೀರವನ್ನು ಸ್ವತಂತ್ರಪಡಿಸಲಾಗಲಿಲ್ಲ. . . ಆದರೆ ಶರೀರ ಪಂಜರದಿಂದ ಪ್ರಾಣಪಕ್ಷಿಯನ್ನು ಸ್ವತಂತ್ರಪಡಿಸಿದರು. ಅವರ ವ್ಯಕ್ತಿತ್ವದ ನಿರ್ಮಾಣ ಇಂತಹ ವಿಷಯಗಳಿಂದಲೇ ಕೂಡಿತ್ತು.

ಜಾಮಿಯಾ ಆಹ್ವಾನಿಸಿತು. ಇದೋ ಜಾಕೀರರು ಬಂದುಬಿಟ್ಟರು. ಅವರ ಹಠ ಎಲ್ಲಾ ಶೃಂಖಲೆಗಳನ್ನೂ ಮುರಿಯಿತು. ಇಂದು ಅವರು ಮೌನರಾಗಿದ್ದಾರೆ. . . ಹಾರಿ ಮುಂದೆ ಬಂದು ಜವಾನ ಬಬ್ಬುಮಿಯಾನ ಕೈ ಕುಲುಕುತ್ತಿಲ್ಲ; ಕಸ ಗುಡಿಸುವ ಭಂಗೀ ಬೀದುವಿನ ಬೆನ್ನು ತಟ್ಟುತ್ತಿಲ್ಲ; ಅವರ ಕುಟುಂಬದ ಯೋಗಕ್ಷೇಮವನ್ನು ವಿಚಾರಿಸುತ್ತಿಲ್ಲ; ಅವರು ಮೌನರಾಗಿದ್ದಾರೆ. ಇದೂ ಸಹ ಜಾಕೀರರ ಒಂದು ಅದ್ವಿತೀಯ ಭಾವವೇ ಆಗಿದೆ. . .

* * *

ಜಾಮಿಯಾದೊಡನೆ ನನ್ನ ಸಂಬಂಧವೇನೂ ದೀರ್ಘವಾದದ್ದಲ್ಲ. ಆದರೂ ನಾನು ಬಹಳ ಸಲ ಜಾಕೀರರು ಜಾಮಿಯಾಕ್ಕೆ ಬರುತ್ತಿದ್ದುದನ್ನು ನೋಡಿದ್ದೇನೆ ಮತ್ತು ಅಲ್ಲಿಯ ಉತ್ಸಾಹವನ್ನು ಇಣಿಕಿ ನೋಡುವ ಪ್ರಯತ್ನ ಮಾಡಿದ್ದೇನೆ. ಇದು ಇಡೀ ವಾತಾವರಣವನ್ನು ಪ್ರಫುಲ್ಲಗೊಳಿಸುತ್ತಿತ್ತು. ಜಾಮಿಯಾದ ಈ ಉತ್ಸಾಹ, ರಾಷ್ಟ್ರಪತಿಯ ಸ್ವಾಗತದ ಉತ್ಸಾಹವಾಗಿರಲಿಲ್ಲ. ದೇಶದ ಒಬ್ಬ ದೊಡ್ಡ ಅಧಿಕಾರಿಯ ಆಗಮನದ ಹರ್ಷವೂ ಆಗಿರಲಿಲ್ಲ. ಇದು ಜಾಕೀರ್ ಸಾಹೇಬರನ್ನು ಮತ್ತೆ ಪಡೆದುಕೊಳ್ಳುವ ಉತ್ಸಾಹವಾಗಿತ್ತು. ಒಂದು ಆತ್ಮೀಯ ಸಂಬಂಧದ ಅಭಿವ್ಯಕ್ತಿಯಾಗಿತ್ತು. ಜಾಮಿಯಾದವರಿಗೆ ಜಾಕೀರರ ಆಗಮನದ ಪ್ರತೀಕ್ಷೆ ಇರುತ್ತಿತ್ತು. ಅವರು ಹೋಗಿ ಅಲ್ಲಿಯ ಕೆಲಸಕಾರ್ಯಗಳನ್ನು ಮುಗಿಸುತ್ತಿದ್ದರು. ಜನರು ಅವರ ಹಿತನುಡಿಗಳನ್ನು ಜ್ಞಾಪಿಸಿಕೊಳ್ಳುತ್ತಿದ್ದರು. ಇದೆಲ್ಲವೂ ಜಾಮಿಯಾದ ಅಲಿಖಿತ ಇತಿಹಾಸದ ಸ್ಮೃತಿಪಟಲದ ಮೇಲೆ ಅಂಕಿತವಾಗುತ್ತಿತ್ತು. (ನನ್ನ ಜೊತೆಯಲ್ಲಿ ಬನ್ನಿ, ಈ ಘಟನೆಗಳನ್ನು ನೋಡಿ) . . .

"ಜಾಮಿಯಾ ಶಿಬಿರದಲ್ಲಿ ಎಲ್ಲಾ ಕಡೆಯೂ ಕಾಗದದ ತುಂಡುಗಳು ಹರಡಿಬಿದ್ದಿವೆ. ಇದನ್ನು ಜಾಕೀರರು ನೋಡುತ್ತಾರೆ. ತಮ್ಮ ವಿದ್ಯಾರ್ಥಿಗಳಿಗೆ ತಿಳಿಸುತ್ತಾರೆ. 'ಕೊಳಕನ್ನು ದೂರಮಾಡಿ ಸೌಂದರ್ಯವನ್ನು ಹುಟ್ಟಿಸುವುದು ಮನುಷ್ಯನ ಕರ್ತವ್ಯವಾಗಿದೆ. ಧರ್ಮವಾಗಿದೆ," ಆದರೂ ಕಾಗದದ ತುಂಡುಗಳು ಅಲ್ಲಲ್ಲೇ ಬಿದ್ದಿದ್ದವು . . . ಅವರು ಉಪಕುಲಪತಿಗಳಾಗಿದ್ದರು. ಆದೇಶ ಕೊಡಬಹುದಾಗಿತ್ತು. ಬೇಕಿದ್ದರೆ ಶಿಕ್ಷೆಯನ್ನು ವಿಧಿಸಬಹುದಿತ್ತು. ಆದರೆ ಅವರು ಇದಾವುದನ್ನೂ ಮಾಡಲಿಲ್ಲ. ಅವರು ಶಿಖರವನ್ನೆಲ್ಲಾ ಸುತ್ತಿದರು. ಕಾಗದದ ಚೂರುಗಳನ್ನು ಆಯ್ದು ತಮ್ಮ ಶೇರ್‌ವಾನಿಯ ಜೇಬಿನಲ್ಲಿಡುತ್ತಾ ಹೋದರು. . . ನೀತಿಯ ಈ ಮಾಟಗಾರ ಮಂತ್ರ ಮಾಡಿ ಹೊರಟುಹೋದನು. . . ಇಂದು ಜಾಮಿಯಾದ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳಿಗೆ ಈ ಕೆಲಸ ನಿಯಮವಾಗಿ ಹೋಗಿದೆ. ಇಂದೂ ಕೆಲವು ಹಳೆಯ ವಿದ್ಯಾರ್ಥಿಗಳು ಸೇರಿಕೊಳ್ಳುತ್ತಾರೆ. ಅವರೆಲ್ಲರೂ ಮುದುಕರಾಗಿ ಹೋಗಿದ್ದಾರೆ. ಜೀವನ ಭಾರದಿಂದ ಅವರ ಸೊಂಟ ಬೊಗ್ಗಿಹೋಗಿದೆ. ಅವರು ಶಿಬಿರದಲ್ಲಿ ಮತ್ತು ದಾರಿಯಲ್ಲಿ ಬಿದ್ದ ಕಾಗದದ ಚೂರುಗಳನ್ನು ಎತ್ತಿ ತಮ್ಮ ಜೇಬುಗಳನ್ನು ತುಂಬಿಕೊಳ್ಳುತ್ತಾರೆ.

ಜಾಕೀರ್ ಹುಸೇನರ ಹೇಳಿಕೆ ಏನೆಂದರೆ . . . 'ಶಿಕ್ಷಕನ ಜೀವನ-ಹೊತ್ತಿಗೆಯ ಮೊದಲನೆಯ ಹಾಳೆಯಲ್ಲಿ ಒಂದೇ ಒಂದು ಶಬ್ದ ಅಂಕಿತವಾಗಿರುತ್ತದೆ. ಆ ಶಬ್ದವೇ ಸ್ನೇಹ! ಸ್ವತಃ ಅವರೇ ಇದಕ್ಕೆ ಉದಾಹರಣೆಯಾಗಿದ್ದರು. ಅವರು ಉಪಕುಲಪತಿಯಾಗಿದ್ದರು. ರಾಷ್ಟ್ರಪತಿಯಾದರು. ಆದರೆ ಈ ಎಲ್ಲಾ ಪತೀತ್ವಗಳ ಮಧ್ಯೆ ಅವರ ಶಿಕ್ಷಕ ಹೃದಯ ಯಾವಾಗಲೂ ಇಣಕು ಹಾಕುತ್ತಿತ್ತು. ಅವರ ಶಿಕ್ಷಣದಲ್ಲಿ ಉಪದೇಶಗಳಲ್ಲಿ ಮತ್ತು ಗಂಭೀರ ಪ್ರವಚನಗಳಲ್ಲಿ, ಜಾಕೀರರು ಅನುಸರಿಸುತ್ತಿದ್ದ ಪದ್ಧತಿ ತುಂಬಾ ಸರಳವಾಗಿರುತ್ತಿತ್ತು. ಅವರು ಆದರ್ಶವನ್ನು ಮೊದಲು ಪಾಲಿಸಿ ನಂತರ ಸ್ಥಾಪಿಸುತ್ತಿದ್ದರು. ಶಬ್ದಾಡಂಬರದ ಹೊದಿಕೆ ಹಾಕಿ ಅವರು ಆದರ್ಶವನ್ನು ಅಪಾರ್ಥಿವ ಮಾಡುತ್ತಿರಲಿಲ್ಲ.

* * *

ಜಾಕೀರ್ ಸಾಹೇಬರು ಜಾಮಿಯಾಕ್ಕೆ ಬರುವವರಿದ್ದಾರೆ. ಇಂದೂ ಅವರ ವಿದ್ಯಾರ್ಥಿಗಳು ಈ ವೃತ್ತಾಂತವನ್ನು ಜ್ಞಾಪಿಸಿಕೊಂಡು ಹೇಳುತ್ತಿರುತ್ತಾರೆ.

ಜಾಮಿಯಾದಲ್ಲೇ ವಿದ್ಯಾರ್ಥಿಗಳ ಹಾಸ್ಟೆಲಿತ್ತು. ಹಾಸ್ಟೆಲಿನ ಊಟದ ರುಚಿ ಅಲ್ಲಿದ್ದವರಿಗೆ ಮಾತ್ರ ಗೊತ್ತಿರುತ್ತದೆ. ಆಗಾಗ ಉಪಕುಲಪತಿ ಜಾಕೀರ್ ಹುಸೇನರು ಅಡ್ಡಾಡುತ್ತಾ ಹಾಸ್ಟೆಲಿಗೆ ಬರುತ್ತಿದ್ದರು ಮತ್ತು ವಿದ್ಯಾರ್ಥಿಗಳ ಮಧ್ಯೆ ಕುಳಿತು ಊಟಮಾಡುತ್ತಿದ್ದರು. ಈ ರೀತಿ ವಾರದಲ್ಲಿ ಎರಡು ಮೂರು ಸಲ ಜಾಕೀರರು ಬರುತ್ತಿದ್ದರು. ಒಂದು ದಿನ ಊಟ ತುಂಬಾ ಅರುಚಿಕರವಾಗಿತ್ತು. ವಿದ್ಯಾರ್ಥಿಗಳು ತಮ್ಮ ಪ್ಲೇಟುಗಳಲ್ಲಿದ್ದ ರೊಟ್ಟಿ ಮತ್ತು ತರಕಾರಿಯನ್ನು ತಿನ್ನದೆ ಅದರಲ್ಲಿ ನೀರು ಹಾಕಿದ್ದರು. ಇದು ಊಟದ ವಿರುದ್ಧ ಅವರ ಪ್ರದರ್ಶನವಾಗಿತ್ತು.

ಡಾಕ್ಟರ್ ಸಾಹೇಬರು ಊಟದ ಕೊಠಡಿಯ ಆಚೆ ಕಡೆ ವಿದ್ಯಾರ್ಥಿಗಳ ಪಾದರಕ್ಷೆಗಳನ್ನು ಪಂಕ್ತಿಬದ್ಧವಾಗಿ ಇಡುತ್ತಿದ್ದುದನ್ನು ಹುಡುಗರು ನೋಡಿದರು. ಮಾನಿಟರ್ ಲಜ್ಜಿತನಾಗಿ ಓಡಿಬಂದು ಪಾದರಕ್ಷೆಗಳನ್ನು ಸರಿಮಾಡಲು ಕೈಹಾಕಿದನು. ಜಾಕೀರ್ ಸಾಹೇಬರು ಬೆದರಿಸಿ ಹೇಳಿದರು: 'ಮನುಷ್ಯ ತನ್ನ ಕರ್ತವ್ಯವನ್ನು ನಿರ್ವಹಿಸಿದಾಗ ಮಾತ್ರ ಮನುಷ್ಯನಾಗುತ್ತಾನೆ. ನಿನ್ನ ಕರ್ತವ್ಯ ವಿದ್ಯಾರ್ಥಿಗಳಿಗೆ ಊಟ ದೊರಕಿದೆಯೋ ಇಲ್ಲವೋ ನೋಡುವುದಾಗಿದೆ. ಇಲ್ಲಿ ನಿನಗೇನೂ ಕೆಲಸವಿಲ್ಲ.' ಮತ್ತೆ ಜಾಕೀರರು ಒಳಗೆ ಬಂದರು. ಒಂದು ಪ್ಲೇಟನ್ನು ಎತ್ತಿಕೊಂಡು ಅದರಲ್ಲಿರುವ ರೊಟ್ಟಿಯನ್ನು ತಿನ್ನಲಾರಂಭಿಸಿದರು. ಲಜ್ಜೆಯ ಸಿಡಿಲೆರಗಿತು. ಎಲ್ಲರೂ ಆಶ್ಚರ್ಯಚಕಿತರಾಗಿ ನೋಡುತ್ತಿದ್ದರು. ಯಾರೂ ಮಾತನಾಡಲಿಲ್ಲ. ಮೌನವನ್ನು ಮುರಿದು ಅವರು ನುಡಿದರು : 'ನೀವು ಈ ರೀತಿಯ ಪ್ರದರ್ಶನ ಮಾಡಿದಿರಿ ಎಂಬ ದುಃಖ ನನಗಿಲ್ಲ; ಆದರೆ ಆಹಾರವನ್ನು ನಷ್ಟಪಡಿಸಿದಿರಿ. ಇದರ ದುಃಖ ನನಗಾಗುತ್ತಿದೆ. ಈ ಅನ್ನವನ್ನು ಹಸಿದವರಿಗೂ ಕೊಡುವ ಹಾಗಿಲ್ಲ. ಒಂದು ಕಡೆ ದೇಶದಲ್ಲಿ ಅಕಾಲ ಬಂದಿದೆ, ಮತ್ತೊಂದು ಕಡೆ ನಿಮ್ಮ ಈ ಸ್ಥಿತಿ. ನನ್ನ ಊಟವನ್ನು ಇನ್ನೊಬ್ಬ ಹಸಿದವನಿಗೆ ಕೊಡುವ ಉದ್ದೇಶದಿಂದ ನಿಮ್ಮ ಈ ಊಟವನ್ನು ಮಾಡುತ್ತಿದ್ದೇನೆ.' ಎಂದರು.

ಇದು ಸಾಧಾರಣವಾದ ವಿಷಯ. ಆದರೆ ಜಾಕೀರ್ ಹುಸೇನರು ಇಂತಹ ವಿಷಯುಗಳ ಮೇಲೂ ದೃಷ್ಟಿ ಇಡುತ್ತಿದ್ದರು. ಇದು ಅವರ ವಿಶೇಷತೆಯಾಗಿತ್ತು. ಇವರು ವಿದ್ಯಾರ್ಥಿಗಳಿಗೆ ದಂಡನೆ ಕೊಡಲಿಚ್ಛಿಸುತ್ತಿರಲಿಲ್ಲ. ವಿದ್ಯಾರ್ಥಿಗಳ ಚಾರಿತ್ರ್ಯನಿರ್ಮಾಣ ಮಾಡಲಿಚ್ಛಿಸುತ್ತಿದ್ದರು.

ಇಂತಹ ಸಣ್ಣ ವಿಷಯಗಳ ಸಮೂಹದ ಹೆಸರೇ ಚಾರಿತ್ರ್ಯವಾಗಿತ್ತು.

*   *   *

ಹತ್ತು ರೂಪಾಯಿಯ ಹೊಸ ನೋಟುಗಳು ಹೊರಬಿದ್ದುವು. ಒಂದು ದಿನ ಜಾಕೀರ್ ಹುಸೇನರ ಧರ್ಮಪತ್ನಿ ನೋಟುಗಳನ್ನು ಎಣಿಸುತ್ತಿದ್ದರು. ಜಾಕೀರರು ಒಳಗೆ ಬಂದು ಉತ್ಸಾಹದಿಂದ ಏನಾಗುತ್ತಿದೆ ಎಂದು ಪ್ರಶ್ನಿಸಿದರು. ಅಲ್ಲಿದ್ದವರ ಕಣ್ಣುಗಳು ಆಶ್ಚರ್ಯದಿಂದ ಇವರನ್ನು ನೋಡಲಾರಂಭಿಸಿದುವು. ಜಾಕೀರರು ಹೇಳಿದರು: 'ಆಶ್ಚರ್ಯಪಡಬೇಡ. ದುಡ್ಡು ನೋಡಿ ಎರಡು ವರ್ಷವಾಯಿತು. ಮೂರು ನಾಲ್ಕು ನೋಟುಗಳನ್ನು ತೆಗೆದುಕೊಂಡು ಮತ್ತೆ ಮತ್ತೆ ಅವುಗಳನ್ನು ಮುಟ್ಟುತ್ತಾ ಎಣಿಸಬೇಕೆಂಬ ಇಚ್ಛೆ ನನ್ನ ಮನಸ್ಸಿನಲ್ಲಿ ಈಗ ತಾನೆ ಅಂಕುರಿಸಿದೆ' ಎಂದರು. ಇದೆಷ್ಟು ದೊಡ್ಡ ವಿಡಂಬನೆ!

*   *   *

ಚಿಕ್ಕ ಚಿಕ್ಕ ವಿಷಯಗಳಿಗೂ ಹೆಚ್ಚು ಮಹತ್ವ ಕೊಡುತ್ತಿದ್ದುದೇ ಡಾ|| ಜಾಕೀರ್ ಹುಸೇನರ ವಿಶೇಷತೆಯಾಗಿತ್ತು. ಎಷ್ಟೋ ವರ್ಷಗಳ ಹಿಂದೆ ಅವರೊಂದು ಭಾಷಣ ಕೊಟ್ಟಿದ್ದರು. ಈಗಲೂ ಅದನ್ನು ನೋಡಿದರೆ, ಸಮಾಧಿಯೊಳಗಿಂದ ತಮ್ಮ ಕಫನ್ ತೆಗೆದು, ಜಾಕೀರರು ಎದ್ದು ಕುಳಿತು ರಾಷ್ಟ್ರಕ್ಕೆ ಸಂದೇಶ ಕೊಡುತ್ತಿರುವ ಹಾಗೆ ಕಾಣುತ್ತದೆ.

"ಅವನು (ಗಾಂಧೀಜಿ) ಕೇವಲ ಸ್ವಾತಂತ್ರ್ಯವನ್ನು ಕೇಳಲಿಲ್ಲ. ಸ್ವಾತಂತ್ರ್ಯಕ್ಕಾಗಿ ಒಂದು ರಾಷ್ಟ್ರದ ನಿರ್ಮಾಣ ಮಾಡುವ ಇಚ್ಛೆ ಅವನಿಗಿತ್ತು. ರಾಜ್ಯ ಮಾತ್ರ ಭೂಮಿಯ ಮೇಲೆ ಬಂದರೆ ರಾಷ್ಟ್ರದ ಅರಿವು ಉಂಟಾಗುವುದಿಲ್ಲ! ಈ ಮಾತು ಅವನೊಬ್ಬನಿಗೆ ಮಾತ್ರ ಗೊತ್ತಿತ್ತು. ವಾಸ್ತವಿಕ ವಸ್ತು ರಾಜ್ಯವಲ್ಲ. ರಾಷ್ಟ್ರೀಯ ಜೀವನವಾಗಿದೆ." ಇದು ಕೆಟ್ಟುಹೋದರೆ ದೊರಕಿರುವ ರಾಜ್ಯವೂ ಕೆಟ್ಟುಹೋಗುತ್ತದೆ. ತಾನೂ ಕೊಳೆತು ರಾಷ್ಟ್ರೀಯ ಜೀವನವನ್ನು ಕೊಳೆಸುತ್ತದೆ. ಇದೊಂದು ಸಂಕಷ್ಟವಾಗಿ ಹೋಗುತ್ತದೆ. ಕಡೆಗೆ ಬೇರೆಯವರಿಂದ ಅಪಹರಿಸಲ್ಪಡುತ್ತದೆ. ಈ ರಾಷ್ಟ್ರೀಯ ಜೀವನವೊಂದು ಸುಧಾರಿಸಿದರೆ, ಪರತಂತ್ರತೆಯಲ್ಲಿ ತತ್ತರಿಸುವ, ಹಸಿದ ಹೊಟ್ಟೆಯಿಂದ ಕಂಗಾಲಾಗಿರುವ, ನಗ್ನ ಶರೀರದಲ್ಲಿ ನಡುಗುತ್ತಿರುವ ಕೈಗಳೂ ಸಹ, ಮೋಡ ಕವಿದ ರಾತ್ರಿಯಲ್ಲಿ ಸ್ವರಾಜ್ಯ ದೀಪವನ್ನು ಬೆಳಗಿಸುತ್ತವೆ. ಇದು ಅಲಂಕೃತವಾದರೆ, ರಾಜ್ಯವೂ ಅಲಂಕೃತವಾದ ಹಾಗೆ. ಈ ರಾಷ್ಟ್ರೀಯ ಜೀವನದ ಭದ್ರತೆಯಿಂದ ರಾಜ್ಯದ ಶಕ್ತಿ ಹೆಚ್ಚುತ್ತದೆ."

ಮನುಷ್ಯ ತಪಸ್ಸು ಪೂಜೆ ಮತ್ತು ದುಃಖ ಹಂಚುವುದರಲ್ಲಿ ತುಂಬಾ ಸ್ವಾರ್ಥಿಯಾಗುತ್ತಾನೆಂದು ಜಾಕೀರ್ ಸಾಹೇಬರು ಹೇಳುತ್ತಿದ್ದರು. ಅವರು ತಪಸ್ಸು ಮತ್ತು ಪೂಜೆಯಲ್ಲಿ ಎಂದೂ ಸ್ವಾರ್ಥ ತೋರಿಸಲಿಲ್ಲ. ಬೇರೆಯವರ ದುಃಖವನ್ನು ಹಂಚಿಕೊಂಡರು. ಆದರೆ ಎಂದೂ ತಮ್ಮ ದುಃಖವನ್ನು ಹಂಚಲಿಲ್ಲ. ಆದರೆ ಅವರು ಈ ನಿಯಮವನ್ನು ಮೊದಲನೆಯ ಸಲ ಮುರಿದರು. ನಮ್ಮನ್ನೆಲ್ಲ ದುಃಖದ ಕಡಲಿನಲ್ಲಿ ತಳ್ಳಿದರು . . .

ದೆಹಲಿ ನಗರ ಮೊದಲಿಂದಲೂ ಸಮಾಧಿಭೂಮಿಯಾಗಿದೆ. ಅದರ ಪ್ರತಿಯೊಂದು ಮೂಲೆಯಲ್ಲಿಯೂ ಗೋರಿಗಳು ಮತ್ತು ಸಮಾಧಿಗಳು ನಿಂತು ಭೂತಕಾಲೀನ ವೈಭವದ ಸ್ಮರಣೆ ಮಾಡಿಸುತ್ತಿವೆ . . . ಗಾಂಧೀಜಿ ಚಿರನಿದ್ರೆಯಲ್ಲಿರುವುದು ಇಲ್ಲಿಯೇ! ನೆಹರೂ ಅವರ ಶಾಂತಿವನ ಇರುವುದು ಇಲ್ಲಿಯೇ! ಆಜಾದ್‌ರವರು ಮೌನರಾಗಿ ಮಲಗಿರುವುದು ಇಲ್ಲಿಯೇ! ಇಂದು ದೆಹಲಿಯಲ್ಲಿ ಮತ್ತೊಂದು ಸಮಾಧಿಯ ನಿರ್ಮಾಣವಾಯಿತು. ಅದು ಡಾ|| ಜಾಕೀರ್ ಹುಸೇನ್ ಅವರದ್ದು.

# ಉತ್ತುಂಗ ಸಾಹಿತಿ ಉತ್ತಂಗಿ

▪ ಎಸ್. ಆರ್. ಗುಂಜಾಳ

(೧೯೬೯ನೇ ಸೆಪ್ಟಂಬರ್ ಸಂಚಿಕೆಯಿಂದ ಮುಂದುವರಿದುದು)

## ೧. ಭಗವದ್ಗೀತೆಯ ವಿಸ್ತೃತ ಶಬ್ದಾನುಕ್ರಮಣಿಕೆ

(Complete Concordance to Bhagavadgeeta)

ಭಗವದ್ಗೀತೆಯು ಭಾರತೀಯರ ಬಾಯಬಲ ಎಂದು ಅನೇಕರ ಅಭಿಪ್ರಾಯವಾಗಿದೆ. ಟಿಳಕ, ಗಾಂಧಿ ಮುಂತಾದ ರಾಜಕೀಯ ಮಹಾನ್ ವ್ಯಕ್ತಿಗಳಿಗೆ ಆದೊಂದು ಪೂಜ್ಯ ಗ್ರಂಥವಾಗಿತ್ತು. ಭಾರತೀಯ ಪ್ರಸ್ಥಾನತ್ರಯಗಳಲ್ಲಿ ಗೀತೆಗೆ ಹಿರಿಯ ಸ್ಥಾನವಿದೆ. ಇಂದಿನ ಎಚ್ಚೆತ್ತ ಭಾರತದಲ್ಲಿಯಂತೂ ಅದಕ್ಕೆ ಹೆಚ್ಚಿನ ಗೌರವ ಬಂದಿದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಅದರ ಅಭ್ಯಾಸ, ವಿಮರ್ಶೆ ಇನ್ನೂ ಹೆಚ್ಚಿದೆ. ಇಂತು ಪ್ರಪಂಚದ ಜನರ ಮನವನ್ನಾಕರ್ಷಿಸಿದ ಭಗವದ್ಗೀತೆಯನ್ನು ಪೂಜ್ಯ ಉತ್ತಂಗಿಯವರು ಆಳವಾಗಿ ಅಭ್ಯಾಸಿಸಿದ್ದರು. ಅದರ ಒಳಹೊರಗನ್ನು ಅರಿತಿದ್ದರು. ಅಂತೆಯೇ ಪಾಶ್ಚಿಮಾತ್ಯ ಪದ್ಧತಿಗನುಸರಿಸಿ ಗೀತೆಯ ವಿಸ್ತೃತ ಶಬ್ದಾನುಕೋಶವನ್ನು ರಚಿಸಿದ್ದಾರೆ. ಅದು ಎರಡು ಭಾಗಗಳಾಗಿ ವಿಭಜಿಸಲ್ಪಟ್ಟಿದೆ.

ಭಾಗ ೧: ಇದರಲ್ಲಿ ಗೀತೆಯ ಪ್ರತಿಯೊಂದು ಶಬ್ದವನ್ನೂ ವ್ಯಾಕರಣಬದ್ಧವಾಗಿ ಪೃಥಕ್ಕರಿಸಲಾಗಿದೆ. ಶಾಸ್ತ್ರೀಯ ಪದ್ಧತಿಯನ್ನನುಸರಿಸಿ ಎಲ್ಲ ಶಬ್ದಗಳ ಕೋಶವನ್ನು ಸಿದ್ಧಮಾಡಲಾಗಿದೆ. ಚ.ನ., ಮುಂತಾದ ಶಬ್ದಗಳನ್ನು ಸಹ ಅದು ಒಳಗೊಂಡಿದೆ. ಇದು ನಾಲ್ಕು ಸಂಪುಟಗಳಲ್ಲಿ ಕ್ರೋಡೀಕರಿಸಲ್ಪಟ್ಟಿದೆ.

ಭಾಗ ೨: ಒಂದನೆಯ ಭಾಗದಲ್ಲಿ ಗೀತೆಯಲ್ಲಿಯ ಶಬ್ದಗಳನ್ನೂ ಪೃಥಃಕ್ಕರಣ ಪದ್ಧತಿಯಿಂದ (Analytical Method) ಸಂಯೋಜಿಸಿದರೆ ಈ ಎರಡನೆಯ ಭಾಗದಲ್ಲಿ ಎಲ್ಲ ಶಬ್ದಗಳನ್ನು ಏಕೀಕರಣ ಪದ್ಧತಿಯಿಂದ (Synthetic Method) ಜೋಡಿಸಲಾಗಿದೆ. ಒಂದೊಂದು ಶಬ್ದವು ಅದರ ಪರ್ಯಾಯ ಶಬ್ದಗಳಿಂದ ಕೂಡಿದ್ದು ಗೀತಾಭ್ಯಾಸಿಗಳಾದ ಪಂಡಿತಶ್ರೇಷ್ಠರಿಗೆ ಬಹು ಉಪಯುಕ್ತವಾಗಿದೆ.

ಉದಾ: ಸಮಾಸಗಳಿಂದ ಯುಕ್ತವಾದ ಯೋಗ ಶಬ್ದವು ಬಂದೆಡೆಗಳನ್ನೆಲ್ಲ ಲಕ್ಷಿಸಿ ಈ ಶಬ್ದವನ್ನು ಪೃಥಃಕರಣ ಪದ್ಧತಿಯಿಂದ ಕೆಳಗಿನಂತೆ ವಿಭಜಿಸಲಾಗಿದೆ. ಅನನ್ಯ ಯೋಗೇನ ಅಧ್ಯಾಯ ೧೩, ವಚನ ೧೦, ಧ್ಯಾನ ಯೋಗ ಪದ: ಅಧ್ಯಾಯ ೧೫, ವಚನ ೫ ಇತ್ಯಾದಿ.

ಅನಂತರ ಯೋಗ ಶಬ್ದವನ್ನು ಅರ್ಥಾನುಸಾರವಾಗಿಯೂ ವಿಭಜಿಸಲಾಗಿದೆ. ಆಂಗ್ಲ ಭಾಷೆಯಲ್ಲಿಯ Concentration, philosophy of action, divine power ಇತ್ಯಾದಿ ಶಬ್ದಾರ್ಥಗಳಿಗೆ ಹೋಲಿಕೆಯಾಗುವಂತೆ ಯೋಗ ಶಬ್ದವನ್ನು ಅರ್ಥಾನುಸಾರವಾಗಿ ವಿಭಜಿಸಲಾಗಿದೆ.

ಸಮಾಸಗಳಲ್ಲಿ ಯೋಗಿಶಬ್ದವು, ೪೭ ಸಲ, ಯೋಗಿನ ಶಬ್ದವು ೨೭ ಸಲ, ಯೋಗ ಶಬ್ದವು ೮೦ ಸಲ ಪ್ರಯೋಗವಾಗಿದೆ. ಆದರೆ ಯೋಗಿಶಬ್ದವು ೪೬ ಸಲವಾಗಲಿ, ಯೋಗಿನ್ ಶಬ್ದವು ೨೮ ಸಲವಾಗಲಿ, ಯೋಗ ಶಬ್ದವು ೭೯ ಸಲವಾಗಲಿ ಬಂದಿದೆಯೆಂದು ಹೇಳಲಾಗದು. ಅಷ್ಟು ಲೆಕ್ಕಾಚಾರದಿಂದ ಎಚ್ಚರ ವಹಿಸಿ ಎಣಿಸಿಟ್ಟಿದ್ದಾರೆ ಶ್ರೀ ಉತ್ತಂಗಿಯವರು, ಗೀತೆಯಲ್ಲಿ ಶ್ರದ್ಧೆ, ಭಕ್ತಿ, ಸಂಶೋಧನ ಬುದ್ಧಿಯಿದ್ದ ಪಂಡಿತರು ಬೇಕಾದರೆ ಎಣಿಸಿ ನೋಡಿ ಖಚಿತ ಮಾಡಿಕೊಳ್ಳಬಹುದು.

ಏಕೀಕರಣ ಪದ್ಧತಿಯಲ್ಲಿ ಶಬ್ದಗಳ ಹೊಂದಾಣಿಕೆಯು ಬಹು ಮನೋಜ್ಞವಾಗಿದೆ.

[ಅ] ಪರ್ಯಾಯ ಶಬ್ದಗಳು (ಕೃಷ್ಣನಿಗೆ) ಅಚ್ಯುತ, ಭಗವಾನ್, ಗೋವಿಂದ, ಹರಿ, ಕೇಶವ ಇತ್ಯಾದಿ.

[ಆ] ಯುದ್ಧಕ್ಕೆ: ಆಹವ, ಸಂಖ್ಯೆ, ಸಂಗ್ರಾಮ, ವಿಷನುಃ ಇತ್ಯಾದಿ.

[ಇ] ಬೆಂಕಿಗೆ: ಅಗ್ನಿ, ದೀಪ್ತಂ, ಹುತಂ, ಜ್ವಲನಂ, ಪಾವಕಃ, ಅಪಂತಂ, ವಹ್ನಿಃ, ವೈಶ್ವಾನರಃ ಇತ್ಯಾದಿ.

[ಈ] ದ್ವಂದ್ವಗಳು: ಹರ್ಷಶೋಕ, ಇಷ್ಟಾನಿಷ್ಟ, ಇಚ್ಛಾದ್ವೇಷ, ಜಯಾಜಯೌ, ಲಾಭಾಲಾಭೌ, ಮಾನಾಪಮಾನೌ, ರಾಗದ್ವೇಷಃ, ಶೀತೋಷ್ಣಃ ಇತ್ಯಾದಿ.

[ಉ] ಆಂಗ್ಲಭಾಷೆಯ Attains or Attain Supreme Bliss, imperishable Abode, Everlasting State of life, eternnl Liberation, Perfection, the State of Brahma, My state, My religion Immortality, Peace, Beyond Rebirth, Primal Being, that ಈ ಅರ್ಥಗಳನ್ನು ಕೊಡುವ ಭಗವದ್ಗೀತೆ ಯಲ್ಲಿಯ ಶಬ್ದಗಳು ಇಂತಿವೆ: ಅವಾಪ್ನೋತಿ ಶಾಶ್ವತಂ ಪದಂ, ಆದ್ಯಂ ಪುರುಷಂ ಪ್ರಪದ್ಯತೇ ಬ್ರಹ್ಮಸಂಪದ್ಯತೆತದಾ, ಬ್ರಹ್ಮನಿರ್ವಾಣಂ ಲಭಂತೇ ದುಃಖಾಂತಂ ನಿಗಚ್ಛಂತಿ; ಮದ್ಭಾವಂ ಸೇದಿಗಚ್ಛತಿ; ಮದ್ಭಾವಂ ಯಾಂತಿ; ಪದಂ ಗಚ್ಛಂತಿ; ಅನಾಮಯಂ, ಪ್ರಾಪ್ನುವಂತಿ ಮಾಮೇವ; ಸುಖಂ ಅಕ್ಷಯ ಅಷ್ನುತೇ ಯಾಂತಿ ಬ್ರಹ್ಮ ಸನಾತನಂ.... ....ಇತ್ಯಾದಿ ಇತ್ಯಾದಿ.

ಈ ಬೃಹತ್ಕೋಶದಲ್ಲಿ ಗೀತೆಯಲ್ಲಿ ಬರುವ ಪ್ರಯೋಗಗಳಿಗೆ ಹೋಲಿಕೆಯಾಗಿ ಬರುವ ಪ್ರಯೋಗಗಳನ್ನು ಉಪನಿಷತ್ತು, ವೇದ, ಬಾಯಬಲ್ಲ ಗ್ರಂಥಗಳಿಂದ ಆಯ್ದುಕೊಡಲಾಗಿದೆ. ಗೀತೆಯಲ್ಲಿ ಪ್ರಯೋಗಿಸುವ ರೂಪಾಲಂಕಾರಗಳನ್ನು, ಗೀತೆಯಲ್ಲಿಯೇ ವಿವರಿತವಾದ ಶಬ್ದಗಳ ವ್ಯಾಖ್ಯೆಗಳು, ಪ್ರಾಣಿಗಳ ಹೆಸರುಗಳು, ವೃಕ್ಷಗಳು, ಆಯುಧಗಳು, ಸಾಧನಗಳು ಎಲ್ಲವುಗಳನ್ನೂ ಬಹು ಅಚ್ಚುಕಟ್ಟಾದ ರೀತಿಯಲ್ಲಿ ಸಂಗ್ರಹಿಸಿ ಈ ಕೋಶದಲ್ಲಿ ಕೊಡಲಾಗಿದೆ. "ಒಂದು ವೇಳೆ ಇದು ಪ್ರಕಟವಾಗಿದ್ದರೆ ಇಷ್ಟರಲ್ಲಿಯೇ ಪಾಶ್ಚಿಮಾತ್ಯ ಹಾಗೂ ಪೌರ್ವಾತ್ಯ ದೇಶಗಳ ಪ್ರಮುಖ ಭಾಷೆಗಳಲ್ಲೆಲ್ಲ ಭಾಷಾಂತರಿಸಲ್ಪಟ್ಟು ಪ್ರಸಿದ್ಧಿಯನ್ನು ಪಡೆಯುತ್ತಿತ್ತು" ಎಂದು ಶ್ರೀ ಉತ್ತಂಗಿಯವರು ಬಹು ವ್ಯಸನದಿಂದ ಅನೇಕ ಸಲ ನಮ್ಮೆದುರು ಹೇಳಿದ್ದುಂಟು. ಉತ್ತಂಗಿಯವರಂತಹ ಪಂಡಿತರಿಂದ ಆಂಗ್ಲ ಭಾಷೆಯಲ್ಲಿ ವಿದ್ವತ್ಪೂರ್ಣವಾಗಿ ಬರೆಯಲ್ಪಟ್ಟ ಈ ಕೋಶವು ಅವರೇ ಹೇಳಿದಂತೆ ಜಗತ್ಪ್ರಸಿದ್ಧವಾಗುವದರಲ್ಲಿ ಯಾವ ಸಂಶಯವೂ ಇಲ್ಲ. ಇನ್ನೂ ಕಾಲ ಮೀರಿಲ್ಲ. ಸರಕಾರವು ಅವರ ಈ ಸೇವೆಯನ್ನು ಇಂದಿಗೂ ಮನಸ್ಸು ಮಾಡಿ ತೆಗೆದುಕೊಂಡರೆ ಜನತೆಗೆ ಕಲ್ಯಾಣವಾಗುತ್ತದೆ. ಮೈಸೂರ ಸರಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಪ್ರಚಾರ ಶಾಖೆಯವರು ಈ ಗ್ರಂಥದ ಪ್ರಕಟಣೆಯ ಭಾರ ಹೊತ್ತರೆ ತುಂಬ ಒಳ್ಳೆಯದಾಗುವದು.

## ೨. ದೇವರ ಆಶ್ಚರ್ಯಕರ ಮಗುವಿನ ಹುಟ್ಟು

(Creation: a wonderful child of God)

ಇದೊಂದು ಆಂಗ್ಲ ಭಾಷೆಯಲ್ಲಿ ಬರೆದ ಶತಕ. ಪ್ರೇಮ ಮತ್ತು ತ್ಯಾಗ ಈ ವಿಷಯದ ಬಗ್ಗೆ ಆಂಗ್ಲ ಭಾಷೆಯಲ್ಲಿ ಇದನ್ನು ಬರೆಯಲಾಗಿದೆ. ಇದರಲ್ಲಿ ೧೦೦ ಪದ್ಯಗಳಿವೆ. ಸೃಷ್ಟಿ, ಬಾಯಬಲ ತತ್ವ, ಕ್ರಿಸ್ತ ವ್ಯಕ್ತಿಯ ಜೀವನ–ಈ ಮೂರೂ ಒಂದೇ ತಳಹದಿಯ ಮೇಲೆ ನಿಂತಿರುವ ಸ್ವಾರಸ್ಯಮಯ ಸಂಗತಿಯನ್ನು ರಸವತ್ತಾಗಿ ಆಂಗ್ಲ ಭಾಷೆಯ ಚೌಪದಿ ಛಂದಸ್ಸಿನಲ್ಲಿ ವರ್ಣಿಸಲಾಗಿದೆ. ಈ ಶತಕದಲ್ಲಿಯ ಪದ್ಯಗಳ ಸೊಬಗು ಸೌಂದರ್ಯಗಳು ನೋಡುವಂತಹವಿವೆ.

ಇಲ್ಲಿ ಆಯ್ದ ೨-೩ ಪದ್ಯಗಳನ್ನು ಸವಿದು ನೋಡಬಹುದು:

Nothing can bind Him, time or space;
Yet all being He doth embrace;
'LOVE INFINITE' they Sing His name;
To show it Finite, He became.

* * * *

This grandest vision to Vedic Sages
Was revealed in older days;
When chanted Creation hymn of ages
The death divine they saw always.

* * * *

In love of finite God as dross
His Self did count and sacrifice;
So Jesus Son of God on cross,
Did give his life in love as price.

## ೩. ಲಿಂಗಾಯತ ಧರ್ಮ (LINGAYATISM)

A Faith, Philosophy and Religion ೬೦೦ ತಲೆಬರಹವುಳ್ಳ ವಿವರವಾದ ರೂಪರೇಷೆಯನ್ನು ಪೂಜ್ಯ ಉತ್ತಂಗಿಯವರು ಸಿದ್ಧಪಡಿಸಿದ್ದಾರೆ. ಜರ್ಮನಿಯ ಕೀಲ ವಿಶ್ವವಿದ್ಯಾಲಯದ ಪ್ರೊಫೆಸರರೊಬ್ಬರು ಎರಡನೆಯ ಮಹಾಯುದ್ಧದ ಮುಂಚೆ ಮದ್ರಾಸಕ್ಕೆ ಬಂದು ಭಾರತದ ಶೈವ ಧರ್ಮದ ಬಗ್ಗೆ ಸಂಶೋಧನೆ ಮಾಡಿ ಗ್ರಂಥ ಬರೆ

ಯಲುಪಕ್ರಮಿಸಿದರು. ತಮ್ಮ ಸಂಶೋಧನೆಗೆ ಪೂರಕ ವಾಗಿ ಭಾರತದ ವಿದ್ವಜ್ಜನರ ಸಲಹೆ, ಅಭಿಪ್ರಾಯಗಳನ್ನು ಕೇಳಿದರು. ಅಂತಹ ವಿದ್ವಜ್ಜನರಲ್ಲಿ ಉತ್ತಂಗಿಯವರೂ ಒಬ್ಬರು. ಪ್ರೊಫೆಸರರ ಪತ್ರಕ್ಕೆ ಉತ್ತರವಾಗಿ ಉತ್ತಂಗಿ ಯವರು "ದಕ್ಷಿಣ ಭಾರತದಲ್ಲಿ (ಕರ್ನಾಟಕದಲ್ಲಿ) ಲಿಂಗಾ ಯತ ಧರ್ಮವೆಂಬುದೊಂದು ಸ್ವತಂತ್ರ ಧರ್ಮವಿದೆ. ಶೈವ ಧರ್ಮಕ್ಕೂ ಈ ಲಿಂಗಾಯತ ಧರ್ಮಕ್ಕೂ ಅಜಗಜಾಂತರ ವಾದ ವ್ಯತ್ಯಾಸವಿದೆ. ಇದನ್ನು ಅರಿಯಬೇಕಾದರೆ ಕನ್ನಡ ದಲ್ಲಿ ಬರೆದ ವಚನ ಗ್ರಂಥಗಳನ್ನು ಮೊರೆಹೋಗದೆ ಗತ್ಯಂತ ರವಿಲ್ಲ" ಎಂದು ಬರೆದರು. ಆಗ ಜರ್ಮನಿಯ ವಿದ್ವಾಂಸರು "ಹಾಗಿದ್ದರೆ ಲಿಂಗಾಯತ ಧರ್ಮವನ್ನು ಕುರಿತು ಪಾಂಡಿತ್ಯ ಪೂರ್ಣವಾಗಿ ಬೃಹದ್ಗ್ರಂಥವನ್ನು ಬರೆದು ಕಳಿಸಿರಿ" ಎಂದು ಮಾರೋಲೆ ಬರೆದರು. ಅದರಂತೆ ಉತ್ತಂಗಿಯ ವರು ಬರೆದು ಕಳಿಸಿದರು. ಅಷ್ಟರಲ್ಲಿ ಮಹಾಯುದ್ಧದ ಹೊಗೆ ಎಲ್ಲೆಡೆಗೆ ಪ್ರಸರಿಸಿ ಆ ಕಾರ್ಯ ಅಷ್ಟಕ್ಕೆ ನಿಂತಿತು. ಶ್ರೀ ಉತ್ತಂಗಿಯವರು ಆ ದಿಸೆಯಲ್ಲಿ ಬರೆಯಬೇಕೆಂದು ಸವರಿಸಿಕೊಂಡಿರುವ ಟೀಕೆ, ಟಿಪ್ಪಣಿ ಗ್ರಂಥಗಳು ಇಂದಿಗೂ ಹಾಗೆಯೇ ಉಳಿದಿವೆ. ಅವುಗಳನ್ನು ಕಂಡು ನೀವು ಇಂದಿಗೂ ಆ ಗ್ರಂಥವನ್ನು ಬರೆಯಬಹುದಲ್ಲ? ಎಂದು ನಾನೊಮ್ಮೆ ಪ್ರಶ್ನಿಸಿದ್ದೆ. ಅದಕ್ಕೆ ಅವರು ನಾನು ಹೇಳಿದು ದನ್ನು ಬರೆದು ಪ್ರತಿಮಾಡಿಕೊಳ್ಳಲಿಕ್ಕೆ ಇಬ್ಬರು ಇಂಗ್ಲಿಷ ಪದವೀಧರರನ್ನೂ ಅದನ್ನು ಶುದ್ಧವಾಗಿ ಕರಡು ಪ್ರತಿ ಸಿದ್ಧ ಮಾಡಲು ಇಬ್ಬರು ಕುಶಲ ಟೈಪಿಸ್ಟರನ್ನೂ ನನ್ನ ಸಹಾ ಯಕ್ಕೆ ಕನಿಷ್ಟ ನಾಲ್ಕು ವರುಷ ಕೊಟ್ಟಿದ್ದರೆ ಇಂದಿಗೆ ಇಪ್ಪತ್ತು ವರುಷಗಳ ಪೂರ್ವದಲ್ಲಿಯೇ ಆಂಗ್ಲ ಭಾಷೆಯಲ್ಲಿ ಆರು ನೂರು ಪುಟಗಳ ಯೋಗ್ಯ (Standard) ಗ್ರಂಥ ವೊಂದು ಪ್ರಕಟವಾಗಬಹುದಾಗಿತ್ತು. ಯಾವಾಗಲೂ ಬಡತನವನ್ನು ಸೋಸುತ್ತ ಬಂದ ನನಗೆ ಆರ್ಥಿಕ ಅಡಚಣೆ ಯಿಂದಾಗಿ ಆ ನನ್ನ ಮಹೋನ್ನತವಾದ ಆಸೆ ಇಂದಿಗೂ ಆಸೆಯಾಗಿಯೇ ಉಳಿದಿದೆ. ಇಂದಿನ ಎಂಬತ್ತರ ಮುಪ್ಪಾ ವಸ್ಥೆಯಲ್ಲಿ ಆ ಆಸೆ ನಿರಾಶೆಯಲ್ಲಿಯೇ ಕೊನೆಯಾಗಬಹು ದೆಂದು ನೆನೆಸುತ್ತೇನೆ" ಎಂದು ನಿಟ್ಟುಸಿರು ಬಿಟ್ಟರು ಉತ್ತಂಗಿಯವರು! ಅದೇ ಕೊನೆಯ ಉಸಿರಾಯಿತು. ಲಕ್ಷ್ಮಿಯು ಬಿಟ್ಟುಹೋದ ಮನೆಯಲ್ಲಿ (ನಾಡಿನಲ್ಲಿ) ಹುಟ್ಟಿದ ಸರಸ್ವತಿಯ ಪುತ್ರರಾದ, ಬಡತನದ ಗೋಳಿನಲ್ಲಿ ಬಾಳಿದ, ಕಷ್ಟ ಜೀವನದ ಕನ್ನಡ ಸಾಹಿತಿಯ, ಪಂಡಿತವ ರೇಣ್ಯರ ಸತ್ಯ ಶುದ್ಧ ಸೇವೆಯನ್ನು ನಾಡು ಹೊಂದದೇ ಹೋಯಿತು (ಈ ರೂಪರೇಷೆಯನ್ನು ನೋಡಿ ಆ ದಿಶೆಯಲ್ಲಿ ಅಭ್ಯಾಸ ಮಾಡಬೇಕೆನ್ನುವವರ ಉತ್ತಂಗಿಯವರಿಂದ ಆಂಗ್ಲ ಭಾಷೆಯಲ್ಲಿ ಪ್ರಕಟವಾದ "ಅನುಭವ ಮಂಟಪ" ಎಂಬ ಪುಟ್ಟ ಪುಸ್ತಕದ ಕೊನೆಯ ೧೬ ಪುಟಗಳನ್ನು ಅವ ಲೋಕಿಸಬಹುದು.)

## ೪. ದಕ್ಷಿಣ ಭಾರತದ ದೇವತೆ ಎಲ್ಲಮ್ಮ

Yellamma a Goddess of South India ಎಂಬುದು ಅವರ ಇನ್ನೊಂದು ಸಂಶೋಧನ ಗ್ರಂಥ. ಇದು ಸಹ ಆಂಗ್ಲ ಭಾಷೆಯಲ್ಲಿ ಆಂಗ್ಲ ಪಂಡಿತರಿಗೆ ಬರೆದುದು. ಐದು ವರುಷಗಳ ಹಿಂದೆ ಇಂಗ್ಲಂಡದ ಮಹನೀಯರೊಬ್ಬರು ಭಾರತವನ್ನು ಸುತ್ತಾಡುತ್ತಾ ಸವದತ್ತಿಯ ಎಲ್ಲಮ್ಮನ ಗುಡ್ಡಕ್ಕೂ ಭೆಟ್ಟಿಯನ್ನಿತ್ತರು. ಆಗ ಎಲ್ಲಮ್ಮನ ಜಾತ್ರೆ. ಪರ ದೇಶಸ್ಥರಾದ ಅವರಿಗೆ ಈ ಜಾತ್ರೆಯಲ್ಲಿ ಗಂಡಸರು ಹೆಂಗಸರ ವೇಷ - ಭೂಷಣಗಳನ್ನು ಧರಿಸಿ ಹಾಡುತ್ತಿರುವದನ್ನೂ ಕುಣಿಯುತ್ತಿರುವದನ್ನೂ ಕಂಡು ಸೋಜಿಗವಾಯಿತು. ಅದರ ಗುಟ್ಟನ್ನು ಅರಿಯಬೇಕೆಂಬ ಲವಲವಿಕೆ ಹೆಚ್ಚಾಯಿತು. ಅವರಿಗಾದರೋ ಕನ್ನಡ ಭಾಷೆ ಬಾರದು. ಆ ಬಗ್ಗೆ ಇಂಗ್ಲಿಷಿನಲ್ಲಿ ಸರಿಯಾಗಿ ತಿಳಿವಳಿಕೆ ಮಾಡಿಕೊಡುವವರೂ ಅವರಿಗೆ ದೊರೆಯಲಿಲ್ಲ. ಹೇಗೋ ಕನ್ನಡದಲ್ಲಿ ಪ್ರಕಟವಾದ ಒಂದೆರಡು ಗ್ರಂಥಗಳನ್ನು ತೆಗೆದುಕೊಂಡು ಮುಂಬಯಿಗೆ ಮರಳಿದರು. ಅಲ್ಲಿ ಅವರಿಗೆ ಯಾರೋ ಒಬ್ಬರು ಉತ್ತಂಗಿ ಯವರ ಅನುಭವ ಮಂಟಪ ಆಂಗ್ಲ ಗ್ರಂಥವನ್ನು ಕೊಟ್ಟ ರಂತೆ. ತಕ್ಷಣ ಅವರು ಉತ್ತಂಗಿಯವರಿಗೆ ಒಂದು ಕಾಗದ ಬರೆದು "ಎಲ್ಲಮ್ಮನ ವಿಷಯಕ್ಕೆ ವಿವರವಾಗಿ ನನಗೆ ಇಂಗ್ಲಿಷಿನಲ್ಲಿ ಬರೆದು ತಿಳಿಸಿರಿ" ಎಂದು ಕೇಳಿದರು. ಅನಂತರ ಅವರವರ ಮಧ್ಯೆ ಪತ್ರವ್ಯವಹಾರ ನಡೆದು ಕೊನೆಗೆ ದಕ್ಷಿಣ ಭಾರತದ ದೇವತೆ ಎಲ್ಲಮ್ಮ ಎಂಬ ಆಂಗ್ಲ ಗ್ರಂಥ ಸಿದ್ಧ ವಾಯಿತು. ಅದನ್ನೇ ಆಂಗ್ಲ ಪಂಡಿತರಿಗೆ ಕಳಿಸಿಕೊಡ ಲಾಯಿತು.

ಈ ಗ್ರಂಥವನ್ನು ಕೆಳಗಿನಂತೆ ೫ ಪರಿಚ್ಛೇದಗಳಲ್ಲಿ ವಿಷಯವನ್ನು ವರ್ಗೀಕರಿಸಿ ಬರೆಯಲಾಗಿದೆ:

೧. ಎಲ್ಲಮ್ಮನ ಗುಡಿ ಹಾಗೂ ಅದರ ಆಡಳಿತ.

೨. ಸಂಸ್ಕೃತ ಗ್ರಂಥಗಳಲ್ಲಿ ವರ್ಣಿಸಿದಂತೆ ರೇಣುಕಾ (ಎಲ್ಲಮ್ಮ)ನ ವಿಷಯಕ್ಕೆ ರೂಢವಾಗಿ ಬಂದ ಕತೆಗಳು.

೩. ಎಲ್ಲಮ್ಮನ ವಿಷಯಕ್ಕೆ ಕನ್ನಡದಲ್ಲಿ ಪ್ರಕಟವಾದ ಹಾಗೂ ಜಾನಪದ ಗೀತೆಗಳಲ್ಲಿ ಬೆಳೆದುಬಂದ ಕತೆಗಳು.

೪. • ಈ ಕಟ್ಟುಕತೆಗಳನ್ನು ವಿವರಿಸುವದಕ್ಕೆ ಪ್ರಯುಕ್ತಿಸುವ ಊಹಾಪೋಹಗಳು.

೫. ಎಲ್ಲಮ್ಮ, ಎಲ್ಲಮ್ಮನ ಭಕ್ತರ ಬಗ್ಗೆ ಸಂಗ್ರಹಿಸಿದ ಕತೆಗಳು ಮತ್ತು ಆಕೆಯ ಪೂಜೆ ಪುರಸ್ಕಾರಗಳ ಬಗ್ಗೆ ಇರುವ ರೂಢಿ ಪದ್ಧತಿಗಳು.

ಎಲ್ಲಮ್ಮನ ವಿಷಯಕ್ಕೆ ವಿವರವಾಗಿ ತಿಳಿಯಲು ಈ ಗ್ರಂಥವು ಬಹು ಉಪಯುಕ್ತವಾಗಿದೆ.

## ೫. ಮೃತ್ಯುಂಜಯ

೧೯೬೨ರ ಜನವರಿಯ ಒಂದು ದಿನ ಮುಂಜಾನೆ ಪೂಜ್ಯ ಉತ್ತಂಗಿಯವರನ್ನು ಕಾಣಲು ಎಂದಿನಂತೆ ಹೋದೆ. ಮಾತಿಗೆ ಮಾತು ಹೊರಟು ಚರ್ಚೆ ಹಾಗೇ ಸಾಗಿತು. ವಿಷಯ ಏಸುಕ್ರಿಸ್ತನ ದಿವ್ಯ ಜೀವನವನ್ನು ಕುರಿತಾಗಿತ್ತು. ಉತ್ತಂಗಿಯವರು ಕ್ರಿಸ್ತನ ಪ್ರೀತಿ, ತ್ಯಾಗ ಆಚಾರ ವಿಚಾರ, ಬೋಧನೆ ಮುಂತಾದ ಸಂಗತಿಗಳನ್ನು ಮನನವಾಗುವಂತೆ ಹೇಳುತ್ತಿದ್ದಂತೆ ಅವರ ಧ್ವನಿಯಲ್ಲಿ ಒಂದು ಬಗೆಯ ಆವೇಶ ಒಡೆದು ಕಾಣುತ್ತಿತ್ತು; ಮುಪ್ಪಾದ ಶರೀರದಲ್ಲಿ ಒಂದು ತೆರದ ಶಕ್ತಿ ಚಲಿಸಿದಂತೆ ತೋರುತ್ತಿತ್ತು. ಹೀಗೆ ಸುಮಾರು ೩ ತಾಸು ಒಂದೇ ಸವನೆ ನಮ್ಮ ಅಂದಿನ ಚರ್ಚೆ ಸಾಗಿತು. ಕೊನೆಗೆ ಕ್ರಿಸ್ತ ವ್ಯಕ್ತಿಯ ಜೀವನದ ಬಗೆಗೆ ಎಷ್ಟು ವರ್ಣಿಸಿದರೂ ಕಡಿಮೆಯೇ. ನಾನು ನನ್ನ ವಯಸ್ಸಿನ ೧೦ನೆಯ ವರುಷದಿಂದಲೇ ಆ ಮಹಾಪುರುಷನ ಜೀವನದ ರಹಸ್ಯವನ್ನು ಅರಿಯಬೇಕೆಂದು ಬಯಸಿ ಆ ದಿಶೆಯಲ್ಲಿಯೇ ಬಹು ಪ್ರಯಾಸಪಟ್ಟಿದ್ದೇನೆ. ಅರವತ್ತು ವರುಷಗಳ ಈ ದೀರ್ಘವಧಿಯಲ್ಲಿ ಮಾಡಿದ ಶ್ರಮದಿಂದ ಆತನ ಜೀವನದ ಅಲ್ಪಾಂಶವನ್ನರಿಯಲು ಶಕ್ತನಾಗಿದ್ದೆನೇನೋ ಹೇಳುವದು ಕಷ್ಟ ಎಂದು ತಮ್ಮ ವಿವರಣೆಯನ್ನು ಮುಗಿಸಿದರು. ಅವರ ವಾಗ್ ವೈಖರಿಗೆ, ಪಾಂಡಿತ್ಯಕ್ಕೆ, ಅನುಭಾವಕ್ಕೆ, ವಾದಸರಣಿಗೆ ವಿಮೋಚನ ಶೈಲಿಗೆ ನಾನು ಬೆಪ್ಪನೆ ಬೆರಗಾದೆನಲ್ಲದೆ ಅವರು ಹೇಳಿದ್ದನ್ನೇ ಸಂಗ್ರಹಿಸಿ ಬರೆದರೆ ಒಂದು ಗ್ರಂಥವೂ ಆದೀತೆಂದು ಭಾವಿಸಿದೆ. ಅಲ್ಲದೆ ಕ್ರಿಸ್ತಮೂರ್ತಿಯ ಜೀವನದ ಬಗ್ಗೆ ಇನ್ನೂ ಹೆಚ್ಚಾಗಿ ತಿಳಿದುಕೊಳ್ಳಬೇಕೆಂಬ ಆಸೆಯು ನನ್ನಲ್ಲಿ ಮೂಡಿತು.

ಆಗ "ನಾನು ನೀವು ಹೇಳಿದ್ದನ್ನೆಲ್ಲ ಸುಮ್ಮನೇ ಕೇಳುವದಕ್ಕಿಂತ ಬರೆದಿಟ್ಟುಕೊಂಡರೆ ಒಳ್ಳೆಯದು. ನೀವು ಹೀಗೆಯೇ ದಿನವೂ ಹೇಳುತ್ತೇನೆಂದರೆ ನಾನು ದಿನವೂ ಬರೆದುಕೊಳ್ಳುವದಕ್ಕೆ ಬರುತ್ತೇನೆ ಎಂದೆ."

ಅದಕ್ಕೆ ಅವರು, "ನೀವು ಹೇಳುವದೇನೋ ಸರಿ. ಆದರೆ ಬರೆದುಕೊಳ್ಳುವದಕ್ಕಿಂತ ಮುಂಚೆ ಕ್ರಿಸ್ತನ ಜೀವನದ ವಿವಿಧ ಮುಖಗಳನ್ನೂ ಕುರಿತು ಬರೆದ ಅನೇಕ ಗ್ರಂಥಗಳು ನನ್ನಲ್ಲಿವೆ. ಅವನ್ನು ಓದಿ ವಿಮರ್ಶಿಸಿ ಮೊದಲು ಅರಗಿಸಿಕೊಳ್ಳೋಣ. ಆ ನಂತರ ಬರೆಯುವ ಕಾರ್ಯವನ್ನು ಕೈಕೊಳ್ಳುವಿರಂತೆ" ಎಂದು ಹೇಳಿದರು. ಸರಿ. ಮರುದಿನದಿಂದಲೇ ನಮ್ಮ ಓದುವ ಕಾರ್ಯಕ್ರಮ ಪ್ರಾರಂಭವಾಯಿತು. ದಿನವೂ ನಾನು ಬೆಳಿಗ್ಗೆ ೮ರಿಂದ ೧೦, ಸಂಜೆಯ ೬-೩೦ರಿಂದ ೮ ಘಂಟೆಗಳ ವರೆಗೆ ಹೋಗಲು ಪ್ರಾರಂಭಿಸಿದೆ. ನಮ್ಮ ಈ ಚರ್ಚೆಯನ್ನು ಸುಮ್ಮನೆ ಕುಳಿತು ಕೇಳುವದಕ್ಕೆಂದು ಉತ್ತಂಗಿಯವರ ಬಾಲ್ಯ ಸ್ನೇಹಿತರಾದ ಶ್ರೀ ಸಿವನಪ್ಪ ರಾಮತಾಳ ಅವರು ತಪ್ಪದೇ ಬರಹತ್ತಿದರು. ಹೀಗೆ ನಾಲ್ಕೈದು ದಿನ ಕಳೆಯುವಷ್ಟರಲ್ಲಿ ಇನ್ನೊಬ್ಬ ಬಾಲ್ಯ ಸ್ನೇಹಿತರಾದ ಕೊನೆಸಾಗರ ಅವರು ನಮ್ಮನ್ನು ಕೂಡಿಕೊಂಡರು. ಅವರೂ ನಿವೃತ್ತ ಕ್ರೈಸ್ತ ಬೋಧಕರು. ನಾಲ್ಕು ಜನರು ದಿನಾಲೂ ತಪ್ಪದೇ ಕೂಡಿ ಗ್ರಂಥಪಠಣ, ವಿವೇಚನೆ ವಿಮರ್ಶೆ ನಡೆಸಿದೆವು. ನಮ್ಮ ಸಂಶಯಗಳಿಗೆಲ್ಲ ಉತ್ತಂಗಿಯವರೇ ನಿವಾರಕರು.

ಹೀಗೆ ಐದು ತಿಂಗಳು ಸಾಗಿತು. ಉತ್ತಂಗಿಯವರು ಹೇಳಿದ ವಿವರಗಳನ್ನೆಲ್ಲ ಬರೆದಿಟ್ಟುಕೊಳ್ಳಬೇಕೆಂಬ ವಿಚಾರ ಪುನಃ ನಮ್ಮ ಮನದಲ್ಲಿ ಸುಳಿಯಿತು.

ನಮ್ಮ ಬಯಕೆಯನ್ನು ಅವರಿಗೆ ಹೇಳಿದಾಗ ಅವರೂ ಒಪ್ಪಿಕೊಂಡರು. ನಾನು ಕ್ರಿಸ್ತನ ಜೀವನದ ಬಗ್ಗೆ ಒಂದೊಂದು ಪ್ರಶ್ನೆಯನ್ನು ಕೇಳುವವನಾದೆ. ಉತ್ತಂಗಿಯವರು ಹೇಳುವವರಾದರು. ಕೊನೆಸಾಗರ ಅವರು ಬರೆದುಕೊಳ್ಳುವವರಾದರು.

ಇದು ಪ್ರಾರಂಭವಾದುದು ಜುಲೈ ತಿಂಗಳದ ಮೊದಲ ವಾರದಲ್ಲಿ. ಆಗಸ್ಟ್ ಎರಡನೆಯ ವಾರದಲ್ಲೂ ಮುಂದುವರಿಯಿತು. ಸುಮಾರು ೫೦೦ ಪುಟಗಳಷ್ಟಾದರೂ ಆಗುವಷ್ಟು ಕ್ರಿಸ್ತನ ಜೀವನ ವೃತ್ತಾಂತವನ್ನು ಹೇಳಬೇಕೆಂದು ಉತ್ತಂಗಿಯವರಿಗೆ ನಮ್ಮ ಕೋರಿಕೆಯಾಗಿತ್ತು. ಆದರೆ ಅವರು "ನೋಡುವಾ, ನಮ್ಮ ಶಕ್ತಿಯಿರುವ ವರೆಗೆ ಅವನ ಸೇವೆ ಮಾಡೋಣ" ಎಂದು ಹೇಳಿದರು.

ಇಂತು ಹೇಳಿದ ಎರಡು, ಮೂರು ದಿನಗಳಲ್ಲಿ ಅವರು ಹೇಳುವ ರೀತಿಯಲ್ಲಿ ತುಂಬ ವ್ಯತ್ಯಾಸ ಕಂಡಿತು. "ಆದಷ್ಟು

ತೀವ್ರ ಹಿಡಿದ ಈ ಕಾರ್ಯವನ್ನು ಮುಗಿಸಿಬಿಡಬೇಕು" ಎಂದು ಬಹು ಅವಸರ ಮಾಡಹತ್ತಿದರು. ಅಷ್ಟೇನು ಅವಸರ? ಸಾವಕಾಶವಾದರೂ ಸರಿ ವಿವರವಾಗಿ ನೀವು ಹೇಳಬೇಕು ಎಂದು ನಾವು ಕೇಳಿದೆವು.

ಅದಕ್ಕೆ ಕಾರಣವಿಷ್ಟೇ. ನಾನೀಗ ಮರಣದ ನೆರಳಿನಲ್ಲಿ ಸಾಗಿದ್ದೇನೆ. ಈ ಯಾತ್ರೆ ಯಾವ ಗಳಿಗೆಯಲ್ಲಿ ಮುಕ್ತಾಯವಾಗುತ್ತದೋ ನಿಶ್ಚಯವಿಲ್ಲ. ಆದ್ದರಿಂದ ತೀವ್ರ ಮುಗಿಸಿಬಿಡೋಣ ಎಂದರು. ನಮಗೆ ಅವರು ಹೇಳಿದ್ದು ನಂಬಿಕೆಯಾಗಲಿಲ್ಲ. ಆದರೂ ಅವರ ಇಚ್ಛೆಗೆ ವಿರೋಧಿಸಲಿಲ್ಲ.

ಮುಂದೊಂದು ದಿನ ಅವರು "ನನ್ನ ಸೇವೆ ಮುಕ್ತಾಯವಾಯಿತು. ಇದನ್ನು ತಿದ್ದಿ ಪ್ರಕಟಿಸುವ ಕರ್ತವ್ಯ ನಿಮ್ಮದು" ಎಂದು ಹೇಳಿದರು. ಮುಂದೆ ಅವರು ಮಾತನಾಡಿದ್ದು ಬಹು ವಿರಳ. ೨೮-೮-೧೯೬೨ರ ಬೆಳಗಿನ ಸಮಯ ಅವರು ಕ್ರಿಸ್ತವಾಸಿಯಾದರು.

ನಾವು ಬರೆದುಕೊಂಡ ಈ ಗ್ರಂಥವು ಮೇಲೆ ಹೇಳಿದ ಕೆಲವು ಅಪ್ರಕಟಿತ ಗ್ರಂಥಗಳಂತೆ ಕೈಬರಹದ ಪ್ರತಿಯಾಗಿ ನಮ್ಮ ಹತ್ತಿರವೇ ಉಳಿಯಿತು. ಆರು ತಿಂಗಳ ಅನಂತರ ಈ ವಿಷಯವನ್ನು ದಿ. ಉತ್ತಂಗಿಯವರ ಚಿ|| ಗಳಾದ ಡಾ. ಜೆ. ಸಿ. ಉತ್ತಂಗಿಯವರಿಗೆ ತಿಳಿಸಲು ಅವರು ಪ್ರಕಟನೆಯ ಭಾರ ಹೊರಲು ಒಪ್ಪಿಕೊಂಡರು. ತಮ್ಮ ಪೂಜ್ಯ ತಂದೆಯವರ ಕೊನೆಯ ಆಸೆಯನ್ನು ಈ ಪ್ರಕಟನೆಯ ಮೂಲಕ ನೆರವೇರಿಸಿದ್ದಕ್ಕೆ ಡಾ. ಜೆ. ಸಿ. ಉತ್ತಂಗಿಯವರಿಗೆ ಧನ್ಯವಾದಗಳನ್ನರ್ಪಿಸುತ್ತೇನೆ.

ಈ ಗ್ರಂಥದಲ್ಲಿ ಕ್ರಿಸ್ತನ ಕೊನೆಯ ದಿನಗಳ ಜೀವನವನ್ನು ಹೆಚ್ಚಾಗಿ ವಿವರಿಸಲಾಗಿದೆ; ಅಲ್ಲದೇ ಅವನು ಮರಣವನ್ನು ಜಯಿಸಿ–ಮೃತ್ಯುಂಜಯನಾಗಿ–ಬಂದ ವಿಷಯವನ್ನು ಹೇಳಲಾಗಿದೆ. ಅಂತೆಯೇ ಇದಕ್ಕೆ 'ಮೃತ್ಯುಂಜಯ' ಎಂದು ಹೆಸರಿಸಲಾಗಿದೆ.

ಎರಡನೆಯ ಭಾಗದಲ್ಲಿ ಏಸುಕ್ರಿಸ್ತನು, ಮುಂದಾಗಿ ಕಂಡ ಆ ಯಹೂದಿ ಜನಾಂಗದ ನಾಶನವನ್ನು ತೋರಿಸುವದಕ್ಕೆ ಮಾಡಿದ ಆ ಶಪಿಸಿದ ಅಂಜೂರ ಮರದ ಕಥೆಯನ್ನು ವಿವರಿಸಿದೆ. ಅದೇ ಪ್ರಕಾರ ಲೋಕದ ಜನ ದೇವರ ಚಿತ್ತಕ್ಕೆ ಮಣಿಯದಿದ್ದರೆ ಇಡಿಯ ಲೋಕದ ಜನಾಂಗವೇ ಆ ಅಂಜೂರ ಮರವು ತಕ್ಷಣ ಒಣಗಿ ಹೋದಂತೆ ನಾಶನಕ್ಕೆ ಗುರಿಯಾಗುವದು ಖಂಡಿತ ಎಂಬುದರ ಭವಿತವ್ಯವನ್ನು ನಿದರ್ಶಿಸಿದೆ.

ಪೂಜ್ಯ ಉತ್ತಂಗಿಯವರು ಕ್ರಿಸ್ತ ಭಕ್ತರು, ಸಮಾಜ ಸೇವಕರು, ಸಾಹಿತ್ಯ ವಿಮರ್ಶೆಯ ಜನಕರು, ತಿರುಳುಗನ್ನಡ ತಿರುಕರು, ಬಹು ಭಾಷಾ ವಿಶಾರದರು, ಸತ್ಯಪ್ರೇಮಿಗಳು, ಪ್ರಾಮಾಣಿಕರು, ದಾರ್ಶನಿಕ ಋಷಿಗಳು!

ಇನ್ನೇನು ಬೇಕು ಅವರಲ್ಲಿ? ಅವರ ಜೀವನದ ಹಾಸು-ಹೊಕ್ಕು- "ಜ್ಞಾನವೇ ಕ್ರಿಯೆ; ಕ್ರಿಯೆಯೇ ಜ್ಞಾನ". ಅವರ ನಿತ್ಯ ಜೀವನ-"ಕಾಯಕವೇ ಕೈಲಾಸ". ಅವರು 'ನಡೆದುದೇ ಬಟ್ಟೆ', 'ನುಡಿದುದೇ ವೇದ', 'ನುಡಿದಂತೆ ನಡೆ, ಇದೇ ಜನ್ಮ ಕಡೆ' ಇದು ಅವರ ಜೀವನದ ಸಾರ.

ಒಟ್ಟಿನಲ್ಲಿ ಅವರೊಂದು ಬಹುರೂಪ ದರ್ಶಕ ಯಂತ್ರ (Kaleido–Scope) ಇದ್ದ ಹಾಗೆ. ಧಾರವಾಡದ ಶ್ರೀ ಮೃತ್ಯುಂಜಯ ಸ್ವಾಮಿಗಳು "ಇಂತಹ ವಿಬುಧರ, ವಿದ್ವಾಂಸರ, ಆಚಾರ-ವಿಚಾರ ಶೀಲರ" ವ್ಯಕ್ತಿತ್ವವನ್ನು ಬಹು ಉನ್ನತ ಮಟ್ಟದಲ್ಲಿ ಕಂಡಿದ್ದಾರೆ. ಸರ್ವಶ್ರೀ ಜಿ. ಆರ್. ಪಾಂಡೇಶ್ವರ, ಅ.ನ. ಕೃ. ಅಂತಹವರಿಗೆ 'ಕನ್ನಡ ಕುಲ ಭೀಷ್ಮಾಚಾರ್ಯ'ರಾಗಿ ಕಂಡಿದ್ದಾರೆ. ಎಚ್. ಎಚ್. ಕೃಷ್ಣಸ್ವಾಮಿ ಅಂಥವರಿಗೆ ಕರ್ಮಯೋಗಿಗಳಾಗಿ ತೋರಿದ್ದಾರೆ. ಎ. ಎ. ಕವಾಲ, ಶಂ. ಬಾ. ಜೋಶಿ ಅಂತಹವರು "ಫಿಲಾಸಫಿಯ ಪಕ್ವಾನ್ನ"ದಂತೆಂದೂ ಹೋಲಿಕೆ ಕೊಟ್ಟಿದ್ದಾರೆ. ಎಸ್. ಎಂ. ಅಂಗಡಿಯಂತಹವರಿಗೆ "ನಿಷ್ಕಾಮ ಕರ್ಮಿ"ಗಳಂತೆ ಕಾಣಿಸಿಕೊಂಡಿದ್ದಾರೆ. ಗೋವಿಂದ ಪೈಗಳಂತಹವರಿಗೆ ಮೇಲಾದ ಸಂಶೋಧಕರೆಂದು ಸೈ ಎನಿಸಿಕೊಂಡಿದ್ದಾರೆ. ಸ. ಪ. ಗಾಂವಕರರಂತಹವರಿಂದ "ಸರ್ವಜ್ಞರ ಮರ್ಮಜ್ಞ"ರೆಂದು ಹೊಗಳಿಸಿಕೊಂಡಿದ್ದಾರೆ.

ತಾತಾಚಾರ್ಯ ಶರ್ಮರಿಗೆ ಇವರನ್ನು ಕಂಡು "ಮೌಂಟಸೇಂಟ ಅಗ್ನೀಸನಲ್ಲಿದ್ದ ಥಾಮಸ ಅಕೆಂಪಿಸ-ಇವನ ನೆನಪು ಬಂತು".

"ನುಡಿಯ ಧ್ಯಾನದಲಿ ನೀವು ನಡೆಯ ನುಡಿಸಿ
ಇಂದಿಗೆ ಉತ್ತುಂಗರಾದಿರೆಂದು ಪೂಜ್ಯರೆಲ್ಲ
ಮುಂದಿಗೆ."

ಎಂದು ಬೇಂದ್ರೆಯವರು ಹಾಡಿ ಕುಣಿದಾಡಿದರು."ಉತ್ತಂಗಿಯವರು ಬಹು ದೊಡ್ಡ ಮನಸ್ಸಿನವರು, ಬಹು ವಿಶಾಲ ದೃಷ್ಟಿಯವರು" — ಟಿ. ರುಬೆನ್ನರ ಮನಸ್ಸಿನ ಮೇಲೆ ಮೂಡಿದ ಒಂದು ಭಾವನೆ ಇದು. ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು "ವಚನ ವಾಙ್ಮಯವನ್ನು ಚೆನ್ನಾಗಿ ಅಧ್ಯಯನ ಮಾಡಿದವರಲ್ಲಿ ಮಿಗಿಲಾದವರೆಂದು

ಕೈಯೆತ್ತಿ ಹೇಳಿದರೆ, ಕೀರ್ತನ ಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು "ತುಂಡುಗಂಬಳಿ ಹಿಡಿಯದೇ, ಕರದಿಕಪ್ಪರ ಹಿಡಿಯದೇ ಇರುವ ಆಧುನಿಕ ಸರ್ವಜ್ಞ ಮೂರ್ತಿಗಳು!" ಎಂದು ಕೂಗಿ ಹೇಳಿದರು.

"ಸಿದ್ಧರಾಮನ ತೊತ್ತಿನ ಮಗಳಾದ" ಶ್ರೀಮತಿ ಜಯದೇವಿ ಲಿಗಾಡೆಯವರಿಗೆ "ನಿರ್ಮಲ ಜೀವನವನ್ನು ಬಾಳಿ ಸಂಶೋಧಕ ಶರಣರಾದ ಅಣ್ಣಂದಿರು" ಆಗಿದ್ದಾರೆ. ಕುಪ್ಪಸ ಲಿಂಗಣ್ಣನಂತಹವರಿಗೆ "ಇಷ್ಟಲಿಂಗಣ್ಣ"ನವರಾಗಿದ್ದಾರೆ. "ಉತ್ತಂಗಿಯವರಲ್ಲಿ ಅನುವಂಶಕವಾಗಿರುವ ಏಕಾಂತ ಪ್ರಿಯತೆ, ಶಾಂತಜೀವನ, ಸೌಜನ್ಯಯುಕ್ತ ಹಾಸ್ಯಪ್ರವೃತ್ತಿ, ಗ್ರಂಥಾವಲೋಕನ ಪ್ರಿಯತೆ, ಧರ್ಮಜಿಜ್ಞಾಸೆ, ವೈರಾಗ್ಯ ವೃತ್ತಿ, ಹಿಡಿದುದನ್ನು ಕೊನೆ ಮುಟ್ಟಿಸುವ ದೃಢನಿಶ್ಚಯ ಬುದ್ಧಿ, ಎಡರುಗಳನ್ನು ಎದುರಿಸುವ ಎದೆಗಾರಿಗೆ, ಬೋಧಕರಿಗೆ ಬೇಕಾಗುವ ಸಮತೆ, ಸಮಾಜದ ಮನ ಸೆಳೆಯುವ ರೀತಿ ಇವೇ ಮೊದಲಾದ ಗುಣಗಳು ಅವರನ್ನು ಆದರ್ಶ ಜೀವಿಗಳ ಮಾಲಿಕೆಯಲ್ಲಿ ಸೇರಿಸುತ್ತವೆ" ಎಂದು ಬಸವನಾಳರು ಹೃದಯ ತುಂಬಿ ನುಡಿದಿದ್ದಾರೆ. ಕುವೆಂಪುರವರು "ಕೃತಕೃತ್ಯರಾಗಿರುವ ಹಿರಿಯ ಪೂಜ್ಯರಿಗೆ" "ಹಿರಿಯ ನೋರ್ವನ ಬಾಳ್ಗಡಿಗೆ ಮಂಗಳಾರತಿಯನೆತ್ತಿ ಬೆಳಗಿದ್ದಾರೆ". ಅವರವರ ದರುಶನಕೆ ಅವರವರ ವೇಷದಲಿ ಅವರವರ ಭಾವಕ್ಕೆ, ಅವರವರ ಪೂಜೆಗಂ....ಅವರವರಿಗೆಲ್ಲ ಗುರು ನೀನೊಬ್ಬನೆ" ಎಂಬ ಮುಪ್ಪಿನ ಷಡಕ್ಷರ ಕವಿಗಳ ಗೀತದಂತೆ ಕನ್ನಡ ನಾಡಿನ ಜನರಿಗೆಲ್ಲ ವಿವಿಧ ರೂಪಗಳಲ್ಲಿ ಕಾಣಿಸಿಕೊಂಡ ಕನ್ನಡಕ್ಕೊಬ್ಬರೇ ಆದ ಉತ್ತಂಗಿಯವರನ್ನು ಪಡೆದ ನಾವೆಲ್ಲರೂ ಧನ್ಯರು!

ಅವರನ್ನು ಕುರಿತು ಕೆ|| ಎನ್. ಮಾರಾ ಅವರು ಬರೆದ-

"ಮೂರಲ್ಲ, ಆರಲ್ಲ, ಎಪ್ಪತ್ತು
ಮೇಲ್ಹತ್ತು ವರುಷ
ನೆರೆನಂಬಿ ಗುರು ಸೇವೆ, ಜನಸೇವೆ
ಗೈದಿರುವೆ ಸತತ
ವರ ಚಿರಾಯುವನ್ನಿತ್ತು ಹರಿಸಿ
ಮೊರೆಯುಲಿ ನಿನ್ನ
ಪರಮ ಸನ್ನಿಧಿಯಲಿ
ಗುರು ಏಸು ಮುನ್ನ"

ಭಾವಗೀತೆಯೊಂದಿಗೆ ನಾನೂ ದನಿಗೂಡಿಸುತ್ತೇನೆ.

(ಮುಗಿಯಿತು)

## ನಿರ್ವಾತ ಪ್ರದೇಶ

•

ನೆಲ–
ಎದ್ದಲ್ಲೆಲ್ಲ
ಹೆಬ್ಬಾವಿನಂತೆ
ಬಿದ್ದ
ಸಾಗರದ
ತೆರೆ, ಸುಳಿಗಳು
ಬಂದು
ಅಪ್ಪಿಕೊಂಡಂತೆ
ಕೊನೆಗೆ
ನಿರ್ವಾತ
ಪ್ರದೇಶ
ಬರುವದು.

•

**ಚೆನ್ನಣ್ಣ ವಾಲೀಕಾರ**

# ಕನ್ನಡ ನಾಡು, ಕನ್ನಡ ಭಾಷೆ ಮತ್ತು ಸಂಸ್ಕೃತಿ

■ ತಿ. ತಾ. ಶರ್ಮ

## ಮೊಟ್ಟಮೊದಲ ಕನ್ನಡ ಟೈಪ್

**ಕರ್ನಾಟಕ ವಾರ್ತಿಕ.**

**CANARESE MESSENGER.**

ಪುಸ್ತಕ ೧ | ೧೯ ಸಪ್ಟಂಬರ್ ೧೮೫೭. | ಅಂಕೆ ೬
VOL. I. | SEPTEMBER 19, 1857 | No. 6.

ಕಂನಡವಾರ್ತಿಕ.

(ಬಂಗಾಳ ಶಿಪಾಯಿ ದಂಗೆ, ೫ ಅಂಕೆಯಿಂದ ಮುಂದೆ)

ಕಾಟಕಾಯಿ ಹುಟ್ಟಿದ ಮೊದಲನೇ ತಿಂಗಳಿನಲ್ಲಿ ಹಿಂದೂ ಜನರೂ ಮುಸಲ್ಮಾನರೂ ಆದ ಶಿಪಾಯಿಗಳು, ಕುಂಪನಿ ಸರಕಾರದವರು ತಂಮ ಜಾತಿಗಳನ್ನು ಕೆಡಿಸಿ ತಂಮ ಪೂಜೆಗಳನ್ನು ನಿಲ್ಲಿಸಿ, ತಂಮುಂನು ಆಂಕೆಯಿಂದಾ ಕ್ರೈಸ್ತಮತದಲ್ಲಿ ಶೇರಿಸುವ ಆಲೋಚನೆಯಲ್ಲಿ ಇದ್ದಾರೆಂಬ ಭಯದಿಂದಾ ರಾಜದ್ರೋಹದಲ್ಲಿ ಶೇರಿದರೆಂದು, ಅನೇಕರು ನೆನಸಿದರು. ಕುಂಪನಿ ಸರಕಾರದವರು ಅಂಥಾ ಆಲೋಚನೆ ಮಾಡುತ್ತಾರೆಂಬ ಮಾತು ಸ್ವಸ್ಥಚಿತ್ತರಿಗೆಲ್ಲಾ ಬರೇ ಸುಳ್ಳೆಂದು ಗೊತ್ತದೆ. ತಂಡವರುನು ಹಿಡಿದು, ಅವರಿಗೆ ಮುಂಜಿ ಮಾಡಿ, ಮುಸಲ್ಮಾನರ ಮತದಲ್ಲಿ ಶೇರಿಸುವ ಪ್ರಕಾರ, ಕ್ರೈಸ್ತ ಸಭೆಯಲ್ಲಿ ಯಾರುನೂ ಬಲದಿಂದಾಗಲಿ, ಯುಕ್ತಿಯಿಂದಾಗಲಿ ಶೇರಿಸ ಆಗುವದೇ ಇಲ್ಲಾ. ಸರಕಾರದವರ ಅಪ್ಪಣೆಯಿಂದಾ ಯಾರೂ ಕ್ರೈಸ್ತರಾಗ ಕೂಡದು. ಕುಂಪನಿಯವರು ನೂರು ವರುಷದಿಂದಾ ಹಿಂದೂ ದೇಶದಲ್ಲಿ ಕಾರಕನ ಮಾಡುತಾ ಬಂದು, ಯಾವ ಕಾಲದಲ್ಲಿಯಾಗಲಿ ಯಾವ ಸ್ಥಳದಲ್ಲಿಯೂ ಹಿಂದುಸ್ಥಾನದಲ್ಲಿ ಹುಟ್ಟಿದ ಒಬ್ಬ ಮನುಷ್ಯನಂನಾದರೂ, ನಯದಿಂದಾಗಲಿ ಭಯದಿಂದಾಗಲಿ, ಕ್ರೈಸ್ತಮತದಲ್ಲಿ ಶೇರಿಸಿದರೆಂಬ ಸುದ್ದಿಯೇ ಹುಟ್ಟಲಿಲ್ಲಾ. ಆದರೆ ಕವಾಯಿತು ಮಾಡುವ ಶಿಪಾಯಿಗಳ ಬಾಯಲ್ಲಿ ಆರಂಭದಲ್ಲಿ ಇದ್ದ ಮಾತು ಮರುಳು ಮಾತಾದ್ದರೂ, ಮೋಸಗಾರರಾದ ಕೆಲವು ಮಂದಿ ಕುಯುಕ್ತಿಯಿಂದಾ ಆ ಸುದ್ದಿ ಎಬ್ಬಿಸಿ, ಹಬ್ಬಿಸಿದರಿಂದಾ, ಸಮೋಹದ ಶಿಪಾಯಿಗಳು ಅದನ್ನ ನಂಬುತ್ತಾರೆಂದು ನೆನಸಲಿಕ್ಕೆ ಹೇತು ವಾಯಿತು ಯಾಕೆಂದರೆ ಹಿಂದುಸ್ಥಾನದವರೂ, ಸತ್ಯವಂನು ತಿಳಿಯದ ಹಾಸ್ಟಿ ಬ್ಯೇನಾ ಮುಂತಾದ ದೇಶಗಳ ನಿವಾಸಿಗಳೂ ಸಾಧಾರಣವಾಗಿ ಸುಳ್ಳಾಡುವ ವಾಡಿಕೆಯಲ್ಲಿ ಬದ್ಧರು ವದರಿಂದಲೇ, ಸುಳ್ಳು ಸುದ್ದಿಗಳನ್ನು ಸುಂಮನೆ ನಂಬುವ ಮೋಸಕ್ಕೆ ಪಾಲಗಾರ ಇದ್ದಾರೆ ಹಿಂದುಸ್ಥಾನದ ದೊಡ್ಡ ಪಟ್ಟಣಗಳ ಯಾವದಾದರೂ ಒಂದು ಬಾಜಾರಿನಲ್ಲಿ, ಕ್ಯಾನಕ್ಕೆ ರೆಕ್ಕೆ ಬಂದು, ಅಗಳು ಹಾರಿತೆಂದು ಸಮಾಚಾರವಂನು ಒಬ್ಬನು ಹುಟ್ಟಿಸಿದರೆ, ಸಾವಿರಾರು ಜನರು ಹೌದೆಂದು ನಂಬ್ಯಾರು. ಮುಂಬಾಯಿಯಿಂದಾ ಪೂನೆಗೆ ಕಟ್ಟುತ್ತಾ ಇರುವ ಲ್ಯಾ

### ಕನ್ನಡ ವಾರ್ತಿಕ

(ಬಂಗಾಳ ಶಿಪಾಯಿ ದಂಗೆ, ೫ ಅಂಕೆಯಿಂದ ಮುಂದೆ) ಕಾಟಕಾಯಿ ಹುಟ್ಟಿದ ಮೊದಲನೇ ತಿಂಗಳಿನಲ್ಲಿ ಹಿಂದೂ ಜನರೂ ಮುಸಲ್ಮಾನರೂ ಆದ ಶಿಪಾಯಿಗಳು, ಕುಂಪನಿ ಸರಕಾರದವರು ತಂಮ ಜಾತಿಗಳನ್ನು ಕೆಡಿಸಿ ತಂಮ ಪೂಜೆಗಳನ್ನು ನಿಲ್ಲಿಸಿ, ತಂಮುಂನು ಆಂಕೆಯಿಂದಾ ಕ್ರೈಸ್ತಮತದಲ್ಲಿ ಶೇರಿಸುವ ಆಲೋಚನೆಯಲ್ಲಿ ಇದ್ದಾರೆಂಬ ಭಯದಿಂದಾ ರಾಜದ್ರೋಹದಲ್ಲಿ ಶೇರಿದರೆಂದು, ಅನೇಕರು ನೆನಸಿ

ದರು. ಕುಂಪನಿ ಸರಕಾರದವರು ಅಂಥಾ ಆಲೋಚನೆ ಮಾಡುತ್ತಾರೆಂಬ ಮಾತು ಸ್ವಸ್ಥಚಿತ್ತರಿಗೆಲ್ಲಾ ಬರೀ ಸುಳ್ಳೆಂದು ಗೊತ್ತದೆ. ಕಂಡವರಂನು ಹಿಡಿದು, ಅವರಿಗೆ ಮುಂಜಿ ಮಾಡಿ, ಮುಸಲ್ಮಾನರ ಮತದಲ್ಲಿ ಶೇರಿಸುವ ಪ್ರಕಾರ, ಕ್ರೈಸ್ತ ಸಭೆಯಲ್ಲಿ ಯಾರಂನೂ ಬಲದಿಂದಾಗಲಿ, ಯುಕ್ತಿಯಿಂದಾಗಲಿ ಶೇರಿಸ ಆಗುವುದೇ ಇಲ್ಲಾ. ಸರಕಾರ ದವರ ಅಪ್ಪಣೆಯಿಂದಾ ಯಾರೂ ಕ್ರೈಸ್ತರಾಗಕೂಡದು. ಕುಂಪನಿಯವರು ನೂರು ವರುಷದಿಂದಾ ಹಿಂದೂ ದೇಶದಲ್ಲಿ ಧೊರೆತನ ಮಾಡುತ್ತಾ ಬಂದು, ಯಾವ ಕಾಲದಲ್ಲಿಯೂ ಯಾವ ಸ್ಥಳದಲ್ಲಿಯೂ ಹಿಂದೂ ಸ್ಥಾನದಲ್ಲಿ ಹುಟ್ಟಿದ ವೊಬ್ಬ ಮನುಷ್ಯನಂನಾದರೂ, ನಯದಿಂದಾಗಲಿ, ಭಯ ದಿಂದಾಗಲಿ, ಕ್ರೈಸ್ತ ಮತದಲ್ಲಿ ಶೇರಿಸಿದರೆಂಬ ಸುದ್ದಿಯೇ ಹುಟ್ಟಲಿಲ್ಲಾ. ಆದರೆ ಶರಾರತ್ತು ಮಾಡುವ ಶಿಪಾಯಿಗಳ ಬಾಯಲ್ಲಿ ಆರಂಭದಲ್ಲಿ ಇದ್ದ ಮಾತು ಮರುಳು ಮಾತಾಗಿ ದ್ದರೂ, ಮೋಸಗಾರರಾದ ಕೆಲವು ಮಂದಿ ಕುಯುಕ್ತಿ ಯಿಂದಾ, ಸಮೋಹದ ಶಿಪಾಯಿಗಳು ಅದನ್ನು ನಂಬುತ್ತಾ ರೆಂದು ನೆನಸಲಿಕ್ಕೆ ಹೇತುವಾಯಿತು. ಯಾಕೆಂದರೆ ಹಿಂದೂ ಸ್ಥಾನದವರೂ, ಸತ್ಯವಂನ್ನು ತಿಳಿಯದ ಫಾರ್ಸಿ ಚೀನಾ ಮುಂತಾದ ದೇಶಗಳ ನಿವಾಸಿಗಳೂ, ಸಾಧಾರಣವಾಗಿ ಸುಳ್ಳಾಡುವ ವಾಡಿಕೆಯಲ್ಲಿ ಬಿದ್ದಿರುವುದರಿಂದಲೇ, ಸುಳ್ಳು ಸುದ್ದಿಗಳನ್ನು ಸುಂಮನೆ ನಂಬುವ ಮೋಸಕ್ಕೆ ವೊಳಗಾಗಿ ಇದ್ದಾರೆ. ಹಿಂದೂಸ್ಥಾನದ ದೊಡ್ಡ ಪಟ್ಟಣಗಳ ಯಾವ ದಾದರೂ ವೊಂದು ಬಾಜಾರಿನಲ್ಲಿ ಕೋಣಕ್ಕೆ ರೆಕ್ಕೆ ಬಂದು, ಅಗಳು ಹಾರಿತೆಂದು ಸಮಾಚಾರವಂನು ವೊಬ್ಬನು ಹುಟ್ಟಿ ಸಿದರೆ, ಸಾವಿರಾರು ಜನರು ಹೌದೆಂದು ನಂಬ್ಯಾರು. ಮುಂಬಾಯಿಯಿಂದಾ ಪೂಣೆಗೆ ಕಟ್ಟುತ್ತಾ ಇರುವ ಲೋ"

---

ಈ ಚಿತ್ರೋದಾಹರಣೆಯಲ್ಲಿ ಗಮನಿಸಬೇಕಾಗಿರುವುದು :

೧. ಮಂಗಳೂರಲ್ಲಿ ೧೮೪೩ನೆಯ ವರ್ಷ ಪಾದ್ರಿಗಳಿಂದ ಆರಂಭವಾದ ಕನ್ನಡ ಪತ್ರಿಕೆ.

೨. ಕನ್ನಡ ಲಿಪಿಯ ಮೊಟ್ಟಮೊದಲ ಮುದ್ರಾಣಾಕ್ಷರ ಗಳನ್ನು ನೋಡುತ್ತೇವೆ.

೩. ಈ ಅಕ್ಷರಗಳು ಕನ್ನಡಕ್ಕೂ, ತೆಲುಗಿಗೂ, ಸಮಾನವಾಗಿವೆ.

---

## ಮೂಲ ದ್ರಾವಿಡ ಪೈಶಾಚಿ ಭಾಷೆಯೆ ?

"ಪ್ರಾಚೀನ ದ್ರಾವಿಡ ಭಾಷೆಯೆ ಪೈಶಾಚಿಯೆಂದು ಕರೆ ಯಲ್ಪಟ್ಟಿತು. ಆರ್ಯರು ಇದನ್ನು 'ಪೈಶಾಚಿ' ಎಂದು ಅಪಹಾಸ್ಯ ಮಾಡುತ್ತಿದ್ದರು. ಆದರೂ ಆಂಧ್ರ ರಾಜರು (ಶಾತವಾಹನರು) ಈ ಭಾಷೆಯಲ್ಲೇ ಗ್ರಂಥಗಳನ್ನು ಬರೆದೂ, ಬರೆಸಿಯೂ, ದೇಶಭಾಷೆಯನ್ನು ಪ್ರೋತ್ಸಾಹಿಸಿ ದರು. ಶಾಲಿವಾಹನನ ಮಂತ್ರಿ ಗುಣಾಢ್ಯನೇ ಈ ಭಾಷೆ ಯಲ್ಲಿ "ಬೃಹತ್ಕಥೆ"ಯನ್ನು ಬರೆದ. ಶರ್ವ ವರ್ಮನೆಂಬ ಮತ್ತೊಬ್ಬಮಂತ್ರಿ 'ಕಾತಂತ್ರ ವ್ಯಾಕರಣ'ವನ್ನು ಈ ಭಾಷೆ ಯಲ್ಲಿ ಬರೆದ. ಹಾಲ ಶಾತವಾಹನ ಮಹಾರಾಷ್ಟ್ರ ಭಾಷೆ ಯಲ್ಲಿ 'ಸಪ್ತಶತಿ'ಯೆಂಬ ಗ್ರಂಥವನ್ನು ರಚಿಸಿದ್ದಾನೆ. ಇದನ್ನೆಲ್ಲ ನೋಡಿದರೆ ಆಂಧ್ರರಾಜರ ಪ್ರಭುತ್ವದಲ್ಲಿ ದೇಶ ಭಾಷೆಗಳಿಗೆ ಪ್ರೋತ್ಸಾಹ ದೊರೆತು ಅವು ಬೆಳೆದುವೆಂದು ಊಹಿಸಬಹುದು. ಈ "ಪೈಶಾಚಿ" ಭಾಷೆಯಿಂದಲೇ ಅರವ, ತೆಲುಗು, ಕನ್ನಡ, ಮಲಯಾಳ, ತುಳು, ಮೊದ ಲಾದ ಭಾಷೆಗಳು ಹುಟ್ಟಿದುವು. ಅನೇಕ ಭಾಷೆಗಳ ಸಾಂಕರ್ಯ ತೆಲುಗು ಭಾಷೆಗೆ ಲಭ್ಯವಾದ ಕಾರಣ ಉಳಿದ ಪೈಶಾಚೀ ಪುತ್ರಿಕೆಯರಿಗಿಂತ ತೆಲುಗು ಹೆಚ್ಚು ಭಿನ್ನವಾಗಿ ಕಾಣಬರುತ್ತಿದೆ*"

ಈ ಬಗೆಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವ ವಿದ್ವಾಂಸರ ಗುಂಪೊಂದಿದೆ. ಈ ಅಭಿಪ್ರಾಯಗಳು ಸರಿಯೆ, ತಪ್ಪೆ, ಎಂಬ ನಿರ್ಣಯಕ್ಕೆ ಬರಲು ಮತ್ತೆ ಇನ್ನೊಂದು ಗುಂಪಿನವರು ಯಾರೂ ಪ್ರಯತ್ನ ಮಾಡಲಿಲ್ಲ. ಕಾರಣ ಸ್ಪಷ್ಟವಾಗಿದೆ; ಈ ಗುಂಪಿನವರೆಲ್ಲ ಪಾಶ್ಚಾತ್ಯ ಪಾಂಡಿತ್ಯ, ಸಂಶೋಧನೆಯ, ದಿವ್ಯದರ್ಶನ ಭಾಗ್ಯಗಳಿಸಿದ ವರು. ಹಳೆ ಕಂದಾಚಾರದ ವಿದ್ವಾಂಸರಲ್ಲಾಗಲಿ, ಅವರ ವಿದ್ವತ್ತಿನಲ್ಲಾಗಲಿ, ಮರ್ಯಾದೆ ಇಲ್ಲದವರು. ಪಾಶ್ಚಾತ್ಯ ವಿದ್ವಾಂಸರೇನೆ ಹೇಳಲಿ, ಉಸಿರೆತ್ತದೆ, ಅವುಗಳನ್ನು ಅಂಗೀ

---

* History of the Andhras, Vol. I p. 177, 178
—Chilukur Veerabhadra Rao

History of Telugu Prose Literature Vol. I p. 20, 21
—G. V. Raghavendra Rao

Prācheena Andhra Bhāshā Swarūpamu, Andhra Sāhitya Patrika, Vol. V
—Jayanti Ramiah Pantulu.

ಕರಿಸುವ "ವಿಚಿತ್ರವಿನಯ"ವೊಂದನ್ನು ಈ ಗುಂಪಿನವರು ಬೆಳೆಸಿಕೊಂಡಿದ್ದಾರೆ. ಹಳೆ ಕಾಲದ "ಮಠ ಮುದ್ರೆ"ಗೆ ಬೆಲೆ ಇಲ್ಲ; ಹೊಸ ಕಾಲದ "ಯೂನಿವರ್ಸಿಟಿ ಮುದ್ರೆ"ಗೇ ಎಲ್ಲ ಬೆಲೆ. ಯಾರು ಯಾವ ಮುದ್ರೆಗೆ ಯಾವ ಬೆಲೆಯನ್ನಾದರೂ ಕೊಡಲಿ. ಚಿಲಕೂರು ವೀರಭದ್ರರಾಯರೂ, ಅವರಂತೆಯೇ ಇತರರೂ, ಸೂಚಿಸಿರುವ ಅಂಶಗಳನ್ನು ಕುರಿತು ವಿದ್ವಾಂಸರು ನಿರ್ವಿಕಾರ ಬುದ್ಧಿಯಿಂದ ಆಲೋಚನೆ ಮಾಡಬೇಕು. ಈ ಪ್ರಶ್ನೆಗಳು ಉತ್ತರಕ್ಕಾಗಿ ಬಹಳ ಕಾಲದಿಂದ ಕಾದಿವೆ :

೧. ಪ್ರಾಚೀನ ದ್ರಾವಿಡ ಅಥವಾ ಮೂಲ ದ್ರಾವಿಡ ಭಾಷೆಯನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಆರ್ಯರು ಅದನ್ನು "ಪೈಶಾಚಿ" ಎಂದು ಕರೆದರೆ ?

೨. ಪೈಶಾಚಿ ಭಾಷೆಯೇ ಪಂಚ ದ್ರಾವಿಡ ಭಾಷೆಗಳಾಗಿ, ಇಂದಿನ ಅರವ, ತೆಲುಗು, ಕನ್ನಡ, ಮಲಯಾಳ, ತುಳು, ಭಾಷೆಗಳಾದುವೆ ?

೩. 'ಗಾಥಾ ಸಪ್ತಶತಿ'ಯ ಭಾಷೆಗೂ, ಇಂದಿನ ಮರಾಠಿ ಭಾಷೆಗೂ, ಏನು ಸಂಬಂಧ ?

---

**ದೇವದಾಸಿಯ ಸಮರ್ಪಣೆ**

ಧಾರವಾಡ ಜಿಲ್ಲೆಯ ಹುಬ್ಬಳ್ಳಿ ತಾಲ್ಲೂಕು ಕೋಳಿವಾಡದ ಮಾಧವಜನಾರ್ದನ ದೇವಾಲಯದ ಕಂಬದ ಮೇಲೆ ಕ್ರಿ. ಶ. ೧೫೬೩ ಹುಟ್ಟಿದ *ಶಾಸನವೊಂದಿದೆ. ಈ ಶಾಸನದಲ್ಲಿ ಆಶ್ಚರ್ಯಕರವಾದಂಶವೊಂದು ತಿಳಿದುಬರುತ್ತದೆ. ಕೋಳಿಯವಾಡ ಅಗ್ರಹಾರದ ಯಜಮಾನ ಸೂರಪ್ಪಯ್ಯ

"ಶ್ರೀಮಾಧವಜನಾರ್ದನ ಸ್ವಾಮಿಯ
ಗುಡಿಯ ಪಾತ್ರಕ್ಕೆ ಸೋಮೋ

ಪ ರಾಗ ಪುಣ್ಯ ಕಾಲದಲು ತಿರುಮಲ
ಬೋವನ ಮಗಳು ಸೂರಿಯ

ಮಾಣಿಕಿ ಎಂಬ ಹೆಂಣನು ಕಾಣಾಚಿಯ
ಪಾತ್ರವಾಗಿ ಸಮರ್ಪಣೆ
ಯ ಮಾಡಿದನು"

ಸೂರಿಯಮಾಣಿಕಿ ಎಂಬ ಪಾತ್ರಿಯ ಜೀವಿತಕ್ಕೆ ಪ್ರತಿ ವರ್ಷದ ಸುವರ್ಣಾದಾಯಕ್ಕೆ, ಧಾನ್ಯಾದಾಯಕ್ಕೆ ವ್ಯವಸ್ಥೆ ಮಾಡಿದನು.

ಅಗಸ್ತ್ಯ ಗೋತ್ರದ, ಅಶ್ವಲಾಯನ ಸೂತ್ರದ, ಋಕ್ ಶಾಖೆಯ, ಬ್ರಾಹ್ಮಣ, ದೇವದಾಸಿಯ ದಾನ ಮಾಡುವ ಸಂಪ್ರದಾಯ ನಿಜವಾಗಿಯೂ ಕುತೂಹಲವನ್ನು ಕೆರಳಿಸುವಂತಹುದಾಗಿದೆ ! ದಾಸಿಯರು ತಮ್ಮನ್ನು ದೇವರಿಗೆ "ಅರ್ಪಿಸಿ"ಕೊಂಡ ಉದಾಹರಣೆಗಳಿವೆ. ಆದರೆ ನಿತ್ಯ ಕರ್ಮಾನುಷ್ಠಾನಪರನಾದ ಬ್ರಾಹ್ಮಣನೊಬ್ಬ ಹೆಂಣು ಮಗಳೊಬ್ಬಳನ್ನು ದೇವದಾಸಿಯನ್ನಾಗಿ "ಸಮರ್ಪಣೆ" ಮಾಡಿದ ಉದಾಹರಣೆಗೆ ಇದೇ ಮೊದಲು !

**ಕರ್ನಾಟಕ ವಾಸ್ತುಶಿಲ್ಪದ ಮೂಲ**

*"ಕರ್ನಾಟಕ ರಾಜ್ಯವು ಅತ್ಯುನ್ನತ ಪದವಿಯಲ್ಲಿದ್ದಾಗ ಉತ್ತರಕ್ಕೆ ನರ್ಮದಾ ನದಿಯವರೆಗೂ, ಪೂರ್ವಕ್ಕೆ ಮಹಾನದಿಯವರೆಗೂ, ದಕ್ಷಿಣಕ್ಕೆ ಕಾಂಚಿಯವರೆಗೂ, ಪಶ್ಚಿಮಕ್ಕೆ ಸಮುದ್ರದ ಕರಾವಳಿಯವರೆಗೂ, ಹರಡಿತ್ತೆಂದು ಚರಿತ್ರೆಯಿಂದ ತಿಳಿದುಬರುತ್ತದೆ. ಬಹಳ ಕಾಲದವರೆಗೂ ಲಾಟದೇಶವು (ಈಗಿನ ಗುಜರಾತ್) ಕರ್ನಾಟಕ ರಾಜರ ಅಧೀನಕ್ಕೆ ಒಳಪಟ್ಟಿತ್ತೆಂದೂ ಅಲ್ಲಿಯ ಕಟ್ಟಡಗಳಿಗೂ, ಈಗಿನ ಕರ್ನಾಟಕದಲ್ಲಿ ಪ್ರಸಿದ್ಧಿಯನ್ನು ಹೊಂದಿರುವ ಕಟ್ಟಡಗಳಿಗೂ, ಅನೇಕ ವಿಧದಲ್ಲಿ ಹೋಲಿಕೆ ಇರುವುದರಿಂದಲೂ **ಕರ್ನಾಟಕ ವಾಸ್ತುಶಿಲ್ಪದ ಮೂಲವು ಲಾಟದೇಶದಲ್ಲಿರಬಹುದೇ** ಎಂಬ ಸಂದೇಹವು ಒದಗುತ್ತದೆ. ಯಾವುದೂ 'ಇದಮಿತ್ಥಂ' ಎಂದು ಹೇಳುವ ಕಾಲ ಬಂದಿಲ್ಲ."

ವಾಸ್ತುಶಿಲ್ಪವಿದ್ವಾಂಸರು ಈ "ಸಂದೇಹ" ಪರಿಹಾರ ಮಾಡುವ ಪ್ರಯತ್ನ ಮಾಡಬೇಕು.

---

* No. 123, Karnataka Inscriptions Vol. V Dr. B. R. Gopal.

*"ಕರ್ನಾಟಕ ವಾಸ್ತುಶಿಲ್ಪ" 'ಕನ್ನಡ ನುಡಿ' ವಿಶೇಷ ಸಂಚಿಕೆ ಸ್ವರ್ಗವಾಸಿ ಬಿ. ವೆಂಕೋಬರಾವ್.



# ಒಂದು ಸಾರ್ಥಕ ವಚನ - ವಿವೇಚನೆ



● ಡಿ. ವಿ. ರಾಜಶೇಖರ್

ಗಿಳಿಯ ಹಂಜರವಿಕ್ಕಿ ಸೊಡರಿಂಗೆಣ್ಣೆಯನೆರೆದು ಬತ್ತಿಯನಿಕ್ಕಿ
ಬರವ ಹಾರುತ್ತಿದ್ದೆನೆಲೆಗವ್ವಾ
ತರುಗಲೆ ಗಿರುಕೆಂದಡೆ ಹೊರಗನಾಲಿಸುವೆ
ಆಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವಾ!
ಕೂಡಲ ಸಂಗನ ಶರಣರು ಬಂದು ಬಾಗಿಲ ಮುಂದೆ ನಿಂದು
ಶಿವಾ ಎಂದಡೆ ಸಂತೋಷಬಟ್ಟೆನೆಲೆಗವ್ವಾ!

ಈಗಾಗಲೇ ವಚನ ಸಾಹಿತ್ಯದನಂತರ ಕೆಲವು ಹೊಸ ಕಾವ್ಯಭೂಮಿಕೆಗಳು ದಾಟಿದ್ದರೂ ಅದರ ಹೊಸತನ ಕ್ಷಣ ಚೊಲ್ಲು ಸುರಿಸುವಂಥ ಒಂದು ಸಾರ್ವತ್ರಿಕತೆಯನ್ನು ಪಡೆಯುತ್ತಾ ಬಂದಿದೆ. ಕ್ಷಣಕಾಲ ಹಾಯೆನಿಸುವ ಕನಸುವ, 'ಆಯ್ಯ', 'ಅಣ್ಣ' 'ಅವ್ವ', 'ಅಕ್ಕ' ಎನ್ನುವ ಗೌರವ ಸಂಬೋಧ-ಹಸನನ್ನು ಪಡೆದಿರುವ ಈ ಶರಣ ಸಾಹಿತ್ಯ ಪರಂಪರೆಯ ಜ್ಞಾಪಕ ಬಂದ ತಕ್ಷಣ ಸಾಮಾಜಿಕರ ನೆನಪು ಬಸವಣ್ಣನವರ ಕೂಡಲ ಸಂಗಮ. ಈ ವಚನಕಾರರ ಸಾಮರ್ಥ್ಯದ ಬಗ್ಗೆ ತೀರ ಆಳವಾದ ತೀರವನ್ನು ಮುಟ್ಟಿಸುವ ಭಕ್ತಿ, ಶ್ರದ್ಧೆ, ತತ್ವ ಇವುಗಳಿಂದ ಆಧ್ಯಾತ್ಮದ ಏಳಿಗೆ-ಈ ಪರಿಸರದಲ್ಲೇ ಬೆಳೆದು ಬಂದ ಇವರ ಸಹಜವರ್ತನೆ, ಚಂಪೂವಿನ ನಂತರ ಕಂಡುಕೊಂಡ ಹೊಸ ಮಾತಿನ ಮಾರ್ಗವಾಗಿ ಕಂಡುಬರುತ್ತದೆ. ಈ 'ವಚನ'ದ ದಾರಿ ಇಂಥದ್ದೇ ಎಂಬ ನಿಸ್ಕರ್ಷೆಯಲ್ಲ, ಅದು ಒಂದು ರೀತಿಯ ಆತ್ಮಗತವಾಗಿ ತಂದುಕೊಂಡ, ಪಳಗಿಸಿಕೊಂಡ ಮಾರ್ಗವಾಗುತ್ತದೆ. ಈ ಶರಣ ಸಾಹಿತ್ಯದ ಏಳಿಗೆಗೆ, ಧರ್ಮ, ಶ್ರದ್ಧೆಯನ್ನು ಜೀವಾಳವನ್ನಾಗಿಸಿಕೊಂಡು ಅಸ್ತಿತ್ವದ ವಚನಕಾರರಿಗಿಂತ ಹಿನ್ನೆಲೆಯಾಗಿ, ಮುಂದುವರಿದ ಮತವನ್ನೂ ನಾವು ಹುಡುಕಬಹುದು. ಆದರೂ ಮಾತಿನ ಗತ್ತನ್ನು ಸಹಜತೆಯ ಪರಿಮಿತಿಯಲ್ಲಿ ಸಾಗಬಹುದಾದಂಥ ವಾಸ್ತವ ನಿರೂಪಣೆಯಲ್ಲಿ ಬಸವಣ್ಣನವರ ಸಾಮಾನ್ಯ ಪರಿವರ್ತನೆ ಕಂಡುಬರುತ್ತದೆ.

ಈ ವಚನದ ಮೂಲಭೂತವಾದ ಭೂಮಿಕೆ ಆಧ್ಯಾತ್ಮಿಕ ನಿಲವು-ಶ್ರದ್ಧೆಗಳನ್ನು ಆತ್ಮಜ್ಯೋತಿಯಾಗಿ ಬೆಳಗಿಸಿಕೊಳ್ಳುವ ಪರಿಶ್ರಮ-ವ್ಯಕ್ತವಾಗುತ್ತದೆ. ಈ ವೈಚಾರಿಕ ಮನೋವೃತ್ತಿಯ ತಳವನ್ನು ಹಿಡಿದು ಹೊರಟ ವಚನಕಾರರಲ್ಲಿ ಮನೋಧರ್ಮವನ್ನು ತೀರ ಆಳವಾಗಿ ನೋಡಬೇಕಾಗುತ್ತದೆ. ಈ ರೀತಿಯ 'ಸಾಹಿತ್ಯದಲ್ಲಿ ವೈಚಾರಿಕ ಮನೋವೃತ್ತಿ' ಎಂದ ತಕ್ಷಣ ಈ ವೈಚಾರಿಕತೆ ಕಾವ್ಯಕ್ಕೆ ಎಷ್ಟರ ಮಟ್ಟಿಗೆ ಪೂರಕ ಎಂದೂ ನೋಡಬೇಕಾಗುತ್ತದೆ. ಈ ಅಂತರಾತ್ಮಿಕ ನಿಲವು ಅವರವರ ಮನೋವೇದನೆಗೆ, ಶ್ರದ್ಧೆಗೆ, ಕಾಲದ ಮನೋವೃತ್ತಿಗೆ ಸಂಬಂಧಿಸಿದಂತಾಗುತ್ತದೆ. ಈ ಕಾಲವೃತ್ತಿಯ ಸಹಜ ವರ್ತನೆ-ಮುಟ್ಟಲಾಗದ ಮುಟ್ಟಗೆ ಮುಟ್ಟಬೇಕೆಂಬ ಆಕಾಂಕ್ಷೆ ಕಾಣುತ್ತದೆ.

ಈ ಆಕಾಂಕ್ಷೆಯ ಅರ್ಥ ತೀರ ವಿರಳವಾಗಿಸಿದಾಗ ಕಾವ್ಯದ ಒಂದು ಉತ್ತಮಗುಣವನ್ನು ವಿಶ್ಲೇಷಿಸಬೇಕಾಗುತ್ತದೆ. ಅದೇ 'ಅನುಭವ' ಮತ್ತು ಅಭಿವ್ಯಕ್ತಿ.

"ಗಿಳಿಯ ಹಂಜರವಿಕ್ಕಿ ಸೊಡರಿಂಗೆಣ್ಣೆಯನೆರೆದು ಬತ್ತಿಯನಿಕ್ಕಿ"

ಪ್ರಿಯಕರನ ಆಗಮನಕ್ಕೆ; ಎಣ್ಣೆಯನೆರೆದು, ಬತ್ತಿಯನಿಕ್ಕಿ, ಬರವನ್ನು ಹಾರೈಸುವ ಪ್ರಿಯತಮೆ ಸೊಡರ ಜ್ಯೋತಿಯ ಪರಿಶುದ್ಧತೆಗೆ ವಚನಕಾರನ ಅಸ್ತಿತ್ವವಿದೆ. ಈ ರೀತಿಯ ಸಹಜತೆ ಬರುವಾಗ ಕಾವ್ಯದಲ್ಲಿ ಅಭಿವ್ಯಕ್ತಿಮೂರ್ತವಾದದ್ದು, ಅಭಿವ್ಯಕ್ತವಾಗಬೇಕಾಗಿದ್ದ ಅನುಭವವೂ ಮೂರ್ತವಾಗಿದ್ದಾಗ ಅದರ ಅಭಿವ್ಯಕ್ತಿ ತೀರ ಸುಲಭವೂ, ಗೂಢವೂ ಆಗಿರುತ್ತದೆ ಎಂಬುದಕ್ಕೆ ಮೇಲಿನ ಪಾಲುಗಳು ಪ್ರತೀಕ. ಆದರೆ ವೈಚಾರಿಕತೆ ಅನುಭವಕ್ಕಿಂತ ಅಪೂರ್ವವಾದದ್ದು, ಆಕಾಂಕ್ಷೆಯುತವಾದದ್ದು, ಅಮೂರ್ತವಾದದ್ದು. ಅನುಭವ ಮತ್ತು ವೈಚಾರಿಕತೆಗಳ ಪರಸ್ಪರ ವಿರುದ್ಧ ಸ್ವಭಾವ ಅಭಿವ್ಯಕ್ತಿಯಲ್ಲಿಯ ರೂಪ ತೀರ ಭಿನ್ನ. ಇದಕ್ಕೆ ಅದರದೇ ಆಗ 'ಗತ್ತು' ಬೇಕು ಎನ್ನುವುದಕ್ಕೆ ಇಂದಿನ ಕಾವ್ಯದ ಒಳನೋಟದಲ್ಲಿ ಕಾಣಬಹುದು. ಅದರ ಶಿಥಿಲತೆಯೂ ಹೊರನೋಟದಲ್ಲಿ ಕಾಣಬಹುದು. ಈ ವಚನ

ಸಾಹಿತ್ಯದಲ್ಲಿ ವೈಚಾರಿಕತೆ ಜನಾಂಗದ ಸಾಮಾನ್ಯ ತಿಳಿವಳಿಕೆಯಾಗಿಯೇ ಬಂದಿರುವುದರಿಂದ ಅದು ಅನುಭವದಷ್ಟೇ ಕ್ರಿಯಾಶೀಲವಾಗಿ ವರ್ತಿಸುತ್ತದೆ.

"ಆಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವಾ
. . . ಸಂತೋಷಬಟ್ಟೆನೆಲೆಗವ್ವಾ!"

ಈ ಶ್ರದ್ಧೆಯ ಮೂರ್ತ ಸ್ವರೂಪ ಅನುಭಾವದ ಅನುಭವವಾಗಿ ಕಂಡರೂ ದಾರ್ಶನಿಕತೆ ಜನಾಂಗದ ಸಾರ್ವತ್ರಿಕ ತಿಳಿವಳಿಕೆಯಾಗಿ, ನಂಬಿಕೆಯಾಗಿ ಆಚಾರವಾಗಿ ಬಂದಿದುದರಿಂದಲೇ ಈ ತೆರ ಅಭಿವ್ಯಕ್ತಿ ಸಾಧ್ಯವಾಗಿದೆ.

ಈ ರೀತಿಯ ಭಕ್ತಿಯ ಬೆಳವಣಿಗೆಗೆ ಇನ್ನೊಂದು ಮಾರ್ಗವನ್ನು ನಾವು ಕಂಡುಕೊಳ್ಳಬಹುದು. ಅದೇ 'ಗದ್ಯತನ' ವೈಚಾರಿಕತೆಯ ಅರಿವು (ಇಂದಿನದಲ್ಲ) ಸಾಮಾನ್ಯವಾಗಿ ಶಿಷ್ಟಮಾರ್ಗದಲ್ಲಿ ಸಾಧ್ಯವಿಲ್ಲ ಎನ್ನುವಷ್ಟು ಮುಂದೆ ಹೋಗುತ್ತದೆ. ಆಗ ಅದು ಅದರದೇ ಆದ ಬೇರೊಂದು ಭಾಷೆಯನ್ನು ಸೃಷ್ಟಿಸಿಕೊಳ್ಳುತ್ತದೆ. ಅಂದರೆ ಗದ್ಯವನ್ನಲ್ಲ. ತೀರ ಹತ್ತಿರ ಗದ್ಯದ್ದು. ಉದಾ: ಜಾನಪದ ಕಾವ್ಯ, ವಿವೇಚಿಸುತ್ತಿರುವ ವಚನಮಾರ್ಗ. ಈ ರೀತಿ ವಚನ ಸಾಹಿತ್ಯದ ಒಂದು ಮೆರಗು, ಯಶಸ್ಸು ಅದರ ಸ್ವಂತತೆಯಿಂದ ಕಾಣುತ್ತೇವೆ.

"ಕೂಡಲ ಸಂಗನ ಶರಣರು ಬಂದು ಬಾಗಿಲಮುಂದೆ
ಶಿವಾ ಎಂದಡೆ ಸಂತೋಷಬಟ್ಟೆನೆಲಗವ್ವ."

ಎನ್ನುವಲ್ಲಿ ತೀರ ಮೂರ್ತವಾದ ಒಂದು ತತ್ವ ಅಥವಾ (ಹೊಂದುವ) ಭಾವನೆಯನ್ನು ಕಾಣುವಂತಾಗುತ್ತದೆ. ಈ ತತ್ವದ ಸಾರ್ಥಕತೆಯೇನು ಎನ್ನುವಲ್ಲಿ ಅನುಭಾವದ ಪರಾಕಾಷ್ಠೆ. ಮಾತ್ರ ಕಾಣುತ್ತದೆ. ಆದರೂ ಆತ್ಮಾನುಭೂತಿಯ ಸಂಕೇತವಾಗಿ ಪರಿಣಮಿಸಿದಾಗ ಭಾಷೆಯ ಬಗ್ಗೆ ಹೇಳಬೇಕಾಗುತ್ತದೆ. ಶಬ್ದಗಳನ್ನು ಬರಿಯ ಚಿನ್ಹಗಳಾಗಿ ಉಪಯೋಗಿಸಿದಂತೆ ವ್ಯಕ್ತವಾಗುತ್ತದೆ. ತೀರ ಹತ್ತಿರ ಸಂಬಂಧವನ್ನು 'ಆತ್ಮ'ವನ್ನು ಕಲ್ಪಿಸುವ ಶಕ್ತಿ ಸಂಯೋಜನೆಯಲ್ಲಿಲ್ಲದಾಗಿ ಅಸ್ಪಷ್ಟತೆಯ ಅರ್ಥವಾಗುತ್ತದೆ. ಆದ್ದರಿಂದಲೇ ಕೆಲವು ವಚನಗಳು ಕಾವ್ಯಮಾರ್ಗದಿಂದ ಬಿಟ್ಟಿರುವುದು. ವಿಚಾರಗಳಿಗೆ ಭಾಷೆಯನ್ನು ಬರಿಯ ವಾಹಕವನ್ನಾಗಿ ಉಪಯೋಗಿಸಿದಾಗ ಆಗಬಹುದಾದ ನಷ್ಟ, ವಚನ 'ತತ್ವ'ವನ್ನು ಅಥವಾ ಇನ್ನೂ ಈಚಿನ 'ಭಾವನೆ'ಯನ್ನು ತನ್ನಲ್ಲಿ ನೀರು ನೀರಾಗಿ ಬಳಸಿಕೊಳ್ಳುತ್ತದೆಂಬುದಕ್ಕೆ ನಿಲವಾಗಬಹುದು. ಆದರೂ ತತ್ವಕ್ಕೆ ವಿರುದ್ಧವಾದ ಒಂದು ಶೋಧನಾತ್ಮಕ ಭಾಷೆಯ ಪ್ರಬುದ್ಧತೆಯಿದೆಯೆಂಬುದನ್ನು ಮರೆಯುವಂತಿಲ್ಲ.

ತತ್ವದ ಚಿರಂತನ ವ್ಯಕ್ತಿತ್ವ ಇಲ್ಲಿ ಸ್ಪಷ್ಟವಾಗಿಲ್ಲವಾದರೂ 'ವಚನ' ತತ್ವಗಳು ಜೀವನದ ಮೇಲೆ ಬೀರುವ ಸಮರ್ಥ ಪ್ರಭಾವವನ್ನು ಅದರ ಪದಸಂಯೋಜನೆಯಲ್ಲಿ ದೊರಕಿಸಿಕೊಡುತ್ತದೆ.

'ತರಗೆಲೆಗಿರುಕೆಂದಡೆ ಹೊರಗನಾಲಿಸುವೆ' ಆತ್ಮಾನುಭೂತಿಯ ಪರಿಶುದ್ಧತೆಗೆ ಸಾಗುವಾಗ ಬರುವ ವಿಕ್ಷುಬ್ಧ ಮನಸ್ಥಿತಿಯನ್ನು, ತನ್ನತನದ ಅವಿವೇಕವನ್ನು ಈ ಸಾಲು ವಿಶ್ಲೇಷಿಸುತ್ತದೆ. ಇದಕ್ಕೆ ಅಂಟಿದಂತೆ 'ಆಗಲಿದೆನೆಂತೆನ್ನ ಮನ ಧಿಗಿಲೆಂದಿತ್ತಲೆಗವ್ವಾ'. ಮತ್ತೆ ವಚನಕ್ಕೂ ಹಿಂದಿನ ಸಾರ್ವತ್ರಿಕ ಸಾಹಿತ್ಯದ ಒಲವನ್ನು ಈಚೆಗೆ ತರುತ್ತದೆ. ಹೊಸತನ 'ಗಿಳಿಯ ಹಂಜರನಿಕ್ಕಿ . . . ಬತ್ತಿಯನಿಕ್ಕಿ' ಬರವನ್ನು ಆಶಿಸುತ್ತಿದ್ದ ಮನ 'ತರಗೆಲೆಗಿರುಕೆಂದಾಗ, ಧಿಗಿಲೆಂದಿತು'. ಆದರೆ ಶರಣರು ಬಂದು 'ಶಿವಾ' ಎಂದಡೆ ಸಾಕು ನಿನ್ನ ಅನುಭೂತಿಯ ಶೂನ್ಯದೃಷ್ಟಿ ಅಲ್ಲಿದೆ ಎನ್ನುವ, ಒಂದು ಅಲೌಕಿಕ ಪ್ರಜ್ಞೆ ಸಿಗುತ್ತದೆ. ಈ ರೀತಿಯ ಒಂದು ಆತ್ಮನಿವೇದಿತ ತನ್ನತನದಲ್ಲಿ ಅಭಿವ್ಯಕ್ತಿ ನಡೆದರೂ ವಚನ ಹೊಂದುವುದು ಮನದ ವೈಶಾಲ್ಯಕ್ಕೆ, ನಿರ್ಮಲತೆಗೆ.

ವಚನ ಸಾಹಿತ್ಯದಲ್ಲಿ, ಈ ವಚನದ ಸಾರ್ಥಕತೆಯಿರುವುದು ಅದರದೇ ಆದ ಭಾವನೆಯ ತರಂಗದಲ್ಲಿ. ಸಹಜ ಭಾವನೆಗಳಿಂದ ತೀರ ಪರಿಣಾಮ ಉಂಟುಮಾಡುವ ಸಂಯೋಗದ ಒಂದು 'ಸರಳ' ಎನ್ನುವುದಕ್ಕಿಂತ ತೀರ ವಿಶಾಲವಾದ ಅರ್ಥವನ್ನು ಕಲ್ಪಿಸುತ್ತದೆ.

ಒಟ್ಟಿನಲ್ಲಿ 'ವಚನ'— ಹೊಂದುವ, ಸಂಭವಿಸುವ 'ಧರ್ಮ' ಸಮಾಜದ ಸಾರ್ವತ್ರಿಕ ಸಂವೇದನೆ ಎನ್ನುವಲ್ಲಿ ತೃಪ್ತಿಯಿದೆ.

# ಕನ್ನಡದ ಪ್ರೌಢಮಟ್ಟ

■ ಬಿ. ಹೆಚ್. ಶ್ರೀಧರ

ಕೇಂದ್ರ ಸರಕಾರದ ವಿದ್ಯಾಶಾಖೆಯಲ್ಲಿ ಸಂಸ್ಕೃತಕ್ಕಾಗಿಯೇ ಒಂದು ಪ್ರತ್ಯೇಕ ವಿಭಾಗವಿದೆ. ಅಖಿಲ ಭಾರತಕ್ಕೂ ಪ್ರತಿಯೊಂದು ಪ್ರಾಂತರಾಜ್ಯಕ್ಕೂ ಸಂಸ್ಕೃತಾಭಿವೃದ್ಧಿ ಬೋರ್ಡುಗಳಿವೆ. ಸಂಸ್ಕೃತ ಪಾಠಶಾಲೆಗಳನ್ನೂ ಕಾಲೇಜುಗಳನ್ನೂ ತೆರೆಯಲು ತಕ್ಕ ಧನಸಹಾಯವನ್ನು ಕೇಂದ್ರ ವಿದ್ಯಾಶಾಖೆಯು ಪ್ರಾಂತರಾಜ್ಯದ ಮೂಲಕ ಅರ್ಜಿ ಬಂದರೆ ಕಟ್ಟಡ, ಪ್ರಾಧ್ಯಾಪಕರ ವೇತನ ಮತ್ತು ಗ್ರಂಥಾಲಯ ಹಾಗೂ ಸಂಸ್ಕೃತ ಪತ್ರಿಕೆಗಳ ಪ್ರಕಾಶನ ಮುಂತಾದವುಗಳಿಗೆ ಪ್ರತ್ಯೇಕ ಧನಸಹಾಯವನ್ನು ಮಾಡುವ ಯೋಜನೆಯನ್ನು ಇಟ್ಟುಕೊಂಡಿದೆ. ಸಂಸ್ಕೃತ ಸಂಶೋಧನೆಗೆ ಕೇಂದ್ರದ ಸ್ಕಾಲರ್‌ಷಿಪ್ಪಿದೆ; ಸಂಸ್ಕೃತ ವಿದ್ವಾಂಸರಿಗೆ ವೃದ್ಧಾಪ್ಯದ ವಾರ್ಷಿಕ ಉಪದಾನಗಳನ್ನು ಕೊಡುವ ಯೋಜನೆಯಿದೆ. ಅಲ್ಲದೆ, ಉದ್ದಾಮ ವಿದ್ವಾಂಸರನ್ನು ರಾಷ್ಟ್ರೀಯ ಪ್ರಾಧ್ಯಾಪಕರೆಂದು ಗೌರವಿಸಿ ತಿಂಗಳಿಗೆ ೨೦೦೦ ರೂಪಾಯಿಗಳ ಗೌರವಧನವನ್ನು ಕೊಡುತ್ತ ಬರಲಾಗಿದೆ. ಆದರೂ ಮೈಸೂರು ರಾಜ್ಯದಲ್ಲಿ ಏನಾಗಿದೆ ?

ಆಧುನಿಕ ಭಾರತದ ೧೪ ಭಾಷೆಗಳ ಹಾಗೂ ಅವುಗಳಲ್ಲಿ ಬರೆದ ಗ್ರಂಥಗಳ ಅಭ್ಯಾಸವು ಮೂಲಭೂತ ಸಂಸ್ಕೃತಜ್ಞಾನವಿಲ್ಲದಿದ್ದಾಗ ತಪ್ಪದೆ ಅಪೂರ್ಣವೆನ್ನಿಸುವುದು. ಅಪೂರ್ಣ ಪಾಂಡಿತ್ಯವು ಯಾವಾಗಲೂ ಅತೃಪ್ತಿಕರ. ಅದರಿಂದ ಲಭಿಸುವ ಅಪ್ರಬುದ್ಧತೆ ಅನಾದರಣೀಯ. ಕೇವಲ ಸಂಸ್ಕೃತ ವಾಙ್ಮಯವೊಂದರ ಅಭ್ಯಾಸವಿಂದು ಮನುಷ್ಯನನ್ನು ಅಪೂರ್ಣನನ್ನಾಗಿಯೇ ಉಳಿಸುತ್ತದೆ. ಇಂಗ್ಲಿಷು-ಕನ್ನಡಗಳ ಕ್ರಮಪೂರ್ಣವಾದ ಅಭ್ಯಾಸವು ಕನ್ನಡಿಗನಿಗೆ ಅಗತ್ಯ. ಕಾಲಾಂತರದಲ್ಲಿ ಸಂಸ್ಕೃತ, ಕನ್ನಡ, ಹಿಂದಿಗಳೆಂಬ ಮೂರು ಭಾಷೆಗಳ ಜ್ಞಾನವು ಸಾಮಾನ್ಯ ಮಾನ್ಯ ಭಾರತೀಯರಿಗೆ, ಸಾಕಾದೀತು. ಅಂತೂ ತ್ರಿಮೂರ್ತಿ, ತ್ರಿಗುಣ, ತ್ರಿಲೋಕ, ತ್ರಿಪುಂಡ್ರ, ತ್ರಿವಿಕ್ರಮ, ತ್ರಿದಶ, ತ್ರಿವರ್ಗ, ತ್ರಿವರ್ಣಗಳನ್ನು ನಂಬಿದ ಭಾರತವು **ತ್ರಿಭಾಷೆಯನ್ನು** ಕಾಲಾನುಗುಣ ರೂಪದಲ್ಲಿ ಜೀರ್ಣಿಸಿಕೊಂಡೇ ಪ್ರಬುದ್ಧವಾಗಿ ಉಳಿಯಬೇಕಾದದ್ದು ಅಪರಿಹಾರವಾದ ಐತಿಹಾಸಿಕ ಕಟ್ಟಳೆ!

ಸಂಸ್ಕೃತದಲ್ಲಿ ರಾಜನೀತಿಶಾಸ್ತ್ರ, ವೈದ್ಯಶಾಸ್ತ್ರ, ಪ್ರಶಾಸನಶಾಸ್ತ್ರ, (ಜ್ಯೋತಿಷ) ಖಗೋಲಶಾಸ್ತ್ರಗಳೆಂಬ ಲೌಕಿಕಶಾಸ್ತ್ರ ಪರಂಪರೆ ಬೆಳೆದುಬಂದಿದೆ ಎಂಬ ಅಂಶವು ಬಹಳ ಜನರ ದೃಷ್ಟಿಯಲ್ಲಿ ಗಣ್ಯವೆನ್ನಿಸದಿರುವುದು ಅಂಥ ಭಾರತೀಯರ ಅಪೂರ್ಣವಾದ ಅನುಭವ ಮತ್ತು ಬುದ್ಧಿ ಪಕ್ವತೆಗಳಿಗೆ ಗುರುತು. ಕರ್ನಾಟಕದ ಶಿಲ್ಪಶಾಸ್ತ್ರ (Civil Engineering) ಕೂಡ ಅತ್ಯಂತ ಪ್ರೌಢದಶೆಯನ್ನು ಮುಟ್ಟಿದ ಅಂಶವು ಸಾಧಾರವಾಗಿ ಸಂಸ್ಕೃತ ಗ್ರಂಥಗಳಿಂದಲೇ ಗೊತ್ತಾಗಬಲ್ಲದು. ತತ್ವಜ್ಞಾನವೆಂಬ ಸಾರ್ವಭೌಮ ಶಾಸ್ತ್ರವಂತೂ ಭಾರತಕ್ಕೆ ಕಲಶಪ್ರಾಯವಾಗಿದೆ. ಅದರ ಸಂಸ್ಕೃತ ಮೂಲಗಳ ರಾಶಿಯು ಜರ್ಮನಿ, ರಶಿಯ, ಫ್ರಾನ್ಸ್, ಇಂಗ್ಲೆಂಡ್, ಅಮೇರಿಕ, ಅಫ್ಘಾನಿಸ್ಥಾನ ಮುಂತಾದ ಅನೇಕ ದೇಶಗಳಲ್ಲಿ ಈಗ ವಿಶೇಷಾಭ್ಯಾಸಕ್ಕೆ ಪಾತ್ರವಾಗಿದೆ.

ಈ ಅಂಶವನ್ನು ಗಮನಿಸಿದರೆ ಕನ್ನಡನಾಡಿನ ಕರ್ನಾಟಕ ಸಂಘಗಳೂ ಸಾಹಿತ್ಯ ಪರಿಷತ್ತೂ ಅದರ ಜಿಲ್ಲಾ ಶಾಖೆಗಳೂ ಇತರ ಸಾಂಸ್ಕೃತಿಕ ಕೇಂದ್ರಗಳಾದ ಚರ್ಚುಗಳೂ ಮಸೀದಿಗಳೂ ದೇವಾಲಯಗಳೂ ಮಠಗಳೂ **ಪಾಶ್ಚಾತ್ಯ ಪೌರಸ್ತ್ಯ** ಭಾಷೆ-ಶಾಸ್ತ್ರಗಳನ್ನವಲೋಕಿಸಿ ತಜ್ಞರಾದವರ ಮೂಲಕ ಸಂಸ್ಕೃತದಲ್ಲಿರುವಂತಹ, ಭಾರತಕ್ಕೆ ಅಂತರರಾಷ್ಟ್ರೀಯ ಕೀರ್ತಿಯನ್ನು ತಂದುಕೊಟ್ಟಿರುವಂತಹ ಮಹಾಗ್ರಂಥಗಳ ಭಾಷಾಂತರಗಳನ್ನು ಮಾಡಿಸಲು, ಮಾಡಿಸಿ ಪ್ರಕಟಿಸಲು ವ್ಯವಸ್ಥೆಯನ್ನು ಮಾಡುವುದು ಅತ್ಯಂತ ಆವಶ್ಯಕವೆಂಬುದು ಹೊಳೆಯದಿರದು. ಹಿಂದಿಯಲ್ಲಿ ಈ ಕಾರ್ಯ ಅವಿಶ್ರಾಂತವಾಗಿ ಸಾಗಿದೆ. ಸಂಸ್ಕೃತ ಶಾಸ್ತ್ರಗ್ರಂಥಗಳ **ತುಲನಾತ್ಮಕ ಅಭ್ಯಾಸಕ್ಕೆ** ಬೇಕಾದ ವಸ್ತು ಸಂಗ್ರಹವನ್ನು ಮಾಡಿಕೊಡುವುದರಿಂದ ಭಾರತದ ಹಾಗೂ ಕನ್ನಡ ಇತಿಹಾಸ, ಶಿಲ್ಪ, ವೈದ್ಯ, ಭೌತವಿಜ್ಞಾನ, ಖಗೋಲ ಸಂಶೋಧ, ರಸಾಯನ ಪದ್ಧತಿ, ಕಲೆ, ರಾಜನೀತಿ, ಸಾಹಿತ್ಯ, ತರ್ಕ, ತತ್ವ ಜ್ಞಾನಗಳು ಪರಂಪರಾವಿಚ್ಛೇದವನ್ನು ಹೊಂದದೆ ಅತ್ಯಂತ ಸ್ವಾಭಾವಿಕವಾಗಿ ಹೊಸಕಾಲದ ನಾಗರಿಕತೆಯ ಹೊನಲುಗಳೊಡನೆ ಸಮನ್ವಿತವಾಗಿ ಪ್ರಬುದ್ಧ ಕನ್ನಡ ಭಾರತೀಯರನ್ನು ಸಾಂಸ್ಕೃತಿಕವಾಗಿ ತರಬೇತುಗೊಳಿಸಿ ನಿಲ್ಲಿಸಬಲ್ಲದು ಎಂಬ

ಅಸಂದಿಗ್ಧ ಅಂಶವು ಹೊರಪಡುತ್ತದೆ. ಈ ಸ್ಥೂಲ ಲಕ್ಷಣಕ್ಕೆ ಒಳಪಡದ ಭಾರತಸ್ಥ ವ್ಯಕ್ತಿತ್ವಗಳು ಈಗ ಭಾರತೀಯವೆಂದೆನ್ನಿಸುವುದಿಲ್ಲ; ಅಭಾರತೀಯತೆಯಿಂದ ಮಲಿನರಾದ ವ್ಯಕ್ತಿಗಳು ಭೌತಿಕವಾಗಿ ಎಷ್ಟು ಎತ್ತರದ ಸ್ಥಾನಮಾನಗಳನ್ನು ಆಕ್ರಮಿಸಿದರೂ ಜನಹೃದಯಾರಾಧ್ಯರಾದ ನಾಯಕರೆಂದು ಯಾವ ಕಾರ್ಯಕ್ಷೇತ್ರದಲ್ಲೂ ಕನ್ನಡ ಭಾರತದಲ್ಲಿ ಗಣಿಸಲ್ಪಡುವುದಿಲ್ಲ. ಅಂಥ "ಅಗಣ್ಯಗಣ್ಯ"ರ ನೇತೃತ್ವದಲ್ಲಿ ಭಾವೈಕ್ಯವು ಮರುಮರೀಚಿಕೆಯಾಗುವುದಲ್ಲದೆ, ರಾಷ್ಟ್ರೀಯ ಸಮಾಜದ ಆರೋಗ್ಯ, ದಾರ್ಢ್ಯ, ಏಕಮಹಾರ್ಥ್ಯೇಯೋನ್ಮುಖತೆಗಳು ಸಿದ್ಧಿಸುವುದಿಲ್ಲ. ಛಪ್ಪನ್ನೈವತ್ತಾರು ರಾಜ್ಯ ಮನೋಧರ್ಮದ ಭಾರತವಿಂದು ಒಂದು ಸ್ವತಂತ್ರ ರಾಷ್ಟ್ರವಾಗಿ ಬದುಕಲಾರದೆಂಬುದು ಜಾಗತಿಕ ಪರಿಸ್ಥಿತಿಯನ್ನರಿತ ಎಲ್ಲರಿಗೂ ಗೊತ್ತಿದೆ. ಆರ್ಥಿಕ ರಾಷ್ಟ್ರೀಕರಣದ ಒಟ್ಟಿಗೇ **ಸಾಂಸ್ಕೃತಿಕ ರಾಷ್ಟ್ರೀಕರಣ**ವಾಗುವುದು ಭಾರತದ ಸ್ವಾತಂತ್ರ್ಯ ಸ್ಥಿರವಾಗಿ ಉಳಿಯಲು ಬೇಕಾದ ಭದ್ರವಾದ ತಳಹದಿ. ಅಂಥ ಆಂದೋಲನವನ್ನು ಮೈಸೂರು ರಾಜ್ಯವೇ ಅಗ್ರಗಾಮಿಯಾಗಿ ಶುರು ಮಾಡಬಾರದೇಕೆ ? ಈಗ ಈ ರಾಜ್ಯದ ನೇತೃಗಳಲ್ಲಿ ಅಂಥ ಪ್ರವೃತ್ತಿ ಪ್ರಕಟವಾಗದಾಗಿದೆ— ಏಕೆ ?

ನಾಯಕ ಸ್ಥಾನಗಳಲ್ಲಿರುವ ಅನೇಕ ಕನ್ನಡಿಗರಿಗೆ ಮನೆ ಮಾತನ್ನು ಬಿಟ್ಟರೆ ಪ್ರೌಢ, ಗ್ರಾಂಥಿಕ, ಶಾಸ್ತ್ರೀಯ ಕನ್ನಡವು ಬರುವುದಿಲ್ಲ. ಕೇವಲ ಇತ್ತೀಚಿನ ಲಘುಕತೆ, ಕಾದಂಬರಿ, ಸಾಮಾಜಿಕ ನಾಟಕ, ತುಂಡುಪದ್ಯ, ಪತ್ರಿಕಾ ವರದಿಗಳಷ್ಟನ್ನು ಶಾಲೆ ಕಾಲೇಜುಗಳಲ್ಲಿ ಸ್ಯಾಂಪಲ್ ರೂಪದಲ್ಲಿ ಮೇಲಿಂದ ಮೇಲೆ ಓದಿದ್ದನ್ನು ಬಿಟ್ಟರೆ ಹೆಚ್ಚಿನ ಕನ್ನಡ ಪಾಂಡಿತ್ಯವನ್ನು (ವಿಶ್ವವಿದ್ಯಾಲಯದ ಹಲಕೆಲ ಕನ್ನಡ ವಿಶೇಷಾಭ್ಯಾಸಿಗಳೂ) ಇತ್ತೀಚೆಗೆ ಗಳಿಸುತ್ತ ಬರುವ ಸನ್ನಿವೇಶ ಉಳಿದಿಲ್ಲ. ಈ ಆತ್ಮಘಾತಕ ಪ್ರವೃತ್ತಿಗೆ **ಕನ್ನಡದ ಅಭಿಜಾತ ಚಂಪೂಸಾಹಿತ್ಯವನ್ನು** ಅಭ್ಯಸಿಸಲು ಬೇಕಾದ ಮಟ್ಟದ ಸಂಸ್ಕೃತ ವ್ಯುತ್ಪತ್ತಿಯನ್ನು ಕಡೆಗಣಿಸುತ್ತ ಬಂದದ್ದೇ ಕಾರಣ. ರಾತ್ರಿಕಂಡ ಭಾವಿಗೆ ಹಗಲು ಬೀಳುವ ಕನ್ನಡಿಗತನವು ನಾಚಿಕೆಗೇಡಿನದಲ್ಲವೇ ?

---

## ಬದು ಕಟ್ಟಲಾರದ ಬದುಕು

•

ನಗು ನಗುವಿನಲೆ ಅಲೆಯಲೂ—
ತಲೆಹಿಡುಕ ಬುದ್ಧಿ
ತಲೆ ಎತ್ತಿ ಸಿದ್ಧಿ—
ಇಲ್ಲದ, ಸದ್ದಾದ, ಮೈ
ದದ್ದಾದ ಬದುಕು ;
ಮಾತು ಮಾತಿನಲಿ ಮೈಮರೆತು
ಮಾತಿಗೇ ಕೈಮರವಾದ ಬದುಕು

ನೂರಾರು ಮಾತಿನಲಿ ಮರೆಯಾದ ಬದುಕು ;
ಅಲ್ಲಿ ಇಲ್ಲಿ ಹಂಗಿನಂಗಡಿ ತೆರೆದು
ವಂಚಿಸಿದ ಬದುಕು-ಸುತ್ತಮುತ್ತ
ನೀರು ನಿಂತು ಕೆಸರಾದ ಬದುಕು
ಬದು ಕಟ್ಟಲಾರದ ಬದುಕು,
ಎಲ್ಲದಕು.

•

**ದೊಡ್ಡರಂಗೇಗೌಡ**

# ಶ್ರವಣಬೆಳ್ಗೊಳ ಶಾಸನದಮೇಲೆ ರನ್ನನ ಪ್ರಭಾವ

■ ಎಂ. ಎಂ. ಕಲಬುರ್ಗಿ

ಭಟ್ಟನಾರಾಯಣ, ಭಾಸ, ಪಂಪ ಮೊದಲಾದ ಹಿಂದಣ ಕವಿಗಳಿಂದ ಪ್ರಭಾವಿತನಾದ ರನ್ನನ ಪ್ರಭಾವ ಮುದ್ರೆ ಮುಂದಣ ಕವಿಸಾಹಿತ್ಯ ಮತ್ತು ಶಾಸನ ಸಾಹಿತ್ಯಗಳ ಮೇಲೆ ನಿಚ್ಚಳವಾಗಿ ಮೂಡಿ ನಿಂತಿದೆ. ಈ ಅಂಶವನ್ನು ತೀ. ನಂ. ಶ್ರೀ. ಅವರು ಲಕ್ಕುಂಡಿ ಶಾಸನ ಮತ್ತು ಅಜಿತ ಪುರಾಣಗಳ ಹೋಲಿಕೆಯಿಂದ ತೋರಿಸಿಕೊಟ್ಟಿದ್ದು ಸರ್ವ ಶ್ರುತ. ಅಂತಹ ಇನ್ನೊಂದು ಪ್ರಯತ್ನ ಈ ಲೇಖನ.

ಶ್ರವಣಬೆಳ್ಗೊಳ ಜೈನರ ಒಂದು ಪುಣ್ಯಕ್ಷೇತ್ರ. ಇಲ್ಲಿಯ ಇಂದ್ರಗಿರಿ ರಾಜಮಹಾರಾಜರ, ಯತಿ-ಮಹಾಯತಿಗಳ ಕೀರ್ತಿ ಶಾಸನಗಳಿಂದ ಸಂದರ್ಶಕರ ರುಜು (ಸಹಿ) ಶಾಸನ ಗಳಿಂದ ನಿಬಿಡಗೊಂಡಿದೆ. ಈ ರುಜು ಶಾಸನಗಳ ಮಾಲಿ ಕೆಯಲ್ಲಿ 'ಶ್ರೀ ಕವಿರತ್ನ' ಎಂಬುದು ಒಂದು.

ರನ್ನನೇ ಸ್ವಹಸ್ತದಿಂದ ಬರೆದು ಕೊರೆಯಿಸಿರಬಹುದಾದ ಈ ಹೆಸರು ಆತನ ಬೆಳ್ಗೊಳ ಸಂದರ್ಶನದ ಗುರುತಾಗಿದ್ದರೆ, ಅದೇ ಬೆಟ್ಟದ ಮೇಲಣ ಬಾಹುಬಲಿ ಬಸದಿಯ ಸಮೀಪ ಸಾವಿಯಬ್ಬೆಯೆಂಬ ಮಹಾಸಾಧ್ವಿಯ ಯುದ್ಧಮರಣ ವನ್ನು ಉದ್ಘೋಷಿಸುತ್ತ ನಿಂತಿರುವ ಒಂದು ವೀರಗಲ್ಲು ಆತನ ಸಾಹಿತ್ಯ ಪ್ರಭಾವದ ದ್ಯೋತಕವಾಗಿದೆ.

ಆನೆಯ ಮೇಲೆ ಕುಳಿತು ಆಯುಧವನ್ನೆಸೆಯುತ್ತಿರುವ ವೈರಿಯನ್ನು ಕುದುರೆಯ ಮೇಲೆ ಕುಳಿತು ಎದುರಿಸುತ್ತಿರುವ ಸಾವಿಯಬ್ಬೆಯ ಚಿತ್ರದ ಕೆಳಗೆ-ಮೇಲೆ ಕೂಡಿ ೩೫ ಸಾಲು ಗಳಲ್ಲಿ ಬರೆಯಲಾದ ಈ ಶಾಸನದ ಮೂರು ಪದ್ಯಗಳನ್ನು ರನ್ನನ ಪದ್ಯಗಳ ಮಗ್ಗುಲಲ್ಲಿಟ್ಟು ನೋಡಬಹುದು :

೧. ಶ್ರೀಯುವತಿಗೆ ನಿಜವಿಜಯ | ಶ್ರೀಯುವತಿಯ
ಸವತಿಯಾಗೆ ರಿಪುನೃಪರಂ ಶೌ|
ರ್ಯಾವಷ್ಟಂಭದೆಗೆಲ್ದಜ | ಯಾವ ಸಥನ ಸಾಧ್ಯನಲ್ತೆ
ಸಾಹಸಭೀಮಂ |
(ಗ. ಯು ೪-೧)

ಶ್ರೀಯುವತಿಗೆ ನಿಜವಿಜಯ | ಶ್ರೀಯುವತಿಯ
ಸವತಿಯೆನಿಸಿ ರಣಮೂರ್ಖ ನೃಪಾ |
ವ್ಯಾಯದೊಳಾಯದ ಮೆಯ್ಗಲಿ | ಬಾಯಿಕನೆಂಬಂ
ನೆಗಟ್ತೆಯಂ ಪ್ರಕಟಿಸಿದನ್ |
(ಪ್ರಸ್ತುತ ಶಾಸನ)

ಈ ಎರಡು ಪದ್ಯಗಳಲ್ಲಿ ಮೊದಲಿನದು ಇರಿವ ಬೆಡಂಗನ, ಎರಡನೆಯದು ಸಾವಿಯಬ್ಬೆಯ ತಂದೆ ಬಾಯಿಕನ ಪರಾ ಕ್ರಮವನ್ನು ಕುರಿತುವಾಗಿವೆ. ಎರಡನೆಯದರ ಮೊದಲ ಸಾಲು ಗದಾಯುದ್ಧದ ಪ್ರಭಾವವನ್ನು ಎತ್ತಿ ಹೇಳುತ್ತದೆ.

೨. ಶ್ರಾವಕ-ಧರ್ಮದೊಳ್ ದೊರೆಯೆನಲ್ ಪೆಜರಿಲ್ಲೆನೆ
ಸಂದ ರೇವತೀ |
ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ
ಶೀಲದೊಳ್ |
ದೇವಕಿ ತಾನೆ ದಾನಗುಣದಿಂದೆ ಸುಲೋಚನೆ
ತಾನೆಯೆಂದು ಭ |
ವ್ಯಾವಳಿ ಮೆಚ್ಚಿ ಬಣ್ಣಿಪುದು ಭವ್ಯ ಮನೋರಥ
ಜನ್ಮ ಭೂಮಿಯಂ |
(ಅಜಿ. ೧-೫೩)

ಶ್ರಾವಕ ಧರ್ಮದೊಳ್ ದೊರೆಯೆನಲ್ ಪೆಜರಿಲ್ಲೆನೆ
ಸನ್ದರೇವತಿ |
ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ
ರೂಪಿನೊಳ್ |
ದೇವಕಿ ತಾನೆ ಪೆಂಪಿನೊಳರುಂಧತಿ-ತಾನೆ
ಜಿನೇಂದ್ರ ಭಕ್ತಿ ಸ|
ದ್ಭಾವದೆ ಸಾವಿಯಬ್ಬೆ ಜಿನ ಶಾಸನ ದೇವತೆ ತಾನೆ
ಕಾಣಿರೇ |
(ಪ್ರಸ್ತುತ-ಶಾಸನ)

ಅತ್ತಿಮಬ್ಬೆ ಸಾವಿಯಬ್ಬೆಯರ ಉದಾತ್ತ ವ್ಯಕ್ತಿತ್ವದ ಸಮುದಾಯ ಶೋಭೆಯನ್ನು ಬಿಡಿಸಿ ಹೇಳುವ ಈ ಎರಡು ಪದ್ಯಗಳಲ್ಲಿ ಪೂರ್ವಾರ್ಧ ಒಂದೇ ಆಗಿದ್ದು, ಇದು ಅಜಿತ ಪುರಾಣದ ಪ್ರಭಾವಕ್ಕೆ ನೇರ ನಿದರ್ಶನವೆನಿಸಿದೆ.

೩. ಈ ಶಾಸನ ಮುಗಿಯುವಲ್ಲಿ ಕೆಳಗಣ ದೋಷ ಯುಕ್ತ ಮತ್ತು ತ್ರುಟಿತ-ಬರವಣಿಗೆ ಕಂಡುಬರುತ್ತದೆ.

೨೪ — — ವೆತ್ತ
೨೫ — — ಯಬ್ಬೆ
೨೬ ಸಾಯಲೆನ್ದು
೨೭ ಪೆಂಡತಿಯ
೨೮ — — ವೊತ್ತ
೨೯ ಣ್ಣ ಳೊಗಳೆ
೩೦ ಪಲರುಂತೊ
೩೧ ಲಗಿದ ರಾಯ
೩೨ ದ ಚಲವು
೩೩ ಸಲ ಬಳಗಿ
೩೪ ಗನ್ದಿನಿಪ್ಪ
೩೫ ಣ್ಡತಿ-ಯಿನ್

ಇಲ್ಲಿ ಸಂದರ್ಭ ಬಲದಿಂದ ೨೫ನೆಯ ಚರಣದ ಎರಡು ಅಕ್ಷರಗಳನ್ನು ತುಂಬಿಕೊಂಡು [ಸಾವಿ]ಯಬ್ಬೆಯೆಂಬ ಪಾಠವನ್ನು ಸಿದ್ಧಗೊಳಿಸಬಹುದಾಗಿದೆ. ಆದರೆ ಮಿಕ್ಕ ಎರಡು ಒಡಕು (ಚರಣ. ೨೪-೨೮)ಗಳನ್ನು ತುಂಬುವುದು ಇಷ್ಟು ಸುಲಭವಲ್ಲ. ಇದಕ್ಕೆ ಅಜಿತ ಪುರಾಣವನ್ನೇ ಮೊರೆ ಹೊಗಬೇಕು. ಅಲ್ಲಿಯ-

ಕಲಿಯನೆ ನೆಗಟ್ದಳ್ ಕಸವರ | ಗಲಿಯನೆ
ಗುಣದಂಕ-ಕಾರ್ತಿ ಮೊನೆಯೊಳ್ ಮನೆಯೊಳ್ |
ಮೊಲೆವೆತ್ತ ತೈಲಜನನಿಯ | ಕೆಲದೊಳ್ ರಂಜಿಪರೆ
ಮಿಾಸೆವೊತ್ತಣ್ಣಂಗಳ್ |
(ಅಜಿ. ಪು, ೧-೬೫)

ಎಂಬ ಪದ್ಯವನ್ನು ನೆನೆದ ಮಾತ್ರಕ್ಕೆ ಆ ಎರಡು ಒಡಕುಗಳ ಅಕ್ಷರ ಕಣ್ಮುಂದೆ ಸುಳಿದು ನಿಲ್ಲುತ್ತವೆ. ಈಗ ಶಾಸನದ ನಷ್ಟಭಾಗವನ್ನು ತುಂಬಿಕೊಂಡು, ಅದನ್ನು ಹೀಗೆ ಕಂದಗೊಳಿಸಬಹುದು :—

[ಮೊಲೆ]ವೆತ್ತ [ಸಾವಿ] ಯಬ್ಬೆ ಸಾ |
ಯಲೆನ್ದು ಪೆಣ್ಡತಿಯೆ [ಮಿಾಸೆ] ವೊತ್ತಣ್ಣಳೊಗಳೆ |
ಪಲರುಂ ತೊಲಗಿದ ರಾಯದ |
ಚಲಮುಸಬಳಗಿಗನ್ದಿನಿಪ್ಪಣ್ಡತಿಯಿನ್ |

ಈ ಕಂದಪದ್ಯ ಪಾಠದೋಷ ಛಂದೋದೋಷಗಳಿಂದ ಕೂಡಿದ್ದು ಇದನ್ನು ಶುದ್ಧಗೊಳಿಸುವುದು ನನಗೆ ಸಾಧ್ಯವಾಗಲಿಲ್ಲ.

ಈವರೆಗಣ ವಿವೇಚನೆಯಿಂದ ಲಕ್ಕುಂಡಿ ಶಾಸನವನ್ನು ಬಿಟ್ಟರೆ ರನ್ನನಿಂದ ಅಧಿಕ ಪ್ರಭಾವಿತವಾದುದು ಈ ಶಾಸನವೆಂದು ತಿಳಿದು ಬರುತ್ತದೆ. ಆದರೆ ಅಲ್ಲಿ ಅಜಿತ ಪುರಾಣದ ಪದ್ಯಗಳನ್ನು ನೇರವಾಗಿ ಎತ್ತಿಕೊಂಡಿದ್ದರೆ ಇಲ್ಲಿ ಗದಾಯುದ್ಧ, ಅಜಿತ ಪುರಾಣಗಳ ಪದ್ಯಗಳನ್ನು ಸಂದರ್ಭಕ್ಕೆ ಉಚಿತವಾಗುವಂತೆ ವ್ಯತ್ಯಾಸಗೊಳಿಸಿಕೊಳ್ಳಲಾಗಿದೆ.*

ಈ ಶಾಸನದಲ್ಲಿ ಮಿತಿ ನಿರ್ದೇಶನವಿಲ್ಲ. ಅಕ್ಷರ ಸ್ವರೂಪವನ್ನನುಲಕ್ಷಿಸಿ ಸಂಪಾದಕರು ಇದರ ಕಾಲ ಕ್ರಿ.ಶ. ೯೫೦ ಎಂದು ಊಹಿಸಿದ್ದಾರೆ. ಅಜಿತ ಪುರಾಣ ರಚನೆಯ ಕಾಲ ಕ್ರಿ. ಶ. ೯೯೩ ಎಂದು ರನ್ನನೇ ಸ್ಪಷ್ಟವಾಗಿ ಹೇಳಿರುವುದರಿಂದ ಆ ಪುರಾಣದ ಪ್ರಭಾವಕ್ಕೊಳಗಾದ ಈ ಶಾಸನದ ಮಿತಿ ಕ್ರಿ. ಶ. ೯೫೦ ಅಲ್ಲ. ಕ್ರಿ. ಶ. ೯೯೩ ತರುವಾಯವೆಂದು ಈಗ ಭಾವಿಸಬೇಕಾಗುತ್ತದೆ.

---

*ರನ್ನನ ಪದ್ಯಗಳನ್ನು ಹೋಲುವ ಇನ್ನು ಕೆಲವು ಶಾಸನೋಕ್ತ ವಾಕ್ಯ, ಪದ್ಯಗಳು ಕೆಳಗಿನಂತಿವೆ:

೧. ಜವನುಂಡು ಕಾಱಿದವೊಲಾಯ್ತಿತ್ತಂ
ಕುರುಕ್ಷೇತ್ರದೊಳ್ (ಗ ಯು. ೩-೨)
" ಜವನುಂಡೊಯ್ಯನೆ ಕಾಱಿದನ್ತೆ "
(E. C. viii-ii ಸೊರಬ ೩-.೧ ಮತ್ತು ೧೨.

೨. ಗುಣಕ್ಕೆ ಮಚ್ಚರ ಮುಂಟೆ (ಅಜಿ. ಪು. ೧೨-೧೪೦)
ಗುಣಕೆ ಮಚ್ಚರ ಮುಂಟೆ (E. C. vii. p. 20
ಮತ್ತು M.A.R. 1938 p. 98)

೩. ಅರೆಮುಗಿದಿರ್ದ ಕಣ್ಗಳುಮಲರ್ದಮೊಗಂ
(ಗ. ಯು ೪-೫೪)
ಅರೆ ಮುಗುಳ್ದಿರ್ದ ಕಣ್ಮಲರ್ಗಳೋದುವ ಪಂಚಪದಂ
(E. C. II)

೪. ಗುರುಭಾರಕ್ಕಿರಿವಾಳ್ ರಣಕ್ಕೆ ತುಳಿಲಾಳ್ ಕಟ್ವಾಯ
ದೊಳ್ ಮೇಳದಾಳ್ |
ಪರಿಹಾಸಕ್ಕೆನಿಸಿರ್ದನೆಂತು ಮುಟಿವಂ ದುರ್ಯೋಧನಂ
ಕರ್ಣನಂ |
(ಗ. ಯು ೫-೩೫)
ಅಣುಗಾಳ್ ಕಾರ್ಯದ ಶೌರ್ಯದಾಳ್ ವಿಜಯದಾಳ್
ಚಾಳುಕ್ಯ ರಾಜ್ಯಕ್ಕೆ ತಾ |
ರಣಮಾದಾಳ್ ತುಳಿಲಾಳ್ತನಕ್ಕೆ ನೆಱಿದಾಳ್
ಕಟ್ವಾಯದಾಳ್ ಮಿಕ್ಕ ಮ |
ನ್ನಣೆಯಾಳ್ ಮಾಂತನದಾಳ್ ನೆಗಳ್ತೆವಡೆದಾಳ್
ವಿಕ್ರಾಂತದಾಳ್ ಮೇಳದಾಳ್ |
ರಣದಾಳಾಳ್ದನ ನಚ್ಚುವಾವೆಡೆಯೊಳಂ ವಿಶ್ವಾಸದಾಳ್
ಲಕ್ಷ್ಮಣಂ
(ಶಾಸನ ಪದ್ಯಮಂಜರಿ. ಪು. ೧೭)

# ಪರಡು - ಒಂದು ಶಬ್ದವಿವೇಚನೆ*

■ ಎ. ವಿ. ನಾವಡ

'ಪರಡು' ಎಂಬ ಪದ ಮೊದಲು ನನ್ನ ಕಣ್ಣಿಗೆ ಬಿದ್ದುದು ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ. ಈ ಪದವು ನಾಮರೂಪವಾಗಿ[1] ಪಂಪ ಭಾರತ (ಆಶ್ವಾಸ ೧೧. ಪದ್ಯ ೧೩೬)ದಲ್ಲಿ ಕಾಲಿನ ಮಣಿಗಂಟು (ಗುಲ್ಫ) ಎಂಬರ್ಥದಲ್ಲಿಯೂ ಆಶ್ವಾಸ ೯ ವಚನ ೯೫ರಲ್ಲಿ ಆಖ್ಯಾತರೂಪವಾಗಿಯೂ ("....ದಕ್ಷಿಣ ಚರಣದೊಳ್ ನೆಲನಂ **ಪರಡಿ** ಗಂಭೀರ ನಿನಾದದಿಂ ಹೇಷಿತಂಗೆಯ್ವ ವಿಜಯಹಯಮುಂ ....") ಬಳಕೆಯಾಗಿದೆ. ಪಂಪ ಭಾರತ ನಿಘಂಟುವಿನಲ್ಲಿ ಪರಡು ಎಂಬುದಕ್ಕೆ 'ಕಾಲಿನ ಹರಡು' ಗುಲ್ಫ (ಪುಟ ೪೬೩) ಎಂದಷ್ಟೇ ಅರ್ಥ ಕೊಡಲಾಗಿದೆ. ಎಂದರೆ ಆಖ್ಯಾತರೂಪದ 'ಪರಡಿ' ಎಂಬ ಪದಕ್ಕೆ ಪಂಪಭಾರತ ನಿಘಂಟುಕಾರರು ಅರ್ಥ ಕೊಟ್ಟಿಲ್ಲವೆಂದಾಯಿತು. ಕ್ರಿ. ಶ. ೧೨೬೫ರ ಕೇಶಿರಾಜನು ತನ್ನ ಶಬ್ದಮಣಿ ದರ್ಪಣದ ಧಾತು ಪ್ರಕರಣದಲ್ಲಿ ಪರಡು ಎಂಬ ಪದವೇ ಧ್ವನಿಪರಿವರ್ತನೆಗೊಂಡು ಹರಡು[2] ಎಂದಾದ ಧಾತುವಿಗೆ "ಅಂಗುಲಿಖನನೇ, ಪ್ರಸಾರಣೇ, ಗುಲ್ಫೇಚ" ಎಂದು ಅರ್ಥ ಕೊಟ್ಟಿರುವುದರಿಂದ ಪಂಪಭಾರತದ ಪರಡು ಎಂಬ ಪದದ ಅಪೂರ್ಣ ಕ್ರಿಯಾರೂಪವಾದ 'ಪರಡಿ' ಎಂಬ ಪದಕ್ಕೆ 'ನೆಲವನ್ನು ಕೆರೆದು' ಎಂದು ಅರ್ಥವಿಸಬಹುದಷ್ಟೆ! ಇಲ್ಲಿ ಒಂದು ವಿಷಯ ಸ್ಪಷ್ಟವಾಗುತ್ತದೆ: ಕೇಶಿರಾಜನ ಕಾಲಕ್ಕಾಗಲೇ ಪಕಾರ> ಹಕಾರ ಪ್ರಕ್ರಿಯೆ ಸಂಪೂರ್ಣಗೊಂಡಿದೆ ಎಂಬುದು.

ರೆ. ಕಿಟ್ಟೆಲ್ಲರು ತಮ್ಮ ನಿಘಂಟುವಿನಲ್ಲಿ ಪರಡು ಪದಕ್ಕೆ ಈ ಕೆಳಗಿನ ಅರ್ಥಗಳನ್ನು ಇತ್ತಿದ್ದಾರೆ.

ಪರಡು$_1$=To scrape together with the hand or hoe and take completely away ಪರಡು$_2$= ಅರಡು, ಹರಡು to spread out, to extend ಪರಡು$_3$= to scratch with fingers or nails, to claw

ಪರಡು$_4$=The ankle, ಗುಲ್ಫ

ಈ ಪರಡು ಪದಕ್ಕೆ ಮಂಗಳೂರು ಪರಿಸರದಲ್ಲಿರುವ ಇನ್ನೊಂದು ಅರ್ಥವನ್ನು ನೋಡೋಣ. ಇಲ್ಲಿನ ಕನ್ನಡ ತುಳು ಎರಡರಲ್ಲೂ ದೇಸಿಯಾಗಿರುವ ಪರಡು ಎಂಬ ಪದಕ್ಕೆ to grope, ತಡಕಾಡು, ಕತ್ತಲೆಯಲ್ಲಿ ಒಂದು ವಸ್ತುವು ಕಾಣದಾದಾಗ ಕೈಕಾಲುಗಳಿಂದ ಅದನ್ನು ಹುಡುಕುವುದು ಎಂಬರ್ಥವಿದೆ. ಪರಡು ಎಂಬ ಪದಕ್ಕೆ ಇರುವ ಈ ಅರ್ಥವನ್ನು ಪ್ರಸ್ತಾಪಿಸುತ್ತಾ ಶ್ರೀ ಮುಳಿಯ ತಿಮ್ಮಪ್ಪಯ್ಯನವರು "(ಪರಡು ಎಂಬ ಪದದ) ಪಕಾರಕ್ಕೆ ಬದಲಾಗಿ 'ಹ' ಕಾರವನ್ನೆಸಗಿ 'ಅವನು ಹರಡಿದನು' ಎಂದರೆ ನಮ್ಮಲ್ಲಿ ಅರ್ಥವ್ಯಕ್ತಿಯಾಗಲಾರದು. ಯಾವುದೋ ವಿಶಿಷ್ಟ ವಸ್ತುವನ್ನು ಕೈಯಿಂದ ಹರವಿದನು ಎಂದು ಅರ್ಥಾಂತರವೇ ಆಗುವುದು. ಆದುದರಿಂದ ಈ ಪರಡು ಧಾತುವಿನ ಆದ್ಯಕ್ಷರವು ಶಬ್ದಮಣಿದರ್ಪಣಕಾರನೆನ್ನುವ ಹ-ಪ ಭೇದವಿಶಿಷ್ಟವಾದ ಪಕಾರವೆಂದೂ ಪಲ್-ಹಲ್ಲು; ಪಾಲ್-ಹಾಲು ಮೊದಲಾದುವುಗಳಲ್ಲಿ ತೋರಿರುವಂತೆ ಅಭೇದದ ಪಕಾರವಲ್ಲವೆಂದೂ ಭಾವಿಸಿಕೊಳ್ಳಬೇಕು" ಎನ್ನುತ್ತಾರೆ.[3]

ಒಟ್ಟಿನಲ್ಲಿ ಶ್ರೀ ಮುಳಿಯ ತಿಮ್ಮಪ್ಪಯ್ಯನವರು ಪರಡು (=ತಡಕಾಡು, to grope) ಎಂಬ ಪಕಾರಾದಿ ಪದವು ಹಕಾರವಾಗಿ ಪರಿವರ್ತನೆಗೊಂಡು ಹರಡು ಆದಾಗ ಅರ್ಥ

---

* ಕನ್ನಡದ ಪಕಾರಾದಿ ಪದಗಳ ಬಗೆಗೆ ನನ್ನಲ್ಲಿ ಕುತೂಹಲ ಮೂಡಿಸಿದ ಪೂನಾ ವಿಶ್ವವಿದ್ಯಾನಿಲಯದ ಡಾ. ಡಿ. ಎನ್. ಶಂಕರ ಭಟ್ಟರಿಗೆ ನಾನು ಕೃತಜ್ಞನಾಗಿದ್ದೇನೆ.

೧. ಅಡಿತೊಡೆ ಪೊರ್ತುಬಿಂ ತೆಗಲೆಕ್ಕೆಕಣಗಾಲ್
ಕೊರಲೆಂಬಿವುಂ ಪೆರಲ್ |
ನಡುವುರ ಬೆನ್ ಬಸಿಜ್ ತೊಳಕು ಕರ್ಚರೆ
ಮುಯ್ವುಮುಸುಂಬು ಮೂಗು ಪೆ |
ರ್ದೊಡೆ ಕಟಿ ಮುಂಮುಡಂ ಪರಡು ಸಂದಿನೊಸಲ್
ಪಣೆಕಣ್ ಕದಂಪಿವೆಂ |
ಬೆಡೆಯನೆ ನಟ್ಟುವುರ್ಚಿದುವು ನೇರ್ದುವು ಸೀಳ್ದುವು
ಪಾರ್ಥನಂಬುಗಳ್ ||
ವಿ. ವಿಜಯ ಆ. ೧೧ ಪ. ೧೩೬

೨. ಕೇಶಿರಾಜ. ಶಬ್ದಮಣಿದರ್ಪಣ ಸಂ. ನರಸಿಂಹಾಚಾರ್, ಡಿ. ಎಲ್. ದ್ವಿತೀಯ ಮುದ್ರಣ. (ಶಾರದಾ ಮಂದಿರ, ಮೈಸೂರು) ೧೯೬೪ ಪುಟ ೨೮೮.

೩. ಮುಳಿಯ ತಿಮ್ಮಪ್ಪಯ್ಯ. ನಾಡೋಜ ಪಂಪ (೧೯೩೮) ಪುಟ ೨೫೧.

ದಲ್ಲಿ ಭೇದವನ್ನು ಒಳಗೊಳ್ಳುತ್ತದೆ ಎಂದು ಹೇಳಿದಂತಾಯಿತು.

ಇಲ್ಲಿ ನನ್ನ ಅಭಿಪ್ರಾಯವೇನೆಂದರೆ ಪರಡು ಎಂಬ ಪದದ ಅಂಗುಲಿಖನನ ಎಂಬರ್ಥವೇ ಕೊಂಚ ಅರ್ಥಾಂತರ ಅಥವಾ ಅರ್ಥ ವಿಸ್ತಾರ ಹೊಂದಿ ತುಳುನಾಡಿನ ಕನ್ನಡ ತುಳುದೇಸಿ ನುಡಿಗಳಲ್ಲಿ ತಡಕಾಡು ಎಂದಾಯಿತು. ತಡಕಾಡು ಎಂದರೆ ಕತ್ತಲೆಯಲ್ಲಿ ವಸ್ತುವು ಗೋಚರವಾಗದಿರುವಾಗ ಕಾಲಿನ, ಕೈಯ ಬೆರಳುಗಳ ಸಹಾಯದಿಂದ ವಸ್ತುವನ್ನು ಮುಟ್ಟಿ ಹುಡುಕುವುದಷ್ಟೆ! ಅಂದರೆ ಇದು ಒಂದು ಬಗೆಯ ಅಂಗುಲಿಖನನ.

ಇನ್ನೊಂದು ವಿಚಾರ: ಪಂಪಭಾರತದಲ್ಲಿ ವಿಕ್ರಮಾರ್ಜುನನ ಹಯವು ತನ್ನಗೊರಸಿನಿಂದ ನೆಲವನ್ನು 'ಪರಡಿ' ಎಂದು ಪ್ರಯೋಗಿತವಾದ ಪದವು ಹರಡು ಎಂಬ ರೂಪದಲ್ಲಿ ಮಂಗಳೂರು ಪರಿಸರದ ಕೋಟ ಬ್ರಾಹ್ಮಣರ[೪] ಆಡುನುಡಿಯಲ್ಲಿ ಹೆಚ್ಚು ಆಳಕ್ಕೆಹೋಗದೆ ಮೇಲು ಮೇಲು ಆಗೆಯು[೫] ಎಂಬರ್ಥ[೬]ವನ್ನು ಪಡೆದಿದೆ. ಬಹುಶಃ ಪರಡು ಎಂದರೆ ಬೆರಳಿನಿಂದ ಕೆದಕು (ಕೆರೆಯು) ಎಂದಿದ್ದುದು ಹಕಾರಾದಿಯಾಗಿ ಮಾರ್ಪಟ್ಟಾಗ ಬರಿಯ ಬೆರಳಿನಿಂದ ಕೆದಕುವುದು ಎಂದಷ್ಟೇ ಅಲ್ಲದೆ ಮಣ್ಣು ಬಿರುಸಾಗಿದ್ದಸಂದರ್ಭದಲ್ಲಿಕೈಯ ಬೆರಳುಗಳಿಂದ ಅಸಮರ್ಥವಾದಾಗ ಚಿಕ್ಕ ಆಯುಧದ ಸಹಾಯದಿಂದ ಮಣ್ಣನ್ನು ಕೆದಕುವುದು ಅಥವಾ ಮೇಲು ಮೇಲು ಅಗೆಯುವುದು ಎಂಬ ಅರ್ಥವನ್ನು ಪಡೆದಿದೆ. ಇಷ್ಟೇ ಅಲ್ಲದೆ ಈ ಆಡುನುಡಿಯಲ್ಲಿ ಹರಡು=ವಿಸ್ತರಿಸು ಎಂಬರ್ಥದಲ್ಲಿಯೂ ಪರಡು=ತಡಕಾಡು ಎಂಬರ್ಥದಲ್ಲಿಯೂ ಬಳಕೆಯಲ್ಲಿದೆ.

ಪರಡು (>ಹರಡು) ಎಂಬ ಪದಕ್ಕೆ ಸಂಬಂಧಿಯಾಗಿರಬಹುದಾದ **ಹೆರೆ** (ತುಳು. ಪೆರೆ) ಎಂಬ ಪದವು ಪರಡು ಪದದೊಂದಿಗೆ ಅರ್ಥ ಸಾಮೀಪ್ಯವನ್ನು ಹೊಂದಿದೆ. 'ಹೆರೆ' ಎಂಬ ಪದ ಈ ಆಡುನುಡಿಯಲ್ಲಿ 'ಹೆರೆಮಣೆಯಿಂದ ತೆಂಗಿನಕಾಯಿಯನ್ನು **ಹೆರೆಯುವುದು**" (=ತುರಿಮಣೆಯಿಂದ ತೆಂಗಿನಕಾಯನ್ನು ತುರಿಯುವುದು), ಇಲಿಯುಯಾವುದಾದರೂ ಆಹಾರ ಪದಾರ್ಥವನ್ನು ತನ್ನ ಹಲ್ಲುಗಳಿಂದ **ಹೆರೆ**ಯುವುದು ಮುಂತಾದ ಸಂದರ್ಭಗಳಲ್ಲಿ ಪ್ರಯೋಗದಲ್ಲಿದೆ. ಒಂದು ವಸ್ತುವಿನ ಮೇಲಿನ ಪದರನ್ನು ಅಥವಾ ಸಿಪ್ಪೆಯನ್ನು ತೆಗೆಯುವುದಕ್ಕೆ ಹೆರಸು (ಪ್ರೇರಣಾರ್ಥಕವಲ್ಲ) ವುದು ಎಂದು ಮಂಗಳೂರು ಕನ್ನಡದಲ್ಲಿ ಹೇಳಲಾಗುತ್ತಿದೆ. ಹಾಸನ, ಅರಕಲಗೂಡು ತಾಲೂಕಿನ ಸುತ್ತುಮುತ್ತಲಿನ ಆಡುನುಡಿಯಲ್ಲಿ ಪರೆ ಎಂಬ ಪದವು ಉಗುರಿನಿಂದ ಅಥವಾ ಬೆರಳಿನಿಂದ ಕೆರಸುವುದು ಎಂಬರ್ಥದಲ್ಲಿ ಬಳಕೆಯಲ್ಲಿದೆ. ನೆಲದ ಮೇಲ್ಭಾಗವನ್ನು ಮಾತ್ರ ಅಗೆಯಲು ಉಪಯೋಗಿಸುವ ಸವೆದ ಚಿಕ್ಕ ಗುದ್ದಲಿಯನ್ನು ಪಂಟೆ (ಪರಟ್) ಗುದ್ದಲಿ ಎಂದೂ ಹೇಳಲಾಗುತ್ತಿದೆ.[೭] ಪರಡು ಪದದ ಪಳೆಯುಳಿಕೆಗಳು ಎನ್ನಬಹುದಾದ ಈ ರೂಪಗಳಲ್ಲಿ ಪ>ಹ ಪ್ರಕ್ರಿಯೆ ಆ ಪರಿಸರದಲ್ಲಿ ನಡೆದಿಲ್ಲ ಎಂದು ತೋರುತ್ತದೆ.

ಅಂತೂ ಕೊನೆಗೆ ಇಷ್ಟು ನಿರ್ಧಾರಕ್ಕೆ ಬರಬಹುದು:

ಪರಡು=ಅಂಗುಲಿಖನನ=ತಡಕಾಡು ಎಂಬರ್ಥವನ್ನು ಒಳಗೊಂಡಿದ್ದ ಪದವು ಧ್ವನಿಪರಿವರ್ತನೆ ಹೊಂದಿ ಹರಡು ಎಂಬ ರೂಪವನ್ನು ತಾಳಿ, ಹರಡು=ಅಂಗುಲಿಖನನ (ಬೆರಳಿನಿಂದ ಕೆದಕು)=ಹೆಚ್ಚು ಆಳಕ್ಕೆ ಹೋಗದೆ ಮೇಲುಮೇಲಕ್ಕೆ ಅಗೆಯು ಎಂದು ಪ್ರಯೋಗಿತವಾಗುತ್ತಿರುವುದೇ ಹೊರತು ಇಲ್ಲಿಎಲ್ಲೂ ಅರ್ಥಾಂತರವಾದಂತೆ ತೋರುತ್ತಿಲ್ಲ. ಆದುದರಿಂದ ಪರಡು ಎನ್ನುವ ಪದದ ಆದಿಯ ಪಕಾರವು ಪಾಲ್>ಹಾಲು, ಪುಲ್>ಹುಲ್ಲು ಮುಂತಾದ ಪದಗಳಲ್ಲಿರುವ ಅಭೇದದ ಪಕಾರವೆಂದೂ, ಶ್ರೀ ಮುಳಿಯ ತಿಮ್ಮಪ್ಪಯ್ಯನವರು ಹೇಳುವಂತೆ ಹ-ಪ ಭೇದ ವಿಶಿಷ್ಟವಾದ ಪಕಾರ ಅಲ್ಲ ಎಂದೂ ಹೇಳಬಹುದು.

ಪರಡು ಪದದ ಅರ್ಥ ಸಾಮರ್ಥ್ಯವನ್ನು ಹೀಗೆ ತೋರಿಸಬಹುದು.

ಪರಡು=ಅಂಗುಲಿಖನನ> ತಡಕಾಡು, ಗುಲ್ಫ ವಿಸ್ತಾರಿಸು

| | | |
|---|---|---|
| ಹರಡು= (ವಿಸ್ತರಿಸು) | ಹರಡು= (ಗುಲ್ಫ) | ಹರಡು=(ಬೆರಳಿನಿಂದ ಕೆದಕು, ಮೇಲು ಮೇಲು ಅಗೆಯು-ಕೋಟಗನ್ನಡ) |

೪. ಇದೇ ಲೇಖಕನ 'ಮಂಗಳೂರು ಪರಿಸರದ ಕೋಟ ಬ್ರಾಹ್ಮಣರ ಆಡುನುಡಿ' ಎಂಬ ಲೇಖನ ಇನ್ನೂ ಪ್ರಕಟವಾಗಿಲ್ಲ.

೫. ಶುಂಠಿ, ಗೆಣಸು ಮುಂತಾದ ಗಡ್ಡೆ ಪದಾರ್ಥಗಳನ್ನು ಬೆರಳುಗಳಿಂದ, ಅವಶ್ಯಬಿದ್ದರೆ ಆಯುಧದ ಸಹಾಯದಿಂದ ಅಗೆದು ತೆಗೆಯುವುದಕ್ಕೆ ಹರಡುವುದು ಎನ್ನಲಾಗುತ್ತದೆ. ಹರಡು ಎಂಬುದು ತುಳುವಿನ 'ಒಕ್ಕುನೆ' ಎಂಬುದರ ಸಂವಾದಿ ಪದ.

೬. ಇದೇ ಲೇಖನದಲ್ಲಿ ಕಿಟ್ಟೆಲ್ಲರು ಪರಡು ಎಂಬ ಪದಕ್ಕೆ ಕೊಟ್ಟ ಮೊದಲ ಅರ್ಥ ನೋಡಿರಿ.

೭. ಇದನ್ನು ನನಗೆ ತಿಳಿಸಿದವರು ನನ್ನ ಪೂಜ್ಯ ಗುರುಗಳಾದ ಶ್ರೀ ಎಚ್. ಜೆ. ಲಕ್ಕಪ್ಪಗೌಡರು ಅವರಿಗೆ ಕೃತಜ್ಞನಾಗಿದ್ದೇನೆ.

# ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ - ಒಂದು ಸಮೀಕ್ಷೆ

■ ಕೆ. ಎಸ್. ಗುರುಬಸವೇಗೌಡ

ಡಾ|| ಡಿ. ಎನ್. ಶಂಕರಭಟ್ಟರ "ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ" ಆಧುನಿಕ ಭಾಷಾ ವಿಜ್ಞಾನವನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದ ಒಂದು ಉತ್ತಮಗ್ರಂಥ.

ಭಾಷಾವಿಜ್ಞಾನದಲ್ಲಿ ಉಚ್ಚಮಟ್ಟದ ತರಪೇತಿಯನ್ನು ಪಡೆದು, ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಭಾಷಾ ವಿಜ್ಞಾನದ ರೀಡರ್ ಆಗಿರುವ ಡಾ|| ಭಟ್ಟರು ಟಿಬೆಟೋ-ಬರ್ಮನ್ ಭಾಷೆಗಳ ಮೇಲೂ ಸಾಕಷ್ಟು ಸಂಶೋಧನೆಯನ್ನು ನಡೆಸಿದ್ದಾರೆ; ದ್ರಾವಿಡ ಭಾಷೆಗಳಾದ ತುಳು, ಕೊರಗಿ ಮತ್ತು ಹವ್ಯಕ ಕನ್ನಡದ ಮೇಲೆ ವಿವರಣಾತ್ಮಕ ವ್ಯಾಕರಣವನ್ನು ರಚಿಸಿದ್ದಾರೆ; ಕನ್ನಡದ ಹಲವಾರು ಉಪಭಾಷೆಗಳ ಮೇಲೆ ಸಂಶೋಧನ ಲೇಖನಗಳನ್ನು ಬರೆದಿದ್ದಾರೆ. ದ್ರಾವಿಡ ಭಾಷೆಗಳ ಮೇಲೆ ತೌಲನಿಕ ಅಭ್ಯಾಸ ಮಾಡಿದ ಕೆಲವೇ ಭಾಷಾವಿಜ್ಞಾನಿಗಳಲ್ಲಿ ಒಬ್ಬರಾದ ಡಾ|| ಭಟ್ಟರಂಥ ವಿದ್ವಾಂಸರಿಂದ ರಚಿತವಾದ ಈ ಗ್ರಂಥದಲ್ಲಿ ಕನ್ನಡ ಭಾಷೆಯ ಚಾರಿತ್ರಿಕ ಬೆಳವಣಿಗೆಗೆ ಸಂಬಂಧಪಟ್ಟ ವಿಚಾರಗಳ ಅಧಿಕೃತ ವಿಶ್ಲೇಷಣೆಯನ್ನು ನಿರೀಕ್ಷಿಸುವುದು ಸಹಜವೇ ಆಗಿದೆ.

ಈ ಗ್ರಂಥವನ್ನು ಅವರು ಎರಡು ಭಾಗವಾಗಿ ವಿಂಗಡಿಸಿಕೊಂಡು ಕನ್ನಡ ಭಾಷೆ, ಮೂಲ ದ್ರಾವಿಡದಿಂದ ಬೇರ್ಪಟ್ಟು ಸ್ವತಂತ್ರ ಭಾಷೆಯೆನ್ನಿಸಿಕೊಳ್ಳುವವರೆಗೆ ನಡೆದ ಪರಿವರ್ತನೆಯನ್ನು ಮೊದಲ ಭಾಗದಲ್ಲಿಯೂ: ಕನ್ನಡ ಭಾಷೆ ಪ್ರತ್ಯೇಕವಾದಂದಿನಿಂದ ಇಂದಿನವರೆಗೆ ನಡೆದ ಬದಲಾವಣೆಯನ್ನು ಎರಡನೆಯ ಭಾಗದಲ್ಲಿಯೂ ಸ್ಥೂಲವಾಗಿ ವಿವೇಚಿಸಿದ್ದಾರೆ.

ಪೀಠಿಕಾ ಭಾಗದಲ್ಲಿ (೧-೧೦) ಭಾಷಾ ಬಾಂಧವ್ಯ, ದ್ರಾವಿಡರು ವಲಸೆ ಬಂದುದು, ಆದಿವಾಸಿಗಳು, ಟಿಬೆಟೋ-ಬರ್ಮನ್ ಭಾಷೆಗಳು, ಮುಂಡ ಭಾಷೆಗಳು, ದ್ರಾವಿಡ ಭಾಷೆಗಳು, ಆರ್ಯ ಭಾಷೆಗಳು ಮತ್ತು ಭಾಷಾಸಂಕರ ಎಂದು ಎಂಟು ವಿಭಾಗವಾಗಿಮಾಡಿಕೊಂಡಿದ್ದಾರೆ; ಭರತಖಂಡದಲ್ಲಿರುವ ಭಾಷಾ ಕುಟುಂಬಗಳ ಸೂಕ್ಷ್ಮಪರಿಚಯವನ್ನು ಮಾಡಿಕೊಟ್ಟಿದ್ದಾರೆ; ಅಲ್ಲದೆ ದ್ರಾವಿಡರು ಭಾರತಕ್ಕೆ ವಲಸೆ ಬರುವ ಮುನ್ನ ಇಲ್ಲಿದ್ದ ಆದಿವಾಸಿಗಳು ಯಾರು ಎಂಬ ವಿಚಾರದ ಬಗ್ಗೆ ಸಾಕಷ್ಟು ಚರ್ಚೆ ನಡೆಸಿದ್ದಾರೆ; ದ್ರಾವಿಡ ಭಾಷೆಗಳು ಎಷ್ಟು? ಅವು ನಮ್ಮ ದೇಶದ ಯಾವ ಯಾವ ಭಾಗಗಳಲ್ಲಿ ಹರಡಿಕೊಂಡಿವೆ? ಎಂಬ ವಿಚಾರವನ್ನು ಸಾಕಷ್ಟು ಚರ್ಚಿಸಿದ್ದಾರೆ.

ಮೂಲದ್ರಾವಿಡದಿಂದ ಕನ್ನಡಕ್ಕೆ (೧೧-೪೬):— ಈ ಭಾಗದಲ್ಲಿ ಕನ್ನಡ ಭಾಷೆಯನ್ನು ಇತರ ದ್ರಾವಿಡ ಭಾಷೆಗಳೊಡನೆ ಹೋಲಿಸಿ, ಅವುಗಳೊಳಗಿರುವ ಸಾಮ್ಯ ವೈಷಮ್ಯಗಳನ್ನು ತೋರಿಸಲು ಪ್ರಯತ್ನಿಸಿದ್ದಾರೆ. ದ್ರಾವಿಡ ಕುಟುಂಬಕ್ಕೆ ಸೇರಿದ ಭಾಷೆಗಳ ಮೇಲೆ ಸಾಕಷ್ಟು ಕೆಲಸವಾಗಿಲ್ಲದ ಕಾರಣ... "ಮೂಲದ್ರಾವಿಡದ ಸ್ವರೂಪವು ಹೀಗೆಯೇ ಇರಬೇಕೆಂಬ ವಿಷಯದಲ್ಲಿ ವಿದ್ವಾಂಸರಿನ್ನೂ ಒಮ್ಮತಕ್ಕೆ ಬಂದಿಲ್ಲ ಮತ್ತು ಭಾಷೆಯೆನಿಸುವುದಕ್ಕೆ ಬೇಕಾಗುವಷ್ಟು ವ್ಯಾಕರಣಾಂಶಗಳನ್ನಿನ್ನೂ ಈ ಮೂಲಭಾಷೆಗೆ ಕಲ್ಪಿಸಿಕೊಟ್ಟಾಗಿಲ್ಲ" ಎಂದು ಗ್ರಂಥಕರ್ತರೆ ಹೇಳಿರುವುದರಂದ (ಪು. ೧೩) ಈಗ ಲಭ್ಯವಾಗಿರುವ ಸಂಶೋಧನಾ ಸಾಮಗ್ರಿಯ ನೆರವಿನಿಂದ ಕನ್ನಡ ಭಾಷೆಯನ್ನು ಮೂಲ ದ್ರಾವಿಡಕ್ಕೆ ಕಲ್ಪಿಸಲಾಗಿರುವಂತಹ ಸ್ವರಗಳು (೧೪-೧೯) ವ್ಯಂಜನಗಳು (೨೦-೩೪) ಮತ್ತು ವ್ಯಾಕರಣ (೩೫-೪೬) ಇವುಗಳಲ್ಲಿ ಕಂಡುಬರುವ ಸಾಮ್ಯ-ವೈಷಮ್ಯಗಳನ್ನು ತೌಲನಿಕವಾಗಿ ವಿವೇಚಿಸಿದ್ದಾರೆ.

ಇ, ಎ ಮತ್ತು ಉ, ಒ ಸ್ವರಗಳಲ್ಲಿ ಆಗುವ ಬದಲಾವಣೆಗಳನ್ನು ಬಹಳ ಸಮರ್ಪಕವಾಗಿ ಹೇಳಿದ್ದಾರೆ.

ಮೂಲದ್ರಾವಿಡದ ವ್ಯಂಜನಗಳ ಬದಲಾವಣೆ ಕನ್ನಡದಲ್ಲಿ ಮತ್ತು ಇತರ ಭಾಷೆಗಳಲ್ಲಿ ಯಾವ ರೀತಿಯಾಗಿದೆ ಎಂಬುದನ್ನು ಸೂಕ್ಷ್ಮವಾಗಿ ವಿವರಿಸಿ, ಕನ್ನಡ ಭಾಷೆಗೆ ದ್ರಾವಿಡೇತರ ಭಾಷೆಗಳಿಂದ ಬಂದ ವ್ಯಂಜನಗಳನ್ನು ತಿಳಿಸಿದ್ದಾರೆ.

ಪುಟ ೨೪ರಲ್ಲಿ... "ಮೂಲದ್ರಾವಿಡ ಶಬ್ದಗಳ ಆದಿಯಲ್ಲಿ ಬರುವ... ಚಕಾರವು ಚ-ಜಗಳಾದುದಕ್ಕಿಂತಲೂ ಸಕಾರವಾದುದೇ ಜಾಸ್ತಿ" ಎಂದು ಹೇಳಿ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ. ಆದರೆ ಚಕಾರವು ಕೆಲವು ಭಾಷೆ

ಗಳಲ್ಲಿ ತಕಾರವೂ ಆಗಿದೆ ಎಂಬ ಅಂಶವನ್ನು ಗಮನಿಸಬಹುದಾಗಿತ್ತು. ಉದಾಹರಣೆಗೆ ತಮಿಳಿನ **ಚಿಕ್ಕು** ತೋಡಾದಲ್ಲಿ[೧] **ತಿಕ್ಕ**-ಆಗಿದೆ, ತುಳುವಿನಲ್ಲಿ **ತಿಕ್ಕುನಾ** ಆಗಿದೆ. ತಮಿಳಿನ **ಚುಟು** ತೋಡಾ ಮತ್ತು ಕೋಟಾದಲ್ಲಿ **ತುಟ್**-, **ತುಡ್**-ಆಗಿದೆ. ಅಲ್ಲದೆ ಸೋಲಿಗರ ಕನ್ನಡದಲ್ಲಿಯೂ ಕೂಡ ಚ-ತ ಆಗುವುದನ್ನು ಕಾಣಬಹುದು. ಉದಾ ಸಾರಿಸು* ತಾರಿಸು, ಚಪ್ಪಾಳೆ→ತಪ್ಪಳ, ತುಣ್ಣೆ←ಚುಣ್ಣೆ ಇತ್ಯಾದಿ.

ಪುಟ ೪೦ರಲ್ಲಿ "ಕನ್ನಡದ ಬೇರೆ ಕೆಲವು ಕ್ರಿಯಾರೂಪಗಳಲ್ಲಿ ಭೂತಪ್ರತ್ಯಯದ ತಕಾರವೂ ಕೂಡ ಲೋಪಗೊಂಡಿದೆ. ಮಾಡಿ, ಹೇಳಿ, ಅಡಗಿ, ನರಳಿ ಮೊದಲಾದವುಗಳಲ್ಲಿ ಇಂತಹ ತಕಾರ ಲೋಪವಾಗಿದ್ದು, ಮಾಡಿದ, ಹೇಳಿದ, ಅಡಗಿದ ಮೊದಲಾದ ಕ್ರಿಯಾರೂಪಗಳಲ್ಲಿ ಸ್ವರಾದಿಯಾದ ಅ ಎಂಬ ಪ್ರತ್ಯಯ ಪರವಾದುದರಿಂದಾಗಿ ಅದು ಉಳಿದುಕೊಂಡಿರುವುದನ್ನು ಕಾಣಬಹುದು" ಎಂದು ಹೇಳಿದ್ದಾರೆ. ಆದರೆ ಮಾಡಿ, ಹೇಳಿ, ಅಡಗಿ, ನರಳಿ ಮೊದಲಾದವು ಪೂರ್ಣ ಕ್ರಿಯಾರೂಪಗಳಲ್ಲದ ಪ್ರಯುಕ್ತ, ಇಲ್ಲಿ ಭೂತ ಪ್ರತ್ಯಯ ಲೋಪಗೊಳ್ಳುವ ಪ್ರಮೇಯವೇ ಇಲ್ಲ. ಸೋಲಿಗರ ಕನ್ನಡದ ಕೆಲವು ಕ್ರಿಯಾರೂಪಗಳಲ್ಲಿ ಈ ತಕಾರವು ಭೂತ ಪ್ರತ್ಯಯವಾಗಿ ಇನ್ನೂ ಉಳಿದುಕೊಂಡಿದೆ ಎಂಬುದನ್ನು ತಿಳಿಸಬಹುದಾಗಿತ್ತು. ಉದಾ: ಕಿಳು, ಕಿತ್ತ-; ಚೀನು, ಚೀತ-; ಚಾಯ್, ಚತ್ತ-; ಕೊಲೆ, ಕೊಲ್ತ-; ತೇ, ತೀತ- ಇತ್ಯಾದಿ.

ಮೂಲ ಕನ್ನಡದಿಂದ ಆಧುನಿಕ ಪ್ರಭೇದಗಳಿಗೆ (೪೭-೮೪) :— ಕಳೆದ ಒಂದು-ಒಂದೂವರೆ ಸಾವಿರ ವರ್ಷಗಳಿಂದ ಕನ್ನಡ ಭಾಷೆ ಯಾವ ರೀತಿ ಬದಲಾವಣೆ ಹೊಂದಿದೆ ಎಂಬುದನ್ನು ಶಾಸನ ಮತ್ತು ಇಂದು ಪ್ರಚಲಿತವಾಗಿರುವ ಕನ್ನಡದ ಉಪಭಾಷೆಗಳಲ್ಲಿ ತೋರಿಬರುವ ಭಾಷಾ ಸ್ವರೂಪದ ಆಧಾರದ ಮೇಲೆ ಕನ್ನಡ ಭಾಷೆಯು ಯಾವ ಕಾಲದಲ್ಲಿ ಯಾವ ರೀತಿ ಬದಲಾವಣೆ ಹೊಂದಿತ್ತು ಎಂಬುದನ್ನು ತೋರಿಸಿಕೊಡಲು ಪ್ರಯತ್ನಿಸಿದ್ದಾರೆ. ಈ ವಿಭಾಗದಲ್ಲೂ ಕೂಡ ಸ್ವರಗಳು (೫೨-೬೧) ವ್ಯಂಜನಗಳು (೬೨-೭೩) ಮತ್ತು ವ್ಯಾಕರಣ (೭೪-೮೪) ದಲ್ಲಿಯಾದ ಬದಲಾವಣೆಯನ್ನು ಕನ್ನಡದ ವಿವಿಧ ಪ್ರಭೇದಗಳೊಂದಿಗೆ ಹೋಲಿಸಿ ತುಲನಾತ್ಮಕವಾಗಿ ವಿವೇಚಿಸಿದ್ದಾರೆ. ಈ ವಿಭಾಗದಲ್ಲಿ ಕನ್ನಡದ ವಿವಿಧ ಪ್ರಭೇದಗಳಲ್ಲಿ ಮೂಲ ಕನ್ನಡದ ಕೆಲವು ಸ್ವರಗಳು, ವ್ಯಂಜನಗಳು, (ಐ) ಮತ್ತು ವ್ಯಾಕರಣಾಂಶಗಳು (ಪು. ೭೬) ಉಳಿದುಕೊಂಡು ಬಂದಿರುವುದನ್ನು ನೋಡಬಹುದು. ಮುಕ್ತಾಯದಲ್ಲಿ (೮೫-೮೮) ಈ ಗ್ರಂಥವನ್ನು ರಚಿಸಲು ಅನುಸರಿಸಿದ ಹೊಸ ವಿಧಾನವನ್ನು ತಿಳಿಸಿದ್ದಾರೆ. ಅಲ್ಲದೆ ಕನ್ನಡ ಭಾಷೆಯ ಚಾರಿತ್ರಿಕ ಪ್ರಭೇದಗಳು ಯಾವುವು ಎಂಬುದನ್ನು ಮತ್ತು ಭೌಗೋಳಿಕ ಪ್ರಭೇದಗಳು ಯಾವುವು ಎಂಬುದನ್ನು ಸ್ಥೂಲವಾಗಿ ವಿವೇಚಿಸಿದ್ದಾರೆ. ಈ ಎರಡು ಪ್ರಭೇದಗಳ ಜೊತೆಗೆ ಸಾಮಾಜಿಕ ಪ್ರಭೇದಗಳ (Sociolinguistics) ಅಭ್ಯಾಸದ ಉಪಯೋಗವನ್ನು ತಿಳಿಸಿದ್ದಾರೆ.

ಅನುಬಂಧದಲ್ಲಿ (೮೯-೯೬) ಸ್ವರಗಳ, ವ್ಯಂಜನಗಳ ಮತ್ತು ಅವುಗಳ ಉಚ್ಚಾರಣೆಯನ್ನು; ಧ್ವನ್ಯಂಗಗಳ ವಿವರಣೆಯನ್ನು; ವರ್ಣ, ಧ್ವನಿರೂಪಗಳ ಉಪಯೋಗವನ್ನು, ಅಕ್ಷರ, ಅಕ್ಷರರೂಪ; ಭಾಷೆಗಳು, ಭಾಷಾಪ್ರಭೇದಗಳು ಇವುಗಳನ್ನು ವಿವೇಚಿಸಿದ್ದಾರೆ.

ಇಂತಹ ಶಾಸ್ತ್ರೀಯಗ್ರಂಥಗಳಲ್ಲಿ ಮುದ್ರಣದೋಷಗಳು ಬಾರದಿರುವುದು ಲೇಸು. ಆದರೂ ಕೆಲವು ಗ್ರಂಥಕರ್ತೃಗಳ ಕಣ್ತಪ್ಪಿ ಬಂದಿವೆ. ಅಂತಹ ಕೆಲವು ದೋಷಗಳನ್ನು ಇಲ್ಲಿ ತೋರಿಸಿದ್ದೇನೆ:

ಪುಟ ೧೬, ಸಾಲು ೨೧, ಹ್ರಸ್ವ, ಹ್ರಸ್ವವಾಗಿದೆ.

ಪುಟ ೪೯, ಸಾಲು ೧೪, ಪರಿಣಾಮ, ಪರಿಮಾಣವಾಗಿದೆ.

ಪುಟ ೬೦, ಸಾಲು ೨೧, ಪ್ರತಿವೇಷ್ಟಿತ, ಪ್ರತಿವೇಷ್ಟಿತವಾಗಿದೆ.

ಪುಟ ೬೭, ಸಾಲು ೫, ಪರದಲ್ಲಿದ್ದಾಗ, ಪರಲ್ಲಿದ್ದಾಗ ಆಗಿದೆ.

ಪುಟ ೭೧, ಸಾಲು ೧೭, ಪ್ರಭೇದಗಳಲ್ಲೂ, ಪ್ರಭೇಗಳಲ್ಲೂ ಆಗಿದೆ.

ಪುಟ ೯೨, ಸಾಲು ೧೯, ದ್ವಿಸ್ಪರ್ಶ, ದ್ವಿಸರ್ಶ ಆಗಿದೆ. ಇತ್ಯಾದಿ.

ಡಾ|| ಭಟ್ಟರ ಈ ಗ್ರಂಥವು ಕನ್ನಡ ಭಾಷೆಯ ಮತ್ತು ಕನ್ನಡ ಭಾಷಾಶಾಸ್ತ್ರದ ಸ್ವರೂಪವೇನೆಂಬುದನ್ನು ಸ್ಪಷ್ಟವಾಗಿ ಮತ್ತು ಅಚ್ಚುಕಟ್ಟಾಗಿ ಹೇಳುವುದರಲ್ಲಿ ಯಶಸ್ವಿಯಾಗಿದೆ. ಕನ್ನಡ ಭಾಷೆಯನ್ನು ಆಳವಾಗಿ ಅಭ್ಯಸಿಸಲು ಹೊರಟಿರುವ ಪ್ರೌಢವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ ಮತ್ತು ಸಂಶೋಧಕರಿಗೆ ಅತ್ಯಂತ ಉಪಯುಕ್ತವಾಗಬಲ್ಲಂತಹ ಗ್ರಂಥ ಇದು ಎಂದು ಹೇಳಬಹುದು.

---

[೧] Proto-Dravidian * C-; TODA t-. Prof. M. B. Emenean, "collected papers" P. 5 (Pub: Annamali University, Annamalainagar 1967)

# ವಿಮರ್ಶನರಂಗ

**ಭಕ್ತ ಕವಿಗಳು**—ಲೇಖಕರು: ಗುರುನಾಥ ಜೋಶಿ. ಪ್ರಕಾಶಕರು: ಭಾರತೀಯ ಸಾಹಿತ್ಯ ಮಂದಿರ, ಧಾರವಾಡ-೧. ಪುಟಗಳು: ೯೭. ಬೆಲೆ ರೂ. ೧-೫೦

ಭಗವದ್ಭಕ್ತರೂ ಕವಿಗಳೂ ಆದ ಕಬೀರ, ಸೂರ, ತುಲಸೀ, ಪುರಂದರ-ಎಂಬೀ ದಾಸ ಚತುಷ್ಟಯದ ಜೀವನ, ದರ್ಶನ, ಭಕ್ತಿ, ಉಪದೇಶ-ಸಾಹಿತ್ಯಗಳನ್ನು ಲೇಖಕರು ಈ ಕೃತಿಯಲ್ಲಿ ವಿಮರ್ಶಾತ್ಮಕವಾಗಿ ನಿರೂಪಣೆ ಮಾಡಿದ್ದಾರೆ. ಇಲ್ಲಿ ಸರಳ, ಶುದ್ಧ, ಪ್ರಬುದ್ಧ ವಾಕ್ಯಸರಣಿಯಲ್ಲಿ ಬಂದಿರುವ ವಿವರ-ವಿಚಾರಗಳು ಓದುಗರಿಗೆ ಬಗೆಗೊಳ್ಳುವಂತಿವೆ. ಸಂತ ಕಬೀರರ ನಿರ್ಗುಣೋಪಾಸನೆ, ಸೂರದಾಸ ತುಲಸೀದಾಸರ ಸಗುಣೋಪಾಸನೆ, ತುಲಸೀದಾಸರನ್ನೆ ಹೋಲುವ ಕರ್ಣಾಟಕದ ಪುರಂದರದಾಸರ ವ್ಯಕ್ತಿತ್ವ-ಇವನ್ನೆಲ್ಲ ಸೊಗಸಾಗಿ ಆಧಾರಪೂರ್ವಕ ವಿವರಿಸಿದ್ದಾರೆ. ಹಿಂದೀ ಸಂತರ-ಮರ್ಮೀಕವಿಗಳ ಹಾಗೂ ಪುರಂದರದಾಸರ ಕೃತಿಗಳನ್ನು ತೌಲನಿಕವಾಗಿ ವಿವೇಚಿಸಿದ್ದಾರೆ. ಕೊಂಡಿಟ್ಟುಕೊಂಡು ಮನನ ಮಾಡತಕ್ಕ ವಿಷಯಗಳನ್ನೊಳಗೊಂಡ ಪುಸ್ತಕವಿದು.

* * *

**ಸಮುದ್ರ ಗೀತಗಳು**—ಕವಿ: ವಿನಾಯಕ. ಪ್ರಕಾಶಕರು: ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು-೫. ಪುಟಗಳು: ೧೫ + ೧೧೧, ಬೆಲೆ ಸಾಧಾರಣ ರೂ. ೩-೦೦ ಉತ್ತಮ ಪ್ರತಿ ರೂ. ೫-೦೦.

'ವಿನಾಯಕ' ಎಂಬ ಕಾವ್ಯನಾಮದಿಂದ ಪರಿಚಿತರಾದ ಡಾ|| ವಿ. ಕೆ. ಗೋಕಾಕರ ಕಾವ್ಯಲೇಖನಿಯಿಂದ ಸುಮಾರು ಮೂರು ದಶಕಗಳ ಹಿಂದೆಯೇ ಹೊರಬಂದ ಕವನಗಳ ಸಂಕಲನವಿದು. ಈಗ ಪುನರ್ಮುದ್ರಿತವಾಗಿದೆ, ಸ್ವಚ್ಛಂದ ಛಂದಸ್ಸಿನಲ್ಲಿ ಕವಿಭಾವನೆಗೆ ಅನುಗುಣವಾಗಿ ರೂಪತಾಳಿದ ಕವನಗಳಿವು ಕನ್ನಡಕ್ಕೆ ಅಪೂರ್ವವಾದ ಕಾಣಿಕೆಗಳೇ ಆಗಿವೆ. ಕಡಲು, ಕಡಲ ತೀರ, ಹಡಗ, ಬ್ರಿಟನ್ನಿನ ದ್ವೀಪದಲ್ಲಿ, ಆತ್ಮವೃತ್ತ-ಎಂಬೀ ಮುಖ್ಯ ವಿಭಾಗಗಳಲ್ಲಿ ಪ್ರತಿಯೊಂದರಲ್ಲಿಯೂ ಕವಿಹೃದಯ ತುಂಬಿ, ಉಕ್ಕಿಹಾಡಿನ ಹೊನಲಾಗಿ ಹರಿದಿದೆ. ಕವಿತಾ ವಿಷಯಗಳು ನವೀನವಾಗಿ ರಚನಾತಂತ್ರಕ್ಕೂ ನಾವೀನ್ಯವನ್ನು ತಂದಿದೆ. ಸಮುದ್ರದ ಮಾಧ್ಯಮದಿಂದ, ಪ್ರಕೃತಿಚಿತ್ರಣ, ವಿವಿಧ ಸ್ವಭಾವ ಭಾವ ಚಿತ್ರಣಗಳು, ಪ್ರತಿಮೆಗಳು, ಉಪಮೆಗಳು ಓತಪ್ರೋತವಾಗಿ ಕಂಗೊಳಿಸುತ್ತವೆ. ಸ್ವಚ್ಛಂದದಲ್ಲಿಯೂ ಕೆಲವು ಛಂದೋಬದ್ಧ ಕವನಗಳು ತಾವಾಗಿ ಮೂಡಿ ಬಂದಿವೆ. "ತದಿಗೆಯ ಚಂದ್ರಮ", "ನೇಪಲ್ಸ್ ದಲ್ಲಿಯ ಮೂರ್ತಿಸಂಗ್ರಹಾಲಯ" ಇವು ವಾರ್ಧಕಷಟ್ಪದಿಯಲ್ಲಿ ರಚಿತವಾಗಿವೆ. ಶಿಲಾಕನ್ಯೆ ಡಾರ್ಟಮೂರಿನ ಪರ್ವತಾವಳಿಯ ಬಳಿ-ಇವು ಕುಸುಮಷಟ್ಪದಿಯಲ್ಲಿವೆ. ಶರಣರ ವಚನದಂತಹ ರಚನೆ-"ಟೇಮ್ಸ ನದಿಯ ಮೇಲೆ ರಾಜಹಂಸ" ಎಂಬುದು. ನವ್ಯಪದ್ಧತಿಗೆ ನಾಂದಿಯಾಗಿರುವ ಈ ಸಂಕಲನವು ಸುಂದರ ಮುದ್ರಣದಿಂದ ಹೊರ ಬಂದಿರುವುದು-ಸ್ವಾಗತಾರ್ಹವಾಗಿದೆ.

**ಟಿ. ಕೇಶವ ಭಟ್ಟ**

**ದೇವಮಾನವ**—ಲೇಖಕರು: ಮ.ಗು. ಛಿವಾರಿ, ಬೆಳಗಾವಿ. ಪ್ರಕಾಶಕರು: ಗುರುಪಾದ ಪ್ರಕಾಶನ ಬೆಳಗಾವಿ. ಪುಟ ಐವತ್ತಾರು ಬೆಲೆ ೧-೨೫.

'ದೇವಮಾನವ' ಮ.ಗು. ಛಿವಾರಿಯವರ ಎರಡನೇ ಪುಸ್ತಕ. ಮಾನವರಾಗಿ ಹುಟ್ಟಿ, ಸಾಧನೆಯ ಮಾರ್ಗದಲ್ಲಿ ನಡೆದು ಮಹಾನುಭಾವ ಪದವಿಗೇರಿದ ಮಹಾತ್ಮ ಬಸವೇಶ್ವರರನ್ನು ಕುರಿತಾಕೃತಿ. ಅವರ ಬಗೆಗಿರುವ ಪುರಾಣಗಳ, ಕಾವ್ಯಗಳ, ಅದರ-ಹಾಗೂ ಅವರ ಸಮಕಾಲೀನರ ವಚನಗಳ ಆಧಾರದ ಮೇಲೆ ಅವರ ಕಾರ್ಯಸಾಧನೆಯನ್ನು ನಿರೂಪಿಸಿದ್ದಾರೆ.

ಸ್ವರ್ಗದ ಕಲ್ಪನೆ. ಜಾತಿ ಸಂಕರ, ಕಾಯಕ, ಮಹಿಳಾ ಉದ್ಧಾರ, ವಿಶ್ವಮಾನವತಾ ವಾದ ಮೊದಲಾದ ವಿಷಯಗಳಲ್ಲಿ ಅಣ್ಣನವರ ನಿಲುವು ಎಂತಹುದು ಎಂಬಂಶವನ್ನು ಸ್ಪಷ್ಟಗೊಳಿಸಿದ್ದಾರೆ. ವಿಶ್ವಸಮಾಜ ನಿರ್ಮಾಪಕರಾಗಿ ಅವರ ಸಾಧನೆ ತತ್ವ ನಿರೂಪಣೆ, ಸಾಮಾನ್ಯರಿಗೂ ತಿಳಿಯುವಂತೆ ನಿರೂಪಿಸಿದ್ದಾರೆ. ಪುಸ್ತಕದಲ್ಲಿನ ಮುದ್ರಣದೋಷಗಳನ್ನು ಗಮನಿಸಿ ತಿದ್ದಿದ್ದರೆ ಕೃತಿಯ ಬೆಲೆ ಲೇಖಕರ ಗೌರವವೂ ಹೆಚ್ಚುತ್ತಿತ್ತೆಂದು ಗಮನಿಸುತ್ತದೆ.

* * *

**'ಶ್ರೀ ಪರಪ್ಪಸ್ವಾಮಿಗಳು'**—ಲೇಖಕರು: ರ. ಪುಟ್ಟರಾಜು, ಪುಟ: ೪೨,

ಬೂದಿಹಾಳು ಎಂದು ಇತಿಹಾಸ ಪ್ರಸಿದ್ಧವಾಗಿದ್ದು ಶ್ರೀರಾಂಪುರವೆನಿಸಿರುವ ಊರಲ್ಲಿದ್ದು ಆ ಸುತ್ತಮುತ್ತಲೂ, ಮಹಿಮರೆನಿಸಿ ಪವಾಡ ಪುರುಷರೆಂದು ಪ್ರಸಿದ್ಧರಾದ ಶ್ರೀ ಪರಪ್ಪಸ್ವಾಮಿಗಳ ಜೀವನ ಪರಿಚಯವನ್ನು ಚಿಕ್ಕದಾದರೂ ಚೊಕ್ಕವಾಗಿ ಮಾಡಿಕೊಟ್ಟಿದ್ದಾರೆ ಪುಟ್ಟರಾಜುರವರು.

ಶ್ರೀ ಸ್ವಾಮಿಗಳವರ ಪೂರ್ವಾಶ್ರಮದ ಸಂಗತಿಗಳು ಸ್ಪಷ್ಟ ವಿಲ್ಲವೆಂದೂ, ಅವರ ಊರು "ಗುಳೆದ ಗುಡ್ಡ"ವಿರಬಹು ದೆಂದು ಮುನ್ನುಡಿಯಲ್ಲಿ ಹೇಳಿದ್ದಾರೆ. ತಮಗೆ ತಿಳಿದಷ್ಟು ಶ್ರೀ ಸ್ವಾಮಿಗಳ ಚರಿತ್ರೆಯನ್ನು ಸ್ಪಷ್ಟ ರೀತಿಯಲ್ಲಿ ಕಾವ್ಯ ಮಯ ಶೈಲಿಯಲ್ಲಿ ನಿರೂಪಿಸಿದ್ದಾರೆ. ಈ ಕೃತಿಯಲ್ಲಿ ಇತಿ ಹಾಸಕ್ಕಿಂತಲೂ ಪವಾಡಗಳ ವಿವರಣೆ ಹೆಚ್ಚಿದೆ. ಕೃತಿ ಆದರಣೀಯ ಲೇಖಕರ ಭಾಷೆ, ಶೈಲಿ, ಚನ್ನಾಗಿದೆ.

**ಆರ್. ರಾಚಪ್ಪ**

**ಜ್ಯೋತಿಷ್ಯರಹಸ್ಯಂ** (A Guide to Astrology)— ಗ್ರಂಥಕರ್ತರು ಶ್ರೀ ಬಿ. ಕೆ. ಲಕ್ಷ್ಮೀನರಸಿಂಹಯ್ಯ. ದೈವಜ್ಞರು, ನಂ. ೧೦೫ (ಅ) ಮೂರನೆಯ ಕ್ರಾಸ್, ಭಾಷ್ಯಂನಗರ, ಶ್ರೀರಾಮ ಪುರಂ, ಬೆಂಗಳೂರು-೨೧. [ವಿದ್ಯಾಭಾಸ್ಕರ. ಕವಿತಾ ಚತುರ ವಿದ್ವಾನ್. ಎಂ. ರಾಮಕೃಷ್ಣಭಟ್ಟರು ಎಂ. ಎ., ಪ್ರೊಫೆಸರ್, ಹಿಂದೂ ಕಾಲೇಜು, ಡೆಲ್ಲಿ, ಅವರ ಮುನ್ನುಡಿಯೊಡನೆ] ಡೆಮ್ಮಿ ೧/೮ ೧೯೬೭. ಪುಟ ೧೩೦, ಬೆಲೆ ರೂ. ೭-೫೦.

ಜ್ಯೋತಿಷ್ಯ ಶಾಸ್ತ್ರವನ್ನು ಶ್ರೀ ಲಕ್ಷ್ಮೀನರಸಿಂಹಯ್ಯ ನವರು, ಈ ಪುಸ್ತಕದ ಮೂಲಕ ಸಾಮಾನ್ಯ ಜನರಿಗೆ ವಿವರಿ ಸಲು ಪ್ರಯತ್ನಪಟ್ಟಿದ್ದಾರೆ. ಇದರಲ್ಲಿ ಶಾಸ್ತ್ರಜ್ಞರಿಗೂ ಬೇಕಾ ಗುವ ಕೆಲವು ವಿಚಾರಗಳೂ ಇವೆ. ಆಸ್ತಿಕರಿಗೂ ಹಿಂದೂ ಧರ್ಮವನ್ನನುಸರಿಸುವವರಿಗೂ ಅತ್ಯಗತ್ಯವಾಗಿ ಬೇಕಾದ ವಿಚಾರ ಈ ಪುಸ್ತಕದಲ್ಲಿ ವಿವರಿಸಲ್ಪಟ್ಟಿರುತ್ತದೆ, ಗ್ರಂಥವು ಆಂಗ್ಲೇಯ ಭಾಷೆಯಲ್ಲಿದೆ. ಇದರಲ್ಲಿ ಅನೇಕ ಪಟ್ಟಿ ಗಳನ್ನು ಕೊಟ್ಟಿರುತ್ತಾರೆ. ಅವುಗಳನ್ನು ರಚಿಸಲು ಅವರು ಬಹು ಶ್ರಮಪಟ್ಟಿರಬೇಕೆಂದು ಬೇರೆ ಹೇಳಬೇಕಾಗಿಲ್ಲ. ಜ್ಯೋತಿಷದ ಭಾಗಗಳು, ಗ್ರಹಗಳು, ರಾಶಿಚಕ್ರ ಮುಂತಾ ದವುಗಳು; ಆಯುರ್ದಾಯ ವಿಚಾರ; ಯೋಗ, ಕರಣ; ಕೇಂದ್ರ ತ್ರಿಕೋಣಗಳು; ಮುಹೂರ್ತದೆಶೆಗಳು ಮುಂತಾದ ಅನೇಕ ವಿಚಾರಗಳನ್ನು ಅರ್ಥವಾಗುವಂತೆ ತಿಳಿಸಿರು ತ್ತಾರೆ. ೫೪ ಮುಖ್ಯ ಸ್ಥಳಗಳಿಗೆ ಅಕ್ಷಾಂಶಗಳನ್ನೂ ಅವುಗಳಿಗೆ ಸಂಬಂಧಪಟ್ಟ ಲಗ್ನ ಪ್ರಮಾಣಗಳನ್ನೂ ನಮೂದಿಸಿರು ತ್ತಾರೆ. ಇದು ಜಾತಕವನ್ನು ಗುಣಿಸುವವರಿಗೆ ಸಹಾಯ ಕರವಾದುದೆಂಬುದಕ್ಕೆ ಯಾವ ಸಂದೇಹವೂ ಇಲ್ಲ. ಕೊಡ ಕಾದ ರೇಖಾಗಣಿತ ಮುಂತಾದುವುಗಳನ್ನು ಅವರು ಎಲ್ಲಿಯೂ ಉಪಯೋಗಿಸಿಲ್ಲ. ಇದರಿಂದ ಗಣಿತಶಾಸ್ತ್ರದ ಅರಿವಿಲ್ಲದೆ ಸಾಮಾನ್ಯರಿಗೂ ಈ ಪುಸ್ತಕದಿಂದ ಅನುಕೂಲ. ಪುಸ್ತಕವು ಆಂಗ್ಲೇಯ ಭಾಷೆಯಲ್ಲಿರುವುದರಿಂದ ಪಾಶ್ಚಿ ಮಾತ್ಯರು ಸಹ ನಮ್ಮ ಜ್ಯೋತಿಷ್ಯವನ್ನು ಈ ಗ್ರಂಥದ ಮೂಲಕ ತಿಳಿದುಕೊಳ್ಳಬಹುದು. ಜ್ಯೋತಿಷ್ಯವು ಒಂದು ಶಾಸ್ತ್ರ. ಅದನ್ನು ವ್ಯಾಸಂಗ ಮಾಡಲು ವಿಶ್ವವಿದ್ಯಾನಿಲ ಯಗಳಲ್ಲಿಯೂ ಒಂದು ಭಾಗವನ್ನು ತೆರೆಯಬೇಕು ಎಂಬ ಅಭಿಪ್ರಾಯಗಳಿರುವ ಈ ಸಮಯದಲ್ಲಿ, ಶ್ರೀ ಲಕ್ಷ್ಮೀನರ ಸಿಂಹಯ್ಯನವರು ತಮ್ಮ ಈ ಪುಸ್ತಕವನ್ನು ಪ್ರಕಟಿಸಿರುವುದು ಸಕಾಲವೇ ಎಂದೆನಿಸುತ್ತದೆ. ಅವರು ತಮ್ಮ ಶ್ರೇಷ್ಠವಾದ ಈ ಪ್ರಯತ್ನವನ್ನು ಮುಂದುವರಿಸಬೇಕೆಂದೂ ಎಲ್ಲ ಆಸ್ತಿಕ ಮಹಾಶಯರೂ ಅದಕ್ಕೆ ಪ್ರೋತ್ಸಾಹಕೊಡಬೇಕೆಂದೂ ನಮ್ಮ ಹಾರೈಕೆ.

**ಎಂ. ಜಿ. ವೆಂಕಟೇಶಯ್ಯ**

**ಮಾಯಿದೇವನ ಮೂರು ಶತಕ**—(ಕವಿ ವಿಚಾರ ಗ್ರಂಥ) ಬರೆದವರು: ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಪ್ರಕಾಶಕರು: ಸತ್‌ಕೃತಿ ಸಮೀಕ್ಷಗೋಷ್ಠಿ ೩೩೧೭, ಎ, II ಸ್ಟೇಜ್ ರಾಜಾಜಿನಗರ, ಬೆಂಗಳೂರು-೧೦. ಪುಟ: ೧೩೦.

ಮೊಗ್ಗೆಯ ಮಾಯಿದೇವನ, ಜೀವನ ಪರಿಚಯವನ್ನು ಅವನ ಕಾಲ ಪರಿಚಯವನ್ನು ಮಾಡಿಕೊಡುತ್ತಾ ಶತಕತ್ರ ಯಗಳ-ಶಿವಾಧವಶತಕ, ಶಿವಾವಲ್ಲಭಶತಕ, ಐಪ್ರರೀಶ್ವರ ಶತಕಗಳನ್ನು ಕುರಿತು ಕೂಲಂಕಶವಾದ ವಿವೇಚನೆ ನಡೆಸಿ ದ್ದಾರೆ. ವೀರಶಿವಾಗಮದ ತಂತ್ರದ ಅರ್ಥವನ್ನು ಸಂಕ್ಷಿಪ್ತ ವಾಗಿ ಹೇಳುತ್ತ, ಉದಾಹರಣೆಗಳ ಮೂಲಕ ಸಮರ್ಥಿ ಸಿದ್ದಾರೆ. ಪ್ರತಿಯೊಂದು ಶತಕಗಳ ಸಾರವನ್ನು ಕುರಿತು, ತ್ಯಾಗ, ಭೋಗ, ಯೋಗಗಳ ಸಮನ್ವಯವನ್ನು ತೋರಿಸಿ ಕೊಟ್ಟಿದ್ದಾರೆ. ಶಿವಭಕ್ತರು ಸ್ವಾರ್ಥಪರರಲ್ಲ, ಸ್ವಾ-ಪರ ಭಾವದವರಲ್ಲ, ಅವರಿಗೆ ತಪ್ಪೊಪ್ಪುಗಳಿಲ್ಲ ಮುಂತಾದ ವಿಚಾರಗಳನ್ನು ಸರಳವಾಗಿ ಸಾಮಾನ್ಯ ಜನಗಳಿಗೂ ಸಹ ಅರ್ಥವಾಗುವಂತೆ ಬರೆದು ನಮ್ಮೆಲ್ಲರ ಕೃತಜ್ಞತೆಗೆ ಪಾತ್ರ ರಾಗಿದ್ದಾರೆ.

**ಎಂ. ಚಂದ್ರಶೇಖರ್**

# ಸ್ವೀಕಾರ

**ನಾಟಕ**

೧) ಭಾಸನ ಎರಡು ನಾಟಕಗಳು ; ಲೇ : ಸಿ. ಪಿ. ಕೆ. ಪ್ರ : ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು-೫ ; ಪುಟ : LXviii+೧೧೪ ; ಆಕಾರ : ಕ್ರೌನ್ ಅಷ್ಟದಳ ; ಬೆಲೆ : ರೂ. ೪-೦೦, ೧೯೬೮.

೨) ರಾಧೇಯ ಮತ್ತು ರತಿವಿಲಾಪ ; ಲೇ : ಕೃಷ್ಣ ಮೂರ್ತಿ ಪುರಾಣಿಕ ; ಪ್ರ : ಸಾಹಿತ್ಯ ಸೇವಾಮಂದಿರ, ಗೋಕಾಕ ; ಪುಟ : ೧೭+೧೦೯ ; ಆಕಾರ : ಕ್ರೌನ್ ಅಷ್ಟದಳ ; ಬೆಲೆ : ರೂ. ೩-೦೦, ೧೯೬೯.

೩) ಮುನಿವೃಂದಪುರ ಕ್ಷೇತ್ರಮಹಾತ್ಮೆ ; ಸಂಗ್ರಾಹಕ : ವೆಂಕಟಸುಬ್ಬಯ್ಯ, ಎಚ್ ; ಪ್ರ : ಹೆಚ್. ವೆಂಕಟಸುಬ್ಬಯ್ಯ, ಹಿರೇಹಡ್ಲು, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಪೋಸ್ಟ್ : ಶಾಂತಿಗ್ರಾಮ ; ಪುಟ : ೨೪ ; ಆಕಾರ : ಕ್ರೌನ್ ಅಷ್ಟದಳ ; ಬೆಲೆ : ರೂ. ೧-೦೦, ೧೯೬೯

**ವಚನ ಸಾಹಿತ್ಯ**

೧) ಮಾಹೇಶನ ಮಾಟ ; ಲೇ : ಶ್ರೀ. ಜ. ಚ. ನಿ., ಪ್ರ : ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ೪೯, ಹ. ಬ. ಸಮಾಜರಸ್ತೆ, ಬಸವನಗುಡಿ, ಬೆಂಗಳೂರು-೪; ಪುಟ : ೬+೨+೩೩ ; ಬೆಲೆ : ರೂ. ೦-೫೦, ೧೯೬೯

೨) ವೀರಶೈವ ಸಾಹಿತ್ಯ ಮತ್ತು ಇತಿಹಾಸ-ಭಾಗ-೨ ; ಲೇ : ಶಿವಮೂರ್ತಿ ಶಾಸ್ತ್ರಿಗಳು, ಬಿ ; ಪ್ರ : ಶರಣರ ಸಾಹಿತ್ಯ ಕಾರ್ಯಾಲಯ, ೧೪೧, ರಂಗಸ್ವಾಮಿಗುಡಿ ಬೀದಿ, ಬೆಂಗಳೂರು-೨ ; ಪುಟ : ೧೦+೩೦೬ ; ಆಕಾರ ; ಕ್ರೌನ್ ಅಷ್ಟದಳ ; ಬೆಲೆ ; ರೂ. ೫-೦೦, ೧೯೬೯

೩) ಶ್ರೀ ಮಹಾಂತ ಶಿವಯೋಗಿಗಳ ವರಪ್ರಸಾದವಾಣಿ; ಲೇ : ಸವದತ್ತಿಮಠ. ಎಸ್. ಡಿ ; ಪ್ರ : ಎಸ್. ಡಿ. ಸವದತ್ತಿ ಮಠ, ಸಂಗಮೇಶ ಪ್ರಕಾಶನ, ಮುರಗೋಡ ; ಪುಟ : ೬+೮+೨೫ ; ಬೆಲೆ : ರೂ. ೧-೦೦, ೧೯೬೯.

**ಷಟ್ಪದಿ**

೧) ಅಕ್ರೂರ ಚರಿತ್ರೆ ; ಸಂಪಾ : ಡಾ|| ಆರ್. ಸಿ. ಹಿರೇಮಠ, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟ, ೬+೨೦೫ ಬೆಲೆ : ರೂ. ೪-೦೦, ೧೯೬೯.

೨) ನೇಮಿನಾಥ ಪುರಾಣ, ಸಂಪಾ : ಆರ್. ಸಿ. ಹಿರೇಮಠ, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟ : ೩೧+೨೭೯ ; ಬೆಲೆ : ರೂ. ೬-೦೦, ೧೯೬೯.

**ಕರ್ನಾಟಕ ವಿಶ್ವವಿದ್ಯಾಲಯ**
**ಉಪನ್ಯಾಸ ಗ್ರಂಥಮಾಲೆ**

೧) ಶೂನ್ಯ ಸಂಪಾದನೆ, ಲೇ : ಕಂಬಿ, ವಿ.ಎಸ್., ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ; ಪುಟ : ೫+೯೧ ಬೆಲೆ : ರೂ. ೦-೨೫, ೧೯೬೯.

೨) ಕೆಳದಿ ನಾಯಕರು ; ಲೇ : ದೀಕ್ಷಿತ, ಡಾ|| ಜಿ. ಎಸ್. ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಪುಟ : ೨+೬೩, ಬೆಲೆ : ರೂ. ೦-೨೫, ೧೯೬೯.

೩) ನಗೆಗಾರ ನಯಸೇನ ; ಲೇ : ಸುಂಕಾಪುರ ; ಎಂ. ಎಸ್., ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ; ಪುಟ : ೨+೫೯, ಬೆಲೆ ರೂ. ೦-೨೫, ೧೯೬೯,

೪) ಮುಹಮ್ಮದ ಗವಾನ ; ಲೇ : ಕುಲಕರಣಿ, ಎಲ್. ಆರ್., ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ; ಪುಟ : ೨+೩೨; ಬೆಲೆ : ರೂ. ೦-೨೫, ೧೯೬೯.

**ಬೆಂಗಳೂರು ವಿಶ್ವವಿದ್ಯಾಲಯದ**
**ಪ್ರಚಾರೋಪನ್ಯಾಸಮಾಲೆ-ಬೆಂಗಳೂರು**

೧) ನಕ್ಷತ್ರಲೋಕ ; ಲೇ : ನಾರಾಯಣರಾವ್, ಜಿ.ಟಿ., ಪ್ರ : ಬೆಂಗಳೂರು ವಿಶ್ವವಿದ್ಯಾಲಯದ ಪ್ರಚಾರೋಪ ನ್ಯಾಸಮಾಲೆ, ಬೆಂಗಳೂರು ; ಪುಟ : ೭೬ ; ಬೆಲೆ : ರೂ. ೦-೫೫, ೧೯೬೯.

೨) ನಗೆಯ ನೆಲೆ ; ಲೇ : ರಾಮಚಂದ್ರರಾವ್, ಎಸ್. ಕೆ., ಪ್ರ : ಬೆಂಗಳೂರು ವಿಶ್ವವಿದ್ಯಾಲಯ ಪ್ರಚಾ ರೋಪನ್ಯಾಸ ಮಾಲೆ, ಬೆಂಗಳೂರು, ಪುಟ : ೫೬, ಬೆಲೆ : ರೂ. ೦-೫೫, ೧೯೬೯.

**ಮಾಸಪತ್ರಿಕೆ**

೧) ಯುಗದೀಪ ; ಸಂಪಾ : ಧಾರವಾಡಕರ ; ಪ್ರ ; ಸಮದರ್ಶಿ ಮುದ್ರಣಾಲಯ, ೧೭೨೭, ಸೋಮವಾರಪೇಟೆ, ಗೋಕಾಕ ; ಪುಟ : ೬೮, ೧೯೬೯.

# ಪರಿಷತ್ತಿನ ಸುದ್ದಿಗಳು

## ಪರಿಷತ್ತಿನ ಕಾರ್ಯನಿರ್ವಾಹಕ ಸಮಿತಿಯ ಸಭೆ

ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸಭೆಯು ದಿನಾಂಕ ೨೫-೧೦-೧೯೬೯ರಂದು ಬೆಳಗ್ಗೆ ೧೦ ಗಂಟೆಗೆ ಪರಿಷನ್ಮಂದಿರದಲ್ಲಿ ಸೇರಿ ಇತರ ಕಾರ್ಯಕ್ರಮಗಳ ಜೊತೆಗೆ ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ ಕರಡುಪ್ರತಿಯ ಬಗ್ಗೆ ಪರಿಷತ್ತಿನ ಸದಸ್ಯರು ಮತ್ತು ನಾಡು ನುಡಿಯ ಅಭಿಮಾನಿಗಳಿಂದ ಬಂದಿರುವ ಸಲಹೆ ಸೂಚನೆಗಳನ್ನು ಪರಿಶೀಲಿಸುವುದು.

## ಪರಿಷತ್ತಿನ ಸಕಲ ಸದಸ್ಯರ ವಿಶೇಷಾಧಿವೇಶನ

ಪರಿಷತ್ತಿನ ಸಕಲ ಸದಸ್ಯರ ವಿಶೇಷ ಸಭೆಯು ದಿನಾಂಕ ೨೬-೧೦-೧೯೬೯ರಂದು ಬೆಳಗ್ಗೆ ೯ ಗಂಟೆಗೆ ಪರಿಷನ್ಮಂದಿರದಲ್ಲಿ ಸಮಾವೇಶಗೊಂಡು ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ ಕರಡುಪ್ರತಿಯ ಬಗ್ಗೆ ಬಂದಿರುವ ಸಲಹೆ ಸೂಚನೆಗಳನ್ನು ಗಮನಿಸಿ ಕಾರ್ಯನಿರ್ವಾಹಕ ಸಮಿತಿಯು ಕೈಗೊಂಡಿರುವ ನಿರ್ಧಾರವನ್ನು ಪರಿಶೀಲಿಸುವುದು.

## ಕನ್ನಡ ನಿಘಂಟಿನ ಆರನೆಯ ಸಂಚಿಕೆಯ ಬಿಡುಗಡೆ

ಕನ್ನಡ-ಕನ್ನಡ ನಿಘಂಟಿನ ಆರನೆಯ ಸಂಚಿಕೆಯನ್ನು ಸೆಪ್ಟೆಂಬರ್ ತಿಂಗಳು ೧೭ರಂದು ಪರಿಷನ್ಮಂದಿರದಲ್ಲಿ ಏರ್ಪಡಿಸಿದ್ದ ಪತ್ರಿಕಾಗೋಷ್ಠಿಯಲ್ಲಿ ಪರಿಷದಧ್ಯಕ್ಷ ಶ್ರೀ ಜಿ. ನಾರಾಯಣ ಅವರು ಬಿಡುಗಡೆ ಮಾಡಿದರು. ಇಲ್ಲಿಗೆ ಈ ಸಂಚಿಕೆಯೂ ಸೇರಿ ನಿಘಂಟಿನ ಮೊದಲ ಭಾಗದ ೬೫೨ ಪುಟಗಳು ಹೊರಬಂದಂತಾಗಿದೆ. 'ಅ'ಕಾರ ಮುಗಿದು 'ಆ'ಕಾರದ ಮುದ್ರಣ ಆರಂಭವಾಗಿದೆ.

ನಿಘಂಟು ರಚನೆಯ ಕಾರ್ಯದಲ್ಲಿ ಇರುವ ಎಡರು ತೊಡರುಗಳನ್ನೂ ಹೇಗಾದರೂ ಮಾಡಿ ೧೨೫೦ ಪುಟಗಳ ಮೊದಲ ಸಂಪುಟವನ್ನು ೧೯೭೦ರೊಳಗಾಗಿ ಪ್ರಕಟಮಾಡಬೇಕೆಂದಿರುವ ನಿಶ್ಚಯವನ್ನೂ ಇನ್ನೂ ಏಳೆಂಟು ವರುಷಗಳ ಅವಧಿಯಲ್ಲಿ ಈ ಬೃಹತ್ಪ್ರಮಾಣದ ನಿಘಂಟಿನ ಪೂರ್ತಿ ಕೆಲಸವನ್ನು ಮುಗಿಸಲು ತಕ್ಕ ಏರ್ಪಾಟುಗಳನ್ನು ಮಾಡುತ್ತಿರುವುದನ್ನೂ ಇದರ ಜೊತೆಗೆ ತ್ರೈವಾರ್ಷಿಕ ಯೋಜನೆಯ ಕಾಲಾವಧಿಯಲ್ಲಿ ಸಾಮಾನ್ಯ ಜನತೆಗೆ ಹಾಗೂ ವಿಶೇಷವಾಗಿ ವಿದ್ಯಾರ್ಥಿಗಳಿಗೆ ಪ್ರಯೋಜನಕರವಾಗುವಂತಹ ಒಂದು ಸಂಗ್ರಹವಾದ ನಿಘಂಟನ್ನು ಪ್ರಕಟಿಸಬೇಕೆಂದಿರುವ ಉದ್ದೇಶವನ್ನೂ ಶ್ರೀ ನಾರಾಯಣ ಅವರು ಪತ್ರಿಕಾಪ್ರತಿನಿಧಿಗಳಿಗೆ ವಿವರಿಸಿದರು.

## ಕನ್ನಡ ನುಡಿ – ಪಕ್ಷ ಪತ್ರಿಕೆ

ನವೆಂಬರ್ ೧೯೬೯ ರಿಂದ 'ಕನ್ನಡನುಡಿ' ಪಕ್ಷಪತ್ರಿಕೆಯಾಗಿ ಪ್ರಕಟವಾಗುತ್ತದೆ. ಈ ಪಕ್ಷ ಪತ್ರಿಕೆಯ ಮೊದಲ ಸಂಚಿಕೆ ೧೫-೧೧-೧೯೬೯ ರಂದು ಪ್ರಕಟವಾಗುವುದರಿಂದ ೧-೧೧-೧೯೬೯ರ ಕನ್ನಡ ನುಡಿಯ ಮಾಸಪತ್ರಿಕೆ ಪ್ರಕಟವಾಗುವುದಿಲ್ಲ.

## ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ ಬಗ್ಗೆ ಸಾರ್ವಜನಿಕರ ಅಭಿಪ್ರಾಯ

ಪರಿಷತ್ತು ಮುಂದಿನ ಮೂರು ವರ್ಷಗಳಲ್ಲಿ ಕೈಗೊಳ್ಳಬಹುದಾದ ಕಾರ್ಯಕ್ರಮಗಳ ಕರಡು ಯೋಜನೆಯನ್ನು ಸಿದ್ಧಪಡಿಸಿ ಆ ಬಗ್ಗೆ ಸೆಪ್ಟೆಂಬರ್ ೧೫ನೆಯ ತಾರೀಖಿನೊಳಗೆ ನಾಡುನುಡಿಯ ಅಭಿಮಾನಿಗಳ ಹಾಗೂ ಸಾರ್ವಜನಿಕರ ಅಭಿಪ್ರಾಯಗಳನ್ನು ಕೋರಲಾಗಿತ್ತು. ಈ ಪ್ರಾರ್ಥನೆಯನ್ನು ಮನ್ನಿಸಿ ಪರಿಷತ್ತಿನ ಅಭಿಮಾನಿಗಳೆಲ್ಲರೂ ಬಹು ಅಮೂಲ್ಯವಾದ ಸಲಹೆ ಸೂಚನೆಗಳನ್ನು ಕಳುಹಿಸಿದ್ದಾರೆ. ಈ ಮಹನೀಯರೆಲ್ಲರಿಗೂ ಪರಿಷತ್ತು ಕೃತಜ್ಞವಾಗಿದೆ. ಈ ಅಭಿಪ್ರಾಯಗಳನ್ನು ಕಾರ್ಯಸಮಿತಿ ಮತ್ತು ಸಕಲ ಸದಸ್ಯರ ಸಭೆಯ ಮುಂದಿಟ್ಟು ಅವರ ಸಲಹೆ ಸೂಚನೆಗಳ ಪ್ರಕಾರ ಆ ಯೋಜನೆಯ ನಿರ್ದಿಷ್ಟ ರೂಪರೇಷೆಗಳನ್ನು ಖಚಿತವಾಗಿ ಗೊತ್ತುಮಾಡಲಾಗುವುದು.

## ಶ್ರೀ ಯಳಸಂಗಿ ಕಲ್ಲಣ್ಣ ಅವರ ಕೊಡುಗೆ

ವಿಜಾಪುರ ಜಿಲ್ಲೆ ಸಾಲೋಟಗಿಯ ಶ್ರೀ ಯಳಸಂಗಿ ಕಲ್ಲಣ್ಣನವರು ತಮ್ಮ ಪೂಜ್ಯ ತಾಯಿ ದಿ|| ಅವ್ವಾಬಾಯಿ ಯಳಸಂಗಿ ಅವರ ಸ್ಮರಣೆಗಾಗಿ ರೂ. ೫೧-೬೭ ಬೆಲೆಯ ೩೭ ಪುಸ್ತಕಗಳನ್ನು ಪರಿಷತ್ತಿನ ಸರಸ್ವತಿ ಭಂಡಾರಕ್ಕೆ ಕಾಣಿಕೆ

◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆

## ಮಹಾತ್ಮಾ ಗಾಂಧಿಯವರ ಶತಮಾನೋತ್ಸವ

ಅಕ್ಟೋಬರ್ ತಿಂಗಳು ೩ನೆಯ ತಾ|| ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಮಹಾತ್ಮಾ ಗಾಂಧೀಜಿಯವರ ಶತಮಾನೋತ್ಸವದ ಅಂಗವಾಗಿ ಒಂದು ವಿಚಾರ ಸಂಕಿರಣ ಏರ್ಪಡಿಸಿದೆ. ಅಂದು ಡಾ|| ಹೆಚ್. ನರಸಿಂಹಯ್ಯನವರು 'ಗಾಂಧೀಜಿ ಮತ್ತು ವೈಜ್ಞಾನಿಕ ದೃಷ್ಟಿ' ಎಂಬ ವಿಷಯವಾಗಿಯೂ, ಶ್ರೀ ಕಡಿದಾಳ್ ಮಂಜಪ್ಪನವರು 'ಗಾಂಧೀಜಿ ಮತ್ತು ರಾಜಕೀಯ' ಎಂಬ ವಿಷಯವಾಗಿಯೂ ಶ್ರೀ ಕಲ್ಲೆ ಶಿವೋತ್ತಮರಾಯರು 'ಗಾಂಧೀಜಿ ಮತ್ತು ಭಾರತೀಯ ಭಾಷೆಗಳು' ಎಂಬ ವಿಷಯವಾಗಿಯೂ ಶ್ರೀ ಎಲ್. ಎಸ್. ಶೇಷಗಿರಿರಾಯರು 'ಇಂಗ್ಲಿಷ್ ಸಾಹಿತ್ಯಕ್ಕೆ ಮಹಾತ್ಮಾ ಗಾಂಧಿಯವರ ಕೊಡುಗೆ' ಎಂಬ ವಿಷಯವಾಗಿಯೂ ಮತ್ತು ಶ್ರೀ ಆರ್. ರಂಗಯ್ಯನವರು 'ಗಾಂಧೀಜಿ ಮತ್ತು ನಿರುದ್ಯೋಗ ಸಮಸ್ಯೆ' ಎಂಬ ವಿಷಯವಾಗಿಯೂ ಮಾತನಾಡುವರು. ನ್ಯಾಯಮೂರ್ತಿ ಶ್ರೀ ಟಿ. ಕೆ. ತುಕೋಳ್ ಅವರು ಅಧ್ಯಕ್ಷತೆ ವಹಿಸುವರು.

ಅಕ್ಟೋಬರ್ ೬ನೆಯ ತಾ|| ನಡೆಯುವ ಮಹಾತ್ಮಾ ಗಾಂಧೀಜಿಯವರ ಶತಮಾನೋತ್ಸವದ ಅಂಗವಾಗಿ ಶ್ರೀ ವಿ. ಸೀತಾರಾಮಯ್ಯ ಅವರ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿ ನಡೆಯುವುದು. ಅದರಲ್ಲಿ ಸರ್ವಶ್ರೀ ಡಾ|| ಆರ್. ಎಸ್. ಮುಗಳಿ, ಡಾ|| ಜಿ. ಎಸ್. ಶಿವರುದ್ರಪ್ಪ, ಸಾ. ಶಿ. ಮರುಳಯ್ಯ, ಕೋ. ಚೆನ್ನಬಸಪ್ಪ, ನಾರಾಯಣ ಸಂಗಮ ಮುಂತಾದವರು ಭಾಗವಹಿಸುವರು.

◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆◆

ಯಾಗಿ ಕೊಟ್ಟಿರುತ್ತಾರೆ. ಅಲ್ಲದೆ ಬರುವ ಫೆಬ್ರುವರಿ ಮಾರ್ಚಿಯಲ್ಲಿ ಮತ್ತೆ ರೂ. ೫೦-೦೦ ಬೆಲೆಯ ಪುಸ್ತಕಗಳ ಕಾಣಿಕೆಯನ್ನು ಸಲ್ಲಿಸುವುದಾಗಿ ಆಶ್ವಾಸನೆ ನೀಡಿದ್ದಾರೆ. ಈ ಕೊಡುಗೆಯನ್ನು ಅತ್ಯಂತ ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ.

## ಕನ್ನಡ ಸಾಹಿತ್ಯ ಪರಿಷತ್ತಿಗೆ ಕೇರಳ ಸಾಹಿತ್ಯ ಅಕಾಡೆಮಿ ಸದಸ್ಯರ ನಿಯೋಗ

ಕೇರಳ ಸಾಹಿತ್ಯ ಅಕಾಡೆಮಿಯ ಪರವಾಗಿ ಬೆಂಗಳೂರಿಗೆ ದಯಮಾಡಿಸಿದ್ದ ಮಲೆಯಾಳ ಭಾಷೆಯ ಕೆಲವು ಮಂದಿ ಖ್ಯಾತಲೇಖಕರನ್ನು ದಿನಾಂಕ ೬-೯-೧೯೬೯ರಂದು ಕನ್ನಡ ಸಾಹಿತ್ಯ ಪರಿಷತ್ತಿಗೆ ಬರಮಾಡಿಕೊಳ್ಳಲಾಗಿತ್ತು.

ಶ್ರೀ ಪೋಕುಣಂ ವಾರ್ಕೆ ಅವರ ನೇತೃತ್ವದ ಈ ನಿಯೋಗದಲ್ಲಿ ಶ್ರೀಗಳಾದ ಶಾಸಕ ಸಾಹಿತಿ ಪ್ರೊ|| ಎನ್. ಕೆ. ಶೇಷನ್, ಉನ್ನಿಕೃಷ್ಣನ್ ಪುತ್ತೂರ್, ಎಸ್. ಕೆ. ಪೊಟ್ಟೆಕಾಟ್ ಮತ್ತು ವಿ. ಎ. ಅಜೀಜ್ ಇವರುಗಳು ದಯಮಾಡಿಸಿದ್ದರು. ಕನ್ನಡದ ಹಿರಿಯ ಸಾಹಿತಿಗಳಾದ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪ್ರೊ|| ವಿ. ಸೀತಾರಾಮಯ್ಯ, ಪ್ರೊ|| ದೇ. ಜವರೇಗೌಡ, ಪ್ರೊ|| ಎಂ. ಮರಿಯಪ್ಪಭಟ್, ಡಾ|| ಆರ್. ಸಿ. ಹಿರೇಮಠ್, ಶ್ರೀಗಳಾದ ಅ. ನ. ಕೃಷ್ಣರಾಯರು, ಬೀಚಿಯವರು, ಜಿ. ವೆಂಕಟಸುಬ್ಬಯ್ಯನವರು ಮೊದಲಾದ ವಿದ್ವಾಂಸರೂ ಬರಹಗಾರರೂ ಮತ್ತು ಪತ್ರಿಕಾಕರ್ತರೂ ಪರಿಷನ್ಮಂದಿರಕ್ಕೆ ದಯಮಾಡಿಸಿ ಸೋದರ ಭಾಷೆಯ ಈ ಬರಹಗಾರರನ್ನು ಪರಸ್ಪರ ಪರಿಚಯ ಮಾಡಿಕೊಂಡರು.

ಶ್ರೀ ವಾರ್ಕೆ ಅವರು ಇದುವರೆಗೆ ಪುಸ್ತಕ ಪ್ರಕಟನ ಕಾರ್ಯದಲ್ಲಿ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಕೇರಳವು ಸಾಧಿಸಿರುವ ಪ್ರಗತಿಯನ್ನು ವಿವರಿಸಿ ಆಧುನಿಕ ಸಾಹಿತ್ಯದ ಲಕ್ಷಣಗಳ ಆಗುಹೋಗುಗಳನ್ನು ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಹಿರಿಯ ಸಾಹಿತಿ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ಶ್ರೀ ಅ. ನ. ಕೃಷ್ಣರಾಯರು ಕನ್ನಡ ನಾಡುನುಡಿಗಳ ಬಗ್ಗೆ ಮಾತನಾಡಿದರು. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರೂ ಕಾರ್ಯದರ್ಶಿಗಳಾದ ಶ್ರೀ ಹಂಪ. ನಾಗರಾಜಯ್ಯ ಮತ್ತು ಶ್ರೀ ಅ. ರಾ. ಮಿತ್ರ ಅವರೂ ಪರಿಷತ್ತಿನ ಧ್ಯೇಯಧೋರಣೆ ಹಾಗೂ ಕಾರ್ಯಸಾಧನೆಯ ಪರಿಚಯವನ್ನು ಕೇರಳ ಸಾಹಿತಿಗಳಿಗೆ ಮಾಡಿಕೊಟ್ಟರು.

## ಪರಿಷತ್ತಿನ ಆಶ್ರಯದಲ್ಲಿ ನಡೆದ ಹೊರಗಿನ ಕಾರ್ಯಕ್ರಮ

ದಿನಾಂಕ ೧೪-೯-೧೯೬೯ರಂದು ರಾಜಾಜಿನಗರದ ಸಪ್ತರ್ಷಿಧಾಮದಲ್ಲಿ ಶ್ರೀ "ಸಿಂಪಿ ಲಿಂಗಣ್ಣ ಅವರ ಕೃತಿಗಳು"

ಎಂಬ ವಿಷಯವಾಗಿ ಉಪನ್ಯಾಸವನ್ನೇರ್ಪಡಿಸಿತ್ತು. ಡಾ|| ರಂ. ಶ್ರೀ. ಮುಗಳಿಯವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ಆರ್. ಜಿ. ಕುಲಕರ್ಣಿಯವರು ಉಪನ್ಯಾಸ ಮಾಡಿದರು.

ಇದೇ 'ಸಪ್ತರ್ಷಿಧಾಮು'ದಲ್ಲಿ ಮುಂದಿನ ತಿಂಗಳು ೧೨-೧೦-೬೯ರಂದು ಶ್ರೀ ಸಿದ್ಧಯ್ಯ ಪುರಾಣಿಕ ಅವರ ಕೃತಿಗಳು ಎಂಬ ವಿಷಯವಾಗಿ ಶ್ರೀ ಹಂಪ.ನಾಗರಾಜಯ್ಯನವರು ಮಾತನಾಡುವರು.

## ನಗರದಲ್ಲಿ ರಾಜ್ಯೋತ್ಸವ-ಸಾಹಿತ್ಯ ಪ್ರಚಾರ ಸಮಿತಿಯ ಸಮಾರಂಭ

ಹಿಂದಿನ ವರ್ಷ ನಡೆಸಿದಂತೆ ಈ ಸಲವೂ ಕನ್ನಡ ರಾಜ್ಯೋತ್ಸವ-ಸಾಹಿತ್ಯ ಪ್ರಚಾರ ಸಮಿತಿಯು ಬರುವ ನವೆಂಬರ್ ತಿಂಗಳಲ್ಲಿ ಕನ್ನಡ ರಾಜ್ಯೋತ್ಸವವನ್ನು ರಚನಾತ್ಮಕವಾಗಿಯೂ ವಿಶೇಷ ವೈಭವದಿಂದಲೂ ನೆರವೇರಿಸಲು ಸಂಕಲ್ಪಿಸಿದೆ. ಕಳೆದ ಬಾರಿಯಂತೆ ಈ ಉತ್ಸವದ ಅಂಗವಾಗಿ ಗ್ರಂಥಪ್ರದರ್ಶನ, ಗ್ರಂಥಗಳ ಮಾರಾಟ ಉಪನ್ಯಾಸಗಳೇ ಮುಂತಾದ ಕಾರ್ಯಕ್ರಮಗಳನ್ನು ಈ ಬಾರಿಯೂ ನಗರದ ನಾನಾ ಭಾಗಗಳಲ್ಲಿ ಏರ್ಪಡಿಸಿರುತ್ತದೆ. ಪುಸ್ತಕಗಳನ್ನು ಕೊಳ್ಳುವವರಿಗೆ ಶೇಕಡ ೧೦ ರಿಂದ ೧೫ರ ವರೆಗೆ ರಿಯಾಯಿತಿ ತೋರಿಸಬೇಕೆಂದೂ ಗೊತ್ತುಮಾಡಿದೆ. ಈ ಎಲ್ಲ ಕಾರ್ಯಕ್ರಮಗಳಲ್ಲಿ ನಗರದ ಹಿರಿಯ ಕಿರಿಯ ಅಭಿಮಾನಿಗಳೂ ಲೇಖಕ ಲೇಖಕಿಯರೂ ಪಾಲ್ಗೊಂಡು ಕಾರ್ಯಕ್ರಮದ ಯಶಸ್ಸಿಗೆ ಕಾರಣರಾಗುವರೆಂಬ ನಿರೀಕ್ಷೆ ಇದೆ. ಇಂತಹ ಶ್ರೇಷ್ಠ ಸಾಹಿತಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ಕೆ ಪರಿಷತ್ತು ತನ್ನ ಶುಭಾಶಯಗಳನ್ನು ಸಲ್ಲಿಸುವುದಲ್ಲದೆ ಕನ್ನಡ ನಾಡು ನುಡಿಯ ಅಭಿಮಾನಿಗಳೆಲ್ಲರ ಸಹಕಾರ ಪ್ರೋತ್ಸಾಹಗಳು ಈ ರಾಜ್ಯೋತ್ಸವ-ಸಾಹಿತ್ಯ ಪ್ರಚಾರ ಸಮಿತಿಗೆ ದೊರೆಯಲೆಂದು ಹಾರೈಸುತ್ತದೆ.

## ದಿವಂಗತ ಡಾ|| ಮಾನ್ವಿ ನರಸಿಂಗರಾಯರು

ಕಳೆದ ೨೦ ವರ್ಷಗಳಿಂದ ಪರಿಷತ್ತಿನ ಆಜೀವ ಸದಸ್ಯರಾಗಿದ್ದವರೂ, ಬೀದರ್ ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತ್ಯಗೋಷ್ಠಿಗೆ ಅಧ್ಯಕ್ಷರಾಗಿದ್ದವರೂ, ಉಸ್ಮಾನಿಯಾ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರೂ ಕಾವ್ಯಮೀಮಾಂಸಾ ಶಾಸ್ತ್ರದಲ್ಲಿ ಪ್ರಕಾಂಡ ಪಂಡಿತರೂ ಆಗಿದ್ದು ಸಾವಿರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದವರೂ, ಹೈದರಾಬಾದು ಸಂಸ್ಥಾನದಲ್ಲಿ ನೈಜಾಮರ ಕಾಲದಿಂದಲೂ ಕನ್ನಡ ಭಾಷೆ ಸಂಸ್ಕೃತಿಗಳಿಗೆ ದುಡಿದವರೂ, ಪರಿಷತ್ತಿನ ಅಭಿಮಾನಿಗಳೂ ಪ್ರತಿಭಾವಂತ ಸಾಹಿತಿಗಳೂ ಆಗಿದ್ದ ಶ್ರೀ ಮಾನ್ವಿ ನರಸಿಂಗರಾಯರು ತಮ್ಮ ೫೮ನೆಯ ವಯಸ್ಸಿನಲ್ಲಿ ದಿನಾಂಕ ೯-೯-೧೯೬೯ರಲ್ಲಿ ವಿಧಿವಶರಾದುದು ಕನ್ನಡಕ್ಕೆ ತುಂಬಲಾರದ ನಷ್ಟವಾಗಿದೆ. ಅವರ ಆತ್ಮಕ್ಕೆ ಭಗವಂತನು ಚಿರಶಾಂತಿಯನ್ನೀಯಲೆಂದು ಕನ್ನಡ ಸಾಹಿತ್ಯ ಪರಿಷತ್ತು ಪ್ರಾರ್ಥಿಸುತ್ತದೆ.



ಸಂಪಾದಕೀಯ



# ಕನ್ನಡ ನುಡಿ : ಪಕ್ಷಪತ್ರಿಕೆ

ಈಗ ೩೨ ವರ್ಷಗಳ ಹಿಂದೆ (೪-೧೦-೧೯೩೮ರಲ್ಲಿ) ದಿವಂಗತ ಪ್ರೊ|| ಬಿ. ಎಂ. ಶ್ರೀಕಂಠಯ್ಯನವರ ಸಲಹೆಯಂತೆ ಪರಿಷತ್ತಿನ ಕಾರ್ಯಚಟುವಟಿಕೆಗಳ ವರ್ತಮಾನಗಳ ಪ್ರಚಾರಕ್ಕೂ, ಅಂಗಸಂಸ್ಥೆಗಳೊಡನೆ ನಿಕಟ ಸಂಬಂಧವನ್ನು ಬೆಳೆಸುವುದಕ್ಕೂ ಜನರಲ್ಲಿ ಕನ್ನಡದ ತಿಳುವಳಿಕೆಯನ್ನು ಹರಡುವುದಕ್ಕೂ ಮತ್ತು ಕನ್ನಡದ ಎಲ್ಲ ಚಟುವಟಿಕೆಗಳನ್ನೂ ಕನ್ನಡ ಜನತೆಗೆ ತಿಳಿಯಪಡಿಸುವುದಕ್ಕೂ 'ಕನ್ನಡ ನುಡಿ' ವಾರಪತ್ರಿಕೆಯಾಗಿ ಪ್ರಾರಂಭವಾಯಿತು. ೧೯೫೦ನೆಯ ಆಗಸ್ಟ್ ತಿಂಗಳಿನಿಂದ ಅದು ಮಾಸಪತ್ರಿಕೆಯಾಗಿ ಪ್ರಕಟವಾಗುತ್ತಿದೆ. 'ಕನ್ನಡ ನುಡಿ'ಯನ್ನು ಪ್ರಾರಂಭ ಮಾಡಿದ ಉದ್ದೇಶಗಳನ್ನು ಗಮನಕ್ಕೆ ತಂದುಕೊಂಡು ಆ ಉದ್ದೇಶಗಳಿಗನುಸಾರವಾಗಿ ಅದನ್ನು ಇನ್ನು ಮುಂದೆ ನವೆಂಬರ್ ೧೯೭೦ರಿಂದ ಪಕ್ಷಪತ್ರಿಕೆಯಾಗಿ ಪ್ರಕಟಿಸಬೇಕೆಂದು ಗೊತ್ತು ಮಾಡಲಾಗಿದೆ. ಈಗ ಪ್ರಕಟವಾಗುತ್ತಿರುವ ೩೨ ಪುಟಗಳ ಮಾಸಪತ್ರಿಕೆಯ ಬದಲು ೧೬ ಪುಟಗಳ ಎರಡು ಪಕ್ಷಪತ್ರಿಕೆಗಳು ಪ್ರತಿತಿಂಗಳ ೧ನೆಯ ಮತ್ತು ೧೬ನೆಯ ದಿನಾಂಕಗಳಲ್ಲಿ ಪ್ರಕಟವಾಗುತ್ತವೆ. ಇವುಗಳಲ್ಲಿ ಪ್ರಮುಖ ಲೇಖನಗಳ ಜೊತೆಗೆ ಕನ್ನಡ ನಾಡಿನಲ್ಲಿ ಮತ್ತು ಹೊರಗಡೆ ನಡೆಯುವ ಎಲ್ಲ ಕನ್ನಡ ಚಟುವಟಿಕೆಗಳ ವಿಷಯ ಸಂಗ್ರಹವನ್ನು ಕೊಡಬೇಕೆಂದೂ ಸಾಧ್ಯವಾದ ಮಟ್ಟಿಗೆ ಕನ್ನಡದಲ್ಲಿ ಪ್ರಕಟವಾಗುವ ಎಲ್ಲ ಪುಸ್ತಕಗಳ ಪರಿಚಯವನ್ನು ಮಾಡಿಕೊಡಬೇಕೆಂದೂ ಉದ್ದೇಶಿಸಲಾಗಿದೆ. ಮುಂದೆ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆಯುವವರಿಗೆ ಮತ್ತು ಸಂಶೋಧನೆ ನಡೆಸುವವರಿಗೆ ಈ ಚಟುವಟಿಕೆಗಳ ವರದಿಗಳೂ ಪುಸ್ತಕ ವಿಮರ್ಶೆಯೂ ಸಹಾಯಕವಾಗುವುದೆಂದು ನಿರೀಕ್ಷಿಸಲಾಗಿದೆ.

ಈ ಪ್ರಯತ್ನಕ್ಕೆ ಎಲ್ಲ ಕನ್ನಡ ಲೇಖಕರ, ಸಂಘ ಸಂಸ್ಥೆಗಳ ಮತ್ತು ಎಲ್ಲ ಪುಸ್ತಕ ಪ್ರಕಾಶಕರ ಸಹಾಯ ಸಹಕಾರಗಳು ಪರಿಷತ್ತಿಗೆ ಆವಶ್ಯಕವಾಗಿದೆ. ಮೈಸೂರು ದೇಶದಲ್ಲಿಯೂ ಹೊರನಾಡುಗಳಲ್ಲಿಯೂ ಕನ್ನಡದ ಕೆಲಸ ಮಾಡುತ್ತಿರುವ ಕನ್ನಡ ಸಂಘಗಳು ಮತ್ತು ಸಾರ್ವಜನಿಕ ಸಂಸ್ಥೆಗಳು ತಮ್ಮ ಕನ್ನಡದ ಕಾರ್ಯಚಟುವಟಿಕೆಗಳ ವಿವರಗಳನ್ನು ಕನ್ನಡ ನುಡಿಗೆ ಕಳುಹಿಸಿಕೊಡಬೇಕೆಂದೂ ಎಲ್ಲ ಪುಸ್ತಕ ಪ್ರಕಾಶಕರೂ ಮತ್ತು ವೈಯಕ್ತಿಕವಾಗಿ ಪುಸ್ತಕಗಳನ್ನು ಪ್ರಕಟಿಸುವವರೂ ತಾವು ಪ್ರಕಟಿಸುವ ಕನ್ನಡ ಪುಸ್ತಕದ ಎರಡೆರಡು ಪ್ರತಿಗಳನ್ನು ಪರಿಷತ್ತಿಗೆ ಕಳುಹಿಸಿ ಅದರ ಪ್ರಕಟನೆಯ ಸುದ್ದಿಗೂ ವಿಮರ್ಶೆಗೂ ಸಹಾಯ ಮಾಡಬೇಕೆಂದೂ ಪರಿಷತ್ತು ಪ್ರಾರ್ಥಿಸುತ್ತದೆ.

# ಅರುವತ್ತು ತುಂಬಿದ ಶ್ರೀ ದಿನಕರ ದೇಸಾಯಿ

ಶ್ರೀ ದಿನಕರ ದೇಸಾಯಿ ಅವರು ಕನ್ನಡದ ಹಿರಿಯ ಸಾಹಿತಿಗಳು; ಪತ್ರಿಕೋದ್ಯೋಗಿಗಳು; ಸಂಶೋಧಕರು; ದೀನದಲಿತರ ಸೇವಾರಾಧಕರು; ಲೋಕಸಭೆಯ ಸದಸ್ಯರು ಮತ್ತು ಕನ್ನಡದಲ್ಲಿ ಚುಟುಕಗಳನ್ನು ಬರೆಯುವುದರಲ್ಲಿ ಸಿದ್ಧಹಸ್ತರು. ಜನತಾ ಸೇವೆಯೇ ಜನಾರ್ದನನ ಸೇವೆಯೆಂದು ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯ ಸದಸ್ಯರಾಗಿ ದುಡಿದವರು. ದೇಶವಿದೇಶಗಳಲ್ಲಿ ಸಂಚಾರ ಮಾಡಿ ಅಲ್ಲಿಯ ಶಿಕ್ಷಣ ಪದ್ಧತಿಯನ್ನು ಪರಿಚಯ ಮಾಡಿಕೊಂಡು 'ಕೆನರಾ ವೆಲ್‌ಫೇರ್ ಟ್ರಸ್ಟ್' ಸಂಸ್ಥೆಯನ್ನು ಹಿರಿಯ ಶಿಕ್ಷಣಕೇಂದ್ರವನ್ನಾಗಿ ಬೆಳೆಸಿದವರು. "ಮಕ್ಕಳ ಗೀತೆಗಳು" ಮತ್ತು "ಮಕ್ಕಳ ಪದ್ಯಗಳು" ಎಂಬ ಶಿಶುಸಾಹಿತ್ಯ ಸಂಕಲನಗಳನ್ನು "ಹೂಗೊಂಚಲು" ಎನ್ನುವ ಕವನ ಸಂಕಲನವನ್ನೂ "ನಾ ಕಂಡ ಪಡುವಣ" ಎಂಬ ವಿಚಾರ ಬೋಧವಾದ ಗ್ರಂಥವನ್ನೂ "ಕಲ್ಯಾಣಿಯ

ಚಾಳುಕ್ಯರ ಕೆಳಗಿನ ಮಹಾ ಮಂಡಲೇಶ್ವರರು" ಎಂಬ ಸಂಶೋಧನಾತ್ಮಕವಾದ ವಿದ್ವತ್ ಪ್ರಬಂಧವನ್ನೂ ಬರೆದಿದ್ದಾರೆ. ಆದರೆ ಅವರ ವಿಶಾಲವಾದ ಪ್ರಭಾವಶಾಲಿಯಾದ ಜನಪ್ರಿಯವಾದ ಸಾಹಿತ್ಯ ಸೇವೆ, ಚುಟಕಗಳು. ಆ ಚುಟಕಗಳು ಹೃದಯವನ್ನು ಮುಟ್ಟುವ ತಿಳಿಗನ್ನಡದಲ್ಲಿಯೂ ಪ್ರಾಸಬದ್ಧವಾಗಿಯೂ ಇದ್ದು ಪ್ರಸಕ್ತ ಜೀವನದ ನಾನಾ ಮುಖಗಳ ವಿಮರ್ಶೆ, ವಿಡಂಬನೆ, ಚುಚ್ಚುಮಾತು, ಬುದ್ಧಿವಾದ, ಮೆಚ್ಚಿಕೆ—ಎಲ್ಲವನ್ನೂ ಒಳಗೊಂಡು ಜನಮನವನ್ನು ಸೂರೆಗೊಂಡಿವೆ. ಅವರು ಸುಮಾರು ನಾಲ್ಕು ಸಾವಿರಕ್ಕೂ ಮೀರಿದಷ್ಟು ಚುಟಕಗಳನ್ನು ಬರೆದಿದ್ದಾರೆ.

ಇಂತಹ ಉದ್ದಾಮ ಸಾಹಿತಿಗಳಾದ ಶ್ರೀ ದಿನಕರ ದೇಸಾಯಿಯವರು ತಮ್ಮ ತುಂಬು ಜೀವನದ ಅರವತ್ತು ವರ್ಷಗಳನ್ನು ಸಾರ್ಥಕವಾಗಿ ಶ್ರಮಿಸಿರುವ ಈ ಸಂದರ್ಭದಲ್ಲಿ ಪರಿಷತ್ತು ಅವರಿಗೆ ತನ್ನ ಶುಭಾಶಯಗಳನ್ನು ಸಲ್ಲಿಸುವುದಲ್ಲದೆ ಅವರು ಇನ್ನೂ ನೂರು ಕಾಲ ಕನ್ನಡ ನಾಡು ನುಡಿಗಳ ಸೇವೆ ಮಾಡುವಂತೆ ದೇವರು ಅನುಗ್ರಹಿಸಲೆಂದು ಹಾರೈಸುತ್ತದೆ.

---

# ಕುಟುಂಬ ಯೋಜನೆ ಎಂದರೇನು?

## ಕುಟುಂಬ ಯೋಜನೆ ಎಂದರೆ

ನಿಮಗೆ ಯಾವಾಗ ಮಕ್ಕಳಾಗಬೇಕು ಎಷ್ಟು ಮಕ್ಕಳಾಗಬೇಕು ಎಂದು ನಿರ್ಧರಿಸುವುದು.

ಎರಡು ಅಥವಾ ಮೂರು ಮಕ್ಕಳು ಮಾತ್ರ
ಒಂದೊಂದಕ್ಕೆ ಅಂತರ ಕನಿಷ್ಟ 3 ವರ್ಷ

ನಿಮ್ಮ ಹೆಂಡತಿಯ ಆರೋಗ್ಯ ರಕ್ಷಿಸುವುದು.

ನಿಮ್ಮ ಮಕ್ಕಳ ಆರೋಗ್ಯ, ಶಿಕ್ಷಣ ಮತ್ತು ಬೆಳವಣಿಗೆ ಬಗ್ಗೆ ಹೆಚ್ಚಿನ ಗಮನ ಕೊಡಲು ನಿಮಗೆ ಸಾಧ್ಯವಾಗುವುದು.

ಭಯ ಚಿಂತೆಗಳಿಲ್ಲದೆ ದಾಂಪತ್ಯ ಜೀವನದ ಸುಖವನ್ನು ಅನುಭವಿಸುವುದು.

- ಕುಟುಂಬ ಯೋಜನೆ ಅನುಸರಿಸಲು ಹಲವು ವಿಧಾನಗಳಿವೆ. ಯಾವ ವಿಧಾನವನ್ನಾದರೂ ನೀವು ಆರಿಸಿಕೊಳ್ಳಿ.
- ಉಚಿತ ಸಲಹೆ ಮತ್ತು ಸೇವೆ ಪಡೆಯಲು ನಿಮಗೆ ಸಮೀಪದಲ್ಲಿರುವ ಕುಟುಂಬ ಯೋಜನಾ ಕೇಂದ್ರವನ್ನು ಸಂದರ್ಶಿಸಿರಿ.
- ಕುಟುಂಬ ಯೋಜನೆ ಪಡೆಯುವವರಿಗೆ ಸರ್ಕಾರದಿಂದ ಧನಸಹಾಯವೂ ಉಂಟು.

# ಜನಾರೋಗ್ಯ ಇಲಾಖೆ

## ಕುಟುಂಬ ಯೋಜನಾ ವಿಭಾಗ

| | |
|---|---|
| ಇಷ್ಟಪಟ್ಟಲ್ಲಿ ಮಕ್ಕಳು<br>ಕಷ್ಟವಾದಲ್ಲಿ ಬೇಡ | ಮಿತಸಂತಾನದಿಂದ<br>ಅಮಿತ ಆನಂದ |
| ಸಂತಾನ ನಿಯಂತ್ರಣ<br>ಸಂತೃಪ್ತಿ ಭೋಜನ | ಎರಡು ಅಥವಾ ಮೂರು ಮಕ್ಕಳು ಮಾತ್ರ ಸಾಕು<br>ಒಂದೊಂದಕ್ಕೆ ಅಂತರ ಕನಿಷ್ಟ 3 ವರ್ಷ |

Reg. No. B. G. 4—October 1969

Licensed to Post without
pre-payment, Licence N[illegible] 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಬೆಂಗಳೂರು-೧೮

